

# ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ

ಜೆ. ಹೆಚ್. ಪ್ರಸಾದ್
ಅಭಿನಂದನ ಸಂಪುಟ





ಸಂಪಾದಕ
ಪ್ರೊ. ಲಕ್ಷ್ಮಣ್ ತೆಲಗಾವಿ

# ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ

## ನಿವೃತ್ತ ಜಿಲ್ಲಾ ನ್ಯಾಯಾಧೀಶ ಶ್ರೀ ಜಿ.ಹೆಚ್.ಪ್ರಸಾದ್ ಅಭಿನಂದನ ಸಂಪುಟ

ಸಂಪಾದಕ

**ಪ್ರೊ. ಲಕ್ಷ್ಮಣ್ ತೆಲಗಾವಿ**



ಶ್ರೀ ಜಿ.ಹೆಚ್.ಪ್ರಸಾದ್ ಅಭಿನಂದನ ಸಂಪುಟ ಪ್ರಕಟಣ ಸಮಿತಿ
ಪರವಾಗಿ
ವಾಲ್ಮೀಕಿ ಸಾಹಿತ್ಯ ಸಂಪದ
ಹರ್ತಿಕೋಟೆ ೫೭೭ ೫೪೫
ಹಿರಿಯೂರು ತಾಲ್ಲೂಕು ಚಿತ್ರದುರ್ಗ ಜಿಲ್ಲೆ

**KARNATAKA PALEYAGARARA NYAYADALITA**

Judicial Administration of
Paleyagars of Karnataka

(A Felicitation Volume Presented to
Sri G.H.Prasad, Retired District Judge)

*Edited by*
**Prof Laxman Telagavi**
Retired Professor
Kannada University, Hampi

*Published by*
**Valmiki Sahitya Sampada**
Harthikote 577 545
Hiriyur Taluk, Chitradurga District

First Print : 2008, Pages : xxxiv+502+20, **Price : Rs. 400/-**



*Cover Page* : **K.K.Makali**

*D.T.P. by*
**Sri Savalagi Shivalingeswara Graphics**
Kamalapur 583 221
Cell : 94481 66990

*Printed by*
**Vishwas Prints, Bangalore 560 018**
080-26604835

ಶ್ರೀ

ಗುಣಂಗಳೊಳ್ ಪರಮ ಗುಣಂ ಪ್ರಸಾದಂ
ಮನವನಪಹರಿಸುವುದು ತನ್ನ ನಲ್ಮೆಯಿಂ .
ಮನುಜರೊಳ್, ನ್ಯಾಯವಿದರೊಳ್ ಈ ಪ್ರಸಾದಂ
ಜನಮನವ ಗೆದ್ದಿಹರು ಸತ್ಯ ಚಾರಿತ್ರ್ಯದಿಂ ॥

ಸರಳ ಸಜ್ಜನಿಕೆಯಿಂ ಶುಭ್ರ ಸೇವಾವೃತ್ತಿಯಿಂ
ಹರುಷ ಹೆಚ್ಚಿಸುತ - ಬಹು ಮನ್ನಣೆಯ ಗಳಿಸಿ
ಪರಿಪರಿಯ ಹುದ್ದೆಗಳ ನಿರ್ವಹಿಸಿ ದಕ್ಷತೆಯಿಂ
ಪರಮೇಶ್ವರನ ಪ್ರಸಾದವಂ ಗಳಿಸಿಹರು ಇವರು.

ಧನ್ಯತೆಯು ನಾಂತು ಪರಮ ಪವಿತ್ರ ವೃತ್ತಿಯಲಿ
ಮಾನ್ಯರೊಳ್ ಮಾನ್ಯರಿವರೆಂಬ ಖ್ಯಾತಿಯಲಿ
ನ್ಯೂನತೆಯ ತೋರದೆಲೆ ಅನುದಿನದ ಬಾಳಿನಲಿ
ಶ್ರೀನಿವಾಸನ ಕೃಪೆಗೆ ಪಾತ್ರರಾಗಿಹರು ದಿಟದಿ.

ಸುವಿಶ್ರಾಂತ ಜೀವನದ ಹೊಸ್ತಿಲಲಿ ನಿಂತಿಹರು
ದಿವದ ದೇವತೆಗಳಿವರ ಮಂಗಳವ ಹರಸುವರು
ಕವಿ ಮಿತ್ರನೀ ಶುಭದ ಬಿನ್ನಗೆನುಡಿ ನೀಡಿಹನು
ತವ ಭಾಗ್ಯ ದಿನದಿನವು ಬೆಳೆಯುತಿರಲೆಂದು.

—·····—

ಶ್ರೀ ಜಿ.ಹೆಚ್.ಪ್ರಸಾದ್ ಅವರು ಶಿವಮೊಗ್ಗ ಜಿಲ್ಲಾ ನ್ಯಾಯಾಧೀಶರಾಗಿ ನಿವೃತ್ತರಾದಾಗ, ಶಿವಮೊಗ್ಗ ವಕೀಲರ ಸಂಘದವರು ಏರ್ಪಡಿಸಿದ್ದ ಬೀಳ್ಕೊಡುಗೆ ಸಮಾರಂಭದಲ್ಲಿ, ಹಿರಿಯ ವಕೀಲ ಶ್ರೀ ಟಿ.ವೆಂಕಟರಾಮಾಶಾಸ್ತ್ರಿ ಅವರು ಶ್ರೀ ಪ್ರಸಾದ್ ಅವರನ್ನು ಕುರಿತು ವಾಚಿಸಿದ ಸ್ವರಚಿತ ಕವನ (೬.೧೨.೨೦೦೧)

ವಿ.ಕೆ. ವಸಂತಲಕ್ಷ್ಮಿ
ಬೆಂಗಳೂರು

# ಶ್ರೀ ಜಿ.ಹೆಚ್.ಪ್ರಸಾದ್ ಅಭಿನಂದನ ಸಂಪುಟ ಪ್ರಕಟಣ ಸಮಿತಿ

---

ಅಧ್ಯಕ್ಷರು / ಕೆ.ಮಲ್ಲಪ್ಪ, ದಾವಣಗೆರೆ

ಉಪಾಧ್ಯಕ್ಷರು / ಸಿ.ಎಂ.ಅಶೋಕ್, ಘಟ್ಟಿಹೊಸಹಳ್ಳಿ

ಸಂಚಾಲಕರು / ಹರ್ತಿಕೋಟೆ ವೀರೇಂದ್ರಸಿಂಹ, ಹರ್ತಿಕೋಟೆ
ಡಾ.ತೇಜಸ್ವಿ ಕಟ್ಟೀಮನಿ, ಹೈದರಾಬಾದ್

ಸಂಪಾದಕರು / ಪ್ರೊ.ಲಕ್ಷ್ಮಣ್ ತೆಲಗಾವಿ, ಹಂಪಿ-ಕಮಲಾಪುರ

ಸದಸ್ಯರು / ಪ್ರೊ.ಕೆ.ಬಿ.ಪಾಲಯ್ಯ, ಚಿತ್ರದುರ್ಗ
ಡಾ.ಜಿ.ರಂಗಯ್ಯ (ನ್ಯೂಯಾರ್ಕ್), ಬೆಂಗಳೂರು
ಟಿ.ನೀಲಪ್ಪ, ದಾವಣಗೆರೆ
ಹೆಚ್.ಕೆ.ರಾಮಚಂದ್ರಪ್ಪ, ದಾವಣಗೆರೆ
ಟಿ.ದಾಸ್‌ಕರಿಯಪ್ಪ, ದಾವಣಗೆರೆ
ಜಿ.ಹೆಚ್.ಶರಣಪ್ಪ, ದಾವಣಗೆರೆ
ಸಿ.ವಿನಾಯಕ್, ಬೆಂಗಳೂರು
ಜಿ.ಎಫ್.ಹೊನ್ನಪ್ಪನವರ್, ಕರ್ಜಗಿ-ಧಾರವಾಡ
ಜಿ.ರುದ್ರಪ್ಪ, ಬೆಂಗಳೂರು
ಪಿ.ಆರ್.ರಂಗಸ್ವಾಮಿ, ಬೆಂಗಳೂರು
ಡಿ.ವಿಜಯ್ ವಿಕ್ರಂ, ಬೆಂಗಳೂರು
ಪ್ರೊ.ಎಮ್.ಬಿ.ನಾಯಕ್, ರಾಮದುರ್ಗ-ಬೆಳಗಾವಿ
ಕೆ.ಎಚ್.ವಸಂತಕುಮಾರ್, ನಾಮಕ್ಕಲ್-ತಮಿಳುನಾಡು
ಪ್ರೊ.ಡಿ.ದೇವೇಂದ್ರಪ್ಪ, ಇಂಡಿ-ಬಿಜಾಪುರ
ಡಾ.ಡಿ.ರಾಮಚಂದ್ರನಾಯಕ್, ಚಿತ್ರದುರ್ಗ
ಪ್ರೊ.ಮಂಜುನಾಥ ಬೇವಿನಕಟ್ಟಿ, ಹಂಪಿ-ವಿದ್ಯಾರಣ್ಯ
ಡಾ.ರಂಗರಾಜ ವನದುರ್ಗ, ಶಂಕರಘಟ್ಟ-ಶಿವಮೊಗ್ಗ
ಡಾ.ಅಮರೇಶ ಯತಗಲ್, ಲಿಂಗಸೂಗೂರು-ರಾಯಚೂರು
ಶ್ರೀಮತಿ ಪುಷ್ಪಾ ಪ್ರಸಾದ್, ಹಾಸನ

ಪ್ರೊ.ಸಿ.ಎಂ.ವಿವೇಕಾನಂದ, ಚಿತ್ರದುರ್ಗ
ಸಿ.ಎಂ.ಸತೀಶ್, ಕೊಪ್ಪಳ
ಡಾ.ಸಿ.ಎಂ.ರವಿ, ಚೆನ್ನೈ
ಎಂ.ಎಸ್.ಲೋಲಾಕ್ಷ, ಬಿಜಾಪುರ
ಡಾ.ಜಿ.ಪಿ.ರಾಮನಾಥ್, ಹಾಸನ
ಸಿ.ಎಂ.ಏಕಲವ್ಯ, ಬೆಂಗಳೂರು
ಡಾ.ಎಂ.ಕೆ.ದುರುಗಪ್ಪ, ಕನಕಗಿರಿ-ಕೊಪ್ಪಳ
ದೇವೇಂದ್ರ ಮಾಧವನವರ, ಹೊಳೆಆಲೂರು-ಗದಗ
ಆರ್.ಕೆ.ಸುಬೇದಾರ, ಹಿರೇಮನ್ನಾಪುರ-ಕೊಪ್ಪಳ
ಎಸ್.ಆರ್.ಗುರುನಾಥ್, ಚಿತ್ರದುರ್ಗ
ಪಿ.ಆನಂದ ತೆಲಗಾವಿ, ಚಿತ್ರದುರ್ಗ
ಕೆ.ಎಲ್.ರಾಜಶೇಖರ್, ಹಂಪಿ-ವಿದ್ಯಾರಣ್ಯ
ಹೆಚ್.ಓ.ನರಸಿಂಹಮೂರ್ತಿ, ಹರ್ತಿಕೋಟೆ
ಕೆ.ಆರ್.ಜಯಣ್ಣ, ಹರ್ತಿಕೋಟೆ
ಗೋವಿಂದರಾಜು, ಕರಿಯಾಲ-ಸಿರಾ
ಹೆಚ್.ವಿ.ಓಬಳನಾಯಕ, ಚಿತ್ರದುರ್ಗ
ಹೆಚ್.ಆರ್.ರಂಗಸ್ವಾಮಿ, ಚಿತ್ರದುರ್ಗ
ಆರ್.ಚೆಲುವರಾಜ್, ಶಿವಮೊಗ್ಗ
ಡಾ.ಜಿ.ಎಸ್.ಪರಮೇಶ್ವರ್, ಮೈಸೂರು
ಲಕ್ಷ್ಮಣ್ ಜಿ.ಹೊನ್ನಪ್ಪನವರ್, ಹೂವಿನಹಡಗಲಿ-ಬಳ್ಳಾರಿ
ಶ್ರೀಮತಿ ರತ್ನಾ ವೀರೇಂದ್ರಸಿಂಹ, ಹರ್ತಿಕೋಟೆ
ಶ್ರೀಮತಿ ವೇದಾ ರವಿ, ಚೆನ್ನೈ
ಶ್ರೀಮತಿ ಪಲ್ಲವಿ ಲೋಲಾಕ್ಷ, ಬಿಜಾಪುರ
ಡಾ.ಅನಿತಾ ಶಿವಕುಮಾರ್, ಮೈಸೂರು
ಡಾ.ಹೆಚ್.ಬಿ.ಶಿವಕುಮಾರ್, ಮೈಸೂರು
ಜಿ.ಕೆ.ಮಲೆಸಿದ್ದಪ್ಪ, ಪಂಚಗನಿ-ಮಹಾರಾಷ್ಟ್ರ
ಜಿ.ಬಿ.ಮಹಾಂತೇಶ್, ಬೆಂಗಳೂರು



# ಪ್ರಕಾಶಕರ ಮಾತು

## ವಾಲ್ಮೀಕಿ ಸಾಹಿತ್ಯ ಸಂಪದ

ಇತಿಹಾಸಕಾರ ಹಾಗೂ ಸಾಹಿತಿ ಹೆಚ್.ವಿ.ವೀರನಾಯಕ 'ಹರತಿ' ಅವರು ೧೯೭೩ರಲ್ಲಿ ಹರ್ತಿಕೋಟೆಯಲ್ಲಿ ಸ್ಥಾಪಿಸಿದುದೇ ವಾಲ್ಮೀಕಿ ಸಾಹಿತ್ಯ ಸಂಪದ. ಇದೊಂದು ಗ್ರಾಮೀಣ ಪ್ರಕಾಶನ ಸಂಸ್ಥೆ. ನಾಯಕ ಜನಾಂಗ, ಹಿಂದುಳಿದವರ್ಗ ಮತ್ತು ಇತರೆ ಅಲಕ್ಷಿತ ಸಮುದಾಯಗಳ ಇತಿಹಾಸ-ಸಂಸ್ಕೃತಿ ಕುರಿತ ಗ್ರಂಥಗಳನ್ನು ಈ ಸಂಪದದ ಮೂಲಕ ಪ್ರಕಟಿಸಬೇಕೆಂಬುದೇ ಅವರ ಮುಖ್ಯ ಉದ್ದೇಶವಾಗಿದ್ದಿತು. ಈ ನಿಟ್ಟಿನಲ್ಲಿ ಶ್ರದ್ಧಾಸಕ್ತಿಗಳಿಂದ ಪ್ರಯತ್ನಶೀಲರಾದ ವೀರನಾಯಕರು, ತಮ್ಮ ಜೀವಿತಾವಧಿಯಲ್ಲಿ ಕೆಲವಾರು ಉಪಯುಕ್ತ ಪುಸ್ತಕಗಳನ್ನು ಹೊರತಂದರು; ನಾಡಿನ ಲೇಖಕರು, ಸಂಶೋಧಕರು ಹಾಗೂ ಸಾರ್ವಜನಿಕರ ಗಮನ ಸೆಳೆದರು. ಸಂಪದದ ಬೆಳವಣಿಗೆಗೆ ಹಲವಾರು ಯೋಜನೆಗಳನ್ನು ಹಮ್ಮಿಕೊಳ್ಳು ವುದರೊಡನೆ, ಇದಕ್ಕೊಂದು ಶಾಶ್ವತನಿಧಿಯನ್ನು ಸ್ಥಾಪಿಸುವ ಪ್ರಯತ್ನ ಮಾಡಿದರು; ಆಸಕ್ತರ ಹಾಗೂ ಪ್ರತಿಭಾವಂತರ ಗುಂಪನ್ನು ರೂಪಿಸಿದರು. ಈ ಸಂಪದದಿಂದ ನಿರಂತರ ವಾಗಿ ಪುಸ್ತಕಗಳನ್ನು ಹೊರತರುವುದರ ಮೂಲಕ ಜನರಲ್ಲಿ-ಮುಖ್ಯವಾಗಿ ಗ್ರಾಮೀಣರಲ್ಲಿ, ಜ್ಞಾನಪ್ರಸಾರ ಮಾಡಬೇಕೆಂಬ ಹಂಬಲ ಅವರದಾಗಿದ್ದಿತು. ವೀರನಾಯಕರ ಸದಾಶಯವು ಈಗ ಯಶಸ್ವಿಯಾಗಿ ಈಡೇರುತ್ತಲಿದೆಯೆಂದು ಪ್ರಸ್ತಾಪಿಸಲು ಹರ್ಷವೆನಿಸುತ್ತದೆ.

ವಾಲ್ಮೀಕಿ ಸಾಹಿತ್ಯ ಸಂಪದವು ಈತನಕ ಹೊರತಂದಿರುವ ಪ್ರಕಟಣೆಗಳು ಸಾಕಷ್ಟು ಜನರ ಹಾಗೂ ವಿದ್ವಾಂಸರ ಗಮನ ಸೆಳೆದಿವೆ; ಸಂಶೋಧಕರ ಪ್ರಯೋಜನಕ್ಕೆ ಬಂದಿವೆ. ಇನ್ನು ಮುಂದಿನ ಪ್ರಕಟಣೆಗಳು ಸಹಾ ಈ ಮಟ್ಟಿಗೆ ಉಪಯುಕ್ತ ಕೊಡುಗೆಯೆನಿಸುತ್ತವೆಂಬ ನಿರೀಕ್ಷೆ ನಮ್ಮದು. ಸಂಪದವು ಪ್ರಸ್ತುತ ಪ್ರಕಟಿಸುತ್ತಿರುವ 'ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ'ವು ಶ್ರೇಷ್ಠ ಅಭಿನಂದನ ಸಂಪುಟಗಳ ಸಾಲಿಗೆ ಸೇರುವಂಥಾದ್ದು. ನಿವೃತ್ತ ಜಿಲ್ಲಾ ನ್ಯಾಯಾಧೀಶರೂ ತಮ್ಮ ಪರಿಶುದ್ಧ ನಡವಳಿಕೆ ಹಾಗೂ ಕಾಯಕನಿಷ್ಠೆಗಳಿಗಾಗಿ ಸರ್ವರ ಗೌರವಾದರಗಳಿಗೆ ಪಾತ್ರರಾದವರೂ ಆಗಿರುವ ಶ್ರೀ ಜಿ.ಹೆಚ್.ಪ್ರಸಾದ್ ಅವರಿಗೆ ಅವರ ಸಹೋದ್ಯೋಗಿಗಳು, ಸ್ನೇಹಿತರು, ಬಂಧುಗಳು, ಕುಟುಂಬವರ್ಗದವರು ಹಾಗೂ ಅಭಿಮಾನಿಗಳು ಪ್ರೀತಿಪೂರ್ವಕ ಅರ್ಪಿಸುತ್ತಿರುವ ಅಭಿನಂದನ ಸಂಪುಟ ಇದು. ಸನ್ಮಾನ್ಯ ಜಿ.ಹೆಚ್.ಪ್ರಸಾದ್ ಅವರಿಗೆ ನಮ್ಮ ಸಂಪದವು ಅಭಿಮಾನಪೂರ್ವಕ ವಂದನೆಯನ್ನು

ಸಲ್ಲಿಸುತ್ತದೆ; ಹಾಗೂ ಅವರಿಗೂ ಅವರ ಕುಟುಂಬವರ್ಗದವರಿಗೂ ಶುಭವನ್ನು ಹಾರೈಸುತ್ತದೆ.

ಪ್ರಸ್ತುತ ಅಭಿನಂದನ ಸಂಪುಟದ ಮುದ್ರಣಕ್ಕೆ ತಗುಲಿದ ಒಟ್ಟು ವೆಚ್ಚವನ್ನು ಶ್ರೀ ಜಿ.ಹೆಚ್.ಪ್ರಸಾದ್ ಅವರ ಕುಟುಂಬವರ್ಗದವರು, ಬಂಧು-ಬಾಂಧವರು ಹಾಗೂ ಅಭಿಮಾನಿಗಳೇ ವಹಿಸಿರುವುದು ಸಂತೋಷದಾಯಕ ವಿಚಾರ. ಸಂಪದವು ಈ ಎಲ್ಲರಿಗೂ ಕೃತಜ್ಞವಾಗಿದೆ.

ಈ ಸಂಪುಟವನ್ನು ವಾಲ್ಮೀಕಿ ಸಾಹಿತ್ಯ ಸಂಪದದ ವತಿಯಿಂದ ಹೊರತರಲು ಅವಕಾಶ ನೀಡಿದ ಶ್ರೀ ಜಿ.ಹೆಚ್.ಪ್ರಸಾದ್ ಅಭಿನಂದನ ಸಂಪುಟ ಪ್ರಕಟಣ ಸಮಿತಿಯ ಎಲ್ಲ ಪದಾಧಿಕಾರಿಗಳಿಗೂ ಸದಸ್ಯರಿಗೂ ಸಂಪದವು ಆಭಾರಿಯಾಗಿದೆ.



# ಅಧ್ಯಕ್ಷರ ಮಾತು

**ಕೆ.ಮಲ್ಲಪ್ಪ**

ನಾನು ಭಾವಿಸುವಂತೆ, ನಮ್ಮ ಇತಿಹಾಸದಲ್ಲಿ ನೋವಿನ ಸಂಗತಿಗಳೇ ಹೆಚ್ಚಾಗಿ ಕಾಣಸಿಗುತ್ತವೆ. ಕಾಲಕ್ರಮದಲ್ಲಿ ನಮ್ಮ ಧರ್ಮ, ಸಂಸ್ಕೃತಿ, ಜನಜೀವನ ಇತ್ಯಾದಿಗಳು ಹೇಗೆ ಅಧಃಪತನಗೊಂಡುವೆಂಬುದನ್ನು ಇತಿಹಾಸ ತಿಳಿಸುತ್ತದೆ. ಆದ್ದರಿಂದ ಇದು ನೋವಿನ ಸಂಗತಿಯೇ ಹೌದು. ನಮ್ಮ ದೇಶದ ಪರಿಸ್ಥಿತಿಗಳು ಹೇಗೆ ಪ್ರತಿಕೂಲ ಸನ್ನಿವೇಶಗಳನ್ನು ಸೃಷ್ಟಿಸಿದವೆಂಬುದು ಸಹಾ ನೋವನ್ನುಂಟುಮಾಡುವಂಥಾದ್ದು. ಏನೇ ಇದ್ದರೂ ಪ್ರಸ್ತುತ ಸಂದರ್ಭದಲ್ಲಿ ಇತಿಹಾಸ ಅಧ್ಯಯನದ ಅಗತ್ಯ ತುಂಬಾ ಇದೆ. ಹಾಗೆಯೇ, ಇತಿಹಾಸದ ಸಂಗತಿಗಳನ್ನು ಕ್ರೋಢೀಕರಿಸಿ ಜನರಿಗೆ ಪರಿಚಯಿಸುವ ಕೆಲಸವೂ ನಡೆಯಬೇಕಿದೆ. ಏಕೆಂದರೆ ಹಿಂದಿನವರ ಬದುಕು ಮತ್ತು ಹೋರಾಟಗಳು ನಮಗೆ ಸದಾ ಸ್ಫೂರ್ತಿ ಕೊಡುವಂಥವು.

ಇಂದಿನ ಪರಿಸ್ಥಿತಿಯಲ್ಲಿ ಹಿಂದಿನವರಂತೆ ಹೋರಾಟದ ಮನೋಭಾವವನ್ನು ಉಳಿಸಿಕೊಳ್ಳಬೇಕಿದೆ. ಹಿಂದಿನ ರಾಷ್ಟ್ರವೀರರ, ಸ್ವಾತಂತ್ರ್ಯ ಹೋರಾಟಗಾರರ, ದಾರ್ಶನಿಕರ ಆದರ್ಶಗಳನ್ನು, ಸಂದೇಶಗಳನ್ನು ಅರ್ಥಮಾಡಿಕೊಳ್ಳಬೇಕಾದ, ಮೆಲುಕು ಹಾಕಬೇಕಾದ ಅಗತ್ಯ ತೋರುತ್ತದೆ. ಇತಿಹಾಸ ಪುಟಗಳಲ್ಲಿ ಕಂಡುಬರುವ ಸಾಮ್ರಾಜ್ಯ ನಿರ್ಮಾಣಕಾರರೂ ವರ್ಚಸ್ವಿಗಳೂ ಸ್ವಾತಂತ್ರ್ಯಪ್ರೇಮಿಗಳೂ ಆದಂಥಾ ವಿಜಯನಗರದ ಹಕ್ಕ-ಬುಕ್ಕರು, ಕೃಷ್ಣದೇವರಾಯ, ಎಚ್ಚಮನಾಯಕ, ಮದಕರಿನಾಯಕ ಹಾಗೂ ಈತನ ವಂಶದವರು, ಕಿತ್ತೂರು ಚೆನ್ನಮ್ಮ, ಸಂಗೊಳ್ಳಿರಾಯಣ್ಣ ಮೊದಲಾದವರು ಈ ದೇಶದ ಐಕ್ಯತೆಗಾಗಿ ದುಡಿದವರು. ಮಹಾನ್ ಮೇಧಾವಿಗಳಾದ ಅರವಿಂದಘೋಷ್, ಸ್ವಾಮಿ ವಿವೇಕಾನಂದ, ಸೋದರಿ ನಿವೇದಿತಾ, ಚಂದ್ರಶೇಖರ ಆಜಾದ್, ವೀರ ಸಾವರ್ಕರ್ ಅಂಥವರು ಸ್ವಾತಂತ್ರ್ಯ ಪ್ರೇಮ, ದೇಶಪ್ರೇಮಗಳನ್ನು ಜಾಗೃತಗೊಳಿಸಿದವರು. ಇವರೆಲ್ಲರಿಂದಲೂ ಇತರರಿಂದಲೂ ಜನರಿಗೆ ಪ್ರೇರಣೆ ದೊರೆಯುವಂತಾದುದು ವಾಸ್ತವ.

ನಮ್ಮ ಪರಂಪರೆ ಮತ್ತು ಅದನ್ನುಳಿಸಲು ಹೆಣಗಿದವರ ಅರಿವು ನಮ್ಮಲ್ಲಿಲ್ಲದಿರುವುದೇ ನಮ್ಮತನವನ್ನು ಕಳೆದುಕೊಳ್ಳುವ ಪರಿಸ್ಥಿತಿ ಎದುರಾಗಲು ಕಾರಣ. ದೇಶದ ಬಗೆಗಿನ ಚಿಂತನೆಯೂ ಕಡಿಮೆಯಾಗುತ್ತಿದೆ. ಇದರಿಂದ ದೇಶದ ಒಗ್ಗಟ್ಟು ಹಾಳಾಗುತ್ತಿದೆ. ಇಂದಿನ ಬಹಳಷ್ಟು ಮಂದಿ ರಾಜಕಾರಣಿಗಳಲ್ಲಿ ಎದ್ದುಕಾಣುವ ಕೊರತೆಯೆಂದರೆ, ಅವರಲ್ಲಿ

ದೇಶದ ಬಗೆಗೆ ಸರಿಯಾದ ಅರಿವು ಇಲ್ಲದಿರುವುದು. ದೇಶವನ್ನು ಉದ್ಧರಿಸಬೇಕೆನ್ನುವ ಜನಮುಖಂಡರಲ್ಲಿ ಇರಬೇಕಾದ ಅಗತ್ಯ ತಿಳಿವಳಿಕೆಯೆಂದರೆ, ಮೊದಲು ತಮ್ಮ ಲೋಪ-ದೋಷ-ಮಿತಿಗಳ ಬಗೆಗಿನ ಅರಿವು. ಇಂದು ಸಾರ್ವಜನಿಕರ ಸೇವೆಯ ಹೆಸರಿನಲ್ಲಿ ಸೋಗುಹಾಕಿ ಬದುಕಲೆತ್ನಿಸುತ್ತಿರುವವರಲ್ಲಿ ರಾಜಕಾರಣಿಗಳದೇ ಮೇಲುಗೈ. ಜನಪ್ರಿಯ ಜನನಾಯಕರೆನಿಸಿ ವಿಜೃಂಭಿಸುತ್ತಿರುವವರಲ್ಲಿ ಕೆಲವರು ಅಪರಾಧಿ ಹಿನ್ನೆಲೆಯುಳ್ಳವರು. ರಾಜಕೀಯಕ್ಷೇತ್ರ ಮಾತ್ರವೇ ಅಲ್ಲ, ಸರ್ಕಾರಿಕ್ಷೇತ್ರವಾಗಿರಲಿ, ವಾಣಿಜ್ಯಕ್ಷೇತ್ರವಾಗಿರಲಿ, ಸಾರ್ವಜನಿಕರಂಗವಾಗಿರಲಿ, ಬೇರಾವುದೇ ಕ್ಷೇತ್ರವಾಗಿರಲಿ ಇಲ್ಲೆಲ್ಲ ಪರಿಶುದ್ಧತೆಯೆಂಬುದು ಈಗ ಕಾಣೆಯಾಗತೊಡಗಿದೆ. ಪ್ರಾಮಾಣಿಕವಾಗಿ ದುಡಿಯುವವರು ಹಾಗೂ ಬದುಕುವವರು ಮಾತ್ರವೇ ಪರಿಶುದ್ಧತೆಯುಳ್ಳ ಆದರ್ಶವ್ಯಕ್ತಿಗಳೇ ವಿನಾ ಇತರರಲ್ಲ.

ಒಂದು ಜರೂರಾದ ಪ್ರಸ್ತುತ ವಿಷಯವನ್ನು ಇಲ್ಲಿ ಪ್ರಸ್ತಾಪಿಸಬೇಕು. ಇಂದು ಜಗತ್ತಿನಲ್ಲಿ ಭಯೋತ್ಪಾದನೆಯೇಕೆ ಇಷ್ಟು ವೇಗವಾಗಿ ಹರಡುತ್ತಿದೆ? ಯಾವ ಪುರುಷಾರ್ಥಕ್ಕೋಸ್ಕರ ಅವ್ಯಾಹತವಾಗಿ ಅಮಾಯಕರ ಹತ್ಯೆ ನಡೆಯುತ್ತಿದೆ? ಇದರಿಂದ ಯಾರಿಗೆ ನೆಮ್ಮದಿ ದೊರೆಯುತ್ತಿರಬಹುದು? ಯಾವ ಸಾಮ್ರಾಜ್ಯ ಸ್ಥಾಪನೆಗಾಗಿ ಈ ಹಿಂಸೆ? ಇಂಥಾ ವಿಚಾರದಲ್ಲಿ ಅಂತಾರಾಷ್ಟ್ರೀಯ ಕಾನೂನು-ಕಟ್ಟಳೆಗಳ ಅನ್ವಯ ಹೇಗೆ? ಒಟ್ಟಿನಲ್ಲಿ, ಇಡೀ ವಿಶ್ವದಲ್ಲಿ ಭಯದ ಮತ್ತು ಉಸಿರುಗಟ್ಟುವ ವಾತಾವರಣ ಏರ್ಪಟ್ಟಿದೆ. ಈ ಸಮಸ್ಯೆ ನಿವಾರಣೆಗೆ ಜಾಗತಿಕ ಇತಿಹಾಸದಲ್ಲಿ ಪರಿಹಾರವಿದೆ; ಇದನ್ನು ಶೋಧಿಸಬೇಕು. ಮುಖ್ಯವಾಗಿ, ಭಯೋತ್ಪಾದಕರನ್ನು ಬಗ್ಗುಬಡಿಯುವ ಕೆಲಸ ಕೇವಲ ಸರ್ಕಾರಗಳ ಹೊಣೆಗಾರಿಕೆಯೇನಲ್ಲ; ಪ್ರಜೆಗಳೆಲ್ಲರದೂ ಹೌದು. ನೆಮ್ಮದಿಯಿಂದ ಬದುಕಲು ಪ್ರಜೆಗಳಿಗೆ ಇರುವುದು ಇದೊಂದೇ ದಾರಿ. ಹಾಗೆಯೇ, ಭಯೋತ್ಪಾದಕರಿಗೆ ಆ ದೇವರು ಸದ್ಬುದ್ಧಿಯನ್ನು ಕರುಣಿಸಲೆಂದೂ ಪ್ರಾರ್ಥಿಸಬೇಕಿದೆ!

ಭಯೋತ್ಪಾದನೆಗಿಂತಲೂ ಮಿಗಿಲಾದ ಇತರ ಪಿಡುಗುಗಳೂ ನಮ್ಮ ದೇಶವನ್ನು ಕಾಡುತ್ತಲಿವೆ. ಅವುಗಳೆಂದರೆ, ಇದೀಗ ದೇಶದಲ್ಲಿ ಉಲ್ಬಣಾವಸ್ಥೆಯಲ್ಲಿರುವ ಜನಸಂಖ್ಯಾ ಸ್ಫೋಟ, ನಿರುದ್ಯೋಗ ಸಮಸ್ಯೆ, ಯುವಜನರಲ್ಲಿ ಅಶಿಸ್ತು, ಸಂಪನ್ಮೂಲಗಳ ದುರುಪಯೋಗ, ಭೂವಿಸ್ತೀರ್ಣದ ಕುಗ್ಗುವಿಕೆ, ವಯೋಮಿತಿಗೊಳಪಡಿಸದ ವಿವಾಹ ಆಚರಣೆ, ಅವೈಜ್ಞಾನಿಕ ನೆಲೆಯ ಲೈಂಗಿಕ ಶಿಕ್ಷಣ ಇತ್ಯಾದಿ. ಇಂಥಾವನ್ನು ನಿಯಂತ್ರಿಸುವ ಮಟ್ಟಿಗೆ ಕಾನೂನುಗಳನ್ನು ಬಲಪಡಿಸಬೇಕು. ಇಂಥಾ ಗಂಭೀರ ಸಮಸ್ಯೆಗಳತ್ತ ನಮ್ಮ ಜನಪ್ರತಿನಿಧಿಗಳು ನಿರ್ಲಕ್ಷ್ಯ ತೋರಬಾರದು. ಮುಂದಿನ ಪೀಳಿಗೆಯ ದೃಷ್ಟಿಯಿಂದ, ಸೌಲಭ್ಯ-ನೆಮ್ಮದಿಗಳ ದೃಷ್ಟಿಯಿಂದ ಇದು ಅನಿವಾರ್ಯ. ಇಂಥಾವೆಲ್ಲ ಮುಂದುವರೆದರೆ ಮುಂದೊಮ್ಮೆ ಮನುಷ್ಯನೇ ಮನುಷ್ಯನನ್ನು ತಿಂದುಹಾಕುವ ಪರಿಸ್ಥಿತಿ ಎದುರಾಗಬಹುದೇನೊ.

* * *

ನನಗೆ ವ್ಯಕ್ತಿಗಿಂತ ದೇಶ ಮುಖ್ಯ. ಆದರೆ ದೇಶದ ಪ್ರಗತಿಗೆ ಬೇಕಾದಂಥಾ ಆರೋಗ್ಯ ಪೂರ್ಣ ಚಿಂತನೆಯನ್ನು ಹಾಗೂ ಆದರ್ಶ ವಿಚಾರಗಳನ್ನು ಪೂರೈಸುವ ಸಂದರ್ಭದಲ್ಲಿ ವ್ಯಕ್ತಿಯೂ ಮುಖ್ಯವೆನ್ನುತ್ತೇನೆ. ಈ ಹಿನ್ನೆಲೆಯಲ್ಲಿ, ಒಂದು ನಾಡಿನ ಹಾಗೂ ಒಂದು ವಿಷಯದ ವಸ್ತುನಿಷ್ಠ ಇತಿಹಾಸವನ್ನು ರಚಿಸಿ ಜನಜಾಗೃತಿ ಮಾಡಬೇಕೆಂಬುದನ್ನು ನಾನು ಬೆಂಬಲಿಸುತ್ತೇನೆ. ಆದರೆ ಇಂಥಾ ಘನಕಾರ್ಯದಲ್ಲಿ ತೊಡಗಿಕೊಂಡಿರುವ ಬಹುಪಾಲು ಬುದ್ಧಿಜೀವಿಗಳು ತಮ್ಮ ನಿತ್ಯಬದುಕಿನಲ್ಲಿ ಕೆಲವು ಸೀಮಿತ ನಡವಳಿಕೆಗಳಿಗೆ ಬದ್ಧರಾಗಿರುತ್ತಾರೆ. ಇದೊಂದು ವಿಷಾದಕರ ಸಂಗತಿ. ಇದಕ್ಕೆ ನಮ್ಮ ಸರ್ಕಾರಿ ಅಧಿಕಾರಿಗಳೂ ಹೊರತಲ್ಲ. ಇಂಥವರು ತಮ್ಮ ಕುಟುಂಬ, ಮನೆ, ಕ್ಲಬ್, ಯಾವುದಾದರೂ ಒಂದು ಸಂಸ್ಥೆ ಹಾಗೂ ಕೆಲವು ಅಂಗಡಿಗಳಿಗಷ್ಟೆ ತಮ್ಮ ನಿತ್ಯ ಚಟುವಟಿಕೆಗಳನ್ನು ವಿಸ್ತರಿಸಿಕೊಂಡಿರುತ್ತಾರೆ. ಇನ್ನು ಸರ್ಕಾರಿ ಸೇವೆಯಿಂದ ನಿವೃತ್ತರಾಗುವ ಶೇಕಡ ೯೦ರಷ್ಟು ಮಂದಿಯಲ್ಲಿ ಸಾಮಾಜಿಕ ಕಳಕಳಿಯೇ ಕಂಡುಬರುವುದಿಲ್ಲ. ತಮ್ಮ ಕುಟುಂಬಕ್ಕಷ್ಟೆ ಸೀಮಿತರಾದಂತೆ ಕಾಣಬರುವುದುಂಟು. ಅಂಥವರಿಗೆ ಕುಟುಂಬವೇ ಜಗತ್ತು!

ವಿಶ್ರಾಂತ ಜೀವನ ನಡೆಸಬೇಕೆಂದು ಬಯಸುವವರಲ್ಲಿಯೂ ಕೆಲವರಾದರೂ ಸಾಮಾಜಿಕ ಕಳಕಳಿಯುಳ್ಳವರು, ಸಮಾಜ ಕುರಿತು ಚಿಂತನೆ ನಡೆಸುವವರು ಇದ್ದೇ ಇರುತ್ತಾರೆ. ಜ್ಞಾನ-ತಿಳಿವಳಿಕೆಗಳ ಕೊರತೆಯುಳ್ಳ ಜನರೊಡನೆ ಬೆರೆತು ಸೂಕ್ತ ಮಾರ್ಗದರ್ಶನ ಮಾಡುತ್ತಲೇ ಇರುತ್ತಾರೆ. ಆದರೆ ಸೇವೆಯಲ್ಲಿರುವಾಗಲೇ ಇಂಥಾ ಮನೋಧರ್ಮವನ್ನು ಬೆಳೆಸಿಕೊಂಡು, ಉಳಿಸಿಕೊಂಡು ಬರಬೇಕೆನ್ನುವವರ ಸಂಖ್ಯೆ ಕಡಿಮೆ. ಅಲ್ಲದೆ, ಇಂಥಾ ಪ್ರವೃತ್ತಿಯೊಡನೆ ಬದುಕುವುದು ಸುಲಭವಲ್ಲ. ಏಕೆಂದರೆ ಸರ್ಕಾರಿ ನೌಕರಿಯಲ್ಲಿ ಇಂದು ಪ್ರಾಮಾಣಿಕವಾಗಿ ದುಡಿಯುವವರಿಗೆ, ನೈತಿಕತೆಯನ್ನು ಉಳಿಸಿಕೊಂಡವರಿಗೆ ಬದುಕುಳಿಯುವುದೇ ಕಷ್ಟವೆನಿಸುತ್ತಿದೆ. ಪ್ರಾಮಾಣಿಕರನ್ನು ಅವರೊಡನಿರುವ ಇತರ ಸಹೋದ್ಯೋಗಿಗಳೇ ನಾನಾ ವಿಧದಲ್ಲಿ ಹಿಂಸಿಸುವ ಪ್ರವೃತ್ತಿ ಬೆಳೆಯುತ್ತಿದೆ. ನಾನು ಕಂಡಂತೆ, ಸಾಮಾನ್ಯವಾಗಿ ಸರ್ಕಾರಿ ಉದ್ಯೋಗದಲ್ಲಿದ್ದರೆ ಒಳ್ಳೆಯ ಹೆಸರು ಗಳಿಸುವುದು ಸ್ವಲ್ಪ ಕಷ್ಟ. ಆಯಾ ವೃತ್ತಿಪರಿಸರದಲ್ಲಿ ಸಂಕುಚಿತ ಭಾವನೆ, ಕಶ್ಮಲಭರಿತ ಮನಸ್ಸುಗಳಿಂದ ಕೂಡಿದ ಜನರಿರುವುದೇ ಇದಕ್ಕೆ ಕಾರಣ. ಆದರೆ ಇಂಥಾ ಉಪಾಧಿಗಳಿಂದ ಹೊರತಾಗಿದ್ದವರು ಹಾಗೂ ತಮ್ಮ ಪರಿಶುದ್ಧ ವೃತ್ತಿಜೀವನದ ಕೊನೆಯನ್ನು ತಲುಪಿ ಯಶಸ್ವಿಯಾದವರು ನಮ್ಮ ಜಿ.ಹೆಚ್.ಪ್ರಸಾದ್ ಎನ್ನಲು ಸಂತೋಷವೆನಿಸುತ್ತದೆ.

* * *

ಯಾವುದೇ ವ್ಯಕ್ತಿ ತನ್ನ ಬದುಕಿನ ಗುರಿಯನ್ನು ಸಾಧಿಸಬೇಕೆಂದಿದ್ದರೆ, ಕೇವಲ ಆ ಕುರಿತು ಮಾತನಾಡುತ್ತಿದ್ದರೆ ಪ್ರಯೋಜನವಿಲ್ಲ. ಅದಕ್ಕೆ ತಕ್ಕ ಪ್ರಯತ್ನ ಮಾಡಬೇಕು; ಶ್ರದ್ಧೆ-ಶ್ರಮ-ಸಾಧನೆಗಳನ್ನು ಅಳವಡಿಸಿಕೊಳ್ಳಬೇಕು. ಕೇವಲ ಪೂಜೆ ಮಾಡಿದ ಮಾತ್ರಕ್ಕೆ ದೇವರು ಒಲಿಯುವನೇ? ಅದಕ್ಕೆ ತಕ್ಕ ಭಕ್ತಿ-ಶ್ರದ್ಧೆಗಳು ಬೇಕಲ್ಲವೇ? ನಾನು ಗಮನಿಸಿದಂತೆ,

ಬಾಲ್ಯದಿಂದಲೂ ಜಿ.ಹೆಚ್‌ಪ್ರಸಾದ್ ಅವರಲ್ಲಿದ್ದುದು ಗುರಿ ಮುಟ್ಟಬೇಕೆಂಬ ಛಲ ಮತ್ತು ಹಟ. ಆದ್ದರಿಂದಲೇ ಅವರು ತಮ್ಮ ಗುರಿಯನ್ನು ನಿರ್ದಿಷ್ಟವಾಗಿ ತಲುಪಲು ಸಾಧ್ಯವಾಯಿತು. ಇದರೊಡನೆ, ದೋಷರಹಿತವಾಗಿ ಹಾಗೂ ನಿರ್ಮಲವಾಗಿ ಬದುಕಲೆತ್ನಿಸಿದುದೂ ಉನ್ನತಮಟ್ಟಕ್ಕೆ ಬೆಳೆಯಲು ಅವರಿಗೆ ಸಹಾಯ ಮಾಡಿತು.

ಜಿ.ಹೆಚ್.ಪ್ರಸಾದ್ ಅವರ ಬಗೆಗೆ ಹೇಳಬೇಕೆಂದರೆ, ನಮ್ಮಿಬ್ಬರದೂ ಸುಮಾರು ಐವತ್ತು ವರ್ಷಗಳಷ್ಟು ಹಳೆಯ ಪರಿಚಯ. ಇವರು ಬಾಲಕರಾಗಿದ್ದಾಗಿನಿಂದಲೂ ನೋಡುತ್ತಾ ಬಂದಿದ್ದೇನೆ. ಇವರ ಕುಟುಂಬದ ಎಲ್ಲರನ್ನೂ ಬಲ್ಲೆ. ಇವರದು ಸಾಮಾನ್ಯ ಕುಟುಂಬವಾದರೂ ಇವರೆಲ್ಲರೂ ಮಾಡಿದ ಸಾಧನೆ ದೊಡ್ಡದು. ಹಾಲಪ್ಪನವರು ಪ್ರಸಾದ್ ಅವರ ತಂದೆ; ದುರ್ಗಪ್ಪನವರು ಇವರ ದೊಡ್ಡಪ್ಪ. ಇವರ ಅಣ್ಣ ಜಿ.ಹೆಚ್.ಶರಣಪ್ಪ ಮತ್ತು ನಾನು ಸಹಪಾಠಿಗಳು; ಜತೆಯಲ್ಲೆ ವಿದ್ಯಾಭ್ಯಾಸ ಮಾಡಿದವರು. ಶರಣಪ್ಪನದು ವಿಶಾಲವಾದ ಮನಸ್ಸು. ಸಂಕುಚಿತ ಸ್ವಭಾವದವನಲ್ಲ. ಅವರಿವರೆನ್ನದೆ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿದವನು. ಆಗ ಇವರೆಲ್ಲರೂ ಶ್ರಮವಹಿಸಿ ಜೀವನ ನಡೆಸುತ್ತಿದ್ದರೂ ಅಷ್ಟಾಗಿ ವಿದ್ಯಾವಂತರಲ್ಲದಿದ್ದರೂ ಶಿಕ್ಷಣಕ್ಕೆ ಆದ್ಯತೆ ನೀಡುವುದರೊಡನೆ ಇಡೀ ಕುಟುಂಬವನ್ನು ಮುಂದುವರೆಸಿದುದು ನಿಜಕ್ಕೂ ಅಭಿನಂದನಾರ್ಹ ಕ್ರಮ. ಇಷ್ಟಾದರೂ ಈ ಕುಟುಂಬದಲ್ಲಿ ಅವರವರ ಶ್ರಮದಿಂದಲೇ ಮೇಲ್ಮಟ್ಟಕ್ಕೆ ಬಂದವರು.

ಪ್ರಸಾದ್ ಅವರ ದೊಡ್ಡಪ್ಪ ದುರ್ಗಪ್ಪ ಅವರ ವಿಚಾರ ದೊಡ್ಡದು. ಅವರೋರ್ವ ಆಧ್ಯಾತ್ಮಜೀವಿ. ಸಂತಕವಿ ಮಹಲಿಂಗರಂಗರ ಆರಾಧಕರು. ಈ ಮಹಲಿಂಗರಂಗ (ರಂಗನಾಥ)ನಾದರೋ ಶಾಂಕರತತ್ವಜ್ಞಾನವನ್ನು ತನ್ನ 'ಅನುಭವಾಮೃತ'ದಲ್ಲಿ ತಿಳಿಯಾಗಿ ನಿರೂಪಿಸಿ ಪ್ರಸಿದ್ಧನಾದವನು. ಈತನಿಗೆ ರಂಗಾವಧೂತ ಎಂಬ ಹೆಸರೂ ಉಂಟು. ಈತನ ಅಂಕಿತ 'ಶ್ರೀಗಿರಿಯ ಮಲ್ಲಿಕಾರ್ಜುನ'. ನಲವತ್ತು ವರ್ಷಗಳ ಕಾಲ ದಾವಣಗೆರೆಯ ಈ ರಂಗಾವಧೂತರಮಠದ ಮೇಲುಸ್ತುವಾರಿ ನೋಡಿಕೊಂಡವರು ದುರ್ಗಪ್ಪ. ಈ ಮಠದಲ್ಲಿ ಪೂಜೆ-ಪುನಸ್ಕಾರ, ಪ್ರವಚನ, ಭಜನೆ, ಆಧ್ಯಾತ್ಮಚಿಂತನೆ, ಪ್ರಸಾದ ವಿತರಣೆಗಳು ನಿರಂತರವಾಗಿ ನಡೆಯುವಂತೆ ಶ್ರದ್ಧಾಭಕ್ತಿಗಳಿಂದ ಕಾರ್ಯನಿರ್ವಹಿಸಿದವರು. ಹಾಗೆಯೇ, ಕಲಪನಹಳ್ಳಿ ಬಸಪ್ಪಜ್ಜನವರಮಠದ ಮೇಲುಸ್ತುವಾರಿಯೂ ಹಲವಾರು ವರ್ಷಗಳ ಕಾಲ ಇವರದೇ ಆಗಿದ್ದಿತು. ೧೯೫೨ರ ದಾವಣಗೆರೆ ನಗರಸಭಾ ಚುನಾವಣೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರರು, ನಗರಸಭಾ ಅಧ್ಯಕ್ಷರಾಗಿದ್ದಂಥವರು, ಆ ನಂತರ ಶಾಸಕರೂ ಆದಂಥವರು ಹಾಗೂ ಸ್ಥಳೀಯ ಪ್ರತಿಷ್ಠಿತ ವ್ಯಕ್ತಿಯಾಗಿದ್ದಂಥವರೋರ್ವರನ್ನು ಸೋಲಿಸಿದುದೊಂದು ದುರ್ಗಪ್ಪನವರ ಸಾಧನೆ. ೧೯೫೮ರಲ್ಲಿ ನಾನು ನಗರಸಭಾ ಸದಸ್ಯನಾಗಿದ್ದು, ಆ ಚುನಾವಣೆಯಲ್ಲಿ ಪ್ರಸಾದ್ ಅವರ ಕುಟುಂಬದವರು ನನ್ನ ಪರವಾಗಿ ಚುನಾವಣಾ ಪ್ರಚಾರ ಕೈಗೊಂಡುದು ವಿಶೇಷ. ಆಗ ಪ್ರಸಾದ್ ಅವರು ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿ ದ್ದರು.

ನಮ್ಮ ಜಿ.ಹೆಚ್.ಪ್ರಸಾದ್ ಅವರು ನಿವೃತ್ತಿಯ ನಂತರವೂ ಸಾಮಾಜಿಕ ಕಳಕಳಿಯನ್ನು ಉಳಿಸಿಕೊಂಡಂಥವರು. ಇಂದಿಗೂ ಜನರಿಗೆ ಸ್ಪಂದಿಸುವ ಕಾರ್ಯದಲ್ಲಿ ತೊಡಗಿಕೊಂಡಿದ್ದಾರೆ. ಇಂದು ಪ್ರಸಾದ್ ಅವರಂತೆ ಸಮಾಜಿಕ ಚಿಂತನೆ ನಡೆಸುವವರು ಬೇಕಾಗಿದ್ದಾರೆ. ವಿಶ್ರಾಂತ ಜೀವನವನ್ನಷ್ಟೇ ನಡೆಸಬೇಕೆಂದು ಬಯಸುವುದಾಗಿದ್ದರೆ, ಪ್ರಸಾದ್ ಅವರನ್ನು ಕುರಿತು ಇಂಥಾ ಅಭಿನಂದನ ಸಂಪುಟ ಪ್ರಕಟಗೊಳ್ಳಲು ಸಾಧ್ಯವಾಗುತ್ತಿತ್ತೆ? ಆದ್ದರಿಂದಲೇ ಪ್ರಸಾದ್ ಅವರು ಇತರರಿಂದ ಹೊರತಾದವರು ಎನ್ನುತ್ತೇನೆ. ನನ್ನ ದೃಷ್ಟಿಯಲ್ಲಿ ಪ್ರಸಾದ್ ಅಂಥವರು ಸಿಕ್ಕುವುದು ವಿರಳ. ನಿವೃತ್ತಿಯ ನಂತರವೂ ಇವರ ಸಮಾಜ ಸೇವೆ ಮುಂದುವರೆದಿರುವುದು ಸಮಾಧಾನಕರ ಸಂಗತಿ. ಪ್ರಸಾದ್ ಅವರಿಗೆ ಹಾಗೂ ಅವರ ಕುಟುಂಬವರ್ಗದವರಿಗೆ ನಾನು ಶುಭವನ್ನು ಹಾರೈಸುತ್ತೇನೆ. ಇವರೆಲ್ಲರಿಗೆ ಆಯಸ್ಸು, ಆರೋಗ್ಯ, ಉನ್ನತ ಸ್ಥಾನ-ಮಾನಗಳನ್ನು ಕರುಣಿಸಲು ಆ ದೇವರಲ್ಲಿ ಪ್ರಾರ್ಥಿಸುತ್ತೇನೆ.

* * *

ಎಷ್ಟೋ ಜನ ವಿದ್ವಾಂಸರು ಐತಿಹಾಸಿಕ ವ್ಯಕ್ತಿ, ಘಟನೆ, ಪ್ರವೃತ್ತಿ ಇತ್ಯಾದಿ ಕುರಿತು ಸಂಶೋಧನೆ, ಅಂದರೆ ಪಿಎಚ್.ಡಿ. ಅಧ್ಯಯನ ಕೈಗೊಂಡಿದ್ದಾರೆ. ಸಾಮ್ರಾಟರಾಗಿ ಪ್ರಸಿದ್ಧರಾದವರನ್ನು ತಮ್ಮ ಅಧ್ಯಯನದ ವಸ್ತುವಾಗಿರಿಸಿಕೊಂಡಿದ್ದಾರೆ. ಆದರೆ ಜನಸಾಮಾನ್ಯರ ಪ್ರತಿನಿಧಿಗಳಾಗಿದ್ದ ಪಾಳೆಯಗಾರರು ಹಾಗೂ ಅವರು ಅನುಸರಿಸಿದ ನ್ಯಾಯಾಡಳಿತದ ಬಗೆಗೆ ಇಂಥಾ ಪ್ರಯತ್ನ ಮಾಡಿದಂತಿಲ್ಲ. ನಾನು ತಿಳಿದಿರುವಂತೆ, ಇಂಥಾ ಸಂಪುಟಗಳನ್ನು ರೂಪಿಸುವುದು ತುಂಬಾ ಕಷ್ಟ. ಆದರ್ಶಾತ್ಮಕ ಸಾಹಿತ್ಯ-ಇತಿಹಾಸಗಳಿಗೆ ನಮ್ಮಲ್ಲಿ ಮನ್ನಣೆ ದೊರೆಯುತ್ತಿಲ್ಲ. ಇಂದಿಗೂ ಇವು ಕೆಲವು ಪಟ್ಟಭದ್ರರ ಒಡೆತನದಲ್ಲಿವೆ. ಇಂಥಾ ವಿಷಯಗಳುಳ್ಳ ಕೃತಿಗಳನ್ನು ಹೊರತರಲು ಯಾರೂ ಸಿದ್ಧರಿಲ್ಲ. ಈಚೀಚೆಗೆ ಇತಿಹಾಸವನ್ನು ಓದುವುದೇ ದುಸ್ತರ ಹಾಗೂ ದುರ್ಲಭವೆನಿಸತೊಡಗಿದೆ. ಅದರಲ್ಲೂ ಇಂಥಾ ತಾಂತ್ರಿಕ ವಿಷಯವುಳ್ಳ ಕೃತಿಗಳನ್ನು ಓದುವುದು ಇನ್ನೂ ಕಷ್ಟದ ಕೆಲಸ!

ನ್ಯಾಯನಿರ್ಣಯದಂಥಾ ವಿಷಯವುಳ್ಳ ಕೃತಿಗಳನ್ನು ದೇಶದ ದೃಷ್ಟಿಯಿಂದ ಅಧ್ಯಯನ ಮಾಡಬೇಕಾಗುತ್ತದೆ. ಇಂಥಾ ಇತಿಹಾಸದಿಂದ ಅರಿವು-ಜಾಗೃತಿಗಳನ್ನು ಬೆಳೆಸಿಕೊಳ್ಳಲು ಸಹಾಯಕವಾಗುತ್ತದೆ. ಹಾಗೆ ನೋಡಿದರೆ, ಇಂಥಾ ಕೃತಿಗಳಿಗೆ ಸರ್ಕಾರವು ಸಬ್ಸಿಡಿ ನೀಡಿ ಪ್ರೋತ್ಸಾಹಿಸಬೇಕು. ಒಟ್ಟಿನಲ್ಲಿ, ಈ ಅಭಿನಂದನ ಸಂಪುಟವನ್ನು ಶ್ರಮಪೂರ್ವಕ ರೂಪಿಸಿ ಕೊಟ್ಟ ಪ್ರೊ.ಲಕ್ಷ್ಮಣ್ ತೆಲಗಾವಿ ಅವರಿಗೆ ನನ್ನ ವೈಯಕ್ತಿಕ ಹಾಗೂ ಪ್ರಕಟಣ ಸಮಿತಿಯ ಅಭಿನಂದನೆಗಳು. ಇವರಿಗೆ ಸಮಿತಿಯು ಕೃತಜ್ಞವಾಗಿದೆ. ಈ ಸಂಪುಟವನ್ನು ತಮ್ಮ ಸಂಪದದ ವತಿಯಿಂದ ಪ್ರಕಟಿಸಿರುವ ಪ್ರಕಾಶಕರಿಗೂ ಧನ್ಯವಾದಗಳು.

ಸದ್ಯದ ಸಂದರ್ಭದಲ್ಲಿ ಜಿ.ಹೆಚ್.ಪ್ರಸಾದ್ ಅಂಥವರು ದಾರಿದೀಪವಾಗಿ ಕಾಣಿಸುತ್ತಾರೆ. ಇವರು ಕ್ರಮಿಸಿದ ಮಾರ್ಗದಲ್ಲಿ ಇತರರೂ ನಡೆಯುವುದು ಅಗತ್ಯ. ಸರ್ವರಿಗೂ ಶುಭ ಕೋರುತ್ತೇನೆ.



# ಸಂಚಾಲಕರ ಮಾತು

ಹರ್ತಿಕೋಟೆ ವೀರೇಂದ್ರಸಿಂಹ
ಡಾ.ತೇಜಸ್ವಿ ಕಟ್ಟೀಮನಿ

ನಿರುಪದ್ರವಿ ಸಾಮಾನ್ಯ ಜನರ ಪರವಾದ ನ್ಯಾಯ ಮತ್ತು ಕಾನೂನುಗಳ ನಿರ್ವಹಣೆಯು ದೇವರಿಗೆ ಸಲ್ಲಿಸುವ ಪೂಜೆಯೇ ಸರಿ. ಇದೊಂದು ಪವಿತ್ರ ಹಾಗೂ ಗುರುತರ ಕಾರ್ಯ. ನ್ಯಾಯ-ಅನ್ಯಾಯಗಳ ತುಲನೆಯೊಡನೆ ಮಾನವರನ್ನು ರಕ್ಷಿಸುವ ಹಾಗೂ ಶಿಕ್ಷಿಸುವ ಹೊಣೆಗಾರಿಕೆಯುಳ್ಳ ವ್ಯಕ್ತಿಯು, ದೈವಿಕತೆ, ನೈತಿಕತೆ ಮತ್ತು ಸಾತ್ವಿಕತೆಗಳಂಥಾ ಮೌಲ್ಯಗಳನ್ನು ಎತ್ತಿಹಿಡಿಯುವ ದೇವರ ಪ್ರತಿನಿಧಿಯಿದ್ದಂತೆ. ಸ್ವಾಭಾವಿಕನ್ಯಾಯ ಅಥವಾ ದೇವರನ್ಯಾಯವು ಅಗೋಚರ ಶಕ್ತಿಯ ಹೊಣೆಗಾರಿಕೆಯಾದರೆ, ಸಾಮಾಜಿಕನ್ಯಾಯದ ಹೊಣೆಗಾರಿಕೆಯು ಆತನ ಪ್ರತಿರೂಪದಂತಿರುವ ನ್ಯಾಯಾಧೀಶನದು. ಆದ್ದರಿಂದಲೇ ನ್ಯಾಯದಾನವು ಒಂದು ಪರಮಶ್ರೇಷ್ಠ ಸೇವೆ. ಇಂಥಾ ಶ್ರೇಷ್ಠ ಕಾಯಕವನ್ನು ಕೈಗೊಂಡು ತಮ್ಮ ಬದುಕಿನಾದ್ಯಂತ ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಂಚನೆಯಿಂದ ಹಾಗೂ ನಿಷ್ಠೆಯಿಂದ ಸಮರ್ಥವಾಗಿ ನಿಭಾಯಿಸಿದ ಮಹನೀಯರಲ್ಲಿ ಶ್ರೀ ಜಿ.ಹೆಚ್.ಪ್ರಸಾದ್ ಸಹಾ ಒಬ್ಬರು.

ಉತ್ತಮ ಕೌಟುಂಬಿಕ ಪರಿಸರದಲ್ಲಿ ಜನಿಸಿ, ತಮ್ಮ ಧ್ಯೇಯೋದ್ದೇಶಗಳನ್ನು ಈಡೇರಿಸಿಕೊಳ್ಳುವಲ್ಲಿ ಶಿಸ್ತು-ಶ್ರದ್ಧೆ-ತಾಳ್ಮೆಗಳಿಂದ ಶ್ರಮಿಸಿ, ಬದುಕಿನ ಸಾರ್ಥಕತೆಯನ್ನು ನ್ಯಾಯವಾದಿಯಾಗಿ, ನ್ಯಾಯಾಧೀಶರಾಗಿ ಪೂರೈಸಿ, ಎಲ್ಲ ದೃಷ್ಟಿಯಿಂದಲೂ ಎಲ್ಲ ಕ್ಷೇತ್ರಗಳಲ್ಲೂ ನೆಮ್ಮದಿ-ಸಂತೃಪ್ತಿಗಳನ್ನು ಅನುಭವಿಸಿ ಕೃತಾರ್ಥರಾದವರೆಂದರೆ ಶ್ರೀ ಜಿ.ಹೆಚ್.ಪ್ರಸಾದ್. ಅವರ ಜೀವನ-ಸಾಧನೆಗಳತ್ತ ಒಂದು ದೃಷ್ಟಿ ಹರಿಸಿದರೆ ಇದರ ಯಥಾರ್ಥತೆ ನಮ್ಮ ಅರಿವಿಗೆ ಬರುತ್ತದೆ. ಪಾರದರ್ಶಕ ವ್ಯಕ್ತಿತ್ವವುಳ್ಳ ಶ್ರೀಯುತರ ಬಗೆಗೆ ನ್ಯಾಯಾಂಗದ ಎಲ್ಲ ಬಂಧುಗಳು ಇಂದಿಗೂ ಗೌರವಪೂರ್ವಕ ಮೆಚ್ಚುಗೆಯ ಮಾತುಗಳನ್ನಾಡುವುದು ಹಾಗೂ ಹಿರಿಯ ನ್ಯಾಯಾಧೀಶರುಗಳು ಪ್ರೀತಿ-ವಿಶ್ವಾಸಗಳನ್ನು ವ್ಯಕ್ತಪಡಿಸುವುದೇ ಇದಕ್ಕೆ ಸಾಕ್ಷಿ. ತಮ್ಮ ವಿನಯ, ಮೃದುಸ್ವಭಾವ ಹಾಗೂ ಸ್ನೇಹಪರತೆಗಳಿಂದ ಶ್ರೀ ಪ್ರಸಾದ್ ಅವರು ಜನರ ಆದರಣೆಗೂ ಪಾತ್ರರಾದಂಥವರು.

ಶ್ರೀ ಜಿ.ಹೆಚ್.ಪ್ರಸಾದ್ ಅವರು ಅರವತ್ತು ಸಂವತ್ಸರಗಳನ್ನು ಪೂರೈಸಿದ ಸಂದರ್ಭದಲ್ಲಿ, ಅವರ ಬಂಧು-ಬಾಂಧವರು, ಸ್ನೇಹಿತರು-ಅಭಿಮಾನಿಗಳು ಮೊದಲಾದವರು ಅವರನ್ನು ಸನ್ಮಾನಿಸುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲು ಪ್ರಯತ್ನ ನಡೆಸಿದರು. ಆದರೆ ಈ

ಸಂದರ್ಭವು ಅರ್ಥಪೂರ್ಣವಾಗಿರಬೇಕೆಂಬ ಉದ್ದೇಶದಿಂದ ಒಂದು ಅಭಿನಂದನ ಸಂಪುಟವನ್ನು ಅರ್ಪಿಸಬೇಕೆನ್ನುವ ಯೋಜನೆಯನ್ನು ರೂಪಿಸಲಾಯಿತು. ಶ್ರೀ ಪ್ರಸಾದ್ ಅವರ ಪ್ರೀತಿಯ ಮಾವಂದಿರಾದ ಸ್ವಾತಂತ್ರ್ಯ ಸೇನಾನಿ ಹಾಗೂ ಸಮಾಜವಾದಿ ಧುರೀಣ ದಿವಂಗತ ಸಿ.ಮಲೆಸಿದ್ದಪ್ಪ ಅವರ ನೆನಪಿಗಾಗಿ ಹೊರತರಲಾದ 'ಘಟ್ಟಿಹೊಸಹಳ್ಳಿ ಗಟ್ಟಿಗ' ದಂಥಾ ಉತ್ಕೃಷ್ಟ ಗುಣಮಟ್ಟದ ಗ್ರಂಥವನ್ನು ಇವರಿಗೂ ಉಡುಗೊರೆ ನೀಡಲು ನಿರ್ಧರಿಸಲಾಯಿತು. ಈ ಕಾರಣಕ್ಕೆ ಶ್ರೀ ಜಿ.ಹೆಚ್.ಪ್ರಸಾದ್ ಅಭಿನಂದನ ಸಂಪುಟ ಪ್ರಕಟಣ ಸಮಿತಿ ರಚನೆಗೊಂಡಿತು. ಶ್ರೀ ಪ್ರಸಾದ್ ಅವರಿಗೆ ಪ್ರಿಯವಾದ ನ್ಯಾಯಾಂಗ, ಇತಿಹಾಸ, ಸಂಸ್ಕೃತಿ, ಸಮುದಾಯ, ಜನಪರ ಸಂಘಟನೆ-ಹೋರಾಟ ಇತ್ಯಾದಿ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಒಂದು ಪ್ರಾತಿನಿಧಿಕ ಬರಹಗಳ ಸಂಪುಟವನ್ನು ಹೊರತರಲು ಆಲೋಚಿಸಲಾಯಿತು.

ನಮ್ಮ ಕೋರಿಕೆಯ ಮೇರೆಗೆ ದಾವಣಗೆರೆಯ ಶ್ರೀ ಕೆ.ಮಲ್ಲಪ್ಪ ಅವರು ಅಭಿನಂದನ ಸಂಪುಟ ಪ್ರಕಟಣ ಸಮಿತಿಯ ಅಧ್ಯಕ್ಷರಾಗಿರಲು ಒಪ್ಪಿ ಉಪಕರಿಸಿದರು. ಹಿರಿಯ ರಾಜಕಾರಣಿ, ಸಾಮಾಜಿಕ ಕಾರ್ಯಕರ್ತ ಹಾಗೂ ಜನಾನುರಾಗಿ ಧುರೀಣರಾಗಿರುವ ಶ್ರೀ ಕೆ.ಮಲ್ಲಪ್ಪ ಅವರು ಶ್ರೀ ಪ್ರಸಾದ್ ಅವರ ಕುಟುಂಬಕ್ಕೆ ತೀರಾ ಹತ್ತಿರದವರು; ಶ್ರೀ ಪ್ರಸಾದ್ ಅವರನ್ನು ಬಾಲ್ಯದಿಂದಲೂ ಬಲ್ಲವರು; ಅವರ ಶ್ರೇಯೋಭಿವೃದ್ಧಿಯನ್ನು ಕಂಡು ಸಂತೋಷ ಪಡುವವರು. ಶ್ರೀ ಕೆ.ಮಲ್ಲಪ್ಪ ಅವರ ಬೆಂಬಲ ದೊರೆತಿದ್ದರಿಂದ ಅಭಿನಂದನ ಸಮಿತಿಗೆ ಆನೆಬಲ ಬಂದಂತಾಯಿತು. ಹಾಗೆಯೇ, ಘಟ್ಟಿಹೊಸಹಳ್ಳಿಯ ಸಿ.ಮಲೆಸಿದ್ದಪ್ಪ ಅವರ ದ್ವಿತೀಯ ಪುತ್ರರೂ ಯುವ ರಾಜಕಾರಣಿಗಳೂ ಉತ್ಸಾಹಿ ಕಾರ್ಯಕರ್ತರೂ ಆದ ಶ್ರೀ ಸಿ.ಎಂ.ಅಶೋಕ್ ಅವರು ಸಮಿತಿಯ ಉಪಾಧ್ಯಕ್ಷರಾದುದರಿಂದ ನಮ್ಮ ಉತ್ಸಾಹವು ಇಮ್ಮಡಿಸಿತು.

ಕಳೆದ ಮೂರೂವರೆ ದಶಕಗಳಿಂದ ಶ್ರೀ ಜಿ.ಹೆಚ್.ಪ್ರಸಾದ್ ಅವರೊಡನೆ ಆತ್ಮೀಯ ಸಂಬಂಧ ಹೊಂದಿರುವ ಪ್ರಸಿದ್ಧ ಇತಿಹಾಸಕಾರ ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ಈ ಅಭಿನಂದನ ಸಂಪುಟವನ್ನು ರೂಪಿಸುವ ಹೊಣೆಹೊತ್ತು ನಮ್ಮ ಎಲ್ಲ ಕೆಲಸಗಳನ್ನೂ ಹಗುರಗೊಳಿಸಿದ್ದಾರೆ. ಶ್ರೀ ಪ್ರಸಾದ್ ಅವರಿಗೆ ಪ್ರಿಯವಾದ ಕ್ಷೇತ್ರಗಳನ್ನು ಸೂಕ್ಷ್ಮವಾಗಿ ಬಲ್ಲ ಪ್ರೊ.ತೆಲಗಾವಿ, ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತದ ಯೋಜನೆಯನ್ನು ಈ ಅಭಿನಂದನ ಸಂಪುಟದ ಮೂಲಕ ಕಾರ್ಯಗತಗೊಳಿಸಲು ಕಾರ್ಯೋನ್ಮುಖರಾದುದು ಅತ್ಯಂತ ಸೂಕ್ತವಾದುದು. ಪಾಳೆಯಗಾರರೆಂದರೆ ಜನಪೀಡಕರು, ಜಗಳಗಂಟಿಗರು, ರಕ್ತ ಪಿಪಾಸುಗಳೆಂಬ ನಮ್ಮ ಹಿಂದಿನ ಕೆಲವು ಇತಿಹಾಸಕಾರರ ಸವಕಲು ಪರಿಕಲ್ಪನೆಯನ್ನು ಹಾಗೂ ವಿಚಾರಗಳನ್ನು ಸಕಾರಣಗಳೊಡನೆ ತಳ್ಳಿಹಾಕುವುದರೊಡನೆ, ಕರ್ನಾಟಕ ಜನಜೀವನ-ಸಂಸ್ಕೃತಿ-ರಾಜಕೀಯಕ್ಷೇತ್ರಗಳಿಗೆ ನಾಯಕ ಪಾಳೆಯಗಾರರು ಸಲ್ಲಿಸಿದ ಅಮೂಲ್ಯ ಮತ್ತು ಪ್ರಾಮಾಣಿಕ ಸೇವೆಯನ್ನು ಅಧಿಕೃತವಾಗಿ ನಿರೂಪಿಸಲು ಅವರು ಈ ಸಂಪುಟದ ಮೂಲಕ

ಪ್ರಯತ್ನಿಸಿದ್ದಾರೆ. ಕರ್ನಾಟಕದ ಹಲವಾರು ನುರಿತ ಹಾಗೂ ಪ್ರಸಿದ್ಧ ಇತಿಹಾಸಕಾರರು ತಮ್ಮ ಅತ್ಯುತ್ತಮ ಹಾಗೂ ಅಧ್ಯಯನಪೂರ್ಣ ಪ್ರಬಂಧಗಳನ್ನು ಕಳುಹಿಸಿಕೊಟ್ಟು ಅವರನ್ನು ಬೆಂಬಲಿಸಿದ್ದಾರೆ. ಶ್ರೀ ಪ್ರಸಾದ್ ಅವರ ದೃಷ್ಟಿ-ಧೋರಣೆ-ಬದುಕುಗಳಿಗೆ ಹತ್ತಿರ ವೆನಿಸುವ ವಿಚಾರಗಳೇ ಈ ಅಭಿನಂದನ ಸಂಪುಟದಲ್ಲಿ ಸಂಗ್ರಹಗೊಂಡಿವೆಯೆಂಬುದರಲ್ಲಿ ಸಂಶಯವಿಲ್ಲ.

ನಮಗೆ ತಿಳಿದಮಟ್ಟಿಗೆ, ಕರ್ನಾಟಕದ ವಿವಿಧ ರಾಜಮನೆತನಗಳ ನ್ಯಾಯಾಡಳಿತ ಕುರಿತು, ಕೆಲವು ಅಧ್ಯಯನ ಕೃತಿಗಳಲ್ಲಿ ಸಂಕ್ಷಿಪ್ತರೂಪದ ಮಾಹಿತಿ ದೊರೆಯುತ್ತದೆ. ಈ ಕ್ಷೇತ್ರಕ್ಕೆ ಸಂಬಂಧಿಸಿದ ಬೆರಳೆಣಿಕೆಯಷ್ಟು ಬಿಡಿಬರಹಗಳೂ ಒಂದೆರಡು ಸಂಕಲನಗಳಲ್ಲಿ ಸಂಗ್ರಹಗೊಂಡಿವೆ. ಆದರೆ 'ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ' ಶೀರ್ಷಿಕೆಯಲ್ಲಿ ಪ್ರತ್ಯೇಕ ಸಂಪುಟ ರೂಪುಗೊಂಡು ಹೊರಬರುತ್ತಿರುವುದು ಇದೇ ಮೊದಲು. ಇದು ಸಮಗ್ರವಲ್ಲದಿದ್ದರೂ ಕರ್ನಾಟಕ ಇತಿಹಾಸದಲ್ಲಿ ಒಂದು ಪ್ರತ್ಯೇಕ ಶಾಖೆಯು ಆರಂಭ ಗೊಳ್ಳಲು ಕಾರಣೀಭೂತವಾಗಿದೆಯೆಂದು ಭಾವಿಸಲಡ್ಡಿಯಿಲ್ಲ. ಇನ್ನುಮುಂದೆ ನಮ್ಮ ಸಂಶೋಧಕರು ಹೊಸಮಾಹಿತಿಯೊಡನೆ ಪಾಳೆಯಗಾರರ ನ್ಯಾಯನಿರ್ಣಯ ಪದ್ಧತಿಗೆ ಸಂಬಂಧಿಸಿದಂತೆ ಬರಹ/ಕೃತಿಗಳನ್ನೂ ಪ್ರಕಟಿಸುವುದರತ್ತ ಗಮನಹರಿಸುತ್ತಾರೆಂದು ನಿರೀಕ್ಷಿಸಬಹುದು.

ಇಲ್ಲಿ ಪ್ರಸ್ತಾಪಿಸಬೇಕಾದ ಇನ್ನೊಂದು ವಿಷಯವೆಂದರೆ, ಮೊದಲಿನಿಂದಲೂ ಶ್ರೀ ಜಿ.ಹೆಚ್.ಪ್ರಸಾದ್ ಅವರು ವಾಲ್ಮೀಕಿ ಸಾಹಿತ್ಯ ಸಂಪದದೊಡನೆ ನಿಕಟ ಬಾಂಧವ್ಯ ಇರಿಸಿಕೊಂಡು ಬಂದವರು. ೧೯೭೩ ಮಾರ್ಚ್ ತಿಂಗಳಲ್ಲಿ ದಾವಣಗೆರೆಯಲ್ಲಿ ಏರ್ಪಾಟಾಗಿದ್ದ ಅಖಿಲ ಕರ್ನಾಟಕ ನಾಯಕ ಜನಾಂಗದ ದ್ವಿತೀಯ ಮಹಾಸಮ್ಮೇಳನದ ಸ್ಮರಣಸಂಚಿಕೆ 'ವಾಲ್ಮೀಕಿ'ಯನ್ನು ಸಂಪಾದಿಸಲು ಸಂಪದದ ಸ್ಥಾಪಕರಾದ ದಿವಂಗತ ಹೆಚ್.ವಿ. ವೀರನಾಯಕ 'ಹರತಿ' ಅವರಿಗೆ ಅವಕಾಶ ಕಲ್ಪಿಸಿಕೊಟ್ಟವರೆಂದರೆ, ಆ ಸ್ಮರಣಸಂಚಿಕೆ ಸಂಪಾದಕ ಮಂಡಲಿಯ ಅಧ್ಯಕ್ಷರಾಗಿದ್ದ ಶ್ರೀ ಪ್ರಸಾದ್. ಈ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದ ಶ್ರೀ ಸಿ.ಮಲೆಸಿದ್ದಪ್ಪ ಅವರೂ ಈ ನಿಟ್ಟಿನಲ್ಲಿ ಮುಖ್ಯಪಾತ್ರ ವಹಿಸಿದುದು ಗಮನಾರ್ಹ. ಆ ನಂತರವೂ ಸಂಪದದ ವತಿಯಿಂದ ಹರ್ತಿಕೋಟೆ ಮತ್ತು ಚಿತ್ರದುರ್ಗಗಳಲ್ಲಿ ಜರುಗಿದ ವಾಲ್ಮೀಕಿ ಜಯಂತಿ, ನಾಯಕ ಸಮುದಾಯದ ಬರಹಗಾರರ ಸಮಾವೇಶ, ವಿಚಾರಸಂಕಿರಣ, ಪುಸ್ತಕ ಬಿಡುಗಡೆ- ಹೀಗೆ ಸಾಲುಸಾಲಾಗಿ ನಡೆದ ಕಾರ್ಯ ಕ್ರಮಗಳಲ್ಲಿ ಸತತವಾಗಿ ಭಾಗವಹಿಸುತ್ತಾ ನಮ್ಮೊಡನೆ ಸಹಕರಿಸುತ್ತಲೇ ಬಂದಿದ್ದಾರೆ ಶ್ರೀ ಪ್ರಸಾದ್. ದಿವಂಗತ ಸಿ.ಮಲೆಸಿದ್ದಪ್ಪ ಅವರ ಸ್ಮರಣ ಸಂಪುಟ 'ಘಟ್ಟಿಹೊಸಹಳ್ಳಿ ಗಟ್ಟಿಗ'ವು ವಾಲ್ಮೀಕಿ ಸಾಹಿತ್ಯ ಸಂಪದದಿಂದ ಪ್ರಕಟಗೊಳ್ಳಲು ಕಾರಣಕರ್ತರು ಇವರೇ. ಈ ಸಂಪುಟದ ಸಂಚಾಲಕರಾಗಿ ಏಕನಿಷ್ಠೆಯಿಂದ ಕಾರ್ಯನಿರ್ವಹಿಸಿ ಯಶಸ್ವಿಯಾದ ಶ್ರೀ ಪ್ರಸಾದ್ ಅವರ ಕಾರ್ಯಶ್ರದ್ಧೆ ಅಭಿನಂದನೀಯ.

ಶ್ರೀ ಜಿ.ಹೆಚ್.ಪ್ರಸಾದ್ ಅವರಿಗೆ ಅರ್ಪಿಸಲಾದ ಪ್ರಸ್ತುತ 'ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ' ಅಭಿನಂದನ ಸಂಪುಟವನ್ನು ವಾಲ್ಮೀಕಿ ಸಾಹಿತ್ಯ ಸಂಪದದಿಂದಲೇ ಪ್ರಕಟಿಸುವ ಸುಸಂದರ್ಭ ಒದಗಿದುದು ಹರ್ಷ ತರುವ ಸಂಗತಿ. ಇದಕ್ಕೆ ಅವಕಾಶ ನೀಡಿದವರು ಅಭಿನಂದನ ಸಂಪುಟ ಪ್ರಕಟಣ ಸಮಿತಿಯ ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಎಲ್ಲ ಸದಸ್ಯರು. ಇವರೆಲ್ಲರಿಗೆ ತುಂಬು ಹೃದಯದ ಕೃತಜ್ಞತೆಗಳು.

ಕೊನೆಯದಾಗಿ, ಈ ಅಭಿನಂದನ ಸಂಪುಟವನ್ನು ತಮ್ಮ ಎಂದಿನ ಶಿಸ್ತು-ಶ್ರಮ-ತಾಳ್ಮೆ-ಪ್ರೀತಿಗಳಿಂದ ಸಂಪಾದಿಸಿಕೊಟ್ಟವರು ಗೆಳೆಯ ಪ್ರೊ.ಲಕ್ಷ್ಮಣ್ ತೆಲಗಾವಿ. ಇವರೊಂದಿಗೆ ಕೈಜೋಡಿಸಿ ದುಡಿದವರು ಇನ್ನೋರ್ವ ಗೆಳೆಯ ಶ್ರೀ ಕೆ.ಎಲ್.ರಾಜಶೇಖರ್. ಈ ಸಂಪುಟದ ಅಕ್ಷರ ಸಂಯೋಜನೆಯ ಕಾರ್ಯವನ್ನು ನಿರ್ವಹಿಸಿದವರು ಶ್ರೀ ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್‌ನ ಶ್ರೀಮತಿ ರಶ್ಮಿ ಕೃಪಾಶಂಕರ್. ಅರ್ಥಪೂರ್ಣ ಮುಖಪುಟ ಕಲೆಯನ್ನು ರೂಪಿಸಿಕೊಟ್ಟವರು ಕಲಾವಿದ ಶ್ರೀ ಕೆ.ಕೆ.ಮಕಾಳಿ; ಹಾಗೂ ಉತ್ತಮವಾಗಿ ಮುದ್ರಿಸಿಕೊಟ್ಟವರು ಬೆಂಗಳೂರಿನ ವಿಶ್ವಾಸ್ ಪ್ರಿಂಟ್ಸ್‌ನ ಶ್ರೀ ಟಿ.ಎಲ್.ವೆಂಕಟೇಶ್. ಇವರೆಲ್ಲರ ಶ್ರಮಪೂರ್ಣ ದುಡಿಮೆಯಿಂದಾಗಿ ಈ ಅಭಿನಂದನ ಸಂಪುಟವು ಸರ್ವಾಂಗ ಸುಂದರವಾಗಿ ಸಿದ್ಧಗೊಂಡು ಹೊರಬರಲು ಸಾಧ್ಯವಾಗಿದೆ.

ಈ ಎಲ್ಲರನ್ನೂ ಶ್ರೀ ಜಿ.ಹೆಚ್.ಪ್ರಸಾದ್ ಅಭಿನಂದನ ಸಂಪುಟ ಪ್ರಕಟಣ ಸಮಿತಿ ಹಾಗೂ ವಾಲ್ಮೀಕಿ ಸಾಹಿತ್ಯ ಸಂಪದಗಳ ಪರವಾಗಿ ಹಾರ್ದಿಕವಾಗಿ ವಂದಿಸುತ್ತೇವೆ.



# ಸಂಪಾದಕರ ಮಾತು

## ಪ್ರೊ. ಲಕ್ಷ್ಮಣ್ ತೆಲಗಾವಿ

'ನ್ಯಾಯವೇ ದೇವರು' ಎಂಬ ಸನಾತನ ಮೌಲ್ಯವನ್ನು ಸಾರುತ್ತಾ ಬಂದ ಭಾರತದಲ್ಲಿ, 'ಸತ್ಯ'ವನ್ನು ನ್ಯಾಯಕ್ಕೆ ಸಂವಾದಿಯಾಗಿ ಎತ್ತಿ ತೋರಲಾಗುತ್ತದೆ. ಸತ್ಯ-ನ್ಯಾಯ-ದೇವರು ಈ ಮೂರೂ ಪರಿಕಲ್ಪನೆಗಳು ನಮ್ಮ ವಾಙ್ಮಯದಲ್ಲಿ ಶಾಶ್ವತ ಸ್ಥಾನ ಹೊಂದಿರುವಂತೆಯೇ ಇವುಗಳ ಹಿಂದಿನ ಆಶಯಗಳೂ ಪವಿತ್ರವೆನಿಸಿವೆ. ಇವುಗಳಲ್ಲಿ ಅಪಾರ ಶ್ರದ್ಧೆಯಿರಿಸಿಕೊಂಡು ತಮ್ಮ ನಿತ್ಯದ ಬದುಕನ್ನು ಕ್ರಮಗೊಳಿಸಿಕೊಳ್ಳುವಲ್ಲಿ ಪ್ರಜ್ಞಾಪೂರ್ವಕ ಕಾರ್ಯಪ್ರವೃತ್ತರಾಗಿರುವಂಥವರು ನಮ್ಮ ಜನ. ಆದರೆ 'ಸತ್ಯ'ವು ಸಾಪೇಕ್ಷವೆಂದಾದರೆ, 'ನ್ಯಾಯ'ವೂ ಅದೇ ಅಲ್ಲವೆ? ನ್ಯಾಯವೆಂಬುದು ಮರೀಚಿಕೆಯೆನಿಸಿ, ಕೇವಲ ಭ್ರಮನಿರಸನ ಹೊಂದಿ ಬದುಕಿ ಅಳಿದುಹೋದ ಸಮುದಾಯಗಳು ಚರಿತ್ರೆಯ ಪುಟಗಳಲ್ಲಿ ಕಂಡುಬರುತ್ತವೆ. ನ್ಯಾಯದ ಹಲವು ಪರಿವೇಷಗಳು ಕಂಡುಬರುವುದೂ ಇಲ್ಲಿಯೇ. ಸಾಂದರ್ಭಿಕವಾಗಿ, ಇತರರ ಇಚ್ಛೆಗನುಗುಣವಾಗಿ ತನ್ನ ನಿಷ್ಠೆಯನ್ನು ಬದಲಿಸುವಂಥಾ ನ್ಯಾಯದ ಸ್ವರೂಪವನ್ನು ಸರಿಯಾಗಿ ನಿರ್ವಚಿಸಿದವರಿಲ್ಲ; ತಾಂತ್ರಿಕವಾಗಿ ನ್ಯಾಯದ ಸ್ವರೂಪವನ್ನು ವಿವರಿಸಿದರೂ ತಾತ್ವಿಕವಾಗಿ ಅದರ ನಿಜಚಹರೆಯನ್ನು ಗುರುತಿಸಿದವರಿಲ್ಲ.

ಮಾನವನೆಂದರೆ ಸದಾ ತಪ್ಪಿತಸ್ಥ/ಪಾಪಿ! ದೈಹಿಕ, ಮಾನಸಿಕ, ಬೌದ್ಧಿಕ ಇತ್ಯಾದಿ ಕ್ರಿಯೆಗಳಲ್ಲಿ ಅವನು ಎಸಗದಿರುವ ತಪ್ಪು/ಅಪರಾಧಗಳೇ ಇಲ್ಲ. ಕ್ಷಣಕ್ಷಣಕ್ಕೂ ಇವುಗಳಿಗೆ ಅವನು ಬಾಧ್ಯಸ್ಥನೆನಿಸುತ್ತಿರುತ್ತಾನೆ; ಅಥವಾ ಯೇಸುಕ್ರಿಸ್ತ ಹೇಳಿದಂತೆ, 'ಪಾಪ ಮಾಡುವವರೆಲ್ಲರೂ ಪಾಪಕ್ಕೆ ದಾಸರಾಗಿದ್ದಾರೆ'. ನಮ್ಮ ಧರ್ಮಗ್ರಂಥಗಳು ಇದನ್ನು ಮೇಲಿಂದ ಮೇಲೆ ಮನುಷ್ಯರಿಗೆ ಮನದಟ್ಟು ಮಾಡಿಕೊಡಲೆತ್ನಿಸುತ್ತವೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಪಾಪಿಗಳನ್ನು, ಅಪರಾಧಿಗಳನ್ನು, ನೀತಿ-ನಿಯಮಗಳನ್ನು ಮೀರುವವರನ್ನು ನೇರವಾಗಿಯೇ ಕಂಡರೂ ಕಾಣದಂತೆಯೇ ಇರಬೇಕಾಗುತ್ತದೆ. ಏಕೆಂದರೆ ನಾವು ಸಹಾ ಅದರ ಭಾಗವಾಗಿಯೇ ಇರುವಂಥವರು! ಯಾವುದು ತಪ್ಪೊ, ಅಪರಾಧವೊ ಅದನ್ನು ಸೂಕ್ತವಾಗಿ ನಿರ್ಣಯಿಸುವ ನೈತಿಕ ಹೊಣೆಗಾರಿಕೆಯನ್ನೂ ನಾವು ಬಹುಮಟ್ಟಿಗೆ ಬಹುಸಂದರ್ಭಗಳಲ್ಲಿ ನಿರ್ವಹಿಸಲಾರೆವು. ಇದೊಂದು ಸಾಮಾನ್ಯ ಪ್ರಕ್ರಿಯೆಯೆಂಬಂತೆ ಉಪೇಕ್ಷಿಸುವುದು ಸಹಜ. ಅಲ್ಲದೆ, ತಪ್ಪು-ಒಪ್ಪುಗಳನ್ನು ತಾರ್ಕಿಕವಾಗಿ ವಿವೇಚಿಸುವ

ಹಾಗೂ ಅಗತ್ಯ ಮಾನದಂಡಗಳಿಗನುಸಾರ ನಿರ್ಧರಿಸುವ ಅವಕಾಶದಿಂದಲೂ ನಾವು ಬಹುಮಟ್ಟಿಗೆ ವಂಚಿತರು. ಸತ್ಯವೇ ನಿರ್ದಿಷ್ಟವಾದುದಲ್ಲವೆಂದಾಗ ಅದನ್ನು ಆಧರಿಸಿರುವ ನ್ಯಾಯವಾದರೂ ಹೇಗೆ ನಿರ್ದಿಷ್ಟವೆನಿಸೀತು? ದೊರೆಯುವ ನ್ಯಾಯವಾದರೂ ಎಂಥಾದ್ದಿರಬಹುದು? ಇವೆಲ್ಲ ಏನೇ ಇರಲಿ; ತಪ್ಪು ಅಥವಾ ಪಾಪದ ಸ್ವರೂಪವಾಗಲಿ, ಅದಕ್ಕೆ ದೊರೆಯುವ ನ್ಯಾಯನಿರ್ಣಯ ಅಥವಾ ಶಿಕ್ಷೆಯ ಸ್ವರೂಪವಾಗಲಿ ಅಂತಿಮವಾಗಿ ನಿರ್ಧರಿಸಲಾಗದ್ದೆಂದರೆ ಅಸಂಗತವೆನಿಸುವುದಿಲ್ಲ.

ವ್ಯಭಿಚಾರ ಮಾಡಿ ಸಿಕ್ಕಿಬಿದ್ದ ಹೆಂಗಸೊಬ್ಬಳನ್ನು ಯೇಸುಕ್ರಿಸ್ತನ ಬಳಿಗೆ ಕರೆತಂದ ಕೆಲವರು, "ಈಕೆ ಮಾಡಿದ ತಪ್ಪಿಗೆ ಧರ್ಮಶಾಸ್ತ್ರದಲ್ಲಿ ಕಲ್ಲೆಸೆದು ಕೊಲ್ಲಬೇಕೆಂದು ಹೇಳಿದೆ, ನೀನು ಏನು ಹೇಳುತ್ತಿ?" ಎಂದು ಕೇಳುತ್ತಾರೆ. "ನಿಮ್ಮಲ್ಲಿ ಪಾಪವಿಲ್ಲದವನು ಯಾರೋ ಅವನೇ ಮೊದಲು ಆಕೆಯ ಮೇಲೆ ಕಲ್ಲನ್ನು ಹಾಕಲಿ" ಎನ್ನುತ್ತಾನೆ ಯೇಸು. ಈ ಮಾತನ್ನು ಕೇಳಿ ದಿಗಿಲುಗೊಂಡ ಎಲ್ಲರೂ ತಾವೇ ಪಾಪಿಗಳೆಂದು ಬಗೆದು ಅಲ್ಲಿಂದ ಮೆಲ್ಲನೆ ಕಾಲ್ತೆಗೆಯುತ್ತಾರೆ. ಮಾನವಮಾತ್ರರಾದವರೆಲ್ಲರ ಪರಿಸ್ಥಿತಿ ಇದು! ಪಾಪ-ಶಿಕ್ಷೆಗಳ ತಾತ್ವಿಕತೆಯನ್ನು ಪ್ರಶ್ನಿಸುವುದೆಂದರೆ, ನಮ್ಮ ನೈತಿಕತೆ- ಪರಿಶುದ್ಧತೆಗಳನ್ನು ಒರೆಗೆ ಹಚ್ಚಿದಂತೆ. ಸುಭಾಷಿತವೊಂದು, 'ನಿಜವಾದುದನ್ನು ಹೇಳುವ ಮಾತು ಸತ್ಯವಲ್ಲ; ನಿಜವಲ್ಲದುದನ್ನು ಹೇಳುವ ಮಾತು ಸುಳ್ಳಲ್ಲ. ಪ್ರಾಣಿಗಳಿಗೆ ಯಾವುದು ಅತ್ಯಂತ ಹಿತವಾದುದೋ ಅದು ಸತ್ಯ; ಹಾಗಲ್ಲದುದು ಸುಳ್ಳು' ಎನ್ನುತ್ತದೆ. ಸತ್ಯದ ತಾತ್ವಿಕತೆಯನ್ನು ಇದು ನೇರವಾಗಿ ಪ್ರಶ್ನಿಸುತ್ತದೆ; ಇನ್ನೊಬ್ಬರನ್ನು ರಕ್ಷಿಸಲಾರದ ಸತ್ಯವನ್ನು ನಿರಾಕರಿಸುತ್ತದೆ. ಹಾಗೆಯೇ, 'ಸತ್ಯವನ್ನೇ ಹೇಳಬೇಕು. ಪ್ರಿಯವಾದ ಮಾತನ್ನೇ ಹೇಳಬೇಕು. ಆದರೆ ಪ್ರಿಯವಲ್ಲದ ಸತ್ಯವನ್ನಾಗಲಿ, ಪ್ರಿಯವಾದ ಸುಳ್ಳನ್ನಾಗಲಿ ಹೇಳಬಾರದು. ಇದು ಬಹಳಕಾಲದಿಂದ ಬಂದ ಸಂಪ್ರದಾಯ' ಎನ್ನುತ್ತಾನೆ ಮನು. ಒಟ್ಟಿನಲ್ಲಿ, ನ್ಯಾಯನಿರ್ಣಯದಲ್ಲಿ ಇಂಥಾ ವಿಶ್ಲೇಷಣೆಗಳು ಹೇಗೆ ಪ್ರವರ್ತಿಸುತ್ತವೆಯೊ ಹೇಳಬರುವುದಿಲ್ಲ. 'ಸತ್ಯ-ಧರ್ಮ-ದೈವಾಧಾರಿತ' ನ್ಯಾಯನ್ಯಾಯಗಳ ಚಿಂತನೆ-ಮರುಚಿಂತನೆಗಳು ಯುಗಗಳಿಂದಲೂ ನಡೆಯುತ್ತಲೇ ಇದ್ದು, ಇದು ಎಂದೆಂದಿಗೂ ಜಿಜ್ಞಾಸೆಗೊಳಪಟ್ಟ ಸಂಗತಿಯೆನ್ನಬಹುದು.

ಇನ್ನು ಚರಿತ್ರೆಯಲ್ಲಿ ಸತ್ಯವೆಂಬುದನ್ನು ಶೋಧಿಸತೊಡಗಿದರೆ ನಮಗೆ ದೊರಕುವ ಚಿತ್ರಣವೇ ಬೇರೆ. 'ಚಾರಿತ್ರಿಕ ಸತ್ಯ'ವೆಂಬುದು ಚರ್ಚಾಸ್ಪದ ಸಂಗತಿಯಾಗಿಯೇ ಮುಂದುವರೆದು ಬಂದುದರಲ್ಲಿ ಆಶ್ಚರ್ಯವೇನೂ ಇಲ್ಲ. ಹಾಗೆಯೇ, ನ್ಯಾಯನಿರ್ಣಯ ಕುರಿತ ಚರ್ಚೆ ಸಹಾ. 'ದಾಖಲೆಗಳ ಸತ್ಯ'ವನ್ನು ಮೈಗೂಡಿಸಿಕೊಂಡು 'ವಸ್ತುನಿಷ್ಠ'ವಾಗಿ ಮಾರ್ಪಡುವ ಚರಿತ್ರೆ ಪ್ರತಿಪಾದಿಸುವ ಸತ್ಯ ಹಾಗೂ ನ್ಯಾಯಗಳು ಕೆಲವೊಮ್ಮೆ ವಸ್ತುಸ್ಥಿತಿಯಿಂದ ದೂರವೇ ಉಳಿದಿರುವಂತೆ ತೋರುತ್ತವೆ. 'ಪರಿಶೋಧಿತ ಸತ್ಯ'ವೂ ಚರಿತ್ರೆಯನ್ನು 'ವಾಸ್ತವ'ವೆಂದು ಬಿಂಬಿಸುವಲ್ಲಿ ಯಶಸ್ವಿಯಾಗದಿರಬಹುದು. ಚಾರಿತ್ರಿಕ ಘಟನೆಗಳ ಹಿಂದಿನ 'ಕಾರಣೀಭೂತ' ಅಂಶವು ಆಕಸ್ಮಿಕವೊ ಸಾಂದರ್ಭಿಕವೊ

ಉದ್ದೇಶರಹಿತವೂ ಇದ್ದಿರಬಹುದು. ಚರಿತ್ರಕಾಲದ ಬದುಕನ್ನು, ಎಲ್ಲ ಆಗುಹೋಗುಗಳನ್ನು ಸಕಾರಣವಾಗಿಯೇ ಗುರುತಿಸುವುದು ಕಷ್ಟಸಾಧ್ಯ. ಆದ್ದರಿಂದಲೇ ಹಿಂದಿನ ಎಲ್ಲ ಘಟನೆ, ಕಾರಣ, ಫಲಿತಾಂಶ, ಪರಿಣಾಮ, ವ್ಯಕ್ತಿತ್ವ ಮೊದಲಾದವನ್ನು ಪುನರ್‌ವಿಮರ್ಶಿಸುತ್ತಲೇ ಇರಬೇಕಾಗುತ್ತದೆ. ನ್ಯಾಯವಿಧಾನವೂ ಇದರ ವ್ಯಾಪ್ತಿಗೊಳಪಡುತ್ತದೆ.

ನ್ಯಾಯಾಡಳಿತದ ಮಟ್ಟಿಗೆ, ನಮ್ಮ ದೇಶದಲ್ಲಿ, ಪ್ರಾಚೀನವಾದ ಎಲ್ಲ ನ್ಯಾಯ ಸಂಹಿತೆಗಳೂ ಬಳಕೆಯಲ್ಲಿದ್ದುದು ಸ್ಪಷ್ಟ. ಆದರೆ ಇದು ಆಚರಣೆಯಲ್ಲಿದ್ದುದು ಆಡಳಿತದ ಮೇಲುಹಂತದಲ್ಲಿ ಮಾತ್ರ. ಸ್ಥಳೀಯವಾಗಿ ತಮ್ಮದೇ ನ್ಯಾಯವಿಚಾರಣ ವಿಧಾನಗಳನ್ನು ಅಳವಡಿಸಿಕೊಂಡು ಅನುಸರಿಸುತ್ತಿದ್ದ ಅಸಂಖ್ಯಾತ ಸಮುದಾಯಗಳಿದ್ದವು. ನ್ಯಾಯಪಂಚಾಯಿತಿಗಳು, ಜಾತಿಕಟ್ಟೆಮನೆಗಳು, ದೈವದನೆಲೆಗಳು ಮುಂತಾದವುಗಳಿಂದ ಇವು ಆವರಿಸಲ್ಪಟ್ಟಿದ್ದವು. ನ್ಯಾಯನಿರ್ಣಯವು ಅಪರಾಧದ ಸ್ವರೂಪವನ್ನಾಧರಿಸಿದ್ದಿತು. ಹಲವಾರು ಶಿಕ್ಷಾವಿಧಾನಗಳೂ ಜಾರಿಯಲ್ಲಿದ್ದವು. ಇವೆಲ್ಲವೂ ಕ್ರಮವಾಗಿ ನೆರವೇರಿಸಲ್ಪಡುತ್ತಿದ್ದವು. ವಿಧಿ-ವಿಧಾನ, ನೀತಿ-ನಿಬಂಧನೆ, ಪಾಪ-ಪುಣ್ಯ, ನ್ಯಾಯ-ಧರ್ಮ ಇತ್ಯಾದಿ ಮೌಲ್ಯಗಳಿಗನುಸಾರ ಆಯಾ ವ್ಯಾಜ್ಯ-ವಿವಾದಗಳು ಇತ್ಯರ್ಥಗೊಳ್ಳುತ್ತಿದ್ದವು. ಆದರೆ ಸಮರ್ಥನೆಯ ನೆಲೆಯಲ್ಲಿ ಇವೆಲ್ಲವೂ ಒಳಗೊಂಡ ವಿರೋಧಾಭಾಸಗಳ ಪ್ರಮಾಣವೆಷ್ಟು? ಇದನ್ನು ತಿಳಿದುಕೊಂಡವರು ಯಾರು? ಈ ಬಗೆಗೆ ನಿರ್ದಿಷ್ಟ ಉತ್ತರ ದೊರೆಯುವುದು ಕಷ್ಟ. ಚರಿತ್ರೆಯಲ್ಲಿ ಇಂಥಾ ಅಂಶಗಳನ್ನು ಕುರಿತು ಕನಿಷ್ಠಮಟ್ಟದಲ್ಲಾದರೂ ಚರ್ಚಿಸಿರುವುದು ಕಂಡುಬರುವುದಿಲ್ಲ.

* * *

ನ್ಯಾಯತೀರ್ಮಾನದ ತಾತ್ವಿಕತೆ ಮತ್ತು ಸ್ವರೂಪಗಳನ್ನು ಕುರಿತು ಸಮಗ್ರವಾಗಿ, ಸರಳವಾಗಿ ಹಾಗೂ ಸ್ಪಷ್ಟವಾಗಿ ನಿರೂಪಿಸುವುದು ದುಸ್ತರವೆನಿಸಿದರೂ ಆ ನಿಟ್ಟಿನಲ್ಲಿ ಒಂದು ದೂರದ ನೋಟವನ್ನು ಬೀರಲಂತೂ ಸಾಧ್ಯವಿದೆ. ಭಾರತೀಯ ನ್ಯಾಯಾಂಗ / ಕಾನೂನುಕ್ಷೇತ್ರದ ನೆಲೆ-ಹಿನ್ನೆಲೆಗಳನ್ನು ಶಾಸ್ತ್ರ-ಸಂಹಿತೆ-ಸ್ಮೃತಿ-ಟೀಕೆ-ಸಿದ್ಧಾಂತ ಇತ್ಯಾದಿಗಳ ಆಧಾರದಿಂದ ಶಾಸ್ತ್ರೀಯ ದೃಷ್ಟಿಕೋನದೊಡನೆ ವಿವರಿಸುವುದು ಅನಿವಾರ್ಯ. ಉನ್ನತ ಸ್ತರದಲ್ಲಿದ್ದ ಕಾನೂನುಶಾಸ್ತ್ರ ಪರಿಣತರು ಇಂಥಾ ಸಾಹಿತ್ಯವನ್ನು ಅಧ್ಯಯನಿಸಿ ನ್ಯಾಯಾಂಗಕ್ಕೆ ಹೊಸ ಪರಿಕಲ್ಪನೆಗಳನ್ನು ಒದಗಿಸಿಕೊಡಲು ಪ್ರಯತ್ನಿಸಿದುದುಂಟು. ಇದು ಹಿಂದಿನಿಂದಲೂ ನಡೆದುಬಂದಿರುವಂಥಾದ್ದು. ಅದರಂತೆ, ಗ್ರಾಮೀಣ ಪರಿಸರದ ಸ್ಥಳೀಯ ಹಿರಿಯರು, ಕುಲಗಳ ಯಜಮಾನರು ಅಥವಾ ಕಟ್ಟೆಮನೆಯವರು, ಸಮಸ್ತರು ಮೊದಲಾದವರು ಅನೂಚಾನವಾಗಿ ಬಂದ ನಂಬಿಕೆ-ಸಂಪ್ರದಾಯ-ಆಚರಣೆಗಳನ್ನು ಅನುಸರಿಸಿ ನ್ಯಾಯನಿರ್ಣಯ ಮಾಡುತ್ತಿದ್ದುದೂ ಮಾಡುತ್ತಿರುವುದೂ ವಾಸ್ತವ. ಈ ಎರಡೂ ಸ್ತರಗಳ ಸ್ವರೂಪ ಭಿನ್ನವಾಗಿ ತೋರಿದರೂ ಉದ್ದೇಶ ಮಾತ್ರ ಒಂದೇ. ಇಲ್ಲಿಯ ಅಂತಿಮ ಶೋಧವೆಂದರೆ

ನ್ಯಾಯವೇ. ಜನಪದರ ನ್ಯಾಯದೃಷ್ಟಿಯಾಗಲೀ ಮೇಲುಹಂತದ ನ್ಯಾಯಾಸ್ಥಾನಗಳಲ್ಲಿಯ ನ್ಯಾಯಪಂಡಿತರ ದೃಷ್ಟಿಯಾಗಲೀ ಬೇರೆ ಬೇರೆಯೆನಿಸುವ ಸಂದರ್ಭಗಳೇ ಇರಲಿಲ್ಲವೆನ್ನಬಹುದು.

ಆದರೆ ನ್ಯಾಯವೂ ತಾರತಮ್ಯದಿಂದ ಕೂಡಿದ ಪ್ರಸಂಗಗಳು ಮಾತ್ರ ಇಂದಿನವರೆಗೂ ಮುಂದುವರೆದು ಬಂದಿರುವುದನ್ನು ನಿರಾಕರಿಸಲಾಗುವುದಿಲ್ಲ. ನಮ್ಮ ಸಮಾಜವು ಇನ್ನಷ್ಟು ರೋಗಗ್ರಸ್ತವಾಗಲು ಇದೂ ಒಂದು ಕಾರಣ. ಸತ್ಯ-ನ್ಯಾಯ-ದೇವರು ಎಂಬ ಪರಿಕಲ್ಪನೆಗಳೇ ನಮ್ಮ ಕೆಲವು ಸಮುದಾಯಗಳ ಪಾಲಿಗೆ ನೋವು-ಭಯ-ಶಿಕ್ಷೆಗಳಾಗಿ ತೋರುವುದೊಂದು ಕಟು ವಾಸ್ತವ. ಇದೊಂದು ನಿರಂತರವಾಗಿ ಕಾಡುವ ಪಿಡುಗು ಎನ್ನಬಹುದು. ಏನೇ ಇದ್ದರೂ ತನ್ನದೇ ಮಿತಿಯಲ್ಲಿ ಹಿಂದಿನ ನ್ಯಾಯಾಂಗ ವ್ಯವಸ್ಥೆಯೂ ಬಹು ಸಂದರ್ಭಗಳಲ್ಲಿ 'ನ್ಯಾಯಪರ'ವಾಗಿರಲು ಹೆಣಗಿದೆಯೆಂಬುದನ್ನು ಒಪ್ಪಿಕೊಳ್ಳಲಡ್ಡಿಯಿಲ್ಲ. ಬುಡಕಟ್ಟುಗಳೂ ಅಲಕ್ಷಿತ ಸಮುದಾಯಗಳೂ ತಮ್ಮದೇ ನ್ಯಾಯಪಂಚಾಯಿತಿಗಳನ್ನು ಏರ್ಪಡಿಸಿಕೊಂಡು ತಮ್ಮ ಸಾಮಾಜಿಕ ಸ್ಥಿರತೆಯನ್ನು ಕಾಯ್ದುಕೊಳ್ಳಲು ಸದಾ ಪ್ರಯತ್ನಿಸುತ್ತಿದ್ದುದನ್ನೂ ಇಲ್ಲಿ ಕಾಣಬಹುದು. ಶಾಂತಿ-ಶಿಸ್ತು-ಸುವ್ಯವಸ್ಥೆಗಳಿಗೆ ಆಧಾರವಾಗಿರುವ ನೀತಿ-ನಿಬಂಧನೆ-ಕಾನೂನುಗಳು ಮೇಲಿನಿಂದ ಕೆಳಗಿನವರೆಗೆ ಏಕರೀತಿಯಲ್ಲಿ ಪ್ರಭಾವ ಬೀರಲು ಪ್ರಯತ್ನಿಸುತ್ತಿರುವುದನ್ನೂ ಪ್ರಸ್ತಾಪಿಸಬಹುದು. ಒಟ್ಟಿನಲ್ಲಿ, ಗತ ಮತ್ತು ವರ್ತಮಾನಗಳ ನ್ಯಾಯ ಪರಿಪಾಲನೆಯ ಹಿನ್ನೆಲೆಯಲ್ಲಿ, ನ್ಯಾಯತೀರ್ಮಾನದ ತಾತ್ವಿಕತೆ ಮತ್ತು ಸ್ವರೂಪಗಳನ್ನು ವಿಶ್ಲೇಷಿಸಿರುವ ಇಲ್ಲಿಯ ಪ್ರಬಂಧಕಾರರ ಪ್ರಯತ್ನ ಸಾರ್ಥಕವಾದುದೆನ್ನಬೇಕು.

ಕರ್ನಾಟಕ ಪಾಳೆಯಗಾರರು ತಮ್ಮ ಆಡಳಿತಕ್ರಮದಲ್ಲಿ ನಿರ್ವಹಿಸಿದ ನ್ಯಾಯಾಡಳಿತದ ಸ್ವರೂಪ ಹೇಗಿದ್ದಿತೆಂಬುದಕ್ಕೆ ಈಗ ಲಭ್ಯವಿರುವ ಮಾಹಿತಿಯು ಸುಳಿವು ನೀಡುತ್ತದೆ. ಅನೂಚಾನವಾಗಿ ಬಂದ ನ್ಯಾಯವಿಧಾನವನ್ನೆ ಇವರು ಅನುಸರಿಸಬೇಕಾದ ನಿರ್ಬಂಧ ಒಂದೆಡೆಯಾದರೆ, ತಮ್ಮ ಸಾಮ್ರಾಟರು-ಬಾದಶಾಹರ ನಿಯಂತ್ರಣಕ್ಕೊಳಪಟ್ಟು ಅವರ ಮಾರ್ಗಸೂಚಿಯನ್ನು ತಪ್ಪದೆ ಅಳವಡಿಸಿಕೊಳ್ಳಬೇಕಿದ್ದ ಅನಿವಾರ್ಯತೆ ಇನ್ನೊಂದೆಡೆ. ಆಗಿನ ರಾಜಕೀಯ-ಸಾಮಾಜಿಕ ಸಂದರ್ಭಗಳು ಇದ್ದುದೇ ಹಾಗೆ. ಆದರೆ ಹಲವು ಸಂದರ್ಭಗಳಲ್ಲಿ ತಮ್ಮ 'ಪಾಳೆಯಗಾರಶಾಹಿ'ಗನುಗುಣವಾಗಿ, ಅಪರಾಧಿ / ವಿರೋಧಿ / ಶಂಕಿತರ ನೇರ ವಿಚಾರಣೆ ನಡೆಸಿ, ಆ ಸ್ಥಳದಲ್ಲಿಯೇ-ತತ್‌ಕ್ಷಣದಲ್ಲಿಯೇ ಜಾರಿಗೆ ಬರುವಂಥಾ-ತಮಗೆ ತೋಚಿದ ಶಿಕ್ಷೆಯನ್ನು ಪ್ರಕಟಿಸುತ್ತಿದ್ದುದಕ್ಕೂ ಹೇರಳ ಉದಾಹರಣೆಗಳಿವೆ. ಆದರೆ ಅಮಾಯಕರನ್ನು ಅನ್ಯಾಯವಾಗಿ ಹಿಂಸಿಸಿದ ಪ್ರಕರಣಗಳಂತೂ ಇವಲ್ಲ. ರಾಜಕೀಯ ಅಪರಾಧಿಗಳಿಗೆ ಮಾತ್ರ ಇಂಥಾ ಶಿಕ್ಷೆ ತಪ್ಪುವಂತಿರಲಿಲ್ಲ. ಈ ಕಾರಣಕ್ಕಾಗಿಯೇ 'ಪಾಳೆಯಗಾರ ನ್ಯಾಯ'ವೆಂಬುದು ಕೆಲವೊಮ್ಮೆ ದೌರ್ಜನ್ಯ- ದಬ್ಬಾಳಿಕೆಗಳ ಪ್ರತೀಕವೆಂಬಂತೆಯೂ ಕಂಡುಬರುವುದುಂಟು. ಅಲ್ಲದೆ, ನಿಯಂತ್ರಿಸಲಾಗದ ಪುಂಡ ಆಡಳಿತಗಾರನನ್ನಾಗಿ ಪ್ರತಿಯೊಬ್ಬ ಪಾಳೆಯಗಾರನನ್ನೂ ಚಿತ್ರಿಸುವ ಪರಿಪಾಠವುಂಟು.

ಆದರೆ ಇಂಥಾ ಸ್ಥಳೀಯ ಆಡಳಿತಗಾರರ ಬಗೆಗೆ ಕೆಲವು ವಿಚಿತ್ರತೆರನಾದ ಸಂಗತಿಗಳನ್ನಷ್ಟೆ ಹೆಕ್ಕಿಕೊಂಡು ಅಧ್ಯಯನ ನಡೆಸಿರುವ ಕೆಲವು ಚರಿತ್ರಕಾರರು, 'ಪಾಳೆಯಗಾರಶಾಹಿ'ಯ ವಿಕೃತ ಚಿತ್ರಣ ನೀಡಿರುವುದೇ ಹೆಚ್ಚು. ತಮ್ಮ ಸಮಕಾಲೀನ ಸಮಾಜದ ಮೇಲ್ಮೆಗಾಗಿ, ಆಡಳಿತದ ಸುಧಾರಣೆಗಾಗಿ ಪಾಳೆಯಗಾರರು ಕೈಗೊಂಡ ಕ್ರಮಗಳನ್ನು ಇಂಥವರು ನಿರ್ಲಕ್ಷಿಸಿರುವುದೇ ಹೆಚ್ಚು. ಪಾಳೆಯಗಾರರ ಬಗೆಗಿನ ಸಮಗ್ರ ಅಧ್ಯಯನದ ಕೊರತೆ ಹಾಗೂ ಅಭಿಮಾನಶೂನ್ಯತೆಗಳೇ ಇದಕ್ಕೆ ಮುಖ್ಯ ಕಾರಣ. ಆದರೆ ಪ್ರಸ್ತುತ ಸಂಪುಟದಲ್ಲಿಯ ಪ್ರಬಂಧಗಳು ಪಾಳೆಯಗಾರರ ಬಗೆಗಿನ ತಪ್ಪುಗ್ರಹಿಕೆಗಳನ್ನು ನಿವಾರಿಸುವ ನಿಟ್ಟಿನಲ್ಲಿ ಬಹುಮಟ್ಟಿಗೆ ಸಹಕಾರಿಯಾಗಿವೆ ಮಾತ್ರವಲ್ಲ; ಪಾಳೆಯಗಾರಶಾಹಿ ಧೋರಣೆಯನ್ನು ನ್ಯಾಯಾಡಳಿತದ ನೆಲೆಯಲ್ಲಿ ಸರಿಯಾಗಿ-ನ್ಯಾಯಯುತವಾಗಿ, ನಿರೂಪಿಸುವಲ್ಲಿ ಮಾರ್ಗದರ್ಶಿಯಂತಿವೆಯೆನ್ನಬಹುದು.

ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ ಕುರಿತು ಇಲ್ಲಿ ಪ್ರಕಟವಾಗಿರುವ ಪ್ರಬಂಧಗಳು, ಕರ್ನಾಟಕ ಚರಿತ್ರೆಯಲ್ಲಿ ಪ್ರತ್ಯೇಕ ಶಾಖೆಯೊಂದು ಆರಂಭಗೊಳ್ಳಲು ಕಾರಣವೆನಿಸಿವೆ. ಈವರೆಗೆ ನ್ಯಾಯಕ್ಷೇತ್ರವೊಂದುಳಿದು ಉಳಿದೆಲ್ಲ ಕ್ಷೇತ್ರಗಳ ಬಗೆಗೆ ನಮ್ಮ ಚರಿತ್ರಕಾರರು ಹೆಚ್ಚು ಗಮನ ಹರಿಸಿದುದುಂಟು. ಈ ಕಾರಣಕ್ಕಾಗಿ ಈವರೆಗೆ ಪಾಳೆಯಗಾರರ ನ್ಯಾಯಾಡಳಿತ ಕುರಿತು ಹೆಚ್ಚು ವಿವರಗಳು ಸಂಗ್ರಹಗೊಳ್ಳಲಿಲ್ಲ. ತಮ್ಮ ಸಾಮ್ರಾಟರಂತೆಯೇ ಪಾಳೆಯಗಾರರು ಸಹಾ ನ್ಯಾಯಪರ ಆಡಳಿತ ನಡೆಸಲು ಹೆಣಗಿದರೆಂಬ ವಾಸ್ತವಾಂಶ ಪೂರ್ತ ಬೆಳಕಿಗೆ ಬರಲೇ ಇಲ್ಲ. ಗ್ರಾಮಮಟ್ಟದ ಕಟ್ಟೆಮನೆಯಿಂದ ಸರ್ವೋಚ್ಚ ನ್ಯಾಯಾಲಯದಂತಿದ್ದ ನಾಯಕನ ಆಸ್ಥಾನದವರೆಗೆ ನ್ಯಾಯವಿಚಾರಣೆ - ತೀರ್ಮಾನಗಳ ವಿವಿಧ ಹಂತಗಳ ವ್ಯವಸ್ಥಿತ ಅಧ್ಯಯನ ನಡೆಯದ ಕಾರಣವಾಗಿ ಪಾಳೆಯಪಟ್ಟುಗಳ ನಿಜಸ್ವರೂಪವನ್ನು ಅರಿಯಲಾಗಲಿಲ್ಲ. ಇದರಿಂದಾಗಿ ಪಾಳೆಯಗಾರಶಾಹಿಯನ್ನು ಜನ ಮತ್ತು ಜೀವವಿರೋಧಿ ಪ್ರಭುತ್ವವೆಂದು ನಿರೂಪಿಸಲು ಕೆಲವು ಚರಿತ್ರಕಾರರಿಗೆ ಅವಕಾಶ ವಾಯಿತು.

ಭಾರತೀಯ ಮತ್ತು ಜನಪದ ಸಂಸ್ಕೃತಿಗಳ ಸಮ್ಮಿಳನವಾಗಿ ತೋರಿಬಂದ ಪಾಳೆಯಪಟ್ಟುಗಳ ಕಾರ್ಯನೀತಿಯು, ನ್ಯಾಯಾಡಳಿತದ ಮಟ್ಟಿಗೆ, ಜನಸಾಮಾನ್ಯರಿಗೂ ರಕ್ಷಣೆ ನೀಡುವಂಥಾದ್ದಾಗಿದ್ದಿತೆಂಬುದಕ್ಕೆ, ನಂಬಿಕೆ-ಭರವಸೆಗಳನ್ನು ಮೂಡಿಸುವಂಥಾದ್ದಾಗಿದ್ದಿತೆಂಬುದಕ್ಕೆ ಆದ್ಯತೆ ದೊರೆಯದೆ ಹೋದುದು ವಿಪರ್ಯಾಸ. ಕೆಲವು ಪ್ರಸಿದ್ಧ ಸಾಮ್ರಾಟರಂತೆಯೇ ಅವರ ಅಧೀನ ಅರಸರೂ ಉತ್ತಮಮಟ್ಟದ ಆಳ್ವಿಕೆಯನ್ನು ನೀಡಿ ಪ್ರಜೆಗಳಿಗೆ ಆದರ್ಶಪ್ರಾಯ ವ್ಯಕ್ತಿಗಳಾಗಿದ್ದರೆಂಬುದಕ್ಕೆ, ಅವರು ಮಾನವೀಯ ಸಂವೇದನೆಯುಳ್ಳ, ನಿಷ್ಪಕ್ಷಪಾತ ದೃಷ್ಟಿಯುಳ್ಳ ನ್ಯಾಯಾಧಿಪತಿಗಳು ಆಗಿದ್ದುದೂ ಕಾರಣವೆಂಬುದನ್ನು ಅಧಿಕೃತವಾಗಿ ದಾಖಲಿಸದೆ ಹೋದುದು ಇನ್ನೊಂದು ದುರಂತ. ಈ ಎಲ್ಲ ಕೊರತೆಗಳ ಕಾರಣವಾಗಿ, ಪಾಳೆಯಗಾರರ ಚರಿತ್ರೆಯಲ್ಲಿಯ ಸುಂದರ ನೋಟಗಳು ಕಾಣದಂತಾಗಿ

ಕೇವಲ ಕೆಲವೇ ಭಯಾನಕ ಹಾಗೂ ರಕ್ತಪಾಯಿ ವ್ಯಕ್ತಿಗಳ, ಘಟನೆಗಳ ದೃಶ್ಯಾವಳಿಗಳಷ್ಟೆ ಸಂಯೋಜನೆಗೊಳ್ಳುವಂತಾಯಿತು. ನಮ್ಮ ವಿದ್ವಾಂಸರು ನ್ಯಾಯಪರ ಆಡಳಿತಗಳನ್ನು ಕಡೆಗಣಿಸಲಾಗಿ, ಚರಿತ್ರೆಯಲ್ಲಿ ನ್ಯಾಯೋಚಿತವಾಗಿ ದಾಖಲುಗೊಳ್ಳಬೇಕಾದ ಎಷ್ಟೋ ಅರ್ಥಪೂರ್ಣ ಸಂಗತಿಗಳು ಕತ್ತಲಲ್ಲೆ ಇರಿಸಲ್ಪಟ್ಟವು. ಇಲ್ಲಿಯ ಪ್ರಬಂಧಗಳಾದರೂ ಇಂಥಾ ಸಮಸ್ಯೆಯನ್ನು ನಿವಾರಿಸುವಲ್ಲಿ ತಕ್ಕಮಟ್ಟಿಗಾದರೂ ನೆರವಾಗುತ್ತವೆಂದು ಭಾವಿಸ ಬಹುದು.

ಪ್ರಸ್ತುತ ಸಂಪುಟದಲ್ಲಿ ಸೇರಿರುವ ಪ್ರಬಂಧಗಳು ಸಂಖ್ಯೆಯಲ್ಲಿ ಹೆಚ್ಚೇನಿಲ್ಲ. ಆದರೆ ಇನ್ನೂ ಹಲವಾರು ಪ್ರಬಂಧಗಳನ್ನು ವಿದ್ವಾಂಸರಿಂದ ನಿರೀಕ್ಷಿಸಲಾಗಿತ್ತು; ಸಾಕಷ್ಟು ಕಾಲಾವಕಾಶವನ್ನೂ ನೀಡಲಾಗಿತ್ತು. ಕರ್ನಾಟಕದಲ್ಲಿ ಪಾಳೆಯಗಾರರನ್ನು ಕುರಿತ ಅಧ್ಯಯನಕಾರ್ಯವು ಇನ್ನೂ ದುಸ್ತರವೆನಿಸಿರುವುದರಿಂದ, ಆಕರಗಳ ಕೊರತೆಯ ಕಾರಣವನ್ನು ಮುಂದುಮಾಡಿ ಕೆಲವರು ಹಿಂದೆ ಸರಿದರೆ, ವಿಷಯದ ಗಹನತೆಯೇ ಕೆಲವರನ್ನು ಹಿಂದೂಡಿತು. ಕೆಲವು ಪ್ರಬಂಧಗಳು ಬೇಗನೆ ಕೈಸೇರಿದರೆ, ಮತ್ತೆ ಕೆಲವಕ್ಕೆ ವರುಷಗಟ್ಟಲೆ ತಾಳ್ಮೆಯಿಂದ ಕಾಯಬೇಕಾಯಿತು. ಹೇಗೊ ಕಡೆಗೂ ಕೈಸೇರಿದ ಪ್ರಬಂಧಗಳನ್ನು ಇಲ್ಲಿ ಸಂಕಲಿಸಿಕೊಟ್ಟಿದೆ. ಇಲ್ಲಿಯ ಪ್ರಬಂಧಗಳಲ್ಲಿ ಕೆಲವು ತಕ್ಕಮಟ್ಟಿನ ಮಿತಿಗೊಳಪಟ್ಟಿರು ವುದು; ಹಾಗೂ ಮಾಹಿತಿಯ ಅಭಾವದ ಕಾರಣವಾಗಿ ಕೆಲವು ಪ್ರಬಂಧಗಳು ಸುಪುಷ್ಟವಾಗಿಲ್ಲದಿರುವಂತೆ ತೋರುವುದು ಸಹಜ. ಏನೇ ಇರಲಿ, ಎಷ್ಟೇ ಮಿತಿಗಳಿರಲಿ; ಶ್ರಮವಹಿಸಿ ತಮ್ಮ ತಮ್ಮ ಪ್ರಬಂಧಗಳನ್ನು ಸಿದ್ಧಪಡಿಸಿಕೊಟ್ಟ ವಿದ್ವಾಂಸರನ್ನು ಅಭಿನಂದಿಸಲೇಬೇಕು. ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ ಕುರಿತು ಸಂಪುಟ ರೂಪಿಸಿಕೊಡುವ ನಮ್ಮ ಪ್ರಯತ್ನವಂತೂ ಇವರ ಮೂಲಕ ಸಫಲವಾಗಿದೆ. ಇದರಲ್ಲಿ ಸೇರಿರುವ ಪ್ರಬಂಧಗಳಲ್ಲಿ ಒಂದೆರಡನ್ನುಳಿದು ಇತರ ಎಲ್ಲ ಪ್ರಬಂಧಗಳೂ ಈ ಸಂಪುಟ ಕ್ಕಾಗಿಯೇ ಮೊಟ್ಟಮೊದಲ ಬಾರಿಗೆ ಸಿದ್ಧಗೊಂಡವೆಂಬುದನ್ನು ಇಲ್ಲಿ ಗಮನಿಸಬೇಕು. ಇಂಥಾ ಸಾರ್ಥಕ ಕಾರ್ಯ ಕೈಗೊಂಡ ಬಗೆಗೆ ನಮಗೆ ಹೆಮ್ಮೆಯಿದೆ. ನಮ್ಮ ಕೋರಿಕೆಯನ್ನು ಮನ್ನಿಸಿ ತಮ್ಮ ಪ್ರಬಂಧಗಳನ್ನು ನೀಡಿದ ವಿದ್ವಾಂಸರಿಗೆ ನಾವು ಕೃತಜ್ಞರಾಗಿರಬೇಕು.

ಈ ಕ್ಷೇತ್ರದಲ್ಲಿ ಆಗಬೇಕಾದ ಕೆಲಸದ ಸಾಧ್ಯತೆಯನ್ನೂ ಅಗಾಧತೆಯನ್ನೂ ನಮ್ಮ ಸಂಶೋಧಕರು ತಮ್ಮ ಪ್ರಬಂಧಗಳ ಮೂಲಕ ಇಲ್ಲಿ ಮನದಟ್ಟು ಮಾಡಿಕೊಟ್ಟಿರುವುದು ಗಮನಾರ್ಹ. ಮುಖ್ಯವಾಗಿ, ನ್ಯಾಯಾಂಗ/ಕಾನೂನುಕ್ಷೇತ್ರಕ್ಕೆ ಇಂಥಾ ಅಧ್ಯಯನಗಳಿಂದ ಆಗುವ ಲಾಭ ಅಪಾರವೆನ್ನುವುದರಲ್ಲಿ ಸಂಶಯವಿಲ್ಲ. ಕರ್ನಾಟಕದ ಎಲ್ಲ ಪಾಳೆಯಗಾರ ಮನೆತನಗಳ ನ್ಯಾಯಾಡಳಿತವನ್ನು ಕುರಿತು ಅಗತ್ಯ ಮಾಹಿತಿಯೊಡನೆ ಪ್ರಕಟಿಸುವುದಾದರೆ, ನ್ಯಾಯದಾನದ ಮಟ್ಟಿಗೆ ಪಾಳೆಯಗಾರಶಾಹಿ ಅನುಸರಿಸಿದ ನೀತಿ-ನಿಬಂಧನೆಗಳ ಒಂದು ಸಮಗ್ರ ಚಿತ್ರ ದೊರೆಯಲು ಸಾಧ್ಯ. ಇದನ್ನು ಆಗುಮಾಡಲು ನಮ್ಮ ಉತ್ಸಾಹಿ ಹಾಗೂ ನುರಿತ ಸಂಶೋಧಕರು ಶ್ರಮವಹಿಸಬೇಕಿದೆ; ಈಗಾಗಲೇ ಪಾಳೆಯಗಾರರ ಅಧ್ಯಯನದಲ್ಲಿ

ತೊಡಗಿಕೊಂಡಿರುವ ವಿದ್ವಾಂಸಪಡೆಯು ಈ ಕಾರ್ಯವನ್ನು ಅನಿವಾರ್ಯವೆಂಬಂತೆ ಕೈಗೆತ್ತಿಕೊಳ್ಳಬೇಕಿದೆ.

* * *

'ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ' ಸಂಪುಟವು ಪ್ರಕಟಗೊಳ್ಳುತ್ತಿರುವುದು ನಿವೃತ್ತ ಜಿಲ್ಲಾ ನ್ಯಾಯಾಧೀಶರೂ ನಮ್ಮೆಲ್ಲರಿಗೆ ಮೆಚ್ಚಿನವರೂ ಆದ ಶ್ರೀ ಜಿ.ಹೆಚ್. ಪ್ರಸಾದ್ ಅವರ ಗೌರವಾರ್ಥ; ಅಭಿನಂದನ ಸಂಪುಟವಾಗಿ. ಪ್ರಸ್ತುತ ಅಭಿನಂದನ ಸಂಪುಟವು ರೂಪುಗೊಂಡಿರುವುದು ಶ್ರೀ ಪ್ರಸಾದ್ ಅವರಿಗೆ ಪ್ರಿಯವಾದ ಕಾನೂನು, ನ್ಯಾಯಪಾಲನೆ, ನಾಯಕ ಪಾಳೆಯಗಾರರ ಚರಿತ್ರೆ ಮತ್ತು ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ. ಜಿಲ್ಲಾ ನ್ಯಾಯಾಧೀಶರಾಗಿ ನಿವೃತ್ತರಾದ ಶ್ರೀ ಪ್ರಸಾದ್ ಅವರು, ತಮ್ಮ ಬದುಕಿನಾದ್ಯಂತ ನೈತಿಕಮೌಲ್ಯಗಳನ್ನು ಅಳವಡಿಸಿಕೊಂಡು ಅನುಸರಿಸಿದವರು ಹಾಗೂ ಗೌರವಿಸಿದವರು. ಮಾನವೀಯ ಸಂವೇದನೆ ಮತ್ತು ಅಂತಃಕರಣಗಳಿಗಾಗಿ ಮಾತ್ರವಲ್ಲದೆ, ತಾಳ್ಮೆ, ಕರ್ತವ್ಯನಿಷ್ಠೆ ಮತ್ತು ಸಜ್ಜನಿಕೆಗಳಿಗಾಗಿಯೂ ತಮ್ಮ ಮೇಲಧಿಕಾರಿಗಳು, ಸಹೋದ್ಯೋಗಿಗಳು, ಸ್ನೇಹಿತರು, ಸಾರ್ವಜನಿಕರು ಹಾಗೂ ಬಂಧು-ಬಾಂಧವರ ಪ್ರೀತಿ-ಅಭಿಮಾನಗಳಿಗೆ ಪಾತ್ರರಾದವರು. ಸತತ ಪರಿಶ್ರಮ, ಪ್ರಾಮಾಣಿಕತೆ, ಸೌಜನ್ಯ ಇತ್ಯಾದಿ ಗುಣಗಳಿಂದಾಗಿ ಎಲ್ಲರಿಂದಲೂ ಗುರುತಿಸಲ್ಪಟ್ಟವರು. ನ್ಯಾಯಪರಿಪಾಲನೆಯಲ್ಲಿ ನಿಷ್ಠೆಯನ್ನು ಹೊಂದಿ, ನಿಷ್ಪಕ್ಷಪಾತ ದೃಷ್ಟಿ-ಧೋರಣೆ-ಶಿಸ್ತುಗಳೊಡನೆ ನ್ಯಾಯಾಂಗದ ಪಾವಿತ್ರ್ಯತೆಯನ್ನು ಎತ್ತಿಹಿಡಿಯಲು ಪ್ರಯತ್ನಿಸಿದವರು. ಈ ದೃಷ್ಟಿಯಿಂದ, ಶ್ರೀ ಜಿ.ಹೆಚ್. ಪ್ರಸಾದ್ ಅವರಿಗೆ, 'ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ' ಶೀರ್ಷಿಕೆಯಲ್ಲಿ ಪ್ರಸ್ತುತ ಸಂಪುಟವನ್ನು ಅಭಿನಂದನಪೂರ್ವಕ ಅರ್ಪಿಸುತ್ತಿರುವುದು ಅರ್ಥಪೂರ್ಣವಾದುದೆನ್ನಬಹುದು.

ಇಲ್ಲಿ ಪ್ರಸ್ತಾಪಿಸಬೇಕಾದ ಇತರೆ ಗಮನಾರ್ಹ ಸಂಗತಿಗಳೆಂದರೆ, ಶ್ರೀ ಜಿ.ಹೆಚ್.ಪ್ರಸಾದ್ ಅವರು ಸಂಘಟನಾ ಚತುರರು; ಸಾಹಿತ್ಯ-ಸಂಸ್ಕೃತಿ ಪ್ರೇಮಿಗಳು. ತಮ್ಮ ಸೇವಾವಧಿಯಲ್ಲಿಯೂ ಆ ನಂತರವೂ ಇವರು ಸಾರ್ವಜನಿಕ ಸೇವಾಕ್ಷೇತ್ರಗಳಲ್ಲಿ ತೊಡಗಿಸಿಕೊಂಡು ನಾನಾ ತೆರನಾಗಿ ಸಲ್ಲಿಸಿರುವ ಹಾಗೂ ಸಲ್ಲಿಸುತ್ತಿರುವ ಸೇವೆಯದೇ ಪ್ರತ್ಯೇಕ ಅಧ್ಯಾಯ. ಸಮಾಜವನ್ನು ವಿವಿಧ ಆಯಾಮಗಳಿಂದ ಅರ್ಥೈಸಿಕೊಳ್ಳಲು ಇವರಿಗೆ ಸಾಧ್ಯವಾದುದೇ ಈ ಹಿನ್ನೆಲೆಯಲ್ಲಿ. ಬಾಲ್ಯದಿಂದಲೂ ಬೆಳೆಸಿಕೊಂಡು ಬಂದ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಆಸಕ್ತಿಗಳ ಕಾರಣವಾಗಿ ಶ್ರೀ ಪ್ರಸಾದ್ ಅವರು ಈ ಕ್ಷೇತ್ರಗಳಲ್ಲಿಯೂ ಇಂದಿಗೂ ಸಕ್ರಿಯರಾಗಿರುವುದನ್ನು ನೋಡಬಹುದು. ಸತತ ಅಧ್ಯಯನ, ಚಿಂತನ-ಮಂಥನಗಳೇ ಇವರ ಅರಿವು-ಉತ್ಸಾಹ-ಯಶಸ್ಸುಗಳ ಗುಟ್ಟು. ಸಹೃದಯತೆ ಬೆಳೆಯಲು, ಸಂಸ್ಕಾರ ಬಲಿಯಲು ಸದಭಿರುಚಿಯ ಸಾಹಿತ್ಯಾಧ್ಯಯನವೇ ಆಧಾರ. ನಿರಂತರ ಸಾಹಿತ್ಯ ಸಂಪರ್ಕವು ಮನುಷ್ಯನನ್ನು ಪ್ರಜ್ಞಾವಂತನನ್ನಾಗಿಸುತ್ತದೆ. ಇಂಥಾ ಸಾಹಿತ್ಯ-ಸಂಗೀತ ಅಭಿರುಚಿಗಳ ಕಾರಣವಾಗಿಯೇ ಇವರು ಹಲವಾರು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ, ಸಮ್ಮೇಳನಗಳಲ್ಲಿ

ಸತತವಾಗಿ ಭಾಗವಹಿಸುತ್ತಿರುವುದು ಎಲ್ಲರಿಗೂ ತಿಳಿದದ್ದೆ. ಹಲವಾರು ಸಾಹಿತ್ಯಿಕ-ಸಂಶೋಧನಾತ್ಮಕ-ಸಾಂಸ್ಕೃತಿಕ ಕೆಲಸ-ಕಾರ್ಯಗಳಲ್ಲಿ ತೊಡಗಿರುವ ಎಷ್ಟೋ ಮಂದಿಗೆ ಇವರಿಂದ ಸದ್ದಿಲ್ಲದೆ ನೆರವು ಸಂದಿದೆ. ಶ್ರೀ ಪ್ರಸಾದ್ ಅವರು ಎಲ್ಲ ಸಮುದಾಯಗಳವರು, ಎಲ್ಲ ಕ್ಷೇತ್ರಗಳವರು ಹಾಗೂ ಎಲ್ಲ ವಯೋಮಾನದವರಿಗೆ ಪ್ರಿಯರೆನಿಸಿರುವುದು ಇವರು ಕೈಗೊಂಡ ಇಂಥಾ ಹಲವಾರು ಜನೋಪಕಾರಿ ಚಟುವಟಿಕೆಗಳ ದೆಸೆಯಿಂದ.

ಶ್ರೀ ಪ್ರಸಾದ್ ಅವರಿಗೆ ಸಂಬಂಧಿಸಿದಂತೆ ಈ ಸಂಪುಟದಲ್ಲಿರುವ ಎಲ್ಲ ಲೇಖನಗಳೂ ಶ್ರೀಯುತರ ವ್ಯಕ್ತಿತ್ವ, ಸಾಧನೆ-ಸಿದ್ಧಿ-ಸಾರ್ಥಕತೆಗಳನ್ನು ಆತ್ಮೀಯವಾಗಿ ಚಿತ್ರಿಸಿವೆ; ಇವರ ಚಿಂತನೆ-ಆಲೋಚನೆಗಳನ್ನು, ಕಾರ್ಯನೀತಿ-ಸಿದ್ಧಾಂತಗಳನ್ನು ಸಮರ್ಪಕವಾಗಿ ಬಿಂಬಿಸಿವೆ. ಇವೆಲ್ಲಕ್ಕೂ ಮಿಗಿಲಾಗಿ, ಸವಿನೆನಪುಗಳು ಸಂಜೀವಿನಿಯಿದ್ದಂತೆ. ಇವುಗಳ ಸ್ಮರಣೆಯಷ್ಟೆ ಸಾಕು ಮಾನಸಿಕವಾಗಿ ಪುನಶ್ಚೇತನಗೊಳ್ಳಲು. ಹಾಗೆಯೇ, ಪರಿಶುದ್ಧವಾದುದನ್ನು ಸವಿದಷ್ಟೂ ರುಚಿಯೆನಿಸುವುದು ಸಹಜ. ಇದರ ಗುಣಗಾನವನ್ನು ಎಷ್ಟು ಮಾಡಿದರೂ ಕಡಮೆಯೆ. ಶ್ರೀ ಪ್ರಸಾದ್ ಅವರನ್ನು ಕುರಿತ ಲೇಖನಗಳಲ್ಲಿ ಕಂಡುಬರುವ ವಿಶಿಷ್ಟತೆಯೆಂದರೆ ಇದೇ. ಉತ್ಪ್ರೇಕ್ಷೆಯೆನಿಸುವಷ್ಟರ ಮಟ್ಟಿಗೆ ಇವರ ಗುಣ-ಸ್ವಭಾವಗಳನ್ನು ನಿರೂಪಿಸಲಾಗಿದೆ. ಇವುಗಳೊಡನೆ ಶ್ರೀ ಪ್ರಸಾದ್ ಅವರು ಸ್ವತಃ ಸಿದ್ಧಪಡಿಸಿದ ಟಿಪ್ಪಣಿಗಳು ಹಾಗೂ ಅಲ್ಲಲ್ಲಿ ನೀಡಿದ ಹಲವಾರು ಉಪನ್ಯಾಸಗಳು ಇವರ ದೃಷ್ಟಿ-ಧೋರಣೆ ಇತ್ಯಾದಿಯನ್ನು ಸಮರ್ಥವಾಗಿ ವ್ಯಕ್ತಪಡಿಸುವಂಥವು. ಇವರು ಉತ್ತಮ ನ್ಯಾಯಾಧೀಶರಾಗಿದ್ದಂತೆಯೇ ಅತ್ಯುತ್ತಮ ಸಾಹಿತ್ಯ-ಸಂಸ್ಕೃತಿ ಚಿಂತಕರೂ ಆಗಿದ್ದರೆಂಬುದಕ್ಕೆ ಇವು ಕೆಲವು ಉದಾಹರಣೆಗಳು. ಶ್ರೀ ಪ್ರಸಾದ್ ಅವರ ಬದುಕು-ಸಾಧನೆಗಳನ್ನು ವಸ್ತುನಿಷ್ಠವಾಗಿ ನಿರೂಪಿಸಿದ ಎಲ್ಲರನ್ನೂ ಇಲ್ಲಿ ಗೌರವಪೂರ್ವಕ ನೆನೆಯಬೇಕು.

* * *

ಶ್ರೀ ಜಿ.ಹೆಚ್.ಪ್ರಸಾದ್ ಅವರಿಗೆ ಅರವತ್ತು ಸಂವತ್ಸರಗಳು ತುಂಬಿದ ಶುಭ ಸಂದರ್ಭದಲ್ಲಿ, ಅವರನ್ನು ಅಭಿನಂದಿಸಲೋಸುಗ ಅವರ ಸಹೋದ್ಯೋಗಿಗಳು, ಆಪ್ತರು, ಅಭಿಮಾನಿಗಳು, ಕುಟುಂಬವರ್ಗದವರು, ಬಂಧುಗಳು-ಇವರೆಲ್ಲರೂ ಸೇರಿ ಅಭಿನಂದನ ಸಮಿತಿಯೊಂದನ್ನು ಹುಟ್ಟುಹಾಕಿದರು. ಸಮಾಜವಾದಿ ಹೋರಾಟಗಾರ ಹಾಗೂ 'ಘಟ್ಟಿಹೊಸಹಳ್ಳಿ ಗಟ್ಟಿಗ' ಸಿ.ಮಲೆಸಿದ್ದಪ್ಪ ಅವರ ಪುತ್ರ ಪ್ರೊ.ಸಿ.ಎಂ.ವಿವೇಕಾನಂದ ಅವರ ಚಿತ್ರದುರ್ಗದ 'ತ್ರಿನೇತ್ರ' ನಿವಾಸದಲ್ಲಿ ಈ ಸಮಿತಿ ಅಸ್ತಿತ್ವ ಪಡೆಯಿತು. ಕೇವಲ ಅಭಿನಂದನ ಕಾರ್ಯಕ್ರಮವನ್ನು ಏರ್ಪಡಿಸಿ ಆ ನಂತರ ಶ್ರೀ ಪ್ರಸಾದ್ ಅವರನ್ನು ನೆನಪಿನ ಮರೆಗೆ ಕಳುಹಿಸಲೊಪ್ಪದ ಕೆಲವು ಸದಸ್ಯರು, ಅವರಿಗೆ ಗ್ರಂಥರೂಪದ ಉಡುಗೊರೆಯನ್ನು ಅರ್ಪಿಸಿ ಗೌರವಿಸುವ ಹಾಗೂ ಸದಾಕಾಲ ಅವರ ಆದರ್ಶಾತ್ಮಕ ವ್ಯಕ್ತಿತ್ವದ ನೆನಪನ್ನುಳಿಸುವ ನಿಟ್ಟಿನಲ್ಲಿ ನಿರ್ಣಯ ಕೈಗೊಂಡರು. ಅದಕ್ಕಾಗಿ ಶ್ರೀ ಜಿ.ಹೆಚ್.ಪ್ರಸಾದ್ ಅಭಿನಂದನ

ಗ್ರಂಥ ಪ್ರಕಟಣ ಸಮಿತಿಯನ್ನೂ ರಚಿಸಲಾಯಿತು. ಇಂಥಾ ಸಾರ್ಥಕ ನಿರ್ಧಾರದ ಫಲವೇ ಪ್ರಸ್ತುತ ಅಭಿನಂದನ ಸಂಪುಟ.

ಹಿರಿಯರೂ ಮಾಜಿ ಶಾಸಕರೂ ಸಮಾಜಸೇವಾಸಕ್ತರೂ ಕ್ರೀಡಾಸಕ್ತರೂ ಹೋರಾಟಗಾರರೂ ಸರಳಜೀವಿಗಳೂ ಆದ ದಾವಣಗೆರೆಯ ಶ್ರೀ ಕೆ.ಮಲ್ಲಪ್ಪ ಅವರು ಈ ಅಭಿನಂದನ ಸಂಪುಟ ಪ್ರಕಟಣ ಸಮಿತಿಯ ಅಧ್ಯಕ್ಷರಾಗಿದ್ದುಕೊಂಡು ದಿವ್ಯ ಮಾರ್ಗದರ್ಶನ ಮಾಡಿದ್ದಾರೆ. ದಿವಂಗತ ಸಿ.ಮಲೆಸಿದ್ದಪ್ಪ ಅವರ ಇನ್ನೋರ್ವ ಪುತ್ರರೂ ಯುವಮುಂದಾಳುಗಳೂ ಸನ್ಮಿತ್ರರೂ ಆದ ಶ್ರೀ ಸಿ.ಎಂ.ಅಶೋಕ್ ಅವರು ಉಪಾಧ್ಯಕ್ಷರಾಗಿ ನಮ್ಮೊಡನಿದ್ದು ಹುರಿದುಂಬಿಸಿದ್ದಾರೆ. ಮುಖ್ಯವಾಗಿ, ಈ ಅಭಿನಂದನ ಸಂಪುಟದ ಸಂಚಾಲಕರಾದ ಶ್ರೀ ಹರ್ತಿಕೋಟೆ ವೀರೇಂದ್ರಸಿಂಹ ಮತ್ತು ಡಾ. ತೇಜಸ್ವಿ ಕಟ್ಟೀಮನಿ ಅವರುಗಳು ನೀಡಿದ ಸ್ನೇಹಪೂರ್ವಕ ಪ್ರೋತ್ಸಾಹ ಮರೆಯುವಂಥಾದ್ದಲ್ಲ.

ಈ ಅಭಿನಂದನ ಸಂಪುಟದ ಸಿದ್ಧತೆಯಲ್ಲಿ ನನ್ನೊಡನಿದ್ದು ಹೊಯ್‌ಕಯ್ ಆಗಿ ದುಡಿದವರು ಹಾಗೂ ಎಲ್ಲ ವಿಧದ ತಾಂತ್ರಿಕ ನೆರವು ನೀಡಿ ಸಹಕರಿಸಿದವರು ಹಂಪಿ ಕನ್ನಡ ವಿಶ್ವವಿದ್ಯಾಲಯದ ಗೆಳೆಯ ಶ್ರೀ ಕೆ.ಎಲ್.ರಾಜಶೇಖರ್. ಹಾಗೆಯೇ, ಹಿತೈಷಿಗಳಾದ ಪ್ರೊ.ಜೆ.ಆರ್.ರಾಮಮೂರ್ತಿ, ಡಾ.ಕೆ.ಎಂ.ಸುರೇಶ್, ಡಾ.ಎ.ವೆಂಕಟೇಶ, ಡಾ. ಮಲ್ಲಿಕಾರ್ಜುನ ವಣೇನೂರು, ಶ್ರೀ ನಾಗರಾಜ ಬಡಿಗೇರ ಮೊದಲಾದವರ ನೆರವೂ ದೊರೆತಿದೆ. ನನ್ನೊಡನೆ ಸದಾ ಪ್ರೀತಿ-ಅಭಿಮಾನಗಳಿಂದ ಸ್ಪಂದಿಸುತ್ತಿರುವ ಡಾ.ಎಂ.ಜಿ. ನಾಗರಾಜ್, ಡಾ.ಡಿ.ರಾಮಚಂದ್ರನಾಯಕ್, ಡಾ.ಅಮರೇಶ ಯತಗಲ್, ಶ್ರೀ ಎಸ್.ಆರ್. ಗುರುನಾಥ್, ಶ್ರೀ ಹೆಚ್.ಎನ್.ಶಿವಮೂರ್ತಿ 'ರಣರುದ್ರ', ಶ್ರೀ ಲ.ನಾಗರಾಜ ಹೊಯ್ಸಳ, ಪ್ರೊ.ಭೀ.ಉಮೇಶ್, ಶ್ರೀ ಕ.ಮ.ರವಿಶಂಕರ, ಶ್ರೀ ಸಿ.ಟಿ.ಚಿದಾನಂದಮೂರ್ತಿ, ಶ್ರೀ ಸಿ.ಟಿ.ಸುರೇಶ್ (ಮರಿ), ಶ್ರೀ ಪಿ.ಆನಂದ ತೆಲಗಾವಿ, ಶ್ರೀ ಪಿ.ಮಂಜುನಾಥ ತೆಲಗಾವಿ, ಶ್ರೀ ಸುರೇಶ್ ವೈ. ಭಂಡಾರಿ, ಶ್ರೀ ಸಿ.ಎಲ್.ಶಿವಶಕ್ತಿ ಪ್ರಸನ್ನಕುಮಾರ್ ಮೊದಲಾದವರು ಹಲವು ವಿಧದಲ್ಲಿ ಸಹಾಯವೆಸಗಿದ್ದಾರೆ.

ಈ ಸಂಪುಟದ ಅಕ್ಷರ ಸಂಯೋಜನೆ ಮಾಡಿದವರು ಶ್ರೀ ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್‌ನ ಶ್ರೀಮತಿ ರಶ್ಮಿ ಕೃಪಾಶಂಕರ್; ಆಕರ್ಷಕ ಮುಖಪುಟ ಕಲೆ ರೂಪಿಸಿದವರು ಶ್ರೀ ಕೆ.ಕೆ.ಮಕಾಳಿ; ಹಾಗೂ ಅಚ್ಚುಕಟ್ಟಾದ ಮುದ್ರಣಕಾರ್ಯ ನಿರ್ವಹಿಸಿದವರು ವಿಶ್ವಾಸ್ ಪ್ರಿಂಟ್ಸ್‌ನ ಗೆಳೆಯ ಶ್ರೀ ಟಿ.ಎಲ್.ವೆಂಕಟೇಶ್ ಹಾಗೂ ತಂಡದವರು.

ಮುಖ್ಯವಾಗಿ, ಈ ಅಪರೂಪದ ಅಭಿನಂದನ ಸಂಪುಟವನ್ನು ರೂಪಿಸಿಕೊಡಲು ನನಗೆ ಅವಕಾಶ ಕಲ್ಪಿಸಿಕೊಟ್ಟವರು ಶ್ರೀ ಜಿ. ಹೆಚ್. ಪ್ರಸಾದ್ ಅಭಿನಂದನ ಸಂಪುಟ ಪ್ರಕಟಣ ಸಮಿತಿಯ ಎಲ್ಲ ಸದಸ್ಯರು.

ಈ ಎಲ್ಲ ಮಹನೀಯರಿಗೂ ನಾನು ಹೃದಯಪೂರ್ವಕ ವಂದಿಸುತ್ತೇನೆ.



# ವಿಷಯಸೂಚಿ


ಭಾಗ ೧ : ನ್ಯಾಯತೀರ್ಮಾನ : ತಾತ್ವಿಕತೆ ಮತ್ತು ಸ್ವರೂಪ

೧. ಮಧ್ಯಯುಗದ ಕಾನೂನುಕ್ಷೇತ್ರದ ಏಕಮೇವ
ಅದ್ವಿತೀಯ ಟೀಕಾಕಾರ : ವಿಜ್ಞಾನೇಶ್ವರ / ೩

**- ಪ್ರೊ.ಬಿ.ಎಸ್.ಸಂಪತ್**

೨. ರಾಜಪ್ರಭುತ್ವ ಮತ್ತು ನ್ಯಾಯಪದ್ಧತಿ / ೨೬

**- ಡಾ.ರಾಜಾರಾಮ ಹೆಗಡೆ**

೩. ಪ್ರಜಾಪ್ರಭುತ್ವ ಮತ್ತು ನ್ಯಾಯಾಂಗ ವ್ಯವಸ್ಥೆ / ೩೫

**- ಡಾ.ಎ.ವೆಂಕಟೇಶ**

೪. ಜನಪದರ ನ್ಯಾಯತೀರ್ಮಾನ ದೃಷ್ಟಿಯ ತಾತ್ವಿಕತೆ / ೪೧

**- ಡಾ.ಕೆ.ಆರ್.ದುರ್ಗಾದಾಸ್**

೫. ಜನಪದರ ನ್ಯಾಯತೀರ್ಮಾನ ದೃಷ್ಟಿ : ಪಾಳೆಯಗಾರರ ಅವಧಿ / ೪೯

**- ಡಾ.ಜಿ.ಆರ್.ತಿಪ್ಪೇಸ್ವಾಮಿ**

೬. ಅಸ್ಪೃಶ್ಯರು ಮತ್ತು ನ್ಯಾಯತೀರ್ಮಾನ ಸ್ವರೂಪ / ೫೯

**- ಎಸ್.ಆರ್.ಗುರುನಾಥ್**

೭. ಕರ್ನಾಟಕ ಬುಡಕಟ್ಟುಗಳು ಹಾಗೂ ನ್ಯಾಯತೀರ್ಮಾನ
ವಿಧಾನಗಳು : ಕೆಲವು ನಿದರ್ಶನಗಳು / ೮೪

**- ಡಾ.ಕೆ.ಎಂ.ಮೇತ್ರಿ**

೮. ಬೇಡರ ಕಟ್ಟೆಮನೆಗಳ 'ನ್ಯಾಯಪಂಚಾಯಿತಿ' / ೧೦೨

**- ಡಾ.ವಿರೂಪಾಕ್ಷಿ ಪೂಜಾರಹಳ್ಳಿ**

೯. ಬೇಡರ ಕಟ್ಟೆಮನೆಗಳ ನೀತಿ-ನಿಬಂಧನೆಗಳಿಗೆ ಸಂಬಂಧಿಸಿದ
ಒಂದು ದಾಖಲೆ / ೧೧೭

**- ಸಂಗ್ರಹ/ಪ್ರೊ.ಲಕ್ಷ್ಮಣ್ ತೆಲಗಾವಿ**

ಭಾಗ ೨ : ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ

೧. ಚಿತ್ರದುರ್ಗ ನಾಯಕ ಅರಸರ ನ್ಯಾಯಾಡಳಿತ / ೧೩೧

**- ಪ್ರೊ.ಲಕ್ಷ್ಮಣ್ ತೆಲಗಾವಿ**

೨. ಬಿಚ್ಚುಗತ್ತಿ ಭರಮಣ್ಣನಾಯಕನ ಅವಧಿಯಲ್ಲಿ ದಾವಣಗೆರೆ ಗೌಡಿಕೆವ್ಯಾಜ್ಯದ ನ್ಯಾಯತೀರ್ಮಾನ / ೧೭೬

**- ಪ್ರೊ.ಲಕ್ಷ್ಮಣ್ ತೆಲಗಾವಿ**

೩. ಕೆಳದಿ ಅರಸರ ನ್ಯಾಯಾಡಳಿತ / ೧೯೧

**- ಕೆಳದಿ ಗುಂಡಾಜೋಯಿಸ್**

೪. ಹಾಗಲವಾಡಿ ನಾಯಕರ ನ್ಯಾಯಾಡಳಿತ / ೨೧೦

**- ಡಾ.ಡಿ.ಎನ್.ಯೋಗೀಶ್ವರಪ್ಪ**

೫. ಹಂಡೆ ಪಾಳೆಯಗಾರರ ನ್ಯಾಯಾಡಳಿತ / ೨೧೭

**- ಡಾ.ಚೆನ್ನಕ್ಕ ಪಾವಟೆ**

೬. ಹರಪನಹಳ್ಳಿ ಪಾಳೆಯಗಾರರ ನ್ಯಾಯಾಡಳಿತ / ೨೨೮

**- ಕುಂ.ಬಾ.ಸದಾಶಿವಪ್ಪ**

೭. ನಾಯಕನಹಟ್ಟಿ ಪಾಳೆಯಗಾರರ ನ್ಯಾಯಾಡಳಿತ / ೨೩೪

**- ಡಾ.ಮೀರಾಸಾಬಿಹಳ್ಳಿ ಶಿವಣ್ಣ**

೮. ತರೀಕೆರೆ ನಾಯಕರ ನ್ಯಾಯಾಡಳಿತ / ೨೩೯

**- ಸಂತೇಬೆನ್ನೂರು ಸುಮತೀಂದ್ರ ನಾಡಿಗ್**

೯. ಮತ್ತೋಡು ಪಾಳೆಯಗಾರರ ನ್ಯಾಯಾಡಳಿತ / ೨೪೨

**- ಬಾಗೂರು ಆರ್. ನಾಗರಾಜಪ್ಪ**

೧೦. ಗುಡಗುಂಟಿ ಸಂಸ್ಥಾನಿಕರ ನ್ಯಾಯಾಡಳಿತ / ೨೪೮

**- ಡಾ.ಅಮರೇಶ ಯತಗಲ್**

೧೧. ಕನಕಗಿರಿ ಪಾಳೆಯಗಾರರ ನ್ಯಾಯಾಡಳಿತ / ೨೬೦

**- ಡಾ.ಎಂ.ಕೆ.ದುರುಗಪ್ಪ**

೧೨. ಸುಗುಟೂರು ಅರಸರ ನ್ಯಾಯಾಡಳಿತ / ೨೬೭

**- ಡಾ.ಪಿ.ವಿ.ಕೃಷ್ಣಮೂರ್ತಿ**

೧೩. ಹಾಲೇರಿ ಅರಸರ ನ್ಯಾಯಾಡಳಿತ / ೨೭೫

**- ಡಾ.ಎಂ.ಜಿ.ನಾಗರಾಜ್**

೧೪. ಸುರಪುರ ನಾಯಕರ ನ್ಯಾಯಾಡಳಿತ / ೨೯೧

- ಜೆ.ಆಗಸ್ಟಿನ್

೧೫. ನ್ಯಾಯಾಂಗ ವಿಚಾರಣೆಯಲ್ಲಿ ನಾಲ್ವಡಿ ವೆಂಕಟಪ್ಪನಾಯಕ / ೨೯೮

- ಡಾ.ರಂಗರಾಜ ವನದುರ್ಗ

೧೬. ಆನೆಗೊಂದಿ ಪಾಳೆಯಗಾರರ ನ್ಯಾಯಾಡಳಿತ / ೩೦೫

- ಡಾ.ಅಮರೇಶ ಯತಗಲ್

೧೭. ದೇವದುರ್ಗ ಸಂಸ್ಥಾನಿಕರ ನ್ಯಾಯಾಡಳಿತ / ೩೧೫

- ಡಾ.ಅಮರೇಶ ಯತಗಲ್

೧೮. ಯಲಹಂಕಪ್ರಭುಗಳ ನ್ಯಾಯಾಡಳಿತ / ೩೨೧

- ಕೆ.ಎಲ್.ರಾಜಶೇಖರ್

೧೯. ಉತ್ತರಕರ್ನಾಟಕ ದೇಸಗತಿ ಮನೆತನಗಳ ನ್ಯಾಯಾಡಳಿತ / ೩೩೨

- ಡಾ.ಸಂಗಪ್ಪ ಚ. ಕಲ್ಯಾಣಿ

೨೦. ಚಿತ್ರದುರ್ಗ ಪ್ರದೇಶದ ನಾಯಕ ಪಾಳೆಯಗಾರರ ಶಾಸನಗಳಲ್ಲಿ ಕಂಡುಬರುವ ನ್ಯಾಯತೀರ್ಮಾನ ಸಂದರ್ಭಗಳು / ೩೪೨

- ಡಾ.ಬಿ.ರಾಜಶೇಖರಪ್ಪ

೨೧. ಮದ್ದಿಹಳ್ಳಿ ಮಾದಿಗತನದ ಕಾಣಾಚಿವ್ಯಾಜ್ಯ ಕುರಿತ ಜೋಡಿ ತಾಮ್ರಪತ್ರಗಳು / ೩೬೦

- ಪ್ರೊ.ಲಕ್ಷ್ಮಣ್ ತೆಲಗಾವಿ

**ಭಾಗ ೩ : ಜಿ.ಹೆಚ್.ಪ್ರಸಾದ್ : ಬದುಕು-ಸಾಧನೆ**

೧. ನ್ಯಾಯ ನೀಡುವುದರಲ್ಲಿಯೇ ಧನ್ಯತೆ ಪಡೆದ ಬದುಕು / ೩೭೯

- ಎಸ್.ಆರ್.ವೈದ್ಯ

೨. ಜನಾದರಣೀಯ ವ್ಯಕ್ತಿತ್ವ / ೩೮೪

- ನ್ಯಾ॥ ಸಿ.ಎನ್.ಅಶ್ವತ್ಥನಾರಾಯಣರಾವ್

೩. ಸರಳತೆ-ಸಾತ್ವಿಕತೆಗಳ ಪ್ರತಿರೂಪ / ೩೮೭

- ಎಸ್.ವೈ.ಈರಣ್ಣವರ್

೪. ಸತ್ಯದ ಪ್ರತಿಪಾದಕ / ೩೯೩

- ಎಂ.ಶಂಭುಲಿಂಗಪ್ಪ

೫. ಬಹುಮುಖಿ ವ್ಯಕ್ತಿತ್ವ / ೩೯೫

- ಎನ್.ಶ್ರೀವತ್ಸ ಕೆದಿಲಾಯ

೬. 'ಐರಾವತ'ದ ಮೇಲಿನ ವ್ಯಾಮೋಹ! / ೩೯೮

- ಆರ್.ಚಂದ್ರಶೇಖರ್

೭. ಬೀಳ್ಕೊಡುಗೆ (ಕವನ) / ೪೦೨

- ಕೆ.ವಿ.ಶೇಷಾದ್ರಿ

೮. G.H.Prasad : A Suave & Sprightly Figure / ೪೦೪

- I.S.Antin

೯. ಸ್ಫಟಿಕಮಣಿ / ೪೦೬

- ಪ್ರೊ.ಲಕ್ಷ್ಮಣ್ ತೆಲಗಾವಿ

೧೦. ಪ್ರಸಾದ್ ಅವರ ಕೆಲವು ಟಿಪ್ಪಣಿಗಳು / ೪೨೨

- ಸಂಗ್ರಹ / ಪ್ರೊ.ಲಕ್ಷ್ಮಣ್ ತೆಲಗಾವಿ

೧೧. 'ಉಡ ಹಿಡಿತ'ದ ಪ್ರಸಾದ್ : ಕೆಲವು ಪ್ರಸಂಗಗಳು / ೪೪೫

- ಡಾ.ತೇಜಸ್ವಿ ಕಟ್ಟೀಮನಿ

೧೨. ದೊಡ್ಡ ವ್ಯಕ್ತಿತ್ವದ ನನ್ನ ಭಾವ / ೪೫೨

- ಸಿ.ಎಂ.ಸತೀಶ್

೧೩. ಹಿರಿಯ ಹಿತೈಷಿ / ೪೫೫

- ಡಾ.ಸಿ.ಎಂ.ರವಿ

೧೪. ಪಿತೃದೇವೋಭವ! / ೪೫೮

- ಪಲ್ಲವಿ ಲೋಲಾಕ್ಷ

೧೫. ನಾನು ಕಂಡಂತೆ ನನ್ನ ಬದುಕು / ೪೬೨

- ಜಿ.ಹೆಚ್.ಪ್ರಸಾದ್

- ಜಿ.ಹೆಚ್.ಪ್ರಸಾದ್ : ವೈಯಕ್ತಿಕ ವಿವರ / ೪೯೩
- ಸಂಪಾದಕರ ಪರಿಚಯ / ೪೯೫
- ಲೇಖಕರ ವಿಳಾಸಗಳು / ೪೯೭
- ಸಂಪದದ ಪ್ರಕಟಣೆಗಳು / ೫೦೦

೧

# ಮಧ್ಯಯುಗದ ಕಾನೂನುಕ್ಷೇತ್ರದ ಏಕಮೇವ ಅದ್ವಿತೀಯ ಟೀಕಾಕಾರ : ವಿಜ್ಞಾನೇಶ್ವರ

**ಪ್ರೊ. ಬಿ. ಎನ್. ಸಂಪತ್**

ಪ್ರಾಚೀನಭಾರತದ ಕಾನೂನುಸಾಹಿತ್ಯ ಆಗಸದ ಮಿನುಗುತಾರೆ ಒಬ್ಬ ಕನ್ನಡಿಗನೆಂದರೆ ಇಂದಿನ ಜನ ಹುಬ್ಬೇರಿಸಬಹುದು. ಸುಮಾರು ಒಂದುಸಾವಿರ ವರ್ಷಗಳ ಹಿಂದೆ ಅವನು ರಚಿಸಿದ ಗ್ರಂಥ ಒಂದೆರಡು ಶತಮಾನಗಳೊಳಗೆ ದೇಶಾದ್ಯಂತ ವಿದ್ವಾಂಸರ ಮೆಚ್ಚುಗೆ ಗಳಿಸಿತ್ತು ಎಂದರೆ ಅನೇಕರಿಗೆ ಆಶ್ಚರ್ಯವಾಗಬಹುದು. ಆ ಗ್ರಂಥ ಪ್ರತಿಪಾದಿಸಿರುವ ಅನೇಕ ಸಿದ್ಧಾಂತಗಳು ಇಂದೂ ತಮ್ಮ ಸಾಂಗತ್ಯವನ್ನುಳಿಸಿಕೊಂಡು ಅಧಿಕ ಸಂಖ್ಯೆಯ ಹಿಂದೂಜನರ ಜೀವನವನ್ನು ನಿಯಂತ್ರಿಸುತ್ತಿವೆ ಎಂದರೆ ಮತ್ತಷ್ಟು ಅಚ್ಚರಿಯುಂಟಾಗಬಹುದು. ಇಂತಹ ಮೇಧಾವಿ ಕನ್ನಡಿಗ ವಿದ್ವಾಂಸನನ್ನು ನಾವೆಲ್ಲಾ ಸಂಪೂರ್ಣವಾಗಿ ಮರೆತುಬಿಟ್ಟೆವು ಎಂದು ಹೇಳಿದರೆ ಯಾರಿಗಾದರೂ ಇದೇನು ಒಗಟಿನಂತಿರುವುದೆನ್ನಿಸಬಹುದು. ಎರಡುಸಾವಿರ ವರ್ಷಗಳ ಹಿಂದಿನ ಸಾಧ್ವಿಯೊಬ್ಬಳ ಕಥೆಯನ್ನು - ಅದು ಸತ್ಯವಾಗಿರಬಹುದು ಅಥವಾ ಕಾಲ್ಪನಿಕವಾಗಿರಬಹುದು - ಇಂದಿಗೂ ಚಪ್ಪರಿಸುತ್ತಾ, ಎದೆಯುಬ್ಬಿಸಿ ತಮ್ಮ ಜನರಲ್ಲಿ ಆ ಕಥೆಯನ್ನು ಪ್ರಸಾರ ಮಾಡುತ್ತಾ, ಅದರ ಆಧಾರದ ಮೇಲೆ ಇಂದಿಗೂ ಕಮ್ಮಟಗಳನ್ನು ನಡೆಸುತ್ತಾ, ಅನೇಕ ಪಿಎಚ್.ಡಿ. ಪ್ರಬಂಧಗಳನ್ನು ಸೃಷ್ಟಿಸುತ್ತಾ, ತಮ್ಮ ಭಾಷೆ ಮತ್ತು ಸಂಸ್ಕೃತಿಗಳನ್ನು ಹೆಗ್ಗಳಿಕೆಯಿಂದ ನಡೆಸಿಕೊಳ್ಳುತ್ತಿರುವ ನಮ್ಮ ನೆರೆಯನಾಡಿನ ತಮಿಳರನ್ನು ನೋಡಿದಾಗ ಇಂದಿನ ಕನ್ನಡಿಗ ತಲೆತಗ್ಗಿಸಬೇಕಾದ್ದು ಖಂಡಿತ. ಸಾಧ್ವಿ ಕನ್ನಗಿಯ ಕಥೆ ಮತ್ತು ಅದು ಎತ್ತಿಹಿಡಿಯುವ ಮೌಲ್ಯಗಳ ಪ್ರಸಕ್ತ ಔಚಿತ್ಯದ ಬಗ್ಗೆ ಇಂದಿನ ತಮಿಳುಜನರೇ ಪ್ರಶ್ನಾರ್ಥಕ ಚಿಹ್ನೆಯನ್ನೆತ್ತಿದರೆ ಆಶ್ಚರ್ಯವೇನಿಲ್ಲ. ಆದರೆ ಪ್ರಪಂಚದ ಯಾವುದೇ ಭಾಗದಲ್ಲಿ ನೆಲೆಸಿರುವ ತಮಿಳರನ್ನು ಪ್ರಶ್ನಿಸಿದರೂ ಕನ್ನಗಿಯ ಕಥೆಯನ್ನರಿಯದವರಿಲ್ಲವೆನ್ನುವುದು ನಮಗೆ ಮನವರಿಕೆಯಾಗುತ್ತದೆ. ಈ ಚಿತ್ರ ನಮ್ಮ ಮುಂದೆ ಬಂದಾಗ ಕನ್ನಡನಾಡಿನ ಸಾಮಾನ್ಯ ಜನರಿರಲಿ, ಕಾನೂನು

ಬಲ್ಲವರೇ ಅಂತಹ ಅನರ್ಘ್ಯರತ್ನವನ್ನು ಮರೆತುಬಿಟ್ಟರೆಂದರೆ, ಕನ್ನಡಿಗರ ನತದೃಷ್ಟತನದ ಅರಿವುಂಟಾಗುತ್ತದೆ.

ಆ ಕನ್ನಡಿಗ ಧ್ರುವತಾರೆ ಮತ್ಯಾರೂ ಅಲ್ಲ, ಅವನೇ ಪರಮಹಂಸಯೋಗೀಶ್ವರನಾದ ವಿಜ್ಞಾನೇಶ್ವರ; ಯಾಜ್ಞವಲ್ಕ್ಯಸ್ಮೃತಿಯ ಮೇಲೆ 'ಮಿತಾಕ್ಷರಾ' ಎಂಬ ಮಹಾನ್ ಟೀಕಾಗ್ರಂಥವನ್ನು ರಚಿಸಿ ಅಮರನಾದವ. ದಕ್ಷಿಣಭಾರತದ ಕಲ್ಯಾಣದ ಚಾಲುಕ್ಯ ವಿಕ್ರಮಾದಿತ್ಯನ ಕಾಲದಲ್ಲಿ ಅವನು ಆಸ್ಥಾನ ಪಂಡಿತನಾಗಿದ್ದವ. ಈ ಅದ್ವಿತೀಯ ವಿದ್ವಾಂಸನಿಂದ ರಚಿಸಲ್ಪಟ್ಟ ಟೀಕಾಗ್ರಂಥ ಸಂಪೂರ್ಣ ಭಾರತದ ಮೇಲೆ (ಬಂಗಾಳವನ್ನು ಬಿಟ್ಟು) ಎಷ್ಟು ಪ್ರಭಾವ ಬೀರಿತೆಂದರೆ[1] ಅವನ ನಂತರ ಬಂದ ಅನೇಕ ವಿದ್ವಾಂಸರು ವಿಜ್ಞಾನೇಶ್ವರ ಪ್ರತಿಪಾದಿಸಿರುವ ವಿಚಾರಗಳ ಪರವಾಗಿ ಅಥವಾ ವಿರೋಧವಾಗಿ ತಮ್ಮ ಗ್ರಂಥಗಳಲ್ಲಿ ದೀರ್ಘವಾಗಿ ಚರ್ಚಿಸಿ ತಮ್ಮ ವಿಚಾರ ಪ್ರತಿಪಾದನೆ ಮಾಡಿದ್ದಾರೆ. ಸಂಪರ್ಕ ಸಾಧನಗಳು ಲಭ್ಯವಿಲ್ಲದ ಆ ಕಾಲದಲ್ಲಿ, ಅಷ್ಟು ಅಲ್ಪಸಮಯದಲ್ಲಿಯೇ ಭಾರತಾದ್ಯಂತ ಈ ಮೇಧಾವಿಯ ವಿಚಾರಗಳ ಪ್ರಸಾರ ಹೇಗೆ ಸಾಧ್ಯವಾಯಿತು ಎನ್ನುವುದೇ ಒಂದು ಆಶ್ಚರ್ಯದ ಸಂಗತಿ. ಮಧ್ಯಯುಗದಲ್ಲೇ 'ಮಿತಾಕ್ಷರಾ' ಗ್ರಂಥ ಎಷ್ಟು ಪ್ರಸಿದ್ಧಿ ಪಡೆಯಿತೆಂದರೆ, ವಿಜ್ಞಾನೇಶ್ವರನ ಕಾಲದವರೆವಿಗೂ ಅನೇಕ ವಿದ್ವನ್ಮಣಿಗಳು ಸ್ಮೃತಿ ಮತ್ತು ಸೂತ್ರಗ್ರಂಥಗಳ ಮೇಲೆ ಟೀಕಾಗ್ರಂಥಗಳನ್ನು ರಚಿಸಿದ್ದರೆ, ಅವನ ನಂತರ ಬಂದ ಅನೇಕ ವಿದ್ವಾಂಸರು 'ಮಿತಾಕ್ಷರಾ'ವನ್ನೇ ವಿಷಯ-ವಸ್ತುವನ್ನಾಗಿಟ್ಟುಕೊಂಡು ತಮ್ಮ ಕೃತಿಗಳನ್ನು ರಚಿಸಿದ್ದಾರೆ. ಈ ಅಪೂರ್ವ ಯಶಸ್ಸು ದೊರೆತಿದ್ದು ಒಬ್ಬ ಕನ್ನಡಿಗನಿಗೆಂದರೆ ಕನ್ನಡನಾಡಿನ ಯಾರಾದರೂ ಹೆಮ್ಮೆಪಡುವಂತಹದ್ದು. ಮತ್ತೊಂದು ವಿಶೇಷವೆಂದರೆ, ಹದಿನೆಂಟನೆಯ ಶತಮಾನದಿಂದೀಚೆಗೆ 'ಮಿತಾಕ್ಷರಾ' ಹೆಸರಿನಲ್ಲಿಯೇ ಕಾನೂನಿನ ಒಂದು ಪ್ರಮುಖ ಶಾಖೆಯೇ ಉದಯವಾಯಿತು.[2] ಸ್ವಾತಂತ್ರ್ಯಪೂರ್ವದಲ್ಲಿ ಪಾಶ್ಚಾತ್ಯವಿದ್ವಾಂಸರ ಜಾಡನ್ನನುಸರಿಸಿದ ಕೆಲವು ಭಾರತೀಯ ಲೇಖಕರು, ಆಂಗ್ಲ ನ್ಯಾಯಾಧೀಶರು ನ್ಯಾಯ ಇತ್ಯರ್ಥ ಮಾಡುವ ಸಂದರ್ಭದಲ್ಲಿ 'ಮಿತಾಕ್ಷರಾ'ವಿಗೆ ಹೆಚ್ಚು ಮಾನ್ಯತೆ ನೀಡಿ ಅದನ್ನು 'ಪೋಷಿಸಿದ್ದರಿಂದ', ಅದು ಅಷ್ಟೊಂದು ಲೋಕಪ್ರಸಿದ್ಧಿ ಪಡೆಯಿತು ಎನ್ನುವ ವಿಚಾರ ವ್ಯಕ್ತಪಡಿಸಿದ್ದಾರೆ. ಇದು ಸತ್ಯಕ್ಕೆ ದೂರವಾಗಿರುವುದರ ಜೊತೆಗೆ, ಆ ವಿದ್ವಾಂಸರ ಕೀಳರಿಮೆಯನ್ನು ಎತ್ತಿತೋರಿಸುತ್ತದೆ ಎನ್ನದೆ ವಿಧಿಯಿಲ್ಲ.

ಕಾನೂನುಸಾಹಿತ್ಯಕ್ಕೆ ವಿಜ್ಞಾನೇಶ್ವರನ ಕೊಡುಗೆಯನ್ನು ವಿಶ್ಲೇಷಿಸುವುದಕ್ಕೆ ಮೊದಲು ಅವನ ಕಾಲ ಮತ್ತು ಜೀವನಕ್ಕೆ ಸಂಬಂಧಿಸಿದ ಮಾಹಿತಿ ಏನಾದರೂ ದೊರೆಯುವುದೇ ನೋಡೋಣ. ಇಪ್ಪತ್ತನೆಯ ಶತಮಾನದ ಅನೇಕ ಬುದ್ಧಿಜೀವಿಗಳು ಪಾಶ್ಚಾತ್ಯರನ್ನನುಸರಿಸುತ್ತಾ "ಪ್ರಾಚೀನಭಾರತದ ವಿದ್ವಾಂಸರಿಗೆ ಐತಿಹಾಸಿಕ ಪ್ರಜ್ಞೆ ಇಲ್ಲ" ಎಂದು ದೂರುವುದನ್ನು ಪದೇ ಪದೇ ಕೇಳುತ್ತೇವೆ. ಆಧುನಿಕ ದೃಷ್ಟಿಕೋನದಿಂದ ಈ ಟೀಕೆಯಲ್ಲಿ ಸ್ವಲ್ಪ ಸತ್ಯವಿರಬಹುದು ಎನ್ನಿಸುತ್ತದೆ. ಏಕೆಂದರೆ ಮಧ್ಯಯುಗದಲ್ಲಿ ಬದುಕಿ ಬಾಳಿದ

ಅನೇಕ ಮಹಾನ್ ವಿದ್ವಾಂಸರು ಶ್ರೇಷ್ಠಕೃತಿಗಳನ್ನು ರಚಿಸಿದ್ದರೂ, ತಮ್ಮ ಬಗ್ಗೆ ಯಾವೊಂದು ವಿವರವನ್ನೂ ನೀಡದೆ ನಿರ್ಗಮಿಸಿದ್ದಾರೆ. ಈ ಕಾರಣದಿಂದ ಪ್ರಾಚೀನ ವಿದ್ವಾಂಸರ ಕಾಲ ಮತ್ತು ಅವರ ವೈಯಕ್ತಿಕ ಜೀವನದ ಬಗ್ಗೆ ವಿವರಗಳನ್ನು ಸಂಗ್ರಹಿಸಲು ಆಧುನಿಕರು ಸಾಕಷ್ಟು ಪ್ರಯಾಸಪಡಬೇಕಾಗುತ್ತದೆ. ಆದರೆ ನಾವು ಭಾರತೀಯರು ಇಂದು ನಮ್ಮ ಪ್ರಾಚೀನ ವಿದ್ಯಾ ಪರಂಪರೆಯ ಒಂದು ಮುಖ್ಯ ಸಂಪ್ರದಾಯವನ್ನೇ ಮರೆತಿದ್ದೇವೆ ಎಂದು ಸಂಕೋಚದಿಂದ ಹೇಳಬೇಕಾಗುತ್ತದೆ. ಈ ದೇಶದ ಪರಂಪರೆಯಲ್ಲಿ ವ್ಯಕ್ತಿಗಿಂತ ವಿಚಾರಕ್ಕೆ ಹೆಚ್ಚು ಮಹತ್ವ, ಮನ್ನಣೆ. ಅಂತಹ ಪರಂಪರೆಯಲ್ಲಿ ಒಬ್ಬ ವಿದ್ವಾಂಸನ ವೈಯಕ್ತಿಕ ಜೀವನದ ವಿವರಗಳು ಗೌಣ. ಅನೇಕ ವಿದ್ವಾಂಸರು ಶ್ರೇಷ್ಠಗ್ರಂಥಗಳ ಕರ್ತೃಗಳಾಗಿದ್ದರೂ ತಮ್ಮನ್ನು ವೈಯಕ್ತಿಕವಾಗಿ ಪರಿಚಯಿಸಿಕೊಳ್ಳಲು ಬಹಳ ಸಂಕೋಚಪಡುವುದನ್ನು ನಾವು ಕಾಣುತ್ತೇವೆ. ಅನೇಕರು ತಮ್ಮ ಹೆಸರನ್ನು ಸಹ ತಿಳಿಸುವುದಿಲ್ಲ. ಸುತ್ತಿ ಬಳಸಿ ಇಂತಹ ಗೋತ್ರದಲ್ಲಿ, ಇಂತಹ ವ್ಯಕ್ತಿಯ ಮಗನೆಂದಾಗಲೀ, ಇಂತಹ ಗುರುವಿನ ಶಿಷ್ಯನೆಂದಾಗಲೀ ಹೇಳಿಕೊಳ್ಳುವುದು ಅವರ ಪದ್ಧತಿ. "ಅಂಗುಲದ ಸಾಧನೆ ಮಾಡಿದವ ಮಾರುದ್ದದ 'ಬಯೋಡೇಟಾ'ವನ್ನು ಟಾಮ್ ಟಾಮ್ ಮಾಡುವ" ಪಾಶ್ಚಾತ್ಯ ಸಂಪ್ರದಾಯವನ್ನು ಅಳವಡಿಸಿಕೊಂಡಿರುವ ಇಂದಿನ ವಿದ್ವಾಂಸರಿಗೆ, ಪ್ರಾಚೀನ ಭಾರತದ ವಿದ್ವಾಂಸರ ನಮ್ರತೆ ಮತ್ತು ಅವರ ಸಂಪ್ರದಾಯ ಅರ್ಥವಾಗುವುದಿಲ್ಲವೇನೋ! ಈ ಸಂದರ್ಭದಲ್ಲಿ ಇಪ್ಪತ್ತನೆಯ ಶತಮಾನದ ಖ್ಯಾತ ಸಂಶೋಧಕರಾದ ಮಹಾ ಮಹೋಪಾಧ್ಯಾಯ ಪಾಂಡುರಂಗ ವಾಮನ ಕಾಣೆಯವರನ್ನು ನೆನೆಯಬೇಕು. ಅವರು ಐದು ಸಂಪುಟ, ಎಂಟು ಭಾಗಗಳಲ್ಲಿ 'ಧರ್ಮಶಾಸ್ತ್ರದ ಇತಿಹಾಸ' ಮಹಾನ್‌ಗ್ರಂಥವನ್ನು ರಚಿಸಿದ್ದರೂ, ತಮ್ಮ ಜೀವನದ ಬಗ್ಗೆ ಸ್ವಲ್ಪ ವಿವರಗಳನ್ನು ನೀಡಲು ಬಹಳ ಸಂಕೋಚ ಪಟ್ಟಿದ್ದಾರೆ. ಬಹಳ ಜನ ಮಿತ್ರರ ಮತ್ತು ಓದುಗರ ಒತ್ತಡದಿಂದ ತಮ್ಮ ಜೀವನದ ಬಗ್ಗೆ ಸ್ವಲ್ಪ ವಿವರ ನೀಡುತ್ತಿದ್ದೇನೆ ಎಂದಿದ್ದಾರೆ. ಐದನೆಯ ಸಂಪುಟದ ಎರಡನೆಯ ಭಾಗದ ಕೊನೆಯಲ್ಲಿ ಉಪಸಂಹಾರ ಶೀರ್ಷಿಕೆಯಲ್ಲಿ ಕೇವಲ ಹದಿನೇಳು ಪುಟಗಳಲ್ಲಿ ತಮ್ಮ ಜೀವನದ ಬಗ್ಗೆ ಬಹಳ ಅಲ್ಪ ವಿವರಗಳನ್ನು ನೀಡಿದ್ದಾರೆ!

ವಿಜ್ಞಾನೇಶ್ವರ ಮೇಲಿನ ಸಂಪ್ರದಾಯಕ್ಕೆ ಹೊರತಾದವನಲ್ಲ. ಅವನು ತನ್ನ ಹುಟ್ಟು ಹೆಸರನ್ನು ಸಹ ತಿಳಿಸುವುದಿಲ್ಲ. ತಾನು ಕಲ್ಯಾಣದ ನಿವಾಸಿಯಾಗಿ ಚಾಲುಕ್ಯ ವಿಕ್ರಮಾದಿತ್ಯ ಚಕ್ರವರ್ತಿಯ ಆಸ್ಥಾನಪಂಡಿತನಾಗಿದ್ದೆನೆಂದು, ಭಾರದ್ವಾಜಗೋತ್ರದ ಪದ್ಮನಾಭಭಟ್ಟನ ಮಗನೆಂದು ಮತ್ತು ಗುರು ಉತ್ತಮನ ಶಿಷ್ಯನೆಂದು ತನ್ನ ಗ್ರಂಥದ ಕೊನೆಯಲ್ಲಿ ಪರಿಚಯಿಸಿಕೊಳ್ಳುತ್ತಾನೆ. ಈಗ ಸಂಶೋಧಕರು ಗುಲ್ಬರ್ಗಾ ಬಳಿಯ ಮರ್ತೂರು ಕಳಿಂಗೇಶ್ವರ ದೇವಸ್ಥಾನದಲ್ಲಿ ದೊರಕಿರುವ ಶಾಸನದ ಆಧಾರದ ಮೇಲೆ ಅವನ ಬಗ್ಗೆ ಮಾಹಿತಿ ಕಲೆಹಾಕುವ ಪ್ರಯತ್ನ ಮಾಡುತ್ತಿದ್ದಾರೆ. ಕನ್ನಡಭಾಷೆಯಲ್ಲಿ ವಿಜ್ಞಾನೇಶ್ವರನ ಯಾವ ಕೃತಿಯೂ ಬೆಳಕಿಗೆ ಬರದಿದ್ದರೂ ಅವನು ಹುಟ್ಟಿ, ಬದುಕಿ, ಬಾಳಿದ ಪ್ರದೇಶ

ಮತ್ತು ಅವನ ಪೂರ್ವಜರ ಹೆಸರುಗಳನ್ನು ಗಮನಿಸಿದರೆ ವಿಜ್ಞಾನೇಶ್ವರ ಅಪ್ಪಟ ಕನ್ನಡಿಗನೆಂಬುದು ನಿಸ್ಸಂಶಯ. ಕೇವಲ ಸಂಸ್ಕೃತಭಾಷೆಯಲ್ಲಿ ಗ್ರಂಥಗಳನ್ನು ರಚಿಸಿದ್ದರಿಂದ ಅವನ ಕನ್ನಡಿಗತನಕ್ಕೆ ಯಾವ ಚ್ಯುತಿಯೂ ಬಾರದು! ಇಂದಿಗೂ ಅನೇಕ ಕನ್ನಡಿಗ ವಿದ್ವಾಂಸರು ತಮ್ಮ ಕೃತಿಗಳನ್ನು ಇಂಗ್ಲಿಷ್ ಮತ್ತಿತರ ಭಾಷೆಗಳಲ್ಲಿ ರಚಿಸಿ ಖ್ಯಾತಿಪಡೆದಿರುವುದನ್ನು ನಾವು ಕಾಣುವುದಿಲ್ಲವೇ?

ವಿಜ್ಞಾನೇಶ್ವರ ವಿರಚಿತ 'ಮಿತಾಕ್ಷರಾ' ಪ್ರತಿಪಾದಿಸಿದ ವಿಚಾರಗಳನ್ನು ವಿಶ್ಲೇಷಿಸುವ ಮುನ್ನ ಈ ದೇಶದಲ್ಲಿ 'ಹಿಂದೂ ಕಾನೂನು' ಬೆಳೆದುಬಂದ ರೀತಿಗೆ ಗಮನ ನೀಡುವುದು ಅಗತ್ಯ. ಮೊಟ್ಟಮೊದಲಿಗೆ ಈ 'ಹಿಂದೂ ಕಾನೂನು' ಎನ್ನುವ ಎರಡು ಶಬ್ದಗಳತ್ತ ಗಮನ ಹರಿಸೋಣ. ಇಲ್ಲಿ ಕಾನೂನು ಶಬ್ದವನ್ನು ಆಂಗ್ಲ ನ್ಯಾಯಪ್ರಣಾಲಿಯಲ್ಲಿ ಬಳಕೆಯಲ್ಲಿರುವ 'ಲಾ' ಅಥವಾ 'ಪಾಸಿಟಿವ್ ಲಾ' ಎನ್ನುವ ಅರ್ಥದಲ್ಲಿ ಪ್ರಯೋಗಿಸಿದ್ದೇವೆ. ಸಂಕ್ಷೇಪವಾಗಿ ಹೇಳುವುದಾದರೆ, 'ಯಾವುದಾದರೂ ಸಮುದಾಯದ ಸದಸ್ಯರ ಲೌಕಿಕ ಜೀವನಕ್ಕೆ ಸಂಬಂಧಿಸಿದ ವ್ಯವಹಾರಗಳನ್ನು ನಿಯಂತ್ರಿಸುವ ನಿಯಮಗಳ ಸಮೂಹವೇ 'ಕಾನೂನು' ಅಥವಾ 'ಲಾ'.[೩] ಇದೇರೀತಿ 'ಹಿಂದೂ' ಶಬ್ದವೂ ತನ್ನದೇ ಆದ ಅರ್ಥ ಮತ್ತು ರೋಚಕ ಇತಿಹಾಸವುಳ್ಳದ್ದಾಗಿದೆ. ಭಾರತದಲ್ಲಿ ಕಾನೂನುಸಾಹಿತ್ಯ ಪ್ರಾಚೀನಕಾಲದಿಂದ ವಿಪುಲವಾಗಿ ಬೆಳೆದುಬಂದಿದ್ದರೂ ಎಲ್ಲೂ 'ಹಿಂದೂ' ಶಬ್ದದ ಪ್ರಯೋಗವಿಲ್ಲ. ಅನಾದಿಕಾಲದಿಂದಲೂ ಈ ಉಪಖಂಡದಲ್ಲಿ ವಾಸಿಸುತ್ತಾ, ತಮ್ಮದೇ ಆದ ಒಂದು ಜೀವನಶೈಲಿಯನ್ನು ಅನುಸರಿಸುತ್ತಾ, ತಮ್ಮದೇ ವಿಶಿಷ್ಟ ಸಂಸ್ಕೃತಿ, ಸಾಹಿತ್ಯ, ಆಚಾರ, ವಿಚಾರಗಳಿಗೆ ಜನ್ಮನೀಡಿದ ವಿಶಾಲ ಜನಸಮುದಾಯಕ್ಕೆ ಪರಕೀಯರು ನೀಡಿದ ನಾಮಧೇಯವೇ 'ಹಿಂದೂ' ಶಬ್ದ! ಇದು ವಿಚಿತ್ರವಾಗಿ ಕಂಡುಬಂದರೂ ಒಂದು ಐತಿಹಾಸಿಕ ಸತ್ಯ. ಈ ಸಂದರ್ಭದಲ್ಲಿ ನಾವು ಗಮನಿಸಬೇಕಾದ ಒಂದು ಮುಖ್ಯ ವಿಚಾರವೆಂದರೆ, ಈ ವಿಶಾಲ ಜನಸ್ತೋಮ ಅನಾದಿಕಾಲದಿಂದ ತನ್ನ ಸಾಹಿತ್ಯ, ಸಂಸ್ಕೃತಿ, ದರ್ಶನ, ವ್ಯವಹಾರ ಮತ್ಯಾವುದೇ ಕ್ಷೇತ್ರದಲ್ಲಾದರೂ ವಿವಿಧ ಅರ್ಥದಲ್ಲಿ ಪ್ರಯೋಗಿಸಿರುವ ಶಬ್ದವೆಂದರೆ 'ಧರ್ಮ'. ಮನುಷ್ಯನ ಜೀವನದಲ್ಲಿ ಈ 'ಧರ್ಮ' ಹೆಜ್ಜೆ ಹೆಜ್ಜೆಗೂ ಅವನ ಎಡೆಬಿಡದೆ, ಅವನ ಸಕಲ ವ್ಯವಹಾರಗಳನ್ನು ನಿಯಂತ್ರಿಸುತ್ತಾ ಬಂದಿದೆ.[೪] ವ್ಯಕ್ತಿಯ ಜೀವನದಲ್ಲಿ ಧರ್ಮ ನಿಯಂತ್ರಿಸದ ಕ್ಷೇತ್ರವೇ ಇಲ್ಲ ಎನ್ನಬಹುದು. ಈ ಧರ್ಮಪ್ರತಿಪಾದನೆಯ ದಿಸೆಯಲ್ಲಿ ಈ ದೇಶದ ಜನ ವಿಶಾಲಸಾಹಿತ್ಯವನ್ನು ಅಸ್ತಿತ್ವಕ್ಕೆ ತಂದರು. ಅದೇ 'ಧರ್ಮಶಾಸ್ತ್ರಸಾಹಿತ್ಯ'. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದರೆ, ಈ ಶಾಸ್ತ್ರಸಾಹಿತ್ಯ ಲೌಕಿಕ ವಿಷಯಗಳನ್ನು ನಿಯಂತ್ರಿಸುವಂತೆಯೇ ಪಾರಮಾರ್ಥಿಕ ವಿಚಾರಗಳಿಗೂ ಗಮನ ನೀಡಿದೆ. ನ್ಯಾಯಾಧೀಶನಿಗೆ ಇರಬೇಕಾದ ಯೋಗ್ಯತೆಗಳು, ನ್ಯಾಯ ಇತ್ಯರ್ಥ ಮಾಡುವಾಗ ಅವನು ನಡೆದುಕೊಳ್ಳಬೇಕಾದ ರೀತಿಗೆ ಗಮನನೀಡುವ ಶಾಸ್ತ್ರಕಾರ, ಅಷ್ಟೇ ಕಾಳಜಿಯಿಂದ ಶ್ರಾದ್ಧಕರ್ಮದ ಬಗ್ಗೆಯೂ ತನ್ನ ವಿಚಾರವನ್ನು

ವ್ಯಕ್ತಪಡಿಸುತ್ತಾನೆ. ವಿವಾಹ ಸಂಸ್ಕಾರದ ಔಪಚಾರಿಕತೆಗಳನ್ನು ವಿವರಿಸುವ ಸ್ಮೃತಿಕಾರ, ಆಸ್ತಿವಿಭಜನೆಗೆ ಸಂಬಂಧಿಸಿದ ನವಿರಾದ ಸಿದ್ಧಾಂತಗಳನ್ನೂ ಪ್ರತಿಪಾದಿಸುತ್ತಾನೆ. ಈ ರೀತಿ ಶಾಸ್ತ್ರನಿರೂಪಣೆ ಮಾಡಿರುವುದು ಅನೇಕ ಸಮಸ್ಯೆಗಳಿಗೆ, ಆಧುನಿಕಕಾಲದಲ್ಲಿ, ಎಡೆಕೊಟ್ಟಿದೆ ಎನ್ನುವುದು ಮತ್ತೊಂದು ವಿಚಾರ. ವಿಶಾಲವಾದ ಧರ್ಮಶಾಸ್ತ್ರಸಾಹಿತ್ಯದಲ್ಲಿ ಕಾನೂನಿಗೆ ಸಂಬಂಧಿಸಿದ ನೀತಿ, ನಿಯಮಗಳನ್ನು ಹೆಕ್ಕಿ ತೆಗೆದಾಗ ಅದು 'ಹಿಂದೂ ಕಾನೂನು' ಎನ್ನಿಸಿಕೊಳ್ಳುತ್ತದೆ.[೫] ಅಂದರೆ ಹಿಂದೂ ಕಾನೂನು ವಿಪುಲ ಧರ್ಮಶಾಸ್ತ್ರಸಾಹಿತ್ಯದ ಒಂದು ಸಣ್ಣ ಭಾಗ ಎನ್ನಬಹುದು.

ವಿಶ್ವ ಕಾನೂನುಸಾಹಿತ್ಯದ ಸಮೀಕ್ಷೆ ಮಾಡಿದಾಗ ನಮಗೆ ಕಂಡುಬರುವ ಎರಡು ಪ್ರಾಚೀನ ಕಾನೂನುಪ್ರಣಾಲಿಗಳೆಂದರೆ ಯಹೂದಿ ಕಾನೂನು ಮತ್ತು ಹಿಂದೂ ಕಾನೂನು. ಈ ಎರಡು ಕಾನೂನುಗಳ ಪರಂಪರೆಯನ್ನು ನಾವು ಕೊನೆಯ ಪಕ್ಷ ಮೂರೂವರೆಸಾವಿರ ವರ್ಷಗಳಿಂದ ಗುರುತಿಸಬಹುದು. ಆದರೆ ಈ ಎರಡು ಕಾನೂನುಗಳ ವಿಕಾಸದಲ್ಲಿ ನಾವು ಒಂದು ಮುಖ್ಯ ವ್ಯತ್ಯಾಸವನ್ನು ಕಾಣುತ್ತೇವೆ. ಯಹೂದಿ ಕಾನೂನಿನ ವಿಕಾಸ ಕ್ರಿ.ಪೂ.ಹದಿನೈದುನೂರಕ್ಕೆ ಆರಂಭಗೊಂಡು ಕ್ರಿಸ್ತಶಕೆಯ ಒಂದೆರಡು ಶತಮಾನಗಳ ಹಿಂದೆ ಘಟಿಸಿದ 'ರಾಜಕೀಯ ಪ್ರಳಯ'ದಿಂದಾಗಿ 'ಯಹೂದಿಗಳ ಚದರುವಿಕೆ'ಯಲ್ಲಿ ಮುಕ್ತಾಯವಾಯಿತು. ಈ ಐತಿಹಾಸಿಕ ದುರಂತವನ್ನು ಪಾಶ್ಚಿಮಾತ್ಯರು 'ಡಯಾಸ್ಪರ' ಎಂದು ಕರೆಯುತ್ತಾರೆ. ಈ ಘಟನೆಯಿಂದ ಯಹೂದಿ ಕಾನೂನಿನ ಭೌಗೋಳಿಕಾನ್ವಯ ಸಮಾಪ್ತಿಗೊಂಡಿತು. ವಿಶ್ವದ ವಿವಿಧ ದೇಶಗಳಿಗೆ ವಲಸೆಹೋಗಿ ನೆಲಸಿದ ರಾಜ್ಯಭ್ರಷ್ಟ ಯಹೂದಿಗಳ ಜೀವನದ ಮೇಲೆ ಅವರ ಪರಂಪರಾಗತ ಧಾರ್ಮಿಕ ವಿಚಾರಗಳು ಪ್ರಭಾವ ಬೀರಿದ್ದರೂ, ಅವರು ಎದುರಿಸಬೇಕಾಗಿದ್ದ ನಿಷ್ಠುರ ಜೀವನಸ್ಥಿತಿಯಿಂದಾಗಿ, ಅವರ ಕಾನೂನಿನ ಸಮುಚ್ಚಯ ವಿಕಾಸ ಕುಂಠಿತವಾಯಿತು. ಸೌಭಾಗ್ಯವಶಾತ್ ಭಾರತೀಯರ ಇತಿಹಾಸ ಮತ್ತೊಂದು ಹಾದಿ ಹಿಡಿಯಿತು. ಈ ದೀರ್ಘ ಅವಧಿಯಲ್ಲಿ ಅವರು ಅನೇಕ ಆಕ್ರಮಣಗಳಿಗೆ ತುತ್ತಾಗಿ, ಸಾಕಷ್ಟು ರಕ್ತಪಾತಕ್ಕೆ ಗುರಿಯಾಗಿದ್ದರೂ, ಭಾರತದೇಶದ ತಮ್ಮ ನೆಲೆಯಲ್ಲೇ ಇದ್ದು, ಸಂಘರ್ಷಮಯ ಜೀವನವನ್ನು ಎದುರಿಸುತ್ತಾ ತಮ್ಮ ಸಂಸ್ಕೃತಿ ಮತ್ತು ಸಾಹಿತ್ಯವನ್ನು ಸಾಕಷ್ಟು ವಿಪುಲವಾಗಿ ಬೆಳೆಸಿದರು. ಹಿಂದೂಗಳ ಧರ್ಮಸಾಹಿತ್ಯ ಪರಂಪರೆಯನ್ನು ಕೊನೆಯ ಪಕ್ಷ ಮೂರುಸಾವಿರ ವರ್ಷಗಳ (ಇದು ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯಕ್ಕೂ ಅನುಗುಣವಾಗಿದೆ!) ಅವ್ಯಾಹತ ವಿಕಾಸದಲ್ಲಿ ನಾವು ಗುರುತಿಸಬಹುದು. ಭಾರತರತ್ನ ಪಾಂಡುರಂಗ ವಾಮನ ಕಾಣೆಯವರಿಗೆ ನಮ್ಮ ದೇಶ ಮತ್ತು ಜನ ಚಿರಋಣಿಗಳಾಗಿರಬೇಕು. ಅವರ ವಿಶ್ವಮಾನ್ಯ ಗ್ರಂಥ 'ಧರ್ಮಶಾಸ್ತ್ರ ಇತಿಹಾಸ' ಆರುಸಾವಿರಕ್ಕೂ ಮೀರಿದ ಪುಟಗಳಲ್ಲಿ ಕಾನೂನು ಸೇರಿ ಜೀವನದ ಎಲ್ಲಾ ವಿಷಯಗಳಿಗೂ ಸಂಬಂಧಿಸಿದ ಸಾಹಿತ್ಯವಿಕಾಸಕ್ಕೆ ಕನ್ನಡಿ ಹಿಡಿದಿದೆ.

ಹಿಂದೂ ಕಾನೂನುಸಾಹಿತ್ಯ ಪ್ರಕಾರದಲ್ಲಿ ವಿಜ್ಞಾನೇಶ್ವರನ ಕೊಡುಗೆಯನ್ನು ವಿಶ್ಲೇಷಿಸುವ ಮುನ್ನ ಧರ್ಮಶಾಸ್ತ್ರಸಾಹಿತ್ಯ ವಿಕಾಸದಲ್ಲಿ ಟೀಕಾಕಾರರ ಪಾತ್ರದೆಡೆಗೆ ಸಂಕ್ಷೇಪವಾಗಿ ಗಮನ ನೀಡುವುದು ಅಗತ್ಯ. ಧರ್ಮಶಾಸ್ತ್ರಸಾಹಿತ್ಯಕ್ಕೆ ನಾಂದಿಯಾದ ವೈದಿಕ ಪರಂಪರೆ ಸುಮಾರು ಕ್ರಿ.ಪೂ.೨೦ನೇ ಶತಮಾನದಲ್ಲಿ ಆರಂಭಗೊಂಡು ಕ್ರಿ.ಶ.೬ನೇ ಶತಮಾನದವರೆವಿಗೂ ಸೂತ್ರ ಮತ್ತು ಸ್ಮೃತಿಸಾಹಿತ್ಯಗಳ ರೂಪದಲ್ಲಿ ವ್ಯಾಪಕವಾಗಿ ಬೆಳೆಯಿತೆಂಬುದು ಆಧುನಿಕ ವಿದ್ವಾಂಸರ ಅಭಿಮತ. ನಾವು ಇಲ್ಲಿ ಎರಡು ಅಂಶಗಳ ಕಡೆಗೆ ಗಮನ ನೀಡಬೇಕು. ಈ ರೀತಿಯ ಕಾಲನಿರ್ಣಯವನ್ನು ಸಂಪ್ರದಾಯಸ್ಥ ಪಂಡಿತರು ಒಪ್ಪುವುದಿಲ್ಲ; ಮತ್ತೊಂದು, ಸೂತ್ರಸಾಹಿತ್ಯ ವಿಕಾಸವನ್ನು ಕ್ರಿ.ಪೂ.೮ನೇ ಶತಮಾನದಿಂದ ಕ್ರಿ.ಪೂ.೩ನೇ ಶತಮಾನದವರೆವಿಗೂ, ಸ್ಮೃತಿಸಾಹಿತ್ಯದ ಪರಂಪರೆಯನ್ನು ಕ್ರಿ.ಪೂ.೩ನೇ ಶತಮಾನದಿಂದ ಕ್ರಿ.ಶ.೬ನೇ ಶತಮಾನದವರೆಗೂ ಎಂದು ವಿದ್ವಾಂಸರು ಅಂದಾಜಿನ ಸೀಮಾ ನಿರ್ಧಾರ ಮಾಡಿದ್ದರೂ ಹಾಗೂ ಸೂತ್ರ ಮತ್ತು ಸ್ಮೃತಿಗ್ರಂಥಗಳು ಎರಡು ಭಿನ್ನ ಸಾಹಿತ್ಯವರ್ಗಕ್ಕೆ ಸೇರಿದ್ದರೂ, ಧರ್ಮಶಾಸ್ತ್ರಕಾರರು ಇವೆರಡನ್ನೂ 'ಸ್ಮೃತಿ' ಶಬ್ದದ ವ್ಯಾಪ್ತಿಯೊಳಗೇ ತರುತ್ತಾರೆ.[೬] ಈ ಎರಡೂ ಅಂಶಗಳು ಪ್ರಸಕ್ತ ವಿಚಾರ ವಿಶ್ಲೇಷಣೆಗೆ ಗೌಣ.

ಭಾರತಾದ್ಯಂತ ಸೂತ್ರ ಮತ್ತು ಸ್ಮೃತಿಗಳ ರೂಪದಲ್ಲಿ ನೂರಾರು ಗ್ರಂಥಗಳು ರಚಿಸಲ್ಪಟ್ಟಿದ್ದರೂ, ಇವುಗಳಲ್ಲಿ ಬಹಳ ಕೃತಿಗಳು ಲುಪ್ತವಾಗಿ ಪೂರ್ಣರೂಪದಲ್ಲಿ ನಮ್ಮ ಕೈಸೇರಿರುವ ಗ್ರಂಥಗಳ ಸಂಖ್ಯೆ ಅತ್ಯಲ್ಪ. ಆದರೆ ಅವುಗಳೇ ನಮಗೆ ಹೇರಳವಾಗಿ ಕಾಣುತ್ತವೆ! ಈ ಕೃತಿಗಳ ಸೃಷ್ಟಿ ದೈವಕೃಪೆಯಿಂದಾಗಿದೆಯೆಂದು ಪ್ರತಿಯೊಬ್ಬ ಗ್ರಂಥಕಾರ ಹೇಳಿದ್ದರೂ, ದೇಶದ ವಿವಿಧ ಪ್ರಾಂತಗಳಲ್ಲಿ ರಚಿಸಲ್ಪಟ್ಟ ಈ ಸೂತ್ರ ಮತ್ತು ಸ್ಮೃತಿಗಳು, ಆಯಾ ಪ್ರದೇಶದ ನೀತಿ-ನಡವಳಿಕೆಗಳಿಂದ ಪ್ರಭಾವಿತವಾಗಿವೆ ಎನ್ನುವುದು ನಿರ್ವಿವಾದ. ಸೂತ್ರಕಾರರು ಕೆಲವು ಪ್ರದೇಶಗಳ ವಿಶೇಷ ಪದ್ಧತಿಗಳನ್ನು ಉಲ್ಲೇಖಿಸುತ್ತಾ ಅಂತಹ ರೂಢಿಗಳು ಇಂತಿಂತಹ ಪ್ರದೇಶಗಳಲ್ಲಿ ಮಾತ್ರ ಕಂಡುಬರುತ್ತವೆ ಎಂಬುದನ್ನು ಸೂಚಿಸುತ್ತಾರೆ.[೭] ಈ ರೀತಿ ಆಚಾರ ವಿಚಾರಗಳಲ್ಲಿ ವೈವಿಧ್ಯತೆ ಕಂಡುಬರುವುದರಿಂದ ಈ ಗ್ರಂಥಗಳಲ್ಲಿ ಪರಸ್ಪರ ಮತಭೇದ ಕಂಡುಬರುವುದು ಸಹಜವೇ. ಕಾನೂನಿಗೆ ಸಂಬಂಧಿಸಿದ ಅನೇಕ ವಿಷಯಗಳಲ್ಲಿ ಮನು ಯಾಜ್ಞವಲ್ಕ್ಯರು, ನಾರದ ಬೃಹಸ್ಪತಿಗಳು, ಕಾತ್ಯಾಯನ ಪರಾಶರರು ಪರಸ್ಪರ ಭಿನ್ನಮತವನ್ನು ವ್ಯಕ್ತಪಡಿಸಿದ್ದಾರೆ. ಪ್ರಾಚೀನ ಗ್ರಂಥಕರ್ತರು ಈ ರೀತಿ ವಿರುದ್ಧ ವಿಚಾರಗಳನ್ನು ವ್ಯಕ್ತಪಡಿಸಿದಾಗ ದೇಶದ ಪ್ರಶಾಸನ ಮತ್ತು ನ್ಯಾಯಪರಿಪಾಲನೆ ಮಾಡುವ ಜವಾಬ್ದಾರಿ ಹೊತ್ತವರು ಒಂದು ಇಕ್ಕಟ್ಟಿನ ಸನ್ನಿವೇಶಕ್ಕೆ ಸಹಜವಾಗಿಯೇ ಸಿಲುಕುತ್ತಾರೆ. ಪರಸ್ಪರ ವಿರೋಧ ವಿಚಾರಗಳನ್ನು ವ್ಯಕ್ತಮಾಡುವ ಸ್ಮೃತಿವಾಕ್ಯಗಳನ್ನು ಹೇಗೆ ಸಮನ್ವಯ ಮಾಡುವುದೆಂಬುದನ್ನು ಮೀಮಾಂಸಕಾರರು ತಮ್ಮ ನ್ಯಾಯಗಳಲ್ಲಿ ತಿಳಿಸಿದ್ದರೂ, ಇದೊಂದು ಕಠಿಣವಾದ ಕೆಲಸ. ಉದಾಹರಣೆಗೆ, ಒಂದು ವಿವಾದದಲ್ಲಿ

ವಾದಿ-ಪ್ರತಿವಾದಿಗಳಿಬ್ಬರೂ ತಮ್ಮ ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಲು ಪರಸ್ಪರ ವಿರುದ್ಧ ಸ್ಮೃತಿವಾಕ್ಯಗಳನ್ನು ನ್ಯಾಯಾಧೀಶನ ಮುಂದೆ ಇಟ್ಟಾಗ ಅವನು ಧರ್ಮಸಂದೇಹದ ಕಾರಣದಿಂದ ಪೇಚಿನ ಸನ್ನಿವೇಶದಲ್ಲಿ ಸಿಲುಕುತ್ತಾನೆ.[೮] ನ್ಯಾಯಾಧೀಶ, 'ಮನು ಹೇಳಿರುವುದು ತಪ್ಪು, ಯಾಜ್ಞವಲ್ಕ್ಯ ತಿಳಿಸಿರುವುದು ಸರಿ' ಎಂದು ಹೇಳುವಂತಿಲ್ಲ. ಈ ಸಮಸ್ಯೆಯನ್ನು ಪರಿಹರಿಸಲು ಮತ್ತೊಂದು ವರ್ಗದ ಗ್ರಂಥಕರ್ತರು ಮುಂದೆ ಬಂದರು. ಅವರಲ್ಲಿ ಅನೇಕರು ರಾಜ-ಮಹಾರಾಜರು, ಕೆಲವರು ವಿಖ್ಯಾತ ಪಂಡಿತರು, ಮತ್ತೆ ಕೆಲವರು ನ್ಯಾಯಾಧೀಶರು ಮತ್ತು ಪ್ರಶಾಸನದ ಜವಾಬ್ದಾರಿ ಹೊತ್ತವರು, ಇನ್ನೂ ಕೆಲವರು ಆಧುನಿಕರಿಗೆ ಆಶ್ಚರ್ಯವುಂಟುಮಾಡುವಂತಹ 'ಸರ್ವವನ್ನೂ ತ್ಯಜಿಸಿದ' ಸನ್ಯಾಸಿಗಳು; ಆದರೆ ಪ್ರತಿಯೊಬ್ಬರೂ ಧರ್ಮಶಾಸ್ತ್ರಸಾಹಿತ್ಯದಲ್ಲಿ ಪ್ರಕಾಂಡ ವಿದ್ವಾಂಸರು - ಈ ಜವಾಬ್ದಾರಿಯನ್ನು ಹೊತ್ತರು. ಅವರೇ ಪ್ರಾಚೀನ ಭಾರತದಲ್ಲಿ ಪ್ರಕಾಶಿಸಿದ ಟೀಕಾಕಾರರು ಮತ್ತು ನಿಬಂಧಕಾರರು. ಕ್ರಿ.ಶ.೬ನೇ ಶತಮಾನದಿಂದ ಸುಮಾರು ೧೨೦೦ ವರ್ಷಗಳ ಕಾಲ ಈ ವಿದ್ವಾಂಸರು ಟೀಕಾ ಹಾಗೂ ನಿಬಂಧರೂಪದಲ್ಲಿ ಉತ್ಕೃಷ್ಟಗ್ರಂಥಗಳನ್ನು ನೀಡಿದವರು.

ಭಾರತದ ವಿವಿಧ ಪ್ರಾಂತಗಳಲ್ಲಿ ಬದುಕಿ ಬಾಳಿದ ಈ ಲೇಖಕರು ತಮ್ಮ ತಮ್ಮ ಪ್ರಾಂತಗಳ ಪ್ರಚಲಿತ ರೀತಿ, ನೀತಿ, ಅಗತ್ಯಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಸೂತ್ರ ಮತ್ತು ಸ್ಮೃತಿವಾಕ್ಯಗಳ ವ್ಯಾಖ್ಯಾನ ಮಾಡಿದರು. ಈ ಸಂದರ್ಭದಲ್ಲಿ ಟೀಕಾ ಮತ್ತು ನಿಬಂಧ ಗ್ರಂಥಗಳು ಅನುಸರಿಸಿದ ಹಾದಿ ಮತ್ತು ಅವುಗಳ ನಡುವಿನ ವ್ಯತ್ಯಾಸವನ್ನು ಗಮನಿಸುವುದು ಅಗತ್ಯ. ಟೀಕಾಕಾರ ತನಗೆ ಬಹಳ ಹಿಡಿಸಿದ ಮೂಲಗ್ರಂಥವನ್ನು ಆಧಾರವಾಗಿಟ್ಟುಕೊಂಡು- ಅದು ಯಾವುದೇ ಸೂತ್ರವಾಗಿರಬಹುದು ಅಥವಾ ಸ್ಮೃತಿಯಾಗಿರಬಹುದು-ಅದರ ಪ್ರತಿಯೊಂದು ವಾಕ್ಯವನ್ನು / ಶ್ಲೋಕವನ್ನು ಸರಳಶೈಲಿಯಲ್ಲಿ ವಿವರಿಸಲು ಪ್ರಯತ್ನಿಸುತ್ತಾನೆ. ತನ್ನ ಇಷ್ಟಸ್ಮೃತಿಯನ್ನು ಟೀಕಾಕಾರ ಕೇಂದ್ರದಲ್ಲಿರಿಸಿಕೊಂಡಿದ್ದರೂ ಬೇರೆ ಬೇರೆ ಋಷಿವಾಕ್ಯಗಳನ್ನು ಪ್ರಸ್ತಾಪಿಸುವುದು ಅವನ ಪದ್ಧತಿ. ಆದರೆ ನಿಬಂಧಕಾರ ತನಗೆ ಇಷ್ಟವಾದ ಯಾವುದಾದರೂ ವಿಷಯವನ್ನು ತೆಗೆದುಕೊಂಡು ಸರಳವಾಗಿ ಅದನ್ನು ಪ್ರತಿಪಾದಿಸುತ್ತಾನೆ. ಅವನೂ ಅನೇಕ ಸ್ಮೃತಿಗಳನ್ನು ಮತ್ತು ಸೂತ್ರಗಳನ್ನು ಯಾವ ಅಭ್ಯಂತರವೂ ಇಲ್ಲದೆ ಪ್ರಾಸ್ತಾಪಿಸಬಹುದು. ಟೀಕಾ ಮತ್ತು ನಿಬಂಧಗ್ರಂಥಗಳ ನಡುವಿನ ಮುಖ್ಯ ವ್ಯತ್ಯಾಸವೆಂದರೆ ಟೀಕೆ ವ್ಯಕ್ತಿನಿಷ್ಠೆಗೆ ಪ್ರಾಮುಖ್ಯ ನೀಡಿದರೆ, ನಿಬಂಧಕಾರ ವಿಷಯನಿಷ್ಠೆಗೆ ಬದ್ಧನಾಗಿರುತ್ತಾನೆ.

ಟೀಕಾಕಾರರ ಶ್ರೇಣಿಯಲ್ಲಿ ಸರ್ವೋನ್ನತ ಸ್ಥಾನ ಪಡೆದವನು ಕಲ್ಯಾಣದ ನಿವಾಸಿ ವಿಜ್ಞಾನೇಶ್ವರ. ಅವನ ಕೃತಿ 'ಮಿತಾಕ್ಷರಾ'; ಯಾಜ್ಞವಲ್ಕ್ಯಸ್ಮೃತಿಯ ಮೇಲೆ ಬರೆದ ಮಹಾನ್ ಟೀಕೆ. ವಿಜ್ಞಾನೇಶ್ವರನ ಹಿಂದೆ ವಿಶ್ವರೂಪ ಮತ್ತಿತರ ಟೀಕಾಕಾರರುಗಳು ಯಾಜ್ಞವಲ್ಕ್ಯಸ್ಮೃತಿಯ ಮೇಲೆ ಟೀಕಾಗ್ರಂಥಗಳನ್ನು ರಚಿಸಿದ್ದರೂ ವಿಜ್ಞಾನೇಶ್ವರ ಏರಿದ ಎತ್ತರಕ್ಕೆ ಯಾರೂ ತಲುಪಲಿಲ್ಲ ಎಂದು ಧಾರಾಳವಾಗಿ ಹೇಳಬಹುದು. ಈ ಕಾರಣದಿಂದಲೇ

ಪಿ.ವಿ.ಕಾಣೆಯವರು 'ಮಿತಾಕ್ಷರಾ'ವನ್ನು ವ್ಯಾಕರಣದಲ್ಲಿ ಪತಂಜಲಿಯ ಮಹಾಭಾಷ್ಯಕ್ಕೆ, ಕಾವ್ಯಮೀಮಾಂಸೆಯಲ್ಲಿ ಮಮ್ಮಟನ ಕಾವ್ಯಪ್ರಕಾಶಕ್ಕೆ ಹೋಲಿಸುತ್ತಾರೆ. ಕಾನೂನುಕ್ಷೇತ್ರದಲ್ಲಿ ವಿಜ್ಞಾನೇಶ್ವರನ ಹಿರಿಮೆಯನ್ನು ಎತ್ತಿಹಿಡಿಯಲು 'ಮಿತಾಕ್ಷರಾ'ವನ್ನು ವಿವರವಾಗಿ ವಿಶ್ಲೇಷಿಸಿ ಸಂಪೂರ್ಣ ಧರ್ಮಶಾಸ್ತ್ರ ಸಾಹಿತ್ಯಾವಲೋಕನ ಮಾಡಬೇಕಾಗುತ್ತದೆ! ಕಾನೂನಿನ ಯಾವ ಕ್ಷೇತ್ರ ತೆಗೆದುಕೊಂಡರೂ ಅದರಲ್ಲಿ ವಿಜ್ಞಾನೇಶ್ವರ ತನ್ನ ಛಾಪನ್ನು ಮೂಡಿಸಿದ್ದಾನೆ. ಈ ಸಂಕ್ಷೇಪ ಲೇಖನದಲ್ಲಿ ನಾವು ಎರಡು ಮೂರು ವಿಷಯಗಳಲ್ಲಿ ಈ ಮೇಧಾವಿಯ ವಿಚಾರಧಾರೆಯನ್ನನುಸರಿಸುವ ಪ್ರಯತ್ನ ಮಾಡೋಣ.

ಆಧುನಿಕಕಾಲದಲ್ಲಿ ಬುದ್ಧಿಜೀವಿಗಳು ತಲೆಗೆ ಹಚ್ಚಿಕೊಳ್ಳುವ ವಿಷಯಗಳಲ್ಲಿ ಮುಖ್ಯವಾದುವೆಂದರೆ 'ಸೆಕ್ಯುಲರಿಸಂ'(ಲೌಕಿಕೀಕರಣ)' 'ಎಂಪವರ್‌ಮೆಂಟ್ ಆಫ್ ವಿಮೆನ್' (ಸ್ತ್ರೀ-ಅಧಿಕಾರಾನುಸಂಧಾನ) ಮತ್ತು 'ಹ್ಯೂಮನಿಸಂ' (ಮಾನವತಾವಾದ) ಎಂದು ಹೆಸರಿಸಬಹುದು. ಈ ವಿಷಯಗಳ ನಿಟ್ಟಿನಲ್ಲಿ ವಿಜ್ಞಾನೇಶ್ವರ ಎಷ್ಟರಮಟ್ಟಿಗೆ ಪ್ರಭಾವಶಾಲಿ ಯಾಗಿದ್ದನೆಂಬುದನ್ನು ಕೆಲವು ಉದಾಹರಣೆಗಳ ಮೂಲಕ ಗಮನಿಸೋಣ. ಯಾರಾದರೂ ಹತ್ತುಶತಮಾನಗಳ ಹಿಂದೆ ಈ ವಿಚಾರಗಳನ್ನು ಕಂಡುಕೊಳ್ಳಲು ಯತ್ನಿಸುವುದು 'ಕಾಲದ ವಿಸಂಗತಿ'ಯಾಗುವುದಿಲ್ಲವೇ ಎಂದು ಕುಹಕವಾಡಬಹುದು. ಸದ್ಯಕ್ಕೆ ಈ ಟೀಕೆಯನ್ನು ಬದಿಗೆ ಸರಿಸಿ ವಿಜ್ಞಾನೇಶ್ವರನ ವಿಚಾರಧಾರೆಯನ್ನು ವಿಶ್ಲೇಷಿಸೋಣ. 'ಸೆಕ್ಯುಲರಿಸಂ' (ಸೆಕ್ಯುಲರೈಸ್ ಮತ್ತೂ ಉಚಿತ)ನ್ನು ನಾವು 'ಲೌಕಿಕೀಕರಣ'ವೆಂದು ಕರೆದಿದ್ದೇವೆ. ಈ ಬಗ್ಗೆ ಸ್ವಲ್ಪ ವಿವರಣೆಯ ಅಗತ್ಯವಿದೆ. ಮೂಲರೂಪದಲ್ಲಿ ಈ ಸಿದ್ಧಾಂತದ ಉಗಮ ಪಾಶ್ಚಿಮಾತ್ಯ ದೇಶಗಳಲ್ಲಾಯಿತೆಂಬುದನ್ನು ಎಲ್ಲರೂ ಬಲ್ಲರು. ಪಾಶ್ಚಾತ್ಯರು 'ರಾಜ್ಯ' 'ಸರ್ಕಾರ' 'ಕಾನೂನು'ಗಳನ್ನು ಮತೀಯ ಸಂಸ್ಥೆ, ವಿಚಾರ, ಕರ್ಮಕಾಂಡಗಳ ಪ್ರಭಾವದಿಂದ ದೂರಸರಿಸಲು ಒಂದು ದೀರ್ಘ ಚಳುವಳಿಯನ್ನೇ ನಡೆಸಿದರು. ಇದಕ್ಕೆ ಆ ದೇಶಗಳಲ್ಲಿ ರಾಜ್ಯ ಮತ್ತು ಮತೀಯ ಸಂಸ್ಥೆಗಳ ನಡುವೆ ಸಾಮಾಜಿಕ ಪ್ರಭಾವವನ್ನುಳಿಸಿಕೊಳ್ಳಲು ದೀರ್ಘಕಾಲದವರೆವಿಗೂ ನಡೆದ ಘರ್ಷಣೆಯೇ ಕಾರಣ ಎಂಬುದು ತಿಳಿದ ವಿಷಯ. ಅಂತ್ಯದಲ್ಲಿ ಆ ಜನ ಮತೀಯಸಂಸ್ಥೆಗಳ ಪ್ರಭಾವಕ್ಕೆ ಒಂದು ಪರಿಧಿ ಹಾಕಿ 'ರಾಜ್ಯ'ವನ್ನು ಸಾಕಷ್ಟು ಶಕ್ತಿದಾಯಕ ಮಾಡುವುದರಲ್ಲಿ ಸಫಲರಾದ ರೆಂಬುದು ಇತಿಹಾಸದ ಒಂದು ಅಧ್ಯಾಯ.

ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ನಾವು (ಬುದ್ಧಿಜೀವಿಗಳು, ರಾಜಕಾರಣಿಗಳು ಎಲ್ಲಾ ಸೇರುತ್ತಾರೆ) ಈ ಸಿದ್ಧಾಂತವನ್ನು ಅರ್ಥೈಸುವ ರೀತಿಯಲ್ಲಿ ಅದು ತನ್ನ ಮೂಲ ಅರ್ಥವನ್ನೇ ಕಳೆದುಕೊಂಡಿದೆ ಎಂದು ನಿಸ್ಸಂಕೋಚವಾಗಿ ಹೇಳಬಹುದು. 'ಸೆಕ್ಯುಲರಿಸಂ'ನ್ನು 'ಸರ್ವಧರ್ಮಸಮಭಾವ' 'ಧರ್ಮನಿರಪೇಕ್ಷತೆ' ಎಂದೆಲ್ಲಾ ಕರೆದಿದ್ದಾರೆ. ನಾವು ಈ ಶಬ್ದಗಳ ಬೆನ್ನುಹತ್ತಿದರೆ ಅದೇ ಒಂದು ದೊಡ್ಡ ಲೇಖನವಾಗುವ ಸಂಭವವಿರುವುದರಿಂದ, ಈ ಲೇಖನದಲ್ಲಿ ಉಪಯೋಗಿಸಿರುವ 'ಲೌಕಿಕೀಕರಣ'ವನ್ನೇ ವಿಶದವಾಗಿ ವಿವೇಚಿಸೋಣ.

ಪ್ರಸಕ್ತ ಸಂದರ್ಭದಲ್ಲಿ ನಾವು ಈ ವಿಶ್ಲೇಷಣೆಯನ್ನು ಕಾನೂನುಕ್ಷೇತ್ರಕ್ಕೆ ಅದರಲ್ಲೂ ಹಿಂದೂ ಕಾನೂನಿನ ಬಗೆಗೆ ಸೀಮಿತಗೊಳಿಸಿಕೊಂಡಿದ್ದೇವೆ. ಕಾನೂನು ವಿಷಯಗಳ ಬಗ್ಗೆ ವಿಚಾರಮಾಡುವಾಗ 'ಮತೀಯ' 'ಪಾರಮಾರ್ಥಿಕ' ಅಥವಾ 'ಪಾಗಲೌಕಿಕ' ವಿಚಾರಗಳಿಗೆ ಆದ್ಯತೆ ನೀಡದಿರುವುದೇ 'ಲೌಕಿಕೀಕರಣ' ಎಂದು ಕರೆಯಬಹುದು. ಈ ಸಂದರ್ಭದಲ್ಲಿ ಕಾನೂನು ಬಲ್ಲವರು ಹಿಂದೂ ಕಾನೂನೇ ಒಂದು ಮತೀಯ ಕಾನೂನಾಗಿರುವಾಗ್ ಅದರ ಲೌಕಿಕೀಕರಣ ಹೇಗೆ ತಾನೇ ಸಾಧ್ಯ ಎಂದು ತಮ್ಮ ಆಶ್ಚರ್ಯ ವ್ಯಕ್ತಪಡಿಸಬಹುದು. ಆ ಪ್ರಯತ್ನ ತದ್ವಿರುದ್ಧ ವಿಚಾರಗಳ ಪ್ರತಿಪಾದನೆಯಾಗುವುದಿಲ್ಲವೇ ಎಂದೂ ಹೇಳಬಹುದು. ಅವರ ಈ ಸಂದೇಹದಲ್ಲಿ ಹುರುಳಿಲ್ಲವೆಂದಲ್ಲ. ಹಿಂದೂ ಕಾನೂನೇ ಧರ್ಮ ಶಾಸ್ತ್ರಾಧಾರಿತವಾಗಿರುವಾಗ, ಕಾನೂನು ವಿಷಯಗಳು ಮತ್ತು ಪಾರಮಾರ್ಥಿಕ ವಿಚಾರಗಳು ಯಮಳರಂತೆ ಒಡಗೂಡಿರುವುದನ್ನು ಹೆಜ್ಜೆ ಹೆಜ್ಜೆಗೂ ಕಾಣುವಾಗ, ಕಾನೂನಿನ ನಿಯಮಗಳನ್ನು ಮತೀಯ ಭಾವನೆಗಳಿಂದ ಹೇಗೆ ಬೇರ್ಪಡಿಸಲು ಸಾಧ್ಯ ಎನ್ನಿಸುವುದೂ ಸಹಜವೇ. ದಿಟ್ಟ ಟೀಕಾಕಾರ ವಿಜ್ಞಾನೇಶ್ವರ ಮಡಿವಂತರ ವಿಚಾರಗಳಿಗೆ ಸೊಪ್ಪಾಗದೆ ಅಸಾಧ್ಯವನ್ನು ಹೇಗೆ ಸಾಧ್ಯವಾಗಿಸಿದ ಎಂಬುದೇ ಈ ಪುಟ್ಟ ಲೇಖನದ ತಿರುಳು. ಕಾನೂನಿನ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ಕೆಲವು ಉದಾಹರಣೆಗಳ ಮೂಲಕ ವಿಜ್ಞಾನೇಶ್ವರನ ಸಾಧನೆಯನ್ನು ಗಮನಿಸೋಣ.

ಯಾಜ್ಞವಲ್ಕ್ಯರು ತಮ್ಮ ಸ್ಮೃತಿಯ ಆಚಾರಾಧ್ಯಾಯದ ವಿವಾಹ ಪ್ರಕರಣದಲ್ಲಿ ಬ್ರಹ್ಮಚರ್ಯಾಶ್ರಮವನ್ನು ಸಫಲವಾಗಿ ಪೂರೈಸಿದ ಸ್ನಾತಕನೊಬ್ಬನು ಎಂತಹ ಸ್ತ್ರೀಯೊಡನೆ ವಿವಾಹ ಮಾಡಿಕೊಳ್ಳಬೇಕು ಎಂಬುದನ್ನು ಈರೀತಿ ತಿಳಿಸುತ್ತಾರೆ :

> "ಅಸ್ಖಲಿತ ಬ್ರಹ್ಮಚರ್ಯವನ್ನು ಪಾಲಿಸಿದ (ಸ್ನಾತಕನು) ಲಕ್ಷಣವಾದ,
> ಮತ್ತೊಬ್ಬನಿಗೆ ಸೇರಿದವಳಲ್ಲದ 'ಅಸಪಿಂಡಳಾದ' ಅವನಿಗಿಂತ
> ಚಿಕ್ಕವಳಾದ, ಯಾವ ರೋಗದಿಂದಲೂ ಪೀಡಿತಳಲ್ಲದ, ಸಹೋದರರನ್ನುಳ್ಳ
> ಒಂದೇ ಗೋತ್ರದವಳಲ್ಲದ ಸ್ತ್ರೀಯನ್ನು ವಿವಾಹವಾಗಲಿ."[೧೦]

ಈ ಶ್ಲೋಕದಲ್ಲಿ ಯಾಜ್ಞವಲ್ಕ್ಯರು ವಿವಾಹಯೋಗ್ಯವಾದ ವಧುವಿಗೆ ಇರಬೇಕಾದ ಲಕ್ಷಣಗಳನ್ನು ಬಹಳ ರೋಚಕವಾಗಿ ನಿರೂಪಿಸಿದ್ದಾರೆ. ವಿಜ್ಞಾನೇಶ್ವರನು ಈ ಒಂದೊಂದು ಗುಣಗಳನ್ನು ಸ್ವಾರಸ್ಯವಾಗಿ ವ್ಯಾಖ್ಯಾನಿಸಿದ್ದಾನೆ. ನಾವು ಪ್ರಸಕ್ತ ಸಂದರ್ಭದಲ್ಲಿ ಸ್ಮೃತಿಕಾರರು ಉಪಯೋಗಿಸಿರುವ ಮಹತ್ವಪೂರ್ಣ ಶಬ್ದವಾದ 'ಅಸಪಿಂಡಾಮ್' ಶಬ್ದಕ್ಕೆ ಗಮನ ನೀಡೋಣ. ವಿಜ್ಞಾನೇಶ್ವರನು ಈ ಶಬ್ದವನ್ನು ಹೀಗೆ ವ್ಯಾಖ್ಯಾನಿಸುತ್ತಾನೆ :

"(ಆ ವರನು ಮದುವೆಯಾಗಲಿರುವ ಸ್ತ್ರೀ ಅವನಿಗೆ ಅಸಪಿಂಡಳಾಗಿರಬೇಕು) ಅಸಪಿಂಡಳೆಂದರೆ ಅವನ ಸಪಿಂಡಳಲ್ಲದವಳೆಂದರ್ಥ. ಒಂದೇ ಶರೀರದ ಕಣಗಳು(ಇಬ್ಬರು) ವ್ಯಕ್ತಿಗಳಲ್ಲಿ ಸಂವಹಿಸುತ್ತಿದ್ದರೆ (ಅವರ) ಇಬ್ಬರ ನಡುವೆ ಸಪಿಂಡಸಂಬಂಧವುಂಟಾಗುತ್ತದೆ. ತಂದೆಯ ಶರೀರದ ಕಣ ಮಗನಲ್ಲಿ ಸಂವಹಿಸುವುದರಿಂದ ಮಗ ಮತ್ತು ತಂದೆ

ಸಪಿಂಡರಾಗುತ್ತಾರೆ. ಹಾಗೆಯೇ ತಾತನ ಶರೀರದ ಕಣಗಳು ತಂದೆಯ ಮೂಲಕ ಮಗನಲ್ಲಿ ಸಂವಹಿಸುವುದರಿಂದ (ತಾತ ಮತ್ತು ಮೊಮ್ಮಗ) ಸಪಿಂಡರು.[೧೧] ಹಾಗೆಯೇ ತಾಯಿಯ ರಕ್ತಕಣಗಳು ಮಗನಲ್ಲಿ ಸಂವಹಿಸುವುದರಿಂದ ಪುತ್ರನಾದವನು ತಾಯಿಯೊಡನೆ ಸಪಿಂಡ ಸಂಬಂಧವನ್ನು ಹೊಂದಿರುತ್ತಾನೆ. ಅದೇರೀತಿ ಒಬ್ಬ ವ್ಯಕ್ತಿ ತನ್ನ ತಾಯಿಯ ತಂದೆಯೊಡನೆ, ತಾಯಿಯ ತಂಗಿಯರೊಡನೆ, ಸೋದರಮಾವಂದಿರೊಡನೆ ಒಂದೇ ಶರೀರದ ರಕ್ತಕಣಗಳನ್ನು ಹಂಚಿಕೊಳ್ಳುವುದರಿಂದ ಸಪಿಂಡರಾಗುತ್ತಾರೆ. ಗಂಡ ಹೆಂಡಿರಿಬ್ಬರು ತಮ್ಮ ರಕ್ತಕಣ ಹಂಚಿಕೊಳ್ಳುವ ಮಕ್ಕಳಿಗೆ ಜನ್ಮನೀಡುವುದರಿಂದ ತಾವು ಸಪಿಂಡರಾಗುತ್ತಾರೆ. ಇದೇರೀತಿ ಓರಗಿತ್ತಿಯರು (ಅಣ್ಣತಮ್ಮಂದಿರ ಪತ್ನಿಯರು) ಶರೀರದ ರಕ್ತಕಣಗಳನ್ನು ಹಂಚಿಕೊಳ್ಳುವ ಮಕ್ಕಳಿಗೆ ಜನ್ಮನೀಡುವುದರಿಂದ ಒಬ್ಬರಿಗೊಬ್ಬರು ಸಪಿಂಡರಾಗುತ್ತಾರೆ.... ಎಲ್ಲೆಲ್ಲಿ ಸಪಿಂಡ ಶಬ್ದದ ಪ್ರಯೋಗವಾಗುತ್ತದೆಯೋ ಅಲ್ಲೆಲ್ಲಾ ವ್ಯಕ್ತಿಗಳ ನಡುವೆ ಪರಸ್ಪರ ರಕ್ತಕಣಗಳ ಸಂವಹನವಿರುತ್ತದೆ ಎಂದು ತಿಳಿಯಬೇಕು."

ವಿಜ್ಞಾನೇಶ್ವರ ಮೇಲೆ ನೀಡಿರುವ ವ್ಯಾಖ್ಯಾನವನ್ನು ಗಮನದಲ್ಲಿಟ್ಟುಕೊಂಡು ಸಪಿಂಡ ಶಬ್ದವನ್ನು ಸೂಕ್ಷ್ಮವಾಗಿ ಪರೀಕ್ಷಿಸೋಣ. ಸಾಧಾರಣವಾಗಿ ನಮ್ಮ ಸಮಾಜದಲ್ಲಿ ಒಬ್ಬ ವ್ಯಕ್ತಿ 'ಪಿಂಡ' ಶಬ್ದವನ್ನು ಕೇಳಿದ ಕೂಡಲೇ ಅದರ ಅರ್ಥವನ್ನು ಸ್ಥೂಲವಾಗಿ ಗ್ರಹಿಸಬಲ್ಲ. ಶ್ರಾದ್ಧಾದಿ ಅಪರಕರ್ಮಗಳಲ್ಲಿ ಒಬ್ಬ ವ್ಯಕ್ತಿ ತನ್ನ ಪಿತೃವರ್ಗಕ್ಕೆ ಅರ್ಪಿಸುವ 'ಅನ್ನದ ಉಂಡೆ'ಯೇ ಪಿಂಡ ಎಂಬ ಅರ್ಥ ಕೂಡಲೇ ಮೂಡಿಬರುತ್ತದೆ. ವ್ಯಕ್ತಿ ಅನಕ್ಷರಸ್ಥನಾಗಿರಬಹುದು; ಅವಿದ್ಯಾವಂತನಾಗಿರಬಹುದು. ಅವನಿಗೆ ಪ್ರಾಚೀನಕಾಲ ದಿಂದಲೂ ನಡೆದುಬಂದಿರುವ ಪದ್ಧತಿ-ತೀರಿಕೊಂಡಿರುವ ಪೂರ್ವಜರಿಗೆ ವಂಶಜರು ಕ್ರಿಯಾಕರ್ಮಗಳಲ್ಲಿ ಪಿಂಡವನ್ನು ಅರ್ಪಿಸುವುದು-ಯ ಅರಿವು ಇದ್ದೇ ಇರುತ್ತದೆ. ಶ್ರಾದ್ಧಕರ್ಮಗಳೊಡನೆ ಅನೇಕ ಅಲೌಕಿಕ ಅಥವಾ ಪಾರಮಾರ್ಥಿಕ ವಿಚಾರಗಳು ಹೆಣೆಯಲ್ಪಟ್ಟಿರುವುದು ಹೆಚ್ಚು ಕಡಿಮೆ ಎಲ್ಲರಿಗೂ ಪರಿಚಯವಿರುತ್ತದೆ. ಧರ್ಮಶಾಸ್ತ್ರ ಸಾಹಿತ್ಯದಲ್ಲಿ ಪ್ರಾಚೀನಕಾಲದಿಂದಲೂ ಬಹುಮಂದಿ ಶಾಸ್ತ್ರಕಾರರು ಸಪಿಂಡ ಶಬ್ದಕ್ಕೆ ಮೇಲ್ಕಂಡ ಅಲೌಕಿಕ ಅರ್ಥವನ್ನು ಆರೋಪಿಸಿರುವುದು ಕಂಡುಬರುತ್ತದೆ. ಈ ಸಂದರ್ಭದಲ್ಲಿ ನಾವು ಗಮನಿಸಬೇಕಾದ ಒಂದು ಸ್ವಾರಸ್ಯ ವಿಚಾರವೆಂದರೆ, ಸಪಿಂಡಶಬ್ದ ವಿವಾಹಪ್ರಕರಣದಲ್ಲಿ ಕಂಡುಬಂದರೂ, ಟೀಕಾಕಾರರು ಮತ್ತು ನಿಬಂಧಕಾರರು ಅದರ ಅರ್ಥದ ಬಗ್ಗೆ ತೀವ್ರವಾಗಿ ಪ್ರತಿಕ್ರಿಯಿಸಿದ್ದರೂ, ಅವರ ದೃಷ್ಟಿ ಉತ್ತಾರಾಧಿಕಾರ ಪ್ರಕರಣದಲ್ಲಿ ನೆಟ್ಟಿದೆಯೆಂಬುದನ್ನು ಮರೆಯಬಾರದು.[೧೨]

ವಿಜ್ಞಾನೇಶ್ವರನಿಗೆ ಕಾನೂನು ನಿಯಮಗಳ ಸಂದರ್ಭದಲ್ಲಿ ಪರಂಪರೆಯಿಂದ ಬಂದ ಅಲೌಕಿಕಾರ್ಥ ಹಿಡಿಸದು. ಆದ್ದರಿಂದ ಅವನು ಕಾನೂನನ್ನು ಆದಷ್ಟು ಲೌಕಿಕಜ್ಞಾನ ಮತ್ತು ವಿಜ್ಞಾನಗಳ ಆಧಾರಗಳ ಮೇಲೆ ಸಮರ್ಥಿಸುವ ಪ್ರಯತ್ನ ಮಾಡುತ್ತಾನೆ ಮತ್ತು ಬಹಳಮಟ್ಟಿಗೆ ಗೆಲುವನ್ನು ಸಾಧಿಸಿದ್ದಾನೆ ಎಂದು ಹೇಳಬಹುದು. ಸಪಿಂಡ ಶಬ್ದಕ್ಕೆ ಮೇಲೆ

ನೀಡಿರುವ ಅವನ ವ್ಯಾಖ್ಯಾನವನ್ನು ನೋಡಿದರೆ ಸಪಿಂಡರು ರಕ್ತಹಂಚಿಕೊಂಡವರು ಎನ್ನುವ ಅರ್ಥಕ್ಕೆ ಅವನು ಎಷ್ಟು ಮಹತ್ವ ನೀಡಿದ್ದಾನೆ ಎಂಬುದರರಿವಾಗುತ್ತದೆ. ಮೇಲಿನ ಅವನ ಟೀಕೆ ಲೌಕಿಕಜ್ಞಾನಾಧಾರವಾಗಿದ್ದರೂ, ವಿಜ್ಞಾನೇಶ್ವರ ಅದಕ್ಕೆ ವೈಜ್ಞಾನಿಕ ತಳಪಾಯವನ್ನು ಒದಗಿಸಲು ಮರೆಯುವುದಿಲ್ಲ. ಅವನು ಈ ಸಂದರ್ಭದಲ್ಲಿ ತನ್ನ ವ್ಯಾಖ್ಯೆಗೆ ಅಪರೂಪದ ಗರ್ಭೋಪನಿಷತ್ ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ವೈಜ್ಞಾನಿಕ ಕಾರಣವನ್ನೂ ಒದಗಿಸುತ್ತಾನೆ. ಈ ಉಪನಿಷತ್‌ನಲ್ಲಿ ಶರೀರ ಹೇಗೆ ರೂಪುಗೊಳ್ಳುತ್ತದೆ ಯೆಂಬುದನ್ನು "ತಂದೆಯಿಂದ ವ್ಯಕ್ತಿ ಅಸ್ಥಿ, ಸ್ನಾಯು ಮತ್ತು ಮಜ್ಜೆಗಳನ್ನು ಪಡೆದರೆ ತಾಯಿಯಿಂದ ಅಂಗ, ಮಾಂಸ, ರಕ್ತಗಳು ದೊರೆಯುತ್ತವೆ" ಎಂಬ ಮಾತುಗಳನ್ನು ಒತ್ತಿ ಹೇಳುತ್ತಾನೆ.[೧೩] ವಿಜ್ಞಾನೇಶ್ವರನ ಈ ವೈಜ್ಞಾನಿಕ ಪ್ರತಿಪಾದನೆ ಎಂತಹ ಆಧುನಿಕ ಬುದ್ಧಿ ಜೀವಿಯನ್ನಾದರೂ ಮೆಚ್ಚಿಸಬಲ್ಲದು. ಸಪಿಂಡ ನಿರೂಪಣೆಯ ಸಂದರ್ಭದಲ್ಲಿ ಏಳಬಹುದಾದ ಒಂದೆರಡು ಕ್ಲಿಷ್ಟ ಸನ್ನಿವೇಶಗಳನ್ನು ಚಾಕಚಕ್ಯತೆಯಿಂದ ವಿಜ್ಞಾನೇಶ್ವರ ಉತ್ತರಿಸುತ್ತಾನೆ. ಗಂಡ-ಹೆಂಡಿರು ಮತ್ತು ಓರಗಿತ್ತಿಯರು ಕೂಡಾ ಒಬ್ಬರಿಗೊಬ್ಬರು 'ಸಪಿಂಡರು' ಎನ್ನುವ ಉಲ್ಲೇಖವಿದೆ. ಈ ಸಂಬಂಧಗಳಲ್ಲಿ ರಕ್ತಸಂಬಂಧ ಸಾಧ್ಯವಿಲ್ಲ. ವಿಜ್ಞಾನೇಶ್ವರ ಈ ಸಂದರ್ಭದಲ್ಲಿ ನೀಡುವ ಸಮಜಾಯಿಷಿ ನೋಡಿ: "ಗಂಡ-ಹೆಂಡರು ಮತ್ತು ಓರಗಿತ್ತಿಯರು (ತಮ್ಮ ಗಂಡಂದಿರ ಸಹಾಯದಿಂದ) ತಮ್ಮ ರಕ್ತವನ್ನು ಹಂಚಿ ಕೊಂಡ ಮಕ್ಕಳನ್ನು ಹಡೆಯುವುದರಿಂದ ಅವರೂ ಸಪಿಂಡರಾಗುತ್ತಾರೆ."

ಈ ಸಂದರ್ಭದಲ್ಲಿ ಮತ್ತೊಂದು ಸ್ವಾರಸ್ಯವಾದ ಪ್ರಶ್ನೆಯೇಳುತ್ತದೆ. ರಕ್ತ ಹಂಚಿ ಕೊಂಡವರೆಲ್ಲಾ ಸಪಿಂಡರೆಂದಾಗ ಅಸಂಖ್ಯ ತಲೆಮಾರುಗಳಿಗೆ ಸೇರಿದ ಸಾವಿರಾರು ಜನ ಒಬ್ಬರಿಗೊಬ್ಬರು ಸಪಿಂಡರಾಗುವುದಿಲ್ಲವೇ ಎಂದು ಯಾರಾದರೂ ಕೇಳಬಹುದು. ವಿಜ್ಞಾನೇಶ್ವರ ಈ ಸಾಧ್ಯತೆಯನ್ನು ಗಮನದಲ್ಲಿಟ್ಟುಕೊಂಡು ಶಾಸ್ತ್ರಕಾರರ ವಾಕ್ಯಗಳ ಆಧಾರದ ಮೇಲೆ ಸಪಿಂಡ ಸಂಬಂಧ ತಂದೆಯ ಕಡೆ ಏಳುತಲೆಮಾರಿನವರೆವಿಗೂ ತಾಯಿಯ ಕಡೆ ಐದುತಲೆಮಾರಿನವರೆವಿಗೂ ಸಂವಹಿಸುತ್ತದೆ ಎನ್ನುತ್ತಾನೆ. ಈ ತಲೆಮಾರಿನಿಂದಾಚೆಗೆ ರಕ್ತ ತೆಳ್ಳಗಾಗಿ(!) ಸಪಿಂಡ ಸಂಬಂಧ ಮುಕ್ತಾಯವಾಗುತ್ತದೆಯೋ ಏನೋ! ಒಬ್ಬ ಖ್ಯಾತ ವೈದ್ಯಕೀಯ ಸಂಶೋಧಕರ ಸಂಶೋಧನೆಯಿಂದ ಈ ವಿಚಾರಕ್ಕೆ ಪುಷ್ಟಿ ದೊರಕುತ್ತದೆ. ಅವರು ಸಪಿಂಡವರ್ಜಿತ ಸಂಬಂಧವನ್ನು ಪೂರ್ಣರೂಪದಲ್ಲಿ ಅನುಷ್ಠಾನಗೊಳಿಸಿದರೆ ವಂಶಪಾರಂಪರ್ಯವಾಗಿ ಬರುವ ಕೆಲವು ಕಾಯಿಲೆಗಳನ್ನು ತಡೆಗಟ್ಟಬಹುದೆಂದಿದ್ದಾರೆ.[೧೪]

ಕಾನೂನಿನ ಲೌಕಿಕೀಕರಣವನ್ನು ಪ್ರತಿಪಾದಿಸುವ ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. 'ಸ್ವಾಮಿತ್ವ'(ಓನರ್‌ಶಿಪ್) ಕಾನೂನುಶಾಸ್ತ್ರಕ್ಕೆ (ಜ್ಯುರಿಸ್ ಪ್ರೂಡೆನ್ಸ್) ಸಂಬಂಧಿಸಿದ ಒಂದು ಪ್ರಮುಖ ವಿಷಯ. ಈ ಭೂಮಿಯಲ್ಲಿ ಅಸ್ತಿತ್ವಕ್ಕೆ ಬಂದ ಯಾವ ವ್ಯಕ್ತಿಯೇ ಆಗಲೀ ಜೀವನದಲ್ಲಿ ಸ್ಥಾವರಸ್ವತ್ತು ಅಥವಾ ಜಂಗಮ ಪದಾರ್ಥದ

ಸ್ವಾಮಿತ್ವವನ್ನು ಪಡೆದೇ ಪಡೆಯುತ್ತಾನೆ ಎಂದು ಧೈರ್ಯವಾಗಿ ಹೇಳಬಹುದು. 'ಸ್ವಾಮಿತ್ವ' ವ್ಯಕ್ತಿ ಮತ್ತು ಸ್ವತ್ತುಗಳ ನಡುವಿನ ಒಂದು ಮುಖ್ಯ ಸಂಬಂಧವನ್ನು ಸೂಚಿಸುತ್ತದೆ. ಈ ಸಂಬಂಧದ ವಿವಿಧ ಮುಖಗಳನ್ನು ಶಾಸ್ತ್ರಕಾರರು ಅದರಲ್ಲೂ ಟೀಕಾಕಾರರು ದೀರ್ಘವಾಗಿ ಚರ್ಚಿಸಿದ್ದಾರೆ. ಈ ಪ್ರಾಚೀನ ಶಾಸ್ತ್ರಕಾರರು ಮಾಡಿರುವ ನವಿರಾದ ಚರ್ಚೆಯನ್ನು, ವಿಷಯ ವಿಶ್ಲೇಷಣೆಯನ್ನು ಗಮನಿಸಿದಾಗ ಆಧುನಿಕ ಕಾನೂನು ಶಾಸ್ತ್ರಕಾರರ (ಜ್ಯೂರಿಸ್ಟ್ಸ್) ಬರಹಗಳನ್ನು ಓದಿದಂತಾಗುತ್ತದೆ. ಅಷ್ಟರಮಟ್ಟಿಗೆ ಅವರ ಬರಹಗಳು ತಮ್ಮ ಪ್ರಾಸಂಗಿಕತೆಯನ್ನು ಉಳಿಸಿಕೊಂಡಿವೆ.[೧೫]

ಈಗ ಸ್ವಾಮಿತ್ವಕ್ಕೆ ಸಂಬಂಧಿಸಿದ ವಿಚಾರ ವಿಮರ್ಶೆಯನ್ನು ಶಾಸ್ತ್ರಕಾರರು ಮಾಡಿರುವ ರೀತಿಗೆ ಬರೋಣ. ಅನೇಕ ಸೂತ್ರ ಮತ್ತು ಸ್ಮೃತಿಕಾರರು ಒಬ್ಬ ವ್ಯಕ್ತಿ ಸ್ವತ್ತಾರ್ಜನೆ ಮಾಡಬಹುದಾದ ವಿವಿಧ ವಿಧಾನಗಳನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಉದಾಹರಣೆಗೆ, ಗೌತಮರು ತಮ್ಮ ಧರ್ಮಸೂತ್ರದಲ್ಲಿ ಒಬ್ಬ ವ್ಯಕ್ತಿ ಎಷ್ಟು ವಿಧವಾಗಿ ಸ್ವತ್ತಾರ್ಜನೆ ಮಾಡಬಹುದೆಂಬುದನ್ನು ನಿರೂಪಿಸುವುದರ ಜೊತೆಗೆ ಪ್ರತ್ಯೇಕ ವರ್ಣಕ್ಕೆ ಸೂಚಿಸಿರುವ ವಿಶೇಷ ರೀತಿಯ ಸ್ವತ್ತಾರ್ಜನೆಯ ವಿಧಾನವನ್ನೂ ತಿಳಿಸಿದ್ದಾರೆ. ಎಲ್ಲಾ ವರ್ಣಗಳವರಿಗೂ ಅನ್ವಯವಾಗುವ ಐದು ವಿಧಾನಗಳೆಂದರೆ 'ಉತ್ತರಾಧಿಕಾರ, ಕ್ರಯ, ವಿಭಜನೆ, ಪರಿಗ್ರಹ ಮತ್ತು ಅಧಿಗಮ'ಗಳು. ಇವುಗಳಲ್ಲದೆ 'ಬ್ರಾಹ್ಮಣನಿಗೆ ದಾನ, ಕ್ಷತ್ರಿಯನಿಗೆ ವಿಜಿತ, ವೈಶ್ಯನಿಗೆ ವ್ಯವಸಾಯೋತ್ಪನ್ನ ಮತ್ತು ಶೂದ್ರನಿಗೆ ಸೇವೆಯಲ್ಲಿ ದೊರಕುವ ಆದಾಯ' ವಿಶೇಷರೀತಿಯ ಸ್ವತ್ತಾರ್ಜನೆಯ ಮಾರ್ಗಗಳು ಎಂದಿದ್ದಾರೆ ಗೌತಮರು.[೧೬] ಇದೇ ಜಾಡಿನಲ್ಲಿ ಅನೇಕ ಶಾಸ್ತ್ರಕಾರರು ಸ್ವತ್ತಾರ್ಜನೆಯ ವಿಧಾನಗಳನ್ನು ವರ್ಣಿಸಿದ್ದಾರೆ. ಸ್ವತ್ತಾರ್ಜನೆಯ ಈ ನಿರೂಪಣೆಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಟೀಕಾ ಮತ್ತು ನಿಬಂಧಕಾರರು ಒಂದು ಸ್ವಾರಸ್ಯವಾದ ವಿವಾದವನ್ನು ಎತ್ತಿದ್ದಾರೆ. ಧರ್ಮಶಾಸ್ತ್ರಗಳು ಕರಾರುವಾಕ್ಕಾಗಿ ಸ್ವತ್ತಾರ್ಜನೆಯ ಬಗ್ಗೆ ತಮ್ಮ ನಿರೂಪಣೆಯನ್ನು ನೀಡಿರುವುದರಿಂದ ಜನರು ಅದೇರೀತಿ ಆಸ್ತಿಯನ್ನರ್ಜಿಸಬೇಕೆ? ಅಥವಾ ಈ ಶಾಸ್ತ್ರವಿಧಾನಗಳನ್ನು ಬಿಟ್ಟು ಬೇರೆ ರೀತಿಯಲ್ಲಿಯೂ ಸ್ವತ್ತುಗಳನ್ನು ಸಂಪಾದಿಸಬಹುದೇ? ಎಂದು ಪ್ರಶ್ನಿಸಿದ್ದಾರೆ. ಸಂಪ್ರದಾಯಕ್ಕೆ ಪೂರ್ಣವಾಗಿ ಶರಣುಹೋಗಿರುವ ಲೇಖಕರು ಶಾಸ್ತ್ರ ತಿಳಿಸಿರುವ ವಿಧಿ ವಿಧಾನಗಳಲ್ಲೇ ಒಬ್ಬ ವ್ಯಕ್ತಿ ಸ್ವತ್ತಾರ್ಜನೆ ಮಾಡಬೇಕು, ಅವನಿಗೆ ಬೇರೆ ದಾರಿಯಿಲ್ಲ ಎನ್ನುವ ವಾದವನ್ನು ಮುಂದಿಟ್ಟಿದ್ದಾರೆ. ಇದನ್ನು 'ಶಾಸ್ತ್ರೈಕಸ್ವತ್ವವಾದ'ವೆಂದು ಕರೆದಿದ್ದಾರೆ. ಈ ವಾದವನ್ನು ಅನೇಕ ಟೀಕಾ ಮತ್ತು ನಿಬಂಧಕಾರರು ಅಷ್ಟೇ ಆವೇಶಪೂರಿತರಾಗಿ ವಿರೋಧಿಸಿದ್ದಾರೆ. ಅವರ ರೀತ್ಯಾ ಸ್ವತ್ತಾರ್ಜನೆ ಒಂದು 'ಲೌಕಿಕ ಕ್ರಿಯೆ' ಮಾತ್ರ. ಈ ಸಂಬಂಧದಲ್ಲಿ ಲೋಕರೂಢಿ ಅಥವಾ ಲೋಕಾಚಾರ ತನ್ನದೇ ಆದ ವಿಧಾನಗಳನ್ನು ಸ್ವತ್ತಾರ್ಜನೆಯ ಬಗ್ಗೆ ನೀಡಿದೆ. ಇಲ್ಲಿ ಸ್ವತ್ತಾರ್ಜನೆಗೆ ಮೂಲ ಸಾರ್ವಜನಿಕ ಅಂಗೀಕಾರವೇ ಹೊರತು ಶಾಸ್ತ್ರಸಮ್ಮತಿಯಲ್ಲ ಎನ್ನುವ ಅರ್ಥ ಹೊರಹೊಮ್ಮುತ್ತದೆ. (ಪಾಪ್ಯುಲರ್ ರೆಕಾಗ್ನಿಶ್ನ್).

ಈ ವಾದವನ್ನು 'ಲೌಕಿಕ ಸ್ವತ್ವವಾದ'ವೆಂದು ಕರೆಯುತ್ತಾರೆ. ಇದು ಬೀಜವೃಕ್ಷನ್ಯಾಯದಂತೆ ಶಾಸ್ತ್ರ ಹೇಳಿರುವುದನ್ನು ಸಾರ್ವಜನಿಕರು ಅನುಸರಿಸುತ್ತಿದ್ದಾರೆಯೇ ಅಥವಾ ಸಾರ್ವಜನಿಕರ ಅಂಗೀಕಾರ ದೊರೆತಿರುವುದನ್ನು ಶಾಸ್ತ್ರವು ಪ್ರತಿಧ್ವನಿಸುತ್ತಿದೆಯೇ ಎಂಬ ವಾದಕ್ಕೆ ಎಡೆಕೊಡುತ್ತದೆ. ಸಂಪ್ರದಾಯದ ಜಾಡನ್ನೇ ಹಿಡಿದವರು ಕೆಲವರು ಸಾರ್ವಜನಿಕ ಅಂಗೀಕಾರವೇ ಸ್ವತ್ವಾರ್ಜನೆಗೆ ಮೂಲವಾದರೆ ಶಾಸ್ತ್ರವೇಕೆ ಅನಾವಶ್ಯಕವಾಗಿ ಕೆಲವು ವಿಧಾನಗಳನ್ನು ನಿರೂಪಿಸಬೇಕಾಗಿತ್ತು? ಎಂದು ಕೂಡ ಪ್ರಶ್ನಿಸುತ್ತಾರೆ. ಲೌಕಿಕ ಸ್ವತ್ವವಾದವನ್ನನುಸರಿಸುವವರು ಲೋಕರೂಢಿ ಸ್ವತ್ವಾರ್ಜನೆಯ ಬಗ್ಗೆ ಅನೇಕ ರೀತಿಗಳನ್ನು ಬೆಳೆಸಿಕೊಂಡು ಬಂದಿದ್ದರೂ ಶಾಸ್ತ್ರಕಾರರು ತಮ್ಮ ದೃಷ್ಟಿಯಲ್ಲಿ ವಿಹಿತವಾಗಿ ತೋರುವುದನ್ನು ಮಾತ್ರ ತಮ್ಮ ಗ್ರಂಥಗಳಲ್ಲಿ ನಿರೂಪಿಸಿದ್ದಾರೆ ಎಂದು ಉತ್ತರಿಸಿದ್ದಾರೆ.

ವಿಜ್ಞಾನೇಶ್ವರ 'ಶಾಸ್ತ್ರೈಕಸ್ವತ್ವವಾದ'ವನ್ನು ವಿರೋಧಿಸಿ ಲೌಕಿಕ ಸ್ವತ್ವವಾದವನ್ನು ಎತ್ತಿಹಿಡಿಯುತ್ತಾನೆ. ಅವನ ನಂತರ ಬಂದ ಅನೇಕ ಟೀಕಾಕಾರರುಗಳು ವಿಜ್ಞಾನೇಶ್ವರನನ್ನನುಸರಿಸಿದ್ದಾರೆ. ವಿಜ್ಞಾನೇಶ್ವರ ಶಾಸ್ತ್ರೈಕಸ್ವತ್ವವಾದವನ್ನು ನಿರಾಕರಿಸಲು ಎರಡು ಆಧಾರಗಳನ್ನು ನೀಡುತ್ತಾನೆ. ಶಾಸ್ತ್ರದ ಗಂಧವೇ ಇಲ್ಲದ ಅಥವಾ ಅದಕ್ಕೆ ಮನ್ನಣೆ ನೀಡದ ಮ್ಲೇಚ್ಛಾದಿ ಸಮುದಾಯಗಳು, ವಿವಿಧ ರೀತಿಯ ಸ್ವತ್ವಾರ್ಜನೆಗಳನ್ನನುಸರಿಸುವುದನ್ನು ನೋಡಿದರೆ ಅದು ಲೋಕರೂಢಿ ಅಥವಾ ಲೋಕಾಚಾರದ ಮೇಲೆ ಆಧಾರಿತವೆನ್ನುವುದಕ್ಕೆ ಪುಷ್ಟಿ ದೊರಕುತ್ತದೆ. ಬಹಳ ಸ್ವಾರಸ್ಯವಾದ ಮತ್ತೊಂದು ಉದಾಹರಣೆಯನ್ನು ವಿಜ್ಞಾನೇಶ್ವರ ನಿರೂಪಿಸುತ್ತಾನೆ. ಒಬ್ಬ ವ್ಯಕ್ತಿ ಶಾಸ್ತ್ರ ಸೂಚಿಸಿರುವ ನಿಯಮಗಳನ್ನತಿಕ್ರಮಿಸಿ ಸ್ವತ್ವಾರ್ಜನೆ ಮಾಡಿದಾಗ ಅದರಲ್ಲಿ ಆ ವ್ಯಕ್ತಿಯ ಸ್ವಾಮಿತ್ವ ಅಸ್ತಿತ್ವಕ್ಕೆ ಬರುತ್ತದೆಯೇ ಎನ್ನುವ ವಿಚಾರವನ್ನು ವಿಶ್ಲೇಷಿಸುತ್ತಾ, ವಿಜ್ಞಾನೇಶ್ವರ ಆ ವ್ಯಕ್ತಿ ಸ್ವಾಮಿತ್ವವನ್ನು ಪಡೆಯುತ್ತಾನೆ, ಆದರೆ ಅವನು ಆ ಕ್ರಿಯೆಯಿಂದ ಪಾಪಕ್ಕೂ ಗುರಿಯಾಗಬಹುದು ಎನ್ನುತ್ತಾನೆ. ಅಂತಹವನು ಪ್ರಾಯಶ್ಚಿತ್ತ ಮಾಡಿಕೊಂಡು ಪಾಪನಿವಾರಣೆ ಮಾಡಿಕೊಳ್ಳಬಹುದು. ಕಾನೂನು ಅವನ ಸ್ವಾಮಿತ್ವವನ್ನು ಸ್ವೀಕರಿಸುವುದರಿಂದಲೇ ಅವನ ಪುತ್ರರಿಗೆ ಅದರಲ್ಲಿ ಉತ್ತರಾಧಿಕಾರ ಪ್ರಾಪ್ತವಾಗಿ ಅವರು ಅದನ್ನು ತಮ್ಮಲ್ಲಿ ವಿಭಾಗಮಾಡಿಕೊಳ್ಳಬಹುದು ಎಂದು ವಾದಿಸುತ್ತಾನೆ. ಜೀವನದಲ್ಲಿ ಅನೇಕ ವ್ಯವಹಾರಗಳು ಶಾಸ್ತ್ರದ ನೈತಿಕ ಮಾನ ದಂಡಕ್ಕೆ ನಿಲುಕದಿದ್ದರೂ, ಕಾನೂನು ಅವುಗಳಿಗೆ ಮಾನ್ಯತೆ ನೀಡಬೇಕಾಗುತ್ತದೆ ಎನ್ನುವ ಆಧುನಿಕ ವಿಚಾರಧಾರೆಯ ಪ್ರತಿಧ್ವನಿ ವಿಜ್ಞಾನೇಶ್ವರನ ಈ ವಾದದಲ್ಲಿ ಕಂಡುಬರುತ್ತದೆ.

ವಿಜ್ಞಾನೇಶ್ವರನ ಲೌಕಿಕೀಕರಣದ ದೃಷ್ಟಿಕೋನಕ್ಕೆ ಪುಷ್ಟಿನೀಡುವ ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. 'ಮಿತಾಕ್ಷರಾ' ಶಾಖೆಯ ಒಂದು ಮೂಲ ಸಿದ್ಧಾಂತವೆಂದರೆ ಪುತ್ರ, ಪೌತ್ರ, ಪ್ರಪೌತ್ರರ 'ಜನ್ಮಸ್ವತ್ವವಾದ'. ಸಂಯುಕ್ತ ಹಿಂದೂ ಕುಟುಂಬವಿಧಿಗೆ ಸಂಬಂಧಿಸಿದ ಈ ಸಿದ್ಧಾಂತವನ್ನು ಯಾಜ್ಞವಲ್ಕ್ಯರು ಪ್ರತಿಪಾದಿಸಿದ್ದರೂ, ವಿಜ್ಞಾನೇಶ್ವರ ತನ್ನ ತರ್ಕಬದ್ಧವಾದ ಸುಂದರಶೈಲಿಯಲ್ಲಿ ವ್ಯಾಖ್ಯಾನಮಾಡಿ ಈ

ಸಿದ್ಧಾಂತಕ್ಕೆ ಒಂದು ಭದ್ರವಾದ ಅಡಿಪಾಯವನ್ನು ಒದಗಿಸಿದ್ದಾನೆ. ಈ ಕಾರಣದಿಂದಲೇ ಸುಮಾರು ಎರಡೂವರೆಸಾವಿರ ವರ್ಷಗಳ ಹಿಂದೆಯೇ ಅಸ್ತಿತ್ವಕ್ಕೆ ಬಂದ ಈ ವಿಚಾರ ಹಿಂದೂ ಸಮಾಜದ ಮೇಲೆ ಸತತವಾಗಿ ತನ್ನ ಪ್ರಭಾವ ಬೀರುತ್ತಾ ಇಂದಿಗೂ ತನ್ನ ಪ್ರಾಸಂಗಿಕತೆಯನ್ನುಳಿಸಿಕೊಂಡು ಬಂದಿದೆ. ಹಿಂದೂ ಕಾನೂನಿನಲ್ಲಿ ೧೯೫೫-೫೬ರಲ್ಲಿ ಕ್ರಾಂತಿಕಾರಕ ಪರಿವರ್ತನೆಗಳನ್ನು ಸಂಸತ್ತು ತಂದಿದ್ದರೂ 'ಪುತ್ರಜನ್ಮಸ್ವತ್ವವಾದ' ಸಿದ್ಧಾಂತವನ್ನು ಅದು ರದ್ದುಮಾಡಲು ನಿರಾಕರಿಸಿತು. ಇದನ್ನು ವಿಜ್ಞಾನೇಶ್ವರನ ಸಿದ್ಧಾಂತಕ್ಕೆ ಸಂಸತ್ತು ಸೂಚ್ಯವಾಗಿ ನೀಡಿದ ಅಂಗೀಕಾರ ಎಂದರೂ ತಪ್ಪಾಗದು. ಈಗ ವಿಜ್ಞಾನೇಶ್ವರ ಈ ಸಿದ್ಧಾಂತವನ್ನು ಪ್ರತಿಪಾದಿಸಿರುವ ರೀತಿಗೆ ಗಮನ ನೀಡೋಣ.

'ಮಿತಾಕ್ಷರಾ' ಪರಂಪರೆಯಲ್ಲಿ 'ಪುತ್ರ, ಪೌತ್ರ, ಪ್ರಪೌತ್ರರು' ತಮ್ಮ 'ತಂದೆ, ತಾತ, ಮುತ್ತಾತಂದಿರ' ಆಸ್ತಿಯಲ್ಲಿ ಜನ್ಮಮಾತ್ರದಿಂದಲೇ ಸ್ವತ್ವಾಧಿಕಾರವನ್ನು ಪಡೆಯುತ್ತಾರೆ. ಅವರು, ತಂದೆ ತಾತಂದಿರಿಗೆ ಇಷ್ಟವಿರಲಿ ಬಿಡಲಿ, ತಮಗೆ ಇಷ್ಟಬಂದಾಗ ಕುಟುಂಬದ ಆಸ್ತಿಯಲ್ಲಿ ತಮ್ಮ ಹಿಸ್ಸೆಯನ್ನು ಪಡೆಯಲು ಅಧಿಕಾರ ಹೊಂದಿದ್ದಾರೆ. ಪಿತ್ರಾರ್ಜಿತ ಆಸ್ತಿಯಲ್ಲಿ ಈ ರೀತಿಯ ಅಧಿಕಾರವನ್ನು ಕೇವಲ ಈ ಮೂವರು ವಂಶಜರು ಪಡೆದಿದ್ದಾರೆಂಬುದನ್ನು ನಾವು ಇಲ್ಲಿ ಗಮನಿಸಬೇಕು. ಹಾಗಾದರೆ ಯಾವ ಕಾರಣದಿಂದ ಪುತ್ರ, ಪೌತ್ರ, ಪ್ರಪೌತ್ರರು ಈ ವಿಶಿಷ್ಟ ಅಧಿಕಾರವನ್ನು ಪಡೆಯುತ್ತಾರೆ ಎನ್ನುವ ಪ್ರಶ್ನೆ ಏಳುತ್ತದೆ. ವಿಜ್ಞಾನೇಶ್ವರನಿಗೆ ಹಿಂದಿನ ಅನೇಕ ಶಾಸ್ತ್ರಕಾರರು ಶ್ರಾದ್ಧಕ್ರಿಯೆಯಲ್ಲಿ ಪುತ್ರ, ಪೌತ್ರ, ಪ್ರಪೌತ್ರರಿಗೆ ದೊರೆತಿರುವ ಮಹತ್ವಪೂರ್ಣ ಸ್ಥಾನದ ಪ್ರಭಾವದಿಂದಲೇ, ಅವರುಗಳಿಗೆ ಪಿತ್ರಾರ್ಜಿತದಲ್ಲಿ ಈ ರೀತಿಯ ವಿಶೇಷ ಸ್ವತ್ವಾಧಿಕಾರ ದೊರೆತಿದೆ ಎನ್ನುವ ವಿಚಾರಕ್ಕೆ ಪೋಷಣೆ ನೀಡಿದ್ದಾರೆ. ಇದು ಕಾನೂನು ವಿಷಯಕ್ಕೆ ಮತೀಯ ಪೋಷಾಕನ್ನು ತೊಡಿಸುವ ರೀತಿ. ವಿಜ್ಞಾನೇಶ್ವರ ಕಟ್ಟುನಿಟ್ಟಾಗಿ ಈ ರೀತಿಯ ಪಾರಲೌಕಿಕ ವಿಚಾರಕ್ಕೆ ತಡೆಹಾಕಿ ಲೌಕಿಕ ಆಧಾರದಿಂದಲೇ ಈ ಸಿದ್ಧಾಂತವನ್ನು ಎತ್ತಿಹಿಡಿಯುತ್ತಾನೆ. ವಿಜ್ಞಾನೇಶ್ವರ 'ದಾಯ' ಶಬ್ದವನ್ನು ನಿರೂಪಿಸುತ್ತಾ, "ಸ್ವಾಮಿಸಂಬಂಧ ನಿಮಿತ್ತದಿಂದಲೇ ಒಬ್ಬ ವ್ಯಕ್ತಿಯಲ್ಲಿ ಯಾವ ಧನ(ಸ್ವತ್ತು)ದಲ್ಲಿ ಅಧಿಕಾರ ಉತ್ಪನ್ನವಾಗುತ್ತದೆಯೋ ಅದೇ ದಾಯ" ಎನ್ನುತ್ತಾನೆ. ಅಂದರೆ ಒಬ್ಬ ವ್ಯಕ್ತಿ ಒಂದು ಸ್ವತ್ತಿನ ಸ್ವಾಮಿ(ಮಾಲೀಕ) ಯಾಗಿರುತ್ತಾನೆ. ಆ ಸ್ವಾಮಿಗೆ ಅನ್ಯವ್ಯಕ್ತಿಯೊಡನೆ ಸಂಬಂಧವಿರುತ್ತದೆ. ಈ ಸಂಬಂಧದ ನಿಮಿತ್ತದಿಂದಲೇ ಆ ಅನ್ಯವ್ಯಕ್ತಿ ಆ ಸ್ವತ್ತಿನ ಅಧಿಕಾರ ಪಡೆಯುವುದೇ 'ದಾಯ'ವೆಂದು ಕರೆಯಲ್ಪಡುತ್ತದೆ. ವಿಜ್ಞಾನೇಶ್ವರ ಮುಂದುವರೆದು, 'ಈ ದಾಯವು ಎರಡು ವಿಧವು : ಅಪ್ರತಿಬಂಧವೊಂದು ಮತ್ತು ಸಪ್ರತಿಬಂಧವಿನ್ನೊಂದು' ಎನ್ನುತ್ತಾನೆ. ಈಗ ಅವನು ಈ ಅಪ್ರತಿಬಂಧದಾಯವನ್ನು ವರ್ಣಿಸುವ ರೀತಿ ನಮಗೆ ಬಹಳ ಮಹತ್ವಪೂರ್ಣವಾದದ್ದು : "ತಂದೆ ಮತ್ತು ತಾತನ ಧನದಲ್ಲಿ ಪುತ್ರ, ಪೌತ್ರರಿಗೆ ಅವರು 'ಪುತ್ರ'ರಾಗಿರುವುದರಿಂದಲೇ, 'ಪೌತ್ರ'ರಾಗಿರುವುದರಿಂದಲೇ ಸ್ವತ್ವಾಧಿಕಾರ ಉಂಟಾಗುತ್ತದೆ, ಅದೇ ಅಪ್ರತಿಬಂಧದಾಯ."

ಪುತ್ರ ಪೌತ್ರರಿಗೆ ತಂದೆ ಮತ್ತು ತಾತನ ಆಸ್ತಿಯಲ್ಲಿ ಅಧಿಕಾರ ಪಡೆಯಲು ಮತ್ಯಾವ ಕಾರಣವೂ ಅಗತ್ಯವಿಲ್ಲ. 'ಪುತ್ರತ್ವೇನ' 'ಪೌತ್ರತ್ವೇನ' ಎಂದು ವಿಜ್ಞಾನೇಶ್ವರ ಒತ್ತಿಹೇಳುವುದು, ಮತ್ಯಾವ ಪಾರಲೌಕಿಕ ಆಧಾರದ ಅಗತ್ಯವೂ ಇಲ್ಲ ಎಂಬುದನ್ನು ಸೂಚ್ಯವಾಗಿ ತಿಳಿಸುತ್ತದೆ. ಪುತ್ರ, ಪೌತ್ರರ ಶ್ರಾದ್ಧಕರ್ತೃತ್ವಕ್ಕೂ ಆಸ್ತಿಯಲ್ಲಿ ಅಧಿಕಾರ ಅರ್ಜನೆಗೂ ಸಂಬಂಧ ಕಲ್ಪಿಸಿದ ಪ್ರಾಚೀನ ಪರಂಪರೆಯನ್ನು ತಳ್ಳಿ ಹಾಕಿ ಒಂದು ಹೊಸ ಸಿದ್ಧಾಂತಕ್ಕೆ ತಳಪಾಯ ಒದಗಿಸುತ್ತಾನೆ ವಿಜ್ಞಾನೇಶ್ವರ.[೧೭]

ವಿಜ್ಞಾನೇಶ್ವರ ಲೌಕಿಕೀಕರಣಕ್ಕೆ ಮಹತ್ವ ನೀಡಿದಂತೆ ಸ್ತ್ರೀಅಧಿಕಾರಾನುಸಂಧಾನಕ್ಕೂ ಒತ್ತುನೀಡಿರುವುದನ್ನು ನಾವು ಉತ್ತರಾಧಿಕಾರ ಪ್ರಕರಣದಲ್ಲಿ ಕಾಣುತ್ತೇವೆ. ಈ ದೇಶದ ಉತ್ತರಾಧಿಕಾರ ಕಾನೂನನ್ನು ಅಧ್ಯಯನ ಮಾಡಿದಾಗ ಹಿಂದೂ ಮತ್ತು ಮುಸ್ಲಿಂ ಕಾನೂನುಗಳ ಉತ್ತರಾಧಿಕಾರ ನಿಯಮಗಳು ನಮ್ಮ ಮೆಚ್ಚುಗೆಗೆ ಪಾತ್ರವಾಗುತ್ತವೆ. ಇವೆರಡೂ ಪರಂಪರಾಗತ ಕಾನೂನುಗಳು. ಮುಸ್ಲಿಂ ಕಾನೂನು ಸತತವಾಗಿ ೧೪೦೦ ವರ್ಷಗಳಿಂದ ಚಾಲ್ತಿಯಲ್ಲಿರುವಂತೆ, ಹಿಂದೂ ಕಾನೂನು ಸುಮಾರು ಎರಡೂವರೆ ಸಾವಿರ ವರ್ಷಗಳಿಂದ, ೧೯೫೫-೫೬ರ ವರೆವಿಗೂ ವಿಕಾಸ ಹೊಂದಿದ ಕಾನೂನು ಪ್ರಣಾಲಿ. ಉತ್ತರಾಧಿಕಾರವಿಧಿಯ ಕ್ಷೇತ್ರದಲ್ಲಿ ವಿಜ್ಞಾನೇಶ್ವರನ ಕೊಡುಗೆಯನ್ನು ವಿಶ್ಲೇಷಿಸುವುದಕ್ಕೆ ಮೊದಲು, ಅವನ ಕಾಲಕ್ಕೆ ಬಹಳ ಹಿಂದೆ ಅಸ್ತಿತ್ವಕ್ಕೆ ಬಂದಿದ್ದ ಧರ್ಮಶಾಸ್ತ್ರ ಸಾಹಿತ್ಯದಲ್ಲಿ, ಅದರಲ್ಲೂ ಉತ್ತರಾಧಿಕಾರಕ್ಕೆ ಸಂಬಂಧಿಸಿದ ಕೆಲವು ವೈಶಿಷ್ಟ್ಯಗಳನ್ನು ಗಮನಿಸುವುದು ಅಗತ್ಯ. ಉತ್ತರಾಧಿಕಾರದ ಕ್ಷೇತ್ರದಲ್ಲಿ ಪ್ರಾಚೀನ ಋಷಿವಾಕ್ಯಗಳನ್ನು ಗಮನಿಸಿದಾಗ ಮೇಲ್ನೋಟಕ್ಕೆ ಬಹಳ ವೈವಿಧ್ಯತೆ ಕಂಡುಬಂದರೂ ಮೂಲರೂಪದಲ್ಲಿ ಆಳವಾಗಿ ಬೇರೂರಿರುವ ಕೆಲವು ಸಿದ್ಧಾಂತಗಳ ಪ್ರಭಾವವನ್ನು ದೇಶದ ಮೂಲೆ ಮೂಲೆಯಲ್ಲಿಯೂ ಕಾಣುತ್ತೇವೆ. ಅವುಗಳನ್ನು ಪುರುಷಪ್ರಾಧಾನ್ಯ ಸಮಾಜದಲ್ಲಿ ಕಂಡುಬರುವ ನ್ಯೂನತೆಗಳೆಂದು ಹೇಳಿದರೂ ತಪ್ಪಿಲ್ಲ. ಉದಾಹರಣೆಗೆ, ಉತ್ತರಾಧಿಕಾರಕ್ಕೆ ಸಂಬಂಧಿಸಿದಂತೆ ಸ್ತ್ರೀಯರ ಅಧಿಕಾರಕ್ಕೆ ಕಡಿತ, 'ಗೋತ್ರಜ'ರಿಗೆ ಅಗ್ರಸ್ಥಾನ, 'ಬಂಧು'ಗಳಿಗೆ ಅವರು ನಿಕಟವರ್ತಿಗಳಾಗಿದ್ದರೂ ನಿಮ್ನಸ್ಥಾನ ದೊರೆತಿರುವುದು ಎದ್ದುಕಾಣುತ್ತದೆ. ಈ ಸಂದರ್ಭದಲ್ಲಿ ನಾವು ನೆನಪಿಡಬೇಕಾದ ಮತ್ತೊಂದು ವಿಚಾರವೆಂದರೆ, ಸೂತ್ರ ಮತ್ತು ಸ್ಮೃತಿಸಾಹಿತ್ಯ ಕೃತಿಗಳ ಶ್ರೇಣಿಯಲ್ಲಿ ಕ್ರಿಸ್ತಶಕೆಗೆ ಸ್ವಲ್ಪ ಹಿಂದು ಮುಂದು ರಚಿಸಲ್ಪಟ್ಟ ಯಾಜ್ಞವಲ್ಕ್ಯಸ್ಮೃತಿ ಪಡೆದ ವಿಶಿಷ್ಟ ಸ್ಥಾನ. ಯಾಜ್ಞವಲ್ಕ್ಯಸ್ಮೃತಿಗೆ ಮುಂಚೆ ರಚಿಸಲ್ಪಟ್ಟ ಧರ್ಮಶಾಸ್ತ್ರಸಾಹಿತ್ಯದಲ್ಲಿ ಬಹುಮಟ್ಟಿಗೆ ಸಂಪ್ರದಾಯಬದ್ಧತೆ ಕಂಡುಬರುತ್ತದೆ. ಆದರೆ ಯಾಜ್ಞವಲ್ಕ್ಯರು ಸಂಪ್ರದಾಯದಿಂದ ಸ್ವಲ್ಪಮಟ್ಟಿಗೆ ದೂರಸರಿದವರು; ಸಿದ್ಧಾಂತಗಳ ಪ್ರತಿಪಾದನೆಯಲ್ಲಿ ಉದಾರದೃಷ್ಟಿಯನ್ನು ಅಳವಡಿಸಿಕೊಂಡವರು. ಈ ಕಾರಣಗಳಿಂದಲೇ ಇರಬಹುದು ವಿಜ್ಞಾನೇಶ್ವರ ಈ ಸ್ಮೃತಿಯನ್ನು ತನ್ನ ಟೀಕಾಗ್ರಂಥಕ್ಕೆ ಮೂಲವಾಗಿ ಸ್ವೀಕರಿಸಿದುದು. ಉತ್ತರಾಧಿಕಾರಕ್ಷೇತ್ರದಲ್ಲಿ ಯಾಜ್ಞವಲ್ಕ್ಯರು ಮತ್ತು ವಿಜ್ಞಾನೇಶ್ವರ ಇಬ್ಬರೂ

ಒಂದು ಅಸಾಧಾರಣ ಸ್ಥಾನವನ್ನು ಪಡೆದವರು. ಯಾಜ್ಞವಲ್ಕ್ಯರು ನೀಡಿದ ಎರಡು ಶ್ಲೋಕಗಳ ಆಧಾರದ ಮೇಲೆ ಈ ದೇಶದ ಕೋಟ್ಯಾಂತರ ಹಿಂದೂಗಳಿಗೆ ಅನ್ವಯವಾಗುವ ಉತ್ತರಾಧಿಕಾರ ಕಾನೂನು ವಿಕಾಸ ಹೊಂದಿತು ಎಂಬುದು ಗಮನಾರ್ಹ.

ಈಗ ಯಾಜ್ಞವಲ್ಕ್ಯರ ಉತ್ತರಾಧಿಕಾರವಿಧಿಗೆ ಅಡಿಪಾಯವಾಗಿರುವ ಶ್ಲೋಕಗಳನ್ನು ಗಮನಿಸುವ : "ಪುತ್ರಸಂತಾನವಿಲ್ಲದೆ ದಿವಂಗತನಾದವನ ಧನವನ್ನು ಅವನ ಪತ್ನಿ, ಪುತ್ರಿಯರು ಕೂಡಾ, ತಾಯಿ ತಂದೆಗಳು, ಸಹೋದರರು ಮತ್ತು ಅವರ ಪುತ್ರರು, ಗೋತ್ರಜರು, ಬಂಧುಗಳು, ಶಿಷ್ಯ, ಸಹಬ್ರಹ್ಮಚಾರಿಗಳು, ಮೊದಲಿನ ವ್ಯಕ್ತಿ ಇಲ್ಲದಿರುವಾಗ ನಂತರದವರು ಹೊಂದಲು ಅರ್ಹರಾಗಿರುತ್ತಾರೆ. ಈ ನಿಯಮ ಎಲ್ಲಾ ವರ್ಣದವರಿಗೂ ಅನ್ವಯವಾಗುತ್ತದೆ."[೧೮]

ವಿಜ್ಞಾನೇಶ್ವರ ಈ ಶ್ಲೋಕಗಳ ಮೇಲೆ ಮಾಡಿರುವ ವ್ಯಾಖ್ಯಾನ ಮತ್ತು ದೇಶದ ವಿವಿಧ ಪ್ರಾಂತಗಳಲ್ಲಿ ಅವನನ್ನನುಸರಿಸುವ ಅನೇಕ ಟೀಕಾಕಾರರು ನೀಡಿರುವ ದೀರ್ಘ ವಿವರಣೆಯ ಆಧಾರದ ಮೇಲೆ ಬಂಗಾಳವನ್ನು ಬಿಟ್ಟು ಸಂಪೂರ್ಣ ಭಾರತದಲ್ಲಿ ಉತ್ತರಾಧಿಕಾರ ಕಾನೂನು ೧೯೫೬ರ ವರೆವಿಗೂ ಜಾರಿಯಲ್ಲಿತ್ತು. ಪ್ರಸಕ್ತ ಸಂದರ್ಭದಲ್ಲಿ ನಾವು ಅನ್ಯ ಉತ್ತರಾಧಿಕಾರಿಗಳ ಕಡೆಗೆ ಗಮನನೀಡದೆ ನಮ್ಮ ವಿಶ್ಲೇಷಣೆಯನ್ನು ಕೇವಲ ಸ್ತ್ರೀಯರ ಅಧಿಕಾರಕ್ಕೆ ಸೀಮಿತಗೊಳಿಸೋಣ. ಯಾಜ್ಞವಲ್ಕ್ಯರಿಗೆ ಹಿಂದಿನ ಅನೇಕ ಸೂತ್ರ ಮತ್ತು ಸ್ಮೃತಿಕಾರರುಗಳಲ್ಲಿ ಅಧಿಕ ಮಂದಿ ಸ್ತ್ರೀಯರನ್ನು ಸಾರಾಸಗಟಾಗಿ ಉತ್ತರಾಧಿಕಾರ ದಿಂದ ವಂಚಿಸಿದವರು. ಅಲ್ಲೊಬ್ಬ ಇಲ್ಲೊಬ್ಬ ಶಾಸ್ತ್ರಕಾರರು ಕೆಲವು ಸ್ತ್ರೀಯರಿಗೆ ಅಧಿಕಾರ ನೀಡಿದ್ದರೂ ಬಿಚ್ಚುಮನಸ್ಸಿನಿಂದ ನೀಡಲಿಲ್ಲವೆಂದು ಧಾರಾಳವಾಗಿ ಹೇಳಬಹುದು. ಯಾಜ್ಞವಲ್ಕ್ಯರಿಗೆ ನಂತರ ಬಂದ ನಾರದನೂ ಹಿಂದಿನವರ ಜಾಡನ್ನೇ ಅನುಸರಿಸಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣವಿಲ್ಲವೆಂದಿಲ್ಲ. ಅನೇಕ ಶಾಸ್ತ್ರಕಾರರು 'ಸ್ತ್ರಿಯಾ ನಿರೀಂದ್ರಿಯಾ' ಎನ್ನುವ ಶ್ರುತಿವಾಕ್ಯವನ್ನು ಆಧಾರವಾಗಿಟ್ಟುಕೊಂಡು 'ಸ್ತ್ರೀಯರು ನಿರೀಂದ್ರಿಯರು' ಅಂದರೆ ಅವರು 'ಶಕ್ತಿಹೀನರು' ಎಂದು ವ್ಯಾಖ್ಯೆಮಾಡಿ ಅವರ ಸ್ವತ್ವಾಧಿಕಾರವನ್ನು ವಂಚಿಸಿದರು. ಅನೇಕ ಟೀಕಾಕಾರರು ಈ ವಾಕ್ಯಕ್ಕೆ ಬೇರೆ ಅರ್ಥ ನೀಡಿ ಸ್ತ್ರೀಯರ ಅಧಿಕಾರವನ್ನು ಈ ವಾಕ್ಯದ ಆಧಾರದ ಮೇಲೆ ಮೊಟಕುಗೊಳಿಸಕೂಡದೆಂದು ವಾದಮಾಡಿದ್ದಾರೆ. ವಿಜ್ಞಾನೇಶ್ವರನ ಸ್ತ್ರೀಪಕ್ಷಪಾತವನ್ನು ಗಮನಿಸಬೇಕಾದರೆ ಅವನು 'ಪತ್ನಿ' ಶಬ್ದದ ಮೇಲೆ ನೀಡಿರುವ ಮೂರು ನಾಲ್ಕು ಪುಟಗಳ ವ್ಯಾಖ್ಯೆಯೇ ಸಾಕು! ಅವಳ ಸ್ವತ್ವಾಧಿಕಾರವನ್ನು ವಿವಿಧ ದೃಷ್ಟಿಕೋನಗಳಿಂದ ಪರೀಕ್ಷಿಸಿ ಪತ್ನಿಗೆ ಉತ್ತರಾಧಿಕಾರಿಗಳ ಪಟ್ಟಿಯಲ್ಲಿ ಅಭೇದ್ಯಸ್ಥಾನ ಕಲ್ಪಿಸಿದ ಶ್ರೇಯಸ್ಸು ವಿಜ್ಞಾನೇಶ್ವರನಿಗೆ ಸಲ್ಲತಕ್ಕದ್ದು.

ಪತ್ನಿಯ ನಂತರ ಹೆಣ್ಣುಮಗಳಿಗೆ ಅಧಿಕಾರನೀಡುವ ದಿಸೆಯಲ್ಲಿ ವಿಜ್ಞಾನೇಶ್ವರನ ನಿಲುವನ್ನು ಗಮನಿಸೋಣ. ಯಾಜ್ಞವಲ್ಕ್ಯರು ಈ ಸಂದರ್ಭದಲ್ಲಿ 'ದುಹಿತರಃ' ಶಬ್ದವನ್ನು ಉಪಯೋಗಿಸಿದ್ದಾರೆ. ನಮ್ಮ ಸಮಾಜದಲ್ಲಿ ಸಂಪ್ರದಾಯಸ್ಥರು ಸ್ತ್ರೀಯರ ಅಧಿಕಾರವನ್ನು

ಮೊಟಕುಗೊಳಿಸಲು ಮಾಡಿದ ಬೌದ್ಧಿಕ ಕಸರತ್ತೇ ಇಲ್ಲ! ಪ್ರಸಕ್ತ ಸಂದರ್ಭದಲ್ಲಿ ಕೆಲವರು ಯಾಜ್ಞವಲ್ಕ್ಯರು ಉಪಯೋಗಿಸಿರುವ 'ದುಹಿತೃ' ಶಬ್ದದ ಅರ್ಥವನ್ನೇ ತಿರಿಚಲು ಪ್ರಯತ್ನಿಸಿದ್ದಾರೆ. ಅವರುಗಳು ಮೂಲಸ್ಮೃತಿಯಲ್ಲಿ ಶಾಸ್ತ್ರಕಾರರು 'ದುಹಿತೃ' ಶಬ್ದವನ್ನು ಕೇವಲ 'ಪುತ್ರಿಕಾ' ಶಬ್ದಕ್ಕೆ ಸೀಮಿತಗೊಳಿಸಿದ್ದಾರೆ ಎಂಬ ಸಲ್ಲದ ಅರ್ಥವನ್ನು ಆರೋಪಿಸಿದ್ದಾರೆ. ಈ ಸಂದರ್ಭದಲ್ಲಿ ಸ್ವಲ್ಪ ವಿವರಣೆಯ ಅಗತ್ಯವಿದೆ. ಪ್ರಾಚೀನ ಹಿಂದೂ ಸಮಾಜದಲ್ಲಿ ಪುತ್ರನಿಲ್ಲದ ವ್ಯಕ್ತಿ ಮಗಳನ್ನೇ ಪುತ್ರನೋಪಾದಿಯಾಗಿ ಕಂಡು ಅವಳನ್ನು ತನ್ನ ಆಸ್ತಿಗೆ ಹಕ್ಕುದಾರಿಣಿಯನ್ನಾಗಿ ಮಾಡುತ್ತಿದ್ದನು. ಅವಳನ್ನು ಶಾಸ್ತ್ರ 'ಪುತ್ರಿಕಾ' ಎಂದು ಕರೆಯುತ್ತಿತ್ತು. ಇದೇರೀತಿ ಕೆಲವು ಸಂದರ್ಭಗಳಲ್ಲಿ ತಂದೆಯಾದವನು ಹೆಣ್ಣುಮಗಳ ಮದುವೆಯ ಕಾಲದಲ್ಲಿ ಅಳಿಯನೊಡನೆ ಅವರಿಬ್ಬರಿಗಾಗುವ ಗಂಡು ಕೂಸು ತನ್ನ ಮಗನಾಗುವನೆಂಬ ಒಡಂಬಡಿಕೆ ಮಾಡಿಕೊಳ್ಳುವ ಪದ್ಧತಿಯಿತ್ತು. ಆ ರೀತಿ ಮಗಳಿಗೆ ಮಗನಾದಾಗ ಅವನನ್ನು 'ಪುತ್ರಿಕಾ ಪುತ್ರ'ನೆಂದು ಕರೆದು ಅವನಿಗೆ ಆಸ್ತಿ ದೊರಕುವಂತೆ ಮಾಡುವುದು, ಒಂದು ವಿಶೇಷ ರೂಢಿ. ಆದರೆ ಒಬ್ಬ ವ್ಯಕ್ತಿಯ ಮಗಳನ್ನು 'ಪುತ್ರಿಕಾ' ಗಳನ್ನಾಗಿ ಮಾಡಲು ಅಥವಾ ಮಗಳ ಮಗನನ್ನು 'ಪುತ್ರಿಕಾ ಪುತ್ರ'ನನ್ನಾಗಿ ಮಾಡಲು ತನ್ನ ಇಂಗಿತವನ್ನು ಒಂದು ರೀತಿಯ ಕರಾರಿನ ರೂಪದಲ್ಲಿ ವ್ಯಕ್ತಪಡಿಸಬೇಕಾಗಿದ್ದಿತು ಎಂಬುದು ಊಹೆ. ಏನೇ ಆಗಲೀ 'ಪುತ್ರಿಕಾ' ಒಂದು ಅಪವಾದವೇ ಹೊರತು ಎಲ್ಲಾ ಹೆಣ್ಣುಮಕ್ಕಳು 'ಪುತ್ರಿಕಾ' ಆಗಲು ಸಾಧ್ಯವಿರಲಿಲ್ಲ. ವಿಜ್ಞಾನೇಶ್ವರ ಕೆಲವು ಟೀಕಾಕಾರರ ಈ ರೀತಿಯ ನಿರ್ವಚನವನ್ನು ದೃಢವಾಗಿ ತಳ್ಳಿಹಾಕಿ ಮೃತವ್ಯಕ್ತಿಯ ಎಲ್ಲಾ ಪುತ್ರಿಯರಿಗೂ ತಂದೆಯ ಆಸ್ತಿಯಲ್ಲಿ ಉತ್ತರಾಧಿಕಾರವುಂಟು ಎಂದು ಎತ್ತಿಹಿಡಿದಿದ್ದಾನೆ. ಈ ವ್ಯಾಖ್ಯಾನದಲ್ಲಿ ಅವನು ತೋರುವ ಕಳಕಳಿಯನ್ನು ಆಧುನಿಕ ಸ್ತ್ರೀ ಅಧಿಕಾರಾನುಸಂಧಾನಕಾರರು ಮೆಚ್ಚುವಂತಹದು.

ಹೆಣ್ಣುಮಕ್ಕಳಿಲ್ಲದ ಸ್ಥಿತಿಯಲ್ಲಿ ಮೃತನ ಆಸ್ತಿ ಯಾರಿಗೆ ದೊರೆಯುತ್ತದೆ ಎನ್ನುವ ಪ್ರಶ್ನೆ ಸಹಜವಾಗಿ ಏಳುತ್ತದೆ. ಯಾಜ್ಞವಲ್ಕ್ಯರು ತಮ್ಮ ಶ್ಲೋಕದಲ್ಲಿ 'ಪತ್ನೀದುಹಿತರಶ್ಚೈವ ಪಿತರೌ...' ಎಂದಿದ್ದಾರೆ. ಮೇಲ್ನೋಟಕ್ಕೆ ಹೆಣ್ಣುಮಕ್ಕಳಿಲ್ಲದಾಗ ಆಸ್ತಿ ಮೃತನ ಮಾತಾಪಿತೃಗಳಿಗೆ ಸೇರಬೇಕು ಎನ್ನುವ ಅರ್ಥ ಮೂಡುತ್ತದೆ. ವಿಜ್ಞಾನೇಶ್ವರ ಬದುಕಿ ಬಾಳಿದ್ದು ಪುರುಷಪ್ರಧಾನ ಸಮಾಜದಲ್ಲಿ. ಪುರುಷಪ್ರಧಾನ ಸಮಾಜದಲ್ಲಿ ಗೋತ್ರಜರಿಗೆ (ಅಂದರೆ ಪುರುಷಕೊಂಡಿಗಳಿಂದಲೇ ಸಂಬಂಧಿತರಾದವರಿಗೆ-ಇಂಗ್ಲಿಷ್‌ಭಾಷೆಯಲ್ಲಿ ಅವರನ್ನು 'ಆ್ಯಗ್‌ನೇಟ್' ಎಂದು ಕರೆಯುತ್ತಾರೆ) ಆದ್ಯತೆ. ಗೋತ್ರಜರು ಸ್ತ್ರೀಯರ ಮೂಲಕ ಸಂಬಂಧಿತರಾದ ವ್ಯಕ್ತಿಗಳನ್ನು ಸ್ವತ್ವಾಧಿಕಾರದಿಂದ ವಂಚಿಸುವುದು ಎಲ್ಲಾ ಪ್ರಾಚೀನ ಪುರುಷಪ್ರಧಾನ ಸಮಾಜದ ಲಕ್ಷಣ. ಹೀಗಾಗಿ ಈ ಪದ್ಧತಿಯಲ್ಲಿ ಮಗಳ ಮಗನಿಗೆ ತಾಯಿಯ ತಂದೆಯ ಆಸ್ತಿಯಲ್ಲಿ ಉತ್ತರಾಧಿಕಾರ ದೊರೆಯುತ್ತಿರಲಿಲ್ಲ. ಈ ಸಂದರ್ಭದಲ್ಲಿ ಕ್ರಾಂತಿಕಾರಿ ವಿಜ್ಞಾನೇಶ್ವರ ಬಹಳ ಸ್ವಾರಸ್ಯವಾದ ರೀತಿಯಲ್ಲಿ ವ್ಯಾಖ್ಯಾನ

ಮಾಡಿದ್ದಾನೆ. ಪುತ್ರಿಯಿಲ್ಲದಾಗ ಮೃತನ ಆಸ್ತಿ 'ದೌಹಿತ್ರ'ನಿಗೆ ದೊರೆಯುತ್ತದೆ ಎನ್ನುತ್ತಾನೆ. ಯಾರಾದರೂ ಯಾಜ್ಞವಲ್ಕ್ಯರು ತಮ್ಮ ಸ್ಮೃತಿವಾಕ್ಯದಲ್ಲಿ 'ದೌಹಿತ್ರ'(ಮಗಳ ಮಗ)ನನ್ನು ಸ್ಪಷ್ಟವಾಗಿ ಉಲ್ಲೇಖಿಸಿಲ್ಲವಲ್ಲ ಎಂದರೆ ವಿಜ್ಞಾನೇಶ್ವರ, "ಹೆಣ್ಣುಮಗಳಿಲ್ಲದಾಗ ಅವಳ ಮಗ ದೌಹಿತ್ರನು ಧನವನ್ನು ಪಡೆಯುತ್ತಾನೆ ಎಂಬುದನ್ನು 'ಚ'(ಕೂಡಾ) ಶಬ್ದದಲ್ಲಿ ಆಚಾರ್ಯರು ಸೂಚಿಸಿದ್ದಾರೆ" (ಚ ಶಬ್ದಾತ್ ದುಹಿತ್ರಾಭಾವೆ ದೌಹಿತ್ರೋ ಧನಭಾಕ್) ಎಂದು ವ್ಯಾಖ್ಯಾನಮಾಡಿ ಮಗಳ ಮಗನ ಅಧಿಕಾರವನ್ನು ಭದ್ರಪಡಿಸುತ್ತಾನೆ.

ಸ್ಮೃತಿವಾಕ್ಯದಲ್ಲಿ ಮಗಳ ಮಗನಿಲ್ಲದಾಗ ಆಸ್ತಿ ಮಾತಾಪಿತೃಗಳಿಗೆ ದೊರೆಯುತ್ತದೆ ಎನ್ನುವ ಶಬ್ದವಿದೆ. ಈ ಸಂದರ್ಭದಲ್ಲಿ ಯಾಜ್ಞವಲ್ಕ್ಯರು 'ಪಿತರೌ' ಎನ್ನುವ ಶಬ್ದವನ್ನು ಪ್ರಯೋಗಿಸಿದ್ದಾರೆ. ಈಗ 'ಪಿತರೌ' ಶಬ್ದದ ಅರ್ಥ ತಿಳಿಯಲು ಪ್ರಯಾಸಪಡಬೇಕಾಗುತ್ತದೆ. ಒಬ್ಬ ವ್ಯಕ್ತಿ ತಂದೆ ತಾಯಿಗಳಿಬ್ಬರನ್ನೂ ಬಿಟ್ಟು, ಮೃತನಾದಾಗ ಅವನ ಆಸ್ತಿ ಮೊದಲು ಯಾರಿಗೆ ದೊರಕಬೇಕು ಎನ್ನುವ ಪ್ರಶ್ನೆಯೇಳುವುದು ಸಹಜ. ತಂದೆ ಮೊದಲೋ, ತಾಯಿ ಮೊದಲೋ ಇತ್ಯರ್ಥಮಾಡುವುದು ಸರಳವಲ್ಲ. ಸಂಸ್ಕೃತದ 'ಪಿತರೌ' ಶಬ್ದ ಇಂಗ್ಲಿಷ್ ಭಾಷೆಯ 'ಪೇರೆಂಟ್ಸ್ ' ಶಬ್ದದಷ್ಟೇ ಸಂದಿಗ್ಧವಾದದ್ದು. ವಿಜ್ಞಾನೇಶ್ವರನ ನಂತರ ಬಂದ ಅನೇಕ ಟೀಕಾಕಾರರು ತಮ್ಮ ಪುರುಷಪ್ರಧಾನ ವಿಚಾರಕ್ಕೇ ಪುಷ್ಟಿಕೊಡಲು ಯತ್ನಿಸಿದ್ದಾರೆ. ತಂದೆ ಪುರುಷ, ತಾಯಿಗಿಂತಲೂ ಹಿರಿಯ, ಅವನು ಮೃತಪುತ್ರನ ಅಪರಕರ್ಮಗಳನ್ನೆಲ್ಲಾ ಮಾಡುವ ಅಧಿಕಾರವುಳ್ಳವ. ಆದ್ದರಿಂದ ತಾಯಿಗಿಂತ ಮೊದಲು ಅವನು ಉತ್ತರಾಧಿಕಾರಕ್ಕೆ ಹಕ್ಕುಳ್ಳವ ಎಂದೆಲ್ಲಾ ವಾದಮಾಡಿ ತಂದೆಗೆ ಉತ್ತರಾಧಿಕಾರವನ್ನು ನೀಡುತ್ತಾರೆ.

ವಿಜ್ಞಾನೇಶ್ವರ ಈ ವಾದಗಳಿಗೆಲ್ಲಾ ಸೊಪ್ಪಾಗುವವನಲ್ಲ. ವಿಚಾರಗಳಲ್ಲಿ ಕ್ರಾಂತಿಕಾರಿ ಯಾಗುವುದರ ಜೊತೆಗೆ ಅವನು ಮಹಾವಿದ್ವಾಂಸ. ಈ ಸಂದರ್ಭದಲ್ಲಿ ಅವನು ಹೇಗಾದರೂ ತಾಯಿಗೆ ಪ್ರಾಥಮಿಕತೆ ನೀಡುವ ಉದ್ದೇಶದಿಂದ ವ್ಯಾಕರಣ ನಿಯಮವನ್ನೂ ಬಿಟ್ಟಿಲ್ಲ. 'ಪಿತರೌ' ಶಬ್ದವನ್ನು ಬಿಡಿಸಿದಾಗ ಅದು 'ಮಾತಾಚ ಪಿತಾಚ ಪಿತರೌ' ಎಂದಾಗುತ್ತದೆ. ಈ ವಿಗ್ರಹವಾಕ್ಯದಲ್ಲಿ ತಾಯಿ ಶಬ್ದ ಮೊದಲು ಬರುವುದರಿಂದ ಉತ್ತರಾಧಿಕಾರ ಅವಳಿಗೆ ಮೊದಲು ದೊರಕಬೇಕು ಎನ್ನುತ್ತಾನೆ ವಿಜ್ಞಾನೇಶ್ವರ! ಆದರೆ ಅವನಿಗೆ ವ್ಯಾಕರಣದ ಆಧಾರ ತೃಪ್ತಿನೀಡುವುದಿಲ್ಲ. ವಿಜ್ಞಾನೇಶ್ವರ ಉತ್ತರಾಧಿಕಾರ ಪ್ರಾಪ್ತಿಗೆ ವ್ಯಕ್ತಿ ಮೃತನೊಡನೆ ಪ್ರತ್ಯಾಸನ್ನತೆ ಅಥವಾ ಸಂಬಂಧ ಸಾಮಿಪ್ಯ (ಪ್ರೊಪಿನ್‌ಕ್ವಿಟಿ ಎನ್ನುತ್ತಾರೆ) ಹೊಂದಿರಬೇಕು ಎನ್ನುತ್ತಾನೆ. ಈ 'ಪ್ರತ್ಯಾಸನ್ನತೆ'ಯನ್ನು ಆಧಾರವಾಗಿಸಿಕೊಂಡು ಪುತ್ರನಿಗೆ ತಂದೆಗಿಂತ, ತಾಯಿಯ ಸಂಬಂಧ ಸಾಮಿಪ್ಯವಿರುವುದರಿಂದ ಅವಳು ತಂದೆಗಿಂತ ಮೊದಲು ಉತ್ತರಾಧಿಕಾರ ಪಡೆಯಲು ಅರ್ಹಳು ಎನ್ನುತ್ತಾನೆ. ಆಧುನಿಕರು ವಿಜ್ಞಾನೇಶ್ವರನ ಈ ವಾದ ಸ್ಫುಟವಾಗಿಲ್ಲವೆನ್ನಬಹುದು. ಮೇಲ್ನೋಟಕ್ಕೆ ಇದು ಅಸಮರ್ಪಕವಾಗಿ ತೋರಿದರೂ ಅವನು ಸಪಿಂಡ ಪರಿಭಾಷೆಯನ್ನು ನೀಡುವ ಸಂದರ್ಭದಲ್ಲಿ ಗರ್ಭೋಪನಿಷತ್ತನ್ನು ಉಲ್ಲೇಖಿಸಿರುವುದನ್ನು ನೆನಪಿಟ್ಟುಕೊಂಡರೆ ವಿಜ್ಞಾನೇಶ್ವರನ ಈ

ವಾದಕ್ಕೆ ಸ್ವಲ್ಪ ಪುಷ್ಟೀಕರಣ ದೊರಕುತ್ತದೆ. ಅಲ್ಲಿ ಅವನು ಶರೀರದ ರಚನೆ ಬಗ್ಗೆ ನಿರೂಪಿಸುತ್ತಾ ವ್ಯಕ್ತಿ ತಾಯಿಯಿಂದ ರಕ್ತವನ್ನು ಪಡೆಯುತ್ತಾನೆ ಎಂದಿದ್ದಾನೆ. ಪ್ರಾಯಶಃ ವಿಜ್ಞಾನೇಶ್ವರ ಈ ವೈಜ್ಞಾನಿಕ ಆಧಾರವನ್ನು ಗಮನದಲ್ಲಿಟ್ಟುಕೊಂಡು ತಾಯಿ ತಂದೆಗಿಂತ ಮಗನಿಗೆ ಹತ್ತಿರವಾದವಳು ಎನ್ನುವ ವಾದವನ್ನು ಮಂಡಿಸಿರಬಹುದು. ಏನೇ ಆಗಲೀ ಸ್ತ್ರೀಅಧಿಕಾರದ ಮೇಲ್ಮೈ ಸಾಧಿಸುವ ದಿಸೆಯಲ್ಲಿ ಅವನು ತೋರುವ ಕಳಕಳಿ ನಮ್ಮ ಮೆಚ್ಚುಗೆಗೆ ಅರ್ಹ. ಇದೇರೀತಿ ಯಾಜ್ಞವಲ್ಕ್ಯರ ಶ್ಲೋಕದಲ್ಲಿ ತಂದೆಯ ತಾಯಿ ಮತ್ತು ತಾತನ ತಾಯಿಗೆ ಸ್ಥಾನವಿಲ್ಲದಿದ್ದರೂ ವಿಜ್ಞಾನೇಶ್ವರ ತನ್ನ ವ್ಯಾಖ್ಯಾನದಲ್ಲಿ ಅವರುಗಳಿಗೂ ಉತ್ತರಾಧಿಕಾರವನ್ನು ನೀಡಿದ್ದಾನೆ.

ವಿಜ್ಞಾನೇಶ್ವರನ ವಿಚಾರ ವೈಶಾಲ್ಯತೆಗೆ ಗಮನ ನೀಡಬೇಕಾದರೆ ಧರ್ಮಶಾಸ್ತ್ರಗ್ರಂಥಗಳಲ್ಲಿ ನಿರೂಪಿಸಿರುವ 'ಸ್ತ್ರೀಧನ'ದ ವಿಷಯವನ್ನು ನೋಡಬೇಕು. ಪರಂಪರಾಗತ ಹಿಂದೂ ಕಾನೂನಿನಲ್ಲಿ ಒಬ್ಬ ಹಿಂದೂಸ್ತ್ರೀ ಅರ್ಜಿಸುವ ಧನ ಅಥವಾ ಆಸ್ತಿಯನ್ನು ಎರಡು ವರ್ಗದಲ್ಲಿ ವಿಂಗಡಿಸಿರುವುದನ್ನು ನಾವು ಕಾಣುತ್ತೇವೆ. ಒಂದು, 'ಸ್ತ್ರೀಧನ', ಮತ್ತೊಂದು 'ಸ್ತ್ರೀಧನವನ್ನು ಬಿಟ್ಟು' ಮಿಕ್ಕೆಲ್ಲಾ ಸ್ವತ್ತುಗಳು. ಇವೆರಡೂ ವಿಧದ ಆಸ್ತಿಗಳ ನಡುವೆ ಇರುವ ಅಂತರವನ್ನು ನಾವು ಗಮನಿಸುವುದು ಅಗತ್ಯ. ಕೆಲವು ಸಂದರ್ಭಗಳಲ್ಲಿ ಸ್ತ್ರೀಗೆ ದೊರಕುವ ವಿಶೇಷಧನವನ್ನು ಶಾಸ್ತ್ರಕಾರರು ಸ್ತ್ರೀಧನವೆಂದು ವರ್ಗೀಕರಿಸುವುದಲ್ಲದೆ, ಆ ಧನದ ಮೇಲೆ ಆ ಸ್ತ್ರೀಗೆ ಪರಿಪೂರ್ಣ ಸ್ವತ್ವಾಧಿಕಾರ ದೊರಕುತ್ತದೆ ಎನ್ನುವುದಕ್ಕೆ ಒತ್ತುನೀಡಿದ್ದಾರೆ. ಅದೂ ಅಲ್ಲದೆ ಆ ಸ್ತ್ರೀಯ ದೇಹಾವಸಾನವಾದ ಮೇಲೆ ಅವಳ ವಾರಸುದಾರರಿಗೆ ಅದು ದೊರೆಯುತ್ತದೆ. ಸ್ತ್ರೀಧನವಲ್ಲದೆ ಬೇರೆ ರೀತಿಯ ಅರ್ಜನೆಯಲ್ಲಿ ಸ್ತ್ರೀಗೆ ಅಧಿಕಾರವಿದ್ದರೂ, ಅದು ಸೀಮಿತವಾದದ್ದು ಎಂಬುದು ಅದರ ಪ್ರಕೃತಿ. ಉದಾಹರಣೆಗೆ, ಒಬ್ಬ ಸ್ತ್ರೀ ಪತಿಯ ಮರಣಾನಂತರ ಪಡೆಯುವ ಆಸ್ತಿ ಸ್ತ್ರೀಧನವಾಗದೆ, ಮತ್ತೊಂದು ವರ್ಗದಲ್ಲಿ ಬರುತ್ತದೆ. ಈ ರೀತಿಯ ಆಸ್ತಿಯನ್ನು ಅವಳು ತನ್ನ ಸ್ವೇಚ್ಛಾನುಸಾರವಾಗಿ ಹಸ್ತಾಂತರ ಮಾಡುವಂತಿಲ್ಲ. ಅವಳು ಕಾಲವಾದಾನಂತರ ಆ ಆಸ್ತಿ ಅವಳ ಮೃತಪತಿಯ ಅನ್ಯ ವಾರಸುದಾರರಿಗೆ ಪ್ರಾಪ್ತವಾಗುತ್ತದೆ.

ಪ್ರತಿಯೊಬ್ಬ ಸ್ಮೃತಿಕಾರನು ಸ್ತ್ರೀಧನದ ಬಗ್ಗೆ ನಿರೂಪಣೆ ನೀಡಿದ್ದಾನೆ. ಆ ಸ್ಮೃತಿವಾಕ್ಯಗಳಿಂದ ಹೊಮ್ಮುವ ವಿಚಾರವೆಂದರೆ, ಒಬ್ಬ ಸ್ತ್ರೀ ತನ್ನ ವಿವಾಹ ಸಮಯದಲ್ಲಿ ಅಗ್ನಿಯ ಸಮಕ್ಷಮದಲ್ಲಿ ಪಡೆಯುವ ಧನ, ವಧುವನ್ನು ಕರೆತರುವಾಗ ಪಡೆಯುವ ಧನ, ತಾಯಿ, ತಂದೆ, ಸಹೋದರ ಮತ್ತು ಬಂಧುವರ್ಗದಿಂದ ಪಡೆಯುವ ಪ್ರೀತಿ, ಧನಗಳೆಲ್ಲಾ ಸ್ತ್ರೀಧನವೆಂದು ಪರಿಗಣಿಸಲ್ಪಟ್ಟಿದೆ ಎನ್ನುವ ಸಂಗತಿ. ಶಾಸ್ತ್ರಕಾರರು ಸ್ತ್ರೀಧನದ ಬಗ್ಗೆ ಬಹಳ ದೀರ್ಘವಾಗಿ ವಿವೇಚಿಸಿದ್ದಾರೆ. ನಾವು ಇಲ್ಲಿ ಸಂಕ್ಷೇಪವಾಗಿ ಯಾಜ್ಞವಲ್ಕ್ಯರ ಶ್ಲೋಕ ಮತ್ತು ಅದರ ಮೇಲೆ ವಿಜ್ಞಾನೇಶ್ವರ ನೀಡಿರುವ ವ್ಯಾಖ್ಯಾನವನ್ನು ಮಾತ್ರ ಗಮನಿಸೋಣ.

ಯಾಜ್ಞವಲ್ಕ್ಯರು ವಿವಾಹಕಾಲದಲ್ಲಿ "ಒಬ್ಬ ಸ್ತ್ರೀ ತನ್ನ ತಾಯಿ, ತಂದೆ, ಪತಿ, ಭ್ರಾತೃಗಳಿಂದ ವಿವಾಹಾಗ್ನಿಯ ಸಮಕ್ಷಮದಲ್ಲಿ ಪಡೆಯುವ ಧನ (ವಿವಾಹಕಾಲದಲ್ಲಿ ಮಾತುಲಾದಿ ಸಂಬಂಧಿಗಳು ನೀಡುವುದು ಸೇರಿ) 'ಅಧಿವೇದನಿಕಾದಿ'ಗಳು ಸ್ತ್ರೀಧನವೆಂದು ಕರೆಯಲ್ಪಡುತ್ತದೆ" ಎನ್ನುತ್ತಾರೆ. ಈ ನಿರೂಪಣೆ ಮನುವಿನ ಮತ್ತು ಮತ್ತಿತರ ಸ್ಮೃತಿಕಾರರು ನೀಡಿರುವ ವಿವರಣೆಯೊಡನೆ ಸಾಮ್ಯತೆ ಹೊಂದಿದೆ. ವಿಜ್ಞಾನೇಶ್ವರನು ಯಾಜ್ಞವಲ್ಕ್ಯರ ಶ್ಲೋಕದಲ್ಲಿ ಅಗತ್ಯವಿರುವ ಒಂದೆರಡು ಶಬ್ದಗಳಿಗೆ ತನ್ನ ವಿವರಣೆ ನೀಡುತ್ತಾನೆ. ಅಲ್ಲಿ ಉಪಯೋಗಿಸಿರುವ ಎರಡು ಶಬ್ದಗಳ ಅರ್ಥವನ್ನು ನಾವು ಗಮನಿಸೋಣ. ಒಂದು 'ಅಧಿವೇದನಿಕ', ಮತ್ತೊಂದು 'ಆದ್ಯಂಚ'. ಒಬ್ಬ ವ್ಯಕ್ತಿ ತನ್ನ ಹೆಂಡತಿಯ ಜೀವಿತಕಾಲದಲ್ಲಿ ಪುನರ್ವಿವಾಹ ಮಾಡಿಕೊಂಡಾಗ ಮೊದಲನೆಯ ಹೆಂಡತಿಗೆ ನೀಡುವ ಪರಿಹಾರವನ್ನು ಶಾಸ್ತ್ರಕಾರರು 'ಅಧಿವೇದನಿಕ'ವೆಂದು ಕರೆದಿದ್ದಾರೆ. ತಂದೆ, ತಾಯಿ, ಸಹೋದರವರ್ಗ, ಬಂಧು ಬಾಂಧವರು ನೀಡುವ ಪ್ರೀತಿಯಧನ ಮತ್ತು 'ಅಧಿವೇದನಿಕ' ಎಲ್ಲವೂ ಸ್ತ್ರೀಧನ ಶಬ್ದದಲ್ಲಿ ಬರುತ್ತವೆ. ಈ ನಿರೂಪಣೆಯಲ್ಲಿ ಬರದ, ಮತ್ತಿತರ ರೀತಿಯಲ್ಲಿ ಅರ್ಜಿಸುವ ಸ್ವತ್ತು ಅಥವಾ ಧನ ಸ್ತ್ರೀಧನವಾಗುವುದಿಲ್ಲವೆಂದು ಅರ್ಥವಾಗುತ್ತದೆ. ಈ ರೀತಿಯ ವ್ಯಾಖ್ಯಾನ ವಿಜ್ಞಾನೇಶ್ವರನಿಗೆ ಪಥ್ಯವಾಗದು. ಅವನು ತನ್ನ ವಿಷಯ ಪ್ರತಿಪಾದನೆಯಲ್ಲಿ ಮನಃಪೂರ್ವಕವಾಗಿ ಸ್ತ್ರೀ ಪಕ್ಷಪಾತಿ. ಇದರ ಬಗ್ಗೆ ಅವನು ಯಾವರೀತಿಯ ಸಂಧಾನಕ್ಕೂ ತಯಾರಿಲ್ಲ.

ಯಾಜ್ಞವಲ್ಕ್ಯರು ಉಪಯೋಗಿಸಿರುವ 'ಆದ್ಯಂಚ'ವಿಗೆ ವಿಜ್ಞಾನೇಶ್ವರನ ವ್ಯಾಖ್ಯೆಯನ್ನು ನೋಡಿ : "ಮನ್ವಾದಿ ಸ್ಮೃತಿಕಾರರು ಉಲ್ಲೇಖಿಸಿರುವ ರಿಕ್ತ (ಉತ್ತರಾಧಿಕಾರದಲ್ಲಿ ಪ್ರಾಪ್ತವಾದ), ಕ್ರಯ, ಸಂವಿಭಾಗ, ಪರಿಗ್ರಹ, ಅಧಿಗಮದಲ್ಲಿ ಪಡೆದ ಸ್ವತ್ತುಗಳೆಲ್ಲಾ ಸ್ತ್ರೀಧನ ಶಬ್ದದಲ್ಲಿ ಬರುತ್ತದೆ" ಎಂಬುದನ್ನು 'ಆದಿ' ಶಬ್ದ ಹೊರಸೂಸುತ್ತದೆ ಎನ್ನುತ್ತಾನೆ ಈ ಕ್ರಾಂತಿಕಾರಿ ಟೀಕಾಕಾರ. ಅಂದರೆ ವಿಜ್ಞಾನೇಶ್ವರ ಸ್ತ್ರೀಯ ಸ್ವತ್ವಾಧಿಕಾರದ ಮೇಲೆ ಯಾವುದೇ ರೀತಿಯ ಪ್ರತಿಬಂಧ ಹೇರುವುದನ್ನೂ ಸಹಿಸಲಾರ. ಅವನು ತನ್ನ ನಿಲುವನ್ನು ಸಮರ್ಥಿಸಿಕೊಳ್ಳುತ್ತಾ, "ಸ್ತ್ರೀಧನವನ್ನು (ಶಬ್ದನಿಷ್ಪತ್ತಿಯ ಮೂಲಕ) ಯೌಗಿಕ ಅರ್ಥದಲ್ಲಿ ಅರಿಯಬೇಕೇ ವಿನಾ ಪಾರಿಭಾಷಿಕ ರೂಪದಲ್ಲಲ್ಲ. ಪಾರಿಭಾಷಿಕ ಅರ್ಥವನ್ನಾರೋಪಿಸುವುದು ಅಯುಕ್ತವು" ಎನ್ನುತ್ತಾನೆ. ವಿಜ್ಞಾನೇಶ್ವರ ಮೂಲಶಬ್ದಗಳ ಅರ್ಥದ ಆಧಾರದ ಮೇಲೆ ಸ್ತ್ರೀಯರ ಮೇಲೆ ಹೇರಲು ಪ್ರಯತ್ನಿಸುವ ಎಲ್ಲಾ ಸಂಕೋಲೆ ಗಳನ್ನು ಕಿತ್ತೊಗೆದರೆ, ಅವನ ನಂತರ ಬಂದ ಅನೇಕ ಟೀಕಾಕಾರರು ವಿಜ್ಞಾನೇಶ್ವರನಂತೆ ವಿಶಾಲ ಮನೋಭಾವನೆಗೆ ಎಡೆಗೊಡದೆ ಸ್ತ್ರೀಧನ ಶಬ್ದಕ್ಕೆ ಪಾರಿಭಾಷಿಕ ತೊಡಿಗೆಯನ್ನು ತೊಡಿಸಿದ್ದು ಸ್ತ್ರೀ ಅಧಿಕಾರಾನುಸಂಧಾನಕ್ಕೆ ಒಂದು ದೊಡ್ಡ ಪ್ರತಿಬಂಧಕವಾಯಿತೆನ್ನುವುದು ನಿಸ್ಸಂದೇಹ. ಬ್ರಿಟಿಷರ ಕಾಲದಲ್ಲಿ ಸರ್ವೋಚ್ಚ ನ್ಯಾಯಾಲಯವಾಗಿದ್ದ 'ಪ್ರೀವೀ ಕೌನ್ಸಿಲ್' ಕೂಡಾ ವಿಜ್ಞಾನೇಶ್ವರನ ವ್ಯಾಖ್ಯೆಯನ್ನು ತಿರಸ್ಕರಿಸಿ, ಅದಕ್ಕೆ ವಿರುದ್ಧವಾದ ಅನ್ಯ ಟೀಕಾಕಾರರ ಮತವನ್ನು ಒಪ್ಪಿದ್ದು ಒಂದು ದೊಡ್ಡ ದುರಂತವೆನ್ನಬಹುದು.

ಇಂತಹ ಏಕಮೇವ ಅದ್ವಿತೀಯ ಟೀಕಾಕಾರ ವಿಜ್ಞಾನೇಶ್ವರನ ಹೆಸರಿನಲ್ಲಿ ಅವನ ಕಾರ್ಯಕ್ಷೇತ್ರವಾಗಿದ್ದ ಮರ್ತೂರಿನಲ್ಲಿ ಒಂದು ಸಂಶೋಧನಾ ಪ್ರತಿಷ್ಠಾನವನ್ನು ಸ್ಥಾಪಿಸುವ ದಿಸೆಯಲ್ಲಿ ಶ್ರಮಿಸಿರುವ ಬಿಹಾರಿನ ರಾಜ್ಯಪಾಲರಾಗಿದ್ದ ನ್ಯಾಯಮೂರ್ತಿ ಎಂ. ರಾಮಾಜೋಯಿಸರಿಗೆ ಈ ದೇಶದ ಕಾನೂನುತಜ್ಞರು ಮತ್ತು ಕನ್ನಡಿಗರು ಆಭಾರಿಗಳಾಗಿರಬೇಕು. ಕನ್ನಡಿಗರಾದ ನಾವು ಪ್ರಾಯಃಶ್ಚಿತ್ತೋಪಾದಿಯಲ್ಲಿ ವಿಜ್ಞಾನೇಶ್ವರ ಹಚ್ಚಿದ ದೀಪವನ್ನು ನಂದದಂತೆ ನೋಡಿಕೊಳ್ಳುವ ಪ್ರಯತ್ನ ಮಾಡೋಣ.

**ಟಿಪ್ಪಣಿಗಳು**

೧. ಬಂಗಾಳದಲ್ಲಿ ಜೀಮೂತವಾಹನನೆಂಬ ನಿಬಂಧಕಾರ ರಚಿಸಿದ 'ದಾಯಭಾಗ' ಆಕರಗ್ರಂಥವಾಗಿರುವುದು ಹಿಂದೂ ಕಾನೂನನ್ನು ಅಧ್ಯಯನ ಮಾಡುವ ಪ್ರತಿಯೊಬ್ಬ ವಿದ್ಯಾರ್ಥಿಗೂ ತಿಳಿದ ವಿಷಯ.

೨. ಸಂಪೂರ್ಣ ಭಾರತದಲ್ಲಿ ಮಿತಾಕ್ಷರಾಶಾಖೆ ಅನ್ವಯವಾದರೆ, ದಾಯಭಾಗಶಾಖೆ ಬಂಗಾಳಕ್ಕೆ ಸೀಮಿತವಾಗಿದೆ. ಮಿತಾಕ್ಷರಾ ಮುಖ್ಯಶಾಖೆಯಲ್ಲಿ ಐದು ಉಪಶಾಖೆಗಳು ಭಾರತದ ವಿವಿಧ ಪ್ರಾಂತಗಳಲ್ಲಿ ಉಗಮವಾಗಿವೆ.

೩. ನ್ಯಾಯಶಾಸ್ತ್ರ(ಜ್ಯೂರಿಸ್ ಪ್ರೂಡೆನ್ಸ್)ದಲ್ಲಿ ಖ್ಯಾತ ಲೇಖಕರುಗಳು ತಮ್ಮ ತಮ್ಮ ಮೂಗುನೇರಕ್ಕೆ ಕಾನೂನಿನ ಪರಿಭಾಷೆಯನ್ನು ನೀಡಿದ್ದಾರೆ. ಅವರುಗಳು ನೀಡಿರುವ ಪರಿಭಾಷೆಯನ್ನು ಗಮನಿಸಿದರೆ ಯಾರಿಗಾದರೂ 'ಆನೆ ಮತ್ತು ಏಳುಜನ ಕುರುಡರು' ಕಥೆಯಲ್ಲಿ ಒಬ್ಬೊಬ್ಬನೂ ಆನೆಯ ವಿವರಣೆಯನ್ನು ನೀಡುವುದು ಜ್ಞಾಪಕಕ್ಕೆ ಬರುತ್ತದೆ.

೪. ಕಾನೂನು ಶಬ್ದದಂತೆಯೇ ಧರ್ಮ ಶಬ್ದವನ್ನು ಪರಿಭಾಷೆಯ ಚೌಕಟ್ಟಿನಲ್ಲಿ ಅಡಕಮಾಡುವುದು ಬಹಳ ಕ್ಲಿಷ್ಟವಾದ ಕೆಲಸ. ಅದು ಜೀವನದ ಪ್ರತಿಯೊಂದು ಕ್ರಿಯೆಯ ಮೌಲ್ಯಮಾಪನ ಮಾಡುವ ಮಾಪದಂಡ. ಈ ಕಾರಣದಿಂದಲೇ ಪಾಶ್ಚಾತ್ಯರು 'ಧರ್ಮ' ಶಬ್ದದ ಪರಿಭಾಷೆ ನೀಡುವಾಗ ಎಡವಿರುವುದು. ಉದಾಹರಣೆಗೆ, ಆಂಗ್ಲಭಾಷೆಯಲ್ಲಿ 'ಲಾ' 'ರಿಲಿಜನ್' 'ಮೊರಾಲಿಟಿ' 'ಎಥಿಕ್ಸ್' ಎಂದು ಕರೆಯುವ ಸನ್ನಿವೇಶದಲ್ಲಿ ನಾವು 'ಧರ್ಮ' ಶಬ್ದವನ್ನು ಆಯಾ ಸಂದರ್ಭಕ್ಕೆ ಅನುಗುಣವಾಗಿ, ನಿಖರವಾದ ಅರ್ಥದಲ್ಲಿ ಉಪಯೋಗಿಸಬಹುದು. ಹತ್ತೊಂಬತ್ತನೇ ಶತಮಾನದಲ್ಲಿ ಭಾರತೀಯ ಕಾನೂನಿನ ಬಗ್ಗೆ ವಿಶ್ಲೇಷಣೆ ಕೈಗೊಂಡ ಅನೇಕ ಪಾಶ್ಚಾತ್ಯ ಲೇಖಕರು, 'ಧರ್ಮ'ದ ವ್ಯಾಪಕ ಅರ್ಥವನ್ನು ಗ್ರಹಿಸಲಾರದೆ ಅದನ್ನು 'ಲಾ' ಅಥವಾ 'ಕಾನೂನು' ಎಂದು ನಿಖರವಾಗಿ ಗುರ್ತಿಸಲು ಪ್ರಯತ್ನಿಸಿರುವುದನ್ನು ಕಾಣುತ್ತೇವೆ. ಪ್ರೀವೀ ಕೌನ್ಸಿಲ್‌ನ ಅನೇಕ ನಿರ್ಣಯಗಳಲ್ಲಿ ಧರ್ಮಸಿದ್ಧಾಂತ ಪ್ರತಿಪಾದನೆ ಮಾಡುವುದರಲ್ಲಿ ಅನೇಕ ಮೇಧಾವಿ ನ್ಯಾಯಾಧೀಶರು ಎಡವಿರುವುದನ್ನೂ ನಾವು ಗಮನಿಸಬಹುದು. ಪಿ.ವಿ.ಕಾಣೆಯವರು ತಮ್ಮ 'ವಿಶ್ವಕೋಶ' ಸದೃಶ ಗ್ರಂಥದ ಪ್ರಥಮ ಸಂಪುಟದಲ್ಲಿ 'ಧರ್ಮ'ದ ಅರ್ಥವನ್ನು ವರ್ಣಿಸಲು ಪ್ರಯತ್ನಿಸಿದ್ದಾರೆ.

೫. ೧೯೫೫-೫೬ರಲ್ಲಿ ಹಿಂದೂ ಕಾನೂನಿನಲ್ಲಿ ಸಂಸತ್ತು ಸಮಗ್ರ ಪರಿವರ್ತನೆ ತಂದಿದ್ದರೂ ಇಂದೂ ಅನೇಕ ಕ್ಷೇತ್ರಗಳಲ್ಲಿ ಹಿಂದೂ ಸಮುದಾಯ ಮೂರುಸಾವಿರ ವರ್ಷಗಳ ಹಿಂದೆ ಅಸ್ತಿತ್ವಕ್ಕೆ ಬಂದ ಅನೇಕ ವಿಚಾರ ಮತ್ತು ಸಿದ್ಧಾಂತಗಳಿಂದ ಶಾಸಿಸಲ್ಪಡುತ್ತಿದೆ. ಉದಾಹರಣೆಗೆ, ಸಂಯುಕ್ತ ಹಿಂದೂ ಕಾನೂನನ್ನು ನೋಡಬಹುದು. ಈ ರೀತಿ ವಿಶ್ವದ ಯಾವ ಸಮುದಾಯವೂ ತನ್ನ ಕಾನೂನು ಪರಂಪರೆಯನ್ನು ಉಳಿಸಿಕೊಂಡಿಲ್ಲವೆಂದು ಧಾರಾಳವಾಗಿ ಹೇಳಬಹುದು.

೬. ಹಿಂದೂ ಕಾನೂನಿನ ನಿರೂಪಣೆಯನ್ನು ಬಹಳ ಮಂದಿ ಲೇಖಕರು ವೈದಿಕಸಾಹಿತ್ಯದಿಂದ ಆರಂಭಿಸಿದರೂ ಕಾನೂನಿಗೆ ಸಂಬಂಧಿಸಿದ ಬಹುಮಟ್ಟಿನ ವಿಚಾರಗಳು ಸೂತ್ರ ಮತ್ತು ಸ್ಮೃತಿ

ಗ್ರಂಥಗಳಲ್ಲಿ ಕಂಡುಬರುತ್ತವೆ. ಸೂತ್ರಸಾಹಿತ್ಯ ಸುಮಾರು ಮೂರುಸಾವಿರ ವರ್ಷಗಳ ಹಿಂದೆ ಆರಂಭಗೊಂಡಿದ್ದರೆ ಸ್ಮೃತಿಸಾಹಿತ್ಯ ಸುಮಾರು ಎರಡುಸಾವಿರದ ಇನ್ನೂರು ವರ್ಷಗಳ ಹಿಂದೆ ಅಸ್ತಿತ್ವಕ್ಕೆ ಬಂದಿತು. ಈ ಎರಡು ಸಾಹಿತ್ಯಗಳ ನಡುವಿನ ಮುಖ್ಯ ಅಂತರವೆಂದರೆ ಸೂತ್ರಗಳು ಪ್ರಾಚೀನಶೈಲಿಯ ಗದ್ಯದಲ್ಲಿದ್ದರೆ, ಸ್ಮೃತಿಗಳು ಪದ್ಯರೂಪದಲ್ಲಿ ಬರೆಯಲ್ಪಟ್ಟಿವೆ. ಸಮಯ, ಶೈಲಿ, ವಿಚಾರ ಪ್ರತಿಪಾದನೆಯ ರೀತಿಯಲ್ಲಿ ಈ ಎರಡು ಸಾಹಿತ್ಯಪ್ರಕಾರಗಳಲ್ಲಿ ಭೇದ ಕಂಡುಬಂದರೂ, ಅನೇಕ ಧರ್ಮಶಾಸ್ತ್ರಕಾರರು ಈ ಎರಡು ವರ್ಗದ ಸಾಹಿತ್ಯವನ್ನು ಸಾಮಾನ್ಯ ಅರ್ಥದಲ್ಲಿ ಉಪಯೋಗಿಸುವ 'ಸ್ಮೃತಿ' ಶಬ್ದದಲ್ಲಿಯೇ ತರುತ್ತಾರೆ.

೭. 'ಸದಾಚಾರ'ದ ಬಗ್ಗೆ ಉಲ್ಲೇಖಿಸುವಾಗ ಈ ದೇಶದ ವಿಭಿನ್ನ ಪ್ರಾಂತಗಳಲ್ಲಿ ಆಚರಣೆಯಲ್ಲಿರುವ ಕೆಲವು ಪದ್ಧತಿಗಳನ್ನು ಬಹಳ ರೋಚಕವಾಗಿ ವರ್ಣಿಸಿದ್ದಾರೆ.

೮. ಪಾಟಲಿಪುತ್ರದ ನ್ಯಾಯಾಲಯದ ಮುಂದೆ ಬಂದ ಶ್ರೀಧರ ಹಾಗೂ ಮಹೀಧರರ ಮೊಕದ್ದಮೆಯಲ್ಲಿ ಸಾಲದ ಬಾಧ್ಯತೆಯ ಬಗ್ಗೆ ನಾರದನ ಶ್ಲೋಕವೊಂದನ್ನು ಅರ್ಥೈಸುವ ರೋಚಕ ಸನ್ನಿವೇಶವನ್ನು ನಾರದಸ್ಮೃತಿಯ ಟೀಕಾಕಾರನಾದ ಅಸಹಾಯ ಬಹಳ ಸ್ವಾರಸ್ಯವಾಗಿ ನಿರೂಪಿಸಿದ್ದಾನೆ. ನಾರದಸ್ಮೃತಿ I, ೫-೬ರ ಮೇಲಿನ ಟೀಕೆಯನ್ನು ನೋಡಿ.

೯. ಈ ಸಂದರ್ಭದಲ್ಲಿ ಕಾನೂನುತಜ್ಞರು 'ಪರ್ಸನಲ್ ಲಾ' ಎನ್ನುವ ಶಬ್ದವನ್ನು ಉಪಯೋಗಿಸುತ್ತಾರೆ. ದುರ್ಭಾಗ್ಯವಶಾತ್ ಅನೇಕ ಲೇಖಕರು 'ಪರ್ಸನಲ್ ಲಾ'ವನ್ನು 'ವೈಯಕ್ತಿಕ ಕಾನೂನು' ಎಂದು ಅನುವಾದಿಸುತ್ತಾರೆ. ಇದು ಕೇವಲ ಶಾಬ್ದಿಕ ಅನುವಾದವೇ ಹೊರತು ಆ ಇಂಗ್ಲಿಷ್ ಪದದ ಅಭಿಪ್ರಾಯವನ್ನು ಮೂಡಿಸುವುದಿಲ್ಲ. 'ಪರ್ಸನಲ್ ಲಾ' ಎಂದರೆ ವ್ಯಕ್ತಿಯ ಮತದ ಆಧಾರದ ಮೇಲೆ ಅನ್ವಯವಾಗುವ ಕಾನೂನು ಎಂದರ್ಥ. ಹಿಂದೂಗಳು ಹಿಂದೂ ಕಾನೂನಿನಿಂದ, ಮುಸಲ್ಮಾನರು ಮುಸ್ಲಿಂ ಕಾನೂನಿನಿಂದ, ಕ್ರೈಸ್ತರು ಅವರ ಕಾನೂನಿನಿಂದ ಶಾಸಿತವಾಗುತ್ತಾರೆ. ಆದ್ದರಿಂದ 'ಪರ್ಸನಲ್ ಲಾ'ವನ್ನು 'ಮತಾಧಾರಿತ ಕಾನೂನು' ಎನ್ನುವುದು ಬಹಳ ಯುಕ್ತ.

೧೦. ಅವಿಪ್ಲುತ ಬ್ರಹ್ಮಚರ್ಯೋ ಲಕ್ಷಣ್ಯಾಂ ಸ್ತ್ರೀ ಯಮುದ್ವಹೇತ್|
ಅನನ್ಯ ಪೂರ್ವಿಕಾಂ ಕಾಂತಾಮಸಪಿಂಡಾಮ್ ಯವೀಯಸೀಮ್||
ಅರೋಗಿಣೀಂ ಭ್ರಾತೃಮತೀಮಸಮಾನಾರ್ಷ ಗೋತ್ರಜಾಮ್|

-ಯಾಜ್ಞವಲ್ಕ್ಯ I, ೫೨, ೫೩

೧೧. ಈ ಮೇಲಿನ ಶ್ಲೋಕಗಳ ಮೇಲೆ ವಿಜ್ಞಾನೇಶ್ವರನ ವ್ಯಾಖ್ಯಾನ ಹೀಗಿದೆ : "ಅಸಪಿಂಡಾಮ್ ಸಮಾನ ಏಕಃ ಪಿಂಡೋ ದೇಹೋ ಯಸ್ಯಾಃ ಸಾ ಸಪಿಂಡಾ, ನ ಸಪಿಂಡಾ ಅಸಪಿಂಡಾತಾಮ್ | ಸಪಿಂಡತಾ ಚ ಏಕಶರೀರಾವಯವಾನ್ವಯೇನ ಭವತಿ| ತಥಾಹಿ ಪುತ್ರಸ್ಯ ಪಿತೃಶರೀರಾವಯವಾನ್ವಯೇನ ಪಿತ್ರೋ ಸಹೈಕಪಿಂಡತಾ| ಏವಂ ಪಿತಾಮಹಾದಿಭಿರಪಿ ಪಿತೃದ್ವಾರೇಣ ತಚ್ಛರೀರಾವಯವಾನ್ವಯಾತ್| ......"

೧೨. ಬಂಗಾಳದ ಜೀಮೂತವಾಹನನು ತನ್ನ 'ದಾಯಭಾಗ' ನಿಬಂಧದಲ್ಲಿ ಶ್ರಾದ್ಧಾಧಿಕಾರಿಯನ್ನೇ ಮೃತನ ಉತ್ತರಾಧಿಕಾರಿಯನ್ನಾಗಿಸುವ ಒಂದು ವಿಶಿಷ್ಟ ಸಂಪ್ರದಾಯವನ್ನೇ ಸೃಷ್ಟಿಸಿದ. ಇದಕ್ಕೆ ಪ್ರಾಚೀನ ಸೂತ್ರ ಮತ್ತು ಸ್ಮೃತಿಕಾರರುಗಳ ಉಕ್ತಿಗಳು ಆಧಾರ ವೊದಗಿಸಿದವು ಎಂದು ಕೂಡಾ ಹೇಳಬಹುದು. "ಪಿಂಡಂ ದದ್ಯಾತ್ ಹರೇದ್ಧನಂ" (ಪಿಂಡವನ್ನು ನೀಡುವವನು ಧನವನ್ನು ಪಡೆಯುತ್ತಾನೆ) ಎನ್ನುವುದು ಈ ವಿಚಾರಧಾರೆಯನ್ನು ಬಿಂಬಿಸುತ್ತದೆ. ವಿಜ್ಞಾನೇಶ್ವರ ಮತ್ತು ಅವನ ಅನುಯಾಯಿಗಳು ಈ ಪ್ರಬಲ ವಿಚಾರ ಧಾರೆಯನ್ನು ವಿರೋಧಿಸಿ ಉತ್ತರಾಧಿಕಾರದ ಸಂದರ್ಭದಲ್ಲಿ "ಪ್ರತ್ಯಾಸನ್ನತೆ"(ಸಂಬಂಧ ಸಾಮಿಪ್ಯ- 'ಪ್ರೊಪಿನ್‌ಕ್ವಿಟಿ')ಯನ್ನೇ ಆಧಾರವಾಗಿಸಿ ಒಂದು ಆಧುನಿಕ ಉತ್ತರಾಧಿಕಾರವಿಧಿಯನ್ನು ನಿರೂಪಿಸಿದ್ದಾರೆ.

೧೩. "ತಥಾ ಗರ್ಭೋಪನಿಷದಿ-ಏತತ್ ಷಾಟ್ಕೌಶಿಕಂ ಶರೀರಂ ತ್ರೀಣಿ ಪಿತೃತಸ್ತ್ರೀಣಿ ಮಾತೃತಃ| ಅಸ್ಥಿಸ್ನಾಯುಮಜ್ಜಾನಃ ಪಿತೃತಸ್ತ್ವಂಗಮಾಂಸರುಧಿರಾಣಿ ಮಾತೃತಃ." ಈ ಸುಂದರ ವಾಕ್ಯ ನಮ್ಮ ಪ್ರಾಚೀನರ ಶರೀರರಚನಾಶಾಸ್ತ್ರದ ಬಗ್ಗೆ ಇದ್ದ ವೈಜ್ಞಾನಿಕ ದೃಷ್ಟಿಕೋನವನ್ನು ಎತ್ತಿ ತೋರಿಸುತ್ತದೆ.

೧೪. ಸುಮಾರು ಮೂವತ್ತಾರು ವರ್ಷಗಳ ಹಿಂದೆ ಬರೋಡಾ ವಿಶ್ವವಿದ್ಯಾನಿಲಯದಲ್ಲಿ ವೈದ್ಯಕೀಯ ವಿದ್ಯಾಲಯದ ಡೀನ್ ಆಗಿದ್ದ ಪ್ರೊ.ನಿಯೋಗಿಯವರು ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದ ವೈದ್ಯಕೀಯ ವಿದ್ಯಾಲಯದಲ್ಲಿ ಯು.ಜಿ.ಸಿ. ಸಂದರ್ಶಕ ಪ್ರಾಧ್ಯಾಪಕರಾಗಿದ್ದಾಗ 'ಸಪಿಂಡಾ' ಸಿದ್ಧಾಂತದ ಬಗ್ಗೆ ಮಾಹಿತಿ ಸಂಗ್ರಹಿಸುವ ಸಂದರ್ಭದಲ್ಲಿ, ಈ ಲೇಖಕನ ಬಳಿಗೆ ಪದೇ ಪದೇ ಬರುತ್ತಿದ್ದರು. ಅವರು 'ಸೋಶಲ್ ಅಂಡ್ ಪ್ರಿವೆಂಟಿವ್ ಮೆಡಿಸನ್' ವಿಭಾಗದಲ್ಲಿ ಸಲ್ಲಿಸಿದ ಒಂದು ಉತ್ತಮ ಲೇಖನದಲ್ಲಿ ಈ ಪ್ರಾಚೀನ ಟೀಕಾಕಾರನ ವಿಚಾರಧಾರೆಗೆ ವೈಜ್ಞಾನಿಕ ಅಡಿಪಾಯವನ್ನು ಒದಗಿಸಿದ್ದಾರೆ.

೧೫. 'ಸ್ವಾಮಿತ್ವ' ಸಿದ್ಧಾಂತಕ್ಕೆ ಸಂಬಂಧಿಸಿದಂತೆ ಪ್ರಿಯನಾಥ ಸೇನ್‌ರವರು ಕಲ್ಕತ್ತಾ ವಿಶ್ವವಿದ್ಯಾನಿಲಯದ ಟಾಗೋರ್ ಕಾನೂನು ಪ್ರವಚನಮಾಲೆಯಲ್ಲಿ ನೀಡಿದ "ಹಿಂದೂ ಜ್ಯೂರಿಸ್‌ಪ್ರೂಡೆನ್ಸ್ " (೧೯೧೮) ಗ್ರಂಥದಲ್ಲಿ ಮಾಡಿರುವ ನಿರೂಪಣೆ ಅತ್ಯದ್ಭುತವೆಂದು ಕೂಡ ಕರೆಯಬಹುದು. ಪಾಶ್ಚಾತ್ಯರು ಈ ದೇಶದ ಕಾನೂನುಸಾಹಿತ್ಯಕ್ಕೆ ಆರೋಪಿಸಿರುವ ಅನೇಕ ವಿಕೃತಿಗಳನ್ನು ಸೇನ್‌ರವರು ಸಾಧಾರವಾಗಿ ಆದರೆ ಸುಂದರವಾಗಿ (ಕಾವ್ಯೋಪಾದಿಯಲ್ಲಿ) ಖಂಡಿಸಿದ್ದಾರೆ. ದುರದೃಷ್ಟವಶಾತ್ ಈ ಮಹಾಮೇಧಾವಿ ಕಾನೂನುತಜ್ಞ ತನ್ನ ೪೧ನೇ ವಯಸ್ಸಿನಲ್ಲಿಯೇ ತೀರಿಕೊಂಡರು.

೧೬. ಗೌತಮರು ತಮ್ಮ ಧರ್ಮಸೂತ್ರದಲ್ಲಿ, "ಸ್ವಾಮಿ ರಿಕ್ಥಕ್ರಯ ಸಂವಿಭಾಗ ಪರಿಗ್ರಹಾಧಿಗಮೇಷು ಬ್ರಾಹ್ಮಣಸ್ಯಾಧಿಕಂ ಲಬ್ಧಂ ಕ್ಷತ್ರಿಯಸ್ಯವಿಜಿತಂ ನಿರ್ವಿಷ್ಟಂ ವೈಶ್ಯಶೂದ್ರಯೋಃ" ಎಂದಿದ್ದಾರೆ.

೧೭. ದಾಯವಿಭಾಗ ಪ್ರಕರಣದಲ್ಲಿ ವಿಜ್ಞಾನೇಶ್ವರ 'ದಾಯ' ಶಬ್ದವನ್ನು ಈ ರೀತಿ ವರ್ಣಿಸುತ್ತಾನೆ :

"ತತ್ರದಾಯ ಶಬ್ದೇನ ಯುದ್ಧನಂ ಸ್ವಾಮಿಸಂಬಂಧಾದೇವನಿಮಿತ್ತಾದನ್ಯಸ್ಯ ಸ್ವಂ ಭವತಿ ತದುಚ್ಯತೆ | ಸ ಚ ದ್ವಿವಿಧಃ ಅಪ್ರತಿ ಬನ್ಧಃ ಸಪ್ರತಿಬನ್ಧಶ್ಚ | ತತ್ರ ಪುತ್ರಾಣಾಂ ಪೌತ್ರಾಣಾಂ ಚ ಪುತ್ರತ್ವೇನ ಪೌತ್ರತ್ವೇನ ಚ ಪಿತೃಧನಂ ಪಿತಾಮಹಧನಂಚ ಸ್ವಂ ಭವತಿ ಇತಿ ಅಪ್ರತಿ ಬನ್ಧೋದಾಯಃ . . . ."

೧೮. ಪತ್ನೀ ದುಹಿತರಶ್ಚೈವ ಪಿತರೌ ಭ್ರಾತರಸ್ತಥಾ |
ತತ್ಸುತಾ ಗೋತ್ರಜಾ ಬಂಧು ಶಿಷ್ಯಸಬ್ರಹ್ಮಚಾರಿಣಃ ||
ಏಷಾಮಭಾವೆ ಪೂರ್ವಸ್ಯ ಧನಭಾಗುತ್ತರೋತ್ತರಃ |
ಸ್ವರ್ಯಾತಸ್ಯಹ್ಯಪುತ್ರಸ್ಯ ಸರ್ವವರ್ಣೇಷು ಅಯಂ ನಿಧಿಃ ||

-ಯಾಜ್ಞವಲ್ಕ್ಯ, ೧೩೫, ೧೩೬

ಮೇಲೆ ನಿರೂಪಿಸಿರುವ ವಿಚಾರಗಳ ಬಗ್ಗೆ ಮತ್ತಷ್ಟು ವಿವರ ನಿರೀಕ್ಷಿಸುವವರು ವಿಶ್ವಕೋಶ ಸದೃಶವಾದ ಪಿ.ವಿ.ಕಾಣೆಯವರ ಐದು ಸಂಪುಟ (ಎಂಟು ಭಾಗ)ಗಳ 'ಧರ್ಮಶಾಸ್ತ್ರ ಇತಿಹಾಸ', ಪಿ.ಎನ್.ಸೇನ್‌ರವರ 'ಹಿಂದೂ ಜ್ಯೂರಿಸ್‌ಪ್ರೂಡೆನ್ಸ್', ಜೆ.ಡಿ.ಮೆಯಿನ್ ಅವರ 'ಹಿಂದೂ ಲಾ ಅಂಡ್ ಯೂಸೇಜ್' ಗ್ರಂಥಗಳನ್ನು ನೋಡಬಹುದು.

೨

# ರಾಜಪ್ರಭುತ್ವ ಮತ್ತು ನ್ಯಾಯಪದ್ಧತಿ

ಡಾ. ರಾಜಾರಾಮ ಹೆಗಡೆ

ಭಾರತೀಯ ರಾಜರ ನ್ಯಾಯಾಡಳಿತ ಕುರಿತು ಬ್ರಿಟಿಷ್‌ಕಾಲದಲ್ಲಿ ಅನೇಕ ತಪ್ಪುಕಲ್ಪನೆಗಳನ್ನು ಸೃಜಿಸಲಾಗಿತ್ತು. ಬ್ರಿಟಿಷರು ಭಾರತದಲ್ಲಿ ತಮ್ಮ ಕಂಪನಿ ಸರ್ಕಾರವನ್ನು ಸ್ಥಾಪಿಸಿದಾಗ ಇಲ್ಲಿನ ಜನರನ್ನು ಆಳಲು ಒಂದು ನ್ಯಾಯವ್ಯವಸ್ಥೆಯನ್ನು ಅಳವಡಿಸಿಕೊಳ್ಳಬೇಕಾದ ಪರಿಸ್ಥಿತಿ ಬಂದಿತು. ಆಗ ಅವರು ಭಾರತೀಯರಿಗೆಲ್ಲ ಅನ್ವಯವಾಗಬಹುದಾದ ಒಂದು ಏಕಮೇವ ಕಾನೂನುವ್ಯವಸ್ಥೆ ಇಲ್ಲದುದನ್ನು ಮನಗಂಡರು. ಇಲ್ಲಿ ವಿಭಿನ್ನ ಸಂಪ್ರದಾಯಗಳು ವಿಭಿನ್ನವಾಗಿ ಕಾನೂನನ್ನು ನಿರೂಪಿಸಿಕೊಂಡಿದ್ದವು. ಬ್ರಿಟಿಷರು ಐರೋಪ್ಯ ನಾಗರೀಕತೆಗೆ ವಿಶಿಷ್ಟವಾಗಿದ್ದ ಏಕರೂಪಿ ಕಾನೂನುಸಂಹಿತೆಯನ್ನೂ, ಅದನ್ನು ಆಧರಿಸಿ ನ್ಯಾಯಪ್ರದಾನ ಮಾಡುವ ಒಂದು ಸ್ಟೇಟ್ ಎಂಬ ರಾಜ್ಯವ್ಯವಸ್ಥೆಯನ್ನೂ ಹೊಂದಿದ್ದರು. ಭಾರತದಲ್ಲಿ ಅಂಥ ಒಂದು ವ್ಯವಸ್ಥೆ ಇಲ್ಲದುದು ಈ ನಾಗರೀಕತೆಯ ಹಿಂದುಳಿದ ಸ್ಥಿತಿ ಎಂದು ಅವರು ತಿಳಿದರು. ಇಂಥ ಪರಿಸ್ಥಿತಿ ಇಲ್ಲಿನ ರಾಜಪ್ರಭುತ್ವಗಳ ದೌರ್ಬಲ್ಯವನ್ನಲ್ಲದೇ ಮತ್ತೇನನ್ನೂ ಪ್ರತಿಬಿಂಬಿಸಲಾರದು ಎಂದೇ ಅವರ ದೃಢ ನಂಬಿಕೆಯಾಗಿತ್ತು. ಹಾಗಾಗಿ ಈ ರಾಜ್ಯಗಳನ್ನು ಒಂದು ಓರಿಯೆಂಟಲ್ ಡೆಸ್ಪಾಟಿಸಂ ಎಂಬ ಬರ್ಬರ ವ್ಯವಸ್ಥೆಯ ಪಳೆಯುಳಿಕೆಗಳು ಎಂದೂ ನಿರ್ಣಯಿಸಿದ್ದರು.[೧] ಈ ಮೇಲಿನ ಗ್ರಹಿಕೆಗಳಿಂದಾಗಿ ಬ್ರಿಟಿಷರು ತಮ್ಮ ಜವಾಬ್ದಾರಿ ಮತ್ತಷ್ಟು ಹೆಚ್ಚಿದ್ದನ್ನು ಮನಗಂಡರು. ಅಂದರೆ, ಈ ಭಾರತೀಯ ಸಮಾಜಕ್ಕೆ ಒಂದು ಏಕರೂಪೀ ಕಾನೂನು ಸಂಹಿತೆಯನ್ನು ಕ್ರೋಢೀಕರಿಸಿ ಕೊಟ್ಟು ಆ ಮೂಲಕ ನ್ಯಾಯವ್ಯವಸ್ಥೆಯೇ ಇಲ್ಲದ ಈ ನತದೃಷ್ಟ ಜನರಿಗೆ ಅದನ್ನು ದಯಪಾಲಿಸುವ ಹೊಣೆಗಾರಿಕೆ ಅವರಿಗೆ ಹೆಚ್ಚಿನದಾಗಿ ಬಿದ್ದಿತು. ಅದನ್ನು ಪೂರೈಸಲಿಕ್ಕಾಗಿ ಕಲ್ಕತ್ತಾದಲ್ಲಿ ಸರ್ಕಾರವನ್ನು ಸ್ಥಾಪಿಸಿದ ತಕ್ಷಣವೇ ವಾರ್ನ ಹೇಸ್ಟಿಂಗ್ಸನು ಪೌರ್ವಾತ್ಯ ಕಾನೂನಿನಲ್ಲಿ ಪರಿಣತನಾದ ವಿಲಿಯಂ ಜೋನ್ಸ್‌ನನ್ನು ನ್ಯಾಯಾಧಿಕಾರಿಯನ್ನಾಗಿ ಕರೆಸಿಕೊಂಡನು.

ವಿಲಿಯಂ ಜೋನ್ಸ್ ಕೂಡ ಇಲ್ಲಿನ ಬಹುರೂಪಿ ಕಾನೂನು ಸಂಪ್ರದಾಯಗಳ ಜೊತೆಗೆ ಗುದ್ದಾಡಬೇಕಾಯಿತು. ಆತನಿಗೆ ಸಂಸ್ಕೃತವನ್ನು ಹೊಸದಾಗಿ ಕಲಿಯಬೇಕಾಯಿತು. ದೇಶೀ ಪಂಡಿತರನ್ನು ಅವಲಂಬಿಸಬೇಕಾಯಿತು, ಹಾಗೂ ಭಾರತೀಯ ಹಿಂದೂಗಳ ಕಾನೂನು ಸಂಹಿತೆಯ ಹುಡುಕಾಟದಲ್ಲಿ ಅವನಿಗೆ ಮನುಸ್ಮೃತಿ ಸಿಕ್ಕಿತು. ಅದು ಪ್ರಾಚೀನ ಭಾರತೀಯರ ಸಂವಿಧಾನವೋ ಎಂಬಂತೇ ಆತನು ಭಯಭಕ್ತಿಯಿಂದ ಅದರ ಇಂಗ್ಲಿಷ್ ಭಾಷಾಂತರವನ್ನು ಕೈಗೆತ್ತಿಕೊಂಡನು ಹಾಗೂ ಅದು ಇನ್‌ಸ್ಟಿಟ್ಯೂಟ್ಸ್ ಆಫ್ ಹಿಂದೂ ಲಾ ಎಂದು ಪ್ರಸಿದ್ಧಿಯಾಯಿತು.[೨] ಹೀಗೆ ಭಾರತೀಯ ಹಿಂದೂಗಳಿಗೆ ಕಳೆದುಹೋಗಿದ್ದ ಕಾನೂನು ಸಂಹಿತೆ ಪೌರ್ವಾತ್ಯ ವಿದ್ವಾಂಸರಿಂದಾಗಿ ಮರಳಿ ದೊರಕಿತು ಎಂದು ಸಂಭ್ರಮಿಸಲಾಯಿತು. ಆದರೆ ತದನಂತರ ಮತ್ತೊಂದು ಸಮಸ್ಯೆ ನಮ್ಮ ಆಧುನಿಕ ವಿದ್ವಾಂಸರನ್ನು ಅಡರಿಕೊಂಡಿತು. ಅದೆಂದರೆ ಮನುಸ್ಮೃತಿ ಅಥವಾ ಅಂಥ ಇತರ ಸ್ಮೃತಿಗಳೇ ಆದರೂ ಬ್ರಾಹ್ಮಣರಿಂದ ರಚಿತವಾಗಿದ್ದು ವರ್ಣವ್ಯವಸ್ಥೆಯನ್ನು ಪ್ರತಿಪಾದಿಸುತ್ತವೆ. ಇವನ್ನು ಆಧರಿಸಿ ಭಾರತೀಯ ರಾಜರು ನ್ಯಾಯದಾನ ಮಾಡಿದ್ದಿದ್ದರೆ ಅವರು ಬ್ರಾಹ್ಮಣರ ಕೈಗೊಂಬೆಗಳಾಗಿದ್ದು ಅವರಿಗೆ ಅನುಕೂಲವಾಗುವಂತೆ ವರ್ತಿಸಿದ್ದಿರಲೇ ಬೇಕು. ಅಂದರೆ, ಈ ರಾಜರು ನ್ಯಾಯದಾನದಲ್ಲಿ ತಾವು ಅಸ್ವತಂತ್ರರಾಗಿದ್ದೊಂದೇ ಅಲ್ಲದೇ, ಅನ್ಯಾಯವನ್ನು ನ್ಯಾಯ ಎಂಬ ಭ್ರಮೆಯಲ್ಲಿ ಇತಿಹಾಸದುದ್ದಕ್ಕೂ ನೀಡುತ್ತಾ ಬಂದಿದ್ದಾರೆ ಎಂದಾಯಿತು. ಈ ರೀತಿ, ಭಾರತೀಯ ರಾಜರು ಒಂದೆಡೆ ಏತಕ್ಕೂ ಪ್ರಯೋಜನವಿಲ್ಲದವರಾದರೆ ಮತ್ತೊಂದೆಡೆ ಪಾತಕಿಗಳಾಗಿ ಚಿತ್ರಿತರಾಗತೊಡಗಿದರು. ಹಾಗಾಗಿ ಪ್ರಜಾಕಲ್ಯಾಣ ಎಂಬ ಕಾರ್ಯಕ್ರಮಕ್ಕೂ ಭಾರತೀಯ ರಾಜರಿಗೂ ಸಂಬಂಧವೇ ಸಲ್ಲ ಎಂಬ ಜೇಮ್ಸ್ ಮಿಲ್ ಅವರ ಖಡಾಖಂಡಿತವಾದ ಅಭಿಪ್ರಾಯ ಇಂದಿಗೂ ಒಂದುವರ್ಗದ ಇತಿಹಾಸಕಾರರಲ್ಲಿ ಬೇರೂರಿಕೊಂಡಿದೆ.

ಮತ್ತೊಂದೆಡೆ, ಭಾರತೀಯ ರಾಜರ ಮೇಲಿನ ಈ ಅಪವಾದವನ್ನು ತೊಡೆಯಲು ಕಂಕಣಬದ್ಧರಾದ ರಾಷ್ಟ್ರೀಯತಾಯುಗದ ಇತಿಹಾಸಕಾರರು, ಮನುಸ್ಮೃತಿಯೇ ಮೊದಲಾದ ಸ್ಮೃತಿಗಳು ಹಿಂದೂ ಆದರ್ಶಗಳನ್ನು ಸಾಕಾರಗೊಳಿಸಬಲ್ಲ ಸೂತ್ರಗಳ ಸಂಗ್ರಹಗಳೆಂದು ಪ್ರತಿಪಾದಿಸಿದರು.[೩] ಅವುಗಳನ್ನು ಪ್ರಯೋಗಕ್ಕೆ ಇಳಿಸಿದ ನಮ್ಮ ರಾಜರೂ ಆದರ್ಶ ರಾಜರೇ ಆಗದೇ ಇರಲು ಸಾಧ್ಯವೇ ಇಲ್ಲ ಎಂಬುದನ್ನು ದೃಢವಾಗಿ ನಂಬಿದ್ದರು. ಅಂದರೆ ಈ ಇತಿಹಾಸವನ್ನು ಓದಿದರೆ ಆದರ್ಶರಾಜರು ಸ್ಮೃತಿ ನಿರ್ದೇಶನದಂತೇ ಚಾಚೂ ತಪ್ಪದೇ ನಡೆಯುತ್ತಿದ್ದರು ಎಂಬ ಅಭಿಪ್ರಾಯವಾಗುತ್ತದೆ.

ಈ ಮೇಲಿನ ಎಲ್ಲ ಇತಿಹಾಸ ನಿರೂಪಣೆಗಳೂ ಒಂದು ಅಭಿಪ್ರಾಯವನ್ನಂತೂ ಗಟ್ಟಿ ಮಾಡಿಬಿಟ್ಟಿವೆ. ಅದೆಂದರೆ ರಾಜರಿಗೆ ಶಾಸನದ ಆಕರವಾಗಿ, ಇಂದು ಸಂವಿಧಾನವಿದ್ದಂತೇ ಅಂದು ಧರ್ಮಸ್ಮೃತಿಗಳಿದ್ದವು ಎಂಬುದು. ಪ್ರಶ್ನೆ ಅಥವಾ ವಿವಾದ ಇರುವುದು ಧರ್ಮ ಸ್ಮೃತಿಗಳು ನ್ಯಾಯಯುತವಾಗಿವೆಯೆ? ಎಂಬುದರಲ್ಲಿ ಅಷ್ಟೆ. ಹಾಗಾಗಿ ಧರ್ಮಸ್ಮೃತಿಗಳ

ಸ್ವರೂಪ ರಾಜಪ್ರಭುತ್ವದಲ್ಲಿನ ನ್ಯಾಯದ ಸ್ವರೂಪವನ್ನು ನಿರ್ಣಯಿಸಿ ಬಿಡುತ್ತದೆ ಎಂಬ ನಂಬಿಕೆ ಬೇರೂರಿದೆ.

ಈಗ ನಾವು ಈ ಮೇಲಿನ ಗ್ರಹಿಕೆಗಿಂತ ಬೇರೆಯದೇ ಆದ ರೀತಿಯಲ್ಲಿ ರಾಜಪ್ರಭುತ್ವದ ಕಾಲದ ನ್ಯಾಯಪದ್ಧತಿಯನ್ನು ವಿವರಿಸಬಹುದೇ ಎಂಬುದನ್ನು ನೋಡುವಾ. ಧರ್ಮ ಸ್ಮೃತಿಗಳು ರಾಜಪ್ರಭುತ್ವ ಕಾಲದ ಸಂವಿಧಾನಗಳಾಗಿದ್ದರೆ ಈ ವ್ಯವಸ್ಥೆ ಜೀವಂತವಾಗಿದ್ದಾಗಲೇ ಭಾರತಕ್ಕೆ ಬಂದ ಬ್ರಿಟಿಷರಿಗೆ ಭಾರತೀಯರ ಕಾನೂನು ವ್ಯವಸ್ಥೆಯ ಕುರಿತು ಗೊಂದಲ ಏಕಾಯಿತು? ಎಂಬ ಪ್ರಶ್ನೆ ಏಳುತ್ತದೆ. ಹಾಗೂ ಅಂಥದೊಂದು ಸಂಹಿತೆಯನ್ನು ದೇಶೀಯ ಪಂಡಿತರು ಕೊಡಲಿಕ್ಕೆ ವಿಫಲರಾದಾಗ ಬ್ರಿಟಿಷರೇ ಸ್ವತಃ ಸಂಶೋಧಿಸಿ ಅದನ್ನು ನೀಡುವ ಸಂಗತಿಯಂತೂ ಹಾಸ್ಯಾಸ್ಪದವಾಗಿದೆ. ಅಂದರೆ ಸಮಸ್ತ ಹಿಂದೂಗಳಿಗೂ ಅನ್ವಯವಾಗುವ ಏಕರೂಪೀ ಕಾನೂನುಸಂಹಿತೆ ಈ ಸಮಾಜದಲ್ಲಿರಲಿಲ್ಲ ಎಂಬುದು ಸ್ಪಷ್ಟ ಹಾಗೂ ಈ ಕಾರಣಕ್ಕಾಗಿಯೇ ಜೇಮ್ಸ್ ಮಿಲ್‌ನಂಥವರು ಭಾರತೀಯ ಸಮಾಜ ಪ್ರಗತಿಹೀನ ಸಮಾಜವೆಂದು ತೀರ್ಮಾನಿಸಿದ್ದೂ ವಿದಿತವಾಗಿಯೇ ಇದೆ. ಹಾಗಾದರೆ ನಮ್ಮ ರಾಜರು ನ್ಯಾಯತೀರ್ಮಾನವನ್ನು ಹೇಗೆ ನಡೆಸುತ್ತಿದ್ದರು?

ವಸಾಹತುಪೂರ್ವದ ರಾಜ್ಯಗಳಲ್ಲಿ ನ್ಯಾಯದಾನ ವ್ಯವಸ್ಥೆಯ ಕುರಿತು ನಮಗೆ ಸಿಗುವ ಪ್ರಮುಖ ಆಕರಗಳೆಂದರೆ ಧರ್ಮಶಾಸ್ತ್ರ, ಅರ್ಥಶಾಸ್ತ್ರ ಹಾಗೂ ನೀತಿಶಾಸ್ತ್ರ ಎಂದು ಕರೆಯಲ್ಪಟ್ಟ ಸಂಪ್ರದಾಯಗಳು. ಇವಲ್ಲದೇ ಮಹಾಭಾರತದಲ್ಲಿ ಕೆಲವೆಡೆ ಈ ಕುರಿತು ಅಮೂಲ್ಯ ನಿರ್ದೇಶನಗಳಿವೆ. ಇವು ಒಂದು ಪ್ರಕಾರದ ಆಕರಗಳಾದರೆ, ಇನ್ನೊಂದು ಪ್ರಕಾರದವು ಶಾಸನಪತ್ರಗಳು. ಭಾರತದ ಉದ್ದಗಲಕ್ಕೂ ಸಹಸ್ರಾರು ರಾಜಶಾಸನಗಳು ಸಿಕ್ಕಿವೆ. ಆದರೆ ಇವನ್ನು ರಾಜ್ಯದ ಕಾನೂನುಸಂಹಿತೆಗಳೆಂದು ಪರಿಗಣಿಸುವಂತಿಲ್ಲ. ಇವು ಬಹುತೇಕವಾಗಿ ದಾನಶಾಸನಗಳು. ಶಾಸನಗಳಲ್ಲಿ ರಾಜರನ್ನು ವರ್ಣಧರ್ಮದ ರಕ್ಷಕರೆಂದು ಅಲ್ಲಲ್ಲಿ ಬಿಂಬಿಸಲಾಗಿದೆ. ಬೆರಳೆಣಿಕೆಯಷ್ಟು ಶಾಸನಗಳು ವಿವಾದ ಪರಿಹಾರವನ್ನು ನೀಡಿದ ದಾಖಲೆಗಳಾದರೂ ಯಾವ ಆಕರವನ್ನಾಧರಿಸಿ ನ್ಯಾಯ ನೀಡಲಾಯಿತು ಎಂಬುದು ತಿಳಿದುಬರುವುದಿಲ್ಲ. ಹಾಗಾಗಿ ರಾಜರು ಧರ್ಮಶಾಸ್ತ್ರಗಳನ್ನು ವ್ಯಾವಹಾರಿಕವಾಗಿ ಎಷ್ಟರಮಟ್ಟಿಗೆ ಪ್ರಯೋಗಿಸಿದ್ದರು ಎಂಬುದು ಪ್ರಕಟವಾಗಿ ತಿಳಿದುಬರುವುದಿಲ್ಲ. ಆದರೆ ಕನ್ನಡ ಶಾಸನಗಳು ಪ್ರತಿಬಿಂಬಿಸುವಂತೆ, ಇಂಥ ವಿವಾದಗಳನ್ನು ಸ್ಥಾನಿಕವಾಗಿ ಅಧಿಕಾರಸ್ಥಾನದಲ್ಲಿದ್ದವರು ಯಾವುದೇ ಧರ್ಮಶಾಸ್ತ್ರಗಳನ್ನು ಉಲ್ಲೇಖಿಸದೇ ಸರ್ವಸಮ್ಮತವಾಗುವಂತೆ ಬಗೆಹರಿಸಿದ್ದು ಕಂಡುಬರುತ್ತದೆ. ಹಾಗಾದರೆ ಇಡೀ ರಾಜ್ಯದಲ್ಲಿ ಧರ್ಮಶಾಸ್ತ್ರಗಳನ್ನು ಆಧರಿಸಿ ಯಾವ ಯಾವ ವಿವಾದಗಳನ್ನು ಬಗೆಹರಿಸಿದ್ದರು ಹಾಗೂ ಆಧರಿಸದೇ ಯಾವ ಯಾವ ವಿವಾದಗಳನ್ನು ಬಗೆಹರಿಸಿದ್ದರು ಎಂಬುದನ್ನು ಗ್ರಹಿಸುವ ಬಗೆ ಹೇಗೆ? ಎಂಬ ಪ್ರಶ್ನೆ ಏಳುತ್ತದೆ. ಅಂದರೆ ನಮಗೆ ಸಿಗುವ ಈ ಎರಡು ವಿಭಿನ್ನ ಪ್ರಕಾರದ ಆಧಾರಗಳನ್ನು ಒಟ್ಟೊಟ್ಟು ಸೇರಿಸಿ ಏನನ್ನು ತಿಳಿದುಕೊಳ್ಳಬಹುದು? ಇಲ್ಲ,

ಇವೆರಡೂ ಎರಡು ಪರಸ್ಪರ ಸಂಬಂಧವಿಲ್ಲದ ನ್ಯಾಯದಾನ ಪದ್ಧತಿಗಳನ್ನು ಪ್ರತಿಬಿಂಬಿಸುತ್ತವೆಯೆ? ಶಾಸನಗಳು ಪ್ರಭುತ್ವದ ವ್ಯಾವಹಾರಿಕ ಪ್ರಯೋಗವನ್ನು ಬಿಂಬಿಸುತ್ತವೆ ಎಂಬುದನ್ನು ಗಮನಿಸಿದರೆ, ಈ ಪ್ರಭುತ್ವಗಳಲ್ಲಿ ವ್ಯಾವಹಾರಿಕವಾಗಿ ಧರ್ಮಶಾಸ್ತ್ರಗಳ ಅಗತ್ಯವೇ ನ್ಯಾಯತೀರ್ಮಾನಕ್ಕೆ ಇರಲಿಲ್ಲ ಎಂದು ನಿರ್ಣಯಿಸೋಣವೇ?

ಈ ಮೇಲಿನ ಸಂದಿಗ್ಧವನ್ನು ಪರಿಹರಿಸಿಕೊಳ್ಳಬೇಕಾದರೆ ಈ ರಾಜ್ಯಗಳಲ್ಲಿ ಇದ್ದ ರಾಜಶಾಸನದ ಕಲ್ಪನೆಯನ್ನು ಕುರಿತು ಪರಿಶೀಲಿಸಬೇಕಾಗುತ್ತದೆ. ಈ ಕಲ್ಪನೆಯನ್ನು ಶಾಸ್ತ್ರಗಳು ನೀಡುತ್ತವೆ. ರಾಜಶಾಸನವು ರಾಜನ ಆಜ್ಞೆಯಾಗಿದೆ. ಈ ಶಾಸನಕ್ಕೆ ದಂಡಶಕ್ತಿಯಿದೆ. ಈ ಶಾಸನವು ನ್ಯಾಯವನ್ನಾಧರಿಸಿದೆ. ನ್ಯಾಯತೀರ್ಮಾನದಲ್ಲಿ ಒಟ್ಟು ನಾಲ್ಕು ಪದಗಳಿವೆ ಎಂದು ವರ್ಣಿಸಲಾಗಿತ್ತು. ಅರ್ಥಶಾಸ್ತ್ರವು ಇವನ್ನು ೧. ಧರ್ಮ, ೨. ವ್ಯವಹಾರ, ೩. ಚರಿತ್ರ (ಲೋಕಾಚಾರ) ಮತ್ತು ೪. ರಾಜಶಾಸನ ಎಂದು ಗುರುತಿಸುತ್ತದೆ.[೪] ಈ ಪದಗಳ ಕಲ್ಪನೆಯಂತೇ ನ್ಯಾಯವನ್ನು ತೀರ್ಮಾನಮಾಡುವ ಪ್ರಕ್ರಿಯೆಯು ಈ ನಾಲ್ಕನ್ನು ಆಧರಿಸಿಕೊಂಡಿದೆ ಎಂದು ನಂಬಲಾಗಿದೆ. ಎಂದರೆ ನ್ಯಾಯ ಎನ್ನುವುದು ಅನಿರ್ಬಂಧಿತವಾದ ರಾಜೇಚ್ಛೆಯಲ್ಲ. ರಾಜನು ನ್ಯಾಯವನ್ನು ಈ ಪದಗಳನ್ನಾಧರಿಸಿದ ತರ್ಕದಿಂದ ಪಡೆಯಬೇಕು. ಹಾಗಾಗಿ ನ್ಯಾಯವು ಒಂದು ವೈಜ್ಞಾನಿಕ ವಿಧಾನವಾಗಿದೆ ಹಾಗೂ ಈ ವಿಧಾನದಿಂದ ನಿರ್ಬಂಧಿತವಾಗಿದೆ. ಆದರೆ ಅಂತಿಮವಾಗಿ ದಂಡಶಕ್ತಿ ಹಾಗೂ ಶಾಸನಾಧಿಕಾರ ರಾಜನದೇ ಆಗಿದೆ.

ಹೀಗೆ ಗ್ರಹಿಸುವಾಗ ರಾಜನೆಂದರೆ ನ್ಯಾಯಾಧೀಶನಂತೇ ಪಾಟಿಸವಾಲುಗಳನ್ನು ಕೇಳಿ, ಆಧಾರಗಳನ್ನು ಪರಿಶೀಲಿಸಿ ತೀರ್ಮಾನವನ್ನು ನೀಡುವವನು ಎಂದು ನಮ್ಮ ಇಂದಿನ ವ್ಯವಸ್ಥೆಯನ್ನು ಕಲ್ಪಿಸಿಕೊಳ್ಳಬಾರದು. ನಮ್ಮ ಆಧುನಿಕ ಇತಿಹಾಸವು ಹೀಗೆ ಗ್ರಹಿಸಿದ್ದರಿಂದಲೇ ಸಮಸ್ಯೆಗಳು ಉದ್ಭವಿಸಿದ್ದು. ಏಕೆಂದರೆ ಇಂದಿನ ನ್ಯಾಯಾಧೀಶರಿಗೆ ಒಂದು ಸಂವಿಧಾನ ಹಾಗೂ ಅದನ್ನಾಧರಿಸಿ ಪಡೆದುಕೊಂಡ ಕಾನೂನು ಸಂಹಿತೆಯ ಆಕರವಿದೆ. ಹಾಗಾಗಿ ಸಾಕ್ಷ್ಯಾಧಾರಗಳನ್ನು ಪರಿಶೀಲಿಸಿದ ನಂತರ ಯಾವ ತೀರ್ಮಾನವೂ ಸಂವಿಧಾನದ ಅವಕಾಶಕ್ಕೆ ಸಮ್ಮತವಾಗಿಯೇ ನಡೆಯುತ್ತದೆ. ಈ ಸಂವಿಧಾನವನ್ನು ಹೊರತುಪಡಿಸಿ ನ್ಯಾಯತೀರ್ಮಾನದ ಸಾಧ್ಯತೆಯೇ ಇಲ್ಲಿ ಉದ್ಭವಿಸುವುದಿಲ್ಲ. ಆದರೆ ರಾಜರಿಗೆ ತಮ್ಮ ಸಮಸ್ತ ಸಮಸ್ಯೆಗಳಿಗೂ ಪರಿಹಾರ ನೀಡಬಲ್ಲ ಅಂತಿಮವಾದ ಏಕಮೇವ ಆಕರವಿರಲಿಲ್ಲ. ನ್ಯಾಯವು ಈ ನಾಲ್ಕು ಪದಗಳ ಸ್ವರೂಪ ಅಥವಾ ಅವಕಾಶವನ್ನಾಧರಿಸಿ ನಿರ್ಣಯ ವಾಗುತ್ತಿತ್ತು. ಹಾಗಾಗಿ ಇದು ತೀರ್ಮಾನ ಎನ್ನಿಸಿಕೊಳ್ಳದೇ ನ್ಯಾಯ ಎನ್ನಿಸಿಕೊಂಡಿದೆ. ರಾಜನು ತನ್ನದೇ ಆದ ರಾಜ್ಯದ ಕಾನೂನು ಸಂಹಿತೆಯನ್ನಾಧರಿಸಿ ತೀರ್ಮಾನ ಮಾಡುವವ ನಾಗಿರಲಿಲ್ಲ, ನ್ಯಾಯಾನ್ಯಾಯವನ್ನು ಗುರುತಿಸಿ ದಂಡಿಸುವ ಪರಮಾಧಿಕಾರಿ ಯಾಗಿದ್ದನು. ದಂಡವು ಅಪರಾಧಾನುಸಾರವಾಗಿ ಶತ್ರುಗಳಲ್ಲಿಯೂ ತನ್ನ ಮಕ್ಕಳಲ್ಲಿಯೂ ನಿಷ್ಪಕ್ಷಪಾತವಾಗಿ

ಪ್ರಯೋಗಿಸಲ್ಪಟ್ಟರೆ ಅಂಥ ರಾಜನಿಗೆ ಇಹ ಪರಗಳ ಸಾಧನವಾಗುತ್ತದೆ ಎಂದು ಅರ್ಥಶಾಸ್ತ್ರ ತಿಳಿಸುತ್ತದೆ.[೫]

ಧರ್ಮವು ಧರ್ಮಶಾಸ್ತ್ರಗಳಿಂದ ನಿರ್ಧರಿಸಲ್ಪಡುತ್ತದೆ. ಧರ್ಮವನ್ನು ನಾಲ್ಕರಲ್ಲಿ ಒಂದು ಪದ ಎಂದು ಗುರುತಿಸಿರುವುದೇ ನ್ಯಾಯಪ್ರಕ್ರಿಯೆಯಲ್ಲಿ ಧರ್ಮಶಾಸ್ತ್ರಗಳ ಸ್ಥಾನಮಾನ ಏನು ಎಂಬುದನ್ನು ತಿಳಿಸುತ್ತದೆ. ಹಾಗಾಗಿ ಅವನ್ನು ನಮ್ಮ ಆಧುನಿಕ ಸಂವಿಧಾನದ ಪ್ರಾಚೀನರೂಪಗಳೆಂದು ಭಾವಿಸುವುದು ಹಾಸ್ಯಾಸ್ಪದ. ಧರ್ಮಶಾಸ್ತ್ರಗಳು ನ್ಯಾಯ ಮತ್ತು ದಂಡನಿರ್ಣಯಕ್ಕೆ ಸಾಧಕವಾಗಬಲ್ಲ ಮಾರ್ಗದರ್ಶನವನ್ನು ಕೂಡ ಒಳಗೊಂಡಿರುತ್ತವೆಯಾದರೂ, ಅವುಗಳ ಉದ್ದೇಶ ಒಂದು ದೇಶಕಾಲಾಬಾಧಿತವಾದ ಕಾನೂನುಸಂಹಿತೆಯನ್ನು ನೀಡುವುದಲ್ಲ. ಅವು ಕಾಲ-ದೇಶಗಳ ವ್ಯತ್ಯಾಸಗಳಿಗನುಗುಣವಾಗಿ ಧರ್ಮಾಧರ್ಮಗಳನ್ನು ನಿರೂಪಿಸುತ್ತವೆ. ಈ ಕಾರಣದಿಂದ ನೂರಾರು ಧರ್ಮಶಾಸ್ತ್ರಗಳು ಬೇರೆ ಬೇರೆ ಕಾಲದಲ್ಲಿ, ಪ್ರದೇಶಗಳಲ್ಲಿ ಚರಿತ್ರೆಯುದ್ದಕ್ಕೂ ಅಸ್ತಿತ್ವಕ್ಕೆ ಬಂದವು. ಅನೇಕವು ಮನು, ಯಾಜ್ಞವಲ್ಕ್ಯ ಮುಂತಾದ ಸುಪ್ರಸಿದ್ಧ ಸ್ಮೃತಿಗಳ ಪುನರ್ನಿರೂಪಣೆಗಳಾಗಿವೆ. ಪ್ರಾದೇಶಿಕವಾಗಿ ಆಯಾ ಕಾಲದಲ್ಲಿದ್ದ ರೂಢಿಗಳನ್ನು ಶಾಸ್ತ್ರೀಕರಿಸಿ ಧರ್ಮನಿರೂಪಣೆಯನ್ನು ಸಾಧಿಸುವ ಪ್ರಯತ್ನವನ್ನು ಅವು ನಡೆಸುತ್ತವೆ. ಪ್ರತಿಯೊಂದು ಸ್ಮೃತಿಯೂ ಇತರ ಸ್ಮೃತಿಗಳನ್ನು ಗೌರವಿಸುತ್ತದೆ. ಅಷ್ಟೇ ಅಲ್ಲ, ನ್ಯಾಯದಲ್ಲಿ ಲೋಕಾಚಾರಕ್ಕೂ ಅಷ್ಟೇ ಮಹತ್ವ ನೀಡಿದ್ದಿತು. ನಾರದಸ್ಮೃತಿಯ ಪ್ರಕಾರ ಸಂಪ್ರದಾಯಗಳು ತೀರಾ ಬಲಶಾಲಿ ಯಾದವುಗಳು, ಮತ್ತು ಅವು ಪವಿತ್ರವಾದ ಕಾನೂನನ್ನು ತಳ್ಳಿಹಾಕಬಲ್ಲವು.[೬] ಹಾಗಾಗಿ ಎರಡು ಸ್ಮೃತಿಗಳ ನಡುವೆ ಭಿನ್ನಾಭಿಪ್ರಾಯ ಏಳಬಹುದು, ಅಥವಾ ಸ್ಮೃತಿವಾಕ್ಯ ಅಪ್ರಸ್ತುತವಾಗಬಹುದು ಎಂಬುದು ಸ್ಮೃತಿಕಾರರೆಲ್ಲರಿಗೂ ಮನದಟ್ಟಾದ ಸತ್ಯವಾಗಿದ್ದು, ಅದಕ್ಕೆ ಪರಿಹಾರವನ್ನು ಕಂಡುಕೊಳ್ಳುವಾಗ ನ್ಯಾಯದ ಅನ್ಯಪಾದಗಳನ್ನು ಅವಲಂಬಿಸಿ ಧರ್ಮಶಾಸ್ತ್ರಗಳನ್ನು ತ್ಯಜಿಸಬಹುದು ಎಂಬ ಮಾರ್ಗದರ್ಶನವನ್ನೂ ಅವು ನೀಡುತ್ತವೆ. ನಮ್ಮ ಆಧುನಿಕ ಕಾನೂನುಸಂಹಿತೆ ಈ ರೀತಿ ತನ್ನ ನಿರ್ಣಾಯಕತೆಯನ್ನು ಅಲ್ಲಗಳೆದು ಕೊಳ್ಳುವುದಿಲ್ಲ.

ನ್ಯಾಯನಿರ್ಣಯದಲ್ಲಿ ವ್ಯವಹಾರ ಮತ್ತು ಲೋಕಾಚಾರಗಳನ್ನೂ ರಾಜನು ಗಮನಿಸ ಬೇಕು ಎನ್ನುವ ಶಾಸ್ತ್ರಗಳು, ವ್ಯವಹಾರದ ಧರ್ಮಾಧರ್ಮವನ್ನು ವಿವರವಾಗಿ ನೀಡುತ್ತವೆ.[೭] ವಿವಾದಗಳಿಗೆ ಸಂಬಂಧಿಸಿದ ವಿಷಯಗಳನ್ನು ವ್ಯವಹಾರಪದ ಎಂದು ಈ ಶಾಸ್ತ್ರಗಳು ಸೂಚಿಸುತ್ತವೆ. ಈ ವ್ಯವಹಾರಪದಗಳು ೧೮ ಎಂದು ಸಾಂಪ್ರದಾಯಿಕವಾಗಿ ಗುರುತಿಸಲಾಗಿದೆ. ಇವುಗಳನ್ನು ೧. ಋಣಾದಾನ (ಸಾಲ), ೨. ನಿಕ್ಷೇಪ (ಇಡುಗಂಟು), ೩. ಅಸ್ವಾಮಿ ವಿಕ್ರಯ (ತನ್ನದಲ್ಲದ ಸೊತ್ತನ್ನು ಮಾರುವುದು), ೪. ಸಂಭೂಯ ಸಮುತ್ಥಾನ (ಒಟ್ಟುಸೇರಿ ಮಾಡಿದ ಉದ್ಯಮ), ೫. ದತ್ತಸ್ಯಾನಪಕರ್ಮ(ಕೊಟ್ಟಿದ್ದನ್ನು ಅಪಹರಿಸುವುದು, ವೇತನ ನೀಡದಿರುವುದು), ೬. ಒಪ್ಪಂದದ ಉಲ್ಲಂಘನೆ, ೭. ಕ್ರಯ ವಿಕ್ರಯದಿಂದ ಉತ್ಪನ್ನವಾದ

ವಿವಾದ, ೮. ಪಶುವಿಷಯ ವಿವಾದ, ೯. ಸೀಮಾ ವಿವಾದ, ೧೦. ವಾಕ್ ಪಾರುಷ್ಯ (ದೂಷಣೆ), ೧೧. ಸ್ತೇಯ (ಕಳ್ಳತನ), ೧೨. ದಂಡಪಾರುಷ್ಯ (ದೈಹಿಕ ಹಿಂಸೆ), ೧೩. ಸಾಹಸ (ಬಲಾತ್ಕಾರ), ೧೪. ವ್ಯಭಿಚಾರ, ೧೫. ಕರ್ತವ್ಯಲೋಪ, ೧೬. ದಾಯಭಾಗ, ೧೭. ದ್ಯೂತ, ೧೮. ಪ್ರಾಣಿಗಳ ಜೂಜು-ಎಂದು ಮನುಸ್ಮೃತಿ ಉಲ್ಲೇಖಿಸುತ್ತದೆ.[೮] ವ್ಯವಹಾರಪದಕ್ಕೆ ಉಳಿದವರು ಇನ್ನೂ ಕೆಲವನ್ನು ಅಗತ್ಯ ಬಿದ್ದಂತೆಲ್ಲ ಸೇರಿಸಿಕೊಂಡಿದ್ದರು. ಈ ವಿವರಗಳನ್ನು ಗಮನಿಸಿದರೆ ಇವೆಲ್ಲ ದೈನಂದಿನ ಜೀವನದಲ್ಲಿ ಪ್ರಜಾವರ್ಗದವರಿಗೆ ಏಳಬಹುದಾದ ಸಮಸ್ಯೆಗಳೆಂಬುದು ಸ್ಪಷ್ಟ. ಈ ಸಮಸ್ಯೆಗಳ ಕುರಿತು ಧರ್ಮಶಾಸ್ತ್ರಗಳೂ ನಿರ್ದೇಶನಗಳನ್ನು ನೀಡುತ್ತವೆ. ಉದಾಹರಣೆಗೆ, ದಾಯವಿಭಾಗದಲ್ಲಿ ಆಸ್ತಿವಿಭಾಗ ಮಾಡುವ ಕ್ರಮವನ್ನು ವಿವರವಾಗಿ ತಿಳಿಸಲಾಗುತ್ತದೆ. ಆಯಾ ವ್ಯವಹಾರದಲ್ಲಿ ಪ್ರಭೇದಗಳು, ಅವುಗಳ ಲಕ್ಷಣ, ಕ್ರಮಗಳು, ಕ್ರಮಗಳನ್ನು ತಪ್ಪಿದವರಿಗೆ ಶಿಕ್ಷೆಯನ್ನು ನಿರ್ಧರಿಸುವ ರೀತಿ, ಇವೆಲ್ಲವನ್ನೂ ಧರ್ಮಶಾಸ್ತ್ರಗಳು ಸವಿವರವಾಗಿ ವಿಧಿಸುವುದರಿಂದ, ಅವನ್ನು ನ್ಯಾಯಾಧಿಕಾರಿಗಳ ಪ್ರಯೋಜನಕ್ಕಾಗಿಯೇ ನೀಡಲಾಗಿದೆ ಎಂಬುದು ಸ್ಪಷ್ಟ.

ವಿವಾದಕ್ಕೆ ಕಾರಣವಾದ ವ್ಯವಹಾರದ ಸ್ವರೂಪವನ್ನು ರಾಜನಾದವನು ತಿಳಿದುಕೊಳ್ಳುವುದು ಸಾಕ್ಷಿಗಳಿಂದ. ಈ ಸಾಕ್ಷಿಗಳ ಸ್ವರೂಪದ ಕುರಿತೂ ಧರ್ಮಶಾಸ್ತ್ರಗಳು ನಿರ್ದೇಶನ ನೀಡುತ್ತವೆ. ಆ ಮೂಲಕವಾಗಿ ರಾಜನಿಗೆ ವ್ಯವಹಾರದ ನಿಜವಿವರಗಳು ಹೇಗಿದ್ದವೆಂದು ನಿರ್ಧಾರಕ್ಕೆ ಬರಲು ಸಹಾಯವಾಗುತ್ತದೆ. ಇಂಥ ವ್ಯವಹಾರದಲ್ಲಿ ತಪ್ಪಿತಸ್ಥರು ಯಾರೆಂಬುದನ್ನು ನಿರ್ಧರಿಸುವಾಗ ರಾಜನಾದವನು ಧರ್ಮಶಾಸ್ತ್ರದ ನಿರ್ದೇಶನ ಏನಿದೆ ಎಂಬುದನ್ನು ವಿದ್ವಜ್ಜನರಾದ ಬ್ರಾಹ್ಮಣರಿಂದ ತಿಳಿದುಕೊಳ್ಳಬೇಕು ಎಂದು ಶಾಸ್ತ್ರಗಳು ಹೇಳುತ್ತವೆ. ಈ ಬ್ರಾಹ್ಮಣರು ಧರ್ಮಶಾಸ್ತ್ರ, ಶ್ರುತಿ, ಮೀಮಾಂಸೆ, ನ್ಯಾಯ ಮುಂತಾದವುಗಳಲ್ಲಿ ಪರಿಣತರಾಗಿರಬೇಕು. ಆದರೆ ಅವರ ನಿರ್ದೇಶನಗಳನ್ನು ಲೋಕರೂಢಿಗೆ ವಿರುದ್ಧವಾಗಿ ಅನ್ವಯ ಮಾಡಬಾರದು. ಮನುಸ್ಮೃತಿ ನಿರ್ದೇಶಿಸುವಂತೆ, ರಾಜ ಎನಿಸಿಕೊಂಡವನು ಜಾತಿ, ಗಣ, ಶ್ರೇಣಿ ಮತ್ತು ಕುಲಗಳಿಗೆ ಸಂಬಂಧಿಸಿದ ರೂಢಿಗಳನ್ನು ಪರಿಶೀಲಿಸಿ ಧರ್ಮನಿರ್ಣಯ ಮಾಡಬೇಕು ಹಾಗೂ ಅವುಗಳನ್ನು ಪಾಲಿಸಬೇಕು.[೯] ಹಾಗಾಗಿ ಅಂತಿಮವಾಗಿ ಧರ್ಮಸ್ಮೃತಿ ಒಂದು ಪದವಾಗಿ ಮಾತ್ರ ಮಹತ್ವ ಪಡೆಯುತ್ತದೆ. ರಾಜನಾದವನು ತಾನು ಯಾವ ವ್ಯವಹಾರವನ್ನು ಕುರಿತು ನಿರ್ಧರಿಸುತ್ತಿದ್ದಾನೆಯೋ ಅದಕ್ಕೆ ಸಂಬಂಧಿಸಿ ಆಯಾ ಗ್ರಾಮ ಅಥವಾ ಪ್ರದೇಶದಲ್ಲಿ ಏನು ಆಚರಣೆ ಪ್ರಚಲಿತದಲ್ಲಿ ಇದೆಯೋ ಅದನ್ನು ಗಮನಿಸಬೇಕು. ಇದನ್ನು ಚರಿತ್ರ ಎಂಬ ಮೂರನೆಯ ಪದವನ್ನಾಗಿ ಪರಿಗಣಿಸಲಾಗಿದೆ. ಅಂದರೆ ಚರಿತ್ರವು ಪರಂಪರಾಗತವಾಗಿ ಸಮೂಹಗಳಲ್ಲಿ ನಡೆದುಕೊಂಡು ಬಂದ ಪದ್ಧತಿಗಳನ್ನು ರಾಜನು ಪರಿಶೀಲಿಸುವ ಕುರಿತ ನಿಬಂಧನೆಯಾಗಿದೆ.

ನಾಲ್ಕನೆಯ ಪದವಾಗಿ ರಾಜಶಾಸನ ಬರುತ್ತದೆ. ರಾಜನು ನ್ಯಾಯವನ್ನು ನೀಡುವ ಹಂತವು ಇದಾಗಿದೆ. ಇದು ಎಲ್ಲಾ ಪದಗಳಿಗಿಂತ ಪ್ರಬಲವಾಗಿರುವುದರಿಂದ ಇದು ಇತರ

ಪದಗಳನ್ನು ಬಾಧಿಸುತ್ತದೆ ಎಂದು ಕೌಟಿಲ್ಯನು ಎಚ್ಚರಿಸುತ್ತಾನೆ. ರಾಜನಿಗೆ ನ್ಯಾಯ ಮತ್ತು ಧರ್ಮ ಮತ್ತು ಪಾಪಪ್ರಜ್ಞೆ ಅತ್ಯವಶ್ಯಕ ಎಂದು ಎಲ್ಲ ಶಾಸ್ತ್ರಕಾರರೂ ಒತ್ತಿಹೇಳುತ್ತಾರೆ. ರಾಜನು ಕ್ರೋಧ, ಲೋಭ ಮುಂತಾದವುಗಳನ್ನು ವಿವರ್ಜಿಸಿ, ಲೋಕವನ್ನು ನ್ಯಾಯ ಮಾರ್ಗದಲ್ಲಿ ಪ್ರವರ್ತಿಸುವಂತೆ ಮಾಡಿದಲ್ಲಿ ಆತನು ಯಶಸ್ವಿಯಾಗಿ ಆಳುತ್ತಾನೆ ಎಂದೂ ಬುದ್ಧಿವಾದವನ್ನು ಹೇಳಲಾಗಿದೆ. ಏಕೆಂದರೆ ಧರ್ಮ, ವ್ಯವಹಾರ ಮತ್ತು ಲೋಕಾಚಾರ ಇವೆಲ್ಲವನ್ನೂ ಪರಿಗಣಿಸಿಯೂ ನ್ಯಾಯವನ್ನು ನೀಡಲು ರಾಜನು ಸೋಲಬಹುದು ಅಥವಾ ವ್ಯತಿರಿಕ್ತವಾದ ಶಾಸನವನ್ನು ಮಾಡಬಹುದು. ಇದಕ್ಕೆ ಆತನ ಮೌಢ್ಯ, ಸ್ವಜನ ಪಕ್ಷಪಾತ, ಸ್ವಾರ್ಥ, ಮೋಹ, ಲೋಭ ಮುಂತಾದ ಭಾವವಿಕಾರಗಳು ಕಾರಣವಾಗಿರುತ್ತವೆ. ಇಂಥ ಕಾರಣಗಳಿಂದ ಪ್ರಚೋದಿತನಾದ ರಾಜನ ಶಾಸನವು ಉಳಿದ ಮೂರೂ ಪದಗಳನ್ನು ಅಲ್ಲಗಳೆಯುವ ಸಾಮರ್ಥ್ಯವನ್ನು ಹೊಂದಿದೆ.

ನ್ಯಾಯಪರನಾದ ರಾಜನು ಉಳಿದ ಮೂರು ಪದಗಳಲ್ಲಿ ಪರಸ್ಪರ ವಿರೋಧ ಬಂದರೆ ಯಾವುದನ್ನು ವಿಶ್ವಾಸಾರ್ಹ ಎಂದು ಪರಿಗಣಿಸಬೇಕು? ಧರ್ಮಶಾಸ್ತ್ರಗಳಿಗೆ ವಿಶೇಷ ಅಧಿಕಾರವೇನಾದರೂ ಇತ್ತೆ? ಎಂಬುದನ್ನು ಗಮನಿಸಿದರೆ ಈ ನಾಲ್ಕು ಪದಗಳಲ್ಲಿ ಯಾವುದು ನಿರ್ಣಾಯಕ ಎಂಬುದು ಸಾಂದರ್ಭಿಕವಾಗಿತ್ತು. ಪ್ರತಿಯೊಂದು ಪದವೂ ತನ್ನ ಹಿಂದಿನ ಪದಕ್ಕಿಂತ ಉತ್ತಮವಾಗಿದ್ದುದರಿಂದ ಅದು ಹೆಚ್ಚು ನಿರ್ಣಾಯಕ ಎನ್ನಲಾಗಿದೆ. ಹಾಗಾಗಿ ಧರ್ಮಕ್ಕಿಂತ ವ್ಯವಹಾರವೂ ವ್ಯವಹಾರಕ್ಕಿಂತ ಚರಿತ್ರವೂ ಚರಿತ್ರಕ್ಕಿಂತ ರಾಜಶಾಸನವೂ ಹೆಚ್ಚು ಪ್ರಭಾವಶಾಲಿಗಳಾಗಿವೆ. ಧರ್ಮಸ್ಮೃತಿಗಳು ನ್ಯಾಯವನ್ನು ಪಡೆಯುವ ಕ್ರಮವನ್ನು ತಿಳಿಸುತ್ತವೆಯೇ ಹೊರತು ಆ ಸಂಬಂಧಿಸಿ ಎಲ್ಲಾ ಕಾನೂನುಗಳನ್ನೂ ತಾವೇ ನೀಡುವುದಿಲ್ಲ. ಹಾಗಾಗಿ ಕ್ರಮಗಳನ್ನು ತಿಳಿದುಕೊಳ್ಳಲು ಹಾಗೂ ಅವುಗಳಲ್ಲಿ ಯಾವುದು ಹೆಚ್ಚು ವಿಶ್ವಾಸಾರ್ಹ ಎಂದು ನಿರ್ಣಯಿಸಲು ಅವು ಮಾರ್ಗದರ್ಶನವನ್ನು ಮಾಡುತ್ತವೆ. ಅರ್ಥಶಾಸ್ತ್ರದ ಪ್ರಕಾರ, ರಾಜಶಾಸನ ಮತ್ತು ಸಾಕ್ಷಿವಚನಕ್ಕೆ ಲೋಕಾಚಾರ ಹಾಗೂ ಧರ್ಮಶಾಸ್ತ್ರದೊಡನೆ ವಿರೋಧ ಬಂದರೆ ಧರ್ಮಶಾಸ್ತ್ರವನ್ನು ಪ್ರಮಾಣವನ್ನಾಗಿ ಇಟ್ಟುಕೊಳ್ಳಬೇಕು. ಆದರೆ ಯಾವ ವಿಷಯದಲ್ಲಿ ಲೋಕಾಚಾರವು ಸ್ಪಷ್ಟವಾಗಿ ಧರ್ಮಶಾಸ್ತ್ರವನ್ನು ಅಲ್ಲಗಳೆಯುತ್ತದೆಯೋ ಆಗ ಧರ್ಮಶಾಸ್ತ್ರವು ಪ್ರವರ್ತಿಸುವುದಿಲ್ಲ. ಆಗ ರಾಜನ ನ್ಯಾಯವು ಪ್ರವರ್ತಿಸುತ್ತದೆ. ಒಡೆದುಹೋದ ಸೇತುವಿನ ಸಮೀಪ ಗುದ್ದಲಿಸಮೇತ ಸಿಕ್ಕಿಬಿದ್ದವನು ಅದನ್ನು ಒಡೆದವನೆಂದು ತಿಳಿಯಬೇಕು ಎಂದು ಸ್ಮೃತಿ ನಿರ್ದೇಶನವಿದ್ದರೂ, ಗುದ್ದಲಿಯನ್ನು ಒಂದು ಶಿಶು ಹಿಡಿದಿದ್ದರೆ ಸ್ಮೃತಿವಾಕ್ಯ ಅಲ್ಲಿ ಅನ್ವಯವಾಗುವುದಿಲ್ಲ ಎಂದು ಸ್ಮೃತಿಗಳು ತಿಳಿಸುತ್ತವೆ.

ಇವನ್ನೆಲ್ಲ ಗಮನಿಸಿದರೆ ಮತ್ತೊಂದು ವಿಷಯ ವಿದಿತವಾಗುತ್ತದೆ. ಅದೆಂದರೆ ಒಂದು ವಿವಾದವು ನ್ಯಾಯನಿರ್ಣಯಕ್ಕೆ ರಾಜನಲ್ಲಿ ಬಂತೆಂದರೆ ಆಯಾ ಸಾಂಪ್ರದಾಯಿಕ ಆಚಾರ ನಿರ್ದೇಶನಗಳ ಮೂಲಕ ಅದನ್ನು ಪರಿಹರಿಸಲು ಸಾಧ್ಯವಾಗಿಲ್ಲ ಎಂದು ಅರ್ಥವಾಗುತ್ತದೆ.

ಅಂದರೆ ವಿವಾದ ಹುಟ್ಟುಹಾಕಿದವರು ವಿಭಿನ್ನ ಆಚಾರ, ಸಂಪ್ರದಾಯಗಳಿಗೆ ಸೇರಿದ್ದಾರೆ ಎಂದೋ ಅಥವಾ ಅವರಿಗೆ ತಮ್ಮ ಆಚಾರದಿಂದ ನ್ಯಾಯನಿರ್ಣಯ ಕಷ್ಟವಾಗಿದೆ ಎಂದೋ ರಾಜನಲ್ಲಿ ಬಂದಿರುತ್ತಾರೆ. ಆಗ ರಾಜನು ಆಯಾ ಗುಂಪುಗಳ ಆಚಾರಗಳನ್ನು ಪರಿಶೀಲಿಸಿ, ಸಾಕ್ಷಿಗಳನ್ನು ಪರಿಶೀಲಿಸಿ, ಧರ್ಮಜ್ಞರ ಸಲಹೆಯನ್ನು ತೆಗೆದುಕೊಂಡು ಒಂದು ನಿರ್ಣಯ ನೀಡುತ್ತಾನೆ. ಸ್ಥಾನಿಕವಾಗಿಯೇ ವಿವಾದ ಬಗೆಹರಿದರೆ ರಾಜನಲ್ಲಿ ಹೋಗುವ ಅಗತ್ಯ ಹಾಗೂ ಧರ್ಮಶಾಸ್ತ್ರಗಳನ್ನು ವಿಚಾರಿಸುವ ಅಗತ್ಯವೇ ನಿರ್ಮಾಣವಾಗುತ್ತಿರಲಿಲ್ಲ. ಈ ಎಲ್ಲ ವಿಷಯಗಳನ್ನು ಗಮನಿಸಿದರೆ, ಕನ್ನಡ ಶಾಸನಗಳಲ್ಲಿನ ವಿವಾದ ತೀರ್ಮಾನಕ್ಕೆ ಸಂಬಂಧಿಸಿದ ಭಾಗಗಳಲ್ಲಿ ಧರ್ಮಶಾಸ್ತ್ರಗಳ ನಿರ್ದೇಶನಗಳು ಏಕೆ ಪ್ರಸ್ತುತತೆ ಪಡೆಯುವುದಿಲ್ಲ ಎಂಬುದು ಹೊಲಬಾಗುತ್ತದೆ. ಆಯಾ ಜಾತಿ, ಜಾನಪದ, ಶ್ರೇಣಿ, ಕುಲ ಮುಂತಾದ ಸಮೂಹಗಳು ಯಾವ ಪದ್ಧತಿಗಳನ್ನು ಒಪ್ಪಿಕೊಂಡು ಬಂದಿದ್ದವೋ ಅವನ್ನು ಕುರಿತು ಆಯಾ ಸಮೂಹದ ಆಡಳಿತ ಘಟಕಗಳೇ ತೀರ್ಮಾನಿಸಿಕೊಳ್ಳುತ್ತಿದ್ದವು.

ಗ್ರಾಮಗಳ ಸಮಯಾಚಾರಕ್ಕೆ ಸಂಬಂಧಿಸಿದಂತೆ ಶಾಸ್ತ್ರಗಳು ಹೇಳುವ ನಿರ್ದೇಶನ ಹೀಗಿದೆ:[೧೦] ಸಮಯ ಎಂದರೆ ವಿಭಿನ್ನ ಗ್ರಾಮಸಮೂಹಗಳು, ಶ್ರೇಣಿಗಳು, ಗಣಗಳು ಮುಂತಾದವು ಹಾಕಿಕೊಂಡ ಒಪ್ಪಂದಗಳು. ಈ ಒಪ್ಪಂದಗಳನ್ನು ಲಿಖಿತವಾಗಿ ದಾಖಲಿಸಿ ಇಟ್ಟುಕೊಳ್ಳಬೇಕು ಹಾಗೂ ಅವನ್ನೇ ಧರ್ಮನಿರ್ಣಯಕ್ಕೆ ಆಧಾರವಾಗಿ ಇಟ್ಟುಕೊಳ್ಳಬೇಕು. ಒಂದು ಗ್ರಾಮದ ಜನ ತಮ್ಮ ಸಾರ್ವಜನಿಕ ಕೆಲಸಗಳಾದ ಕೆರೆ, ದೇವಾಲಯ ಮುಂತಾದವುಗಳಿಗೆ ಸಂಬಂಧಿಸಿದಂತೆ ಪ್ರತಿಯೊಬ್ಬರ ಕರ್ತವ್ಯಗಳನ್ನು ನಿರ್ಧರಿಸಿ ಇಂಥ ಸಮಯಗಳನ್ನು ಹಾಕಿಕೊಂಡಿರುತ್ತಾರೆ. ಇಂಥ ಸಮಯಗಳನ್ನು ರಚಿಸುವುದು ಹೇಗೆಂದು ಸ್ಮೃತಿಗಳು ನಿರ್ದೇಶಿಸುತ್ತವೆ. ಆದರೆ ಒಪ್ಪಂದವನ್ನು ಸಂಬಂಧಿಸಿದವರೇ ನಿರ್ಣಯಿಸುತ್ತಾರೆ. ಇವುಗಳಿಗೆ ಯಾರಾದರೊಬ್ಬರು ತಪ್ಪಿದರೆ ಅವನನ್ನು ಶಿಕ್ಷಿಸುವ ಅಧಿಕಾರ ಆಯಾ ಸಮೂಹಗಳಿಗಿದೆ. ಅಂಥ ಶಿಕ್ಷೆಯನ್ನು ತಪ್ಪಿಸಿಕೊಳ್ಳಲು ಯಾರಾದರೊಬ್ಬರು ಅದನ್ನು ಪ್ರಶ್ನಿಸಿ ರಾಜನಲ್ಲಿ ಹೋದರೆ ರಾಜನೂ ಅದನ್ನು ಬದಲಿಸದೆ ಗೌರವಿಸಬೇಕು. ಏಕೆಂದರೆ ಆ ಅಧಿಕಾರವು ಸಮೂಹಗಳಿಗೆ ಇದೆ ಎಂದು ಋಷಿಗಳು ಒಪ್ಪಿಕೊಂಡಿದ್ದಾರೆ. ಹೀಗೆ ಸಮಯಾಚಾರಗಳಲ್ಲಿ ಸಮಯಗಳೇ ರಾಜನನ್ನು ವಿವಾದ ಪರಿಹಾರಕ್ಕೆ ಆಮಂತ್ರಿಸುವವರೆಗೆ ರಾಜನಿರ್ಣಯಕ್ಕೆ ಅವಕಾಶವಿರಲಿಲ್ಲ.

ಈ ರೀತಿ ರಾಜಶಾಸನವೆಂದರೆ ರಾಜನು ತನ್ನ ಮಂತ್ರಿಗಳ ಜೊತೆಗೆ ಸೇರಿ ರೂಪಿಸಿ ಪ್ರಜೆಗಳ ಮೇಲೆ ಹೇರಿದ ಕಾನೂನುಗಳಲ್ಲ. ಜನರೇ ನಂಬಿ ಆಚರಿಸಿಕೊಂಡುಬಂದಿದ್ದ ಧರ್ಮ ಹಾಗೂ ಕಟ್ಟಳೆಗಳನ್ನು ಪರಿಶೀಲಿಸಿ, ಅವನ್ನು ಶಾಸ್ತ್ರೀಕರಿಸಿ, ಪರಿಗಣಿಸಿ ಅವನ್ನೇ ಪಾಲಿಸಿಕೊಂಡು ಬರುವ ವಿಧಾನಗಳಾಗಿದ್ದವು. ಪ್ರಜೆಗಳ ಸಾಮುದಾಯಿಕ ಆಚರಣೆಗಳನ್ನು ಪಾಲಿಸುವ ಕೆಲಸವನ್ನು ರಾಜರು ಮಾಡುತ್ತಿದ್ದುದರಿಂದ ಅವರ ಕರ್ತವ್ಯವನ್ನು ರಾಜ್ಯಪಾಲನೆ

ಎಂದೇ ಅರ್ಥಶಾಸ್ತ್ರದಲ್ಲಿ ಸೂಚಿಸಲಾಗಿದೆ. ಇಂಥ ವ್ಯವಸ್ಥೆಯಲ್ಲಿ ರಾಜ್ಯಕ್ಕೆ ಏಕರೂಪಿಯಾದ ಕಾನೂನುಸಂಹಿತೆಯಾಗಲೀ ಕಾನೂನಿನ ಆಕರವಾಗಲೀ ಇದ್ದಿರಲು ಸಾಧ್ಯವಿಲ್ಲ, ಹಾಗೂ ಅಗತ್ಯವೂ ಅವರಿಗೆ ಉಂಟಾಗಲಿಲ್ಲ. ಆದರೆ ರಾಜನಿಗೆ ಯಾವ ಕ್ರಮದಲ್ಲಿ ನ್ಯಾಯ ನಿರ್ಣಯಿಸಬೇಕು ಎಂಬ ನಿರ್ದೇಶನವನ್ನು ನೀಡಬಲ್ಲ ಶಾಸ್ತ್ರಗಳು ಸ್ಮೃತಿಗಳ ರೂಪದಲ್ಲಿ ಕಾಲ ದೇಶ ಭಿನ್ನವಾಗಿ ಅಸ್ತಿತ್ವಕ್ಕೆ ಬಂದವು.

**ಟಿಪ್ಪಣಿಗಳು**

೧. ಕಳೆದ ಒಂದು ದಶಕದ ಈಚೆಗೆ ಪ್ರಚಲಿತದಲ್ಲಿ ಬರುತ್ತಿರುವ ವಸಾಹತೋತ್ತರ ಅಧ್ಯಯನಗಳು ಈ ಅಂಶಗಳ ಕುರಿತು ವಿಶೇಷ ಬೆಳಕನ್ನು ಚೆಲ್ಲುತ್ತವೆ. ಇವುಗಳಲ್ಲಿ ರೋನಾಲ್ಡ್ ಇಂಡೆನ್ ಅವರ ಇಮೇಜಿನಿಂಗ್ ಇಂಡಿಯ ಎಂಬ ಕೃತಿಯಲ್ಲಿ ಈ ಕುರಿತು ಸವಿಸ್ತಾರವಾಗಿ ಚರ್ಚಿಸಲಾಗಿದೆ. ಮಧುಕಿಶ್ವರ್ ಅವರು ತಮ್ಮ, ಕೋಡಿಫೈಡ್ ಹಿಂದು ಲಾ-ಮಿಥ್ ಎಂಡ್ ರಿಯಾಲಿಟಿ, ಎಕಾನಮಿಕ್ ಎಂಡ್ ಪೊಲಿಟಿಕಲ್ ವೀಕ್ಲಿ, ೩೩, ೧೯೯೪, ಪು.೨೧೪೫-೨೧೬೧, ಲೇಖನದಲ್ಲಿ ಕೂಡ ತುಂಬ ವಿಮರ್ಶಾತ್ಮಕವಾಗಿ ಈ ಕುರಿತು ಪರಿಶೀಲಿಸಿದ್ದಾರೆ. ಈ ಲೇಖನದ ಕನ್ನಡಾನುವಾದಕ್ಕೆ ನೋಡಿ : ಟಿ.ಎಸ್.ವೇಣುಗೋಪಾಲ ಮತ್ತು ಶೈಲಜ, ಕ್ರೋಢೀಕೃತ ಹಿಂದೂ ಕಾನೂನು-ಮಿಥ್ಯ ಮತ್ತು ವಾಸ್ತವ, (ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ, ಸಂಪಾದಕ : ರಾಜಾರಾಮ ಹೆಗಡೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ೨೦೦೪, ಪುಟ ೮೪-೧೪೭).

೨. ಮುಖರ್ಜಿ ಎಸ್.ಎನ್. ಅವರ ವಿಲಿಯಮ್ ಜೋನ್ಸ್ ಕೃತಿಯಲ್ಲಿ ಈ ಕುರಿತ ವಿವರಗಳಿವೆ. (ಓರಿಯೆಂಟ್ ಲಾಂಗಮೆನ್, ೧೯೬೮, ಪು.೧೧೬-೧೨೨)

೩. ಉದಾಹರಣೆಗೆ, ಕೆ.ಪಿ.ಜಯಸ್ವಾಲ್ ಅವರ ಹಿಂದು ಪೊಲಿಟಿಯನ್ನು ನೋಡಬಹುದು.

೪. ಅರ್ಥಶಾಸ್ತ್ರ, ೩೩೭-೩೮, ವ್ಯವಹಾರ ಸ್ಥಾಪನಾ, ವಿವಾದಪದ ನಿಬಂಧಃ, ಫ್ಲೀಟ್ ಅವರ ಅನುವಾದ : ಕೌಟಿಲ್ಯಾಸ್ ಅರ್ಥಶಾಸ್ತ್ರ, ಮೈಸೂರು, ೧೯೧೫ (೧೯೮೮ರ ಆವೃತ್ತಿ, ಪು.೧೭೨)

೫. ಅದೇ

೬. ಮಧುಕಿಶ್ವರ್, ಪೂರ್ವೋಕ್ತ, ಕನ್ನಡಾನುವಾದ, ಪು.೯೫

೭. ಯಾಜ್ಞವಲ್ಕ್ಯಸ್ಮೃತಿ (ಕನ್ನಡಾನುವಾದ : ನಾಗೇಶ ರಂಗೋ ಕುಲಕರ್ಣಿ, ಪ್ರತಿಭಾ ಗ್ರಂಥಮಾಲೆ, ಧಾರವಾಡ, ೧೯೯೬) ಇವುಗಳನ್ನು ಕುರಿತು ದೀರ್ಘವಾಗಿ ಚರ್ಚಿಸುತ್ತದೆ. ಇವುಗಳ ಕುರಿತು ಪಿ.ವಿ.ಕಾಣೆ ತಮ್ಮ ಹಿಸ್ಟರಿ ಆಫ್ ಧರ್ಮಶಾಸ್ತ್ರಾಸ್, ಸಂಪುಟ ೩ರಲ್ಲಿ ಸುದೀರ್ಘವಾಗಿ ಚರ್ಚಿಸಿದ್ದಾರೆ.

೮. ಮನುಸ್ಮೃತಿ, ೮ನೇ ಅಧ್ಯಾಯ, ೪-೭ ಶ್ಲೋಕಗಳು, ಕನ್ನಡಾನುವಾದ : ಚಕ್ರಕೋಡಿ ಈಶ್ವರಶಾಸ್ತ್ರಿ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೭

೯. ಅದೇ, ೮ನೇ ಅಧ್ಯಾಯ, ೪೧

೧೦. ಕಾಣೆ ಪಿ.ವಿ., ಪೂರ್ವೋಕ್ತ, ಸಂಪುಟ ೩, ಪು.೧೫೭

೩

# ಪ್ರಜಾಪ್ರಭುತ್ವ ಮತ್ತು ನ್ಯಾಯಾಂಗ ವ್ಯವಸ್ಥೆ

**ಡಾ. ಎ. ವೆಂಕಟೇಶ**

'ಜನರಿಂದ, ಜನರಿಗಾಗಿ, ಜನರೇ ನಡೆಸುವ ಸರಕಾರವೇ ಪ್ರಜಾಪ್ರಭುತ್ವ' ಎನ್ನುವ ಅಬ್ರಹಾಂ ಲಿಂಕನ್‌ರ ಉಕ್ತಿ ವಿಶ್ವವಿಖ್ಯಾತವಾಗಿದೆ. ಮೂಲತಃ ಗ್ರೀಕ್‌ಭಾಷೆಯ ಡೆಮಾಸ್ ಮತ್ತು ಕ್ರಶಿಯಾ ಪದಗಳ ಸಂಗಮವೇ ಡೆಮಾಕ್ರಸಿ. ಡೆಮಾಸ್ ಅಂದರೆ ಜನ, ಕ್ರಶಿಯಾ ಅಂದರೆ ಅಧಿಕಾರ ಅರ್ಥಾತ್ ಜನರ ಅಧಿಕಾರ, ಜನರ ರಾಜಕಾರಣ. ಪ್ರಜೆಗಳೇ ಅಧಿಕಾರ ರಾಜಕಾರಣ, ನೀತಿ ನಿರ್ಧಾರಕಗಳ ರೂಪಿಕೆಯಲ್ಲಿ ಪ್ರಮುಖ ಪಾತ್ರಧಾರಿಗಳೂ ಹೌದು, ಪಾಲುದಾರರೂ ಹೌದು. ಇಲ್ಲಿ ಆಳುವವರು, ಆಳಿಸಿಕೊಳ್ಳುವವರು ಜನರೇ. ಜನರ ಜೀವನ, ಬದುಕು, ಪರಸ್ಪರ ಅನುಭವಿಸುವ, ನಿಲುವುಳ್ಳ ವ್ಯವಸ್ಥೆಯೇ ಆಗಿದೆ. ಸಾಮೂಹಿಕ ಭಾಗಿತ್ವ ಅಥವಾ ಪಾಲ್ಗೊಳ್ಳುವಿಕೆಯೇ ಪ್ರಜಾಪ್ರಭುತ್ವದ ಮುಖ್ಯ ಲಕ್ಷಣವಾಗಿದೆ.

ಗ್ರೀಕ್ ತತ್ವಜ್ಞಾನಿ, ರಾಜ್ಯಶಾಸ್ತ್ರದ ಪಿತಾಮಹ ಅರಿಸ್ಟಾಟಲ್ ಹೇಳುವಂತೆ, ಸಾಂವಿಧಾನಿಕ ಚೌಕಟ್ಟಿನೊಳಗೆ ಬದುಕುವುದು ಗುಲಾಮಗಿರಿಯಾಗಲಾರದು; ಬದಲಿಗೆ ಅದು ಎಲ್ಲ ಸಮಸ್ಯೆಗಳಿಗೆ ಪರಿಹಾರವಾಗುವುದು. ಅಂದರೆ ತನ್ನದೇ ಆದ ಸ್ಥಾಪಿತ ವ್ಯವಸ್ಥೆಯೊಳಗೆ ಸ್ವಾತಂತ್ರ್ಯ, ಸಮಾನತೆ ಮತ್ತು ವ್ಯಕ್ತಿಗತ ಸ್ವಾತಂತ್ರ್ಯ- ಅಭಿವ್ಯಕ್ತಿ ಸ್ವಾತಂತ್ರ್ಯದ ಆದರ್ಶಗಳೊಂದಿಗೆ ಪ್ರಜಾಪ್ರಭುತ್ವ ಜೀವಂತವಾಗಿದೆ. ಈ ಮೂರು ಅಂಶಗಳೇ ಇದರ ಜೀವಾಳ. ಇಂತಹ ಜನಮುಖೀ ವ್ಯವಸ್ಥೆಯಲ್ಲಿ ಸ್ವಾತಂತ್ರ್ಯ ಕೇವಲ ಒಂದು ಶಬ್ದವಲ್ಲ, ಅದೊಂದು ಕ್ರಿಯಾಶೀಲತೆ; ಚೈತನ್ಯದ ಸಂಕೇತ. ಹೊಸತನದ ಸಂಕೇತ. ಮುಕ್ತ ವಾತಾವರಣದಲ್ಲಿ ಸಂಚರಿಸುವ, ಅಭಿಪ್ರಾಯ ಅಭಿವ್ಯಕ್ತಿಗೊಳಿಸುವ ಅವಕಾಶ ಪ್ರತಿಯೊಬ್ಬರಲ್ಲಿಯೂ ಇರಬೇಕು, ಇರುವಂತೆ ಮಾಡಬೇಕು. "ಸ್ವಾತಂತ್ರ್ಯದ ಮೂಲತತ್ವ ಏನೆಂದರೆ, ನೀವು ಯಾವರೀತಿ ಇರಬೇಕೆನ್ನುವಿರೋ, ಇನ್ನೊಬ್ಬರನ್ನು ಅದೇ ರೀತಿಯಿಂದ ಇರಗೊಡುವುದು" ಎಂಬ ಪಾಟೀಲ ಪುಟ್ಟಪ್ಪನವರ ಮಾತು ಅರ್ಥಪೂರ್ಣ ವೆನಿಸುತ್ತದೆ.[೧] ಮನುಷ್ಯನು ತನಗೆ ಅನಿಸಿದ್ದನ್ನು ಹೇಳಬಲ್ಲವನೆಂದಾದರೆ, ಅದನ್ನು

ಕಾರ್ಯಗತ ರೂಪದಲ್ಲಿ ತರುವ ಆಚರಣೆಯೂ ಇದ್ದರೆ ಆ ಸ್ವಾತಂತ್ರ್ಯಕ್ಕೆ ಅರ್ಥವಿರುತ್ತದೆ. ಸ್ವಾತಂತ್ರ್ಯವು ಸೃಜನಶೀಲತೆಯನ್ನು ಹುಟ್ಟುಹಾಕುತ್ತದೆ. ಸ್ವಾತಂತ್ರ್ಯ ಎಂಬುವುದು ದೇಶದ್ದೇ ಆಗಿರಲಿ, ವ್ಯಕ್ತಿಯದೇ ಆಗಿರಲಿ ಅದೊಂದು ವ್ಯವಸ್ಥೆಗೊಳಪಟ್ಟಿರಬೇಕು. ಅದು ವ್ಯವಸ್ಥೆಯ ರೀತಿ-ನೀತಿ-ನಿಯಮಾವಳಿಗಳಿಗೆ ಒಳಪಟ್ಟಿರಬೇಕು. ಜನರು ಅವುಗಳಿಗೆ ಒಳಪಟ್ಟಂತೆ ತಮ್ಮ ಆಚರಣೆಗಳನ್ನು ಇರಿಸಿಕೊಂಡಿರಬೇಕು. ಸ್ವಾತಂತ್ರ್ಯದ ಮೂಲತತ್ವ ನಾವು ಯಾವ ರೀತಿ ಇರಬೇಕೆನ್ನುವೆವೋ, ಇನ್ನೊಬ್ಬರನ್ನು ಅದೇ ರೀತಿಯಿಂದ ಇರಗೊಡುವುದು. ನಮ್ಮ ಸ್ವಾತಂತ್ರ್ಯ ಇನ್ನೊಬ್ಬರ ಸ್ವಾತಂತ್ರ್ಯವನ್ನು ಚ್ಯುತಿಗೊಳಿಸಬಾರದು, ಧಕ್ಕೆ ತರಬಾರದೆಂಬ ಅಪೇಕ್ಷೆ ಇರಬೇಕು.

ಭಾರತದಲ್ಲಿ ಪ್ರಜಾಪ್ರಭುತ್ವದ (ಸಂಸದೀಯ ಮಾದರಿ) ಆಡಳಿತ ಶುರುವಾದದ್ದೆ ೧೯೫೨ರ ಮೊದಲ ಸಾರ್ವತ್ರಿಕ ಚುನಾವಣೆಯ ನಂತರ. ಅದು ೧೯೫೦ರ ಜನವರಿ ೨೬ರಿಂದ ಜಾರಿಗೊಂಡ ಸಂವಿಧಾನದಿಂದಾಗಿ. ಹೀಗೆ ಅಸ್ತಿತ್ವಕ್ಕೆ ಬಂದ ಪ್ರಜಾಪ್ರಭುತ್ವಕ್ಕೆ ಭಾರತದಲ್ಲಿ ಸಾಕಷ್ಟು ಸ್ಥಿತ್ಯಂತರ, ಪರಿವರ್ತನೆ ಘಟಿಸಿರುವುದನ್ನು ಅವಲೋಕಿಸಬಹುದು. ಅದು ಪ್ರಜಾಪ್ರಭುತ್ವದ ಉಳಿದ ಮೂರು ಆಧಾರಸ್ತಂಭಗಳಾದ ರಾಜಕೀಯ ಪಕ್ಷಗಳು, ಪತ್ರಿಕೆ/ಮಾಧ್ಯಮ ಮತ್ತು ನ್ಯಾಯಾಂಗಗಳೊಂದಿಗೆ ಆಗಾಗ ಉಂಟಾಗುವ ಹಕ್ಕುಚ್ಯುತಿಗಳ ಪರಸ್ಪರ ಆರೋಪ, ನಿಂದನೆ, ಪ್ರತ್ಯಾರೋಪ, ಟೀಕೆಗಳು ಇಂದು ಚರ್ಚೆಗೆ ಹೆಚ್ಚು ಗ್ರಾಸವಾಗಿವೆ. ಹಾಗೆಯೇ ಶಾಸಕಾಂಗ, ಕಾರ್ಯಾಂಗಗಳ ನಡುವಿನ ಸಾಮರಸ್ಯದ ಕೊರತೆ ಇತ್ಯಾದಿಗಳು ಹಲವು ಬಾರಿ ಬಹಿರಂಗಗೊಂಡಿವೆ. ಅಂದಿನ ನೆಹರೂ ಸರಕಾರದಲ್ಲಿ ಕೈಗೊಂಡ ಸಚಿವ ಸಂಪುಟದ ಒಂದು ನಿರ್ಧಾರ ಸಾಕ್ಷಿಯಾಗಿದೆ. ಅದು ಯಾವುದೆಂದರೆ, ಪಶ್ಚಿಮ ಬಂಗಾಳದ ಬೆರುಬರಿ ಭಾಗದ ಪ್ರದೇಶಗಳನ್ನು ಪಾಕಿಸ್ತಾನಕ್ಕೆ ಬಿಟ್ಟುಕೊಡುವ ಉಭಯ ದೇಶಗಳ ಪ್ರಧಾನಮಂತ್ರಿಗಳ ಒಪ್ಪಂದದ ಕರಾರಿಗೆ ಭಾರತದ ಸಂಸತ್ತಿನಲ್ಲಿ ವಿರೋಧ ವ್ಯಕ್ತವಾಗಿತ್ತು. ಸಂಸತ್ ಸದಸ್ಯರು, ತಮಗೆ ಮಾಹಿತಿ ನೀಡದೆ ಏಕಾಏಕಿ ಇಂತಹ ಮಹತ್ವದ ನಿರ್ಣಯಗಳನ್ನು ತೆಗೆದುಕೊಳ್ಳಲು ಸಚಿವ ಸಂಪುಟಕ್ಕೆ ಅಧಿಕಾರವಿಲ್ಲ ಎಂಬುದು ಅವರ ವಾದವಾಗಿತ್ತು. ಇದರಿಂದ ನೆಹರೂ ಸರ್ಕಾರದ ಈ ನಿರ್ಣಯದ ಪ್ರಸ್ತಾವನೆಗೆ ತೀವ್ರ ಹಿನ್ನಡೆಯುಂಟಾಗಿತ್ತು. ಆಗ ನೆಹರೂರವರು ಸುಪ್ರೀಂಕೋರ್ಟಿನ ಸಲಹೆಗೆ ಈ ವಿಷಯವಾಗಿ ಮೊರೆಹೊಕ್ಕರು. ನ್ಯಾಯಾಂಗವು ಈ ನಿರ್ಣಯದ ಪ್ರಸ್ತಾವನೆಗೆ ಸಂವಿಧಾನದ ತಿದ್ದುಪಡಿ ಅಗತ್ಯವೆಂದು ಸೂಚಿಸಿತ್ತು. ಬಹುಶಃ ಅಂದಿನಿಂದ ನ್ಯಾಯಾಂಗಕ್ಕೆ ಈ ಬಗೆಯ ಅನೇಕ ಸಮಸ್ಯೆಗಳಿಗೆ ಸಲಹೆ ಕೊಡುವ, ಸೂಚಿಸುವ, ನಿರ್ದೇಶನ ನೀಡುವ, ಮಧ್ಯಪ್ರವೇಶಿಸುವ ಪರಿಪಾಠಕ್ಕೆ ನಾಂದಿಯಾಯಿತು.

ಭಾರತದ ಸಂಸದೀಯ ಪ್ರಜಾಪ್ರಭುತ್ವದ ಯಶಸ್ಸು ಅದರ ಸದಸ್ಯರ, ಅದರಲ್ಲೂ ಒಬ್ಬ ಸಾಮಾನ್ಯ ಎಂ.ಪಿ.ಯ ತಿಳುವಳಿಕೆ ಅರಿವಿನ ಸಾಮರ್ಥ್ಯದ ಮೇಲೆ ಅವಲಂಬಿತವಾಗಿದೆ. ಸಂಸದನಾಗಲು ನಿರ್ದಿಷ್ಟಪಡಿಸಿದ ಕನಿಷ್ಟ ವಿದ್ಯಾರ್ಹತೆಯನ್ನು ನಿಗದಿಪಡಿಸದೇ ಇರುವುದು,

ಶಿಕ್ಷಣ, ರಾಜಕೀಯಜ್ಞಾನ, ತರ್ಕಬದ್ಧವಾಗಿ ಮಾತನಾಡುವ, ಉತ್ತಮ ನಾಯಕತ್ವ ಇಲ್ಲದಿರುವುದೇ ಈ ಅವಘಡಗಳಿಗೆ ಕಾರಣವಾಗಿದೆ ಎನ್ನಬಹುದು. ಚುನಾಯಿತರಾದ ಎಷ್ಟೋ ಪ್ರತಿನಿಧಿಗಳಿಗೆ ತಮ್ಮ ಕರ್ತವ್ಯ ಮತ್ತು ಅಧಿಕಾರ ಚಲಾಯಿಸುವ ಕುರಿತು ತಿಳುವಳಿಕೆಯೇ ಇರುವುದಿಲ್ಲ. ಇಂತಹ ಪ್ರಸಂಗಗಳಲ್ಲಿ ಕೆಲವೇ ವ್ಯಕ್ತಿಗಳು ತಮ್ಮ ವರ್ಚಸ್ಸನ್ನು ಬೆಳೆಸಿಕೊಂಡು ರಾಜಕಾರಣ ಮಾಡುವ ಅನೇಕ ಉದಾಹರಣೆಗಳು ಉಂಟು. ಆದರೆ ಸಂಸದೀಯ ಪ್ರಜಾಪ್ರಭುತ್ವದಲ್ಲಿ ಇಂತಹ ಸಂದರ್ಭಗಳು ಸೃಷ್ಟಿಯಾಗಬಾರದು. ಅದು ಪ್ರಜಾಪ್ರಭುತ್ವದ ಮೂಲಸಿದ್ಧಾಂತಕ್ಕೆ ಮಾರಕವಾಗಬಹುದು. ಸಂಸತ್ತಿನಲ್ಲಿ ಬಹುಮತ ಪಡೆದ ಪಕ್ಷಕ್ಕೆ, ಪ್ರತಿನಿಧಿಗಳಿಗೆ ಸರ್ಕಾರ ರಚಿಸುವ, ನಡೆಸುವ ಏಕೈಕ ಹಕ್ಕನ್ನು ಮಾನ್ಯಮಾಡುವ ಭಾರತ ಸಂವಿಧಾನದ ಮೂಲಭೂತ ತತ್ವಕ್ಕೆ ಇದೊಂದು ಅಡ್ಡಿಯಾಗಬಾರದು, ಸವಾಲಾಗಬಾರದು.

ಒಮ್ಮೆ ೧೮೯೨ರಲ್ಲಿ ಇಂಗ್ಲೆಂಡಿನಲ್ಲಿ ಸಂಸತ್ತಿಗೆ ಚುನಾವಣೆ ನಡೆದಾಗ ಲಾರ್ಡ್ ಸ್ಯಾಲಿಸ್‌ಬರಿಯವರ ನೇತೃತ್ವದಲ್ಲಿದ್ದ ಕನ್ಸರ್ವೇಟಿವ್ ಪಕ್ಷ ಸೋತು ಗ್ಲಾಡ್‌ಸ್ಟನ್ ನೇತೃತ್ವದ ಲಿಬರಲ್ ಪಕ್ಷ ಗೆದ್ದಿತು. ತನ್ನ ಪಕ್ಷ ಚುನಾವಣೆಯಲ್ಲಿ ಸೋತಿದ್ದರೂ ಸಂಸದೀಯ ಪದ್ಧತಿಗೆ ವ್ಯತಿರಿಕ್ತವಾಗಿ ಲಾರ್ಡ್ ಸ್ಯಾಲಿಸ್‌ಬರಿಯವರು ಲಿಬರಲ್ ಪಕ್ಷದ ನಾಯಕನಿಗೆ ಅಧಿಕಾರ ಬಿಟ್ಟುಕೊಡಲು ನಿರಾಕರಿಸಿದರು. ಸಂಸತ್ತಿನಲ್ಲಿ ಬಹುಮತ ಹೊಂದಿದ ಪಕ್ಷಕ್ಕೇ ಸರ್ಕಾರ ರಚಿಸುವ ಹಕ್ಕನ್ನು ಮಾನ್ಯಮಾಡುವ ಬ್ರಿಟಿಷ್ ಸಂವಿಧಾನದ ಮೂಲತತ್ವಕ್ಕೆ ಸವಾಲಾಗಿತ್ತು. ಈ ಸವಾಲನ್ನು ಸ್ವೀಕರಿಸುತ್ತ ಲಿಬರಲ್ ಪಕ್ಷದವರು ರಾಣಿಯವರ ಭಾಷಣಕ್ಕೆ ತಿದ್ದುಪಡಿ ಮಂಡಿಸಿದರು. ಇದರ ತಿದ್ದುಪಡಿ ಭಾಷಣ ಮಂಡಿಸುವ ಕೆಲಸವನ್ನು ದಿವಂಗತ ಲಾರ್ಡ್ ಆಸ್ಕ್ವಿತ್‌ರವರಿಗೆ (ಅಂದಿನ ಮಿನಿಸ್ಟರ್) ವಹಿಸಲಾಗಿತ್ತು. ಅದರ ಸಮರ್ಥನೆಗೆ ಆಸ್ಕ್ವಿತ್‌ರವರು ಈಗ ಪ್ರಸಿದ್ಧಿಯಾಗಿರುವ "ರೋಮ್ ಹೇಳಿರುವುದರಿಂದ ವ್ಯಾಜ್ಯ ಕೊನೆಗೊಳ್ಳಬೇಕು"[೨] ಎಂಬ ಸಿದ್ಧಾಂತವನ್ನು ಉದ್ಧರಿಸಿದರು. ಸೇಂಟ್ ಅಗಸ್ಟಿನ್‌ರವರು ಮೂಲತಃ ಈ ಅಡಕನುಡಿಯನ್ನು ಬೇರೆ ಸಂದರ್ಭದಲ್ಲಿ ಬಳಸಿದ್ದರಾದರೂ ಅದನ್ನು ಒಂದು ಧಾರ್ಮಿಕ ವಿವಾದದಲ್ಲಿ ಉಪಯೋಗಿಸಿದ್ದು, ಅದನ್ನು ಪೋಪ್‌ನ ಸಾರ್ವಭೌಮತ್ವದ ಅಡಿಗಲ್ಲಾಗಿ ಬಳಸಲಾಯಿತು. ಆಸ್ಕ್ವಿತ್‌ರವರು ಅದನ್ನು ಸಂಸದೀಯ ಪ್ರಜಾಪ್ರಭುತ್ವದ ಮೂಲ ರಾಜಕೀಯ ಸಿದ್ಧಾಂತವನ್ನಾಗಿ ಬಳಸಿದರು. ಇಂದು ಅದನ್ನು ಒಂದು ಬಹುಮತ ಹೊಂದಿರುವ ಜನತಾ ಸರ್ಕಾರದ ಆಳುವ ರಾಜಕೀಯ ಹಕ್ಕನ್ನು ಪ್ರತಿಪಾದಿಸುವ ಮೂಲಭೂತ ಸಿದ್ಧಾಂತವೆಂದು ಪರಿಗಣಿಸಲಾಗಿದೆ. ವಾಸ್ತವವಾಗಿ ಅಂದಿನ ಪ್ರಸಂಗದಲ್ಲಿ ಅದನ್ನು ಸ್ಯಾಲಿಸ್‌ಬರಿ ಸರ್ಕಾರದ ವಿರುದ್ಧ ಎತ್ತಿಹಿಡಿಯಲಾಗಿತ್ತಾದರೂ ಅದು ಸಂಸದೀಯ ಪ್ರಜಾಪ್ರಭುತ್ವ ಹೊಂದಿರುವ ಎಲ್ಲ ಸರ್ಕಾರಗಳಿಗೂ ಅನ್ವಯವಾಗುವಂತಾಯಿತು. ಇಂದು ಇದಕ್ಕೆ ಭಾರತವೂ ಹೊರತಾಗಲಾರದು. ಹಾಗಾಗಿ ಪ್ರಜಾಪ್ರಭುತ್ವದಲ್ಲಿ ಜನರು ಸಾರ್ವಭೌಮರು, ತಮಗೆ ಹಿತ ತರುವ

ಕಾಯ್ದೆಗಳನ್ನು ತಮ್ಮ ಪ್ರತಿನಿಧಿಗಳ ಮೂಲಕ ಮಾಡಿಕೊಳ್ಳುವರು. ಜನತೆಯ ಪ್ರಾತಿನಿಧಿಕ ಕಾರ್ಯಕ್ಷೇತ್ರ ಶಾಸನಸಭೆ. ಇಲ್ಲಿ ಪಾಸಾದ ಕಾಯ್ದೆಗಳ ಸಾಂವಿಧಾನಿಕತೆಯನ್ನು ಪ್ರಶ್ನಿಸಿ ಮೊಕದ್ದಮೆಯೊಂದು ತನ್ನ ಮುಂದೆ ಬಂದಾಗಲಷ್ಟೇ ನ್ಯಾಯಾಂಗದ ಪಾತ್ರ ಪ್ರಾರಂಭವಾಗುತ್ತದೆ. ಕಾಯ್ದೆ ರಚನೆ ಮತ್ತು ಅನುಷ್ಠಾನಕ್ಕೆ ಸಂಬಂಧಿಸಿದಂತೆ ಈ ಹಂತದಲ್ಲದೆ ಇನ್ಯಾವ ಹಂತದಲ್ಲೂ ಕೋರ್ಟುಗಳು ಮಧ್ಯಪ್ರವೇಶ ಮಾಡಲು ಸಾಂವಿಧಾನಿಕ ಹಕ್ಕು ಹೊಂದಿಲ್ಲ.

ಭಾರತ ಸಂವಿಧಾನದ ಕಲಂ ೧೨೪ರಂತೆ, ಸ್ವತಂತ್ರ ನ್ಯಾಯಾಂಗ ವ್ಯವಸ್ಥೆಯಿರಬೇಕು. ನ್ಯಾಯಾಲಯಗಳು/ಸರ್ವೋಚ್ಚ ನ್ಯಾಯಾಲಯವು, ಪ್ರಜಾಪ್ರಭುತ್ವದ ರಕ್ಷಕನಾಗಿ ನಿಷ್ಪಕ್ಷಪಾತವಾಗಿ ಕೆಲಸ ನಿರ್ವಹಿಸಬೇಕು. ಸರಕಾರದ ಎರಡು ಅಂಗಗಳಾದ ಶಾಸಕಾಂಗ, ಕಾರ್ಯಾಂಗಗಳು ನ್ಯಾಯಾಂಗದ ಕಾರ್ಯಚಟುವಟಿಕೆಗಳಲ್ಲಿ ತಲೆಹಾಕುವಂತಿಲ್ಲ. ಹಾಗೆಯೇ ಕೋರ್ಟುಗಳು ಕೂಡ ಶಾಸಕಾಂಗ, ಕಾರ್ಯಾಂಗಗಳ ಕೆಲಸಗಳಲ್ಲಿ ಮಧ್ಯೆ ಪ್ರವೇಶಿಸುವಂತಿಲ್ಲ. ಈ ಅಂಗಗಳು ಸಂವಿಧಾನ ವಿಧಿಸಿರುವಂತೆ ತಮ್ಮ ತಮ್ಮ ಕಾರ್ಯಕ್ಷೇತ್ರದ ವ್ಯಾಪ್ತಿಯೊಳಗೆ ಕಾರ್ಯನಿರ್ವಹಿಸುವ ಮೂಲಕ ಸಂಸದೀಯ ಪ್ರಜಾಪ್ರಭುತ್ವವನ್ನು ಯಶಸ್ವಿಗೊಳಿಸುವುದು ನ್ಯಾಯೋಚಿತ. ಆದರೆ ನ್ಯಾಯಾಂಗ ತನ್ನ ಕಾರ್ಯಕ್ಷೇತ್ರದ ಹೊರಗೆ ಹಣಕಿಕ್ಕುವ ಪ್ರವೃತ್ತಿ ದಶಕಗಳಿಂದಲೂ ಕಂಡುಬಂದಿದೆ. ಈ ಕುರಿತು ನ್ಯಾಯಾಂಗದ ಸ್ಥಾನಮಾನ ಏನು ಎಂಬುದನ್ನು ಮದರಾಸು ಹೈಕೋರ್ಟ್‌ನ ಮುಖ್ಯ ನ್ಯಾಯಾಧೀಶರಾದ ಕಟ್ಜು ಅವರು ಆಡಿದ ಮಾತುಗಳಿಂದ ಮನದಟ್ಟಾಗುತ್ತದೆ. ಅವರು ಒಂದು ಸಮಾರಂಭದಲ್ಲಿ, "ಪ್ರಜಾಪ್ರಭುತ್ವದಲ್ಲಿ ಜನರೇ ಸಾರ್ವಭೌಮರು; ನ್ಯಾಯಾಧೀಶರುಗಳು, ಶಾಸಕರುಗಳು, ಮಂತ್ರಿಗಳು, ಅಧಿಕಾರಿಗಳು ಸೇರಿದಂತೆ ಇನ್ನೆಲ್ಲ ಅಧಿಕಾರಸ್ಥರು ಜನರ ಸೇವಕರು; ಆದುದರಿಂದ ಜನ ಮಾಡುವ ಟೀಕೆಯನ್ನು ಒಂದು ಅಪರಾಧವೆಂಬು ಪರಿಗಣಿಸಲೇ ಕೂಡದು" ಎಂದು ಹೇಳಿದ ಮಾತುಗಳು ಬಹು ಮಾರ್ಮಿಕವಾಗಿವೆ.

ಹಾಗೆಯೇ, ಈ ಹಿನ್ನೆಲೆಯಲ್ಲಿ ಆಸಿಫ್ ಅಹ್ಮದ್ Vs. ಜಮ್ಮು ಕಾಶ್ಮೀರದ ವ್ಯಾಜ್ಯೆಯಲ್ಲಿ ಇತ್ತ ಸುಪ್ರಿಂಕೋರ್ಟ್‌ನ ತೀರ್ಪು ಅತ್ಯಂತ ಮಹತ್ವದ್ದು: "When a State action is challenged, the function of the Court is to examine the action in accordance with the law and to determine whether the legislature of the executive has acted within the powers and functions assigned under the Constitution and if not, the Court must strike down the action. *While doing so the Court must remain within its self-imposed limits...* while exercising power of Judicial Review of administrative action, the Court is not an appellate authority. The Constitution does not permit the Court to direct or advise the executive in matters of policy or to sermonize *qua* any matter which under the Constitution lies within the sphere of legislature or executive, provided these authorities do not transgress their constitutional limits or statutory powers."[3]

ಈ ತೀರ್ಪುಗಳ ಅಂಶವನ್ನು ಗಮನಿಸಿದಾಗ ಭಾರತದ ಪ್ರಜಾಪ್ರಭುತ್ವದ ದೈವಸ್ಥಾನವೂ, ನಮ್ಮ ಪರಮಾಧಿಕಾರದ ಪ್ರತೀಕವೂ ಆದ ಸಂಸತ್ತು ಪರಮೋಚ್ಛವೂ, ಪವಿತ್ರವೂ ಎಂಬುದಾಗಿದೆ. ಇತ್ತೀಚೆಗೆ ವೃತ್ತಿಶಿಕ್ಷಣಪ್ರವೇಶ ನೀಡಿಕೆಗೆ ಸಂಬಂಧಿಸಿದಂತೆ ಸುಪ್ರಿಂ ಕೋರ್ಟ್ ದಲಿತ, ಹಿಂದುಳಿದ, ಅಲ್ಪಸಂಖ್ಯಾತ ಹಾಗೂ ಆರ್ಥಿಕವಾಗಿ ಹಿಂದುಳಿದ, ಶೋಷಿತ ಸಮುದಾಯಗಳಿಗೆ ಸೇರಿದ ವಿದ್ಯಾರ್ಥಿವರ್ಗಕ್ಕೆ ಮಾರಕವಾಗುವಂಥ ತೀರ್ಪು ನೀಡಿದ ಕಹಿನೆನಪು ಮಾಸಿತೇ? ಈ ನ್ಯಾಯಾಂಗವು ಸಾಮಾಜಿಕ ನ್ಯಾಯ ಒದಗಿಸುವಲ್ಲಿ ತೊಡಕಾಗಿ ಕಾಡುತ್ತಿದೆಯೇ? ಎಂಬ ಪ್ರಶ್ನೆಗಳು ಪ್ರಜ್ಞಾವಂತ ಶೋಷಿತ ಸಮುದಾಯಗಳಲ್ಲಿ ಆತಂಕವನ್ನು, ಆಕ್ರೋಶವನ್ನು ಮೂಡಿಸಿವೆ. ಆದರೆ ಸಂಸತ್ತು ತನಗೆ ಸಂವಿಧಾನದತ್ತವಾಗಿ ಬಂದಿರುವ ಅಧಿಕಾರದಿಂದ ಈ ತೀರ್ಪಿಗೆ ಉತ್ತರವಾಗಿ ವಿಶೇಷ ತಿದ್ದುಪಡಿಯೊಂದಿಗೆ ಕೇಂದ್ರ ಶಾಸನವನ್ನು ರೂಪಿಸಿತು. ಇದು ಸಂವಿಧಾನದ ಅನುಚ್ಛೇದ (೧೫) ಮತ್ತು (೧೬) ಆಶಯಕ್ಕನುಗುಣವಾಗಿ ಸಾಮಾಜಿಕನ್ಯಾಯ ಒದಗಿಸಲು ಸಾಧ್ಯವಾಯಿತು.

ಹೀಗಾಗಿ ನಮ್ಮ ಮಹಾನ್ ಪ್ರಜಾಪ್ರಭುತ್ವವು ತನ್ನ ಮಹತ್ವವನ್ನು ಉಳಿಸಿಕೊಂಡು ಎಲ್ಲಾ ವರ್ಗದ ಜನತೆಯ ಸಮಸ್ಯೆಗಳಿಗೆ ಪ್ರಸ್ತುತವಾಗಿ ಇರಬೇಕೆಂದರೆ ಸಾಮಾಜಿಕ, ಆರ್ಥಿಕ ಸಮಸ್ಯೆಗಳಿಗೆ ನಾವು ಮುಖ್ಯ ಗಮನ ಕೊಡಲೇಬೇಕು. ನಮ್ಮ ಪ್ರಜಾಸತ್ತೆಯು ರಾಜಕೀಯ ಯಶಸ್ಸನ್ನು ಸಾಧಿಸಿದ್ದರೂ ನಾವು ಸರ್ವಾಂಗೀಣ ಸಮಾಜವೆನಿಸಿಲ್ಲ. ಮಹಿಳೆಯರು, ದಲಿತರು, ಹಿಂದುಳಿದ ಶೋಷಿತ ಸಮುದಾಯಗಳವರು ಅನುಭವಿಸುತ್ತಿರುವ ತಾರತಮ್ಯವು ನಮ್ಮ ಸಂವಿಧಾನದಲ್ಲಿ ಸ್ಥಾಪಿತವಾಗಿರುವ ಪ್ರಜಾಸತ್ತೆಯ ಖಚಿತ ತಿರಸ್ಕಾರವಾಗಿದೆ ಎಂದೇ ಹೇಳಬೇಕು. ಜಾಗತೀಕರಣದ/ಖಾಸಗೀಕರಣದ ನೆಲೆಯಲ್ಲಿ ನಾಗಾಲೋಟದಿಂದ ಓಡುತ್ತಿರುವ ಸಂದರ್ಭದಲ್ಲಿ ಖಾಸಗೀ ವಲಯಗಳಲ್ಲೂ ದುರ್ಬಲರಿಗೆ ಸೂಕ್ತ ಪ್ರಾತಿನಿಧ್ಯ ನೀಡಬೇಕೆಂಬ ಬೇಡಿಕೆಯು ಸಮಂಜಸವಾಗಿಯೇ ಇದೆ.

ಇತ್ತೀಚಿಗೆ ಭಾರತದ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪು ಈ ದೇಶದಲ್ಲಿರುವ ಲಕ್ಷಾಂತರ ಕಾರ್ಮಿಕರಿಗೆ ಆಘಾತಕಾರಿ, ಮರಣಶಾಸನವಾಗಿದೆ. ದಿನಗೂಲಿಯ ಮೇಲೆ ಜೀವನವನ್ನು ಸಾಗಿಸುವವರ ಬದುಕಿಗೆ ಬೆಂಕಿ ಇಟ್ಟಂತಾಗಿದೆ. ನಮ್ಮ ಕಾನೂನುಗಳು, ತೀರ್ಪುಗಳು ಜನಸಾಮಾನ್ಯರ ಬದುಕುವ ಹಕ್ಕನ್ನು ಕಸಿದುಕೊಳ್ಳುತ್ತಿವೆ. ಅವರ ಅಸ್ತಿತ್ವವನ್ನು ಬೇರುಸಹಿತ ಕಿತ್ತುಹಾಕಿವೆ. ಜೀವನದ ಭದ್ರತೆ, ಹಿತಾಸಕ್ತಿಗಳು ಬರೀ ಕನಸಿನ ಮಾತು. ಈ ತೀರ್ಪು ಲಕ್ಷಾಂತರ ಬಡವರ ಪಾಲಿಗೆ ಉಸಿರಾಡುವ ಸ್ವಾತಂತ್ರ್ಯವನ್ನು ಕಸಿದುಕೊಂಡಂತಾಗ ಲಿಲ್ಲವೇ? ಹಾಗಾದರೆ ಸಾರ್ವಜನಿಕಕ್ಷೇತ್ರದಲ್ಲಿ ಇವರಿಗೆ ಉದ್ಯೋಗ ಮಾಡುವ, ಬದುಕುವ ಅವಕಾಶವನ್ನೆ ಕಸಿದುಕೊಂಡಂತಾಗಲಿಲ್ಲವೇ? ಇನ್ನಾವ ರಂಗದಲ್ಲಿ ಇವರುಗಳು ಬದುಕುಬೇಕು? ತನ್ನ ದುಡಿಮೆಗೆ ತಕ್ಕ ಬೆಲೆ(?) ಸಿಕ್ಕರೂ ಪ್ರತಿಯೊಬ್ಬನಿಗೂ ಒಂದು ಗೌರವ, ಭವಿಷ್ಯದಲ್ಲಿ ಆಶಾಭಾವನೆ, ಭರವಸೆಗಳನ್ನು ಅಪೇಕ್ಷಿಸುವುದು ತಪ್ಪೇ? ಈ ಅಪೇಕ್ಷೆಯನ್ನು ಅಪರಾಧವೆಂಬಂತೆ ಪರಿಭಾವಿಸುವುದು ಯಾವ ನ್ಯಾಯ? ನಮ್ಮ

ಜನಪ್ರತಿನಿಧಿಗಳು, ಶಾಸನಸಭೆಗಳು ಈ ಕುರಿತು ಗಂಭೀರವಾಗಿ ಆಲೋಚಿಸಬೇಕಾಗಿದೆ. ಕೇಂದ್ರಸರ್ಕಾರವೂ ಚಿಂತಿಸಬೇಕಾಗಿದೆ. ಅಗತ್ಯ ಕಾನೂನುಗಳನ್ನು, ತಿದ್ದುಪಡಿಗಳನ್ನು ಮಾಡಿಕೊಳ್ಳುವುದು ಇಂದಿನ ತುರ್ತು ಸಂಗತಿಯಾಗಿದೆ. ದಿನಗೂಲಿಗಳಲ್ಲಿ ಬಹುಸಂಖ್ಯಾತರು ಶೋಷಿತರು, ಬಡವರು, ನಿರ್ಲಕ್ಷ್ಯಕ್ಕೊಳಗಾದವರು, ಅವಿದ್ಯಾವಂತರು ಇರುವುದರಿಂದ, ಮಾನವೀಯ ನೆಲೆಯಲ್ಲಿ ಒಂದು ಭದ್ರತೆಯನ್ನು ಭವಿಷ್ಯದಲ್ಲಿ ತೋರಿಸುವುದು ಜನಪರ ಸರ್ಕಾರಗಳ ಹೊಣೆಗಾರಿಕೆಯಾಗಿದೆ ಎಂಬುದು ಸಂವಿಧಾನದ ಆಶಯವಾಗಿದೆ.

ನಾವೀಗ ಜನವರಿ ೨೬ರಂದು ೫೯ನೇ ಪ್ರಜಾರಾಜ್ಯದಿನವನ್ನು ದೇಶದಲ್ಲಿ ಮತ್ತು ವಿಶ್ವದ ಅನೇಕ ರಾಷ್ಟ್ರಗಳಲ್ಲಿ ನೆಲೆಸಿರುವ ಭಾರತೀಯರೆಲ್ಲ ವಿಜೃಂಭಣೆಯಿಂದ ಆಚರಿಸಲಿದ್ದೇವೆ. ಈ ದಿನಕ್ಕೊಂದು ಪವಿತ್ರ ಅರ್ಥವನ್ನು ಕೊಡುವ, ಹಾಗೆಂದು ನಡೆದು ಕೊಳ್ಳುವ ಮನೋದಾರ್ಢ್ಯ ಬೇಕು. ಜನಸೇವೆಯೇ ಜನಾರ್ಧನ ಸೇವೆ ಎಂದು ನಂಬಿರುವ ಜನಪ್ರತಿನಿಧಿಗಳು, ಜನನಾಯಕರು, ಸಂಸ್ಥೆಗಳು, ಸಮಾಜಸೇವಾ ಧುರೀಣರು, ಕಾರ್ಯ ಕರ್ತರು, ಬುದ್ಧಿಜೀವಿಗಳು, ಸಾರ್ವಜನಿಕರು, ನಮ್ಮ ಸಂಸದೀಯ ಪ್ರಜಾಪ್ರಭುತ್ವವನ್ನು ಬಲಪಡಿಸುವ, ಸಂವಿಧಾನದ ಆಶಯಗಳನ್ನು ಈಡೇರಿಸುವ ಜವಾಬ್ದಾರಿಯನ್ನು ಹೊರಬೇಕಾಗಿದೆ. ಇದು ಮಣ್ಣಿನಲ್ಲಿ ಹುಟ್ಟಿದ ಪ್ರತಿಯೊಬ್ಬ ಭಾರತೀಯನ ಆದ್ಯ ಕರ್ತವ್ಯವಾಗಬೇಕು. ಆದಾಗಲೇ ನಮ್ಮ ಸಂವಿಧಾನ ಪಿತಾಮಹರು ಕಂಡ ಆಶಯಗಳು, ಆದರ್ಶಗಳು, ಕನಸುಗಳು ನಿಜಗೊಂಡಾವು.

**ಟಿಪ್ಪಣಿಗಳು**

೧. ಬದುಕಲು ಬೇಕು ಬದುಕುವ ಈ ಮಾತು, ಡಾ.ಪಾಟೀಲ ಪುಟ್ಟಪ್ಪ, ಸಾಹಿತ್ಯ ಪ್ರಕಾಶನ, ಹುಬ್ಬಳಿ, ೨೦೦೩, ಪು.೫

೨. ಡಾ. ಬಾಬಾಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ-೯, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೮, ಪು. xxxix : ಪ್ರಸ್ತಾವನೆ

೩. **Law, Judiciary and Justice in India,** B.P.Singh Sehgal(Ed.), Deep and Deep Publications, New Delhi, 1993, p.185

೪

# ಜನಪದರ ನ್ಯಾಯತೀರ್ಮಾನ ದೃಷ್ಟಿಯ ತಾತ್ವಿಕತೆ

ಡಾ. ಕೆ. ಆರ್. ದುರ್ಗಾದಾಸ್

ಜಾನಪದವನ್ನು ಕುರಿತು ಅಧ್ಯಯನ ಮಾಡುವುದಕ್ಕೆ ಹೆಚ್ಚಿನ ಆಸಕ್ತಿಗಳು ಇತ್ತೀಚೆಗೆ ಪ್ರಕಟವಾಗುತ್ತಿವೆ. ಭಾಷೆಗೆ ಲಿಪಿ ಬಂದಮೇಲೆ ಲಿಖಿತವಾದದ್ದು ಹೆಚ್ಚು ಮಾನ್ಯವಾಗಿ, ಅಲಿಖಿತವಾಗಿ ಉಳಿದದ್ದು ಅಲಕ್ಷ್ಯಕ್ಕೆ ಗುರಿಯಾಗುತ್ತಾ ಬಂದಿದೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಜಾನಪದ ಅಧ್ಯಯನಕ್ಕೆ ಹೆಚ್ಚಿನ ಮಹತ್ವ ದೊರೆತಮೇಲೆ ಇಲ್ಲಿಯೂ ಅಂತಹ ಒಲವು ಕಂಡುಬರುತ್ತಿರುವುದು ಸ್ವಾಗತಾರ್ಹ.

'ಜನಪದರ ನ್ಯಾಯತೀರ್ಮಾನ ದೃಷ್ಟಿ' ಕುರಿತು ವಿಚಾರ ಮಾಡುವಾಗ ನಮಗೆ ಕೆಲವು ಪ್ರಶ್ನೆಗಳು ಎದುರಾಗುತ್ತವೆ. ನಮ್ಮ ನಡುವೆ ಸಂವಿಧಾನವಿದೆ, ಹಲವಾರು ಕೋರ್ಟು ಕಛೇರಿಗಳಿವೆ. ಕೋರ್ಟು, ಕಛೇರಿಗಳಿಂದ ಸಾರ್ವಜನಿಕ ಬದುಕಿನಲ್ಲಿ ಸಾಕಷ್ಟು ಪ್ರಯೋಜನಗಳಾಗಿದ್ದರೂ, ಅವುಗಳ ಬಗೆಗೆ ಜನಸಾಮಾನ್ಯರಲ್ಲಿ ಒಮ್ಮೊಮ್ಮೆ ಬೇಸರ ವ್ಯಕ್ತವಾಗುವುದುಂಟು. 'ಕೋರ್ಟು, ಕಛೇರಿಗೆ ಸುತ್ತಾಡಿ, ಆಡಿ ಸಾಕಾಗಿ ಹೋಯ್ತು' ಎಂಬಂತಹ ಮಾತುಗಳು ಸರ್ವೇಸಾಮಾನ್ಯವಾಗಿ ಎಲ್ಲರಿಂದಲೂ ಕೇಳಿಬರುತ್ತವೆ. ಕೋರ್ಟು, ಕಛೇರಿಗಳ ವ್ಯವಹಾರ ಬಹುಪಾಲು ಲಿಖಿತ ಮಾಧ್ಯಮವನ್ನು ಅನುಸರಿಸಿದೆ. ಇದು ಬಹುಪಾಲು ಅನಕ್ಷರಸ್ಥರನ್ನು ದೂರ ನಿಲ್ಲಿಸುತ್ತದೆ. ಮತ್ತೊಂದು ಅಂಶವೆಂದರೆ, ಕೋರ್ಟುಗಳ ಶುಲ್ಕ, ವಕೀಲರ ಸಂಭಾವನೆ ಮುಂತಾದವುಗಳು ಆರ್ಥಿಕ ವಹಿವಾಟನ್ನು ಮುಖ್ಯವಾಗಿಸಿವೆ. ಇದರಿಂದ ಬಡವರು ಕೋರ್ಟು ಸಮೀಪ ಹೋಗಲು ಅಂಜುವಂತಾಗಿದೆ. ಆದರೆ ಜನಪದರ ನ್ಯಾಯತೀರ್ಮಾನದಲ್ಲಿ ಇಂತಹ ಪ್ರಭಾವಗಳಿಗೆ ಸ್ಥಾನವಿಲ್ಲವೆಂದು ಅರ್ಥವಲ್ಲ. ಆದರೂ ಜನಸಾಮಾನ್ಯರಿಗೆ ತಮ್ಮ ತಮ್ಮಲ್ಲೇ ನ್ಯಾಯ ಬಗೆಹರಿಸಿಕೊಳ್ಳುವ ಬಗೆಗೆ ಹೆಚ್ಚಿನ ವಿಶ್ವಾಸವಿದೆ.

## ನ್ಯಾಯ-ಅನ್ಯಾಯಗಳ ತುಲನೆ

ಮನೆಯಲ್ಲಿ, ಊರಲ್ಲಿ ಯಾವುದೇ ರೀತಿಯ ಜಗಳಗಳಾಗಬಾರದು; ಎಲ್ಲರೂ ನೆಮ್ಮದಿಯಿಂದ ಜೀವನ ಮಾಡಬೇಕೆಂಬುದು ಜನಪದರ ಒಟ್ಟು ಆಶಯ. ಈ

ನೃಷ್ಟಿಯಿಂದ, ಸಾಮಾನ್ಯವಾಗಿ ಒಪ್ಪಿತ ಬದುಕನ್ನು ರಕ್ಷಿಸುವುದೇ ನ್ಯಾಯ, ಇದಕ್ಕೆ ಭಂಗ ಉಂಟುಮಾಡುವುದೇ ಅನ್ಯಾಯವೆಂದು ಅವರು ಭಾವಿಸಿದ್ದಾರೆ. ತನ್ನ ಮೇರೆಯಲ್ಲಿ ಇನಿರುವುದು ನ್ಯಾಯ. ಅತಿಕ್ರಮಣ ಮಾಡುವುದು ಅನ್ಯಾಯ. ಸ್ವತಃ ದುಡಿದು ತಿನ್ನುವುದು ನ್ಯಾಯ. ಕಸಿದು ತಿನ್ನುವುದು ಅನ್ಯಾಯ. ಮದುವೆಯಾಗಿ ಹೆಂಡತಿ ಜೊತೆ ಬದುಕುವುದು ನ್ಯಾಯ. ಪರಸ್ತ್ರೀ ಸಂಗ ಮಾಡುವುದು ಅನ್ಯಾಯ. ಹಾಗೆಯೇ ಗಂಡನಿಗೆ ನಿಷ್ಠಳಾಗಿರುವವಳು ಪತಿವ್ರತೆ. ಪರಪುರುಷರಲ್ಲಿ ಆಸಕ್ತಿ ಹೊಂದಿದವಳು ತುಡುಗಿ. ಅಂದರೆ ಗಂಡಾಗಲಿ, ಹೆಣ್ಣಾಗಲಿ ಸಮಾಜದಲ್ಲಿ ಒಪ್ಪಿತವಾದ ಮೌಲ್ಯಗಳಿಗೆ ಬದ್ಧವಾಗಿರುವುದು ಅವರವರ ಕರ್ತವ್ಯವೆಂದು ಜನಪದರು ನಂಬುತ್ತಾರೆ.

## ನ್ಯಾಯ ವಿಂಗಡಣೆ

ಜನಪದರ ಜೀವನ ಸಮೂಹನಿಷ್ಠವಾದುದು. ಸಮಾಜದಲ್ಲಿ ಕುಟುಂಬ ಒಂದು ಚಿಕ್ಕ ಘಟಕ. ಮನೆಯಲ್ಲಿ ತಂದೆ-ಮಕ್ಕಳಿಗೆ, ಗಂಡ-ಹೆಂಡತಿಗೆ, ಅಣ್ಣ-ತಮ್ಮಂದಿರು ಮತ್ತು ಅಕ್ಕ-ತಂಗಿಯರಿಗೆ ಏನಾದರೂ ತಂಟೆ, ತಕರಾರು ಬಂದರೆ ಅದನ್ನು ಮನೆಜಗಳವೆನ್ನುವರು. ಒಂದೇ ಬಣದ ನಾಲ್ಕಾರು ಕುಟುಂಬಗಳಿದ್ದು, ಅದರ ನಡುವೆ ಮನಸ್ತಾಪ ಬಂದರೆ, ಅದನ್ನೂ ಕೂಡ ಅಣ್ಣ-ತಮ್ಮಂದಿರ ಜಗಳವೆಂದೇ ಪರಿಗಣಿಸುತ್ತಾರೆ. ಒಂದೇ ಜಾತಿಯಲ್ಲಿ ಇಂತಹ ಹಲವಾರು ವಿಭಿನ್ನ ಬಣಗಳ ಕುಟುಂಬಗಳಿರುವುದು ಸಾಮಾನ್ಯ. ಒಂದು ಜಾತಿಯ ಒಳಗೆ ಬೇರೆ ಬೇರೆ ಬಣಗಳ ಜನರ ನಡುವೆ ಭಿನ್ನಾಭಿಪ್ರಾಯ ಬಂದು, ಜಗಳದ ಮಟ್ಟಕ್ಕೆ ಹೋದರೆ ಅದನ್ನು ಕೇರಿಯಜಗಳವೆಂದು ಕರೆಯುತ್ತಾರೆ. ಒಂದು ಜಾತಿಯ ಜನರಿಗೂ, ಮತ್ತೊಂದು ಜಾತಿಯ ಜನರಿಗೂ ಕಲಹವೇರ್ಪಟ್ಟರೆ ಅದನ್ನು ಜಾತಿಜಗಳವೆನ್ನುತ್ತಾರೆ. ಒಂದೊಂದು ಗುಂಪಿನಲ್ಲಿ ನಾಲ್ಕಾರು ಜಾತಿಗಳು ಸೇರಿಕೊಂಡು ಜಗಳ ಕಾಯ್ದರೆ ಅದು ಊರಜಗಳವಾಗುತ್ತದೆ. ಒಂದು ಊರಿಗೂ ಮತ್ತೊಂದು ಊರಿಗೂ ಜಗಳವೇರ್ಪಟ್ಟರೆ ಊರೂರಿನಜಗಳವೆಂದು ಕರೆಯುವುದುಂಟು. ಹಾಗೆಯೇ ಹುಡುಗರ, ದೊಡ್ಡವರ ಜಗಳಗಳೆಂದೂ ಬಗೆಗಳಿವೆ. ವೈಯಕ್ತಿಕಜಗಳ, ಗುಂಪುಜಗಳಗಳೂ ಉಂಟು. ಗಂಡಸರಷ್ಟೇ ಜಗಳಾಡಿದರೆ ಅದು ಗಂಡಸರಜಗಳ. ಹೆಂಗಸರ ಮಧ್ಯೆ ನಡೆಯುವುದು ಹೆಂಗಸರಜಗಳ.

ಜನಪದರಲ್ಲಿ ಸಾಮಾನ್ಯವಾಗಿ ಎರಡು ರೀತಿಯ ಜಗಳಗಳಿವೆ. ಒಂದು ಮಾತಿನದು, ಮತ್ತೊಂದು ಬಡಿದಾಟದ್ದು.

## ಪಂಚರು

ನ್ಯಾಯತೀರ್ಮಾನ ಮಾಡುವವರನ್ನು ಪಂಚರೆಂದು ಕರೆಯುತ್ತಾರೆ. ಪಂಚರೆಂದರೆ ಪಂಚಾಯಿತಿ ಬಗೆಹರಿಸುವವರೆಂದೇ ಅರ್ಥ. 'ಪಂಚರು' ಎಂಬ ಹೆಸರೇ ಸೂಚಿಸುವಂತೆ ನ್ಯಾಯತೀರ್ಮಾನ ಮಾಡುವವರಲ್ಲಿ ಒಬ್ಬರಿಗಿಂತ ಹೆಚ್ಚು ಜನರಿರುತ್ತಾರೆ. ಇವರೆಲ್ಲ ಬೇರೆ ಬೇರೆ ಕುಟುಂಬ ಅಥವಾ ಬಣ ಅಥವಾ ಜಾತಿಯನ್ನು ಪ್ರತಿನಿಧಿಸುತ್ತಾರೆ. ಆಯಾ ಜಗಳದ ಸ್ವರೂಪದ ಮೇಲೆ ಇವರನ್ನು ನ್ಯಾಯದಕಟ್ಟೆಗೆ ಆಹ್ವಾನಿಸಲಾಗುತ್ತದೆ. ಪಂಚರಾಗುವವರು

ಸಾಮಾನ್ಯವಾಗಿ ಹಿರಿಯ(senior)ರಾಗಿದ್ದು, ಹೆಚ್ಚಿನ ಅನುಭವವುಳ್ಳವರಾಗಿರುತ್ತಾರೆ. ಇವರು ನೇಮಕಗೊಂಡವರಾಗಿರದೇ, ಆಯಾ ಗುಂಪುಗಳಲ್ಲಿ ಗುರುತಿಸಲ್ಪಟ್ಟವರಾಗಿರುತ್ತಾರೆ. ಕುಡುಕರು ನ್ಯಾಯಮಾಡುವುದನ್ನು ಜನ ಒಪ್ಪುವುದಿಲ್ಲ.

**ನ್ಯಾಯದಕಟ್ಟೆ**

ನ್ಯಾಯವಿಚಾರಣೆ ಮಾಡುವ ಸ್ಥಳವನ್ನು ನ್ಯಾಯದಕಟ್ಟೆ ಎಂದು ಕರೆಯುತ್ತಾರೆ. ಇದಕ್ಕೆ ಪಂಚಾಯಿತಿಕಟ್ಟೆ ಎಂಬ ಮತ್ತೊಂದು ಹೆಸರೂ ಇದೆ. ಊರಬಯಲಿನಲ್ಲಿ ಯಾವುದಾದರೂ ಗುಡಿ ಅಥವಾ ಸಮುದಾಯಭವನದಲ್ಲಿ ನ್ಯಾಯ ನಡೆಯುತ್ತದೆ. 'ಕಟ್ಟೆ' ಎಂಬುದು ಪೀಠ ಅಥವಾ ಎತ್ತರದ ಸ್ಥಾನವನ್ನು ನಿರ್ದೇಶಿಸುತ್ತದೆ. ನ್ಯಾಯಮಾಡುವವರ ಕುಟುಂಬಗಳನ್ನು 'ಕಟ್ಟೆಮನೆ'ಗಳೆಂದು ಗುರುತಿಸುವುದುಂಟು. ಕುಟುಂಬಜಗಳವಿದ್ದರೆ ಮನೆಯಲ್ಲಿ ಯಜಮಾನನ ಸಮ್ಮುಖದಲ್ಲಿ ಬಗೆಹರಿಸಿಕೊಳ್ಳಲಾಗುತ್ತದೆ. 'ಮನೆಜಗಳ ಒಯ್ದು ಬೀದಿಗೆ ಹಾಕ್ಯಾರ' ಎನ್ನುವಲ್ಲಿ ಮನೆಯಲ್ಲಿ ಬಗೆಹರಿಸಬೇಕಾದುದನ್ನು ಬೀದಿಯಲ್ಲಿ ಪಂಚಾಯಿತಿ ಮಾಡಬಾರದೆಂಬುದು ಸೂಚಿತವಾಗಿದೆ.

**ದೂರು ಕೊಡುವುದು**

ಅನ್ಯಾಯಕ್ಕೆ ಒಳಗಾದವರು ನ್ಯಾಯ ಕೋರಿ ಹಿರಿಯರ ಮುಂದೆ ಅಹವಾಲು ಸಲ್ಲಿಸುತ್ತಾರೆ. ಮನೆಯ ಜಗಳವಾದರೆ ಮನೆಯ ಯಜಮಾನನಿಗೆ, ಕೇರಿಯ ಜಗಳವಾದರೆ ಕೇರಿಯ ಯಜಮಾನರಿಗೆ, ಜಾತಿಜಗಳವಾದರೆ ಆಯಾ ಜಾತಿಯ ಹಿರಿಯರಿಗೆ ದೂರು ಹೇಳುವುದು ಪದ್ಧತಿ. ಒಮ್ಮೊಮ್ಮೆ ಎರಡೂ ಪಂಗಡದವರು ದೂರು ಸಲ್ಲಿಸಬಹುದು. ಆಗ ಹಿರಿಯರು ಎರಡೂ ಪಂಗಡಗಳ ಜನರಿಂದ ದೂರು ಸ್ವೀಕರಿಸುತ್ತಾರೆ. ಗಂಡು ತನಗೆ ಅನ್ಯಾಯವಾದಾಗ ಸಾರ್ವಜನಿಕವಾಗಿ ಯಾರ ಹತ್ತಿರ ಬೇಕಾದರೂ ನ್ಯಾಯಕ್ಕಾಗಿ ಕೋರಿಕೆ ಸಲ್ಲಿಸಬಹುದು. ಈ ಸೌಲಭ್ಯ ಹೆಣ್ಣಿಗಿರುವುದಿಲ್ಲ. ಒಮ್ಮೊಮ್ಮೆ ದೊಡ್ಡವರೆನಿಸಿಕೊಂಡನರೇ ತಪ್ಪು ಮಾಡಿದಾಗ ಅವರ ವಿರುದ್ಧ ದೂರು ಸಲ್ಲಿಸುವುದು ಕಷ್ಟ. ಜಾತಿ, ಜಾತಿಗಳ ಮಧ್ಯೆ ಜಗಳವಾದಾಗ ಮೇಲುಜಾತಿಯವರ ವಿರುದ್ಧ ಕೆಳಜಾತಿಯವರು ದೂರು ಕೊಡುವುದೂ ಸಾಧ್ಯವಾಗದಿರಬಹುದು. ಈ ಇತಿಮಿತಿಗಳಿದ್ದಾಗ್ಯೂ ನ್ಯಾಯ ಕೇಳುವುದಂತೂ ಪ್ರತಿಯೊಬ್ಬರ ಹಕ್ಕಾಗಿರುತ್ತದೆ.

**ನ್ಯಾಯದ ವಿಚಾರಣೆ**

ಜನರ ಸಮ್ಮುಖದಲ್ಲಿ ಬಹಿರಂಗವಾಗಿ ವಿಚಾರಣೆ ಮಾಡುವುದು ಜನಪದರ ನ್ಯಾಯಪದ್ಧತಿಯಲ್ಲಿ ಕಂಡುಬರುವ ಗಮನಾರ್ಹ ಅಂಶವಾಗಿದೆ. ನ್ಯಾಯನಡೆಯುವ ಸ್ಥಳ, ದಿನಾಂಕ ಮತ್ತು ಸಮಯವನ್ನು ಡಂಗೂರ ಹೊಡೆಸಿಯೋ ಅಥವಾ ಹಲಗೆ ಮೂಲಕವೋ ಸಾರಲಾಗುತ್ತದೆ. 'ಇದು ಎಲ್ಲರಿಗೂ ಗೊತ್ತಾಗಲಿ' ಎಂಬ ಉದ್ದೇಶ ಇಲ್ಲಿ ಪ್ರಧಾನ ವಾಗಿರುತ್ತದೆ. ತಪ್ಪು ಮಾಡಿದವರು ಮತ್ತು ಹಾನಿಗೊಳಗಾದವರು ಕೂಡಿಯೇ ಹಾಜರಿದ್ದಾಗ

ವಿಚಾರಣೆ ನಡೆಯುತ್ತದೆ. ಹಿರಿಯರು ಎರಡೂ ಗುಂಪುಗಳ ಅಭಿಪ್ರಾಯವನ್ನು ಮೊದಲು ಆಲಿಸುತ್ತಾರೆ. ಅಪರಾಧವನ್ನು ಪತ್ತೆಹಚ್ಚಲು ಚಾಲ್ತಿಯಲ್ಲಿರುವ ವಿಧಾನಗಳನ್ನು ಅನುಸರಿಸುತ್ತಾರೆ. ಕಳುವು ಮಾಡಿದವನನ್ನು ಮಾಲುಸಮೇತ ಹಿಡಿದಾಗ ಅಪರಾಧ ಪತ್ತೆ ಸುಲಭವಾಗುತ್ತದೆ. ಸರಿಯಾದ ಸಾಕ್ಷಿ, ಪುರಾವೆಗಳು ದೊರಕದಿದ್ದಲ್ಲಿ ಅಪರಾಧ ಶೋಧನೆಗೆ ಇತರ ಮಾರ್ಗಗಳನ್ನು ಅನುಸರಿಸುವುದುಂಟು. ಉದಾಹರಣೆಗೆ, ದೇವರಮುಂದೆ ಪ್ರಮಾಣ ಮಾಡುವುದು, ದೇವರ ವಿಗ್ರಹದ ತಲೆಬಡಿಯುವುದು, ದೀಪ ಆರಿಸುವುದು, ಕೆಂಡ ಹಿಡಿಯುವುದು ಮುಂತಾದ ಕ್ರಿಯೆಗಳನ್ನು ಮಾಡಲು ಹಚ್ಚುವುದು, ಸಾಮಾನ್ಯವಾಗಿ ಇಂತಹ ಕ್ರಮಗಳನ್ನು ಆರೋಪಿತ ಅಪರಾಧಿಯಿಂದ ಮಾಡಿಸಲಾಗುತ್ತದೆ. ಅಪರಾಧ ಮಾಡಿದವರು ಇಂತಹ ಕ್ರಿಯೆಗಳನ್ನು ಎದುರಿಸುವಲ್ಲಿ ಹಿಂದೇಟು ಹಾಕಬಹುದು ಎಂಬ ತಿಳುವಳಿಕೆ ಇದರ ಹಿನ್ನೆಲೆಗಿರುತ್ತದೆ. ಅನೈತಿಕ ಸಂಬಂಧ, ಬಲಾತ್ಕಾರ, ಹಾದರ ಮುಂತಾದ ಅಪರಾಧಗಳನ್ನು ಇದೇ ಬಗೆಯಲ್ಲಿ ಪತ್ತೆಹಚ್ಚುವುದುಂಟು. ಅನೈತಿಕ ಸಂಬಂಧಗಳನ್ನು ಕುರಿತು ವಿಚಾರಣೆ ಮಾಡುವಾಗ ಅದನ್ನು ಖುದ್ದಾಗಿ ನೋಡಿದವರ ಸಾಕ್ಷಿ ಪಡೆಯಲಾಗುತ್ತದೆ. ಹೆಂಡತಿಯ ಇಂತಹ ಅಪರಾಧಗಳಿಗೆ ಗಂಡನ ಸಾಕ್ಷಿಯೇ ತುಂಬಾ ಮುಖ್ಯವಾದುದು. ಇದಕ್ಕೆ ಸರಿಯಾದ ಸಾಕ್ಷಿ ದೊರಕದಿದ್ದಾಗ 'ಮರೆಬಿಟ್ಟು ನೋಡಿ ಹಿಡಿಯಲು' ಸೂಚಿಸುವುದಂಟು. ಇಂತಹ ವಿಷಯಗಳಲ್ಲಿ ಪ್ರಾಣಿಗಳ ವರ್ತನೆಯನ್ನು ಆಧರಿಸಿ ಮನುಷ್ಯ ಸ್ವಭಾವವನ್ನು ಅರಿಯುವುದುಂಟು. ತುಡುಗು ಮೇಯುವ ದನಗಳು ಮನೆಯಲ್ಲಿ ಕಣ್ಣಿಗೆ ಹೇಗೆ ನಿಲ್ಲುವುದಿಲ್ಲವೋ ಹಾಗೆಯೇ ಗಂಡಾಗಲೀ, ಹೆಣ್ಣಾಗಲೀ ತಮ್ಮ ಸುಖಕ್ಕಾಗಿ ಹಾತೊರೆಯುತ್ತಿರುತ್ತಾರೆ. ಆಗ ಸ್ಥಳದಲ್ಲಿಯೇ ಹಿಡಿದು ಶಿಕ್ಷೆಗೆ ಗುರಿಪಡಿಸುವುದು ಜನಪದರ ನ್ಯಾಯದಲ್ಲಿದೆ.

### ಅಪರಾಧಕ್ಕೆ ಶಿಕ್ಷೆ

ಅಪರಾಧ ಮಾಡಿದವರಿಗೆ ಸರಿಯಾದ ಶಿಕ್ಷೆಯಾಗಬೇಕೆಂಬುದು ಜನಪದರಲ್ಲಿ ಬಹುಮುಖ್ಯವಾದ ನಿಲುವು. ಇದರಿಂದ ಅಪರಾಧಗಳು ಮರುಕಳಿಸದಂತೆ ತಡೆಗಟ್ಟ ಬಹುದೆಂಬುದು ಅವರ ಅಭಿಪ್ರಾಯವಾಗಿದೆ. ಅಪರಾಧದ ಗಂಭೀರತೆಯನ್ನು ಅನುಸರಿಸಿ ನ್ಯಾಯದ ವಿಧಾನಗಳನ್ನು ಪಾಲಿಸಲಾಗುತ್ತದೆ. ಈ ದೃಷ್ಟಿಯಿಂದ ಆಯಾ ಅಪರಾಧಗಳಿಗೆ ತಕ್ಕಂತೆ ಶಿಕ್ಷೆಯ ಹಲವಾರು ಕ್ರಮಗಳನ್ನು ಜನಪದರು ರೂಢಿಯಲ್ಲಿ ತಂದಿದ್ದಾರೆ. ಅವುಗಳನ್ನು ಈ ಮುಂದಿನಂತೆ ವಿಭಾಗಿಸಬಹುದು : ೧. ರಾಜಿ ಮಾಡಿಸುವುದು, ೨. ತಪ್ಪುದಂಡ ಕೊಡಿಸುವುದು, ೩. ಅವಮಾನ ಪಡಿಸುವುದು, ೪. ದೇಹದಂಡನೆ ಹಾಗೂ ೫. ಬಹಿಷ್ಕಾರ.

### ೧. ರಾಜಿ ಮಾಡಿಸುವುದು

ಸಣ್ಣಪುಟ್ಟ ಕಾರಣಗಳಿಗೆ ಮನಸ್ತಾಪಗಳಾಗಿ ಮಾತು ನಿಂತುಹೋಗುವುದು ಒಂದು ರೀತಿಯ ಜಗಳ. ಇದು ಇಬ್ಬರು ವ್ಯಕ್ತಿಗಳ ನಡುವೆ ಅಥವಾ ಎರಡು ಕುಟುಂಬಗಳ ನಡುವೆ

ಸಾಮಾನ್ಯವಾಗಿ ಘಟಿಸಬಹುದಾದದ್ದು. ತಂದೆ ಮತ್ತು ಮಕ್ಕಳ ನಡುವೆ, ಗಂಡ-ಹೆಂಡತಿ, ಅಣ್ಣ-ತಮ್ಮ, ಅತ್ತೆ-ಸೊಸೆ; ಗೆಳೆಯರ ನಡುವೆ- ಹೀಗೆ ಪರಿಚಿತ ಮತ್ತು ಅಪರಿಚಿತ ವ್ಯಕ್ತಿಗಳ ನಡುವೆಯೂ ಯಾವುದೋ ವ್ಯವಹಾರಕ್ಕೆ ಸಂಬಂಧಿಸಿ ಅಥವಾ ಸಂಬಂಧಗಳಿಗೆ ಸಂಬಂಧಿಸಿ ಮನಸ್ತಾಪ ಹುಟ್ಟಬಹುದು. ಮಾತು ತುಸು ಬಿರುಸಾಗಿದ್ದರೂ ಸಾಕು, ನಾನೇನು ಕಡಿಮೆ? ಎಂಬ ಭಾವದಿಂದ ಮುಂದಿನ ಜಗಳಕ್ಕೆ ನಾಂದಿಯಾಗಬಹುದು. ಜೀವನಪರ್ಯಂತ ಪರಸ್ಪರ ಮಾತಾಡಲಾರದ ವ್ಯಕ್ತಿಗಳೂ ಉಂಟು. ಆದರೆ ಜೀವನ ಅಂತ ಅಂದಮೇಲೆ ಈ ರೀತಿಯ ನಿಷ್ಠುರ ಕಟ್ಟಿಕೊಂಡು ಬದುಕಲಾದೀತೆ? ಒಬ್ಬರಿಗೊಬ್ಬರು ಬೇಕು ಎಂಬ ಸಾಮರಸ್ಯದ ದೃಷ್ಟಿ ಜನಪದರದ್ದು. ಈ ಕಾರಣಕ್ಕೆ 'ಮಾತುಬಲ್ಲವನಿಗೆ ಜಗಳವಿಲ್ಲ, ಊಟಬಲ್ಲವನಿಗೆ ರೋಗವಿಲ್ಲ' ಎಂಬ ಗಾದೆ ಹುಟ್ಟಿಕೊಂಡಿರಬೇಕು.

ಮಾತುಬಿಟ್ಟವರ ಮಧ್ಯೆ ಸಂಧಿ ಏರ್ಪಡಿಸಿ ಪರಸ್ಪರ ಕೂಡಿಸುವುದು ಜನಪದರ ನ್ಯಾಯತೀರ್ಮಾನದಲ್ಲಿದೆ. ಇದಕ್ಕೆ 'ರಾಜಿ' ಮಾಡಿಸುವುದು ಎಂದು ಕರೆಯುತ್ತಾರೆ. ಸಣ್ಣಪುಟ್ಟ ಕಾರಣಗಳನ್ನೇ ದೊಡ್ಡದು ಮಾಡಿಕೊಂಡು ರಾದ್ಧಾಂತವಾಗಬಾರದೆಂಬುದು ಜನಪದರ ತಿಳುವಳಿಕೆಯಾಗಿದೆ. ಕೌಟುಂಬಿಕ ಕಲಹಗಳನ್ನಂತೂ ಹೆಚ್ಚು ಬೆಳೆಸದೇ ಪರಸ್ಪರರಿಗೆ ತಿಳಿಹೇಳಿ ಬಗೆಹರಿಸುವುದುಂಟು. ಗಂಡ-ಹೆಂಡಿರ ಮಧ್ಯೆ ಜಗಳವಾಗುವುದು ಸಾಮಾನ್ಯವೆಂದೇ ತಿಳಿಯುತ್ತಾರೆ. ಅವರೇ ಸ್ವತಃ ನ್ಯಾಯ ಬಗೆಹರಿಸಿಕೊಳ್ಳಬೇಕೆಂಬುದು ಜನಪದರ ಆಶಯವಾಗಿದೆ. ಈ ಕಾರಣದಿಂದ 'ಗಂಡ-ಹೆಂಡಿರ ಜಗಳ ಉಂಡು ಮಲಗುವ ತನಕ' ಎಂಬ ಗಾದೆಯೂ ಪ್ರಚಲಿತದಲ್ಲಿದೆ. ಕೂಡಿ ಬಾಳುವ ಮನಸ್ಸು ಒಬ್ಬರಲ್ಲಿ ಇಲ್ಲದಿದ್ದರೂ ಬಾಳುವೆಯಾಗುವುದಿಲ್ಲ. ಗಂಡ ಬೇರೆ ಹೆಣ್ಣಿನ ಜೊತೆ ಸಂಪರ್ಕವಿಟ್ಟುಕೊಂಡು ಹೆಂಡತಿಯನ್ನು ಸರಿಯಾಗಿ ನೋಡಿಕೊಳ್ಳುವುದಿಲ್ಲವೆಂದಾಗ ಗಂಡನಿಗೆ ಬುದ್ಧಿ ಹೇಳಿ ಹಾದಿಗೆತರುವ ಪ್ರಯತ್ನವನ್ನು ಹಿರಿಯರು ಮಾಡುತ್ತಾರೆ. ಇದಕ್ಕೆ ವಿರುದ್ಧವಾಗಿ ಹೆಂಡತಿ ಗಂಡನನ್ನು ಸೇರದ ಉದಾಹರಣೆಗಳೂ ಜನಪದರಲ್ಲಿದೆ. ಆಗಲೂ ಹೆಂಡತಿಗೆ ಕೂರಿಸಿ ಬುದ್ಧಿವಾದ ಹೇಳುತ್ತಾರೆ. ತಮ್ಮ ಹಠವನ್ನೇ ಸಾಧಿಸುವವರಿಗೆ ಏನೂ ಹೇಳಿ ಪ್ರಯೋಜನ ವಿಲ್ಲವೆಂದು ಸುಮ್ಮನಾಗುತ್ತಾರೆ.

### ೨. ತಪ್ಪುದಂಡ ಕೊಡಿಸುವುದು

ಅಪರಾಧವು ಆರ್ಥಿಕವಾಗಿ ನಷ್ಟವುಂಟು ಮಾಡುವುದಾಗಿದ್ದರೆ, ಆ ನಷ್ಟವನ್ನು ತುಂಬಿಕೊಡಲು ತಪ್ಪುದಂಡವನ್ನು ಹಾಕುವ ವಿಧಾನವು ಜನಪದರಲ್ಲಿದೆ. ಹೊಲ, ಮನೆಗೆ ಸಂಬಂಧಿಸಿದಂತೆ ವ್ಯಾಪಾರ, ವಹಿವಾಟುಗಳಲ್ಲಿ ಏರುಪೇರಾದಾಗ ತಪ್ಪಿತಸ್ಥರ ವಿರುದ್ಧ ತಪ್ಪುದಂಡ ಹೊರಿಸಲಾಗುವುದು. ಯಾವುದೇ ರೀತಿಯ ವ್ಯವಹಾರಕ್ಕೆ ಮಾತುಕೊಟ್ಟು, ಮಾತಿಗೆ ತಪ್ಪುವವರಿಗೂ ತಪ್ಪುದಂಡ ಹಾಕಲಾಗುತ್ತದೆ.

ವಿವಾಹ ಸಂಪ್ರದಾಯಗಳಲ್ಲಿ ಹೆಣ್ಣುಕೊಡಲು ಒಪ್ಪಿ, ಅಂದರೆ ವೀಳ್ಯಶಾಸ್ತ್ರವಾದ ಮೇಲೆ ಹೆಣ್ಣುಕೊಡಲು ನಿರಾಕರಿಸಿದರೂ ದೈವದವರಿಗೆ (ಪಂಚರಿಗೆ ದೈವದವರೆಂದೂ

ಕರೆಯಲಾಗುತ್ತದೆ) ತಪ್ಪುದಂಡ ಕೊಡಬೇಕಾಗುವುದು. ಮದುವೆಯಾದ ಹೆಣ್ಣು ಗಂಡನ ಜೊತೆಯಲ್ಲಿ ಬಾಳುವೆ ಮಾಡಲು ತಯಾರಿಲ್ಲದಾಗ, ಆಕೆಯ ತವರುಮನೆಯವರು ಲಗ್ನದ ಖರ್ಚನ್ನು ದಂಡವಾಗಿ ಗಂಡಿಗೆ ಕೊಡಬೇಕಾಗುತ್ತದೆ. ಇದೇ ಹಣದಿಂದ ಆತ ಮತ್ತೊಂದು ಮದುವೆ ಮಾಡಿಕೊಳ್ಳಬೇಕೆಂಬುದು ಹಿರಿಯರ ಅಭಿಪ್ರಾಯ.

### ೩. ಅವಮಾನ ಪಡಿಸುವುದು

ಮಾಡಬಾರದ ತಪ್ಪನ್ನು ಮಾಡಿದವರಿಗೆ ಪ್ರಾಯಶ್ಚಿತವಾಗಿ ಅವಮಾನಪಡಿಸುವುದು ಶಿಕ್ಷೆಯ ಒಂದು ವಿಧಾನವಾಗಿದೆ. ತಪ್ಪು ಮಾಡಿದವರು ತಲೆಎತ್ತಿಕೊಂಡು ಓಡಾಡ ಬಾರದೆಂಬುದು ಜನಪದರ ನಿಲುವು. ವಿಶೇಷವಾಗಿ ಕಳ್ಳತನ, ಹಾದರ, ವ್ಯಭಿಚಾರಗಳಂಥ ಅಪರಾಧಗಳನ್ನು ಜನಪದರು ಗಂಭೀರವಾಗಿಯೇ ಪರಿಗಣಿಸುತ್ತಾರೆ. ಕಳ್ಳತನ ಮಾಡಿ ಸಿಕ್ಕಿ ಬಿದ್ದವನು ಮತ್ತು ಅನೈತಿಕ ಸಂಬಂಧ ಹೊಂದಿದವರನ್ನು ಸಾಕ್ಷಿಸಮೇತ ಹಿಡಿದು ನಾಲ್ವರ ಸಮ್ಮುಖದಲ್ಲಿ ಅವಮಾನಗೊಳಿಸಲಾಗುತ್ತದೆ. ಸೆರೆಹಿಡಿದು ಗುಡಿಕಂಭಕ್ಕೆ ಕಟ್ಟಿಹಾಕುವುದು, ಇಲ್ಲವೇ ತಲೆಬೋಳಿಸಿ ಕತ್ತೆಯ ಮೇಲೆ ಕೂಡಿಸಿ ಊರತುಂಬ ಮೆರವಣಿಗೆ ಮಾಡಿಸುವುದು ಅವಮಾನದ ಹಿನ್ನೆಲೆಯಲ್ಲಿ ಬಳಸುವ ವಿಧಾನಗಳಾಗಿವೆ.

ಹಾದರದ ವಿಷಯದಲ್ಲಿ ಹೆಣ್ಣಿಗೆ ಕೊಡುವ ಶಿಕ್ಷೆಗಳು ಇನ್ನೂ ಘೋರವಾಗಿರುತ್ತವೆ. ಮದುವೆಯಾದ ಹೆಣ್ಣು ಪರಪುರುಷನ ಜೊತೆ ಸಂಗಮಾಡಿ ಸಿಕ್ಕಬಿದ್ದರೆ, 'ತಾಳಿ' ಹರಿದು ಕೊಂಡು ಮನೆಯಿಂದ ಹೊರಹಾಕುತ್ತಾರೆ. 'ಗಂಡಬಿಟ್ಟವಳು ಎಂಬ ಹಣೆಪಟ್ಟಿ ಹೊತ್ತು ಬಂದವಳನ್ನು ಗುಂಡುಕಲ್ಲು ಸಹ ಸೇರುವುದಿಲ್ಲ'ವೆಂಬ ಗಾದೆಯಂತೆ ತವರುಮನೆಯವರೂ ತಮ್ಮ ಹೆಸರಿಗೆ ಕಳಂಕವೆಂಬ ಭಾವನೆಯಿಂದ ಆದರಿಸುವುದಿಲ್ಲ. ಈತಹ ಅಪರಾಧ ಮಾಡಿದವರು ಕೊರಗಿ, ಕೊರಗಿ ದಿನಗಳನ್ನು ನೂಕುವಂತೆ ಮಾಡಲಾಗುತ್ತದೆ. ಪರಸ್ತ್ರೀ ಸಂಗ ಮಾಡುವ ಪುರುಷರಿಗೂ ರಿಯಾಯಿತಿ ಏನಿಲ್ಲ. ಆದರೆ ಅವರಿಗೆ ಕೊಡುವ ಶಿಕ್ಷೆಗಳು ಬೇರೆಯಾಗಿರುತ್ತವೆ. ಅಂತಹ ಅಪರಾಧ ಮಾಡಿ ಸಿಕ್ಕಿಬಿದ್ದವನನ್ನು ಹಿಡಿದು ಚೆನ್ನಾಗಿ ಥಳಿಸಿ, ನಾಲ್ವರ ಎದುರು ಅವಮಾನಪಡಿಸಲಾಗುತ್ತದೆ. ಗಂಡು ಹೆಣ್ಣು ಮದುವೆಯಾಗದ ವರಿದ್ದು ಇಂತಹ ತಪ್ಪು ಮಾಡಿದರೆ ತಪ್ಪುದಂಡ ವಿಧಿಸಿ ಇಬ್ಬರಿಗೂ ಲಗ್ನ ಮಾಡುವು ದುಂಟು. ಹಿಂದಿನಕಾಲದಲ್ಲಿ ಹಾದರ ಮಾಡಿದ ಹೆಣ್ಣುಮಕ್ಕಳಿಗೆ ಮೂಗು, ಮುಂದಲೆ ಕೊಯ್ದು ವಿಕಾರಗೊಳಿಸಲಾಗುತ್ತಿತ್ತು.

### ೪. ದೇಹದಂಡನೆ

ಕಳ್ಳತನ, ಹಾದರದಂತಹ ಅಪರಾಧ ಮಾಡಿ ಸಿಕ್ಕಿಬಿದ್ದವರನ್ನು ಕೂಡಲೇ ಹಿಡಿದು ಮನಬಂದಂತೆ ಥಳಿಸುವುದು ಜನಪದರಲ್ಲಿ ಸಾಮಾನ್ಯವಾಗಿದೆ. ಈ ವಿಷಯಗಳಲ್ಲಿ ವಿಚಾರಣೆಗೂ ಕಾಯದೆ ಅಪರಾಧಿಗಳನ್ನು ಶಿಕ್ಷಿಸುವ ಕ್ರಮ ಅವರಲ್ಲಿದೆ. ಜೀತಗಾರರಂತೂ ಸಣ್ಣಪುಟ್ಟ ಕಾರಣಗಳಿಗೂ ಧಣಿಯರಿಂದ ಹಲ್ಲೆಗೊಳಗಾಗಬೇಕಾಗುತ್ತದೆ. ಕುಟುಂಬ ಕಲಹಗಳಲ್ಲಿಯೂ ಈ ಬಗೆಯ ಹಿಂಸೆ ಪ್ರಯೋಗವಾಗುತ್ತದೆ. ಗಂಡ-ಹೆಂಡತಿ ಮಧ್ಯೆ

ಜಗಳವಾದಾಗ ಹೆಂಡತಿ ಎದುರು ವಾದಿಸಿದಳೆಂದರೆ ಮುಗಿಯಿತು, ಗಂಡ ರಾಜಾರೋಷವಾಗಿ ಅವಳ ಮೇಲೆ ದೈಹಿಕವಾಗಿ ಹಲ್ಲೆಮಾಡುತ್ತಾನೆ.

**೫. ಬಹಿಷ್ಕಾರ**

ಗುಂಪುಜಗಳಗಳಾದಾಗ ಮೇಲಿಂದ ಮೇಲೆ ತಪ್ಪುಮಾಡುವ ಕುಟುಂಬವನ್ನೋ ಅಥವಾ ಒಂದು ಜಾತಿಯನ್ನೋ ವಿಚಾರಣೆ ನಡೆಸಿ ಬಹಿಷ್ಕಾರ ಹಾಕುವುದು ಶಿಕ್ಷೆಯ ಮತ್ತೊಂದು ವಿಧಾನವಾಗಿದೆ. ಮಾಡಬಾರದ ಕೆಲಸವನ್ನು ಮಾಡಿ ಇಡೀ ಕೇರಿಗೆ ಅಥವಾ ಊರಿಗೆ ಅಪಮಾನ ಮಾಡಲಾಗಿದೆ ಎಂದು ಆರೋಪಿಸಿ ತಪ್ಪಿತಸ್ಥರಿಗೆ ಬಹಿಷ್ಕಾರ ಹಾಕಲಾಗುತ್ತದೆ. ಬಹಿಷ್ಕಾರವೆಂದರೆ ಕೇರಿಯ ಅಥವಾ ಊರಿನ ಒಟ್ಟು ಸಂಬಂಧದಿಂದಲೇ ನಿಷೇಧ ಹೇರಿ ಹೊರಗಿಡುವುದು. ಜಾತಿಸಂಬಂಧದಿಂದ ಉಂಟಾಗುವ ಸಂಘರ್ಷಗಳಲ್ಲಿ ಕೆಳಜಾತಿಯವರನ್ನು ಏಕಪಕ್ಷೀಯವಾಗಿ ಅಪರಾಧಿಗಳೆಂದು ತೀರ್ಮಾನಿಸಿ ಅವರನ್ನು ಊರಿಂದ ಹೊರಗಿಡುವ ಪರಿಪಾಠವಿದೆ. ಹಿಂದಿನಕಾಲದಿಂದ ನಡೆದುಕೊಂಡು ಬಂದಿರುವ ಪದ್ಧತಿಗಳನ್ನು ಕೆಳಜಾತಿಯವರು ಮೀರಬಾರದು. ಉದಾಹರಣೆಗೆ, ಸಾರ್ವಜನಿಕ ಬಾವಿ, ಹೋಟೆಲು, ದೇವಸ್ಥಾನಗಳಲ್ಲಿ ಅವರು ನೇರವಾಗಿ ಪ್ರವೇಶಿಸಕೂಡದು. ಒಂದುವೇಳೆ ಅವರು ಇದನ್ನು ಮೀರಿದರೆ ಇಂತಹ ಶಿಕ್ಷೆಗೆ ಒಳಗಾಗಬೇಕಾಗುತ್ತದೆ. ವಿವಾಹ ಸಂಬಂಧಗಳು ಆಯಾ ಜಾತಿಗಳಲ್ಲಿಯೇ ಏರ್ಪಡುವುದು ಹಿಂದಿನಿಂದಲೂ ಬಂದಿದೆ. ಅಕಸ್ಮಾತ್ ಅಂತರ್‌ಜಾತಿ ಸಂಬಂಧವಾದರೆ ಅದನ್ನು ಅಪರಾಧವಾಗಿಯೇ ಪರಿಗಣಿಸುತ್ತಾರೆ. ಅಂತಹ ತಪ್ಪು ಮಾಡಿದವರಿಗೆ ಜಾತಿಯಿಂದ ಹೊರಗಿಡುವ, ಯಾವುದೇ ಕಾರ್ಯಕ್ರಮಗಳಿಗೆ ಸೇರಿಸದಿರುವ ಕ್ರಮಗಳನ್ನು ಜರುಗಿಸಲಾಗುತ್ತದೆ.

## ನ್ಯಾಯತೀರ್ಮಾನದಲ್ಲಿ ಸಾಹಿತ್ಯದ ಪಾತ್ರ

ಜನಪದರು ನ್ಯಾಯತೀರ್ಮಾನದಲ್ಲಿ ಸಾಹಿತ್ಯದ ನೆರವನ್ನು ಪಡೆಯುವುದು ಕುತೂಹಲಕಾರಿಯಾಗಿದೆ. ತಾವು ಎತ್ತಿಕೊಂಡ ಅಪರಾಧದ ವಿಚಾರಣೆಯಲ್ಲಿ ಅಪರಾಧದ ಗಂಭೀರತೆಯನ್ನು ತಿಳಿಸಲು ಅಥವಾ ಅಂತಹ ತಪ್ಪನ್ನು ಮಾಡದಿರಲು ತಮ್ಮ ಅನುಭವ ದಿಂದ ಕಥೆ, ಘಟನೆ, ಸಂದರ್ಭ, ಗಾದೆ ಮತ್ತು ನುಡಿಗಟ್ಟುಗಳನ್ನು ಬಳಸುವು ದುಂಟು. ಹಿರಿಯರಾದವರು ಅವುಗಳನ್ನು ಸಂದರ್ಭಾನುಸಾರ ಬಳಸುವುದರಿಂದ ಕೇಳುಗರಿಗೆ ಅವರ ಬಗೆಗೆ ವಿಶ್ವಾಸವುಂಟಾಗುತ್ತದೆ. ಆಗ ಅಪರಾಧಿಯನ್ನು ತಿದ್ದುವುದು ಬಹಳ ಸುಲಭವಾಗುತ್ತದೆ. ನಿದರ್ಶನಕ್ಕೆ ಅಂತಹ ಕೆಲವು ಗಾದೆಗಳು ಮತ್ತು ನುಡಿಗಟ್ಟುಗಳನ್ನು ಕೊಟ್ಟಿದೆ :

**ಗಾದೆಗಳು**

೧. ಒಳ್ಳೆಯವರ ಸಂಗದಲ್ಲಿದ್ದರೆ ಕಳ್ಳ ಒಳ್ಳೆಯವನಾಗಬಹುದು. ಅದೇ ಒಳ್ಳೆಯವ ಕಳ್ಳನ ಜೊತೆಯಿದ್ದರೆ ಅವ ಶುದ್ಧ ಕಳ್ಳನಾಗುತ್ತಾನೆ

೨. ಉರಿದೋನಿಗೆ ಅರ್ಧ ಹೋಳಿಗಿ

೩. ಕಳ್ಳನಿಗೆ ಒಂದು ಪಿಳ್ಳೆನೆವ
೪. ಕಳ್ಳನ ಹೆಂಡತಿ ಎಂದಿದ್ದರೂ ಮುಂಡೆ
೫. ಕಳ್ಳ ಅಂತ ಅಂದ್ರೆ ಭುಜ ಮುಟ್ಟಿ ನೋಡಿಕೊಂಡ
೬. ಗಂಡಸು ಕೂತು ಕೆಟ್ಟ ಹೆಂಡತಿ ತಿರುಗಿ ಕೆಟ್ಟಳು
೭. ಕೈಯಾಗ ಕೈ ಹಾಕಿದರೂ ಹೆಬ್ಬೆಟ್ಟು ಹೊರಗೆ ಅಂತಾನೆ
೮. ಗಾಳಿ ಗುದ್ದಿ ಮೈ ನೋಯಿಸಿಕೊಂಡಂತೆ
೯. ಕಳ್ಳನ ಕೈಗೆ ಕೀಲಿ ಕೊಟ್ಟಂತೆ
೧೦. ಗಿಡವಾಗಿ ಬಾಗದ್ದು ಮರವಾಗಿ ಬಾಗೀತೆ ?
೧೧. ಒಂದೇ ಕೈಲಿ ಚಪ್ಪಾಳೆ ಆಗಂಗಿಲ್ಲ
೧೨. ಹಂದಿಯವರು ಹಾದರಮಾಡಿದರೆ ತಮಟೆಯವರು ದಂಡ ತೆತ್ತರು
೧೩. ಕೋಣಗಳೆರಡು ಗುದ್ದಾಡಿದರೆ ಮರಕ್ಕೆ ಪೆಟ್ಟು
೧೪. ಸೂಳೆಯಮಗ ಸುಬೇದಾರ ಹಾದರಗಿತ್ತಿಯ ಮಗ ಹವಲ್ದಾರ
೧೫. ಗಂಡ-ಹೆಂಡಿರ ಜಗಳ ಉಂಡುಮಲಗೋತನಕ
೧೬. ಎಳೆ ಸಿಕ್ಕರೆ ಹಚ್ಚಡ ನುಂಗುವವರು.

**ನುಡಿಗಟ್ಟುಗಳು**

ಕಳ್ಳಸಾಕ್ಷಿ, ಕಳ್ಳಹಾದಿ, ಕಳ್ಳಗಂಟು, ಕಳ್ಳಕಿಂಡಿ, ಮನೆ ಕಿತ್ತಿಯಿಡುವುದು, ಕೊಡ ತುಂಬೈತಿ, ಹಾಲುಭಾಷೆ, ಹಗಣಗಿತ್ತಿ ಇತ್ಯಾದಿ.

ಒಟ್ಟಾರೆ ಜನಪದರ ನ್ಯಾಯತೀರ್ಮಾನ ದೃಷ್ಟಿ ಕೆಲವಾರು ಅಂಶಗಳಿಂದ ಗಮನಾರ್ಹ ವಾಗಿದೆ. ಜನಪದರು ತಮ್ಮ ಸಮಸ್ಯೆಗಳನ್ನು ತಮ್ಮತಮ್ಮಲ್ಲಿಯೇ ಚರ್ಚಿಸಿ ಪರಿಹಾರ ಕಂಡುಕೊಳ್ಳುವುದು ನಿಜಕ್ಕೂ ಅನುಸರಣೀಯವಾದುದು. ವಿಚಾರಣೆಯಿಲ್ಲದೇ ತೆಗೆದುಕೊಳ್ಳುವ ತೀರ್ಮಾನಗಳು ಸರ್ವಾಧಿಕಾರಿ ಸ್ವರೂಪದ್ದಾಗಿವೆ. ಅಂತಹ ನಡೆಯನ್ನು ಜನಪದರು ಒಪ್ಪುವುದಿಲ್ಲ. ಸ್ಥಳೀಯ ಸಮಸ್ಯೆಗಳನ್ನು ಅರಿಯುವಲ್ಲಿ ಸ್ಥಳೀಯರ ಪರಸ್ಪರ ತಿಳುವಳಿಕೆ ಹೆಚ್ಚು ಸಹಾಯಕ. ಕೋರ್ಟು ಕಛೇರಿಗಳಿಗೆ ಹೋಲಿಸಿದರೆ ಇಲ್ಲಿ ಹಣದ ಪಾತ್ರ ತುಂಬಾ ಕಡಿಮೆ. ಈ ದೃಷ್ಟಿಯಿಂದ ಇದು ಹೆಚ್ಚು ಮಾನವೀಯವಾದುದು. ನ್ಯಾಯತೀರ್ಮಾನ ಮಾಡುವವರು ಒಂದುವೇಳೆ ಬಾಹ್ಯಪ್ರಭಾವಗಳಿಗೆ ಈಡಾಗಿ ಬಲಿಷ್ಠರ ಪರವಾಗಿ ನ್ಯಾಯ ಹೇಳಿದರೆ ಅದನ್ನು ಪ್ರಶ್ನಿಸುವ ಹಕ್ಕು ಜನಪದರಲ್ಲಿದೆ. 'ಅವರದ್ದೇನು ನ್ಯಾಯಬಿಡಿ. ಮುಖ ನೋಡಿ ಮೊಳಹಾಕುತ್ತಾರೆ' ಎಂಬ ಆಕ್ಷೇಪಣೆಯನ್ನು ಪಂಚರು ಎದುರಿಸಬೇಕಾಗು ತ್ತದೆ. ಆದಾಗ್ಯೂ ಕೆಲವು ವಿಷಯಗಳಲ್ಲಿ ಕಾನೂನನ್ನೇ ಕೈಗೆ ತೆಗೆದುಕೊಂಡು ದುರ್ಬಲರ ಮೇಲೆ ದೈಹಿಕವಾಗಿ ಹಲ್ಲೆಮಾಡುವುದು ಮಾತ್ರ ಅಮಾನುಷವಾದದ್ದು.

೫

# ಜನಪದರ ನ್ಯಾಯತೀರ್ಮಾನ ದೃಷ್ಟಿ : ಪಾಳೆಯಗಾರರ ಅವಧಿ

ಡಾ. ಜಿ. ಆರ್. ತಿಪ್ಪೇಸ್ವಾಮಿ

ಮನುಷ್ಯರ ಸಂಬಂಧಗಳು, ಕೌಟುಂಬಿಕ ಪದ್ಧತಿ ಮತ್ತು ಗ್ರಾಮಾಂತರ ಪ್ರದೇಶಗಳು ಸೌಹಾರ್ದಯುತವಾಗಿರಲೆಂದು, ಶಾಂತಿಯುತವಾಗಿರಲೆಂದು ಜನಪದರು ನ್ಯಾಯಪದ್ಧತಿಯನ್ನು ಚಲಾವಣೆಗೆ ತಂದರು. ಪ್ರಾಚೀನಕಾಲದಲ್ಲಿ ರಾಜ ಇಲ್ಲವೇ ಸಂಸ್ಥಾನಿಕರ ಪರವಾಗಿ ಗೌಡ ಅಥವಾ ಪಟೇಲನಾದವನು ಊರಿನ ಉಸಾಬರಿಯನ್ನು ನೋಡಿಕೊಳ್ಳುತ್ತಿದ್ದ. ರಾಜಕೀಯ ಕಟ್ಟುಪಾಡುಗಳಿಗಿಂತ ಸಾಮಾಜಿಕ ಕಟ್ಟುಪಾಡುಗಳೇ ಗ್ರಾಮೀಣ ಪ್ರದೇಶಗಳಿಗೆ ಮುಖ್ಯವಾದವು. ತೀರಾ ಹತ್ತಿರವೂ ಆದವು. ಕಟ್ಟುಪಾಡುಗಳನ್ನು ರೂಪಿಸುವವರು ಊರ ಪ್ರಮುಖರಾದುದರಿಂದ ಅವರ ಬಗೆಗೆ ಗೌರವವೂ ಹೆಚ್ಚಾಯಿತು. ದೈವದ ಸಮಾನತೆಯನ್ನು ಪಡೆದರು. ಅಂದಿನಿಂದ ನ್ಯಾಯತೀರ್ಮಾನದಲ್ಲಿ ಪಂಚರ ಕಲ್ಪನೆಯೂ ರೂಢಿಗೆ ಬಂದಿತು. ಪಂಚರ ನ್ಯಾಯತೀರ್ಮಾನದ ರೀತಿಗಳೂ ಸೊಗಸಾಗಿದ್ದವು:

ಬೇಟೆಗಾರರ ಗುಂಪೊಂದು ಕಾಡಿನಲ್ಲಿ ಬೇಟೆಯಾಡುತ್ತಿರುವಾಗ ಜಿಂಕೆಯೊಂದನ್ನು ಕಂಡು ಹೊಡೆಯುತ್ತಾರೆ. ಗಾಯಗೊಂಡ ಜಿಂಕೆ ಜೀವಭಯದಿಂದ ಓಡಿಹೋಗಿ ರೈತನೊಬ್ಬನ ಹೊಲದಲ್ಲಿ ಬಿದ್ದುಬಿಡುತ್ತದೆ. ಹೊಲದ ರೈತ 'ನನ್ನ ಜಿಂಕೆ, ನಾನು ಸಾಕಿದ್ದು ನನ್ನ ಹೊಲದಲ್ಲಿ ಬಿದ್ದಿದೆ, ಆದ್ದರಿಂದ ಇದು ನನ್ನದು' ಎಂದ. ಬೇಟೆಗಾರರ ಗುಂಪು 'ನಾವು ಬೇಟೆಯಾಡಿದ್ದು, ಅದು ಕಾಡಿನ ಜಿಂಕೆ, ಆದ್ದರಿಂದ ಅದು ನಮಗೆ ಸೇರಬೇಕಾದುದು' ಎಂದಿತು. ವಾದಕ್ಕೆ ವಾದ ಬೆಳೆದು ನ್ಯಾಯಕ್ಕಾಗಿ ಎರಡೂ ಬಣದವರು ಊರ ಮುಖ್ಯಸ್ಥರ ಮುಂದೆ ಹಾಜರಾದರು. ಇವರ ವಾದವನ್ನು ಆಲಿಸಿದ ಮುಖ್ಯಸ್ಥರು ಮೊದಲು ರೈತನನ್ನು ವಿಚಾರಿಸಿದರು. 'ಜಿಂಕೆ ನನ್ನದು ಎನ್ನುವೆಯಲ್ಲ ಅದು ಹೆಣ್ಣೋ ಗಂಡೋ ಎಂಬುದನ್ನು ಮೊದಲು ಹೇಳು' ಎಂದರು. ಆತ ತಕ್ಷಣ ಉತ್ತರಿಸಲಾಗಲಿಲ್ಲ. ಆಗ ಮುಖ್ಯಸ್ಥರು 'ಇದು ಸಾಕಿದ ಜಿಂಕೆಯಲ್ಲ ಕಾಡಿನ ಜಿಂಕೆ' ಎಂದು ಭಾವಿಸಿ ಇದು ಸೇರಬೇಕಾದದ್ದು ಬೇಟೆಗಾರರ

ಗುಂಪಿಗೆ ಎಂದು ತೀರ್ಪನ್ನು ಕೊಟ್ಟರು. ಹಳ್ಳಿಯ ಜಗಳಗಳಿಗೆಲ್ಲ ಅಲ್ಲಿಯ ಹಿರಿಯರೇ ತೀರ್ಪುಗಾರರು. ಹಳ್ಳಿಗಳಿಂದ ಕೂಡಿರುವ ಭಾರತ ದೇಶಾದ್ಯಂತ ಈ ಪದ್ಧತಿ ಚಾಲ್ತಿ ಇತ್ತು. ಇಂಥ ನ್ಯಾಯವಿತರಣಾ ಪದ್ಧತಿಯಲ್ಲಿ ಆಡಳಿತವರ್ಗ ಹಸ್ತಕ್ಷೇಪ ಮಾಡದಿರುವುದರಿಂದ ಬಹಳ ಕಾಲ ಮುಂದುವರಿಯಿತು.

ನ್ಯಾಯ ನೀಡುವವರು ಬುದ್ಧಿವಂತರು. ಜಗಳವನ್ನು ಬಗೆಹರಿಸುವಲ್ಲಿ ಚತುರತೆಯನ್ನು ತೋರುತ್ತಾರೆ. ಅವರ ಇಂಥಾ ಜಾಣ್ಮೆಯ ಬಗೆಗೆ ಜನಪದ ಲಾವಣಿಯಲ್ಲಿ ಉದಾಹರಣೆಗಳಿವೆ: "ಒಬ್ಬನಿಗೆ ಇಬ್ಬರು ಹೆಂಡಿರಿದ್ದರು. ಮೊದಲನೆಯವಳಿಗೆ ಮಕ್ಕಳಾಗಿರಲಿಲ್ಲ. ಉಡಕಿಯವಳಿಗೆ ಒಂದು ಮಗುವಾಗಿತ್ತು. ಉಡಕಿಯವಳ ಚಾರಿತ್ರ್ಯ ಒಳ್ಳೆಯದಿರಲಿಲ್ಲ. ಹಾದರಕ್ಕೆ ಕಳ್ಳತನದಿಂದ ಹೊರಟ ಇವಳಿಗೆ ಬಗಲಲ್ಲಿಯ ತನ್ನ ಕೂಸಿನ ಅಳು ಅಡ್ಡಿಯೆನಿಸಿತು. ಕೂಸನ್ನು ಕೊಂದುಹೋಗಿ ಪ್ರೇಮಿಯನ್ನು ಬೆರೆತಳು. ಹಿಂದಿರುಗಿ ಬಂದವಳು ಕೂಸನ್ನು ಕೊಂದವಳು ಮೊದಲನೆಯವಳು ಎಂದು ಅಪವಾದ ಹೊರಿಸಿದಳು. ಉಡಕಿಯವಳು ಗಲಾಟೆ ಮಾಡಿದಳು. ನ್ಯಾಯ ಹಿರಿಯವರಲ್ಲಿ ಹೋಯಿತು. ಉಡಕಿಯವಳ ಗಲಾಟೆ ಕಂಡ ಹಿರಿಯನೊಬ್ಬ ನಿಷ್ಕರ್ಷೆಗೆ ಉಪಾಯ ಹುಡುಕಿದನು. ತಾನು ಕೊಂದಿಲ್ಲ ಎಂದು ಹೇಳುವವಳು ಬತ್ತಲೆಯಾಗಿ ಕೊಡ ಹೊತ್ತು ನೀರು ತರಬೇಕು. ಉಡಕಿಯವಳು ನಾಚಿಕೆಪಟ್ಟು 'ಆಗಲಿ' ಎಂದಳು. ಮೊದಲನೆಯ ಹೆಂಡತಿ ತನ್ನನ್ನು ಕೊಂದರೂ ಚಿಂತೆಯಿಲ್ಲ, ಬತ್ತಲೆಯಾಗಿ ನೀರು ತರಲಾರೆ ಎಂದಳು. ಬತ್ತಲೆಯಾಗಿ ನೀರು ತರಲು ಸಿದ್ಧಳಾದವಳು ಯಾವ ಕೆಲಸಕ್ಕೂ ಹೇಸುವುದಿಲ್ಲ, ಕೊಲೆಯನ್ನು ಉಡಕಿಯವಳೇ ಮಾಡಿದ್ದಾಳೆಂದು ನಿಶ್ಚಯಿಸಲಾಯಿತು. ಇಂಥ ಅನೇಕ ಘಟನೆಗಳು ಹಿರಿಯರ ಅನುಭವ, ಬುದ್ಧಿಶಕ್ತಿಗಳನ್ನು ಎತ್ತಿಹಿಡಿಯುತ್ತವೆ. ಹಿಂದೆಲ್ಲ ಇಂಥವರು ಇದ್ದರು."[7]

ಕೋರ್ಟು, ಕಚೇರಿಗಳು ಸ್ಥಾಪನೆಯಾಗುವ ಮುನ್ನ ಆಯಾ ಊರುಗಳ ಮಧ್ಯೆ ಇರುವ ಚಾವಡಿಕಟ್ಟೆಗಳ ಮೇಲೆ ನ್ಯಾಯತೀರ್ಮಾನಿಸುವ ಪರಿಪಾಠವಿತ್ತು. ಕೋರ್ಟಿನ ಮೆಟ್ಟಿಲು ಹತ್ತುವುದು ಅವಮಾನವೆಂದು ಭಾವಿಸಿರುವ ಸಮುದಾಯಗಳಲ್ಲಿ ಚಾವಡಿಕಟ್ಟೆಗಳಿಗೆ ಈಗಲೂ ವಿರಾಮವಿಲ್ಲ. ಇಂಥ ಕಡೆಗಳಲ್ಲಿ ತಪ್ಪಿತಸ್ಥರಾದವರನ್ನು ಎಳೆದುತಂದು ಕಟ್ಟೆಮನೆ, ಗುರುಮನೆ, ಅರಮನೆಗಳಿಗೆ ತಲೆಬಾಗುವೆಯೋ ಇಲ್ಲವೋ ಎಂದು ಕೇಳುತ್ತಿದ್ದರು. ಅಪರಾಧಿ ಅದಕ್ಕೆ ಮರುಮಾತಾಡದೆ ಅವರು ವಿಧಿಸಿದ ದಂಡವನ್ನು ಕಟ್ಟಿಕೊಟ್ಟರೇ ಕೂಡಲೆ ಆಪಾದನೆಯ ಹೊರೆಯಿಂದ ಮುಕ್ತನನ್ನಾಗಿ ಮಾಡುತ್ತಿದ್ದರು. ನ್ಯಾಯವಾದಿಗಳ ಬಲವಂತವಿಲ್ಲದೆ ಯಾರು ತಮ್ಮ ತಪ್ಪನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾರೋ ಅಂಥವರು ವಿಶೇಷ ರಿಯಾಯಿತಿಗಳನ್ನು ಪಡೆಯುತ್ತಿದ್ದರು. ನ್ಯಾಯಸ್ಥರು ಬಲವಂತಪಡಿಸಿದಾಗಲೂ ತಾನು ನಿರಪರಾಧಿ ಎಂತಲೇ ವಾದಿಸುತ್ತಿದ್ದರೆ 'ಈತ ಊರಿನ ಪಂಚಾಯಿತಿಯನ್ನ ಮೀರಿದ್ದಾನೆ. ಈ ಊರಲ್ಲಿ ಇವನಿಗೆ ಬೆಂಕಿ, ನೀರನ್ನು ಯಾರೂ ಕೊಡಕೂಡದು, ಯಾರಾದರೂ ಕೊಟ್ಟರೆ ಅವನಿಗೆ ವಿಧಿಸಬೇಕಾಗಿರುವ

ಶಿಕ್ಷೆಯನ್ನು ಸಹಾಯ ಮಾಡಿದವರಿಗೆ ವಿಧಿಸಲಾಗುತ್ತದೆ' ಎಂದು ಡಂಗೂರ ಸಾರುತ್ತಿದ್ದರು. ಇದು ಅನಕ್ಷರಸ್ಥ ಸಮಾಜದಲ್ಲಿ ಸಾಮಾನ್ಯವಾಗಿ ವಿಧಿಸುತ್ತಿದ್ದ ಆರಂಭದ ಶಿಕ್ಷೆಯಾಗಿತ್ತು. ಮೊದಲೇ ವಿಧಿಸಿದ ದಂಡವನ್ನು ಅಪರಾಧಿ ನಿಗದಿಪಡಿಸಿದ ವೇಳೆಗೆ ಕೊಡದಿದ್ದರೆ ಅದರ ಮೇಲೆ ಹೆಚ್ಚಿನ ದಂಡವನ್ನು ವಿಧಿಸುತ್ತಿದ್ದರು. ಇಂಥ ದಂಡದೋಷಗಳಿಂದ ಬಂದಂಥ ಹಣವನ್ನು ಸಾರ್ವಜನಿಕ ಸ್ವತ್ತುಗಳಿಗೆ ವಿನಿಯೋಗಿಸುತ್ತಿದ್ದರು. ಈ ನಮೂನೆಯ ದಂಡ ದೋಷಗಳಿಲ್ಲದೆ ಯಾರಾದರೂ ಮದುವೆಯಾದರೆ ಅವರು ಬಡವರಾಗಲಿ, ಸಾಹುಕಾರ ರಾಗಿರಲಿ ಆ ಸಂದರ್ಭದಲ್ಲಿ ಊರಿನವರಿಗೆಲ್ಲ ಒಪ್ಪೊತ್ತಿನ ಊಟ ಹಾಕಿಸುವುದರ ಮೂಲಕ ಮುಖಂಡರ ಮನಸ್ಸನ್ನು ಒಲಿಸಬೇಕಿತ್ತು. ಊಟಹಾಕುವ ಸಾಮರ್ಥ್ಯವಿಲ್ಲದಿದ್ದರೆ ಪಂಚಾಯಿತಿಯವರು ವಿಧಿಸಿದ ಹಣವನ್ನು ತೆರಬೇಕಿತ್ತು; ಕೊಡದಿದ್ದರೆ ಜಾತಿಯಿಂದ ಹೊರಗಟ್ಟುತ್ತಿದ್ದರು. ಈ ರೀತಿ ಬಂದ ಹಣವೂ ಧರ್ಮದ ಹೆಸರಿನಲ್ಲಿ ಸೇರುತ್ತಿತ್ತು!

ರಾಜ ಪ್ರತ್ಯಕ್ಷ ದೇವರು ಎಂದು ನಂಬಿದ್ದ ಕಾಲವೂ ಇತ್ತು. ದೇವರ ಆದೇಶದಂತೆ ಆತ ನ್ಯಾಯ ನೀಡುತ್ತಾನೆಂಬ ಕಲ್ಪನೆಯೂ ಇತ್ತು. ಆತನ ಆಸ್ಥಾನವೂ ಈ ಕಾರಣದಿಂದಾಗಿ ನ್ಯಾಯಪೀಠವೆನಿಸಿತ್ತು. ವಾಹನ ಸೌಕರ್ಯವಿಲ್ಲದ ಸಂದರ್ಭದಲ್ಲಿ ಜನರು, ಸಣ್ಣಪುಟ್ಟ ಜಗಳಗಳ ನ್ಯಾಯಕ್ಕೆ ಅವರ ಬಳಿಗೇ ಹೋಗುವುದು ಕಷ್ಟದ ಕೆಲಸವಾಗಿತ್ತು. ಆಗ ಅವರ ಪರಿಸರದಲ್ಲಿಯೇ ಇದ್ದ ಸಂಗ್ರಹಣ, ದ್ರೋಣಾಮುಖ, ಸ್ಥಾನೀಯ ಎಂಬ ವಿವಿಧ ರೀತಿಯ ಅಧಿಕಾರದ ಬಲವನ್ನು ಹೊಂದಿರುವ ತೀರ್ಪುನೀಡುವ ಕೇಂದ್ರಗಳಿದ್ದವು. 'ಗ್ರಾಮಸಭೆ', 'ಮಹಾಜನ ಸಭೆ'ಗಳೂ ತೀರ್ಪುನೀಡುವ ಹೊಣೆಯನ್ನು ಹೊತ್ತಿದ್ದವು. "ಕುಲವು ಒಳನಾಡಿನ ಪ್ರಥಮ ನ್ಯಾಯಸ್ಥಾನವಾಗಿತ್ತು. ಕುಲ, ಗ್ರಾಮಸಭೆ, ಮಹಾಜನ-ಇವುಗಳ ತೀರ್ಮಾನ ಪಕ್ಷಕಾರರಿಗೆ ಸಮಾಧಾನಕಾರವೆನಿಸದಿದ್ದಾಗ ಅಲ್ಲಲ್ಲಿ ನಿಯುಕ್ತವಾಗಿದ್ದ 'ಶ್ರೇಣಿ'ಗಳು ಅಂದರೆ ವಾಣಿಜ್ಯಸಂಸ್ಥೆಗಳು, 'ಪೂಗ'ಗಳು ಅಂದರೆ ವೃತ್ತಿಸಂಸ್ಥೆಗಳು ನ್ಯಾಯತೀರ್ಮಾನದ ಮಧ್ಯಘಟ್ಟಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ರಾಜಾಸ್ಥಾನವೇ ಮೇಲು ಮನವಿಯ ನ್ಯಾಯಸ್ಥಾನವಾಗಿರುತ್ತಿತ್ತು."[೨] ಹಿಂದೆ ಆಡಳಿತ ಪದ್ಧತಿಯಲ್ಲಿ ಸುಳ್ಳುಸಾಕ್ಷಿಗಳನ್ನು ಹೇಳುವವರು ಶಿಕ್ಷೆಗೆ ಗುರಿಯಾಗುತ್ತಿದ್ದರು. ಇಂಥವರು ಸ್ನಾನಮಾಡಿ ದೇವರು ಇರುವನೆಂದು ನಂಬಿರುವ ದಿಕ್ಕುಗಳಿಗೆ ಅಥವಾ ತೀರ್ಥಕ್ಷೇತ್ರಗಳಿಗೆ ಎದುರಾಗಿ ನಿಂತು ಸಾಕ್ಷಿ ಹೇಳಬೇಕಾಗಿತ್ತು. ಅದಕ್ಕೆ ಮುಂಚೆ ನಿಜವನ್ನೆ ಹೇಳಬೇಕೆಂದೂ ಇಲ್ಲದಿದ್ದರೆ ಕಠಿಣಶಿಕ್ಷೆಗೆ ಗುರಿಯಾಗಬೇಕಾಗುತ್ತದೆಂದೂ ಅವರಿಗೆ ಹೇಳಲಾಗುತ್ತಿತ್ತು. ಸಾಕ್ಷಿ ಹೇಳುವವರು ನಿಜವನ್ನೇ ಹೇಳುತ್ತಾರೆಂಬ ನಂಬಿಕೆ ನಮ್ಮಲ್ಲಿರುವುದರಿಂದ ಅವರನ್ನೂ ಪೂಜ್ಯಭಾವನೆಯಿಂದ ಸಹನೆಯಿಂದಲೇ ಕಾಣುತ್ತಿದ್ದರು. ತಮ್ಮ ಕಡೆ ಸಾಕ್ಷಿ ಹೇಳುವವರಲ್ಲಿ ತಮ್ಮ ಜಾತಿಯವರನ್ನೇ ಆರಿಸುತ್ತಿದ್ದರು. ಸೂಕ್ತ ವ್ಯಕ್ತಿಗಳು ಅವರ ಜಾತಿಯಲ್ಲಿ ದೊರಕದಿದ್ದಾಗ ಹತ್ತಿರದಲ್ಲಿಯೇ ಇರುವ ಅನ್ಯಜಾತಿಯವರನ್ನು ಸಾಕ್ಷಿಗಾರರನ್ನಾಗಿ ಆಯ್ಕೆಮಾಡಿಕೊಳ್ಳುತ್ತಿದ್ದರು. ಕೊಲೆ, ಕಳವು, ವ್ಯಭಿಚಾರ, ನಿಂದೆ ಮೊದಲಾದ ಅಪರಾಧವೆಸಗಿದವರು ಸಾಕ್ಷಿದಾರರಾಗಲು

ಅನರ್ಹರಾಗಿದ್ದರು. ಅದೇ ರೀತಿಯಾಗಿ, ಮಾರ್ಗಗಳ್ಳರು, ಮಾಯಾವಿಗಳು, ಮಾಂತ್ರಿಕರು, ಐಂದ್ರಜಾಲಿಕರು ಮತ್ತು ಸದಾ ವ್ಯಾಜ್ಯನಿರತರು ಅಥವಾ ದ್ಯೂತಾಸಕ್ತರು (ಜೂಜಾಡುವವರು) ಅನರ್ಹರಾಗಿದ್ದರು. ದಾಸ್ಯವೃತ್ತಿಯಲ್ಲಿರುವ ಸ್ತ್ರೀಪುರುಷರು, ೧೫ಕ್ಕೆ ಮೀರದ ಅಲ್ಪ ವಯಸ್ಕರು, ೮೦ರ ಗಡಿದಾಟಿದ ವಯೋವೃದ್ಧರು ಹಾಗೂ ಕುಷ್ಠಾದಿರೋಗ ಸಂಸರ್ಗಿಗಳು ಸಾಕ್ಷಿದಾರರಾಗಲು ಅನರ್ಹರಾಗಿದ್ದರು. ಘಟನೆಯನ್ನು ಸಾಕ್ಷಾತ್ತಾಗಿ ನೋಡಿದವನು, ತನ್ನ ಕಿವಿಯಿಂದಲೇ ಕೇಳಿದವನು, ತನ್ನ ಕೈ, ಮೈ ಸ್ಪರ್ಶದಿಂದ ಶೀತೋಷ್ಣಾದಿಗಳನ್ನು ಅರಿತವನು, ತನ್ನ ಮೂಗಿನಿಂದಲೇ ಹಿತಾಹಿತ ವಾಸನೆಯನ್ನು ಅನುಭವಿಸಿದವನು, ತನ್ನ ನಾಲಿಗೆಯಿಂಗಲೇ ಪಥ್ಯಾಪಥ್ಯರುಚಿಯನ್ನು (ಆಸ್ಪತ್ರೆಗಳಲ್ಲಿ ನಿವಾಸಿ ವೈದ್ಯಾಧಿಕಾರಿಯು ನೋಡುವಂತೆ) ನೋಡಿದವನು, ಸಾಕ್ಷ್ಯಕೊಡಲು ಪರಮ ಸಮರ್ಥನಾಗಿದ್ದನು. ಇದನ್ನೆ ಪ್ರತ್ಯಕ್ಷಪ್ರಮಾಣ ಎಂದು ಕರೆಯುತ್ತಿದ್ದರು. ಕುರುಡ, ಕಿವುಡ, ಕಣ್ಣಿಗೆ ಪೊರೆಬಂದವನು, ಮದ್ಯಪಾನಾದಿಗಳಿಂದ ಮತ್ತನಾದವನು ಕೊಡುವ ಸಾಕ್ಷ್ಯಕ್ಕೆ ಮಾನ್ಯತೆಯಿರಲಿಲ್ಲ. ಜ್ಞಾನಕಾರ್ಯಕ್ಕೆ ಸಾಧಕವಾದ ಇಂದ್ರಿಯವು ದುರ್ಬಲವಾಗಿದ್ದರೆ ಜ್ಞಾನವು ಯಾಥಾರ್ಥವಾಗಿರುವುದಿಲ್ಲವೆಂಬುದೇ ಇದಕ್ಕೆ ಕಾರಣವಾಗಿತ್ತು. ಅಂತೆಯೇ ನಿರ್ದುಷ್ಟೇಂದ್ರಿಯ ಸನ್ನಿಕರ್ಷಜನ್ಯ ಜ್ಞಾನಮೇವ ಯತಾರ್ಥ ಪ್ರಮಾಣ್ಯಂ ಎಂಬುದು ತರ್ಕಬದ್ಧ (Truth) ತತ್ಸಾಧಕವು ಅನುಪ್ರಮಾಣವೆಂದೂ (Circumstantial evidence) ಪ್ರಮಾಣ ಲಕ್ಷಣಕಾರರು ನಿರೂಪಿಸಿರುವುದನ್ನು ನ್ಯಾಯಾಧೀಶರು ಸದಾ ಗಮನದಲ್ಲಿಡುತ್ತಿದ್ದರು."[೩]

ಹಿಂದಿನಕಾಲದಲ್ಲಿ ವ್ಯವಸ್ಥಿತವಾದ ನ್ಯಾಯವಿತರಣ ಪದ್ಧತಿ ಇದ್ದರೂ ಅದು ಜಾತಿ ಶ್ರೇಣಿ ಆಧಾರಿತ ಸಾಂಪ್ರದಾಯಿಕ ಮತ್ತು ಧಾರ್ಮಿಕ ಕಟ್ಟುಪಾಡುಗಳ ಆಧಾರದ ಮೇಲೆ ನ್ಯಾಯವಿತರಣೆ ಜಾರಿಯಲ್ಲಿತ್ತು. ರಾಜರು ತಮ್ಮ ಪ್ರಜೆಗಳಿಗೆ ವಿಧಿಸುತ್ತಿದ್ದ ಪ್ರಾಚೀನ ಭಾರತದ ಒಂದು ಶಿಕ್ಷಾವಿಧಾನವನ್ನು ಅಗ್ನಿಪುರಾಣ ಒದಗಿಸುತ್ತದೆ. ಅವುಗಳಲ್ಲಿ ಬಹುಪಾಲು ಕಠಿಣಶಿಕ್ಷೆಗಳು ಶೂದ್ರರಿಗೆ ಅಂದರೆ ದುಡಿಯುವವರಿಗೆ ಮಾತ್ರ. ಉಳಿದ ಜಾತಿಗಳಿಗೆ ಹಗುರವಾದ ಶಿಕ್ಷೆಗಳಿರುವುದನ್ನು ಗಮನಿಸಬಹುದು. ಪ್ರಾಚೀನ ಭಾರತದ ಅಪರಾಧಸಂಹಿತೆಯ ಪ್ರಕಾರ ಪ್ರಥಮ ಸಾಹಸದಂಡ (ಒಬ್ಬರಿಗೆ ೨೫೦ ಪಣಗಳವರೆಗೆ ದಂಡ ವಿಧಿಸುವುದು). ಇದು ಮೊದಲನೇ ದರ್ಜೆಯ ಶಿಕ್ಷೆ. ಮಧ್ಯಮವರ್ಗದ ಶಿಕ್ಷೆ, ಉತ್ತಮ ಸಾಹಸದಂಡ (ಒಂದುಸಾವಿರ ಪಣಗಳವರೆಗಿನ ದಂಡ). ಇದು ಮೇಲ್ದರ್ಜೆಯ ಶಿಕ್ಷೆ-ಎಂಬ ಮೂರು ವಿಭಾಗಗಳನ್ನು ಕಾಣುತ್ತೇವೆ. ಸುಳ್ಳು ಹೇಳಿಕೆಗಳನ್ನು ನೀಡುವ ಬ್ರಾಹ್ಮಣೇತರರನ್ನು ಕಠಿಣಶಿಕ್ಷೆಗೆ ಗುರಿಪಡಿಸುತ್ತಿದ್ದರು. ಒಂದುವೇಳೆ ಬ್ರಾಹ್ಮಣನೇ ಸುಳ್ಳುಹೇಳಿದರೂ ಆತನನ್ನು ಸಮಾಜದಿಂದ ದೂರವಿಡುತ್ತಿದ್ದರು. ತನ್ನಲ್ಲಿರುವ ರೋಗ ಗಳನ್ನು ಮರೆಮಾಚಿ ಒಬ್ಬ ಹೆಂಗಸಿನೊಡನೆ ಮದುವೆಯಾದರೆ ಆ ಹೆಣ್ಣನ್ನು ಅವಿವಾಹಿತ ಳೆಂದು ಪರಿಗಣಿಸುವುದರ ಜೊತೆಗೆ ಆಕೆಯನ್ನು ಮದುವೆಯಾದ ಗಂಡಸಿಗೆ ಇನ್ನೂರು

ಪಣಗಳ ದಂಡವನ್ನು ವಿಧಿಸಲಾಗುತ್ತಿತ್ತು. ಒಂದು ಜಾತಿಯವರು ಮತ್ತೊಂದು ಜಾತಿಯವರನ್ನು ಅವಹೇಳನ ಮಾಡಿದರೆ ಅದಕ್ಕೆ ಬೇರೆ ಶಿಕ್ಷೆಗಳಿದ್ದವು. ಬ್ರಾಹ್ಮಣನನ್ನು ಕ್ಷತ್ರಿಯ ಅವಹೇಳನ ಮಾಡಿದರೆ ಇಪ್ಪತ್ತೈದು ಪಣಗಳ ದಂಡವನ್ನು ಕೊಡಬೇಕಿತ್ತು. ಬ್ರಾಹ್ಮಣ ಅವಹೇಳನ ಮಾಡಿದರೆ ಐವತ್ತು ಪಣಗಳ ದಂಡ ಕೊಡಬೇಕಿತ್ತು. ಶೂದ್ರನನ್ನು ಬ್ರಾಹ್ಮಣ ಅವಹೇಳನ ಮಾಡಿದರೆ ಹನ್ನೆರಡು ಪಣಗಳ ದಂಡ ಕೊಡಬೇಕಿತ್ತು. ಬ್ರಾಹ್ಮಣನಿಗೆ ಶೂದ್ರನೊಬ್ಬ ಬುದ್ಧಿವಾದ ಹೇಳಲು ಹೋದರೆ ಅಂಥವನಿಗೆ ತೋಚಿದ ಶಿಕ್ಷೆ ವಿಧಿಸಲಾಗುತ್ತಿತ್ತು. ಇವೆಲ್ಲಕ್ಕಿಂತ ಮಿಗಿಲಾಗಿ ಕ್ಷತ್ರಿಯನನ್ನು ಶೂದ್ರನೇನಾದರೂ ಅವಹೇಳನ ಮಾಡಿದರೆ ಶೂದ್ರನ ನಾಲಿಗೆಯನ್ನೇ ಕತ್ತರಿಸಲಾಗುತ್ತಿತ್ತು. ಬ್ರಾಹ್ಮಣನ ಮೇಲೆ ಶೂದ್ರನೊಬ್ಬ ಉಗುಳಿದರೆ ಆತನ ಎರಡೂ ತುಟಿಗಳನ್ನು ಕತ್ತರಿಸುತ್ತಿದ್ದರು. ಬ್ರಾಹ್ಮಣರ ಮೇಲೆ ಯಾರಾದರೂ ವಿಸರ್ಜನೆ ಮಾಡಿದರೆ ಅಂಥವರ ಶಿಶ್ನವನ್ನೇ ಕತ್ತರಿಸಲಾಗುತ್ತಿತ್ತು. ಸವರ್ಣೀಯರು ಕುಳಿತುಕೊಳ್ಳುತ್ತಿದ್ದ ಸ್ಥಳಗಳಲ್ಲಿ ಶೂದ್ರರು ಕುಳಿತುಕೊಂಡರೆ ಆತನ ಪೃಷ್ಠಗಳನ್ನೇ ಕತ್ತರಿಸಲಾಗುತ್ತಿತ್ತು. ಬ್ರಾಹ್ಮಣ ಮೊದಲಾದ ಮೇಲ್ಜಾತಿಯವರು ಬ್ರಾಹ್ಮಣೇತರರಿಂದ ಅವಮಾನಕ್ಕೆ ಗುರಿಯಾದ ಸಂದರ್ಭದಲ್ಲಿ ನ್ಯಾಯಸ್ಥರ ಮೂಲಕ ಅಂಥವರಿಗೆ ಕಠಿಣಶಿಕ್ಷೆಯನ್ನು ವಿಧಿಸುತ್ತಿದ್ದರು ಎಂಬುದಕ್ಕೆ ಉದಾಹರಣೆಗಳಿವೆ.

ಕ್ಷತ್ರಿಯರಿಗೆ ಬ್ರಾಹ್ಮಣರು ವೇದಗಳನ್ನು ಹೇಳಿಕೊಡುವ ಪದ್ಧತಿ ಸುಮಾರು ಹತ್ತನೆಯ ಶತಮಾನದಲ್ಲಿ ಇದ್ದಿತಾದರೂ ವೈಶ್ಯ ಮತ್ತು ಶೂದ್ರರು ವೇದಗಳನ್ನು ಬಾಯಿಂದ ಹೇಳುವುದಾಗಲೀ ಕಿವಿಯಿಂದ ಕೇಳುವುದಾಗಲೀ ನಿಷಿದ್ಧವಾಗಿತ್ತು. ಇಂಥ ಪ್ರಸಂಗಗಳು ಬ್ರಾಹ್ಮಣರ ಗಮನಕ್ಕೆ ಬಂದಾಗ ಅಂಥವರನ್ನು ನ್ಯಾಯವಾದಿಗಳ ಮುಂದೆ ಎಳೆತಂದು ಅವರ ನಾಲಿಗೆಯನ್ನು ಕೊಯ್ಯುತ್ತಿದ್ದರೆಂಬ ಶಿಕ್ಷಾವಿಧಾನ, ಹತ್ತನೆಯ ಶತಮಾನದಲ್ಲಿ ಅರಬ್ಬೀದೇಶದಿಂದ ಭಾರತಕ್ಕೆ ಬಂದ ಅಲ್ಬೆರೂನಿಯ ಪ್ರವಾಸ ಕಥನದಿಂದ ತಿಳಿಯುತ್ತದೆ. ಇಂಥ ದಂಡನೆಗಳನ್ನು ವಿಧಿಸುವುದರ ಮೂಲಕವೂ ಕೆಳವರ್ಗದವರಿಗಿಂತ ಮಿಗಿಲಾದ ಸವಲತ್ತುಗಳನ್ನು ಮೇಲ್ವರ್ಗದವರು ತಮ್ಮ ತಮ್ಮ ಗಡಿಗಳಿಗೆ ಸಂಬಂಧಿಸಿದಂತೆ ಕಟ್ಟಳೆಗಳನ್ನು ಬೇರಾವ ಜಾತಿಯವರೇ ವಿರೋಧಿಸಿದರೂ ಅಂಥವರನ್ನು ದಂಡಿಸಿ ತಮ್ಮ ಆಶ್ರಮಧರ್ಮಕ್ಕೆ ಸೇರಿಸಿಕೊಳ್ಳುವ ವಿಚಾರಗಳು ಧರ್ಮಶಾಸ್ತ್ರದಲ್ಲಿವೆ.

ಎಣ್ಣೆಯಲ್ಲಿ ಹಾಕಿ ಕುದಿಸುವುದು, ಕುದಿಯುತ್ತಿರುವ ಎಣ್ಣೆಯಲ್ಲಿರುವ ಚಿನ್ನದ ಚೂರನ್ನು ಹೊರತೆಗೆಸುವುದು, ಕಾದ ಕಬ್ಬಿಣವನ್ನು ಹಿಡಿದು ಏಳುಹೆಜ್ಜೆ ನಡೆಸುವುದು, ತಕ್ಕಡಿಯಲ್ಲಿ ತೂಗುವುದು, ದೇವರತೀರ್ಥ ಕುಡಿಸುವುದು, ಸುಡುವುದು, ಚಕ್ರಕ್ಕೆ ತಲೆಕೊಡುವುದು, ನೀರಿನಲ್ಲಿ ಮುಳುಗಿಸುವುದು ಮೊದಲಾದ ದಂಡನೆಗಳು ಒಂದು ಕಾಲದಲ್ಲಿ ರೂಢಿಯಲ್ಲಿದ್ದಂಥವು. ಈ ರೀತಿಯ ಕಟ್ಟುನಿಟ್ಟಾದ ಶಿಕ್ಷಾಪದ್ಧತಿ ಮಧ್ಯಯುಗದ ಯುರೋಪಿನಲ್ಲಿ ರೂಢಿಯಲ್ಲಿತ್ತಾದರೂ ಇಂಗ್ಲೆಂಡಿನಂಥ ರಾಷ್ಟ್ರಗಳಲ್ಲಿ ಮರಣದಂಡನೆಯ

ಕ್ರೂರವಿಧಾನಗಳನ್ನು ಬೇರೆ ರೀತಿಯಲ್ಲಿ ಅಳವಡಿಸಲಾಗಿತ್ತು. ದೇಶದ್ರೋಹದ ಆರೋಪಿಗಳನ್ನು ನೇಣುಹಾಕುವುದು, ಬದುಕಿರುವಾಗಲೇ ಅಪರಾಧಿಗಳ ಎದೆ ಸೀಳಿ ಹಾಕುವುದು, ಕರುಳನ್ನು ಕಿತ್ತು ಹೆಬ್ಬಾಗಿಲುಗಳಿಗೆ ಹಾರಹಾಕುವುದು, ತಲೆಕಡಿಯುವುದು, ಶರೀರದ ಭಾಗಗಳನ್ನು ತುಂಡರಿಸಿ ಹಾಕುವುದು, ಯುದ್ಧದಲ್ಲಿ ಸೆರೆಸಿಕ್ಕಿದವರ ಮೂಗು ಕೊಯ್ಯುವುದು-ಇತ್ಯಾದಿ.

ಇಂಥ ಕ್ರೂರ ಶಿಕ್ಷಾವಿಧಾನಗಳು ನಾಗರಿಕ ಪ್ರಪಂಚದಲ್ಲಿ ಅತಿವಿರಳವಾದರೂ ಜನಪದ ಪುರಾಣಗಳಲ್ಲಿ ಮೂಗು ಕೊಯ್ಯುವುದರ ಪ್ರಸ್ತಾಪವಿದೆ. ಕಾಟಕೊಡುವವರಿಗೆ ತ್ರೇತಾಯುಗದಲ್ಲಿ ಮೂಗನ್ನು ಕತ್ತರಿಸುವ ಶಿಕ್ಷೆ ಕೊಡುತ್ತಿದ್ದರೆಂಬುದಕ್ಕೆ ಲಕ್ಷ್ಮಣ-ಶೂರ್ಪನಖಿಯ ಪ್ರಸಂಗ ಒಂದು ಉದಾಹರಣೆ. ವನವಾಸದ ಸಂದರ್ಭದಲ್ಲಿ ತನ್ನನ್ನು ಮದುವೆಯಾಗಬೇಕೆಂದು ಶೂರ್ಪನಖಿ ರಾಮನನ್ನು ಒತ್ತಾಯಿಸಿದಳು. 'ಈಗಾಗಲೇ ನನಗೆ ಒಬ್ಬ ಹೆಂಡತಿ ಇದ್ದಾಳೆ. ಆದ್ದರಿಂದ ನೀನು ನನ್ನ ತಮ್ಮನಾದ ಲಕ್ಷ್ಮಣನಲ್ಲಿಗೆ ಹೋಗು' ಎಂದು ಆಕೆಯನ್ನು ಕಳಿಸಿಕೊಟ್ಟನು. ಆಕೆ ಬಂದ ಕಾರಣವನ್ನು ತಿಳಿದ ಲಕ್ಷ್ಮಣ, 'ಅದು ನನ್ನಿಂದಾಗದ ಕೆಲಸ' ಎಂದು ಹೇಳಿ ಮತ್ತೆ ರಾಮನ ಬಳಿಗೆ ಅಟ್ಟಿದನು. ಆಕೆಯನ್ನು ಸಹಿಸಲಾರದ ರಾಮ, ಆಕೆಯ ಬೆನ್ನ ಮೇಲೆ 'ಲಕ್ಷ್ಮಣ ಈಕೆಯ ಮೂಗನ್ನು ಕತ್ತರಿಸಿ ಕಳಿಸು' ಎಂದು ಬರೆದು, 'ಇದನ್ನು ಓದಿಕೊಂಡು ಲಕ್ಷ್ಮಣ ನಿನ್ನನ್ನು ಮದುವೆಯಾಗುತ್ತಾನೆ. ಆತನ ಬಳಿಗೆ ಹೋಗಿ ಇದನ್ನು ತೋರಿಸು' ಎಂದು ಹೇಳಿಕಳಿಸಿದನು. ಆಕೆ ಆತನ ಮಾತಿನಂತೆ ಲಕ್ಷ್ಮಣನಿಗೆ ತೋರಿಸಿದಳು. ಅದನ್ನು ಓದಿದ ಲಕ್ಷ್ಮಣ ಮರುಮಾತನಾಡದೆ ಆಕೆಯ ಮೂಗನ್ನು ಕತ್ತರಿಸಿ ಕಳಿಸಿದನು.

ಮರಕ್ಕೆ ನೇಣುಹಾಕಿದ್ದ ಹೆಣದ ಮೂಗನ್ನು ಅಮಾವಾಸ್ಯೆ ಹುಣ್ಣಿಮೆಗಳಂದು ನಡುರಾತ್ರಿಯಲ್ಲಿ ಕತ್ತರಿಸಿಕೊಂಡು ಬರುವಂತೆ ಹೇಳಿ ಅದರಲ್ಲಿ ಜಯಶೀಲನಾದವನನ್ನು ಧೈರ್ಯಶಾಲಿ ಎಂದು ಗುರುತಿಸುವ ಸಂಗತಿಗಳು ಜನಪದಕಥೆಗಳಲ್ಲಿ ದೊರೆಯುತ್ತವೆ. ಇವಲ್ಲದೆ ಮೂಗುಕೊಯ್ಯುವ ಪದ್ಧತಿ ಹದಿನೇಳನೇ ಶತಮಾನದಲ್ಲಿ ಇತ್ತೆಂಬುದರ ಬಗೆಗೆ ಆಧಾರಗಳಿವೆ. ಸಾಮಾನ್ಯವಾಗಿ ಯುದ್ಧದಲ್ಲಿ ಸೆರೆಸಿಕ್ಕಿದವರನ್ನು ಮೂಗು ಕೊಯ್ದು ಕಳಿಸುತ್ತಿದ್ದ ಪದ್ಧತಿ ಹಿಂದಿನಿಂದಲೂ ಇತ್ತು. ಅಲ್ಲದೆ ಮೂಗು ಕೊಯ್ಯುವುದರಲ್ಲಿ ಚತುರರಾದವರನ್ನು ಸೈನಿಕರು ಓಡಾಡುವ ಜಾಗಗಳಲ್ಲಿ ನೇಮಿಸುತ್ತಿದ್ದರೆಂದು ಜೆ.ಎಚ್. ಗೋಸ್ ಎಂಬ ಪ್ರವಾಸಿಗ ಹೇಳಿದ್ದಾನೆ. ಮದ್ರಾಸಿನ ದಕ್ಷಿಣಕ್ಕೆ ಇತ್ತೆಂದು ಹೇಳಲಾಗುವ ಒಂದು ದೇವರಿಗೆ, ಮನುಷ್ಯರ ಮೂಗುಗಳನ್ನು ನೈವೇದ್ಯವಾಗಿ ಅರ್ಪಿಸುತ್ತಿದ್ದ ಅಮಾನುಷ ಸಂಪ್ರದಾಯ ರೂಢಿಯಲ್ಲಿದ್ದ ಸಂದರ್ಭದಲ್ಲಿ, ಮನುಷ್ಯರ ಮೂಗುಗಳನ್ನು ಕತ್ತರಿಸುವುದಕ್ಕಾಗಿಯೇ ಅನೇಕ ಸೇವಕರನ್ನು ಆ ದೇವಾಲಯದಲ್ಲಿ ನೇಮಿಸುತ್ತಿದ್ದರಂತೆ. ೧೬೫೬ರಲ್ಲಿ ಮಧುರೆಯ ಮೇಲೆ ಮೈಸೂರಿನ ದೊರೆ ದಾಳಿ ನಡೆಸಿ ಕೈಸೆರೆಯಾದ ಸೈನಿಕರ ಮೂಗುಗಳನ್ನು ಕತ್ತರಿಸಿ ಚೀಲಗಳಲ್ಲಿ ತುಂಬಿ ಜಯದ ಸಂಕೇತವಾಗಿ ಶ್ರೀರಂಗಪಟ್ಟಣಕ್ಕೆ

ಕಳಿಸಿದನೆಂದೂ ಜೆ.ಎಚ್.ನೆಲ್ಸನ್ ಹೇಳಿದ್ದಾನೆ. ಈ ದಂಡಯಾತ್ರೆಯನ್ನು 'ಮೂಗಿನ ಬೇಟೆ' ಎಂದು ಕರೆಯುತ್ತಾರೆ. ಈ ಘಟನೆ ನಡೆದ ಸ್ವಲ್ಪಕಾಲದ ನಂತರ ಮೈಸೂರು ದೊರೆಯ ಮೇಲೆ ಸೇಡುತೀರಿಸಿಕೊಳ್ಳಬೇಕೆಂದು ಮಧುರೆಯ ನಾಯಕ ತಿರುಮಲನ ತಮ್ಮ ಕುಮಾರಮೂರ್ತಿ ಪ್ರತಿಜ್ಞೆಮಾಡಿ ಮೈಸೂರು ದೊರೆಯನ್ನು ಸೆರೆಹಿಡಿದುದಲ್ಲದೆ ಆತನ ಮೂಗನ್ನು ಕತ್ತರಿಸಿ ಕಳಿಸಿಕೊಟ್ಟನಂತೆ. ಹೈದರಾಲಿಯು ಮೈಸೂರು ದೊರೆಯಾದ ಮೇಲೆ ತಪ್ಪಿತಸ್ಥರಿಗೆ ಮೂಗು ಕೊಯ್ಯುವ ಕ್ರೂರಶಿಕ್ಷೆಯನ್ನು ವಿಧಿಸುತ್ತಿದ್ದನಂತೆ.

೧೬೪೮ರಲ್ಲಿ ಗೋವಿಂದವೈದ್ಯನು ರಚಿಸಿದ ಕಂಠೀರವನರಸರಾಜವಿಜಯದಲ್ಲಿ ಯುದ್ಧದಲ್ಲಿ ಸೆರೆಸಿಕ್ಕಿದ ಸೈನಿಕರ ಮೂಗು ಕತ್ತರಿಸುತ್ತಿದ್ದುದರ ವರ್ಣನೆಯಿದೆ. ದಳವಾಯಿ ನರಸರಾಜೇಂದ್ರನಿಗೆ ಕಂಠೀರವ ನರಸರಾಜ ಅಪ್ಪಣೆ ಮಾಡಿದ ರೀತಿ ಇದು :

*ಒಡನೆ ಠಾಣೆಯದೆಗೆದೂರೂರುಗಳ ಹೊಕ್ಕ*
*ತುಡುಗುಣಿ ತುರುಕಮಾರ್ಬಲವ*
*ಕಡುತವಕದೆ ಮುತ್ತಿಕೊಂಡು ಮೂಗರಿದಾಗ*
*ಬಿಡದೆ ಭಂಗಕೆ ಬರಿಸೆಂದ. (೧೩ : ೫೨)*

ಪಾವಗಡದ ಪಾಳೆಯಗಾರರ ಕಾಲದಲ್ಲಿ ರಾಜಕೀಯ ಅಪರಾಧಿಗಳನ್ನು ಕಠಿಣ ಶಿಕ್ಷೆಗಳಿಂದ ದಂಡಿಸುತ್ತಿದ್ದರು. ಮಹಾಪರಾಧಿಗಳನ್ನು, ಕಳ್ಳರನ್ನು ಬೆಟ್ಟದ ಮೇಲೆ ಒಂದು ಕಡಿದಾದ ಸ್ಥಳದ ಕೋಡುಗಲ್ಲಿನ ತುದಿಯಿಂದ ಕೆಳಗಿನ ಪ್ರಪಾತಕ್ಕೆ ತಳ್ಳುತ್ತಿದ್ದರು. ಚಿತ್ರದುರ್ಗ ನಾಯಕರ ಕಾಲದಲ್ಲಿ ನ್ಯಾಯಪದ್ಧತಿ ಉದಾರವಾಗಿತ್ತು. ತಪ್ಪಿತಸ್ಥರಿಗೆ ದಂಡ ವಿಧಿಸಿ ನ್ಯಾಯತೀರ್ಮಾನ ಮಾಡುತ್ತಿದ್ದರು. ಮರಣದಂಡನೆಯಂಥ ಕ್ರೂರಶಿಕ್ಷೆಗಳೂ ಇದ್ದವು. ಚಿಕ್ಕಣ್ಣನಾಯಕನ ಮಗ ಮದಕರಿನಾಯಕನು ಹುಲ್ಲೂರುಗ್ರಾಮದ ವೀರಭದ್ರ ದೇವರ ಪೂಜಾರಿಯು ದೇವರ ಆರಾಧನೆಗೆಂದು ಕೊಟ್ಟ ದ್ರವ್ಯವನ್ನು ದುರುಪಯೋಗ ಮಾಡಿದ್ದರಿಂದ ಅವನಿಂದ ೨೪ ಹಣ ದಂಡವನ್ನು ವಸೂಲಿ ಮಾಡಿದನು. ಬಿಚ್ಚುಗತ್ತಿ ಭರಮಣ್ಣನ ಕಾಲದಲ್ಲಿ ತಪ್ಪಿತಸ್ಥರನ್ನು ಅವರ ಹಳೆಯ ದಾಖಲೆಗಳನ್ನು ಪರಿಶೀಲಿಸು ವುದರಿಂದಲೂ ದೃಷ್ಟಿದೀವಿಗೆ ಪರೀಕ್ಷೆಯಿಂದಲೂ ಮುದ್ದೆತುಪ್ಪದ ಪ್ರಮಾಣದಿಂದಲೂ ಬ್ರಾಹ್ಮಣರನ್ನು ಧರ್ಮಶಾಸ್ತ್ರದಲ್ಲಿ ವಿಘ್ನೇಶ್ವರಶಾಸ್ತ್ರವನ್ನು ಓದಿಸುವುದರ ಮೂಲಕವೂ ತಪ್ಪನ್ನು ಕಂಡುಹಿಡಿದು ದಂಡ ವಿಧಿಸುತ್ತಿದ್ದರು. ಆಯಾ ಗ್ರಾಮದ ೧೨ ಜನ ಆಯಗಾರರು ಒಮ್ಮತಾಭಿಪ್ರಾಯ ಸೂಚಿಸುವುದರ ಮೂಲಕ ತಪ್ಪಿತಸ್ಥರನ್ನು ದಂಡನೆಗೆ ಗುರಿಮಾಡು ತ್ತಿದ್ದರು. ಗಡಿಪಾರು ಮಾಡುವ ಪದ್ಧತಿಯೂ ಇದ್ದಿತು.[೪]

ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕು ಹೋಬಳಿ ಕೇಂದ್ರಗಳಲ್ಲಿ ಒಂದಾದ ಮತ್ತೋಡಿನಲ್ಲಿ ವೃತ್ತಿತೆರಿಗೆ ಜಾರಿಯಲ್ಲಿತ್ತು. ಆದರೆ ಶುಭದ ಸಂದರ್ಭದಲ್ಲಿ ತೆರಿಗೆಯನ್ನು ಮನ್ನಾ ಮಾಡುತ್ತಿದ್ದ ಪದ್ಧತಿಯೂ ಇತ್ತು. ಕ್ರಿ.ಶ.೧೬೦೦ರಲ್ಲಿ ದೊಡ್ಡಣ್ಣನಾಯಕನ ಪಟ್ಟದ ಕುಮಾರ ಚೆನ್ನದ ಗಿರಿಯಪ್ಪನಾಯಕನಿಗೆ ಮದುವೆ ಜರುಗಿತು. ಆಗ ಅಲ್ಲಿಯ

ಕ್ಷೌರಿಕರು ತಮಗೆ ವಿಧಿಸಲಾಗಿದ್ದ ತೆರಿಗೆಯನ್ನು ಮನ್ನಾ ಮಾಡುವಂತೆ ಕೋರಿದರು. ಅವರಿಂದ ಸಾವಿರ ವರಹ ಲಾಭವಿದ್ದರೂ ಅದನ್ನು ಬಿಟ್ಟುಕೊಟ್ಟಿರುವೆನೆಂದು ಘೋಷಿಸಿ ತೆರಿಗೆಯನ್ನು ರದ್ದುಗೊಳಿಸಿರುವ ದಾಖಲೆ ಶಾಸನವೊಂದರಲ್ಲಿದೆ.[೫]

ರತ್ನಗಿರಿ ನಾಯಕವಂಶದ ಉಗಮದ ಬಗೆಗಿನ ಐತಿಹ್ಯವೊಂದರಲ್ಲಿ ಇರುವ ನ್ಯಾಯದ ಸಂಗತಿಯನ್ನು 'ರತ್ನಗಿರಿರಾಜ ಚರಿತ್ರೆ' ಎಂಬ ಲೇಖನದಲ್ಲಿ ಮಧುಗಿರಿ ಉಮಾಪತಿಯವರು ಬೆಳಕು ಚೆಲ್ಲಿರುವುದರ ಬಗೆಗೆ ಎಸ್.ಪಿ.ಪದ್ಮಪ್ರಸಾದ್ 'ರತ್ನಗಿರಿ ನಾಯಕರು' ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ. ಶಾಲಿವಾಹನ ಶಕೆ ೧೫೩ನೇ ವರ್ಷದ ವಿರೋಧೀಕೃತ ಸಂವತ್ಸರದಲ್ಲಿ ಆನೆಗೊಂದಿ ಸಂಸ್ಥಾನದಲ್ಲಿ ಮಂದಪ್ಪನಾಯಕ ರಾಜ್ಯಭಾರ ಮಾಡುತ್ತಿದ್ದ. ಹೆಂಡತಿ ಮಾದಲಾಂಬಿಕೆ. ಈತನ ನಾಲ್ಕು ಮಕ್ಕಳಲ್ಲಿ ರತ್ನಾಂಬಿಕೆ ಹೆಣ್ಣುಮಗಳು. ೧೨ ವರ್ಷಗಳಾದರೂ ಆಕೆಗೆ ಲಗ್ನವಿಲ್ಲ. ತಕ್ಕ ವರನನ್ನು ಅನುಗ್ರಹಿಸಲು ಸೂರ್ಯನನ್ನು ಪ್ರಾರ್ಥಿಸಿದಳು. ಪ್ರತ್ಯಕ್ಷನಾದ ಸೂರ್ಯ ತಾನೇ ಪತಿಯಾಗುವೆನೆಂದೂ ತನ್ನಂಥವನೇ ಮಗನಾಗುವನೆಂದೂ ಹೇಳಿ ಕಾಣೆಯಾಗುತ್ತಾನೆ. ನಂತರ ಗರ್ಭಚಿಹ್ನೆಗಳು ಕಾಣಿಸಿದವು. ತಾಯಿಗೆ ಗಾಬರಿಯಾಯಿತು. ವಿಷಯ ರಹಸ್ಯ. ನವಮಾಸ ತುಂಬಿ ಗಂಡುಮಗುವಿಗೆ ಜನ್ಮ ನೀಡಿದಳು. ವಂಶದ ಹೆಸರು ಕೆಡುತ್ತದೆಂದು ಮಗುವನ್ನು ತಿಪ್ಪೆಗೆಸೆಯುತ್ತಾರೆ. ಅಳುತ್ತಿದ್ದ ಮಗುವಿಗೆ ಕೊಟ್ಟಿಗೆಯಲ್ಲಿದ್ದ ಎಮ್ಮೆ ಹಾಲುಕರೆದು ಹೋಗುತ್ತದೆ. ದಿನೇ ದಿನೇ ಎಮ್ಮೆಯಲ್ಲಿ ಹಾಲು ಕಡಿಮೆಯಾಗುತ್ತಿದ್ದುದನ್ನು ಗಮನಿಸಿದ ಗೊಲ್ಲನು ದೊರೆಗೆ ತಿಳಿಸಿದ. ಮಾರಪ್ಪನಾಯಕ ವಿಚಾರಣೆ ನಡೆಸಿದಾಗ ಸತ್ಯಾಂಶ ಹೊರಬರುತ್ತದೆ. "ಕುಲಗುರುಗಳ ಎದುರಿಗೆ ವಿಚಾರಣೆ ನಡೆಯುತ್ತದೆ. ಗುರುಗಳು ವಿಸ್ಮಯಪಟ್ಟು ಆ ಮಗುವನ್ನು ತರಿಸಿ ಈ ಕೂಸು ಸೂರ್ಯನಿಂದಲೇ ಜನಿಸಿದೆಯಾದ್ದರಿಂದ ಎನುಮಲವನೆಂದೂ ತಿಪ್ಪೆಯಲ್ಲಿ ಬೆಳೆದದ್ದರಿಂದ ತಿಪ್ಪನಾಯಕನೆಂದೂ ನಾಮಕರಣ ಮಾಡುತ್ತಾರೆ. ಸಕಲ ರಾಜಲಕ್ಷಣಗಳಿಂದ ಕೂಡಿದ ಈ ಶಿಶುವು ಮುಂದೆ ಆನೆಗೊಂದಿಯ ಪಟ್ಟಣವನ್ನಾಳುವನು ಎಂದು ಹೇಳಿ ೫೬ ಸೀಮೆಯ ನಾಯಕರನ್ನು ಕರೆಸಿ ಘೋಷಿಸುತ್ತಾರೆ. ಸೂರ್ಯಮಂಡಲದ ಪಕ್ಕದಲ್ಲಿ ರತ್ನಾಂಬಿಕೆಯನ್ನು ಕೂರಿಸಿ ಮುಹೂರ್ತ ಮಾಡುತ್ತಾರೆ."[೬]

ಕ್ಷೌರಿಕರಿಗೂ ಅಗಸರಿಗೂ ಕುಂಬಾರರಿಗೂ ಒಂದು ಬಗೆಯ ವಿವಾದ ತಲೆದೋರಿದ ಸಂಗತಿಯೊಂದಿದೆ. ವಿಶಿಷ್ಟ ಸಂದರ್ಭವೊಂದರಲ್ಲಿ "ಅಗಸರಿಗೂ ಕುಂಬಾರರಿಗೂ ಉತ್ತರೀಯ ಹೊದೆದುಕೊಳ್ಳಲು ಅಧಿಕಾರವಿಲ್ಲವೆಂದು ಕ್ಷೌರಿಕರು ವಾದಿಸಿದರಂತೆ. ಕುಂಬಾರರು ತಮಗೆ ಆ ಹಕ್ಕಿದೆಯೆಂದು ಸಾಧಿಸಿ, ಅದಕ್ಕೆ ಪ್ರಮಾಣವಾಗಿ ದಿವ್ಯಲಿಂಗೇಶ್ವರದೇವರ ಸನ್ನಿಧಿಯಲ್ಲಿ ಕುದಿಯುವ ತುಪ್ಪಕ್ಕೆ ಕೈ ಅದ್ದಿ, ತಮ್ಮ ವಾದವನ್ನು ಸಮರ್ಥಿಸಿಕೊಂಡರಂತೆ. ಹೀಗೆ ಮಧ್ಯಯುಗದಲ್ಲಿ ಪ್ರಚಾರದಲ್ಲಿದ್ದ 'ತಪ್ತದಿವ್ಯ' ಪ್ರಮಾಣಪೂರ್ವಕವಾದ ಈ ಕ್ರೂರ ವಿಚಾರಣಾ ಪದ್ಧತಿಯು ಇತ್ತೀಚೆಗಿನವರೆಗೂ ಪ್ರಚಲಿತವಾಗಿದ್ದಿತು. ಮೈಸೂರು ಸಂಸ್ಥಾನವೂ ಅದಕ್ಕೆ ಅಪವಾದವಾಗಿರಲಿಲ್ಲ."[೭]

ಚಾಮರಾಜ ಒಡೆಯರು ಅರಸರಾಗಿದ್ದ ಕಾಲದಲ್ಲಿ ಶ್ರವಣಬೆಳಗೊಳದ ಹಾಸನಬೀದಿಯಲ್ಲಿ ಒಮ್ಮೆ ಜೈನರ ಮೆರವಣಿಗೆ ಹೋಗುತ್ತಿದ್ದಾಗ ವೀರಶೈವರು ಅದಕ್ಕೆ ಅಡ್ಡಿಮಾಡಿದರೆಂದು ಒಡೆಯರಿಗೆ ದೂರು ಬಂದಿತಂತೆ. ಒಡೆಯರು ಹಲವಾರು ಸಾಕ್ಷಿದಾರರನ್ನು ಕರೆಸಿ ವಿಚಾರಣೆ ಮಾಡಲಾಗಿ 'ಲಿಂಗವಂತರು' ಮತದ್ವೇಷದ ತಪ್ಪು ಮಾಡಿದವರೆಂದು ಮನವರಿಕೆಯಾಗಲು, ಆ ಅಪರಾಧಿಗಳನ್ನು ದಂಡಿಸಿ ಜೈನರಿಗೆ ರಕ್ಷಣೆ ನೀಡಿದರಂತೆ.

"೧೬೩೪ರಲ್ಲಿ ಚಾಮರಾಜ ಒಡೆಯರು ಶ್ರವಣಬೆಳಗೊಳವನ್ನು ಸಂದರ್ಶಿಸಿದ ಕಾಲದಲ್ಲೊಮ್ಮೆ ಶ್ರವಣಬೆಳಗೊಳದ ಶ್ರಾವಕರು ದೊರೆಯ ಬಳಿಗೆ ಬಂದು ಬಸದಿಯ ಭೂಮಿಗಳನ್ನು ಬಸದಿಯ ಸ್ಥಾನಿಕರು ವರ್ತಕರ ಬಳಿ ಅಡವಿಟ್ಟುದರಿಂದ ಅಲ್ಲಿ ಪೂಜಾಕಾರ್ಯಗಳು ಸರಿಯಾಗಿ ನಡೆಯುತ್ತಿಲ್ಲವೆಂದು ದೂರಿತ್ತರಂತೆ. ಒಡೆಯರು ಆ ಕೂಡಲೇ ವಿಚಾರಣೆ ನಡೆಸಲಾಗಿ, ವರ್ತಕರು ಕೊಟ್ಟ ಸಾಲಕ್ಕೆ ಆ ಭೂಮಿಗಳು ಅವರಿಗೆ ಅಡಮಾನವಾಗಿದ್ದುವೆಂದು ತಿಳಿದುಬಂದಿತಂತೆ. ಒಡೆಯರು ಆ ವರ್ತಕರನ್ನು ಕರೆಸಿ "ನೀವು ಸ್ಥಾನಿಕರಿಗೆ ಕೊಟ್ಟ ಸಾಲವನ್ನು ನಾವು ತೀರಿಸುತ್ತೇವೆ" ಎಂದು ವಚನ ನೀಡಿದರಂತೆ. ವರ್ತಕರು ಅಡಮಾನದ ಭೂಮಿಗಳನ್ನು ಮರಳಿ ಕೊಟ್ಟುದಲ್ಲದೆ, ಆ ಭೂಮಿಗಳು ದೇವತೆಗಳಿಗೆ ತಾವು ಕೊಟ್ಟ ದತ್ತಿಯೆಂದು ಪರಿಗಣಿಸಿದರಂತೆ."[೮]

ಪ್ರಾಚೀನಭಾರತದಲ್ಲಿ ನಾನಾ ರೀತಿಯ ಅಪರಾಧಗಳಿಗೆ ಯಾವ ಮಟ್ಟದ ಶಿಕ್ಷೆಗಳನ್ನು ವಿಧಿಸುತ್ತಿದ್ದರೆಂಬ ಸಂಗತಿಗಳು ಹಲವಾರಿವೆ. "ಕುದುರೆ, ಆನೆ, ಆಡು, ಒಂಟೆಯನ್ನು ಕೊಂದರೆ ಕೊಂದವನ ಒಂದು ಕಾಲನ್ನು ಕಡಿಯುತ್ತಿದ್ದರು. ಉಪಯುಕ್ತ ಪಶು-ಪಕ್ಷಿಗಳಾದ ಎತ್ತು, ಹಸು, ಎಮ್ಮೆ, ಕೋಣ, ನವಿಲು, ಕ್ರೌಂಚ, ಕಪೋತ, ಹಂಸ, ಮೀನು, ಕುರಿ ಇವೇ ಮೊದಲಾದುವನ್ನು ನಾಶಮಾಡುವುದು ಅಥವಾ ಗಾಯಗೊಳಿಸುವುದು ದಂಡನಾರ್ಹವಾಗಿತ್ತು. ಮಾರ್ಗದಲ್ಲಿ ರಭಸದಿಂದ ಅಥವಾ ನಿರ್ಲಕ್ಷ್ಯತೆಯಿಂದ ವಾಹನ ನಡೆಸಿ ಹಾನಿ ಅಥವಾ ಮರಣ ಉಂಟುಮಾಡಿದರೆ ಉಗ್ರಶಿಕ್ಷೆ ವಿಧಿಸಲಾಗುತ್ತಿತ್ತು. ಮಾರ್ಗಕಳ್ಳರನ್ನು, ಹಗಲುಗಳ್ಳರನ್ನು ಹೆಡಮುರಿಗೆ ಕಟ್ಟಿ ಎಸೆಯುತ್ತಿದ್ದರು. ದರೋಡೆಕೋರರನ್ನು ಗಲ್ಲಿಗೇರಿಸುತ್ತಿದ್ದರು ಅಥವಾ ಗುಂಡಿಕ್ಕಿ ಕೊಲ್ಲುತ್ತಿದ್ದರು. ಸ್ತ್ರೀ ಪುರುಷರನ್ನು ಅಪಹರಿಸುವವರನ್ನು ಹುಲ್ಲಿನರಾಶಿಯಲ್ಲಿ ಹೂಳಿ ಸುಡುತ್ತಿದ್ದರು ಅಥವಾ ಎರಡೂ ಕೈಗಳನ್ನು ಕಡಿದು ಅಡ್ಡದಾರಿಯಲ್ಲಿ ಎಸೆಯುತ್ತಿದ್ದರು. ಸಾಕುಪ್ರಾಣಿಗಳನ್ನು ಕದಿಯುವವರಿಗೂ ಇದೇ ಬಗೆಯ ಶಿಕ್ಷೆ ಕಾದಿರುತ್ತಿತ್ತು. ಕತ್ತೆ ಉಚ್ಚೆ ಹಾಕಿ ಬೋಳಿಸುವ ಪದ್ಧತಿಯೂ ಪ್ರಾಚೀನಭಾರತದಲ್ಲಿ ಪ್ರಚಾರದಲ್ಲಿತ್ತು."[೯]

ಸಮಾಜದಿಂದ ಬಹಿಷ್ಕೃತರಾದವರು ಮತ್ತೆ ಒಳಗಡೆ ಸೇರಿಕೊಳ್ಳಲು ಕೆಲವು ಆಚಾರಗಳನ್ನು ಮಾಡುತ್ತಾರೆ. ಇದಕ್ಕೆ 'ಕುಲಾಚಾರ' ಎಂದು ಕರೆಯುತ್ತಾರೆ. ಬಯಲು ಸೀಮೆಯ ಕಡೆ ಎಕ್ಕಡದಲ್ಲಿ ಹೊಡೆದಾಗ ಬೆಂಕಿ ನೀರು ಕೊಡದಂತೆ ಕಟ್ಟುಮಾಡುತ್ತಾರೆ. ಮತ್ತು ಆ ಎಲ್ಲವೂ ದೊರೆಯಬೇಕಾದರೆ 'ಕುಲಾಚಾರ' ಆಗಬೇಕು. ಊರಿನ ಮುಖ್ಯಸ್ಥರ

ಸಮ್ಮುಖದಲ್ಲಿ ಚಿನ್ನದಕಡ್ಡಿ, ಬೆಳ್ಳಿಯಕಡ್ಡಿಯನ್ನು ಕಾಯಿಸಿ ನಾಲಿಗೆ ಮೇಲೆ ತಪ್ಪಿತಸ್ಥನಿಗೆ ಸುಡುತ್ತಾರೆ. ಹೊಡೆದ ಎಕ್ಕಡದ ಚೂರಿನಿಂದಲೂ ಸುಡುತ್ತಾರೆ. ಇದಾದ ಮೇಲೆ ಆ ವ್ಯಕ್ತಿ ಕೋಳಿಕೊಯ್ದು, ಮರಿಕೊಯ್ದು ಅಡಿಗೆಮಾಡಿ ಊರಿನ ಮುಖ್ಯಸ್ಥರಿಗೆ ಬಡಿಸುತ್ತಾನೆ. ಉತ್ತರಕರ್ನಾಟಕದ ಕಡೆ ಇದನ್ನು ಕುಲಹೊರ್ತ, ಕುಲವರ್ಗ ಎಂದು ಕರೆಯುತ್ತಾರೆ.

ಹೀಗೆ ತನ್ನ ಉದ್ಧಾರಕ್ಕಾಗಿಯೋ ಅಥವಾ ನಾನಾ ಉದ್ದೇಶಗಳಿಗಾಗಿಯೋ ಸಮಾಜದ ರೀತಿ ನೀತಿಗಳ ವಿರುದ್ಧ ಕಾರ್ಯೋನ್ಮುಖರಾದಾಗ ಅಪರಾಧಕ್ಕೆ ಗುರಿಯಾಗುವ ಹಲವಾರು ಸಂದರ್ಭಗಳಿರುತ್ತವೆ. ಇಂಥ ಅಪರಾಧಕ್ಕೆ ಮಾನಸಿಕ, ದೈಹಿಕ, ಸಾಮಾಜಿಕ, ಧಾರ್ಮಿಕ, ರಾಜಕೀಯವಾದ ಕಾರಣಗಳೂ ಇರುತ್ತವೆ. ಮೂಢನಂಬಿಕೆ, ಪದ್ಧತಿ, ಸಂಪ್ರದಾಯಗಳೂ ಅಪರಾಧಕ್ಕೆ ಬಲವಾದ ಕಾರಣಗಳಾಗಬಹುದು.

**ಟಿಪ್ಪಣಿಗಳು**

೧. ಜಾನಪದ ಕೈಪಿಡಿ, ಕನ್ನಡ ಪುಸ್ತಕ ಪ್ರಾಧಿಕಾರ, ಪು.೧೬೭

೨. ಕಂಠೀರಾವ್, ಪ್ರಾಚೀನ ಭಾರತದಲ್ಲಿ ನ್ಯಾಯಾಡಳಿತ, ಕರ್ನಾಟಕ ಭಾರತಿ, ಪು.೧೧೭

೩. ಅದೇ, ಪು.೧೨೦-೧೨೧

೪. ದಕ್ಷಿಣಕರ್ನಾಟಕದ ಅರಸುಮನೆತನಗಳು, ಪು.೧೧೨, ೧೧೩

೫. ಎ.ಕ., ಸಂಪುಟ ೧೧, ಹೊಳಲ್ಕೆರೆ ೯೮

೬. ಅದೇ, ಪು.೨೬೨

೭. ಕರ್ನಾಟಕ ಇತಿಹಾಸ ದರ್ಶನ, ಪು.೯೪೧

೮. ಅದೇ, ಪು.೯೪೦

೯. ಕಂಠೀರಾವ್, ಪೂರ್ವೋಕ್ತ, ಪು.೧೨೪-೧೨೫

**ಸಹಾಯಕ ಗ್ರಂಥಗಳು**

೧. ವಸು ಎಂ.ವಿ.(ಸಂ.) ದಕ್ಷಿಣಕರ್ನಾಟಕದ ಅರಸುಮನೆತನಗಳು, ಕನ್ನಡ ವಿ.ವಿ., ಹಂಪಿ

೨. ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್(ಸಂ.), ಮಲೆಕರ್ನಾಟಕದ ಅರಸುಮನೆತನಗಳು, ಕನ್ನಡ ವಿ.ವಿ., ಹಂಪಿ

೩. ರಾಘವಯ್ಯ ವಿ., ಅಕ್ಕಮಹಾದೇವಿ(ಅನು.), ಬುಡಕಟ್ಟು ನ್ಯಾಯ, ಮೈಸೂರು ವಿಶ್ವವಿದ್ಯಾನಿಲಯ

೪. ಚಿ.ಶ್ರೀನಿವಾಸರಾಜು, ಬಸವರಾಜ ಕಲ್ಗುಡಿ(ಸಂ.), ಕರ್ನಾಟಕ ಸಂಗಾತಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ

೫. ಕಂಠೀರಾವ್, ಭಾರತೀಯ ನ್ಯಾಯಪದ್ಧತಿ, ಮೈಸೂರು ವಿಶ್ವವಿದ್ಯಾನಿಲಯ

೬. ಎಚ್.ಎಲ್.ನಾಗೇಗೌಡ, ಪ್ರವಾಸಿ ಕಂಡ ಇಂಡಿಯಾ (ಸಂ.೧, ೬),

೭. ಕನ್ನಡ ವಿಶ್ವಕೋಶ (ಸಂ.೯)

೮. ಇ. ಥರ್ಸ್ಟನ್, ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ (ಸಂ. ೧, ೨, ೩)

೯. ಎಂ.ವಿ. ಕೃಷ್ಣರಾವ್, ಎಂ.ಕೇಶವಭಟ್ಟ, ಕರ್ನಾಟಕ ಇತಿಹಾಸ ದರ್ಶನ

೬

# ಅಸ್ಪೃಶ್ಯರು ಮತ್ತು ನ್ಯಾಯತೀರ್ಮಾನ ಸ್ವರೂಪ

## ಎಸ್. ಆರ್. ಗುರುನಾಥ್

"ಚತುಷ್ಪಾತ್ ಸಕಲೋ ಧರ್ಮಃ" ಎಂದಹಾಗೆ ಈ ದೇಶದ 'ನ್ಯಾಯ-ನೀತಿ-ಧರ್ಮ'ಗಳು ನಾಲ್ಕುಕಾಲುಗಳಲ್ಲಿ ನಡೆದಾಡಿದರೂ ಹಲವಾರು ಜಾತಿಗಳ ಮಾನವ ಸಮುದಾಯವು ಪರಸ್ಪರ ಸಮಾನತೆಯ ಸಂತಸದಲ್ಲಿ ಬದುಕಿ ಬಾಳಿದ ಉದಾಹರಣೆಗಳು ದೊರಕುವುದು ವಿರಳ. ಮಾನವರು ಸಾತ್ವಿಕಮಾರ್ಗದಲ್ಲಿ ಬದುಕಲೆಂಬ ಉದ್ದೇಶದಿಂದ ದೇವರು ಅವತಾರಗಳನ್ನೆತ್ತಿ ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ರಕ್ಷಿಸಿದನಂತೆ! ಹಾಗೆಯೇ, ಹಲವಾರು ಮಹಾನುಭಾವರೂ ಮಾನವರ ಒಳಿತಿಗಾಗಿ ಬದುಕನ್ನು ಸವೆಸಿದರು. ಇವೆಲ್ಲವುಗಳ ಗಂಟುಮೂಟೆಗಳೇ ಪುರಾಣ ಪುಣ್ಯಕಥೆಗಳು. ಇವುಗಳಿಂದಾಗಿ ಜಗತ್ತಿನಲ್ಲೇ ಅತ್ಯಂತ ಧಾರ್ಮಿಕ-ಮಹಾಮಹಿಮ-ಪುಣ್ಯಭೂಮಿ ಎಂದೆಲ್ಲಾ ಹೊಗಳಲ್ಪಟ್ಟಿರುವ ಈ ದೇಶದ ನ್ಯಾಯ-ನೀತಿ-ಧರ್ಮಗಳ ಅಂತರಂಗದ ಅರ್ಥವನ್ನರಿಯುವುದು ಅಷ್ಟು ಸುಲಭವಲ್ಲ.

"ನ್ಯಾಯ-ನೀತಿ-ಧರ್ಮಗಳು/ಜಾತಿಮತಗಳಿಗೆ ತಕ್ಕಂತೆ/ ಬಣ್ಣ ಬದಲಿಸುವ ಊಸರವಳ್ಳಿಗಳು"[೧] ಎಂಬ ಒಂದು ಚುಟುಕ ಕವನದ ಹಾಗೆ ಮೇಲುಸ್ತರದಲ್ಲಿ ಅರ್ಥವನ್ನು ಅರ್ಥೈಸಲೆತ್ನಿಸಬಹುದು. ಆದರೆ ಧಾರ್ಮಿಕ ಮನೋಭಾವಗಳಿಗೆ ತಕ್ಕಂತಹ ಸಾಮಾಜಿಕ ವ್ಯವಸ್ಥೆಯ ಬಗ್ಗೆ ನಿಖರವಾದ ಅರ್ಥವ್ಯಾಖ್ಯಾನ ಅಷ್ಟು ಸುಲಭವಲ್ಲ. ಅಂದಹಾಗೆ ಜಾತಿಗೊಂದು ನ್ಯಾಯ; ವ್ಯಕ್ತಿಗೊಂದು ನ್ಯಾಯ; ಸಮಯಕ್ಕೊಂದು ನ್ಯಾಯ! ಹೀಗಿರುವಾಗ ಮಾನವರೆಲ್ಲರೂ ಒಂದೇ ಎಂಬುದು ಎಲ್ಲೂ ವ್ಯಕ್ತವಾಗುವುದಿಲ್ಲ. ಇದೇ ಇಲ್ಲಿಯ ಆಧ್ಯಾತ್ಮಿಕ ಲೌಕಿಕ ನ್ಯಾಯ!

ವರ್ಣ-ವರ್ಗ ಎಂಬ ಮನೋಭಾವಗಳು ಮಾನವ ಮಾನವನನ್ನು ವಿಭಜಿಸುವ ಮಹಾಕಂದಕಗಳು ಅಥವಾ ಅಡ್ಡಗೋಡೆಗಳು. ಇವುಗಳಲ್ಲಿ ವರ್ಗ ಎಂಬುದು ಮಾತ್ರ ಸ್ವಲ್ಪಮಟ್ಟಿಗೆ ಸಡಿಲವಾದುದು ಎನ್ನಬಹುದು. ಸಾಮಾನ್ಯ ವಿವರಣೆಯಲ್ಲಿ ಈ 'ವರ್ಗ' ಎಂಬುದು ಆರ್ಥಿಕಸ್ಥಿತಿಯನ್ನು ಅವಲಂಬಿಸಿದ್ದು, ಬಡವನಿಗೆ ನಿಧಿ ದೊರಕಿದರೆ ರಾತ್ರೋರಾತ್ರಿ ತನ್ನ ಸ್ಥಿತಿಯನ್ನು ಕಳಚಿಕೊಂಡು ಮೇಲುವರ್ಗಕ್ಕೆ ಏರಿಬಿಡಬಹುದು.

ಆದರೆ 'ವರ್ಣ' ಎಂಬುದು ಹಾಗಲ್ಲ. ಅದು ಎಂದೆಂದಿಗೂ ತನ್ನದೇ ಆದ ಬಣ್ಣದಿಂದ ಬದಲಾಗುವುದಿಲ್ಲ. ಕೆಳಜಾತಿಯ ವ್ಯಕ್ತಿಯು ಎಂತಹ ವಿದ್ಯಾವಂತ ಸುಸಂಸ್ಕೃತನಾದರೂ ಕೂಡಾ ಎಂದೆಂದಿಗೂ ಅಸ್ಪೃಶ್ಯತೆಯ 'ಕಳಂಕ'ದಿಂದ ಪಾರಾಗಲಾರ. ಇಂತಹ ವಾಸ್ತವಗಳಿಂದ ಅಸ್ಪೃಶ್ಯತೆಯು ಎಷ್ಟು ಹೀನಾಯ ಎಂಬುದು ಅನುಭವಿಸಿದವನಿಗೆ ಮಾತ್ರ ಗೊತ್ತು. ಇಂತಹ ವಿಷಯದಲ್ಲಿ ಈ ಸಂಸ್ಕೃತಿಯ ಧಾರ್ಮಿಕ ಸ್ವರೂಪವು ನಾಚಿಕೆಯನ್ನುಂಟು ಮಾಡುವಂತಹದ್ದು.

'ಅಸ್ಪೃಶ್ಯ' ಎಂಬುದು ಪ್ರಾಣಿ-ಕ್ರಿಮಿ-ಕೀಟಗಳಿಗಿಂತಲೂ ಹೀನವಾದವನು ಎಂಬುದನ್ನು ಧ್ವನಿಸುತ್ತದೆ! ಹಾಗಾಗಿ ಎಲ್ಲರಿಗೂ ಸಲ್ಲುವ ನ್ಯಾಯವೇ ಬೇರೆ; ಅಸ್ಪೃಶ್ಯನಿಗೆ ದಕ್ಕುವ ನ್ಯಾಯವೇ ಬೇರೆ! ಆದ್ದರಿಂದಲೇ 'ನ್ಯಾಯ-ನೀತಿ-ಧರ್ಮಗಳು ಜಾತಿಮತಗಳಿಗೆ ತಕ್ಕಂತೆ ಬಣ್ಣ ಬದಲಿಸುವ ಊಸರವಳ್ಳಿಗಳು' ಎಂಬುದು ಅರ್ಥಪೂರ್ಣ ಎಂಬುದರಲ್ಲಿ ಅನುಮಾನವಿಲ್ಲ.

ಹುಟ್ಟಿನ ಲೆಕ್ಕದಲ್ಲಿ ಮೇಲುಜಾತಿ, ಕೆಳಜಾತಿ ಎಂಬುದು ನಿರ್ಧಾರವಾಗುತ್ತದೆ. ಅಂದ ಹಾಗೆ 'ಹುಟ್ಟು' ಎಂಬುದು ಐಚ್ಛಿಕವಲ್ಲ. ಅದು ಪ್ರಕೃತಿ ಲಾಲಿತ್ಯದ ಒಂದು ಆಕಸ್ಮಿಕ. ಅಷ್ಟೇ ಆದರೂ ಮೇಲುಜಾತಿಯಲ್ಲಿ ಹುಟ್ಟಿದವನು ಪೂರ್ವಜನ್ಮದಲ್ಲಿ ಕೋಟಿ ಪುಣ್ಯ ಮಾಡಿದವನು; ಕೆಳಜಾತಿಯಲ್ಲಿ ಹುಟ್ಟಿದವನು ಕೋಟಿ ಪಾಪ ಮಾಡಿದವನು- ಎಂಬಂಥ ಮನೋಧರ್ಮವೇ ಒಂದು ಆಧ್ಯಾತ್ಮಿಕ ಸಂಗತಿಯಾಗಿಬಿಟ್ಟಿದೆ! ಹೀಗಿರುವಾಗ ನೀತಿ-ಧರ್ಮಗಳ ವಿಷಯ ಹಾಗಿರಲಿ, ನ್ಯಾಯ ಮತ್ತು ಅದರಿಂದ ಉಂಟಾಗುವ ಪರಿಣಾಮ ಮಾತ್ರ ಎಲ್ಲರಿಗೂ ಒಂದೇ ಸ್ವರೂಪದ್ದು ಎನ್ನಲಾದೀತೆ?

'ಜಾತಿ' ಉಗಮವಾದಾಗಿನಿಂದಲೂ ನ್ಯಾಯ ಹಾಗೂ ಶಿಕ್ಷೆಯ ಸ್ವರೂಪಗಳು ವಿಭಿನ್ನವೇ. 'ನ್ಯಾಯ'ಕ್ಕೆ ಶಬ್ದಕೋಶದಲ್ಲಿ ಸುಂದರವಾದ ಅರ್ಥವೇನೋ ಉಂಟು. ಆದರೆ ಜಾತಿಯ ವಿಷಯದಲ್ಲಿ ಅದರ ಅರ್ಥವೇ ಬೇರೆ! ಅಸ್ಪೃಶ್ಯನು ಕೀಳುಜಾತಿಯಲ್ಲಿ ಹುಟ್ಟಿದ್ದೇ ಅವನ ಮೊದಲ ತಪ್ಪು. ಮಾನವನು ತನ್ನ ವೈಯಕ್ತಿಕತೆಗೆ ಸಂಬಂಧಿಸಿದ ಯಾವ ತಪ್ಪನ್ನಾದರೂ ತಿದ್ದಿಕೊಳ್ಳಬಹುದು. ಆದರೆ ಕೆಳಜಾತಿಯಲ್ಲಿ ಹುಟ್ಟಿದ ತಪ್ಪನ್ನು ಮಾತ್ರ ತಿದ್ದಿಕೊಳ್ಳುವುದಿರಲಿ ಪರಿಷ್ಕರಿಸಿಕೊಳ್ಳುವುದೂ ಅಸಾಧ್ಯವೇ! ಹೀಗಾಗಿ ಜಾತಿಗೆ ಸಂಬಂಧಿಸಿದ ನ್ಯಾಯವನ್ನು ಖಂಡಿಸುವುದೂ ಒಂದು ದೊಡ್ಡ ಅಪರಾಧವಾಗಿಯೇ ಕಾಣುತ್ತದೆ.

'ನ್ಯಾಯ' ಎಂಬುದಕ್ಕೆ ಶಬ್ದಕೋಶದ ಅರ್ಥದಂತೆ ಅಸ್ಪೃಶ್ಯ ವ್ಯಕ್ತಿಯು ಈ ದೇಶದಲ್ಲಿ ಸುಖ ಸಂತಸದ ಬದುಕನ್ನು ಕಂಡ, ಅನುಭವಿಸಿದ ಎಂಬಂತಹ ಒಂದೇ ಒಂದು ಉದಾಹರಣೆಯೂ ಕೂಡ ಪುರಾಣ, ಇತಿಹಾಸ, ಜಾನಪದ ಅಥವಾ ಸಮಾಜದಲ್ಲಿ ಕಂಡು ಬರುವುದಿಲ್ಲ. ಅಸ್ಪೃಶ್ಯನ ಒಂದು ಸಣ್ಣ ತಪ್ಪಿಗೂ ಕಠೋರವಾದ ಶಿಕ್ಷೆಯನ್ನು ವಿಧಿಸುವ ಧಾರ್ಮಿಕ ಮನೋಭಾವವು ಎಂತಹ ಗಟ್ಟಿಸ್ವರೂಪದ್ದು ಎಂಬುದು ಸ್ಪಷ್ಟ ವಾಗುತ್ತದೆ.

## ಪುರಾಣಕಾಲೀನ ನ್ಯಾಯ

ನ್ಯಾಯದ ಹಿರಿಮೆಯನ್ನು ಎತ್ತಿಹಿಡಿದು, ಧರ್ಮವನ್ನು ಸಮರ್ಥಿಸಿ, ಭವಿಷ್ಯತ್ತಿಗೆ ಮಾರ್ಗದರ್ಶನ ಮಾಡುತ್ತವೆ ಎನ್ನಲಾಗಿರುವ ಯಾವುದೇ ಪುರಾಣ ಅಥವಾ ಪುಣ್ಯಕಥೆಯಲ್ಲಿಯ ಒಂದೇ ಒಂದು ದೇವರಾದರೂ ಅಸ್ಪೃಶ್ಯನ ಬಗ್ಗೆ ಕನಿಷ್ಠ ಪ್ರಮಾಣದ ಸಹಾನುಭೂತಿಯನ್ನಾದರೂ ವ್ಯಕ್ತಪಡಿಸಿದ್ದು ಕಂಡುಬರುವುದಿಲ್ಲ. ಇಂತಹ ದಿವ್ಯಧರ್ಮ, ಭವ್ಯ ಪರಂಪರೆಯ ಮುಖಕ್ಕೆ ಕನ್ನಡಿ ಹಿಡಿಯುವುದೂ ದೈವದ್ರೋಹ ಎಂಬುದನ್ನು ಸಾರುವ ಪುರಾಣ ಪುಣ್ಯಕಥೆಗಳು ಕೇವಲ ಮೇಲುವರ್ಗಗಳ-ವರ್ಣಗಳ ಮುಖವಾಣಿ ಎಂಬ ಖಂಡಿತವಾದವೂ ಕೂಡಾ ಅನ್ಯಾಯವಂತೆ! ಇದನ್ನೆಲ್ಲಾ ಅರ್ಥೈಸಿಕೊಂಡರೆ ಸನಾತನ ನ್ಯಾಯದ ಸ್ವರೂಪ ಏನೆಂಬುದು ಸ್ಪಷ್ಟವಾದೀತು.

ಕೆಲವು ವೈದಿಕ ಋಷಿಗಳು ಇಡೀ ಮನುಕುಲವನ್ನೇ 'ಅಮೃತಸ್ಯ ಪುತ್ರಾಃ'[೨] (ಪ್ರತಿಯೋರ್ವ ಮಾನವನಲ್ಲೂ ದೇವತ್ವದ ಅಂಶವಿದೆ) ಎಂದೂ ಘೋಷಿಸಿದ್ದಾರೆ. ಆದರೂ ಮಾನವನಾದ ಅಸ್ಪೃಶ್ಯನ ಸಾಮಾಜಿಕ, ವೈಯಕ್ತಿಕ ಸ್ಥಿತಿಗತಿಗೆ ಯಾವುದೇ ಬಗೆಯ ಆಶಾದಾಯಕ ಬೆಳಕು ಮೂಡಲಿಲ್ಲ; ಅವನ ಬಗ್ಗೆ ಕಿಂಚಿತ್ ಗೌರವವಾದರೂ ವ್ಯಕ್ತವಾಗಲಿಲ್ಲ.

ಅಸ್ಪೃಶ್ಯ ವ್ಯಕ್ತಿಯು ಎಂತಹ ಉನ್ನತ ವ್ಯಕ್ತಿತ್ವದವನಾದರೂ ಕೂಡಾ 'ಮಾನವ' ಎಂಬಂತಹ ಪ್ರಾಥಮಿಕ ಗೌರವವಾದರೂ ಅವನಿಗೆ ದೊರಕುವುದಿಲ್ಲ! ವೇದಕಾಲೀನ ಮಹಾಋಷಿ ಕದಚ ಕೆಳಜಾತಿಯವನು. ಒಮ್ಮೆ ಅವನು ಎಂದಿನಂತೆ ಇನ್ನಿತರ ಋಷಿಗಳನ್ನು ಕಾಣಲು ಹೋದಾಗ ಅಲ್ಲಿ ಔತಣ ನಡೆಯುತ್ತಿದ್ದಿತು. ಅಲ್ಲಿಯ ಋಷಿಗಳು 'ಇವನು ನಮ್ಮೊಂದಿಗೆ ಊಟಕ್ಕೆಂದೇ ಬಂದ ಎಂದುಕೊಂಡು ಅವನನ್ನು ಮರುಭೂಮಿಗೆ ಅಟ್ಟಿಬಿಟ್ಟರು!'[೩]

ಅಸ್ಪೃಶ್ಯರು ಭಾವಪರವಶರಾಗಿ ಆಲಿಸುವ ರಾಮಾಯಣದಲ್ಲಿಯ ಒಂದು ಘಟನೆ : ತಲೆ ಕೆಳಗಾಗಿ ಮರದ ಕೊಂಬೆಗೆ ನೇತಾಡುತ್ತಾ ತಪಸ್ಸು ಮಾಡುತ್ತಿದ್ದ ಮಹಾತಪಸ್ವಿಯಾದ ಶಂಬುಕನು ಕೆಳಜಾತಿಯವನು ಎಂಬ ಕಾರಣಕ್ಕೆ ಶ್ರೀರಾಮನು ವಸಿಷ್ಠರ ಅಪ್ಪಣೆಯ ಮೇರೆಗೆ ಶಿರಚ್ಛೇದನ ಮಾಡಿಬಿಟ್ಟ! ದ್ವಿಜವೇದಾಧಿಕಾರವನ್ನು ಉಲ್ಲಂಘಿಸಿದ ಎಂಬುದಕ್ಕೆ ಅದು ಶಿಕ್ಷೆ! ಪುರಾಣಗಳಲ್ಲಿ ಮರೆಯಾಗಿಹೋಗಿರುವ ಇಂಥ ನ್ಯಾಯಗಳು ಎಷ್ಟೋ! ನ್ಯಾಯನಿರ್ಣಯಗಳ ಸಂದರ್ಭದಲ್ಲಿ ವ್ಯಕ್ತಿಯ ಅಪರಾಧಕ್ಕಿಂತ ಜಾತಿಯನ್ನೇ ಹೆಚ್ಚು ಗಮನಿಸಲಾಗುತ್ತಿದ್ದಿತು. ಪುರಾಣಗಳ ಸಂದರ್ಭದಲ್ಲಂತೂ 'ಅಸ್ಪೃಶ್ಯ' ಎಂದರೆ 'ಮಾನವ ಜಾತಿಗೇ ಒಂದು ಕಳಂಕ' ಹಾಗೂ 'ಭೂಮಿಗೇ ಭಾರ' ಎಂದು ಪರಿಗಣಿಸಲಾಗಿತ್ತು ಎಂಬುದು ವ್ಯಕ್ತವಾಗುತ್ತದೆ. ಜಾತೀಯತೆಯೇ ಮಾರ್ಗ; ಜಾತೀಯತೆಯೇ ಗುರಿ! ಹೀಗಾಗಿ ಬಹುಸಂಖ್ಯಾತ ಅಸ್ಪೃಶ್ಯರನ್ನು ಅಧಃಪಾತಾಳಕ್ಕೆ ತುಳಿಯಲಾಯಿತು. ಆದ್ದರಿಂದ ಸಮಾಜದಲ್ಲಿ

ಅವನಿಗೆ ಯಾವುದೇ ಬಗೆಯ ನ್ಯಾಯ ಸಿಗದೆ ದೌರ್ಜನ್ಯದ ಶಿಕ್ಷೆಯೇ ಧರ್ಮದ ತಿರುಳಾಯಿತು.

ವೈಚಾರಿಕ ಹಾಗೂ ವೈಜ್ಞಾನಿಕ ನಿಲುವುಗಳಿಗೆ ಸ್ಥಾನಮಾನವೇ ಇಲ್ಲದ ಪುರಾಣಗಳ ಸಂದರ್ಭವು ವೈದಿಕತೆಯ ಪ್ರಭುತ್ವಕ್ಕೆ ಒಳಗಾದದ್ದು ಮಾನವವಿರೋಧಿ ಘಟನೆ ಎಂಬುದರಲ್ಲಿ ಅನುಮಾನವಿಲ್ಲ. ಆಧ್ಯಾತ್ಮಿಕವಾದದೊಂದಿಗೆ ರಾಜೀ ಮಾಡಿಕೊಳ್ಳಲಿಚ್ಛಿಸದ ಲೋಕಾಯತಧರ್ಮ(ದರ್ಶನ)ವನ್ನು ಆಳುವ ವರ್ಗಗಳು ಹಾಗೂ ಪುರೋಹಿತ ಶಾಹಿಯು ಸಾಮಾಜಿಕ ಬಹಿಷ್ಕಾರ ಹಾಗೂ ದೈಹಿಕವಾಗಿ ಕಠಿಣಶಿಕ್ಷೆಗಳಿಗೆ ಗುರಿಮಾಡಿದರು.[೪] ಸ್ಥಾಪಿತ ಧರ್ಮ-ಸಂಸ್ಕೃತಿಯೇ ಇಲ್ಲಿ ಶಾಶ್ವತವಾಗಬೇಕೆಂಬ ಉದ್ದೇಶವು ತನಗೆ ವಿರುದ್ಧವಾದ ಧೋರಣೆಯನ್ನೂ ವೈಚಾರಿಕತೆಯನ್ನೂ ಹತ್ತಿಕ್ಕುವ ಹಂತದಲ್ಲಿ ಲೋಕಾಯತರನ್ನೂ ಅಸ್ಪೃಶ್ಯರನ್ನೂ ನಿರ್ದಾಕ್ಷಿಣ್ಯವಾಗಿ ದಂಡಿಸಿತು. ಆಗಿನ ಆಧ್ಯಾತ್ಮವಾದಿಗಳ ಪ್ರಾಬಲ್ಯ ದಿಂದ ಲೋಕಾಯತರ, ದ್ರಾವಿಡರ, ಅಸ್ಪೃಶ್ಯರ ಇನ್ನಿತರರ ಸ್ಥಿತಿ ಅಧೋಗತಿಗಿಳಿದುದಲ್ಲದೆ ಶಂಬುಕ, ಕದಚರಂಥವರೂ ಅನಾಗರಿಕ ನ್ಯಾಯಕ್ಕೆ ಈಡಾದರು. ಸ್ಥಾಪಿತ ಧಾರ್ಮಿಕ ನ್ಯಾಯದ ವೈಖರಿಯನ್ನು ಎದುರಿಸುವ ಪ್ರಯತ್ನವೂ ಒಂದು ಬಗೆಯ ಮಹಾಪರಾಧವೇ! ಆದ್ದರಿಂದ ಅಸ್ಪೃಶ್ಯರ ಸ್ಥಿತಿಯಂತೂ ಅತ್ಯಂತ ಅಧೋಗತಿಗಿಳಿದು ಹೋಯಿತು. 'ನ್ಯಾಯ' ಎಂಬುದಕ್ಕೆ ಸರ್ವಸಮ್ಮತವಾದ ವ್ಯಾಖ್ಯೆಯೇ ಇಲ್ಲವಾದುದೊಂದು ದುರಂತವೇ! ಅಪರಾಧಿಗಳಿಗೆ ವಿಧಿಸಲಾಗುತ್ತಿದ್ದ ಶಿಕ್ಷೆಯಂತೂ ಧಾರ್ಮಿಕನೀತಿಗೆ ಒಳಪಟ್ಟಿರುತ್ತಿತ್ತು. ಅದನ್ನು ಪ್ರಶ್ನಿಸುವಂತಹ ಅವಕಾಶವಾಗಲೀ ಧೈರ್ಯವಾಗಲೀ ಯಾರಿಗೂ ಇರುತ್ತಿರಲಿಲ್ಲ. ಹೀಗಿರುವಾಗ ಜಾತಿ ಎಂಬುದು ದೈವನಿರ್ಣಯ ಎಂಬಂಥ ಮನೋಭಾವವನ್ನು ಬೆಳೆಸಿದ್ದ ಮೇಲುಜಾತಿಗಳಿಗೆ ಸರ್ವರಿಗೂ ಸಮ್ಮತವಾದ ಒಂದು ನ್ಯಾಯಿಕನೀತಿಯನ್ನು ಅನುಷ್ಠಾನಗೊಳಿಸುವುದಾದರೂ ಹೇಗೆ ಸಾಧ್ಯ? ಅಸ್ಪೃಶ್ಯರು ಪಂಚಾಯಿತಿಕಟ್ಟೆಯ ಮೇಲೆ ಕುಳಿತು ನ್ಯಾಯವಿಚಾರಣೆ ನಡೆಸುವ ಹಕ್ಕು ಅಥವಾ ಅವಕಾಶವನ್ನು ಪಡೆಯದೆ ಕೇವಲ ಅಪರಾಧೀ ಸ್ಥಾನದಲ್ಲಿ ವಿಚಾರಣಾಧೀನ ಕೈದಿಯಂತೆ ನರಳಿದರು. ಕೆಲವು ಪ್ರಾಣಿ-ಕೀಟ ಗಳೂ ಕೂಡಾ ಪ್ರಾಣಾಪಾಯದ ಅಂತಿಮ ಕ್ಷಣದಲ್ಲಿ ಹಿಂತಿರುಗಿ ನಿಂತು ಪ್ರತಿಭಟಿಸುತ್ತವೆ! ಆದರೆ ಅಸ್ಪೃಶ್ಯನೆಂಬ ಮಾನವ ಅಷ್ಟನ್ನೂ ವ್ಯಕ್ತಪಡಿಸಲಿಲ್ಲ! ಅವನನ್ನು ಆ ಸ್ಥಿತಿಗೆ ತಂದದ್ದು ನ್ಯಾಯದ ಭಯ; ಧರ್ಮದ ಭೀತಿ!

ಭಗವಾನ್ ಶ್ರೀಕೃಷ್ಣನು ಭಗವದ್ಗೀತೆಯಲ್ಲಿ 'ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣ ಕರ್ಮ ವಿಭಾಗಶಃ' (ಗುಣ ಕರ್ಮಗಳ ವಿಂಗಡಣೆಗೆ ಅನುಸಾರವಾಗಿ ವರ್ಣಗಳ ವ್ಯವಸ್ಥೆಯು ನನ್ನಿಂದ ಸೃಷ್ಟಿಸಲ್ಪಟ್ಟಿತು) ಎಂದಿದ್ದಾನೆ. ಜಾತಿ ಮತ್ತು ಅಸ್ಪೃಶ್ಯತೆಗಳಿಗೆ ಭಗವಂತನೇ ಕಾರಣೀಭೂತನಾಗಿರುವಾಗ ಪ್ರಶ್ನಿಸುವವರು ಯಾರು? ನ್ಯಾಯ ಎಂಬುದು ವರ್ಣಕ್ಕೆ ತಕ್ಕಂತೆ; ಶಿಕ್ಷೆ ಎಂಬುದು ಅಸ್ಪೃಶ್ಯತೆಗೆ ತಕ್ಕಂತೆ!

ಮನು ಕೂಡಾ ವರ್ಣಕ್ಕೆ ತಕ್ಕಂತೆ ಶಿಕ್ಷೆಯ ವಿಧಾನಗಳನ್ನು ವಿಂಗಡಿಸಿದ್ದಾನೆ. 'ಏಕಜಾತಿರ್ದ್ವಿಜಾತೀಂಸ್ತು ವಾಚಾ ದಾರುಣಯ ಕ್ಷಿಪನ್ | ಜಿಹ್ವಾಯಃ ಪ್ರಾಪ್ನುಯಾಚ್ಛೆದಂ ಜಗನ್ಯಪ್ರಭವೋ ಹಿಸಃ||' (ಉಪನಯನ ಸಂಸ್ಕಾರ ಹೊಂದಲು ಅರ್ಹತೆ ಇಲ್ಲದ ಕೆಳಜಾತಿಯವನು ದ್ವಿಜಾತಿಯವನಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರನ್ನು ಕೆಟ್ಟ ಮಾತು ಗಳಿಂದ ಬೈದರೆ ಕೆಳಜಾತಿಯಲ್ಲಿ ಹುಟ್ಟಿದ ಅವನ ನಾಲಿಗೆಯನ್ನು ಛೇದಿಸತಕ್ಕದ್ದು: ಅಧ್ಯಾಯ ೮; ಶ್ಲೋಕ ೨೭೦).

ಮೇಲುಜಾತಿಯವ ಉದ್ದೇಶಪೂರ್ವಕವಾಗಿಯೇ ಎಸಗಿದ ದೊಡ್ಡ ಅಪರಾಧಕ್ಕೆ ಕನಿಷ್ಠ ಶಿಕ್ಷೆ; ಅಸ್ಪೃಶ್ಯ ಅರಿಯದೆ ಮಾಡಿದ ಸಣ್ಣ ತಪ್ಪಿಗೆ ಗರಿಷ್ಠ ಶಿಕ್ಷೆ! ಇದು ಮನುವಿನ ನ್ಯಾಯ. ಆದ್ದರಿಂದ ಅಸ್ಪೃಶ್ಯರು ಗುರುತರವಾದ ಯಾವುದೇ ಅಪರಾಧ ಎಸಗದಿದ್ದರೂ ಅವನು ಹೀನಜಾತಿಯವನು ಎಂಬ ಏಕೈಕ ಕಾರಣದಿಂದ ಶಿಕ್ಷಿಸಿ ಹಿಂಸಿಸಿರುವುದು ತೀರಾ ಸಾಮಾನ್ಯವಾದ ಸಂಗತಿ. ಇಂತಹ ಸಂದರ್ಭಗಳಲ್ಲಿ ಶಿಕ್ಷೆಗೆ ಗುರಿಯಾದ ಅಸ್ಪೃಶ್ಯನು 'ನ್ಯಾಯ'ದ ಬಗ್ಗೆ ತಿರುಗಿ ದನಿ ಎತ್ತದಂತೆ ನ್ಯಾಯ-ನೀತಿ-ಧರ್ಮಗಳು ಅವನ ದನಿಯನ್ನು ಉಡುಗಿಸಿವೆ. ಹೀಗಾಗಿ ಆಗಿನ ಕಾಲದ ಅಸ್ಪೃಶ್ಯನು ಮಾನವ ಸಹಜ ವ್ಯಕ್ತಿತ್ವವನ್ನೇ ಕಳೆದುಕೊಂಡು ಅಮಾಯಕ ಪಶುವಿನಂತೆ ಬದುಕುತ್ತಿದ್ದ ಎಂಬುದಕ್ಕೆ ಪುರಾಣ ಪುಣ್ಯಕಥೆಗಳ ವಿನ್ಯಾಸವೇ ಸಾಕ್ಷಿ.

ಪೌರಾಣಿಕ ಸ್ವರೂಪವು ಅಪ್ಪಟ ಧಾರ್ಮಿಕವಾದುದು. ಆದ್ದರಿಂದ ಅದು ವಿಧಿಸುತ್ತಿದ್ದ ಶಿಕ್ಷೆಯೂ ಕೂಡಾ ತನ್ನದೇ ಆದ ಚೌಕಟ್ಟಿಗೆ ಸೀಮಿತಗೊಂಡಿತು!

## ಸ್ಮೃತಿೀಯ ನ್ಯಾಯ

ಪುರಾಣ ಪುಣ್ಯಕಥೆಗಳು ದುಸ್ವಪ್ನಗಳಾಗಿ ಅರಿವುಳ್ಳ ಅಸ್ಪೃಶ್ಯನನ್ನು ಬೆಚ್ಚಿಬೀಳಿಸುತ್ತವೆ. ಹಾಗೆಯೇ, ಸ್ಮೃತಿಗಳ ಜಾತಿವಾದವು ಬದುಕನ್ನೇ ತಲ್ಲಣಗೊಳಿಸುತ್ತದೆ. ಜೀವವಿರೋಧೀ ನ್ಯಾಯಗಳಿಂದಾಗಿ ಆತ್ಮಸ್ಥೈರ್ಯವನ್ನೇ ಕಳೆದುಕೊಂಡು, ಬದುಕಿನ ಛಾಪು ಮೂಡಿಸಲಾಗದೆ, ವರ್ಣವ್ಯವಸ್ಥೆಯ ಮುಖ್ಯವಾಹಿನಿಯಿಂದ ಬಹಿಷ್ಕೃತನಾಗಿ, ಊರಿನಿಂದ ಹೊರಗೆ ಕೊಳಕು ಕೊಚ್ಚೆಯಲ್ಲಿ ನೆಲೆಯೂರಿದ ಅವನಿಗೆ ಭವ್ಯ ದಿವ್ಯ ಎಂದೆಲ್ಲಾ ಕೊಂಡಾಡಲ್ಪಟ್ಟ ಯಾವುದೇ ಒಂದು ಅಂಶವೂ ಮಾನವೀಯ ನ್ಯಾಯ ಒದಗಿಸಲಿಲ್ಲ. ಯಾವುದೇ ನ್ಯಾಯ ದಾನದ ಸಂದರ್ಭವೆಂದರೂ ಘೋರಶಿಕ್ಷೆಯ ವಿಷಘಳಿಗೆ ಎಂದೇ ಅರ್ಥ. ಅದರಲ್ಲೂ ಮೇಲುನೋಟಕ್ಕೆ ಮಾನವೀಯತೆಯನ್ನೇ ವ್ಯಕ್ತಪಡಿಸುವಂತಹ ಆಡಳಿತಶಾಹಿ, ಪುರೋಹಿತ ವರ್ಗ ಹಾಗೂ ಸ್ಮೃತಿ-ಗೀತೆಗಳು ಮುಪ್ಪುರಿಗೊಂಡು ಕೆಳವರ್ಗ-ವರ್ಣಗಳ ಸಮುದಾಯ ಗಳನ್ನು ಹಿಂಡಿ ಹಿಪ್ಪೆ ಮಾಡಿದವು. ಇವುಗಳಿಗೆಲ್ಲಾ ಅಪವಾದವೆಂಬಂತೆ ಇದ್ದಿರಬಹುದಾದ ಕೆಲವೇ ಕೆಲವು ಮಾನವೀಯ ಮನಸ್ಸುಗಳು ಪ್ರಬಲ ಶಕ್ತಿಯ ಎದುರು ತರಗೆಲೆಗಳಂತೆ ಹಾರಿಹೋಗಿರಲೂಬಹುದು!

'ಅನ್ಯಾಯದ' ನ್ಯಾಯಕ್ಕೆ ಸಿಲುಕಿ, ನಿರಾಳವಾಗಿ ಉಸಿರಾಡುವ ಅವಕಾಶವನ್ನೂ ಕಳೆದುಕೊಂಡ ಅಸ್ಪೃಶ್ಯರು ಹೇಗೆ ಬದುಕಿದರು? ಹೇಗೆ ಬಾಳಿದರು? ಎಂಬುದೇ ಸೋಜಿಗದ ಸಂಗತಿ! ಎಲ್ಲೆಲ್ಲಿಯೂ 'ನೀನು ಕೆಳಜಾತಿಯವನು, ಹತ್ತಿರ ಬರಬೇಡ, ನನ್ನನ್ನು ಮುಟ್ಟಬೇಡ, ದೂರ ಹೋಗು, ನಾನು ಹೇಳಿದ್ದನ್ನು ಕೇಳು, ತೋರಿಸಿದ್ದನ್ನು ಮಾಡು, ಮಾತಾಡಬೇಡ, ನನ್ನೆದುರು ಉಸಿರೆತ್ತಬೇಡ, ಅದೇ ನಿನ್ನ ಧರ್ಮ, ಅದೇ ನಿನ್ನ ಸ್ವರ್ಗಕ್ಕೆ ದಾರಿ' ಎಂಬಂಥ ನಿಯಂತ್ರಣಗಳನ್ನು ಹೇಗೆ ನಿಭಾಯಿಸಿದ ಎಂಬುದು ಉತ್ತರವಿಲ್ಲದ ಪ್ರಶ್ನೆ.

ಅಸ್ಪೃಶ್ಯರ ಪಾಲಿಗೆ ಪ್ರತಿಗಾಮೀ ಧೋರಣೆಯ ಸ್ಮೃತಿಗಳ ನಿಯಂತ್ರಕಶಕ್ತಿಯೇ ಗಂಡಾಂತರಕಾರಿಯಾದುದು! ಆಗಿನ ಕಾಲದ ಅಘೋಷಿತ (ಸ್ಮೃತೀಯ) ಸಂವಿಧಾನವು ಇಡೀ ಮಾನವ ಸಮೂಹವನ್ನೇ ಸಮರ್ಥವಾಗಿ ಆಳಿತು; ಯಶಸ್ವಿಯಾಗಿ ನಿಯಂತ್ರಿಸಿತು. ರಾಜಶಾಹಿಯು ಬದಲಾದರೂ ಜಾತಿಯ ವ್ಯವಸ್ಥೆಯು ಮಾತ್ರ ಕಿಂಚಿತ್ತೂ ಅಲ್ಲಾಡಲಿಲ್ಲ! ಆಡಳಿತ ಹಾಗೂ ಪುರೋಹಿತಶಾಹಿಯ ಪ್ರಶ್ನಾತೀತವಾದ ಅಧಿಕಾರಿಗಳಿಂದ ಒಡಮೂಡಿದ ಸ್ಮೃತಿಗಳು ಕೆಳಜಾತಿಗಳನ್ನು ತುಳಿದರೂ ಮೇಲುಜಾತಿಗಳ ಹಿತ ರಕ್ಷಿಸುವಲ್ಲಿ ಯಶಸ್ವಿಯಾದವು; ಆ ಜಾತಿಗಳ ಹಿತಾಸಕ್ತಿಯ ಶಾಶ್ವತ ಉಳಿವಿಗಾಗಿ ಸಕಲ ಸವಲತ್ತುಗಳನ್ನು ಕಲ್ಪಿಸಿಕೊಟ್ಟವು. ಇದರಿಂದಾಗಿ ಸೋಮಾರಿ ಸಮುದಾಯಗಳು ಸುಖದ ದಾರಿ ಕಂಡುಕೊಂಡು ಪೂಜನೀಯವಾದವು!

ಸ್ಮೃತಿಗಳಲ್ಲಿ ಮುಖ್ಯವಾದ ಮನುಸ್ಮೃತಿಯು ವರ್ಣಕ್ಕೆ ತಕ್ಕಂತಹ ನ್ಯಾಯ-ಶಿಕ್ಷೆಯ ಆದೇಶ ನೀಡುತ್ತದೆ. ವಿಚಾರಣೆ ಹಾಗೂ ನ್ಯಾಯದಾನದಲ್ಲಿ ಅಪ್ಪಿತಪ್ಪಿಯೂ ಸಮಾನತೆಯನ್ನು ಬೋಧಿಸುವುದಿಲ್ಲ. 'ಬ್ರೂಹೀತಿ ಬ್ರಾಹ್ಮಣಂ ಪ್ರಚ್ಛೇತ್ಸತ್ಯಂ ಬ್ರೂಹೀತಿ ಪಾರ್ಥಿವಂ| ಗೋಬೀಜ ಕಾಂಚನೈರ್ವೈಶ್ಯಂ ಶೂದ್ರಂ ಸರ್ವೈಸ್ತು ಪಾತಕೈ (ಅ ೮; ಶ್ಲೋ ೮೮). ಬ್ರಾಹ್ಮಣ ಸಾಕ್ಷಿದಾರನಿಗೆ 'ಹೇಳು' ಎಂದರೆ ಸಾಕು. ಕ್ಷತ್ರಿಯನಿಗೆ 'ಸತ್ಯವನ್ನು ಹೇಳು', ವೈಶ್ಯನಿಗೆ 'ಗೋವು ಚಿನ್ನಗಳ ಸಾಕ್ಷಿಯಾಗಿ ಹೇಳು', ಶೂದ್ರನಿಗೆ 'ಸತ್ಯ ನುಡಿಯದಿದ್ದರೆ ಪಾಪ ಬರುವುದು. ಆದ್ದರಿಂದ ಸತ್ಯವನ್ನೇ ನುಡಿ' ಎನ್ನಬೇಕು ಎನ್ನುತ್ತಾನೆ ಮನು. ನ್ಯಾಯ ತೀರ್ಮಾನ ಸಂದರ್ಭದಲ್ಲಿ ಹೇಳಿಕೆ ಪಡೆಯುವಲ್ಲೂ ವರ್ಣಭೇದ! ಇಂತಹ ಸಂದರ್ಭಗಳಲ್ಲಿ ಅಸ್ಪೃಶ್ಯನ ಸ್ಥಿತಿ ಏನೆಂಬುದು ಅರ್ಥವಾಗದೆ ಇರದು.

ಕರ್ಮಣಾಪಿ ಸಮಂ ಕುರ್ಯಾದ್ಧನಿಕಾಯಧರ್ಮರ್ಣಿಕಂ |
ಸಮೋರಿವ ಕೃಷ್ಟ ಜಾತಿಸ್ತು ದದ್ಯಾಚ್ಛ್ರೇಯಾರಿಸ್ತು ತಚ್ಛನೈ||

(ಮ.ಸ್ಮೃ; ಅ.೮; ಶ್ಲೋ.೧೭೭)

[ಸಮಾನ ಜಾತಿಯ ಅಥವಾ ಕೆಳಜಾತಿಯ ಸಾಲಗಾರನು ತನ್ನ ಜಾತಿಗೆ ತಕ್ಕುದಾದ ಕೆಲಸ ಮಾಡಿ ಧನಿಕನ ಋಣ ತೀರಿಸಬೇಕು. ಸಾಲಗಾರನು ಮೇಲ್ಜಾತಿಯವನಾದರೆ ಸ್ವಲ್ಪ ಸ್ವಲ್ಪ ಹಣವನ್ನು (ಕಂತಿನ ರೂಪದಲ್ಲಿ) ಹಿಂತಿರುಗಿಸಬೇಕು. ಆದರೆ ಅವನು ಸೇವೆ

ಮಾಡಬಾರದು]. ಪದ ಪದದಲ್ಲೂ ಜಾತೀಯ ವಾಸನೆ ತುಂಬಿರುವ ಇಂತಹ ಶ್ಲೋಕಗಳಲ್ಲಿ ಮಾನವೀಯ ನ್ಯಾಯ ಉಂಟೆ? ಎಂಬಂಥ ಪ್ರಶ್ನೆಗಳು ಮೂಡುವುದು ಸಹಜವೆ!

ಬ್ರಾಹ್ಮಣ, ಕ್ಷತ್ರಿಯ, ವೈಶ್ಯನನ್ನು ಬೈಯ್ದ ಕೆಳಜಾತಿಯವನ ನಾಲಿಗೆಯನ್ನು ಛೇದಿಸಬೇಕು (ಅ ೮ : ಶ್ಲೋ ೨೭೦); ಅಹಂಕಾರದಿಂದ ಬ್ರಾಹ್ಮಣನಿಗೆ ಧರ್ಮವನ್ನು ಬೋಧಿಸುವ ಕೆಳಜಾತಿಯವನಿಗೆ ರಾಜನು ಬಾಯಲ್ಲಿ ಹಾಗೂ ಕಿವಿಯಲ್ಲಿ ಕಾದ ಎಣ್ಣೆಯನ್ನು ಹಾಕಿಸಬೇಕು (ಅ ೮; ಶ್ಲೋ ೨೭೨); ಕೆಳಜಾತಿಯವನು ಮೇಲುಜಾತಿಯವನಿಗೆ ಕೈಯಲ್ಲಿ ಹೊಡೆದರೆ ಆ ಕೈಯನ್ನು ಕತ್ತರಿಸಬೇಕು. ಕಾಲಿನಿಂದ ಹೊಡೆದರೆ ಆ ಕಾಲನ್ನು ಕತ್ತರಿಸಬೇಕು (ಅ ೮; ಶ್ಲೋ ೨೮೦); ಬ್ರಾಹ್ಮಣನ ಜೊತೆಗೆ ಒಂದೇ ಆಸನದಲ್ಲಿ ಕುಳಿತ ಅಂತ್ಯಜನಿಗೆ ಸೊಂಟದಲ್ಲಿ ಬರೆ ಎಳೆದು ಊರಿನಿಂದ ಹೊರಕ್ಕೆ ಹಾಕಬೇಕು. ಇಲ್ಲವೇ ಕುಂಡೆಯನ್ನೇ ಕೊಯ್ದು ಹಾಕಬೇಕು. ಆದರೆ ಅವನು ಸಾಯಬಾರದು (ಅ ೮ ; ಶ್ಲೋ ೨೮೧); ಬ್ರಾಹ್ಮಣನಿಗೆ ಜ್ಞಾನಸಂಪಾದನೆಯೇ ತಪಸ್ಸು; ಕ್ಷತ್ರಿಯನಿಗೆ ಪ್ರಜಾರಕ್ಷಣೆಯೇ ತಪಸ್ಸು; ವೈಶ್ಯನಿಗೆ ವ್ಯಾಪಾರವೇ ತಪಸ್ಸು; ಶೂದ್ರಾತಿಶೂದ್ರನಿಗೆ ಸೇವೆಯೇ ತಪಸ್ಸು (ಅ ೧೧; ಶ್ಲೋ ೨೩೫); ಬ್ರಾಹ್ಮಣ ಸ್ತ್ರೀಯನ್ನು ಭೋಗಿಸಿದ ಶೂದ್ರನನ್ನು ಹುಲ್ಲಿನ ಬಣವೆಯಲ್ಲಿಟ್ಟು ಬೆಂಕಿ ಹಚ್ಚಬೇಕು (ಅ ೮; ಶ್ಲೋ ೩೭೭); ಶೂದ್ರನು ಸಂಬಳಕ್ಕೆ ಗೊತ್ತು ಮಾಡಿಕೊಂಡವನಾಗಿರಲಿ ಅಥವಾ ಇಲ್ಲದಿರಲಿ ಅಂತಹ ಕೆಳಜಾತಿಯವನಿಂದ ಬ್ರಾಹ್ಮಣನು ತನ್ನ ಸೇವೆಯನ್ನು ಮಾಡಿಸಿಕೊಳ್ಳಬೇಕು. ಏಕೆಂದರೆ ಅವನು ಬ್ರಹ್ಮನಿಂದ ಸೃಷ್ಟಿಸಲ್ಪಟ್ಟಿರುವುದೇ ಬ್ರಾಹ್ಮಣನ ಸೇವೆಗಾಗಿ (ಅ ೮; ಶ್ಲೋ ೪೧೩); ರಾಜನು ಕೆಳಜಾತಿಯವರಿಂದ ಸೇವೆ ಮಾಡಿಸಬೇಕು. ಇಲ್ಲವಾದರೆ ಜಗತ್ತಿನ ತುಂಬಾ ಕೋಲಾಹಲ ಉಂಟಾಗುತ್ತದೆ (ಅ ೮ ; ಶ್ಲೋ ೪೧೮); ನ್ಯಾಯತೀರ್ಮಾನದ ಸಂದರ್ಭದಲ್ಲಿ ಅಸ್ಪೃಶ್ಯನಿಗೆ ಸಾಕ್ಷಿಹೇಳುವ ಅಧಿಕಾರವಿಲ್ಲ (ಅ ೮; ಶ್ಲೋ ೬೬); ಬ್ರಾಹ್ಮಣನು ಕ್ಷತ್ರಿಯನನ್ನು ಬೈದರೆ ಐವತ್ತು ಪಣಗಳ ದಂಡ. ವೈಶ್ಯವನ್ನು ಬೈಯ್ದರೆ ಇಪ್ಪತ್ತು ಪಣಗಳ ದಂಡ. ಶೂದ್ರನನ್ನು ಬೈದರೆ ಹನ್ನೆರಡು ಪಣಗಳ ದಂಡ (ಅ ೮; ಶ್ಲೋ ೨೬೮). ಅಸ್ಪೃಶ್ಯನನ್ನು ಬೈಯ್ದರೆ...? ದಂಡವೇ ಇಲ್ಲವೇನೋ! ಇದು ಮನುಸ್ಮೃತಿಯ ಮಾದರಿ!

ಬೃಹಸ್ಪತಿಯ ನ್ಯಾಯವೈಖರಿಯೂ ಹಾಗೆಯೇ! ಇಬ್ಬರ ನಡುವೆ ಬೈಯ್ದಾಟ ನಡೆದಿದ್ದರೆ, ಅವರು ಸಮಾನ ಜಾತಿಯವರಾಗಿದ್ದರೆ ಶಿಕ್ಷೆ ಇಬ್ಬರಿಗೂ ಸಮಾನವಾಗಿರುತ್ತದೆ. ಒಬ್ಬನು ಇನ್ನೊಬ್ಬನಿಗಿಂತ ಕೀಳುಜಾತಿಯವನಾಗಿದ್ದರೆ ಅವನಿಗೆ ಶಿಕ್ಷೆ ದ್ವಿಗುಣವಾಗಬೇಕು (೨೦.೫). ವೈಶ್ಯನನ್ನು ಶೂದ್ರನು ನಿಂದಿಸಿದರೆ ಸಾಮಾನ್ಯ ದಂಡ. ಅದೇ ಕ್ಷತ್ರಿಯನನ್ನು ನಿಂದಿಸಿದರೆ ಮಧ್ಯಮ ದಂಡ. ಬ್ರಾಹ್ಮಣನನ್ನು ನಿಂದಿಸಿದರೆ ಅತಿ ಹೆಚ್ಚಿನ ದಂಡ ವಿಧಿಸಬೇಕು (೨೦.೧೧).

ಜಾತೀಯತೆಯನ್ನೂ ಶೋಷಣೆಯನ್ನೂ ಪೋಷಿಸುವಲ್ಲಿ ನಾರದನೂ ಹಿಂದೆ ಬಿದ್ದವನಲ್ಲ. ದಾಸರು ದಾಸ್ಯದಿಂದ ವಿಮುಕ್ತರಾಗುವಂತಿಲ್ಲ. ವಿಮುಕ್ತಿ ಎಂಬುದು ಯಜಮಾನನ ಕೃಪೆಯನ್ನವಲಂಬಿಸಿದೆ. ದಾಸ್ಯವು ವಂಶಪಾರಂಪರ್ಯವಾಗಿ ಬಂದದ್ದು (೫.೨೯). ಪರತಂತ್ರವು ದಾಸರಿಗೆ ಸಹಜ. ಆದರೆ ಅವರವರ ಸ್ಥಾನ ಮತ್ತು ವರಮಾನಗಳು, ಅವರವರ ಜಾತಿಯಿಂದ ತೀರ್ಮಾನಿಸಲ್ಪಡುತ್ತವೆ (೫-೪).

'ಚಾಂಡಾಲರು' ಎಂದೂ ಅವಮಾನಿಸಲ್ಪಡುವ ಅಸ್ಪೃಶ್ಯರ ಬಗ್ಗೆ ಗೌತಮನ ಕೆಲವು ನ್ಯಾಯ-ಶಿಕ್ಷೆಗಳು : ಬ್ರಾಹ್ಮಣನನ್ನು ಕೊಂದವನು ಚಂಡಾಲನಿಗೆ ಸಮಾನ. ಚಂಡಾಲರು ಮೇಲಿನ ಮೂರುವರ್ಣದವರಿಗೆ ದಾರಿಬಿಟ್ಟುಕೊಡಬೇಕು. ಆತ ಊರಿನ ಹೊರಗೆ ವಾಸಿಸಬೇಕು. ಚಂಡಾಲನನ್ನು ಯಾರೂ ಮುಟ್ಟಬಾರದು. ಚಂಡಾಲನ ಮನೆಯಲ್ಲಿ ಬ್ರಾಹ್ಮಣ ಉಂಡರೆ ಆತ ಬಹಿಷ್ಕೃತನಾಗುತ್ತಾನೆ, ಅಂದರೆ ಅವನೂ ಚಂಡಾಲನಾಗುತ್ತಾನೆ. ಗೃಹಸ್ಥನು ಊಟ ಮಾಡಿದ ನಂತರ ನಾಯಿ ಕಾಗೆಗಳಿಗೆ ಆಹಾರ ಎಸೆಯುವಾಗ ಚಂಡಾಲರಿಗೂ ಎಸೆಯಬೇಕು. ಚಂಡಾಲರು ಬಳಸಿದ ಪಾತ್ರೆಗಳನ್ನು ಯಾರೂ ಮುಟ್ಟಬಾರದು ಇತ್ಯಾದಿ.

ಸ್ಮೃತಿಕಾರರಲ್ಲಿ ಯಾರೂ ವರ್ಣಭೇದವನ್ನು ಅಲ್ಲಗಳೆದಿಲ್ಲ. ಎಲ್ಲರೂ ವರ್ಣಾಶ್ರಮ ಧರ್ಮವನ್ನು ಬೆಂಬಲಿಸಿದವರೇ. ಅಸ್ಪೃಶ್ಯನೂ ಕೂಡಾ ಎಲ್ಲರಂತೆ ಮನುಷ್ಯನೇ. ಅವನಿಗೂ ನೋವು ಸಂಕಟಗಳಿವೆ. ಬದುಕಬೇಕೆಂಬ ಅಕಾಂಕ್ಷೆಗಳಿರುತ್ತವೆ. ಅವನೂ ನಮ್ಮಂತೆಯೇ ಬಾಳಲಿ. ಸಮಾಜದಲ್ಲಿ ಅವನಿಗೂ ಸಮಾನತೆಯ ನ್ಯಾಯ ಸಿಗಲಿ... ಎಂಬಂಥ ಕೆಲವೇ ಕೆಲವು ಗೌರವದ ಅಥವಾ ಅನುಕಂಪದ ಮಾತುಗಳನ್ನಾಡಿದ್ದರೂ ಕೂಡಾ ಸ್ಮೃತಿಗಳ ಮೇಲಿನ ವ್ಯಾಖ್ಯೆಯೇ ಬದಲಾಗುತ್ತಿತ್ತು; ಅಂತಹ ಶ್ಲೋಕಗಳು ಅಸ್ಪೃಶ್ಯತೆಯ ಸಂದರ್ಭಕ್ಕೆ ಮುತ್ತಿನಮಣಿಗಳಂತೆ ಮಾದರಿಯಾಗಿ ಕಂಗೊಳಿಸುತ್ತಿದ್ದವು. ನ್ಯಾಯತೀರ್ಮಾನಗಳ ಸಂದರ್ಭಗಳಲ್ಲಿ ಅಸ್ಪೃಶ್ಯನ ಪಾಲಿನ ಶಿಕ್ಷೆಯ ಸ್ವರೂಪ ತಕ್ಕಮಟ್ಟಿಗಾದರೂ ಮೃದುವಾಗುತ್ತಿದ್ದಿತು!

ಅಸ್ಪೃಶ್ಯನನ್ನು ಹತ್ತಿಕ್ಕಲು ಸ್ಮೃತಿಗಳು ಸಾಧ್ಯವಾದ ಎಲ್ಲಾ ಆದೇಶಗಳನ್ನೂ ಹೊರಡಿಸಿವೆ. ನ್ಯಾಯ ಮತ್ತು ಶಿಕ್ಷೆಯ ವಿಷಯದಲ್ಲಿ ಸ್ಮೃತಿಕಾರರೆಲ್ಲರದೂ ಸಮಾನ ಅಭಿರುಚಿಯೇ! 'ನ್ಯಾಯತೀರ್ಮಾನದ ಬ್ರಾಹ್ಮಣನೊಬ್ಬನು ರಾಜನಿಗೆ ಸಿಗದಿದ್ದರೆ ಅವನು ಧರ್ಮಶಾಸ್ತ್ರದಲ್ಲಿ ನಿಪುಣನಾದ ಒಬ್ಬ ಕ್ಷತ್ರಿಯನನ್ನೋ ವೈಶ್ಯನನ್ನೋ ನೇಮಿಸಿಕೊಳ್ಳಬೇಕು. ಆದರೆ ಕೆಳಜಾತಿಯವನನ್ನು ನ್ಯಾಯಮೂರ್ತಿಯನ್ನಾಗಿ ನೇಮಿಸುವುದನ್ನು ಎಚ್ಚರಿಕೆಯಿಂದ ತಪ್ಪಿಸಬೇಕು (ಕಾತ್ಯಾಯನ : ೬೭). ನ್ಯಾಯವನ್ನು ಕೋರಿ ಬರುವ ಮೊಕದ್ದಮೆಗಳನ್ನು ರಾಜನು ತಾನೇ ಸ್ವತಃ ತೀರ್ಮಾನಿಸಲು ಸಾಧ್ಯವಾಗದಿದ್ದರೆ ಅವನು ಬೇರೆ ಬೇರೆ ಶಾಸ್ತ್ರಗಳಲ್ಲಿ ನಿಷ್ಣಾತನಾದ ಬ್ರಾಹ್ಮಣನನ್ನು ನೇಮಿಸಿಕೊಳ್ಳಬೇಕು (ಕಾತ್ಯಾಯನ : ೬೩).

'ಸ್ಮೃತಿ' ಎಂದರೆ ಬ್ರಾಹ್ಮಣನ ಹಿತವನ್ನೂ ಅಸ್ಪೃಶ್ಯನ ಅಹಿತವನ್ನೂ ಬೋಧಿಸುವುದು ಎಂದು ಅರ್ಥ! ನ್ಯಾಯತೀರ್ಮಾನದ ವಿಷಯದಲ್ಲೂ ಹಾಗೆಯೇ. ಇಂತಹ ತರತಮ ಬಹುಶಃ ಬೇರೆ ಯಾವ ಧರ್ಮಗಳಲ್ಲೂ ಕಂಡುಬರುವುದಿಲ್ಲ. ಸಾವಿರಾರು ವರ್ಷಗಳಿಂದ ಮಾತು ಕೃತಿಗಳಲ್ಲಿ ಸ್ಮೃತಿ-ಗೀತೆಗಳ ಧೋರಣೆಯೇ ತುಂಬಿ ತುಳುಕಿವೆ; ತಾನೇ ತಾನಾಗಿ ಮೆರೆದಾಡಿವೆ. ಇದನ್ನೆಲ್ಲಾ ಸಹಿಸಿಕೊಂಡ ಅಸ್ಪೃಶ್ಯರ ಬಗ್ಗೆ ಭಗವಾನ್ ಬುದ್ಧನ ವಿನಾ ಯಾವ ಪುರಾಣಪುರುಷನೂ ಆದರ ಅನುಕಂಪ ವ್ಯಕ್ತಪಡಿಸಿದ ಉದಾಹರಣೆಗಳು ದೊರಕುವುದಿಲ್ಲ. ಮನು, ನಾರದ, ಬೃಹಸ್ಪತಿ, ಗೌತಮ, ಕೌಟಿಲ್ಯ, ಯಾಜ್ಞವಲ್ಕ್ಯ, ಕಾತ್ಯಾಯನ ಮೊದಲಾದವರೆಲ್ಲಾ ಶೂದ್ರ ಹಾಗೂ ಅಸ್ಪೃಶ್ಯರನ್ನು ಧಾರ್ಮಿಕವಾಗಿ ತುಳಿದವರೇ. ತುಳಿಯುವ ವಿಷಯದಲ್ಲಿ ಅವರೆಲ್ಲರೂ ಸಮಾನ ನಿಲುವು ಉಳ್ಳವರಾಗಲು ಜಾತೀಯತೆಯೇ ಜೀವಾಳವಾದ ಧರ್ಮಾಂಧತೆಯೂ ಒಂದು ಮುಖ್ಯ ಕಾರಣ ಎಂಬುದರಲ್ಲಿ ಸಂದೇಹವಿಲ್ಲ. ಇಂತಹ ಪ್ರತಿರೋಧದ ಬಗ್ಗೆ ಅಸ್ಪೃಶ್ಯನು ತನ್ನ ದೈಹಿಕ ಸಾಮರ್ಥ್ಯಕ್ಕೆ ತಕ್ಕಂತೆಯಾದರೂ ಯಾರನ್ನೂ ನೋಯಿಸಿದವನಲ್ಲ; ಯಾವುದೇ ಬಗೆಯ ಸೇಡಿಗಾಗಿ ಪ್ರಯತ್ನಿಸಿದವನಲ್ಲ. ವೈದಿಕಧರ್ಮವನ್ನು ಕಟುವಾಗಿ ವಿರೋಧಿಸಿದವನೂ ಅಲ್ಲ. ವ್ಯವಸ್ಥೆಯ ವಿರುದ್ಧ ಮಸಲತ್ತು ನಡೆಸಿದವನಲ್ಲ. ತನ್ನ ಸ್ಥಿತಿ ಗತಿಯೆಲ್ಲಾ ಪ್ರಕೃತಿಧರ್ಮದ ಪರಿಣಾಮವೇ ಇರಬಹುದು ಅಂದುಕೊಂಡನೇನೋ! ಆದರೂ ಸ್ಮೃತಿ-ಗೀತೆಗಳು ಗುಂಡು ಬಂಡೆಗಳಂತೆ ಅವನ ಮೇಲೆರಗಿದ್ದುದರ ಬಗ್ಗೆ ಯಾರಿಗೂ ಅನ್ಯಾಯ ಎನಿಸಲಿಲ್ಲವೆ?

ಮನು ಎಂಬ ವ್ಯಕ್ತಿ ಎಂದೋ ಸ್ವರ್ಗಸ್ಥನಾದರೂ ಆತನ ಆತ್ಮ ಸಂಪ್ರದಾಯವಾದಿಗಳಲ್ಲಿ ಜೀವಂತವಾಗಿ ಉಳಿದುಬಿಟ್ಟಿದೆ! ಒಂದು ಅರ್ಥದಲ್ಲಿ ಆತ ಚಿರಂಜೀವಿ!

### ರಾಜಶಾಹಿ ನ್ಯಾಯ

ಸಾಂಪ್ರದಾಯಿಕ ನೀತಿಯ ಪ್ರಕಾರ ರಾಜನು ಪ್ರಜೆಗಳಿಗೆ ತಂದೆಯ ಸಮಾನ. ಅಂದಹಾಗೆ ಪ್ರಜೆಗಳು ಅವನಿಗೆ ಮಕ್ಕಳ ಸಮಾನ. ಪ್ರಜೆಗಳೆಲ್ಲರ ಹಿತ ಕಾಪಾಡುವುದು ರಾಜನ ಆದ್ಯ ಕರ್ತವ್ಯ. ಇದು ಧಾರ್ಮಿಕನ್ಯಾಯವೂ ಹೌದು; ನೈತಿಕನ್ಯಾಯವೂ ಹೌದು. ಈ ಸಾಮಾನ್ಯ ನ್ಯಾಯವನ್ನು ಯಾವ ರಾಜ ಮಹಾರಾಜರಾದರೂ ಪ್ರಾಮಾಣಿಕವಾಗಿ ಪಾಲಿಸಿದ್ದಾರೆಯೆ? ಧಾರ್ಮಿಕನ್ಯಾಯವನ್ನು ಅನುಸರಿಸಿದ ಉದಾಹರಣೆಗಳಿದ್ದರೂ ಅವರು ಮೇಲುವರ್ಗದ ಪ್ರಜೆಗಳಂತೆಯೇ ಕೆಳಜಾತಿಯ ಜನರನ್ನೂ ನೋಡಿಕೊಂಡರೆ? ಅಂತಹ ಸಾತ್ವಿಕ ಸಿಂಹಾಸನಾಧೀಶ್ವರರ ಹೆಸರು ಉದಾಹರಣೆಗೂ ದೊರಕುವುದಿಲ್ಲ. ಬಹುಪಾಲು ರಾಜ ಮಹಾರಾಜರುಗಳು ಹೊಗಳುಭಟ್ಟರಿಂದ ಹೊಗಳಲ್ಪಟ್ಟವರೇ; ಉತ್ಪ್ರೇಕ್ಷಿಸಲ್ಪಟ್ಟವರೇ! ಭಟ್ಟಂಗಿಗಳ ದನಿಯ ಪ್ರಕಾರ ಮೇಲುಜಾತಿಯವರು ಮಾತ್ರವೇ ಪ್ರಜೆಗಳು! ಕೆಳಜಾತಿಯವರು ಪ್ರಜೆಗಳ ಪಟ್ಟಿಗೆ ಸೇರುವುದಿಲ್ಲ; ಅವರು ಕೇವಲ ಊರ ಹೊರಗಿನ 'ಜನ' ಮಾತ್ರ! ಈ ಜನರಿಗೆ ಸವಲತ್ತು, ಸೌಕರ್ಯ, ಅನುಕಂಪ ಇತ್ಯಾದಿಗಳೆಲ್ಲಾ ಏಕೆ!

ಅಸ್ಪೃಶ್ಯರ ಸ್ಥಿತಿ-ಗತಿಯು ಯಾರ ಕಣ್ಣಿಗೂ ಬೀಳದ ಸಂಗತಿಯೇನೂ ಅಲ್ಲ. ಊರಿಗೆ ಅಲ್ಪಸಂಖ್ಯಾತರಾದರೂ ದೇಶದ ಲೆಕ್ಕದಲ್ಲಿ ಬಹುಸಂಖ್ಯಾತರಾದ ಕೆಳಜಾತಿ ಜನರ ದುಸ್ಥಿತಿಯ ಬಗ್ಗೆ ಯಾವ ಪ್ರಜಾಪಾಲಕನೂ ಗಮನ ಹರಿಸಲಿಲ್ಲ. ಜಾತಿಗಳ ಇಕ್ಕಟ್ಟಿನಲ್ಲಿ ನಜ್ಜುಗುಜ್ಜಾಗಲು ರಾಜ ಮಹಾರಾಜರು ಪರೋಕ್ಷ ಪ್ರೇರಣೆ ನೀಡಿದರು! ಯಜ್ಞ, ಯಾಗ, ವಿವಾಹ, ವಿಜಯೋತ್ಸವ ಮೊದಲಾದ ಅರಮನೆಗೆ ಸಂಬಂಧಿಸಿದ ಸಂಭ್ರಮದ ಸಂದರ್ಭಗಳಲ್ಲಿ ಪುರೋಹಿತರಿಗೆ, ಮಂತ್ರಿಮಹೋದಯರಿಗೆ, ಪುರಪ್ರಮುಖರಿಗೆ, ಮೇಲುಜಾತಿಯವರಿಗೆ ಭೂರಿಭೋಜನದೊಂದಿಗೆ ಗೌರವದ ಕಾಣಿಕೆ, ನೆನಪಿನ ಕೊಡುಗೆ, ಭಕ್ಷೀಸು, ದಾನ ಮೊದಲಾದವುಗಳೊಂದಿಗೆ ಆದರಾತಿಥ್ಯ! ಅಂತಹ ಸ್ಥಳಗಳಲ್ಲಿ ಸುಳಿದಾಡಲೂ ಅಸ್ಪೃಶ್ಯರಿಗೆ ಅವಕಾಶವಿತ್ತೋ ಇಲ್ಲವೋ!

ಗೌತಮನ ಆದೇಶದ ಪ್ರಕಾರ, 'ಸವರ್ಣೀಯರು ಊಟ ಮಾಡಿದ ನಂತರ ನಾಯಿ ಕಾಗೆಗಳಿಗೆ ಆಹಾರ ಎಸೆಯುವಾಗ ಚಂಡಾಲರಿಗೂ ಎಸೆಯಬೇಕು.' ಈ ಬಗೆಯ ನ್ಯಾಯ ಮನೆಗಳಿಂದ ಅರಮನೆಯವರೆಗೂ ಸಾಮಾನ್ಯವಾಗಿತ್ತು.

ಜನರ ಕಾಟ, ರಾಜರ ಅಂಕೆಯಿಂದ ಅಸ್ಪೃಶ್ಯ ಗುಡಿಸಲುಗಳು ನಡುಗುತ್ತಿದ್ದವು. ರಕ್ಷಿಸಬೇಕಾದ ರಾಜನೇ ನಿರ್ಲಕ್ಷ್ಯ ತೋರಿದರೆ ಹಳ್ಳಿಗಾಡುಗಳಲ್ಲಿಯ ಅಸ್ಪೃಶ್ಯರ ಆರ್ತನಾದವನ್ನು ಯಾರು ಕೇಳಬೇಕು! ಪ್ರಾಂತ್ಯಾಧಿಕಾರಿಗಳ ಆಜ್ಞೆ-ಆದೇಶಗಳ ಜತೆಗೆ ಸ್ಥಳೀಯ ಗೌಡ, ಶಾನುಭೋಗ, ಸಾಹುಕಾರ ಮೊದಲಾದವರ ಸ್ವೇಚ್ಛಾಚಾರದ ನ್ಯಾಯದಿಂದಾಗಿ ಅಸ್ಪೃಶ್ಯರು ಬದುಕಿ ಉಳಿಯಲು ಹೀನ ಕಸುಬು, ಅಸಹ್ಯಕರ ಸೇವೆಗಳಿಗೆ ಇಳಿಯುವುದರೊಂದಿಗೆ ಜೀತಕ್ಕೂ ಸಿಲುಕಿದರು; ವಂಶಪಾರಂಪರ್ಯ ದಾಸ್ಯಕ್ಕೂ ಒಳಗಾದರು. ರಾಜಶಾಹಿ ಬದಲಾದರೂ ಮೇಲು ಹಾಗೂ ಕೆಳಜಾತಿಯ ಸ್ಥಿತಿ ಮಾತ್ರ ಯಥಾ ರೀತಿ. ತ್ರೇತಾಯುಗದಿಂದ ಕಲಿಯುಗದವರೆಗೆ, ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ಬದಲಾಗದೆ ಇದ್ದುದೆಂದರೆ ಜಾತಿವ್ಯವಸ್ಥೆ ಮಾತ್ರ! ಅಮೋಘವಾದ ಈ ವ್ಯವಸ್ಥೆಯೇ ರಾಜಶಾಹಿನ್ಯಾಯವಾಗಿ ಪರಿಣಮಿಸಿ, ನಿರ್ಲಕ್ಷ್ಯ ಹಾಗೂ ತುಳಿಯುವಿಕೆಗಳೇ ಅಸ್ಪೃಶ್ಯನ ಪಾಲಿಗೆ ನಿರಂತರ ಶಿಕ್ಷೆಗಳಾದವು!

ತಪ್ಪುಮಾಡಿದ ಅಸ್ಪೃಶ್ಯನಿಗೆ ಸಭಾಂಗಣ ಅಥವಾ ನ್ಯಾಯಾಂಗಣಗಳಿಗೆ ಪ್ರವೇಶ ಇರುತ್ತಿರಲಿಲ್ಲ. ಅವನ ಅನುಪಸ್ಥಿತಿಯಲ್ಲಿಯೇ ವಿಚಾರಣೆ ನಡೆಯುತ್ತಿತ್ತು. ಅವನ ಪರವಾಗಿ ಮಾತನಾಡುವವರಾದರೂ ಯಾರು?

### ಇತಿಹಾಸದ ನ್ಯಾಯ

ಇತಿಹಾಸವು ಮಾನವನ ಸ್ಥಿತಿ-ಗತಿಯನ್ನು ತಕ್ಕಮಟ್ಟಿಗೆ ವಿಶದೀಕರಿಸುತ್ತದೆ. ಈ ದೇಶದ ಇತಿಹಾಸವೆಂದರೆ ರಾಜಾಶ್ರಯದಲ್ಲೇ ಇದ್ದ ಇತಿಹಾಸಕಾರರು ದಾಖಲಿಸಿದ ರಾಜ ಮಹಾರಾಜರನ್ನು ಕುರಿತದ್ದು ಮಾತ್ರವೇ ಎನ್ನಲಾಗಿದೆಯಾದರೂ ಆಡಳಿತದ ಪೊಳಹುಗಳಿಂದ

ಪ್ರಜೆಗಳ ಹಾಗೂ ಅಸ್ಪೃಶ್ಯರ ಬದುಕು ಹೇಗಿದ್ದಿರಬಹುದು ಎಂಬುದನ್ನು ಸ್ವಲ್ಪಮಟ್ಟಿಗಾದರೂ ಕಲ್ಪಿಸಿಕೊಳ್ಳಬಹುದು.

ಕ್ರಿ.ಶ.ಸುಮಾರು ೩೦೦ ರಿಂದ ೫೦೦ರ ವರೆಗಿನ ಗುಪ್ತ ಸಾಮ್ರಾಜ್ಯದಲ್ಲಿ ಅಸ್ಪೃಶ್ಯರ ಬದುಕು ತುಂಬಾ ಅಧೋಗತಿಯಲ್ಲಿತ್ತು ಎನ್ನಲಾಗಿದೆ. ಆ ಕಾಲದಲ್ಲಿ ಬ್ರಾಹ್ಮಣರಿಗೆ ಮಾತ್ರ ತುಂಬು ಪ್ರಾಧಾನ್ಯತೆ.[೫] ಇತಿಹಾಸದ ಪುಟಗಳಲ್ಲಿ ರಾಜಕೀಯ-ಸಾಮಾಜಿಕ-ಧಾರ್ಮಿಕ ಕ್ರಾಂತಿಗಳು ಜರುಗಿವೆ. ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕಾದಂತಹ ಘಟನೆಗಳೂ ಸಂಭವಿಸಿರಬಹುದು. ಇವುಗಳ ಮಧ್ಯೆ ಮಧ್ಯೆ ರಾಜ್ಯ-ಸಿಂಹಾಸನ-ಅಧಿಕಾರ-ಆಸ್ತಿ-ಮಾನಿನಿಯರು ಮೊದಲಾದವುಗಳ ಬಗ್ಗೆ ತಿಕ್ಕಾಟ ಹಾಗೂ ಘನಘೋರ ಯುದ್ಧಗಳೂ ಜರುಗಿವೆ. ವಿದೇಶಿಯರು ನುಗ್ಗಿಬಂದು ಸಂಸ್ಥಾನಗಳನ್ನು ಆಕ್ರಮಿಸಿಕೊಂಡಿದ್ದಾರೆ. ಮುಸ್ಲಿಂ, ಕ್ರೈಸ್ತ, ಸಿಖ್ ಮೊದಲಾದ ಧರ್ಮಗಳೂ ಬೆಳೆದುನಿಂತಿವೆ. ಜಗದ್ಗುರು- ಧರ್ಮ ಗುರುಗಳ ಮಠ-ಮಾನ್ಯಗಳು ಹುಟ್ಟಿಕೊಂಡಿವೆ. ಮಾನವನ ಒಳಿತಿಗಾಗಿ, ಸಮಾಜದ ಸ್ವಾಸ್ಥ್ಯಕ್ಕಾಗಿ ಹಲವಾರು ಮಹಾನುಭಾವರು ಬದುಕನ್ನು ಸವೆಸಿದ್ದಾರೆ. ಶ್ರಮಜೀವಿಗಳ ಶ್ರಮವೂ ಸಮಾಜಕ್ಕೆ ಸಂದಾಯವಾಗಿದೆ. ಅದೇ ಶ್ರಮಜೀವಿಗಳಾದ ಅಸ್ಪೃಶ್ಯರ ಸ್ವಾಸ್ಥ್ಯಕ್ಕೆ ತಕ್ಕಂತಹ ನ್ಯಾಯ ಮಾತ್ರ ಆಶ್ಚರ್ಯಕರ ಎಂಬ ರೀತಿಯಲ್ಲೂ ದೊರಕಲಿಲ್ಲ!

ಈ ದೇಶದಲ್ಲಿ ವೈವಿಧ್ಯಮಯವಾದ ಸಂಸ್ಕೃತಿ, ವಿವಿಧ ಭಾಷೆಗಳು, ಹಲವಾರು ಬಗೆಯ ಉಡುಪು-ತೊಡುಪು, ಆಹಾರ ಪದ್ಧತಿಗಳು ಕಂಡುಬಂದರೂ ಅಸ್ಪೃಶ್ಯತಾಚರಣೆಯಲ್ಲಿ ಮಾತ್ರ ಯಾವುದೇ ವ್ಯತ್ಯಾಸ ಕಂಡುಬರುವುದಿಲ್ಲ! ಇದೊಂದು ವಿಶೇಷ. 'ವಿವಿಧತೆಯಲ್ಲಿ ಏಕತೆ' ಎಂಬುದರ ಬದಲು 'ಏಕತೆಯಲ್ಲಿ ವಿವಿಧತೆ' ಎಂಬುದೇ ಸರಿ ಎನಿಸುತ್ತದೆ.

೧೧ನೇ ಶತಮಾನದ ಮುಸ್ಲಿಂಪ್ರವಾಸಿ ಆಲ್‌ಬರೂನಿಯು, 'ನಾನು ಶುದ್ಧ.ನೀನು ಅಶುದ್ಧ. ನೀನು ನನ್ನನ್ನು ಮುಟ್ಟಬಾರದು; ನೀನು ಮುಟ್ಟಿದ ನೀರನ್ನು ನಾನು ಕುಡಿಯ ಲಾರೆ ಎಂಬ ಸಾಮಾಜಿಕ(ಅ)ನ್ಯಾಯ ಭಾರತದಲ್ಲಿ ಜಾರಿಯಲ್ಲಿದೆ' ಎಂದಿದ್ದಾನೆ. ಇಂಥ ಉದಾಹರಣೆಗಳು ಇತಿಹಾಸದ ಪುಟಗಳಲ್ಲಿ ಎಷ್ಟೋ!

೧೨ನೇ ಶತಮಾನದಲ್ಲಿ ಬಸವಣ್ಣನವರು ಅಸ್ಪೃಶ್ಯರಲ್ಲಿ ಆತ್ಮಸ್ಥೈರ್ಯವನ್ನು ಮೂಡಿಸಿದರು. ಆ ಕಾಲದಲ್ಲಿ ಜಾತಿ ಹಾಗೂ ಅಸ್ಪೃಶ್ಯತೆಯ ಬಗ್ಗೆ ಚಕಾರ ಎತ್ತಲಾಯಿತು. ಕೆಲವು ಕೆಳಜಾತಿಯ ವಚನಕಾರರು ಬೆಳಕಿಗೆ ಬಂದರು. ಆಗ ಸಹಸ್ರಾರು ವರ್ಷಗಳಿಂದ ಬೆಳೆದುನಿಂತಿದ್ದ ಜಾತೀಯನ್ಯಾಯ, ಅಸ್ಪೃಶ್ಯತೆ ಎಂಬ ಶಿಕ್ಷೆಯನ್ನು ವಿರೋಧಿಸಲಾಯಿತು. ಸನಾತನಿಗಳು ಕಣ್ಣೆರೆದರು; ಅಸಮಾಧಾನಗೊಂಡರು. ಹೊಸಬೆಳಕು ಮೂಡಿದ್ದು ಕೇವಲ ಬಸವಣ್ಣನವರ ಅನುಯಾಯಿಗಳಿಂದ ಮಾತ್ರ. ಆದರೂ ಇತಿಹಾಸದಲ್ಲಿ ಮೊದಲಬಾರಿ ಎಂಬಂತೆ ಅಸ್ಪೃಶ್ಯರು ಸ್ವಲ್ಪ ನಿರಾಳವಾಗಿ ಉಸಿರಾಡಿರಬಹುದು. ಆದರೆ ಉತ್ತರಕರ್ನಾಟಕದ ಈ ಹೊಸಬೆಳಕು ಹೆಚ್ಚು ವಿಸ್ತಾರಗೊಳ್ಳಲಿಲ್ಲ; ರಾಷ್ಟ್ರಮಟ್ಟಕ್ಕೆ ಪಸರಿಸಲಿಲ್ಲ; ವಿಶಾಲವಾದ ಅಸ್ಪೃಶ್ಯಲೋಕಕ್ಕೆ ಗಣನೀಯವಾದ ನ್ಯಾಯವೇನೂ ದೊರಕಲಿಲ್ಲ; ಸನಾತನಿಗಳ

ವ್ಯವಸ್ಥೆಯಲ್ಲಿ ಬುದ್ಧ ಬಸವಣ್ಣ ಮೊದಲಾದವರ ಮಾನವೀಯನ್ಯಾಯ ಬಹುಸಂಖ್ಯಾತರ ಪಾಲಿಗೆ ಶಾಶ್ವತವಾಗಲಿಲ್ಲ!

ಮರಾಠದೇಶವನ್ನು ಪೇಶ್ವೆಗಳು ಆಳುತ್ತಿದ್ದ ಕಾಲದಲ್ಲಿ ಜಾತಿನ್ಯಾಯದ್ದೇ ಪ್ರಾಬಲ್ಯ! ಸಾಮಾಜಿಕ ಅನ್ಯಾಯಕ್ಕೊಳಗಾಗಿದ್ದ ಅಸ್ಪೃಶ್ಯರ ಬದುಕೆಂಬುದು ಅತ್ಯಂತ ಹೀನಾಯ! ಅಸ್ಪೃಶ್ಯರಿಗೆ ಹಗಲುಹೊತ್ತಿನಲ್ಲಿ ಮುಖ್ಯರಸ್ತೆಗಳಲ್ಲಿ ಎಲ್ಲರಂತೆ ನಡೆದಾಡಲೂ ನಿರ್ಬಂಧ! ಅವರ ನೆರಳೂ ಕೂಡಾ ಸವರ್ಣೀಯರ ಮೇಲೆ ಬೀಳಬಾರದಾಗಿತ್ತು! ದೈನಂದಿನ ಶಿಕ್ಷೆ ಎಂಬಂತೆ ಅಸ್ಪೃಶ್ಯರು ತಮ್ಮ ಗುರುತಿಗಾಗಿ ಕುತ್ತಿಗೆಗೆ ಹಾಗೂ ಮುಂಗೈಗಳಿಗೆ ಕಪ್ಪುದಾರ ಕಟ್ಟಿಕೊಳ್ಳಬೇಕಾಗಿತ್ತು. ಹೇರಲ್ಪಟ್ಟ ಶಿಕ್ಷೆ ಇನ್ನೂ ವಿಸ್ತಾರ! ಅಸ್ಪೃಶ್ಯರು ತಾವು ನಡೆದಾಡುವ ರಸ್ತೆಗಳಲ್ಲಿ ಹೆಜ್ಜೆಯ ಗುರುತುಗಳು ಉಳಿಯಬಾರದೆಂದು ಸೊಂಟಕ್ಕೆ ಪೊರಕೆ ಕಟ್ಟಿಕೊಳ್ಳಬೇಕಾಗಿತ್ತು! ನೆಲದ ಮೇಲೆ ಉಗುಳಬಾರದೆಂದು ಕುತ್ತಿಗೆಗೆ ಕುಡಿಕೆ ಕಟ್ಟಿಕೊಳ್ಳಬೇಕಾಗಿತ್ತು![೬] ಇದು ಇತಿಹಾಸಕಾಲೀನ ಕರಾಳ ನ್ಯಾಯ!

ಈ ನ್ಯಾಯಗಳನ್ನು ಮೀರುವುದೇ ಅಸ್ಪೃಶ್ಯನ ಮಹಾಪರಾಧ! ಅಷ್ಟೇ ಅಲ್ಲ, ರಾಜದ್ರೋಹ, ಧರ್ಮದ್ರೋಹ, ಅಧರ್ಮ, ಅನಾಚಾರ ಮೊದಲಾದಂತಹ ಆರೋಪಗಳನ್ನು ಹೊರಿಸಿ ಘೋರಶಿಕ್ಷೆಗಳಿಗೆ ಈಡುಮಾಡಲಾಗುತ್ತಿದ್ದಿತು. ಈ ಭಯದಿಂದ ಯಾವ ಅಸ್ಪೃಶ್ಯನೂ ವ್ಯವಸ್ಥೆಯ ವಿರುದ್ಧ ತಿರುಗಿ ನಿಲ್ಲುತ್ತಿರಲಿಲ್ಲ. ತಿರುಗಿ ನಿಲ್ಲುವುದೂ ಮತ್ತೊಂದು ಮಹಾ ಅಪರಾಧ ಎಂಬ ಭಯದಿಂದ ಬಗ್ಗಿ ನಡೆದ ಅವರು ನೆಟ್ಟಗೆ ನಿಲ್ಲುವ ಅಥವಾ ದನಿ ಎತ್ತುವುದು ವಿರಳವಾಯಿತು. ಹೀಗಾಗಿ ವ್ಯವಸ್ಥೆಯ ನ್ಯಾಯಕ್ಕೆ ತಗ್ಗಿಬಗ್ಗಿ ನಡೆಯುವುದೇ ಅವರಿಗೆ ಅಭ್ಯಾಸವಾಗಿ ಹೋಗಿದೆ!

ಈ ಬಗ್ಗೆ ಸ್ವಾಮಿ ವಿವೇಕಾನಂದರು 'ಈ ದೇಶವನ್ನು ಬ್ರಾಹ್ಮಣರು ಆಳಿದ್ದಾರೆ; ಕ್ಷತ್ರಿಯರು ಆಳಿದ್ದಾರೆ; ವೈಶ್ಯರೂ ಆಳಿದ್ದಾರೆ; ಇನ್ನು ಶೂದ್ರರೂ ಅಸ್ಪೃಶ್ಯರೂ ಆಳಬೇಕಾದುದು ನ್ಯಾಯ' ಎಂದಿದ್ದಾರೆ.[೭] ಪ್ರಪಂಚದ ಯಾವ ಧರ್ಮವೂ ಹಿಂದೂ ಧರ್ಮದಷ್ಟು ಭವ್ಯವಾಣಿಯಲ್ಲಿ ಮನುಷ್ಯತ್ವದ ಘನತೆಯನ್ನು ಬೋಧಿಸುವುದಿಲ್ಲ. ಹಾಗೆಯೇ ಪ್ರಪಂಚದ ಯಾವ ಧರ್ಮವೂ ದೀನ ದಲಿತರ ಕುತ್ತಿಗೆಯನ್ನು ಹಿಂದೂ ಧರ್ಮದಷ್ಟು ಕ್ರೂರವಾಗಿ ತುಳಿಯುವುದಿಲ್ಲ! ತಪ್ಪು ಹಿಂದೂಧರ್ಮದ್ದಲ್ಲ. ಅದರಲ್ಲಿರುವ ಸಂಪ್ರದಾಯ ಶರಣರದು. ಪಾರಮಾರ್ಥಿಕ ಮತ್ತು ವ್ಯಾವಹಾರಿಕ ಎಂದು ನಾನಾ ಬಗೆಯ ಸಾಧನಗಳನ್ನು ಸೃಷ್ಟಿಸಿರುವ ಠಕ್ಕರದು.[೮]

ಬುದ್ಧ, ಬಸವಣ್ಣ, ಸ್ವಾಮಿ ವಿವೇಕಾನಂದ, ಪೆರಿಯಾರ್ ಮೊದಲಾದವರ ನ್ಯಾಯ-ಸಮಾನತೆಯ ಆಶಯಗಳು ಸ್ಥಾಪಿತ ಸಂಸ್ಕೃತಿಯನ್ನು ಅಲ್ಲಾಡಿಸಲಾಗಲಿಲ್ಲ!

ಇತಿಹಾಸದ ಪುಟಗಳಲ್ಲಿ ದೊರಕುವ ಸಾಮಾಜಿಕನ್ಯಾಯದ ಮಾದರಿಗಳು ಉತ್ಪ್ರೇಕ್ಷೆ ಎಂಬಷ್ಟು ರೋಚಕವಾಗಿವೆ. ಅಸ್ಪೃಶ್ಯರು ಊರೊಳಕ್ಕೆ ಬರುವಾಗ ತಮ್ಮ ಬರುವನ್ನು ಸೂಚಿಸಲು ಕೋಲನ್ನು ನೆಲಕ್ಕೆ ಕುಟ್ಟುತ್ತಾ 'ಸಂಬೋಳಿ...ಸಂಬೋಳಿ' ಎಂದು

ಕೂಗಬೇಕಾಗಿತ್ತು! ಅಂತಹ ಕೋಲಿಗೆ ಸಂಬೋಳಿಕೋಲು ಎಂದು ಕರೆಯಲಾಗುತ್ತಿತ್ತು.[6] ತಮ್ಮ ಪಾವಿತ್ರ್ಯತೆಯನ್ನೂ ಮೇಲ್ಮೆಯನ್ನೂ ಉಳಿಸಿಕೊಳ್ಳಲು ಮೇಲುಜಾತಿಯ ಜನರು ಯಾವ ಯಾವ ಬಗೆಯ ತಂತ್ರಗಳನ್ನು ಪ್ರಯೋಗಿಸಿದ್ದರು ಎಂಬುದೇ ಒಂದು ರೋಚಕ ಸಂಗತಿ. ಅಸ್ಪೃಶ್ಯರನ್ನು ನಡೆಸಿಕೊಂಡ ಅಂತಹ ಅವಮಾನಕರ ಶಿಕ್ಷಾವಿಧಾನಗಳು ಜಗತ್ತಿನ ಯಾವುದೇ ಸಂಸ್ಕೃತಿಯನ್ನು ಬೆಚ್ಚಿಬೀಳಿಸುವಂತಹವು!

ಅಪರಾಧ ಮಾಡಿ ಸಿಕ್ಕಿಬಿದ್ದಾಗ ನ್ಯಾಯದ ಕಟ್ಟೆಯಲ್ಲಿ ವಿಚಾರಣೆ ನಡೆಸಿ, ವಿಧಿಸುವುದು ಮಾತ್ರವೇ ಶಿಕ್ಷೆಯಲ್ಲ. ಶಿಷ್ಟಸಮಾಜವು ಅಸ್ಪೃಶ್ಯರನ್ನು ನಡೆಸಿಕೊಳ್ಳುವ ಒಂದೊಂದು ಅಂಶವೂ ಒಂದೊಂದು ಶಿಕ್ಷೆಯೇ! ಇವುಗಳ ರೀತಿ ನೀತಿಯನ್ನು ಕಂಡೂ ಕಾಣದಂತೆ ಮೌನವಹಿಸುವ ಮೇಲುಜಾತಿಯವರ ಪರೋಕ್ಷ ಸಮ್ಮತಿಯೂ ಕೂಡಾ ಒಂದು ಬಗೆಯ 'ನ್ಯಾಯ'ವೇ! ಇದರಲ್ಲಿ ನ್ಯಾಯ ಯಾವುದು? ಅನ್ಯಾಯ ಯಾವುದು? ಶಿಕ್ಷೆ ಯಾವುದು? ದೌರ್ಜನ್ಯ ಯಾವುದು? ಎಂಬುದರ ಬಗ್ಗೆ ಅವರು ಯೋಚಿಸುವುದಿಲ್ಲ. ಅಸ್ಪೃಶ್ಯ ಎಲ್ಲರಂತೆ ಮನುಷ್ಯನಲ್ಲ! ಅವನು ಪಶುವಿಗೆ ಸಮಾನ! ಎಂತಹ ಪೆಟ್ಟುಕೊಟ್ಟರೂ ತಪ್ಪೇನಿಲ್ಲ! ಒಟ್ಟಿನಲ್ಲಿ ಅವನು ನಮ್ಮ ಸರಿಸಮಾನ ಎಂದು ತಲೆಎತ್ತಿ ನಿಲ್ಲಬಾರದು ಅಷ್ಟೇ! ಎಂಬುದೇ ಶೋಷಕರ ಉದ್ದೇಶ!

ಮೇಲುವರ್ಗದವರು ಸಾಮಾನ್ಯವಾಗಿ ಯಾವುದನ್ನು ಅಪರಾಧವೆಂದು ಭಾವಿಸುವರೋ ಅಂತಹ ದೋಷಗಳು: ಹಿಂದೂಗಳ ವಾಸಸ್ಥಾನದಿಂದ ದೂರವಾಗಿ ಪ್ರತ್ಯೇಕ ಸ್ಥಳದಲ್ಲಿ ವಾಸಿಸಬೇಕು. ಅಸ್ಪೃಶ್ಯರ ವಾಸಸ್ಥಾನವು ನಾಲ್ಕುದಿಕ್ಕುಗಳಲ್ಲಿ ಅತ್ಯಂತ ಅಮಂಗಲಕರವಾದ ದಕ್ಷಿಣದಿಕ್ಕಿನಲ್ಲಿರಬೇಕು. ಮೇಲುಜಾತಿಯವರನ್ನು ಸಮೀಪಿಸಿ, ಅವರ ಮೇಲೆ ನೆರಳು ಬೀಳಿಸಿ ಮಾಲಿನ್ಯ ಉಂಟುಮಾಡಬಾರದು. ಅಸ್ಪೃಶ್ಯರು ಭೂಮಿ, ದನ, ಧನ ಇತ್ಯಾದಿ ಗಳಿಸಬಾರದು. ಸುಂದರವಾದ ಹೆಂಚಿನಮನೆಯನ್ನು ಕಟ್ಟಿಕೊಳ್ಳಬಾರದು. ಶುಭ್ರವಾದ ವಸ್ತ್ರ, ಪಾದರಕ್ಷೆ, ಚಿನ್ನಾಭರಣಗಳನ್ನು ಧರಿಸಬಾರದು. ತಮ್ಮ ಮಕ್ಕಳಿಗೆ ಸೊಗಸಾದ ಹೆಸರುಗಳನ್ನಿಡಬಾರದು; ಹೆಸರುಗಳು ಜಿಗುಪ್ಸಾಕರವಾಗಿರಬೇಕು. ಹಿಂದೂವಿನ ಸರಿ ಸಮಾನವಾಗಿ ಕುಳಿತುಕೊಳ್ಳಬಾರದು. ಕುದುರೆ ಅಥವಾ ಪಲ್ಲಕ್ಕಿಯಲ್ಲಿ ಸಂಚರಿಸಬಾರದು. ಸವರ್ಣೀಯರ ಮಧ್ಯೆ ಯಾವುದೇ ತೆರನಾದ ಮೆರವಣಿಗೆ ನಡೆಸಬಾರದು. ಸುಸಂಸ್ಕೃತ ಭಾಷೆಯನ್ನು ಬಳಸಬಾರದು. ಸ್ಪೃಶ್ಯರಂತೆ ಪೋಷಾಕು ಧರಿಸಬಾರದು. ಕೆಳದರ್ಜೆಯ ಸ್ಥಾನಕ್ಕೆ ಸರಿಯಾಗಿ ನಡೆದುಕೊಳ್ಳಬೇಕು ಇತ್ಯಾದಿ ನಿಯಮಗಳನ್ನು ಮೀರಬಾರದು. ಮೀರುವುದು ಶಿಕ್ಷಾರ್ಹ ಅಪರಾಧವೇ ಸರಿ!

**ಹಿಂದೂ ನ್ಯಾಯಪದ್ಧತಿಯ ಪ್ರಕಾರ ಅಸ್ಪೃಶ್ಯರ ಕರ್ತವ್ಯಗಳು :** ಮೇಲುಜಾತಿಯವರ ಮನೆಯ ಶುಭಕಾರ್ಯಗಳ ಸಂದೇಶವನ್ನು ದೂರದೂರುಗಳ ಅವರ ಬಂಧು-ಮಿತ್ರರಿಗೆ ತಲುಪಿಸಬೇಕು. ಅವರ ಯಾವುದೇ ಶುಭಕಾರ್ಯಗಳ ಸಂದರ್ಭದಲ್ಲಿ ಸೌದೆಒಡೆಯುವುದು, ಚರಂಡಿ ಶುಚಿಗೊಳಿಸುವುದು ಮೊದಲಾದ ಹೊರಗಿನ ಚಾಕರಿ ಮಾಡಬೇಕು. ಸಾಮೂಹಿಕ

ಉತ್ಸವಗಳಲ್ಲಿ ಸಂತಸಕ್ಕೆ ಪೂರಕವಾದ ಎಲ್ಲಾ ಕೀಳುಕೆಲಸಗಳನ್ನು ಮಾಡಬೇಕು. ಉತ್ಸವಗಳ ಸಂದರ್ಭದಲ್ಲಿ ಅಶ್ಲೀಲ ಮೋಜಿಗೆ ತಮ್ಮ ಹೆಂಗಸರನ್ನು ಸ್ಪೃಶ್ಯರಿಗೆ ಒಪ್ಪಿಸಬೇಕು- ಮುಂತಾದವುಗಳನ್ನು ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ನಿರ್ವಹಿಸಬೇಕು. ಇಂತಹ ನಿಯಮಗಳನ್ನು ಮೀರಿದರೆ ಘೋರ ಶಿಕ್ಷೆ ಕಟ್ಟಿಟ್ಟ ಬುತ್ತಿ. ಯಾವುದೇ ಕಾರಣಕ್ಕೂ ಶಿಕ್ಷೆಯಲ್ಲಿ ರಿಯಾಯಿತಿ ಇರುವುದಿಲ್ಲ.

**ಅಪರಾಧಗಳು ಮತ್ತು ಶಿಕ್ಷೆಗೆ ಸಂಬಂಧಿಸಿದ ಉದಾಹರಣೆಗಳು :** ಜಾಫರ್‌ವಾಲ್ ತಾಲ್ಲೂಕಿನ ಜಗ್ವಾಲ್ ಎಂಬ ಹಳ್ಳಿಯಲ್ಲಿ ಒಂದು ಕರು ಬಾವಿಗೆ ಬಿದ್ದು ಹೋಗಿತ್ತು. ಅದನ್ನು ಕಂಡ ಡೋಮ್ ಎಂಬ ಅಸ್ಪೃಶ್ಯಜಾತಿಗೆ ಸೇರಿದ ರಾಮ್ ಮಹಾಶಯ ಎಂಬುವವನು ಬಾವಿಗೆ ಜಿಗಿದು ಕರುವನ್ನು ಪಾರುಮಾಡಿದ. ಆದರೆ ಬಾವಿಯನ್ನು ಅಪವಿತ್ರಗೊಳಿಸಿದ ಎಂಬ ಕಾರಣಕ್ಕೆ ಅವನನ್ನು ಚೆನ್ನಾಗಿ ಥಳಿಸಲಾರಂಭಿಸಿದರು. ಅಷ್ಟರಲ್ಲಿ ಅಲ್ಲಿಗೆ ಆಗಮಿಸಿದ ಒಬ್ಬ ಬ್ಯಾರಿಸ್ಟರ್ ಗೋಳು ಹೊಯ್ದುಕೊಳ್ಳುತ್ತಿದ್ದವರನ್ನು ತರಾಟೆಗೆ ತೆಗೆದುಕೊಂಡ. ಇಲ್ಲವಾಗಿದ್ದಿದ್ದರೆ ಪರಿಣಾಮ ಏನಾಗುತ್ತಿತ್ತೊ!

ಕಲ್ಲಿಕೋಟೆಯ ಬಳಿಯ ಕಾಲಡಿ ಎಂಬ ಹಳ್ಳಿಯಲ್ಲಿ ಮಗುವೊಂದು ಬಾವಿಗೆ ಜಾರಿತು. ಅದರ ತಾಯಿ ಅಸಹಾಯಕಳಾಗಿ ಕೂಗಿಕೊಂಡಳು. ಹತ್ತಿರದಲ್ಲಿದ್ದವರಾರೂ ಸಾಹಸಕ್ಕೆ ಧೈರ್ಯ ತೋರಲಿಲ್ಲ. ಆಗ ಅಲ್ಲಿ ಹಾದುಹೋಗುತ್ತಿದ್ದ ವ್ಯಕ್ತಿಯೊಬ್ಬ ಬಾವಿಗೆ ಧುಮಿಕಿ ಮಗುವನ್ನು ಮೇಲೆತ್ತಿ ಬದುಕಿಸಿದ. ನಂತರ ಅವನು ಅಸ್ಪೃಶ್ಯ ಎಂದು ವಿಷಯ ತಿಳಿದ ಇನ್ನಿತರರು ಅವನನ್ನು ವಾಚಾಮಗೋಚರವಾಗಿ ಬೈದು ಥಳಿಸಿದರು!

ನಾಸಿಕ್‌ನ ಒಂದು ವರದಿಯಂತೆ, ಸನಿಹದ ಒಂದು ಹಳ್ಳಿಯ ಸವರ್ಣೀಯರು 'ಅಛೂತ್' ಎಂಬ ಅಸ್ಪೃಶ್ಯ ಕುಟುಂಬವೊಂದರ ಮೇಲೆ ಹಲ್ಲೆ ನಡೆಸಿದರು. ಅಲ್ಲಿಯ ಒಬ್ಬ ವಯೋವೃದ್ಧೆಯ ಕೈಕಾಲುಗಳನ್ನು ಕಟ್ಟಿ, ಮೇಲೆ ಸೌದೆಯನ್ನು ಪೇರಿಸಿ, ಬೆಂಕಿ ಹಚ್ಚಿದರು! ಇದಕ್ಕೆ ಕಾರಣ ಆ ಹಳ್ಳಿಯಲ್ಲಿ ತಲೆದೋರಿದ್ದ ಕಾಲರಾಕ್ಕೆ ಇವಳೇ ಕಾರಣ ಎಂಬ ಗುಮಾನಿ!

ಕೈರಾ ಜಿಲ್ಲೆಯ ಬೋರ್ಸಾದ್ ತಾಲ್ಲೂಕಿನ ಒಂದು ಹಳ್ಳಿಯಲ್ಲಿ ಗ್ರಾಮಸ್ಥರ ಭಾರೀ ಗುಂಪೊಂದು ಅಸ್ಪೃಶ್ಯರ ಮೇಲೆ ಮಾರಕಾಸ್ತ್ರಗಳಿಂದ ಹಲ್ಲೆ ನಡೆಸಿದಾಗ ಒಬ್ಬ ಮಹಿಳೆಯೂ ಸೇರಿದಂತೆ ಐವರು ತೀವ್ರವಾಗಿ ಗಾಯಗೊಂಡಿದ್ದಾರೆ. ಇದಕ್ಕೆ ಕಾರಣ ಗ್ರಾಮದ ಏಳು ಎಮ್ಮೆಗಳು ಸತ್ತದ್ದು! ಈ ದುರಂತಕ್ಕೆ ಅವರ ಮಾಟವಿದ್ಯೆಯೇ ಕಾರಣ ಎಂಬ ಶಂಕೆ![೨೦]

ಇವು ಕೇವಲ ಕೆಲವು ಸಣ್ಣ ಉದಾಹರಣೆಗಳು ಮಾತ್ರ. ಇಂತಹ ಸಾವಿರ ಸಾವಿರ ಪ್ರಕರಣಗಳು ನಡೆದುಹೋಗಿವೆ. ಈ ದೇಶದಲ್ಲಿ ಇಂತಹ ಘಟನೆಗಳಿಗೆ ಅಂತ್ಯವೆಂಬುದೇ ಇರಲಾರದು. ಇಲ್ಲಿ ಇನ್ನೊಂದು ಮುಖ್ಯಾಂಶವನ್ನು ಗಮನಿಸಬೇಕು. 'ಶಿಕ್ಷೆ'ಯು ಯಾವಾಗಲೂ ಸಾಮೂಹಿಕವಾದದ್ದು! ಕೇವಲ ಒಬ್ಬ ವ್ಯಕ್ತಿ ಅಪರಾಧ ಎಸಗಿದರೂ ಇಡೀ

ಅಸ್ಪೃಶ್ಯಗುಂಪಿಗೇ ಶಿಕ್ಷೆ ವಿಧಿಸಲಾಗುತ್ತಿತ್ತು! 'ಅಪರಾಧಕ್ಕೆ ತಕ್ಕ ಶಿಕ್ಷೆ' ಎಂಬುದು ನ್ಯಾಯದೇವತೆಯ ನಿಲುವು. ಆದರೆ ಅಸ್ಪೃಶ್ಯ ಮಾನವರು ಮಾನವರಂತೆ ಬದುಕಲೆತ್ನಿಸುವುದೇ ಒಂದು ಅಪರಾಧ ಎಂಬಂತಾದರೆ ಹೇಗೆ?

**ಜನಪದ ನ್ಯಾಯ**

ಜನಪದರ ಮನೋಭಾವಗಳೂ ಕೂಡಾ ಸ್ಥಾಪಿತಮೌಲ್ಯಗಳಿಂದೇನೂ ಹೊರತಾಗಿರಲಿಲ್ಲ. ಒಂದು ಕಾಲಘಟ್ಟದ ಜನಪದರು ಆ ಕಾಲದ ಧಾರ್ಮಿಕ ಕಟ್ಟಳೆಗಳಿಗೆ ಬದ್ಧರಾಗಿಯೇ ಇರುತ್ತಿದ್ದರು. ವೈಚಾರಿಕ-ವೈಜ್ಞಾನಿಕ-ಸಮತಾ ಮನೋಭಾವ ಮೊದಲಾದಂತಹ ಆಧುನಿಕ ವಿಚಾರಗಳನ್ನು ಒಪ್ಪಿಕೊಂಡದ್ದೇನೂ ಕಂಡುಬರುವುದಿಲ್ಲ. ಹೀಗಾಗಿ ಮೇಲುಜಾತಿಯ ಜನಪದರು ಜಾತೀಯತೆಯ ಮನೋಭಾವಗಳಿಂದ ದೂರವಾಗಿದ್ದರು ಎನ್ನುವಂತೆಯೂ ಇಲ್ಲ. ಸಮಕಾಲೀನ ಮನೋಭಾವವೇ ಜಾನಪದದ ನಿಲುವು. ಹೀಗಾಗಿ ಜಾನಪದಕ್ಕೂ ಸಂಪ್ರದಾಯಕ್ಕೂ ನಿಕಟವಾದ ಸಂಬಂಧ. ಹಾಗೆಯೇ, ಅಸ್ಪೃಶ್ಯರಿಗೂ ಜಾನಪದ ಸಂಸ್ಕೃತಿಗೂ ನಿಕಟವಾದ ನಂಟು. ಆದರೂ ಮೇಲುಜಾತಿಯ ಜಾನಪದದ ಸ್ವರೂಪವೇ ಬೇರೆ; ಬದುಕಿಗೆ ಹತ್ತಿರವಾದ ಅಸ್ಪೃಶ್ಯರ ಜಾನಪದದ ಸೊಗಡೇ ಬೇರೆ. ಹೀಗಾಗಿ ನ್ಯಾಯ ಮತ್ತು ಶಿಕ್ಷೆಗಳ ವಿಷಯದಲ್ಲಿ ಜಾನಪದವು ಅಸ್ಪೃಶ್ಯನಿಗೇನೂ ಹೊಸ ರಿಯಾಯಿತಿಯನ್ನು ಘೋಷಿಸಿಲ್ಲ.

ಜನಪದಸಾಹಿತ್ಯ ಅಥವಾ ಸಂಸ್ಕೃತಿಯಲ್ಲೂ ಅಂತರ್ವಾಹಿನಿಯಂತೆ ಮೇಲು-ಕೀಳು ಮನೋಭಾವಗಳು ವ್ಯಕ್ತವಾಗುವುದುಂಟು. ಆದ್ದರಿಂದ ಜಾನಪದರಲ್ಲೂ ಪ್ರಭಾವೀ ಸಂಸ್ಕೃತಿಯ ಛಾಪು ಕಂಡುಬರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಅಂದಹಾಗೆ ಗ್ರಾಮೀಣ ಪ್ರದೇಶದ ಜನಪದಶೈಲಿಯಲ್ಲಿ ನ್ಯಾಯತೀರ್ಮಾನ ಮಾಡುವವರು ಹಳ್ಳಿಯ ಅದೇ ಗೌಡ, ಅದೇ ಶಾನುಭೋಗ, ಅದೇ ಸಾಹುಕಾರ, ಅದೇ ವಯೋವೃದ್ಧ ಯಜಮಾನರುಗಳೇ! ಇವರು ವಿಶೇಷವಾಗಿ ಯಾವುದೇ ನ್ಯಾಯಶಾಸ್ತ್ರದ ಬಗ್ಗೆ ತರಬೇತಿ ಪಡೆದವರಾಗಿರುವುದಿಲ್ಲ. ಪರಂಪರಾಗತ ಶೈಲಿಯಲ್ಲೇ ನ್ಯಾಯತೀರ್ಮಾನ ಮಾಡುವವರು. ಗ್ರಾಮದ ದೇವಸ್ಥಾನದಲ್ಲೋ, ಪಂಚಾಯಿತಿಕಟ್ಟೆಯಲ್ಲೋ, ದೊಡ್ಡವರ ಮನೆಗಳಲ್ಲೋ, ಅನುಕೂಲಕ್ಕೆ ತಕ್ಕಂತೆ ಹಾದಿಬೀದಿಯಲ್ಲೋ ನ್ಯಾಯತೀರ್ಮಾನ (ಪಂಚಾಯಿತಿ) ನಡೆಯುತ್ತಿದ್ದಿತು. ಇವರ ಮಧ್ಯದಲ್ಲಿ ಅಥವಾ ಕಡೆಯಲ್ಲಿ ಯಾವುದೇ ಕಾರಣಕ್ಕೂ ಯಾವುದೇ ಸಂದರ್ಭದಲ್ಲೂ ಒಬ್ಬ ಅಸ್ಪೃಶ್ಯ ಪ್ರತಿನಿಧಿಗೆ ಅವಕಾಶವಿರುತ್ತಿರಲಿಲ್ಲ! ಇಂತಹ ಸಂದರ್ಭಗಳಲ್ಲಿ ಸ್ಪೃಶ್ಯ-ಸ್ಪೃಶ್ಯನ ಮಧ್ಯದ ಅಥವಾ ಅಸ್ಪೃಶ್ಯ-ಅಸ್ಪೃಶ್ಯನ ಮಧ್ಯದ ವಿವಾದದಲ್ಲಿ ನ್ಯಾಯದ ಶಿಕ್ಷೆಯ ಸಮತೋಲನ ಇದ್ದರೂ ಇರಬಹುದು. ಆದರೆ ಅಸ್ಪೃಶ್ಯ-ಸ್ಪೃಶ್ಯನ ಮಧ್ಯದ ತಕರಾರಿನ ನ್ಯಾಯತೀರ್ಮಾನದ ಬಗ್ಗೆ ವ್ಯಾಖ್ಯಾನಿಸುವುದು ಅನಗತ್ಯ. ನ್ಯಾಯ ಯಾರ ಪರ; ಶಿಕ್ಷೆ ಯಾರ ಪಾಲಿಗೆ ಎಂಬುದನ್ನು ಮೊದಲೇ ನಿರ್ಧರಿಸಿಬಿಡಬಹುದು. ಸನಾತನ ಧೋರಣೆಯನ್ನೇ ತಲೆಯಲ್ಲಿ ತುಂಬಿಕೊಂಡಂತಹ

ಜನರು ಅಸ್ಪೃಶ್ಯರಿಗೆ ನ್ಯಾಯನೀಡಬಲ್ಲರೆ! ಅವರ್ಣೀಯ ಹುಡುಗಿಗೆ ಕೈಕೊಟ್ಟ ಸವರ್ಣೀಯ ಹುಡುಗನಿಗೆ, ಸವರ್ಣೀಯ ಹುಡುಗಿಯನ್ನು ಪ್ರೀತಿಸಿದ ಅವರ್ಣೀಯ ಹುಡುಗನಿಗೆ ದೊರಕುವ ನ್ಯಾಯ ಯಾವುದೆಂಬುದನ್ನು ಪ್ರತ್ಯೇಕವಾಗಿ ವಿವರಿಸಬೇಕಾಗಿಲ್ಲ.

ಹೆಣ್ಣಿನ ಮೇಲೆ ಅತ್ಯಾಚಾರ ಮಾಡಿದರೆ, ಅತಿಯಾದ ಬಡ್ಡಿ ಕಿತ್ತರೆ, ಪದೇ ಪದೇ ಸುಳ್ಳು ಹೇಳಿದರೆ, ನಂಬಿಸಿ ಮೋಸ ಮಾಡಿದರೆ, ವಿಶ್ವಾಸಘಾತುಕತನ ಎಸಗಿದರೆ ಜನಪದ ನ್ಯಾಯದೃಷ್ಟಿಯಲ್ಲಿ 'ಕವಡಿ' ದಂಡ ವಿಧಿಸಲಾಗುತ್ತಿದ್ದಿತು! ಕವಡಿ ಎಂದರೆ ಬೆಲೆಯೇ ಇಲ್ಲದ ಒಂದು ಕನಿಷ್ಠ ವಸ್ತು! ಕೇವಲ ಅವಮಾನಕ್ಕಾಗಿ ಮಾತ್ರ ಅಂತಹ ದಂಡ! ಇದು ಮೇಲುವರ್ಗದವರಿಗೆ ಮಾತ್ರ ಅನ್ವಯವಾಗುವಂತಹದು. ಇದು ಬಡವರಿಗೆ, ದರಿದ್ರರಿಗೆ, ಚಿಕ್ಕವರಿಗೆ ವಿಧಿಸುತ್ತಿದ್ದ ಉದಾಹರಣೆಗಳು ದೊರಕುವುದಿಲ್ಲ.[೧೧] ಅಂದಹಾಗೆ ಇಂತಹ ದಂಡ ಅಸ್ಪೃಶ್ಯರಿಗೂ ಅನ್ವಯವಾಗುತ್ತಿರಲಿಲ್ಲ ಎನ್ನಬಹುದು. ಅವರಿಗೆ ಅಂತಹ ಹಗುರವಾದ ಶಿಕ್ಷೆಯೇ?! ಏನಿದ್ದರೂ ಕಠಿಣವಾದ ಶಿಕ್ಷೆಯೇ ಖಾತರಿ.

ಜನಪದ ನ್ಯಾಯಪದ್ಧತಿಯಲ್ಲಿ ಎಲ್ಲಾ ನ್ಯಾಯತೀರ್ಮಾನಗಳು ಪ್ರಾಮಾಣಿಕವಾಗಿ, ನಿಷ್ಪಕ್ಷಪಾತವಾಗಿ ಇತ್ಯರ್ಥವಾಗುತ್ತಿದ್ದವೆಂದು ಹೇಳುವಂತಿಲ್ಲ. ಇಲ್ಲಿಯೂ ಮೋಸ, ವಂಚನೆ, ಪಕ್ಷಪಾತ ಮೊದಲಾದ ಪೂರ್ವಗ್ರಹ ಮನೋಭಾವಗಳ ಪ್ರಭಾವ ಇಲ್ಲದೇ ಇರುತ್ತಿರಲಿಲ್ಲ. ಇಂತಹ ಸಂದರ್ಭಗಳಲ್ಲಿ ಸಮಾಜದ ಮೇಲುವರ್ಗವು ತನ್ನ ಹಿತಾಸಕ್ತಿಗೆ ಧಕ್ಕೆ ಬರದಂತೆ ನಿಯಮಗಳನ್ನು ರೂಪಿಸುವುದು ತೀರಾ ಸಾಮಾನ್ಯ ಎಂಬುದರಲ್ಲಿ ಅನುಮಾನವಿಲ್ಲ! ಈ ನಿಲುವಿಗೆ ಅಪವಾದವೆಂಬಂತೆ ಜನಪದ ನ್ಯಾಯಪದ್ಧತಿಯಲ್ಲಿ ಯಾವುದೇ ಪೂರ್ವಗ್ರಹ, ಜಾತೀಯ ಮನೋಭಾವ, ಮೇಲುಜಾತಿಗಳ ಹಿತಾಸಕ್ತಿ ಮೊದಲಾದಂತಹ ಅನ್ಯಾಯ, ಅನೀತಿ, ಅಧರ್ಮಗಳ ಸೋಂಕು ಇರುವುದಿಲ್ಲ ಎಂಬುದಾದರೆ ಆ ಸಂಸ್ಕೃತಿಗೆ ತಲೆಬಾಗಲೇಬೇಕು!

ಅಸ್ಪೃಶ್ಯ ಜನಾಂಗಕ್ಕೆ ತನ್ನದೇ ಆದ ರೀತಿಯಲ್ಲಿ ನ್ಯಾಯತೀರ್ಮಾನ ಮಾಡಿ ಶಿಕ್ಷೆ ವಿಧಿಸುವ ಶಿಷ್ಟ ಸಮಾಜವು ಆಂತರಿಕ ಅಳುಕಿಗೆ ಈಡಾಗುವ ಸಾಧ್ಯತೆಯೂ ಇಲ್ಲದೆ ಇಲ್ಲ! ಅದಕ್ಕೊಂದು ಉದಾಹರಣೆ: ದ.ಕ.ಜಿಲ್ಲೆಯಲ್ಲಿ ಉಗುಳಿಕೊಳ್ಳಲು ಕುತ್ತಿಗೆಗೆ ಕುಡಿಕೆ ಕಟ್ಟಿಕೊಳ್ಳುವ ಅಂಡೆಕೊರಗರ ಸಹನೆಯು ಸ್ಫೋಟಗೊಳ್ಳದಿರಲೆಂಬ ಉದ್ದೇಶದಿಂದ ವರ್ಷದಲ್ಲೊಂದು ದಿನ ಅವರು ಮೇಲುವರ್ಗದವರ ಮೇಲೆ ಉಗುಳಬಹುದೆಂಬ ಸಂಪ್ರದಾಯ ಜಾರಿಯಲ್ಲಿತ್ತಂತೆ.[೧೨] ನ್ಯಾಯ-ಅನ್ಯಾಯಗಳ ಸ್ವರೂಪ ವೈವಿಧ್ಯಮಯ!

ಜನಪದರ ನ್ಯಾಯತೀರ್ಮಾನವು ದೈನಂದಿನ ಬದುಕಿಗೆ ಹತ್ತಿರವಾಗಿಯೂ ಭಾವನಾತ್ಮಕವಾಗಿಯೂ ಇತ್ತು ಅಥವಾ ಇದೆ ಎಂಬುದಕ್ಕೆ ಹಲವಾರು ದೃಷ್ಟಾಂತಗಳು ಲಭ್ಯವಾಗುತ್ತವೆ. ಆರೋಪಿಯು ತನ್ನ ಮೇಲಿನ ಆರೋಪಗಳನ್ನು ಅಲ್ಲಗಳೆಯಲು ಅಥವಾ ತಾನು ನಿರಪರಾಧಿ ಎಂಬುದನ್ನು ಸಾಬೀತುಗೊಳಿಸಲು ದೇವರ-ಹೆತ್ತವರ-ಮಕ್ಕಳ ಮೇಲೆ ಆಣೆಪ್ರಮಾಣ ಮಾಡುವುದು, ದೇವರ ಮುಂದಿನ ದೀಪ ಆರಿಸುವುದು ಅಥವಾ

ಹೊತ್ತಿಸುವುದು, ಸ್ನಾನಮಾಡಿ ದೇವಸ್ಥಾನದ ಗಂಟೆ ಬಾರಿಸುವುದು, ತಂದೆ ತಾಯಿಯ ಗೋರಿಯ ಸುತ್ತ ಪ್ರದಕ್ಷಿಣೆ ಹಾಕುವುದು, ತಲೆಯಮೇಲೆ ಮಣ್ಣುಹೊತ್ತು ಭೂಮಿಯನ್ನು ತುಳಿಯುವುದು, ಎತ್ತಿನ ಬಾಲ ಎಳೆಯುವುದು, ಭೂಮಿಯನ್ನು ಮುಟ್ಟಿ ಪ್ರಮಾಣ ಮಾಡುವುದು ಇತ್ಯಾದಿ ಸರಳ ವಿಧಾನಗಳು!

ಇನ್ನು ಕೆಲವು ಉತ್ಕಟ ಸಂದರ್ಭಗಳಲ್ಲಿ, ಆದಿವಾಸಿಗಳಲ್ಲಿ ಜಾರಿಯಲ್ಲಿದ್ದ ಪ್ರಮಾಣೀಕರಣಗಳು ಉಗ್ರಸ್ವರೂಪದವುಗಳು : ಅಂಗೈಯಲ್ಲಿ ಕರ್ಪೂರ ಉರಿಸುವುದು, ಕೆಂಡದಮೇಲೆ ನಡೆಯುವುದು, ಕುದಿಯುವ ಎಣ್ಣೆಯೊಳಗಿನ ನಾಣ್ಯವನ್ನು ಕೈಯಿಂದ ತೆಗೆಯುವುದು, ನಿಗದಿತ ಸಮಯದವರೆಗೆ ಕೈಯಲ್ಲಿ ಕೆಂಡಹಿಡಿಯುವುದು, ಚಾಟಿಯಲ್ಲಿ ಹೊಡೆದರೂ ಕಣ್ಣಲ್ಲಿ ನೀರು ಬರಿಸಿಕೊಳ್ಳದಿರುವುದು, ಮಂತ್ರಿಸಿದ ಅಕ್ಕಿಯನ್ನು ತಿಂದು ಬದುಕುವುದು, ನಾಲಿಗೆಯನ್ನು ಸೂಜಿ ಅಥವಾ ದಬ್ಬಳದಿಂದ ಚುಚ್ಚಿಕೊಳ್ಳುವುದು ಮುಂತಾದ ಪರೀಕ್ಷೆಗಳಿಗೆ ಗುರಿಯಾಗಬೇಕಾಗಿತ್ತು. ಈ ಪರೀಕ್ಷೆಯಿಂದ ಏನೂ ಆಗದೆ ತೇರ್ಗಡೆಯಾದರೆ ನಿರಪರಾಧಿಯೆಂದೂ ಇಲ್ಲವಾದರೆ ಅಪರಾಧಿಯೆಂದೂ ನಿರ್ಣಯಿಸಲಾಗುತ್ತಿತ್ತು. ಹಾಗೆಯೇ, ನಿಜವಾಗಿಯೂ ಅಪರಾಧಿಯಾದವರು ದೇವರು-ಹೆತ್ತವರು-ಮಕ್ಕಳ ಮೇಲೆ ಆಣೆ ಇಡಲು ಅಂಜುತ್ತಿದ್ದರು. ಇಂತಹ ಸಂದರ್ಭಗಳು ಎದುರಾಗುತ್ತಿದ್ದುದು ಬಹುಪಾಲು ಕೆಳಜಾತಿಯ ಜನರಿಗೆ ಮಾತ್ರ ಎಂಬುದರಲ್ಲಿ ಅನುಮಾನವಿಲ್ಲ. ಮೇಲುಜಾತಿಯ ಜನರು ಇಂತಹ ವಿಚಾರಣೆಗಳಿಗೆ ಒಳಗಾಗುತ್ತಿರಲಿಲ್ಲ ಎಂಬುದೇ ನ್ಯಾಯ!

**ಸಾಮಾಜಿಕ ನ್ಯಾಯ**

ಜಾತಿಮನೋಭಾವದಲ್ಲಿ ನ್ಯಾಯತೀರ್ಮಾನ ಮಾಡುವುದರ ಬಗ್ಗೆ ಕಳವಳ ವ್ಯಕ್ತಪಡಿಸುವ ಮಾನವೀಯ ಮನಸ್ಸುಗಳೂ ಇಲ್ಲದೆ ಇಲ್ಲ! ಅಂತಹ ಮನಸ್ಸುಗಳು ಈ ದೇಶದ ನ್ಯಾಯತೀರ್ಮಾನ ಸಂದರ್ಭದ 'ಒಯಾಸಿಸ್'ಗಳು! ಜ್ಯೋತಿ ಬಾ ಫುಲೆ ಅವರು 'ನ್ಯಾಯ ತೀರ್ಪು ನೀಡುವಾಗ ಜಾತಿ-ಕುಲ-ವರ್ಣಗಳನ್ನು ಗಮನಿಸಬಾರದು' ಎಂದಿದ್ದಾರೆ.[೧೩]

ದೇವನೂರು ಮಹಾದೇವ ಅವರ 'ಕುಸುಮಬಾಲೆ'ಯಲ್ಲಿ ದಲಿತನೊಬ್ಬ ಮಾಡಿದ ಸಣ್ಣ ತಪ್ಪಿಗೆ ಸವರ್ಣೀಯ ಸಮಾಜವು ತಾನೇ ಪೊಲೀಸ್ ಹಾಗೂ ಕೋರ್ಟ್ ಆಗಲು ಯತ್ನಿಸುತ್ತದೆ. ಇದನ್ನು ವಿರೋಧಿಸಿದ ಒಬ್ಬ ದಲಿತನಾಯಕ 'ಅಪರಾಧ ತನಿಖೆ ಹಾಗೂ ಶಿಕ್ಷೆ ವಿಧಿಸುವ ಹಕ್ಕು ಇರುವುದು ಸರಕಾರಕ್ಕೆ ಮಾತ್ರ' ಎಂಬ ಸಮರ್ಥನೀಯ ವಾದ ಮಂಡಿಸುತ್ತಾನೆ. ಶತಶತಮಾನಗಳಿಂದ ಇಚ್ಛಾನುಸಾರ ನ್ಯಾಯತೀರ್ಮಾನ ಮಾಡಿದ ಆ ಗ್ರಾಮಸಮಾಜವು ಈ ಆಧುನಿಕ ವಾದವನ್ನು ಒಪ್ಪುವುದಿಲ್ಲ.....

ಕನ್ನಡದ ಇನ್ನೊಂದು ಸಣ್ಣಕಥೆ : ಮದುವೆ ಮಾಡಿಕೊಳ್ಳುತ್ತೇನೆಂಬ ಮಾತುಕೊಟ್ಟ ಹಳ್ಳಿಯ ಮುಖ್ಯಸ್ಥನ ಮೊಮ್ಮಗನೊಬ್ಬ ದಲಿತ ಯುವತಿಯನ್ನು ನಂಬಿಸಿ ಕೈಕೊಡುತ್ತಾನೆ. ಅಷ್ಟರಲ್ಲಿ ಅವಳು ಮೂರುತಿಂಗಳ ಗರ್ಭಿಣಿ! ಅವಳ ತಂದೆ ಆ ಯುವಕನ ತಾತನಿಗೆ ದೂರು ಸಲ್ಲಿಸುತ್ತಾನೆ. ಅದರ ಬಗ್ಗೆ ಆ ಆರೋಪಿ ಯುವಕನ ತಾತನೇ ಪದ್ಧತಿಯಂತೆ

ನ್ಯಾಯತೀರ್ಮಾನ ಮಾಡುವ ನಿರೀಕ್ಷಿತ ಸ್ಥಿತಿ! ಅಷ್ಟರಲ್ಲಿ ದಲಿತಸಂಘದ ಹುಡುಗರು 'ನಿಮ್ಮಿಂದ ಸರಿಯಾದ ನ್ಯಾಯನಿರ್ಣಯ ಸಾಧ್ಯವಿಲ್ಲ. ನಾವು ಪೊಲೀಸರಿಗೇ ದೂರು ಸಲ್ಲಿಸುತ್ತೇವೆ' ಎಂದೆಲ್ಲಾ ವಾದಿಸಿ, ಹಾಗೇ ಮಾಡುತ್ತಾರೆ. ಸಂಜೆಯೊಳಗೆ ಪೊಲೀಸರು ಬಂದು ಆರೋಪಿ ಯುವಕನನ್ನು ಕರೆದೊಯ್ಯುತ್ತಾರೆ. ಕೂಡಲೇ ಯಜಮಾನರು ಕುರ್ಚಿಯೊಂದಿಗೆ ಕುಸಿದುಬೀಳುತ್ತಾರೆ.[೧೪] ಯಜಮಾನನೇ ನ್ಯಾಯತೀರ್ಮಾನ ಕೈಗೊಂಡಿದ್ದಿದ್ದರೆ ದಲಿತ ಯುವತಿಗೆ ನ್ಯಾಯ ಸಿಗುವುದಿರಲಿ, ಅವಳೇ ಅಪರಾಧಿ ಸ್ಥಾನದಲ್ಲಿ ಶಿಕ್ಷೆ ಅನುಭವಿಸಬೇಕಾಗುತ್ತಿತ್ತು!

ಅಂದಹಾಗೆ, ಇತ್ತೀಚಿನ ಅಸ್ಪೃಶ್ಯರು ಸಾಂಪ್ರದಾಯಿಕ ನ್ಯಾಯತೀರ್ಮಾನಗಳನ್ನು ವಿರೋಧಿಸುತ್ತಾ ನ್ಯಾಯಾಲಯಗಳ ಮೇಲೆ ಭರವಸೆ ಮೂಡಿಸುತ್ತಿದ್ದಾರೆ. ಕಾಲ ಬದಲಾದರೂ ಸನಾತನ ಸಂಸ್ಕೃತಿ ಬದಲಾದಂತೆ ಕಾಣುವುದಿಲ್ಲ. ಈಗಲೂ ಕೆಲವು ಹಳ್ಳಿಗಾಡುಗಳಲ್ಲಿ ಬಾವಿ-ನಲ್ಲಿ ನೀರಿಗೂ ನಿಷೇಧ ಮುಂದುವರಿದಿದೆ. ಅಸ್ಪೃಶ್ಯಕೇರಿಗಳಿಗೆ ನಾಗರಿಕ ಸೌಲಭ್ಯಗಳನ್ನು ತಡೆಹಿಡಿಯಲಾಗುತ್ತಿದೆ. ಸರಕಾರದ ಸವಲತ್ತುಗಳು ಜಾರಿಯಾಗದಂತೆ ನೋಡಿಕೊಳ್ಳಲಾಗುತ್ತಿದೆ. ಮೀಸಲಾತಿಯಲ್ಲೂ ವಂಚನೆ ನಡೆಯುತ್ತಿದೆ. ಸಣ್ಣ ಪುಟ್ಟ ಕಾರಣಗಳಿಗಾಗಿಯೇ ಗುಡಿಸಲುಗಳಿಗೆ ಬೆಂಕಿ ಇಡಲಾಗುತ್ತಿದೆ. ಹಲ್ಲೆ-ದೌರ್ಜನ್ಯಗಳನ್ನು ನಡೆಸಲಾಗುತ್ತಿದೆ. ದಲಿತರ ಮೇಲಿನ ಸಿಟ್ಟಿನಿಂದ ಡಾ.ಅಂಬೇಡ್ಕರ್ ಪ್ರತಿಮೆಗಳಿಗೆ ಅವಮಾನ ಮಾಡಲಾಗುತ್ತಿದೆ. ಅಂತರಂಗದಲ್ಲೂ ಬಹಿರಂಗದಲ್ಲೂ ಹಲವಾರು ಬಗೆಯ ಅನ್ಯಾಯಗಳು. ಇಂತಹ ವಿವಿಧ ಬಗೆಯ ಪ್ರಕರಣಗಳನ್ನು ವಾರ್ತಾಮಾಧ್ಯಮಗಳಿಂದ ಕೇಳಿ ನೋಡುತ್ತಲೇ ಇರುತ್ತೇವೆ.

ಕೆಳಜಾತಿಯಲ್ಲಿ ಹುಟ್ಟಿ, ಪರಿಹರಿಸಲಾಗದ ಸಂಕಷ್ಟಗಳಿಗೆ ಸಿಲುಕಿರುವ ಅಸ್ಪೃಶ್ಯರು ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಸೂಕ್ತವಾದ ಮಾರ್ಗಗಳನ್ನು ಹುಡುಕುತ್ತಾರೆ. ಸದ್ಯದ ಮಾರ್ಗವೆಂದರೆ, ಪರಮತದ ಮರೆ ಹೋಗುವುದು! ಅಂದರೆ ಮತಾಂತರಗೊಳ್ಳುವುದು! 'ಹಿಂದೂಧರ್ಮದಲ್ಲಿ ಹುಟ್ಟಿದ ನಾನು ಹಿಂದೂವಾಗಿ ಸಾಯಲಾರೆ' ಎಂದ ಡಾ.ಅಂಬೇಡ್ಕರ್ ಅವರು ತಮ್ಮ ಸಹಸ್ರಾರು ಸಂಗಡಿಗರೊಂದಿಗೆ ಬೌದ್ಧಧರ್ಮವನ್ನು ಸ್ವೀಕರಿಸಿದರು. 'ಹೊಲೆಯ' 'ಮಾದಿಗ' ಅಂದುಕೊಳ್ಳುವುದಕ್ಕಿಂತ 'ಬೌದ್ಧ', 'ಕ್ರಿಶ್ಚಿಯನ್' ಅಂದುಕೊಳ್ಳುವುದರಲ್ಲಿ ಅಳುಕು ಮುಜುಗರ ಇರುವುದಿಲ್ಲ ಎಂಬ ಅನಿಸಿಕೆ ಅಸ್ಪೃಶ್ಯನದು. ಮತಾಂತರವನ್ನೂ ಕೆಲವರು ವಿರೋಧಿಸುತ್ತಾರೆ! ಸನಾತನನ್ಯಾಯವು ಹತ್ತಿರ ಇರುವುದನ್ನು ಕ್ಷಮಿಸುವುದಿಲ್ಲ; ದೂರಹೋಗುವುದನ್ನು ಸಹಿಸುವುದಿಲ್ಲ!

'ಅಸ್ಪೃಶ್ಯರು ಹಿಂದೂಧರ್ಮದ ಒಳಗೇ ಇರಬೇಕು' ಎಂಬ ಗಾಂಧೀಯವರ ಆಶಯವನ್ನು ಕೊಂಚ ಬದಲಿಸಬೇಕು.... ಅಸ್ಪೃಶ್ಯರ ಮತಾಂತರವನ್ನು ವಿರೋಧಿಸುವುದು ಮನೆತುಂಬಾ ಮೆಣಸಿನಕಾಯಿಯ ಘಾಟುಹಾಕಿ 'ಇಲ್ಲೇ ಇರಿ, ಇಲ್ಲೇ ಇರಿ' ಎಂದು

ಒತ್ತಾಯಿಸಿದಂತೆ! ಇದು ಅನ್ಯಾಯದ ಪರಮಾವಧಿ.... ಬೌದ್ಧಮತಕ್ಕೆ ಮತಾಂತರಗೊಳ್ಳುವುದು ಆ ಮಾನವೀಯಧರ್ಮಕ್ಕೆ ನ್ಯಾಯ ಒದಗಿಸಿದಂತೆ.[೧೫]

ಭಯದ ನೆರಳಲ್ಲೇ ಬದುಕುವ ಅಸ್ಪೃಶ್ಯರು, ತಾಂತ್ರಿಕ ಹಾಗೂ ಸಂಪರ್ಕಮಾಧ್ಯಮಗಳ ಕೊರತೆಯಿಂದಾಗಿ ಹಳ್ಳಿಗಾಡುಗಳಲ್ಲಿ ನಡೆಯುವ ಅನ್ಯಾಯಗಳು ಬೆಳಕಿಗೆ ಬಾರದೆ ಹೋಗುವುದರಿಂದ ಅಲ್ಲಲ್ಲೇ ಜೀವಭಯದಲ್ಲಿ ತಲ್ಲಣಿಸುತ್ತಾರೆ. ಹೀಗಾಗಿ ನಿರಂತರ ಸಾಮಾಜಿಕ ಶಿಕ್ಷೆಯಲ್ಲೇ ಬದುಕುವುದು ಅವರ ಸಹನೆಗೊಂದು ಸವಾಲು.

ಅಸ್ಪೃಶ್ಯರನ್ನು ನಿಯಂತ್ರಿಸಲು ಅಥವಾ ತಮ್ಮ ಹಿಡಿತದಲ್ಲೇ ಇರಿಸಿಕೊಳ್ಳಲು ಗ್ರಾಮೀಣಪ್ರದೇಶದ ಯಜಮಾನರುಗಳು ತಮ್ಮದೇ ಆದ ಬಲೆಯನ್ನು ಹರಡಿಕೊಂಡಿರುತ್ತಾರೆ. ನ್ಯಾಯತೀರ್ಮಾನದ ಸಂದರ್ಭದಲ್ಲಿ ಸುಳ್ಳು ಆರೋಪಗಳನ್ನು ಹೊರಿಸುವುದು, ಸರಕಾರಕ್ಕೆ ಅರ್ಜಿ ಸಲ್ಲಿಸಿ, ಅಸ್ಪೃಶ್ಯಕೇರಿಗಳ ಸುತ್ತ ಇರುವ ಬಂಜರುಭೂಮಿಯನ್ನು ವಶಪಡಿಸಿಕೊಳ್ಳುವುದು, ಅಸ್ಪೃಶ್ಯಕೇರಿಗಳನ್ನು ವಶಪಡಿಸಿಕೊಳ್ಳಲು ಸರಕಾರಿ ದಾಖಲೆಗಳಲ್ಲಿ ಬೇನಾಮಿ ಹೆಸರುಗಳನ್ನು ಸೃಷ್ಟಿಸುವುದು, ಆಕಸ್ಮಿಕ ಎಂಬಂತೆ ಗುಡಿಸಲುಗಳನ್ನು ಸುಡುವುದು, ಹೊಲಗಳಲ್ಲಿಯ ಬೆಳೆಗಳನ್ನು ನಾಶಗೊಳಿಸುವುದು, ಪ್ರತಿಭಟಿಸಿದರೆ ಕಳ್ಳತನ ಲೂಟಿ ಇತ್ಯಾದಿ ಆರೋಪಗಳನ್ನು ಹೊರಿಸುವುದು, ಮುಗ್ಧತೆ ಹಾಗೂ ಅನಕ್ಷರತೆಯನ್ನು ದುರುಪಯೋಗಪಡಿಸಿಕೊಂಡು ಅವರ ಕೈಯಿಂದಲೇ ಸುಳ್ಳು ದಾಖಲೆಗಳಿಗೆ ಹೆಬ್ಬೆಟ್ಟಿನ ಮುದ್ರೆ ಒತ್ತಿಸಿಕೊಳ್ಳುವುದು, ಅವರ ಜಮೀನಿಗೆ ಹರಿಯುವ ನೀರನ್ನು ಬೇರೆಡೆಗೆ ತಿರುಗಿಸುವುದು[೧೬] ಮುಂತಾದ ಅನ್ಯಾಯಗಳು ನಿರಂತರ.

೧೯೬೯ರಲ್ಲಿ ಉಡುಪಿಯಲ್ಲಿ ನಡೆದ ವಿಶ್ವಹಿಂದೂ ಪರಿಷತ್ ಸಮ್ಮೇಳನದಲ್ಲಿ ಜಗದ್ಗುರುಗಳು ಹಾಗೂ ಧರ್ಮಾಚಾರ್ಯರು 'ಸಂಪೂರ್ಣ ಹಿಂದೂ ಸಮಾಜವನ್ನು ಅವಿಭಾಜ್ಯ-ಏಕಾತ್ಮಕಭಾವದಿಂದ ಸಂಘಟಿಸಬೇಕು ಹಾಗೂ ಸ್ಪೃಶ್ಯ-ಅಸ್ಪೃಶ್ಯ ಎಂಬ ಭಾವನೆ-ಪ್ರವೃತ್ತಿಗಳಿಂದಾಗಿ ಸಮಾಜ ಜೀವನವು ಒಡೆದುಹೋಗಬಾರದೆಂಬ ಘನ ಉದ್ದೇಶಕ್ಕೆ ಅನುಗುಣವಾಗಿ ವಿಶ್ವದ ಸರ್ವ ಹಿಂದೂಗಳು ಪರಸ್ಪರ ಐಕ್ಯತೆ ಹಾಗೂ ಸಮಾನತಾ ಭಾವದಿಂದ ವರ್ತಿಸತಕ್ಕದ್ದು' ಎಂಬ ಐತಿಹಾಸಿಕ ಘೋಷಣೆ ನೀಡಿದರು.

ಗಾಂಧೀಯವರು 'ನಾವು ನಮ್ಮವರೇ ಆದ ಹಲವರನ್ನು ಧರ್ಮದ ಹೆಸರಿನಲ್ಲಿ ಅಸ್ಪೃಶ್ಯರನ್ನಾಗಿ ಪರಿಗಣಿಸಿ ದೂರವಿರಿಸಿದ ಅನ್ಯಾಯಕ್ಕೆ ಪರಮಾತ್ಮನು ನಮಗೆ ಕೊಟ್ಟ ಶಿಕ್ಷೆ ಎಂದರೆ-ವಿದೇಶೀಯರ ದಬ್ಬಾಳಿಕೆ! ಆದ್ದರಿಂದ ನಾವು ಸ್ವಾತಂತ್ರ್ಯವನ್ನು ಪಡೆಯುವ ಮೊದಲು ಅಸ್ಪೃಶ್ಯತೆಯನ್ನು ನಿವಾರಿಸಬೇಕಾದುದು ನ್ಯಾಯ' ಎಂದು ಬರೆದಿದ್ದಾರೆ.[೧೭]

'ಪ್ರತಿದಿನವೂ ಎಡಗೈಯಲ್ಲಿ ಅಶುದ್ಧವನ್ನು ತೊಳೆದುಕೊಳ್ಳುತ್ತೇವೆ. ಆದರೆ ಅದು ಅಶುದ್ಧವೆಂದು ಅದನ್ನು ಕತ್ತರಿಸಿ ಹಾಕುವುದಿಲ್ಲ. ಹಾಗೆಯೇ ಗ್ರಾಮ-ನಗರಗಳನ್ನು ಶುದ್ಧಗೊಳಿಸುವವರನ್ನು ಮಾತ್ರ ಅಶುದ್ಧರೆಂದು ಹಂಗಿಸುವುದು ಯಾವ ನ್ಯಾಯ?' ಎಂಬುದು ನಾನಾ ಪಟೇಲ್ ಅವರ ಪ್ರಶ್ನೆ.

ಭಾರತದ ಪ್ರತಿಯೊಂದು ಹಳ್ಳಿಯಲ್ಲಿ ಅಸ್ಪೃಶ್ಯರ ಕಾಲೂನಿಗಳು ಸವರ್ಣೀಯರ ವಾಸಸ್ಥಳಕ್ಕಿಂತ ಎಷ್ಟು ಸ್ಪಷ್ಟವಾಗಿ ಪ್ರತ್ಯೇಕವಾಗಿವೆಯೆಂದರೆ ಇಂತಹ ಪ್ರತ್ಯೇಕತೆಯು ದಕ್ಷಿಣಾಫ್ರಿಕಾದಲ್ಲೂ ಸಂಭವಿಸುವುದು ಅಸಾಧ್ಯ.[೧೮]

ಅಸ್ಪೃಶ್ಯರನ್ನು ಕಂಡು ನೊಂದ ಶ್ರೀಧರಪಂಡಿತರು 'ಬಹಿಷ್ಕೃತ ಬಾಂಧವರ ಸ್ಥಿತಿಯನ್ನು ಪ್ರತ್ಯೇಕವಾಗಿ ಭಗವಾನ್ ಶ್ರೀಕೃಷ್ಣನ ಚರಣಾರವಿಂದಗಳಲ್ಲಿ ನಿವೇದಿಸಿಕೊಳ್ಳಲು ಹೋಗುವುದಾಗಿ' ಪತ್ರಮುಖೇನ ಡಾ.ಅಂಬೇಡ್ಕರ್ ಅವರಿಗೆ ತಿಳಿಸಿ, ಆತ್ಮಹತ್ಯೆ ಮಾಡಿಕೊಂಡರು.[೧೯] ಇಂತಹ ಮಾನವೀಯತೆಯೂ ಕೂಡಾ ಸ್ಥಾಪಿತ ಸಂಸ್ಕೃತಿಯ ಕಣ್ಣು ತೆರೆಸಲು ಸಮರ್ಥವಾಗಲಿಲ್ಲ!

ಈ ಸ್ಥಾಪಿತ ಸಂಸ್ಕೃತಿಯ ಮನಸ್ಸುಗಳು ಎಂತಹ ವೈವಿಧ್ಯಮಯ ಎಂಬುದಕ್ಕೊಂದು ಉದಾಹರಣೆ : ಉತ್ತರಪ್ರದೇಶದ ಕೆಲವು ಹಳ್ಳಿಗಳಲ್ಲಿ ಅಸ್ಪೃಶ್ಯರಿಗೆ ಕೊಡಲಾಗುವ ಕೂಲಿರೂಪದ ದವಸಕ್ಕೆ 'ಗೋಬರಾಹ' ಎನ್ನಲಾಗುತ್ತದೆ. ಸುಗ್ಗಿಯ ಕಾಲದಲ್ಲಿ ದವಸ ವನ್ನು ತಿಂದ ದನಗಳು ಹಾಕುವ ಸಗಣಿಯಲ್ಲಿ ಕಾಳುಗಳು ಹಾಗೆಯೇ ಇರುತ್ತವೆ. ಆ ಕಾಳುಗಳನ್ನು ಸಗಣಿಯಿಂದ ಬೇರ್ಪಡಿಸಿ ಅಸ್ಪೃಶ್ಯರಿಗೆ ನೀಡಲಾಗುತ್ತದೆ. ಇದೇ ಗೋಬರಾಹ.[೨೦]

ಅಸ್ಪೃಶ್ಯರಿಗೆ ಎರಗುವ ಬಾಹ್ಯನ್ಯಾಯದ ವಿಧಾನ ಒಂದು ರೀತಿಯದಾದರೆ ಅವರದೇ ಆದ ನ್ಯಾಯತೀರ್ಮಾನ ಇನ್ನೊಂದು ರೀತಿಯದು. 'ಉಚಲ್ಯ' ಕೃತಿಯಲ್ಲಿ ಲೇಖಕ ಲಕ್ಷ್ಮಣ ಗಾಯಕವಾಡ ಅವರ ಒಂದು ವಿವರಣೆ : ಒಮ್ಮೆ ಹಿರಿಯ ಭಾಭಿಯ ಸಂಬಂಧಿಕರ ಮದುವೆಗಾಗಿ 'ಸೆಲೆಗೆರೆ' ಎಂಬ ಊರಿಗೆ ಹೋಗಿದ್ದೆವು. ಮದುವೆಗೆ ಮೊದಲೇ ಜಗಳ ಆರಂಭವಾಯಿತು. ಮದುಮಗಳ ಅಜ್ಜಿ ಒಬ್ಬ ಮರಾಠ ಗಂಡಸನ್ನು ಮಡಗಿಕೊಂಡಿದ್ದಳಂತೆ. ಅದಕ್ಕಾಗಿ ಮದುಮಗಳ ಶುದ್ಧೀಕರಣವಾಗಬೇಕೆಂಬುದು ಕೆಲವರ ಹಠ. ಪಂಚಾಯಿತಿ ಸೇರಿತು. ಕೆಲವರು ಹೇಲು ತಿನ್ನಿಸಬೇಕೆಂದರು. ಮತ್ತೆ ಕೆಲವರು ಎರಡುಸಾವಿರ ರೂಪಾಯಿ ಗಳ ದಂಡ ಎಂದರು. ಇನ್ನು ಕೆಲವರು ಮೂಗು ಕತ್ತರಿಸಬೇಕೆಂದರು. ಕಡೆಗೆ ಮದುಮಗಳ ಅವ್ವನ ತಲೆಗೂದಲನ್ನೆಲ್ಲಾ ಕತ್ತರಿಸಿ ಎಂದೊಬ್ಬ ಸೂಚಿಸಿದ. ಎಲ್ಲರೂ ಒಪ್ಪಿದರು...!

ಪೂರ್ವಗ್ರಹಪೀಡಿತ ಹಾಗೂ ಧಾರ್ಮಿಕ ಮನೋಭಾವದ ನ್ಯಾಯ-ಶಿಕ್ಷೆಯ ಸ್ವರೂಪವು ಸುಲಭವಾದ ವಿಶ್ಲೇಷಣೆಗೆ ನಿಲುಕುವುದಿಲ್ಲ. ನಿಲುಕಿದರೂ ಅರ್ಥ ಸ್ಪಷ್ಟಗೊಳ್ಳುವುದಿಲ್ಲ. ಗೊಂದಲಮಯವಾದ ನ್ಯಾಯ-ಶಿಕ್ಷೆಯ ಸಂದರ್ಭದಲ್ಲಿ ಅಪರಾಧಿಸ್ಥಾನದ ಅಸ್ಪೃಶ್ಯ ಬಲಿಪಶುವೇ ಸರಿ.

### ಸಂವಿಧಾನದ ನ್ಯಾಯ

ಶತಶತಮಾನಗಳಿಂದಲೂ ಸವರ್ಣೀಯ ನ್ಯಾಯದ ಹಿಡಿತದಲ್ಲಿದ್ದ ಅಸ್ಪೃಶ್ಯ ಸಮುದಾಯವು ನೆಮ್ಮದಿಯ ನಿಟ್ಟುಸಿರು ಬಿಟ್ಟದ್ದೆಂದರೆ ಸ್ವತಂತ್ರ ಭಾರತದ ಸಂವಿಧಾನಾತ್ಮಕ ನ್ಯಾಯದಿಂದ ಎನ್ನಬಹುದು. ನ್ಯಾಯ-ಶಿಕ್ಷೆ ಎಂಬುದು ಪ್ರಬಲ ಕೋಮುಗಳ ಅಘೋಷಿತ ಹಕ್ಕು ಎಂಬುದು ಐತಿಹಾಸಿಕ ಸತ್ಯ. ಆದರೆ ಅಂತಹ ಕಾನೂನುಗಳು ಜಾತೀಯ

ಸ್ವರೂಪವನ್ನು ಮೀರಿ ಸಾರ್ವಜನಿಕ ಹಿತಾಸಕ್ತಿಗೆ ಸ್ಪಂದಿಸಿದ್ದು ಈ ಸಂವಿಧಾನಾತ್ಮಕ ನ್ಯಾಯದಿಂದ ಮಾತ್ರ. ಇದರಲ್ಲಿ ಮೇಲು-ಕೀಳು, ಬಡವ-ಬಲ್ಲಿದ, ವಿದ್ಯಾವಂತ-ಅವಿದ್ಯಾವಂತ, ಹಳ್ಳಿಗ-ನಗರಿಗ ಎಂಬಂಥ ಭೇದ-ಭಾವಗಳಿಗೆ ಮಾನ್ಯತೆ ಇಲ್ಲ. ಆದ್ದರಿಂದ ಮೇಲುಜಾತಿಯವರ ಪಂಚಾಯಿತಿಕಟ್ಟೆಯ (ಅ)ನ್ಯಾಯಗಳಿಂದ ಅಸ್ಪೃಶ್ಯರು ಪಾರಾದದ್ದು ಸ್ವತಂತ್ರ ಭಾರತದ ಒಂದು ವಿಶೇಷ ಸಂಗತಿ. ಆದ್ದರಿಂದಲೇ ಈಗಿನ ಅಸ್ಪೃಶ್ಯ ಸಮುದಾಯವು ತಮ್ಮ ಯಾವುದೇ ದೂರನ್ನು ಪೊಲೀಸ್‌ಠಾಣೆಗೆ ನೀಡಲು ಇಚ್ಛಿಸುತ್ತದೆ. ಹಾಗೆಯೇ, ನ್ಯಾಯಾಲಯದ ನ್ಯಾಯವನ್ನು ನಿರೀಕ್ಷಿಸುತ್ತದೆ!

ಪೊಲೀಸ್‌ಠಾಣೆಯಲ್ಲಿರುವವರೂ ಕೂಡಾ ನರಮಾನವರೇ ಅಲ್ಲವೆ! ಅವರೂ ಯಾವುದಾದರೊಂದು ಜಾತಿಗೆ ಸೇರಿದವರೇ ಆಗಿರುತ್ತಾರಲ್ಲವೆ? ಅಂತಹ ಕೆಲವರ ಮನಗಳಲ್ಲಿ ಚಿರಂಜೀವಿ ಮನುವಿನ ಆತ್ಮಸಂಚಲನೆ ಇಲ್ಲದೆ ಇದ್ದೀತೆ! ಎಂಬ ಸಣ್ಣ ಅನುಮಾನ ಕೆಲವರಿಗೆ!

ಕಾನೂನು ಪ್ರಕಾರ ನ್ಯಾಯ ದೊರಕೀತು ಎಂಬ ಭರವಸೆಯೂ ಕೂಡಾ ಭಯಾನಕವಾಗುವಂತಹ ಸಂಭವವೂ ಉಂಟು! ಸೆಪ್ಟಂಬರ್ ೧೬, ೨೦೦೨ರ 'ಪ್ರಜಾವಾಣಿ' ದಿನಪತ್ರಿಕೆಯಲ್ಲಿ ಪ್ರಕಟವಾಗಿರುವ ಒಂದು ಸುದ್ದಿ : 'ತನ್ನ ಗ್ರಾಮದ ನೆರೆಹೊರೆಯವರ ಉಪಟಳ ತಾಳಲಾರದೆ ಠಾಣೆಗೆ ದೂರುನೀಡಲು ಹೋದ ಠಾಕುರ್‌ದಾಸ್ (೪೦) ಎಂಬ ದಲಿತನೊಬ್ಬನನ್ನು ಪೊಲೀಸ್ ಸಿಬ್ಬಂದಿಯೇ ಹೊಡೆದು ಸಾಯಿಸಿರುವ ಘಟನೆ ಸಿಮ್ರಾ ಪೊಲೀಸ್‌ಠಾಣೆಯಲ್ಲಿ ಜರುಗಿದೆ.' ಇಂತಹ ಘಟನೆಗಳಿಂದ ಅಸ್ಪೃಶ್ಯ ಸಮುದಾಯಕ್ಕೆ ನ್ಯಾಯವಾದ ನ್ಯಾಯ, ರಕ್ಷಣೆಗಳೇ ದೊರಕುವುದರ ಬಗ್ಗೆ ಭರವಸೆ ಇಲ್ಲವಾಗುತ್ತದೆ. ಈ ದೇಶದ ದೈವನಿರ್ಣಯವೇ ಹೀಗೇನೋ ಎಂಬ ಹತಾಶೆ! ಬದುಕು ಅತಂತ್ರ; ನೆಮ್ಮದಿ ಕನಸು! ಹೀಗಾಗಿ ಅಶ್ಪೃಶ್ಯನ ವೈಯಕ್ತಿಕ ಸ್ಥಿತಿ 'ಮುಟ್ಟಿದರೆ ಮುನಿ' ಎಂಬಂತಾಗಿದೆ. 'ಒಂದು ಕೆನ್ನೆಗೆ ಏಟು ಬಿತ್ತು' ಎನ್ನುವಂತಿಲ್ಲ. ಏಕೆಂದರೆ ಆ ಇನ್ನೊಂದು ಕೆನ್ನೆಗೂ ಏಟುಗಳು ಬೀಳುವ ಸಾಧ್ಯತೆಯೇ ಹೆಚ್ಚು! ಆದ್ದರಿಂದ ಮೊದಲ ಒಂದು ಏಟನ್ನು ಬಾಯಿಮುಚ್ಚಿಕೊಂಡು ಸಹಿಸಿಕೊಳ್ಳುವುದೇ ಕ್ಷೇಮ ಎಂಬಂತಹ ಅಮಾಯಕ ನಿರ್ಣಯಕ್ಕೆ ಬರಬೇಕಾಗಿದೆ. ಹಾಗೆ ನೋಡಿದರೆ ಬಹುಸಂಖ್ಯಾತರಾದ ಅಸ್ಪೃಶ್ಯರೇ ಈ ದೇಶದ ಸಾಂಸ್ಕೃತಿಕ ಯಜಮಾನಿಕೆಯನ್ನು ವಹಿಸಿಕೊಳ್ಳಬೇಕಾಗಿತ್ತು. ಆದರೆ ಆಗಿರುವುದೇ ಬೇರೆ! ಇದನ್ನೆಲ್ಲಾ ಆಶ್ಚರ್ಯಕರ ಎನ್ನಬೇಕೋ ದುರದೃಷ್ಟಕರ ಎನ್ನಬೇಕೋ ತಿಳಿಯುತ್ತಿಲ್ಲ! ಈ ದೇಶದ ನ್ಯಾಯಕ್ಕೆ ಸಂಬಂಧಿಸಿದಂತೆ ಸಂವಿಧಾನ ಮಿಗಿಲೋ ಧರ್ಮ ಮಿಗಿಲೋ ಎಂಬ ಪ್ರಶ್ನೆಗೆ 'ಧರ್ಮವೇ ಮಿಗಿಲು' ಎನ್ನುತ್ತದೆ ಸನಾತನ ಮನಸ್ಸು!

೧೯೭೮-೭೯ರಲ್ಲಿರಬಹುದು. ವಿಜಾಪುರ ಜಿಲ್ಲೆಯ ಒಬ್ಬ ಬಡ ಹೆಣ್ಣುಮಗಳು ಯಾವುದೋ ಒಂದು ತೀರ್ಪಿಗಾಗಿ ಉಚ್ಚನ್ಯಾಯಾಲಯಕ್ಕೆ ಎಡತಾಕಿ, ತಂಗಳು ಬುತ್ತಿ, ಒಣರೊಟ್ಟಿ ತಿಂದು, ನಲ್ಲಿನೀರು ಕುಡಿದು ಮರದಡಿಯಲ್ಲೇ ಇರುತ್ತಿದ್ದಳು. ಒಂದುದಿನ ನ್ಯಾಯಾಲಯದ ಮುಂದೆ ನಿಂತು, ಮಣ್ಣುತೂರುತ್ತಾ 'ಇದಕ್ಕೆ ಬೆಂಕಿಬಿದ್ದು ಹೋಗ'

ಎಂದು ಶಪಿಸಿದಳು. ಇದಾದ ಕೆಲವೇ ದಿನಗಳಲ್ಲಿ ಆ ನ್ಯಾಯಾಲಯಕ್ಕೆ ಬೆಂಕಿಬಿದ್ದು ಕೆಲವು ಭಾಗಗಳು ಸುಟ್ಟುಹೋದವು.[೨೧]

ಕೊಲ್ಕತ್ತಾದ ಶಾಲೆಯೊಂದರ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಅರ್ಚನಾ ಗುಹಾ ಎಂಬಾಕೆಯ ಸಹೋದರ ನಕ್ಸಲೈಟ್ ಎಂಬ ಗುಮಾನಿಯ ಮೇಲೆ ಆಕೆಯನ್ನು ಜುಲೈ ೧೭, ೧೯೭೭ರಲ್ಲಿ ಖೈದು ಮಾಡಲಾಯಿತು. ಇಪ್ಪತ್ತೇಳು ದಿನಗಳವರೆಗೆ ಆಕೆಯನ್ನು ಸೆರೆಮನೆಯಲ್ಲಿಟ್ಟು ಚಿತ್ರಹಿಂಸೆ ಕೊಡಲಾಯಿತು. ಆಕೆ ತನ್ನನ್ನು ಅಕ್ರಮಬಂಧನದಲ್ಲಿರಿಸಿದವರ ಮೇಲೆ ಫಿರ್ಯಾದು ದಾಖಲು ಮಾಡಿದ್ದಾಳೆ. ಆದರೆ ಅದು ಇಂದಿನವರೆಗೂ (ಲೇಖಕರು ಲೇಖನ ಬರೆದ ದಿನದವರೆಗೂ) ಇತ್ಯರ್ಥವಾಗಿಲ್ಲ. ಆದ್ದರಿಂದ ಶಾಸನವೇ ಸತ್ತಿದೆ ಎನ್ನುತ್ತಾರೆ ಶ್ರೀ ಉಪೇಂದ್ರ ಭಕ್ಷಿ.[೨೨]

ಸಂವಿಧಾನವು ಎಲ್ಲರಿಗೂ ಕೆಲವು ಮೂಲಭೂತ ಹಕ್ಕುಗಳನ್ನು ನೀಡಿದೆ. ಅವುಗಳಲ್ಲಿ ಮುಖ್ಯವಾದವುಗಳು : ಜಾತಿ-ಲಿಂಗ-ಧರ್ಮ ಮೊದಲಾದವುಗಳ ಆಧಾರದ ಮೇಲೆ ಯಾವುದೇ ತರಹದ ತಾರತಮ್ಯವನ್ನು (ಸರಕಾರವು) ಮಾಡಬಾರದು. ೧೪ ರಿಂದ ೧೮ನೇ ವಿಧಿಗಳು ವ್ಯಕ್ತಿಗಳ ನಡುವಿನ ಭೇದ-ಭಾವ ಮಾಡುವುದನ್ನು ತಡೆಗಟ್ಟುತ್ತದೆ. ೧೪ನೇ ವಿಧಿಯ ಪ್ರಕಾರ ಎಲ್ಲರೂ ಸಮಾನರು. ೧೫ರ ಪ್ರಕಾರ ಯಾವುದೇ ವ್ಯಕ್ತಿಗೆ ಜಾತಿ-ಲಿಂಗ-ಧರ್ಮ ಆಧಾರದ ಮೇಲೆ ಭೇದ-ಭಾವ ಮಾಡಬಾರದು. ಮುಖ್ಯವಾಗಿ ೧೭ನೇ ವಿಧಿಯು ಅಸ್ಪೃಶ್ಯತಾಚರಣೆಯನ್ನು ಸ್ಪಷ್ಟವಾಗಿ ನಿಷೇಧಿಸಿದೆ.

ಅಸ್ಪೃಶ್ಯತಾ ನಿವಾರಣಾ ಕಾಯದೆ ಅನ್ವಯ ಅಸ್ಪೃಶ್ಯತೆ ಆಚರಿಸುವವರಿಗೆ ನಿಗದಿತ ಅವಧಿಯ ಕಠಿಣಶಿಕ್ಷೆ ಹಾಗೂ ನಿಗದಿತ ಪ್ರಮಾಣದ ದಂಡ ವಿಧಿಸಲಾಗುತ್ತದೆ. ೨೧ನೇ ವಿಧಿಯ ಪ್ರಕಾರ ಜೀವನ ಸ್ವಾತಂತ್ರ್ಯ ಹಾಗೂ ಆಸ್ತಿಪಾಸ್ತಿಗಳಿಗೆ ಧಕ್ಕೆಯನ್ನು ಮಾಡುವುದು ಅಪರಾಧ. ಮನರಂಜನಾ ಕೇಂದ್ರ, ರೈಲು-ಬಸ್ಸು-ಗಾಡಿ ಇತ್ಯಾದಿ ವಾಹನಗಳು, ಸ್ಮಶಾನ ಮುಂತಾದವುಗಳಿಗೆ ಇದ್ದ ನಿಷೇಧವನ್ನು ನಿವಾರಿಸಲಾಗಿದೆ.

ಇಂತಹ ನಿಷೇಧಗಳು ಅಸ್ಪೃಶ್ಯನ ಪಾಲಿಗೆ ವರದಾನಗಳೆಂದೇ ಹೇಳಬಹುದು. ಶಕ್ತಿ ಇದೆ ಎಂಬ ಪ್ರಾಥಮಿಕ ತತ್ವವು ಅವರಿಗೆ ತಿಳಿದಿರಲಿಲ್ಲ. ಅಲ್ಲದೆ ನಾಯಕತ್ವದ ಕೊರತೆ! ಹೀಗಾಗಿ ವಿಶಾಲವಾದ ಭರತಖಂಡದ ಬಹುಸಂಖ್ಯಾತ ಕೆಳಜಾತಿಯ ಜನರು ಒಗ್ಗೂಡದಿದ್ದುದರ ಫಲವಾಗಿಯೇ ಇಮ್ಮಡಿ-ಮುಮ್ಮಡಿ ಪ್ರಮಾಣದ ಶೋಷಣೆ-ದೌರ್ಜನ್ಯಗಳಿಗೆ ಒಳಗಾದರು ಎನ್ನಬೇಕಾಗಿದೆ.

ಇತ್ತೀಚೆಗೆ ರಾಷ್ಟ್ರದಾದ್ಯಂತ ದಲಿತ-ಅಸ್ಪೃಶ್ಯ ಸಂಘ-ಸಂಘಟನೆಗಳು ಅಸ್ತಿತ್ವದಲ್ಲಿವೆ. ಇವುಗಳಿಂದಾಗಿ ಶೋಷಿತ ಜನರಿಗೆ ಒಂದು ಭರವಸೆ ಹಾಗೂ ಸಂರಕ್ಷಣೆಯ ಧೈರ್ಯ ಮೂಡುತ್ತಿದೆ. ನಡೆಯುವ ಶೋಷಣೆ ಜಾತೀಯನ್ಯಾಯಗಳ ಬಗ್ಗೆ ಸಂಘ-ಸಂಸ್ಥೆಗಳು ಪ್ರತಿಭಟಿಸುತ್ತವೆ. ನ್ಯಾಯಕ್ಕಾಗಿ ಹೋರಾಡುತ್ತವೆ. ಹಿಂದಿನಹಾಗೆ ಹೇಳುವವರೂ ಕೇಳುವವರೂ ಇಲ್ಲದ ಅಸ್ಪೃಶ್ಯನ ಆರ್ತನಾದಗಳು ಅಲ್ಲಲ್ಲೇ ಉಡುಗಿಹೋಗುವುದಿಲ್ಲ.

ಯಾವುದೇ ಒಂದು ಹಳ್ಳಿಗಾಡಿನಲ್ಲಿಯ ಸಣ್ಣ ದೌರ್ಜನ್ಯ ಪ್ರಕರಣವಾದರೂ ಬಯಲಿಗೆ ಬಂದುಬಿಡುತ್ತದೆ. ಹೀಗಾಗಿ ಅದನ್ನು ಸರಕಾರ ಗಮನಿಸುವುದು ಅನಿವಾರ್ಯವಾಗುತ್ತದೆ.

ಆದರೂ ಅಸ್ಪೃಶ್ಯತೆ ಸಂಪೂರ್ಣ ನಾಶವಾಗಿದೆಯೆ? ಜಾತೀಯ ವಿಷಜಂತುಗಳು ಮರೆಯಾಗಿವೆಯೆ? ಸರಕಾರದ ಪೂರ್ಣರಕ್ಷಣೆ ದೊರಕುತ್ತಿದೆಯೆ? ಮೀಸಲಾತಿನೀತಿಯು ಸರಿಯಾಗಿ ಜಾರಿಯಾಗುತ್ತಿದೆಯೆ? ಗ್ರಾಮೀಣಪ್ರದೇಶದ ಅಸ್ಪೃಶ್ಯ ನೆಮ್ಮದಿಯಾಗಿ ಬದುಕುತ್ತಿದ್ದಾನೆಯೆ? ನ್ಯಾಯಕ್ಕಾಗಿ ಹೋರಾಡುವ ದಲಿತಸಂಘಟನೆಗಳಿಗೆ ಮಾನ್ಯತೆ ಇದೆಯೆ? ಧಾರ್ಮಿಕ-ಸಾಮಾಜಿಕ-ಸಾಂಸ್ಕೃತಿಕ ನ್ಯಾಯಗಳು ಎಲ್ಲರಿಗೂ ಸಮಾನವಾಗಿವೆಯೆ? ಅಸ್ಪೃಶ್ಯನಿಗೆ ವಿಧಿಸಲಾಗುವ ಶಿಕ್ಷೆಯು ಅಪರಾಧದ ಮಟ್ಟವನ್ನು ಅವಲಂಬಿಸಿದೆಯೆ? ಇಂತಹ ನೂರಾರು ಪ್ರಶ್ನೆಗಳು ತಲೆಎತ್ತಿ ನಿಲ್ಲುತ್ತವೆ!

ರಾಜ್ಯದಲ್ಲಿ-ದೇಶದಲ್ಲಿ ದಾಖಲಾಗಿರುವ ದೌರ್ಜನ್ಯ ಪ್ರಕರಣಗಳು ಎಷ್ಟು? ಅವುಗಳಲ್ಲಿ ಎಷ್ಟುಮಂದಿ ಆರೋಪಿಗಳಿಗೆ ಶಿಕ್ಷೆ ವಿಧಿಸಲಾಗಿದೆ? ಎಷ್ಟುಮಂದಿಗೆ ನ್ಯಾಯ ದೊರಕಿದೆ?

'ರಾಜ್ಯದಲ್ಲಿ ಸುಮಾರು ಇಪ್ಪತ್ತುಸಾವಿರ ದೌರ್ಜನ್ಯ ಪ್ರಕರಣಗಳು ದಾಖಲಾಗಿವೆ! ಆದರೆ ಯಾವ ಒಬ್ಬ ಆರೋಪಿಗೂ ಶಿಕ್ಷೆಯಾಗಿಲ್ಲ! ಇಂತಹ ಕಾನೂನುಗಳು ಬೇಕೆ?!'[೨೩] ಇದಕ್ಕೆಲ್ಲಾ ಕಾರಣ-ಕಾನೂನುಗಳಲ್ಲಿಯ ಗೊಂದಲ ಎನ್ನಬೇಕೆ? ಅಥವಾ ಕಾನೂನುಗಳನ್ನೇ ಹಿಂಡಿ ಹಿಪ್ಪೆಮಾಡುವ ಧಾರ್ಮಿಕ 'ಶಕ್ತಿ' ಎನ್ನಬೇಕೆ?!

**ಕಪ್ಪುನ್ಯಾಯ**

ನ್ಯಾಯತೀರ್ಮಾನದ ಸಂದರ್ಭದಲ್ಲಿ ಯಾವುದೇ ರೀತಿ ನೀತಿ ಇಲ್ಲದೆ, ಯಾವುದೋ ಪೂರ್ವಗ್ರಹ ಪೀಡನೆಯಿಂದ, ಕೇವಲ ಶಿಕ್ಷೆ ವಿಧಿಸಲೇಬೇಕೆಂಬ ಉದ್ದೇಶದಲ್ಲಿ, ಸುಳ್ಳು ಸಾಕ್ಷ್ಯಗಳ ಆಧಾರದ ಮೇಲೆ, ಅಗತ್ಯಕ್ಕಿಂತ ಹೆಚ್ಚಾದ ಶಿಕ್ಷೆ ವಿಧಿಸುವುದನ್ನು 'ಕಪ್ಪುನ್ಯಾಯ' ಎನ್ನಬಹುದು.

ಹೇಗೆ ನೋಡಿದರೂ ಪುರಾಣ, ಸ್ಮೃತಿ, ಇತಿಹಾಸ, ಜಾನಪದ, ಸಮಾಜ ಮೊದಲಾದ ಸ್ತರಗಳಲ್ಲಿ ಅಂತಹ ನ್ಯಾಯ ವಿಶೇಷವೇನಲ್ಲ. ಅದಕ್ಕೆ ಸಿಲುಕಿ ಅತಿ ಹೆಚ್ಚು ನೋವು-ಸಂಕಟಗಳನ್ನು ಅನುಭವಿಸಿದವರೆಂದರೆ ಅಸ್ಪೃಶ್ಯರು! ಮತ್ತು ಆರ್ಥಿಕವಾಗಿ ಹಿಂದುಳಿದ ಮೇಲುಜಾತಿಯ ಅಮಾಯಕರು!

ಈ ನ್ಯಾಯದ ಪ್ರಕಾರ ಬಲಾತ್ಕಾರದ ದುಡಿಮೆಗೆ ಕಾರಣವಾಗುವ ಅಂಶಗಳು ಹಲವಾರು. ಒಂದು ವ್ಯಕ್ತಿ ಅಥವಾ ಅವನ ಪೂರ್ವಿಕರು ಮಾಡಿದ ಸಾಲ ತೀರಿಸಿಲ್ಲದಿದ್ದರೆ, ಯಾವುದಾದರೂ ಸಾಂಪ್ರದಾಯಿಕ ಅಥವಾ ಸಾಮಾಜಿಕ ಕಟ್ಟಳೆಗಳಿಗೆ ಬದ್ಧವಾಗಿದ್ದರೆ, ಉತ್ತರಾಧಿಕಾರದಿಂದ ತನಗೆ ಬರಬೇಕಾದ ಯಾವುದಾದರೂ ಬಾಧ್ಯತೆಗೆ ಅನುಗುಣವಾಗಿ, ಕೀಳುಕುಲದಲ್ಲಿ ಹುಟ್ಟಿದವನು ಅಥವಾ ಬಡವ ಎಂಬ ಕಾರಣಕ್ಕಾಗಿ ಯಾವುದೇ ಆರೋಪ ಹೊರಿಸಬಹುದು; ಯಾವುದೇ ಶಿಕ್ಷೆಗೆ ಗುರಿಪಡಿಸಬಹುದು! ಈ ಬಗೆಯ ನ್ಯಾಯವನ್ನು 'ತೋಳ- ಕುರಿಮರಿ ನ್ಯಾಯ' ಎಂದೂ ಕರೆಯಬಹುದು.

ಅಸ್ಪೃಶ್ಯನು ತಾನು ಮಾಡಿದ ಕೆಲಸದ ಬಗ್ಗೆ ಕೂಲಿ ಕೇಳಬಾರದು; ಧಣಿಯಾದವನು ತನಗೆ ತೋಚಿದಾಗ, ತೋಚಿದಷ್ಟು ಕೂಲಿ ನೀಡಬಹುದು; ನವ ವಿವಾಹಿತ ದಂಪತಿಗಳು ಊರಿನ ಮುಖ್ಯಸ್ಥರ ಮನೆಯಂಗಳದಲ್ಲಿ ನರ್ತಿಸಬೇಕು; ಗ್ರಾಮದೇವತೆಗೆ ಕುರಿ ಕೋಣಗಳ ಬಲಿ ಕೊಡಬೇಕು; ಹಳ್ಳಿಯ ಸ್ವಾಸ್ಥ್ಯಕ್ಕಾಗಿ ಸರಗ ಹಾಕಬೇಕು; ವಿಶೇಷ ಸಂದರ್ಭಗಳಲ್ಲಿ ಅಪಹಾಸ್ಯಕ್ಕೆ ಗುರಿಯಾಗಿ ಸಾರ್ವಜನಿಕರಿಗೆ ಮನರಂಜನೆ ಒದಗಿಸಬೇಕು; ಸವರ್ಣೀಯ ರೊಂದಿಗೆ ಯಾವುದೇ ಕ್ರೀಡೆ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಬಾರದು; ನಡೆ ನುಡಿಗಳು ಕೀಳುಜಾತಿಗೆ ತಕ್ಕಂತಿರಬೇಕು - ಇತ್ಯಾದಿ ಅವಮಾನಕರ ಹಾಗೂ ಶ್ರಮದಾಯಕ ಪ್ರವೃತ್ತಿಗಳನ್ನು ನ್ಯಾಯವಾದ ಕರ್ತವ್ಯವೆಂದೇ ನಿರ್ವಹಿಸಬೇಕು. ಕಪ್ಪುನ್ಯಾಯದ ವಿಸ್ತಾರ ಅನಂತವಾದುದು.

ಪುಣೆಯ ನ್ಯಾಯಾಧೀಶರೊಬ್ಬರು - ಮೇಲುವರ್ಗದ ಯುವತಿಯೊಬ್ಬಳನ್ನು ಅಸ್ಪೃಶ್ಯ ಯುವಕನೊಬ್ಬ ಪ್ರೀತಿಸಿದ ಎಂಬ ಕಾರಣಕ್ಕೆ ಅವನ ನಡವಳಿಕೆಯಲ್ಲಿ ಯಾವುದೇ ದೋಷ ಕಂಡುಬಾರದಿದ್ದರೂ ಅವನ ಗೆಳೆಯರಲ್ಲಿ ಒಬ್ಬನ ಯಾವುದೋ ಒಂದು ತಪ್ಪನ್ನು ಆಧಾರವಾಗಿಟ್ಟುಕೊಂಡು ಅವನ ಮೇಲೆ ಆಪಾದನೆಯನ್ನು ಸೃಷ್ಟಿಸಿದರು![೨೪] ಇದಕ್ಕೆ ವ್ಯಾಖ್ಯಾನ ಬೇಡ.

ವ್ಯಾಖ್ಯಾನ ಅಗತ್ಯತೆಯಿರುವ ಒಂದು ಉದಾಹರಣೆ : ದೇವಾಲಯವೊಂದರಲ್ಲಿ ಬ್ರಾಹ್ಮಣನೊಬ್ಬ ಕಳ್ಳತನ ಮಾಡಿ ಸಿಕ್ಕಿಬೀಳುತ್ತಾನೆ. ಪಂಚಾಯಿತಿ ನಡೆಸಿದ ಬ್ರಾಹ್ಮಣ ಪಂಚರು 'ಇದು ದೈವನಿರ್ಣಯ! ಕಳ್ಳತನ ಮಾಡಿದವನು ಕೇವಲ ನಿಮಿತ್ತ ಮಾತ್ರ' ಎಂದು ಸುಮ್ಮನಾಗುತ್ತಾರೆ. ಇನ್ನೊಮ್ಮೆ ಅದೇ ದೇವಾಲಯದಲ್ಲಿ ಅಸ್ಪೃಶ್ಯನೊಬ್ಬ ಕಳ್ಳತನ ಮಾಡಲು ಹೋಗಿ ಸಿಕ್ಕಿಹಾಕಿಕೊಳ್ಳುತ್ತಾನೆ. ಆಗ ಅದೇ ಪಂಚರು 'ಇದು ದೈವದ್ರೋಹ! ಅಕ್ಷಮ್ಯ ಅಪರಾಧ' ಎಂದು ಕಠಿಣಶಿಕ್ಷೆಗೆ ಗುರಿಮಾಡುತ್ತಾರೆ![೨೫] ಇದು ಧಾರ್ಮಿಕ ನ್ಯಾಯವೂ ಹೌದು; ಕಪ್ಪುನ್ಯಾಯವೂ ಹೌದು.

ಧಾರ್ಮಿಕನ್ಯಾಯ ಹಾಗೂ ಕಪ್ಪುನ್ಯಾಯಗಳ ಮಧ್ಯೆ ವ್ಯತ್ಯಾಸ ಕಂಡುಬರುವುದಿಲ್ಲ. ಅಸ್ಪೃಶ್ಯನ ಪಾಲಿಗೆ ನ್ಯಾಯವೇ ಶಿಕ್ಷೆ; ಶಿಕ್ಷೆಯೇ ನ್ಯಾಯ! ಆದರೂ ಅವನು ನಿರ್ನಾಮವಾಗಲಿಲ್ಲ! ಮಾನಸಿಕ ಹಾಗೂ ದೈಹಿಕ ಸಾಮರ್ಥ್ಯವನ್ನು ಕಳೆದುಕೊಳ್ಳಲಿಲ್ಲ! ಸಮಾಜದಲ್ಲೂ ರಾಜಕೀಯದಲ್ಲೂ ಯಾವುದೇ ಪಿತೂರಿ ನಡೆಸಲಿಲ್ಲ! ಕುತಂತ್ರ ನಡೆಸಲಿಲ್ಲ! 'ಗೋಬರಾಹ'ವನ್ನೇ ತಿಂದು ಬದುಕಿದ! ಯಾರಿಗೂ ಹೊರೆಯಾಗಲಿಲ್ಲ! ಊರಹೊರಗಿನ ಕೊಳಚೆಯಲ್ಲಿ ಬಾಳಿದ! ಇವನ ಪಾಲಿಗೆ ಬೆಳದಿಂಗಳು ಇಂಪಾಯಿತು! ಬಯಲುಗಾಳಿ ಸೊಂಪಾಯಿತು! ಮಣ್ಣು ಮಾತೆಯಾಯಿತು! ಇವನಿಗೆ ಪ್ರಕೃತಿ ಮಾತೆಯ ನ್ಯಾಯವಾದರೂ ದೊರಕಿತಲ್ಲ! ಅಂದಹಾಗೆ ಇವನು ಸೃಷ್ಟಿಯ ದೃಷ್ಟಿಯಲ್ಲಿ ಅಸ್ಪೃಶ್ಯನಲ್ಲ! 'ದೇವರ' ದೃಷ್ಟಿಯಲ್ಲಿ ಬಹಿಷ್ಕೃತನೂ ಅಲ್ಲ! ನ್ಯಾಯ ಎಂಬುದೇ ಇದ್ದಿದ್ದರೆ ಇವನು ಕೇವಲ ಮಾನವನಲ್ಲ; ಮಹಾಮಾನವ!

## ಆಶಯ

ನ್ಯಾಯತೀರ್ಮಾನ ಸಂದರ್ಭದಲ್ಲಿ ಅಪರಾಧಿಯ ಜಾತಿಯನ್ನು ಗಮನಿಸಬಾರದು. ಅಪರಾಧಕ್ಕೆ ತಕ್ಕ ಶಿಕ್ಷೆ ವಿಧಿಸಲ್ಪಡಬೇಕೇ ವಿನಾ ಜಾತಿಗೆ ತಕ್ಕ ಶಿಕ್ಷೆ ಎಂಬಂತಾಗಬಾರದು. ಧರ್ಮ ನಿರಪೇಕ್ಷವಾದ ಈ ದೇಶದಲ್ಲಿ, ಪ್ರಜಾಪ್ರಭುತ್ವದ ಸುಂದರ ವ್ಯವಸ್ಥೆಯಲ್ಲಿ ಸಾಮಾಜಿಕ ಹಾಗೂ ಸಂವಿಧಾನಾತ್ಮಕ ನ್ಯಾಯವೇ ಅತ್ಯಂತ ಸೂಕ್ತ. ಈ ಅರ್ಥಪೂರ್ಣತೆಯೇ ಸಮಾನತೆಯ ಆಶಯಕ್ಕೂ ಮಾನವ ಬದುಕಿನ ಸ್ವಾಸ್ಥ್ಯಕ್ಕೂ ಸ್ವರ್ಣ ಸೋಪಾನ.

## ಟಿಪ್ಪಣಿಗಳು

೧. ಎಸ್.ಆರ್.ಗುರುನಾಥ್, ಹಾಡಿದ್ದೇ ಹಾಡು, ೧೯೮೭, ಪು.೧೩
೨. 'ಅಸ್ಪೃಶ್ಯತೆ ಒಂದು ಸವಾಲು', ಜಾಗರಣ ಪ್ರಕಾಶನ, ಪು.೩
೩. 'ಸಂಕ್ರಮಣ', ಡಿಸೆಂ.೮೫- ಜನ.೮೬, ಬಿ.ಸದಾಶಿವ, ಪು.೬೯
೪. 'ಭಾರತೀಯ ಚಿಂತನೆ ಹಿಂದೂಧರ್ಮ ಕಮ್ಯುನಿಸಂ', ಪು.೩೭
೫. 'ಮಾರ್ಕ್ಸ್‌ವಾದ ಮತ್ತು ಭಗವದ್ಗೀತೆ', ಎಸ್.ಜಿ.ಸರ್ದೇಸಾಯಿ, ೧೯೮೪, ಪು.೫೧
೬. ಬಂಗಾರಪ್ಪ ಹೊನಪುರ, 'ಸಮಾನತೆಯ ಚಿಂತನೆಗಳು', ೧೯೯೯, ಪು.೧೭
೭. 'ತಿರುವಳ್ಳುವರ್ ಬೇಡ-ಬೇಕೆ?', ಹೊಸದಿಕ್ಕು ಪ್ರಕಾಶನ, ೧೯೯೧, ಪು.೩
೮. ಜ.ಹೋ.ನಾರಾಯಣಸ್ವಾಮಿ, ಸ್ವಾಮಿ ವಿವೇಕಾನಂದರ ಕ್ರಾಂತಿಕಾರೀ ವಿಚಾರಗಳು, ೧೯೯೬, ಪು.೯
೯. ಎಂ.ಚಿದಾನಂದಮೂರ್ತಿ; 'ಮಧ್ಯಕಾಲೀನ ಕನ್ನಡಸಾಹಿತ್ಯದಲ್ಲಿ ಅಸ್ಪೃಶ್ಯತೆ', ೧೯೮೫, ಪು.೪೫
೧೦. ಮೇಲಿನ ಆರು ಪ್ಯಾರಾಗಳನ್ನು ಒಳಗೊಂಡಂತೆ ಇನ್ನಿತರ ವಿವರಗಳಿಗಾಗಿ 'ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು', ಸಂ.೫ ನೋಡಬಹುದು.
೧೧. ಪ್ರಭು ಖಾನಾಪುರೆ; 'ಜಾನಪದ ನ್ಯಾಯಪದ್ಧತಿ', ವಿಮರ್ಶೆ, ನವೆಂಬರ್ ೮೭
೧೨. ಆರ್ಕೆ ಮಣಿಪಾಲ, 'ಸಾಹಿತ್ಯ ಸಿದ್ಧಾಂತ ಹೋರಾಟ', ೧೯೮೬, ಪು.೬೪
೧೩. ಮುರಳಿಧರ ಜಗತಾಪ, 'ಸಾರ್ವಜನಿಕ ಸತ್ಯಧರ್ಮ', ಪು.೧೦೯
೧೪. ಎಸ್.ಆರ್.ಗುರುನಾಥ್, 'ಕುಸಿತ' ಕಥೆ; ಸಂ. ಕರ್ನಾಟಕ; ದಿ.೧೦-೩-೦೨
೧೫. ಡಿ.ಆರ್.ನಾಗರಾಜ್, 'ಸುಧಾ' ಸೆಪ್ಟೆಂಬರ್ ೩, ೧೯೯೦, ಪು.೨೫
೧೬. ಪೂನಾ ಒಪ್ಪಂದ, ಹೊಸದಿಕ್ಕು ಪ್ರಕಾಶನ, ೧೯೯೦, ಪು.೧೪
೧೭. 'ಅಸ್ಪೃಶ್ಯರು' ಮಕರ, ೧೯೮೬
೧೮. ರಾಮ ಮನೋಹರ ಲೋಹಿಯಾ, 'ಮಾನವ ಕುಲದ ಏಕತೆ', ೨೦೦೦, ಪು.೩೦
೧೯. ಬಂಗಾರಪ್ಪ ಹೊನಪುರ, 'ಸಮಾನತೆಯ ಚಿಂತನೆಗಳು', ೧೯೯೯, ಪು.೩೧
೨೦. 'ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು', ಸಂ.೫, ಪು.೩೩
೨೧. ಹೆಚ್.ಎಂ.ಮರುಳಸಿದ್ಧಯ್ಯ(ಸಂ), 'ಕೋಟೆ ನ್ಯಾಯದೃಷ್ಟಿ', ೧೯೯೦
೨೨. ಅದೇ, ಪು.೧೬೧
೨೩. ಸಿ.ಕೆ.ಮಹೇಶ್, 'ಪ್ರಜಾವಾಣಿ', ದಿ. ೩-೮-೦೨, ಪು.೩
೨೪. ರಾಮ ಮನೋಹರ ಲೋಹಿಯಾ, ಪೂರ್ವೋಕ್ತ, ೨೦೦೦, ಪು.೩೧
೨೫. ಎಲ್ಲೋ ಓದಿದ್ದರ ನೆನಪು.

೭

# ಕರ್ನಾಟಕ ಬುಡಕಟ್ಟುಗಳು ಹಾಗೂ ನ್ಯಾಯತೀರ್ಮಾನ ವಿಧಾನಗಳು : ಕೆಲವು ನಿದರ್ಶನಗಳು

ಡಾ. ಕೆ. ಎಂ. ಮೇತ್ರಿ

೧

ಬುಡಕಟ್ಟು ನ್ಯಾಯವ್ಯವಸ್ಥೆ ಬುಡಕಟ್ಟಿನಷ್ಟೆ ಹಳೆಯದು. ಪ್ರಪಂಚದ ಪ್ರಥಮ ಮಾನವರೇ ಆದಿವಾಸಿಗಳು. ಇವರನ್ನು ಆದಿವಾಸಿ, ಮೂಲನಿವಾಸಿ, ಗಿರಿವಾಸಿ, ಬನವಾಸಿ, ವನವಾಸಿ, ಗಿರಿಜನ, ಜನಜಾತಿ, ಬುಡಕಟ್ಟು, ಟ್ರೈಬ್, ಇಂಡಿಜಿನಿಯಸ್ ಪಿಪಲ್ ಇತ್ಯಾದಿ ಹೆಸರುಗಳಿಂದ ಅಲ್ಲಲ್ಲಿ ಗುರುತಿಸಲಾಗುತ್ತದೆ. ಬುಡಕಟ್ಟಿನ ನ್ಯಾಯತೀರ್ಮಾನಗಳನ್ನು ಅರಿಯುವ ಮೊದಲು ಬುಡಕಟ್ಟಿನ ಹಿನ್ನೆಲೆ ಅರಿಯುವುದು ಸೂಕ್ತ.

**ಬುಡಕಟ್ಟು ಪದದ ವಿವರ :** ಬುಡಕಟ್ಟು ಎಂಬ ಪದಕ್ಕೆ ಅರ್ಥವಿವರಣೆ ಕೊಡುವುದು ಸುಲಭವಲ್ಲ. ಈ ಪದವನ್ನು ಜೀವವಿಜ್ಞಾನಿಗಳು, ಮಾನವಶಾಸ್ತ್ರಜ್ಞರು ಹಾಗೂ ಇತಿಹಾಸಕಾರರು ನಾನಾ ಅರ್ಥದಲ್ಲಿ ಬಳಸಿದ್ದಾರೆ. ಈ ಪದಕ್ಕೆ ಕಲ್ಪಿಸಿರುವ ತಪ್ಪುಅರ್ಥದಿಂದ ಒಂದಷ್ಟು ತೊಡಕುಂಟಾಗಿದೆ. ನಾಗರಿಕತೆ, ಸಂಸ್ಕೃತಿ, ಜನಾಂಗ, ಭಾಷೆ, ಧರ್ಮ, ಬುಡಕಟ್ಟು ಎಂಬ ಪದಗಳನ್ನು ಅಸ್ತವ್ಯಸ್ತವಾಗಿ ಒಂದೇ ಅರ್ಥದಲ್ಲಿ ಬಳಸಲಾಗಿದೆ. ಸಮಾಜಶಾಸ್ತ್ರಜ್ಞರ ದೃಷ್ಟಿಯಲ್ಲಿ ಈ ಪದಗಳೆಲ್ಲಕ್ಕೂ ಬೇರೆ ಬೇರೆ ಅರ್ಥಗಳಿವೆ. ಆರ್ಯರು, ಯಹೂದಿಯರು, ಆಂಗ್ಲೋಸ್ಯಾಕ್ಸನರು, ಫ್ರೆಂಚರು, ಜಿಪ್ಸಿಗಳು, ಮಂಗೋಲರು ಮೊದಲಾದ ಜನಾಂಗಗಳ ಬಗ್ಗೆ ಬುಡಕಟ್ಟು ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಆದರೆ, 'ಆರ್ಯ' ಎಂಬ ಪದ ಭಾರತ ಮತ್ತು ಪರ್ಷಿಯನ್‌ಭಾಷೆಗಳ ಗುಂಪಿಗೆ ಅನ್ವಯಿಸುತ್ತದೆಯೇ ಹೊರತು, ಆರ್ಯರ ಬುಡಕಟ್ಟು ಎಂಬುದಿಲ್ಲ. ಅದೇರೀತಿ ಜರ್ಮನ್ ಮತ್ತು ಫ್ರೆಂಚ್ ಎಂಬ ಪದಗಳು ಜನಾಂಗಕ್ಕೆ ಅನ್ವಯಿಸುವುವೇ ಹೊರತು, ಅವು ಪ್ರತ್ಯೇಕ ಬುಡಕಟ್ಟುಗಳಲ್ಲ. ಹಾಗೆಯೇ ಯಹೂದಿಯರು ಕೂಡ ಒಂದು ಧಾರ್ಮಿಕಪಂಥಕ್ಕೆ ಸೇರಿದವರೇ ಹೊರತು 'ಯಹೂದಿ' ಎಂಬ ಪದ ಬುಡಕಟ್ಟನ್ನು

ಸೂಚಿಸುವುದಿಲ್ಲ. ಹಾಗೆಯೇ ಸಂಸ್ಕೃತಿಯು ಗುಣ, ನಡತೆ, ಸಭ್ಯತೆ ಇತ್ಯಾದಿ ಆಂತರಿಕ ಅಂಶಗಳಿಗೆ ಅನ್ವಯಿಸುವುದೇ ವಿನಾ, ವಂಶಾನುಗತವಾಗಿ ಸಾಗಿಬರುವ ದೈಹಿಕ ಲಕ್ಷಣಗಳಿಗೆ ಬುಡಕಟ್ಟು ಎಂಬ ಪದ ಅನ್ವಯಿಸುತ್ತದೆ. ಅದರಂತೆ ವಿಶ್ವದ ಜನಾಂಗಗಳನ್ನು ವರ್ಗೀಕರಿಸಿದೆ (ನಂಜಮಣ್ಣಿ ಎಂ : ೧೯೭೪ : ೮೪).

ಕಿಟ್ಟೆಲ್ಲರು ತಮ್ಮ ಅರ್ಥಕೋಶದಲ್ಲಿ ಬುಡಕಟ್ಟು ಎಂಬ ಶಬ್ದಕ್ಕೆ 'ಕುಟುಂಬ' ಹಾಗೂ 'ಕುಲ' ಎಂಬ ಅರ್ಥವನ್ನು ನೀಡಿದ್ದಾರೆ. ಬುಡಕಟ್ಟು ಎಂಬ ಪದವು ಆಂಗ್ಲಭಾಷೆಯ 'ಟ್ರೈಬ್' ಎಂಬ ಪದಕ್ಕೆ ಸಮಾನಾರ್ಥಕ ಪದವೆಂದು ಬಳಸಲಾಗುತ್ತಿದೆ. ಇದು ಲ್ಯಾಟೀನ್‌ಭಾಷೆಯ 'ಟ್ರೈಬಸ್' ಎಂಬ ಪದದಿಂದ ಉಗಮಗೊಂಡಿದೆ. ಗ್ರೀಕ್ ಮತ್ತು ರೋಮನ್ ಲೇಖಕರು ಲ್ಯಾಟಿಯಂ ಜಿಲ್ಲೆಯಲ್ಲಿ ನೆಲೆಸಿದ ಬುಡಕಟ್ಟಿನವರಿಗೆ ಪ್ರಪ್ರಥಮವಾಗಿ 'ಟ್ರೈಬ್' ಎಂಬ ಪದ ಬಳಸಿರುವುದು ವೇದ್ಯವಾಗುತ್ತದೆ. ಸಮಾಜರಚನೆಯ ಮೂಲಕ್ಕೆ ಕುಟುಂಬ ಹಾಗೂ ರಕ್ತಸಂಬಂಧಿಯ ಕುಲಗಳು ಆಧಾರಸ್ತಂಭಗಳಾಗಿರುವುದರಿಂದ ಕುಟುಂಬ ಹಾಗೂ ರಕ್ತಸಂಬಂಧ ಹೊಂದಿದ ಕುಲಗಳ ಕೂಟಕ್ಕೆ ಕನ್ನಡದಲ್ಲಿ ಬುಡಕಟ್ಟು ಎಂಬ ಪದ ಬಳಸಿರುವುದು ಸಮಂಜಸವಾಗಿದೆ. ಬುಡಕಟ್ಟುಗಳಿಗೆ ಆದಿವಾಸಿ, ಮೂಲನಿವಾಸಿ, ಗಿರಿಜನ, ವನ್ಯಜಾತಿ, ಜನಜಾತಿ ಎಂಬ ಹೆಸರುಗಳಿಂದಲೂ ಕರೆಯಲಾಗಿದೆ. "ಒಂದು ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳುವಂತಹ, ರಾಜಕೀಯವಾಗಿ ಅಥವಾ ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಂ ಆಡಳಿತವುಳ್ಳ ಗುಂಪೇ ಬುಡಕಟ್ಟು" ಎಂದು ಲಂಡನ್ನಿನ ರಾಯಲ್ ಆಂಥ್ರೋಪಾಲಾಜಿಕಲ್ ಇನ್‌ಸ್ಟಿಟ್ಯೂಟ್ ವ್ಯಾಖ್ಯಾನಿಸಿದೆ.

ಯಾವ ಜನ ಗತಕಾಲದಿಂದಲೂ ನಿಸರ್ಗದ ಮಡಿಲಲ್ಲಿ ಸಹಜವಾಗಿ ಬದುಕಲು ಬಯಸುವುದೋ, ಪ್ರಕೃತಿಜನ್ಯ ಉತ್ಪನ್ನಗಳನ್ನೇ ಭಕ್ಷಿಸಲು ಯತ್ನಿಸುವುದೋ, ತನ್ನದೆ ಆದ ಒಂದು ವಿಶಿಷ್ಟರೀತಿಯ ಜೀವನವಿಧಾನದಿಂದ ಜೀವಿಸುವ ಆಶಯವನ್ನು ಹೊಂದಿ ಆ ರೀತಿಯಲ್ಲಿಯೇ ಜೀವನ ನಡೆಸುವುದೋ ಆ ಜನಕ್ಕೆ ಆದಿವಾಸಿ ಅಥವಾ ಬುಡಕಟ್ಟು ಜನ ಎಂದು ಕರೆಯಬಹುದು.

**ಸಂವಿಧಾನಬದ್ಧ ಬುಡಕಟ್ಟುಗಳು :** ೧೯೫೦ಕ್ಕೂ ಹಿಂದೆಯೇ ಪರದೇಶಿ ಪಾದ್ರಿಗಳು, ಅಧಿಕಾರಿಗಳು ಭಾರತೀಯ ಸಮುದಾಯಗಳನ್ನು ಅಧ್ಯಯನ ಮಾಡಿ ಜಾತಿ, ಬುಡಕಟ್ಟು, ಅಲೆಮಾರಿ ಬುಡಕಟ್ಟು ಮತ್ತು ಅಪರಾಧಿ ಬುಡಕಟ್ಟುಗಳೆಂದು ವಿಂಗಡಿಸಿರುವರು. ಭಾರತದಲ್ಲಿ ಹಲವಾರು ಚಾರಿತ್ರಿಕ ಮತ್ತು ಸಾಮಾಜಿಕ ಕಾರಣಗಳಿಂದ ಅನೇಕ ಬುಡಕಟ್ಟುಗಳು ಮತ್ತು ಜಾತಿಗಳು ಸಮಾನಸ್ಕಂದವಾಗಿ ಬೆಳೆಯಲು ಅವಕಾಶ ಇಲ್ಲದ್ದನ್ನು ಮನಗಂಡು ಅಂಥ ವರ್ಗಗಳನ್ನು ಗುರುತಿಸಿ ಅವಕ್ಕೆ ವಿಶಿಷ್ಟ ಸೌಲಭ್ಯಗಳನ್ನು ಒದಗಿಸಲು ಭಾರತದ ಸಂವಿಧಾನದಲ್ಲಿ ಅವಕಾಶ ಮಾಡಿಕೊಡಲಾಗಿದೆ. ಸಂವಿಧಾನದ ೩೪೧, ೩೪೨ನೆಯ ಅನುಚ್ಛೇದಗಳ ಪ್ರಕಾರ ರಾಷ್ಟ್ರಪತಿಯವರು ಅಂಥ ವರ್ಗಗಳನ್ನು ಗುರುತಿಸಿ

ಅವುಗಳ ಪಟ್ಟಿಯನ್ನು ಪ್ರಕಟಿಸಿದ್ದಾರೆ. ಸಂವಿಧಾನದ ಪರಿಶಿಷ್ಟಭಾಗವಾಗಿ ಇವು ಸೇರಿರುವುದರಿಂದ ಈ ಪಟ್ಟಿಯಲ್ಲಿರುವ ವರ್ಗಗಳನ್ನು ಪರಿಶಿಷ್ಟ(ಅನುಸೂಚಿತ)ಜಾತಿಗಳು ಮತ್ತು ಪರಿಶಿಷ್ಟ(ಅನುಸೂಚಿತ)ಬುಡಕಟ್ಟುಗಳು ಎಂದು ಪರಿಗಣಿಸಲಾಗುತ್ತದೆ.

ಭಾರತ ಸಂವಿಧಾನದ ಅನುಚ್ಛೇದ ೩೪೨ (೧)ರ ಪ್ರಕಾರ ರಾಷ್ಟ್ರಪತಿಯವರು ಹಾಗೂ (೨)ರ ಪ್ರಕಾರ ಸಂಸತ್ತು ಅರ್ಹ ಸಮುದಾಯಗಳನ್ನು ಅನುಸೂಚಿತ ಬುಡಕಟ್ಟೆಂದು ಆದೇಶಿಸಿ ಮೀಸಲಾತಿಯನ್ನು ಕಲ್ಪಿಸಬಹುದಾಗಿದೆ.

**ಭಾರತ ಸಂವಿಧಾನದ ಅನುಚ್ಛೇದ ೩೪೨ :** (೧) ಭಾರತ ರಾಷ್ಟ್ರಪತಿಯು ಯಾವುದೇ ರಾಜ್ಯದ ಅಥವಾ ಯಾವುದೇ ಸಂಘದ ರಾಜ್ಯಕ್ಷೇತ್ರಕ್ಕೆ ಸಂಬಂಧಿಸಿದಂತೆ, ಮತ್ತು ಅದು ರಾಜ್ಯವಾಗಿರುವಲ್ಲಿ ಅದರ ರಾಜ್ಯಪಾಲನೊಡನೆ ಸಮಾಲೋಚನೆ ಮಾಡಿದ ತರುವಾಯ ಈ ಸಂವಿಧಾನದ ಉದ್ದೇಶಗಳಿಗಾಗಿ ಸಂದರ್ಭಾನುಸಾರ ಆ ರಾಜ್ಯದ ಅಥವಾ ಆ ಸಂಘದ ರಾಜ್ಯಕ್ಷೇತ್ರದ ಸಂಬಂಧದಲ್ಲಿ ಅನುಸೂಚಿತ ಬುಡಕಟ್ಟುಗಳ ಅಥವಾ ಬುಡಕಟ್ಟುಗಳ ಸಮುದಾಯಗಳು ಅಥವಾ ಬುಡಕಟ್ಟುಗಳ ಅಥವಾ ಬುಡಕಟ್ಟು ಸಮುದಾಯದ ಭಾಗಗಳನ್ನು ಅಥವಾ ಅದರೊಳಗಿನ ಗುಂಪುಗಳನ್ನು ಸಾರ್ವಜನಿಕ ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದು.

(೨) ಸಂಸತ್ತು ಕಾನೂನು ಮೂಲಕ ಯಾವುದೇ ಬುಡಕಟ್ಟನ್ನು ಅಥವಾ ಬುಡಕಟ್ಟಿನ ಸಮುದಾಯವನ್ನು ಅಥವಾ ಯಾವುದೇ ಬುಡಕಟ್ಟು ಅಥವಾ ಬುಡಕಟ್ಟಿನ ಸಮುದಾಯದ ಭಾಗವನ್ನು ಅಥವಾ ಅದರೊಳಗಿನ ಗುಂಪನ್ನು (೧)ನೆಯ ಖಂಡದ ಮೇರೆಗೆ ಹೊರಡಿಸಲಾದ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿದ ಅನುಸೂಚಿತ ಬುಡಕಟ್ಟುಗಳ ಪಟ್ಟಿಯಲ್ಲಿ ಸೇರಿಸಬಹುದು ಅಥವಾ ಅದರಿಂದ ತೆಗೆದುಹಾಕಬಹುದು; ಆದರೆ ಮೇಲೆ ಹೇಳಿದಂತೆ ಅಲ್ಲದೆ, ಸದರಿ ಖಂಡದ ಮೇರೆಗೆ ಹೊರಡಿಸಲಾದ ಅಧಿಸೂಚನೆಯನ್ನು ಆ ತರುವಾಯದ ಯಾವುದೇ ಅಧಿಸೂಚನೆಯ ಮೂಲಕ ವ್ಯತ್ಯಸ್ತಗೊಳಿಸತಕ್ಕುದಲ್ಲ (ಭಾರತದ ಸಂವಿಧಾನ:೧೯೮೫:೨೨೪-೬).

ಭಾರತದಲ್ಲಿ ೧೯೫೦ ರಿಂದ ಇದುವರೆಗೆ ಪರಿಶಿಷ್ಟಪಂಗಡದ ಪಟ್ಟಿಯಲ್ಲಿ ಅನುಚ್ಛೇದ ೩೪೨ (೧) ಹಾಗೂ (೨)ರ ಪ್ರಕಾರ ಸೇರಿರುವ ಬುಡಕಟ್ಟುಗಳ ಸಂಖ್ಯೆ ೬೨೨. ಇನ್ನು ಈ ಸಂಖ್ಯೆಯಲ್ಲಿ ವೃದ್ಧಿಯಾಗುವ ಸಂಭವವಿದೆ. ಕಾರಣ ಪರಿಶಿಷ್ಟಪಂಗಡದಲ್ಲಿ ಸೇರ್ಪಡೆ ಅಥವಾ ತಿದ್ದುಪಡಿಗೆ ೯೭೧ ಪ್ರಸ್ತಾವನೆಗಳನ್ನು ವಿವಿಧ ರಾಜ್ಯ, ಕೇಂದ್ರಾಡಳಿತ ಪ್ರದೇಶಗಳಿಂದ ಸ್ವೀಕರಿಸಿರುವ ವಿಷಯ ಕೇಂದ್ರ ಸಾಮಾಜಿಕ ನ್ಯಾಯ ಮತ್ತು ಅಭಿವೃದ್ಧಿ ಖಾತೆ ರಾಜ್ಯಸಚಿವರಾಗಿದ್ದ ಶ್ರೀ ಕೈಲಾಶ್ ಮೇಘವಾಲ್ ಅವರು ಪತ್ರಿಕಾಗೋಷ್ಠಿಯಲ್ಲಿ ದಿನಾಂಕ ೨೮.೭.೨೦೦೩ ರಂದು ತಿಳಿಸಿರುವರು (ಪ್ರಜಾವಾಣಿ, ೨೯.೭.೦೩).

**ಭಾರತದಲ್ಲಿ ಬುಡಕಟ್ಟುಗಳು** : ವಿಶ್ವದ ಯಾವುದೇ ಭಾಗದಲ್ಲಿ ಇರುವುದಕ್ಕಿಂತಲೂ ಹೆಚ್ಚು ಬುಡಕಟ್ಟು ಜನರು ಭಾರತದಲ್ಲಿ ಕೇಂದ್ರೀಕೃತರಾಗಿದ್ದಾರೆ. ೨೦೦೧ ಜನಗಣತಿಯ

ಪ್ರಕಾರ ಭಾರತದ ಬುಡಕಟ್ಟು ಜನಸಂಖ್ಯೆ ೮,೪೩,೨೬,೨೪೦. ದೇಶದ ಒಟ್ಟು ಜನಸಂಖ್ಯೆಯಲ್ಲಿ ಬುಡಕಟ್ಟಿನವರು ಶೇಕಡ ೮.೨ ರಷ್ಟು ಇರುವರು. ಪರಿಶಿಷ್ಟ ಬುಡಕಟ್ಟುಗಳ ಒಟ್ಟು ಸಂಖ್ಯೆಯು ಬಹಳಷ್ಟಿದ್ದರೂ ಅವುಗಳಲ್ಲಿ ಸಂಖ್ಯಾಬಲವಾಗಿ ಗೊಂಡರು, ಸಂತಾಲರು, ಭಿಲ್ಲರು, ಒರ್ರ್ಯಾನರು, ಖೊಂಡರು, ಮುಂಡರು ಹೆಚ್ಚಾಗಿರುವರು.

ಜನಸಂಖ್ಯೆ : ಭಾರತವು ಹಳ್ಳಿಗಳ ದೇಶ. ಅದು ೫,೫೭,೧೩೭ ಗ್ರಾಮಗಳನ್ನು ಹೊಂದಿದೆ. ಕೇವಲ ೩,೩೦೧ ನಗರಗಳು ಭಾರತದಲ್ಲಿವೆ. ಅದರ ಭೂವಿಸ್ತೀರ್ಣ ೩,೦೬೫,೦೨೭.೦೦ ಚ.ಕಿ.ಮೀ. ಇದೆ. ವಿಶ್ವದ ಭೂವಿಸ್ತೀರ್ಣದಲ್ಲಿ ಏಳನೇ ಸ್ಥಾನ (೨೫ ಶೇ) ಪಡೆದರೆ, ಜನಸಂಖ್ಯೆಯಲ್ಲಿ ಎರಡನೆಯ ಸ್ಥಾನ ಪಡೆದಿದೆ. ೨೦೦೧ರ ಜನಗಣತಿಯ ಅಂಕಿಅಂಶಗಳ ಪ್ರಕಾರ ಭಾರತವು ೧೦೨,೮೬,೧೦,೩೨೮ ಜನಸಂಖ್ಯೆಯನ್ನು ಹೊಂದಿದೆ.

ಭಾರತ ವಿಶಾಲವಾದ ದೇಶ. ಇದು ೨೮ ರಾಜ್ಯಗಳು, ೭ ಕೇಂದ್ರಾಡಳಿತ ಪ್ರದೇಶಗಳು ಮತ್ತು ಹಲವಾರು ಜಾತಿ, ಮತ, ಭಾಷೆಗಳ ಜನನೀ ಬೀಡು. ಅವುಗಳನ್ನು ಅರಿಯಲು ಬ್ರಿಟಿಷ್ ಸರಕಾರ ಭಾರತದಾದ್ಯಂತ ೧೮೮೧ರಲ್ಲಿ ಜನಗಣತಿ ಪ್ರಾರಂಭಿಸಿತು. ಅಂದಿನಿಂದ ಪ್ರತಿ ಹತ್ತುವರ್ಷಗಳಿಗೊಮ್ಮೆ ಜನಗಣತಿಕಾರ್ಯ ಮುಂದುವರೆಯಿತು. ಇದರಿಂದ ದೇಶದ ಜನತೆ, ಭಾಷೆ ಮತ್ತು ಸಂಸ್ಕೃತಿಯ ಸ್ಥೂಲ ಪರಿಚಯವಾಯಿತು. ಇದರಿಂದ ಪರಿಶಿಷ್ಟ ಜಾತಿ,ಪರಿಶಿಷ್ಟ ಪಂಗಡಗಳ ಚಿತ್ರಣ ಲಭ್ಯವಾಗಿ ಆಯಾಯ ಗುಂಪಿನ ಪಟ್ಟಿ ತಯಾರಿಸಲಾಯಿತು. ಪರಿಶಿಷ್ಟಪಂಗಡದ ಪಟ್ಟಿಯಲ್ಲಿ ಗಿರಿಜನರಿಗೆ, ಆದಿ(ಮೂಲ)ವಾಸಿಗಳಿಗೆ ಸೇರಿಸಲಾಯಿತು. ಪರಿಶಿಷ್ಟಜಾತಿಯ ಪಟ್ಟಿಯಲ್ಲಿ ಅಸ್ಪೃಶ್ಯರನ್ನು ಸೇರಿಸಲಾಯಿತು. ಕ್ರಿ.ಶ.೧೮೮೧ ರಿಂದ ೧೯೯೧ರ ವರೆಗಿನ ಅವಧಿಯಲ್ಲಿ ಭಾರತದ ಪರಿಶಿಷ್ಟರ ಜನಸಂಖ್ಯೆಯಲ್ಲಿ ಹಲವಾರು ಸಲ ಏರಿಳಿತಗಳಾಗಿವೆ. ಅವರು ಮಧ್ಯಭಾರತದಲ್ಲಿ ಮತ್ತು ಬೆಟ್ಟ ಪ್ರದೇಶಗಳಲ್ಲಿ ಅಧಿಕಸಂಖ್ಯೆಯಲ್ಲಿದ್ದಾರೆ. ೧೭೪ ಭಾಷೆಗಳು ಆದಿವಾಸಿ ಜನಾಂಗಗಳದಾಗಿವೆಯೆಂದು ಪತ್ತೆಹಚ್ಚಲಾಗಿದೆ. ೧೮೮೧ ರಿಂದ ೨೦೦೧ರ ವರೆಗಿನ ಭಾರತದ ಬುಡಕಟ್ಟಿಗೆ ಸಂಬಂಧಿಸಿದ ಜನಸಂಖೆಯ ಏರಿಳಿತಗಳನ್ನು ಈ ಪಟ್ಟಿಯು ಸ್ಪಷ್ಟಪಡಿಸುತ್ತದೆ:

ಭಾರತದ ಬುಡಕಟ್ಟು ಜನಸಂಖ್ಯೆ (೧೮೮೧-೨೦೦೧)

| ಕ್ರ. ಸಂ. | ಜನಗಣತಿಯ ವರ್ಷ | ಬುಡಕಟ್ಟು ಜನಸಂಖ್ಯೆ | ಭಾರತದ ಜನಸಂಖ್ಯೆಯಲ್ಲಿ ಬುಡಕಟ್ಟಿನ ಶೇಕಡಾವಾರು ಜನಸಂಖ್ಯೆ | ಏರಿಳಿತ |
|---|---|---|---|---|
| ೧. | ೧೮೮೧ | ೬೪,೨೬,೫೧೧ | ೨.೫೮ | - |
| ೨. | ೧೮೯೧ | ೯೧,೧೨,೦೧೮ | ೩.೨೦ | +೪೧.೭೯ |
| ೩. | ೧೯೦೧ | ೮೫,೮೪,೧೪೮ | ೨.೮೮ | -೫.೭೯ |
| ೪. | ೧೯೧೧ | ೧,೦೨,೯೫,೧೬೫ | ೩.೧೧ | +೧೯.೯೩ |
| ೫. | ೧೯೨೧ | ೯೭,೭೫,೦೦೦ | ೨.೯೧ | -೫.೦೫ |

| | | | | |
|---|---|---|---|---|
| ೬. | ೧೯೩೧ | ೮೨,೮೦,೦೦೦ | ೨.೨೬ | -೧೫.೨೯ |
| ೭. | ೧೯೪೧ | ೨,೪೭,೧೨,೦೦೦ | ೨.೨೬ | +೧೯೮.೪೫ |
| ೮. | ೧೯೫೧ | ೨,೨೫,೧೧,೮೫೪ | ೬.೨೫ | -೮.೯೦ |
| ೯. | ೧೯೬೧ | ೨,೯೮,೭೯,೨೪೯ | ೬.೮೭ | +೩೨.೭೩ |
| ೧೦. | ೧೯೭೧ | ೩,೬೪,೦೮,೫೧೪ | ೬.೮೨ | +೨೧.೮೫ |
| ೧೧. | ೧೯೮೧ | ೫,೧೬,೨೮,೬೩೮ | ೭.೭೬ | +೪೧.೮೦ |
| ೧೨. | ೧೯೯೧ | ೬,೭೭,೫೮,೩೮೦ | ೮.೦೩ | +೩೧.೨೪ |
| ೧೩. | ೨೦೦೧ | ೮,೪೩,೨೬,೨೪೦ | ೮.೨ | |

ಇಂದು ಭಾರತದ ಬುಡಕಟ್ಟುಗಳ ಜನಸಂಖ್ಯೆ ದೇಶದ ಒಟ್ಟು ಜನಸಂಖ್ಯೆಯ ಶೇಕಡ ೧೦ಕ್ಕೂ ಮೀರಿರುವುದು. ಭಾರತ ಸಂವಿಧಾನ (ಪರಿಶಿಷ್ಟ ಪಂಗಡ) ಆದೇಶ ೨೨ (೧೯೫೦) ರ ಪ್ರಕಾರ ಭಾರತದ ಇತರ ರಾಜ್ಯಗಳ ಜೊತೆ ಅಂದಿನ ಮೈಸೂರು ರಾಜ್ಯದಲ್ಲಿ ೬, ಬಾಂಬೆ ರಾಜ್ಯದಲ್ಲಿ ೨೪, ಮದ್ರಾಸ್ ರಾಜ್ಯದಲ್ಲಿ ೪೦, ಹೈದರಾಬಾದ ರಾಜ್ಯದಲ್ಲಿ ೯ ಬುಡಕಟ್ಟುಗಳು ಪರಿಶಿಷ್ಟಪಂಗಡದ ಪಟ್ಟಿಗೆ ಸೇರಿದವು. ಈ ಬುಡಕಟ್ಟುಗಳಿಗೆ ಆಯಾ ರಾಜ್ಯಗಳಲ್ಲಿಯೇ ಯಾವುದೇ ಪ್ರಾದೇಶಿಕ ಮಿತಿಗಳಿರಲಿಲ್ಲ.

**ಕನ್ನಡನಾಡಿನ ಪ್ರಾದೇಶಿಕ ಬದಲಾವಣೆ ಮತ್ತು ಬುಡಕಟ್ಟುಗಳು :** ಹಿಂದಿನ ಮೈಸೂರುರಾಜ್ಯ ಕ್ರಿ.ಶ. ೧೭೯೯ರಲ್ಲಿ ಟಿಪ್ಪುವಿನ ಅವನತಿಯ ನಂತರ ಅಸ್ತಿತ್ವಕ್ಕೆ ಬಂದಿತು. ೧೮೮೧ರಲ್ಲಿ ಬೆಂಗಳೂರು, ಮೈಸೂರು, ಕೋಲಾರ, ಕಡೂರು, ತುಮಕೂರು, ಚಿತ್ರದುರ್ಗ ಮತ್ತು ಶಿವಮೊಗ್ಗಗಳೆಂಬ ಏಳು ಜಿಲ್ಲೆಗಳನ್ನು ಇದು ಒಳಗೊಂಡಿತ್ತು. ೧೮೮೬ರಲ್ಲಿ ಏಳು ತಾಲೂಕುಗಳುಳ್ಳ ಎಂಟನೆಯ ಜಿಲ್ಲೆಯಾಗಿ ಹಾಸನ ಜಿಲ್ಲೆ ಮತ್ತು ೧೯೩೯ರಲ್ಲಿ ಏಳು ತಾಲೂಕುಗಳನ್ನೊಳಗೊಂಡ ರಾಜ್ಯದ ಒಂಬತ್ತನೆಯ ಜಿಲ್ಲೆಯಾಗಿ ಮಂಡ್ಯ ಜಿಲ್ಲೆ ರೂಪಿಸಲ್ಪಟ್ಟವು. ೧೯೫೦ರಲ್ಲಿ ಹಳೆಯ ಮೈಸೂರುರಾಜ್ಯ ಮತ್ತು ಅಂದಿನ ಮದ್ರಾಸ್‌ಪ್ರಾಂತದ ನಡುವೆ ತಮ್ಮ ಪ್ರದೇಶದಿಂದ ಸುತ್ತುವರಿಯಲ್ಪಟ್ಟ ಪರರಾಜ್ಯದ ಪ್ರದೇಶಗಳ ವಿನಿಮಯದ ಫಲವಾಗಿ ಮೈಸೂರುರಾಜ್ಯದ ವಿಸ್ತೀರ್ಣವು ೭೬,೨೯೬ ಚ.ಕಿ.ಮೀ.(೨೯,೪೫೮ ಚದರಮೈಲಿ)ಗಳಿಂದ ೭೬,೩೭೬ ಚ.ಕಿ.ಮೀ.(೨೯,೪೮೯ ಚದರ ಮೈಲಿ)ಗಳಿಗೆ ಏರಿತು. ೧೯೫೩ರ ಅಕ್ಟೋಬರ್ ತಿಂಗಳಲ್ಲಿ ಆಂಧ್ರಪ್ರದೇಶವು ರಚಿತವಾದಾಗ, ಮದ್ರಾಸ್ ಅಧಿಪತ್ಯದಲ್ಲಿದ್ದ ಬಳ್ಳಾರಿಜಿಲ್ಲೆಯು (ಆದವಾನಿ,ಆಲೂರು ಮತ್ತು ರಾಯದುರ್ಗ ತಾಲೂಕುಗಳನ್ನು ಬಿಟ್ಟು) ಹಳೆಯ ಮೈಸೂರುರಾಜ್ಯಕ್ಕೆ ವರ್ಗಾಯಿಸಲ್ಪಟ್ಟಾಗ ಇದರ ವಿಸ್ತೀರ್ಣದಲ್ಲಿ ಮತ್ತೆ ಬದಲಾವಣೆಯಾಯಿತು. ಇದರಿಂದ ರಾಜ್ಯದ ವಿಸ್ತೀರ್ಣದಲ್ಲಿ ೯,೮೭೭ ಚದರ ಕಿ.ಮೀ. (೩,೮೨೧ ಚದರಮೈಲಿ) ಹೆಚ್ಚಳ ಉಂಟಾಯಿತು.

೧೯೫೬ರ ರಾಜ್ಯ ಪುನರ್‌ವಿಂಗಡನಾ ಕಾಯಿದೆಯ ಪ್ರಕಾರ ರಾಜ್ಯದ ಪ್ರಾಕೃತಿಕ ಮೇರೆಗಳಲ್ಲಿ ಮತ್ತು ವಿಸ್ತೀಣದಲ್ಲಿ ಆದ ಬದಲಾವಣೆ ಕೊನೆಯದು. ನವಂಬರ್ ೧,

೧೯೫೬ರಲ್ಲಿ ಮೇಲಿನ ಕಾನೂನಿನಂತೆ ರಚಿತವಾದ ಈಗಿನ ರಾಜ್ಯವು ಈ ಕೆಳಗಿನ ಪ್ರಾಂತಗಳಿಂದ ಕೂಡಿದೆ. ಅವುಗಳೆಂದರೆ:

೧. ೧೯೫೬ರ ಹಿಂದಿನ B ವಿಭಾಗದ ರಾಜ್ಯವಾದ ಮೈಸೂರುರಾಜ್ಯ (ಬಳ್ಳಾರಿ ಜಿಲ್ಲೆ ಸೇರಿದಂತೆ)

೨. ಮೊದಲಿನ ಮುಂಬೈರಾಜ್ಯದ ಬೆಳಗಾವಿ ಜಿಲ್ಲೆ (ಚಂದಗಡ ತಾಲೂಕು ಬಿಟ್ಟು) ಮತ್ತು ಬಿಜಾಪುರ, ಧಾರವಾಡ ಮತ್ತು ಉತ್ತರಕನ್ನಡಜಿಲ್ಲೆಗಳು

೩. ಹಿಂದಿನ ಹೈದರಾಬಾದರಾಜ್ಯದ ಕಲಬುರ್ಗಿ ಜಿಲ್ಲೆ (ಕೋಡಂಗಲ್ ಮತ್ತು ತಾಂಡೂರ್ ತಾಲ್ಲೂಕುಗಳನ್ನು ಬಿಟ್ಟು), ರಾಯಚೂರು ಜಿಲ್ಲೆ (ಆಲಂಪುರ ಮತ್ತು ಗದ್ವಾಲ್ ತಾಲ್ಲೂಕುಗಳನ್ನು ಬಿಟ್ಟು) ಮತ್ತು ಬೀದರ ಜಿಲ್ಲೆ (ಅಹಮದ್‌ಪುರ, ನೀಲಂಗಾ ಮತ್ತು ಉದ್ಗೀರ್ ತಾಲೂಕುಗಳನ್ನು ಬಿಟ್ಟು)

೪ ಹಿಂದಿನ ಮದ್ರಾಸ್‌ರಾಜ್ಯದ ದಕ್ಷಿಣಕನ್ನಡಜಿಲ್ಲೆ (ಕಾಸರಗೋಡು ತಾಲೂಕು ಮತ್ತು ಅಮೀನ್‌ದೀವಿ ದ್ವೀಪಗಳನ್ನು ಬಿಟ್ಟು) ಮತ್ತು ಕೊಯಮತ್ತೂರು ಜಿಲ್ಲೆಗೆ ಸೇರಿದ ಕೊಳ್ಳೇಗಾಲ ತಾಲೂಕು, ಮತ್ತು

೫ C ವಿಭಾಗಕ್ಕೆ ಸೇರಿದ ಕೊಡಗುರಾಜ್ಯ.

ಕೋಲಾರ ಜಿಲ್ಲೆಯ ಬಾಗೇಪಲ್ಲಿ ತಾಲೂಕಿನಲ್ಲಿ ಅಬ್ಬವಾರಿಪಲ್ಲಿಯ ೦.೦೩ ಚ.ಕಿ. ಮೀ.ನ ಸಣ್ಣ ಪ್ರದೇಶವು ಆಂಧ್ರಕ್ಕೆ ವರ್ಗಾಯಿಸಲ್ಪಟ್ಟಿದ್ದನ್ನು ಬಿಟ್ಟರೆ ಇದುವರೆಗೂ ಮತ್ತ್ಯಾವ ಬದಲಾವಣೆಗಳಾಗಲಿಲ್ಲ (ಕಾಮತ್, ಸೂರ್ಯನಾಥ್ ಯು.: ೧೯೮೪:೪-೫).

ಹೀಗೆ ಕನ್ನಡನಾಡಿಗೆ ಕೂಡಿಸಿಕೊಂಡ ಪ್ರಾಂತಗಳನ್ನು ಹೈದರಾಬಾದ್ ಕರ್ನಾಟಕ, ಮುಂಬೈ ಕರ್ನಾಟಕ, ಮದ್ರಾಸ್ ಕರ್ನಾಟಕವೆಂತಲೂ ಕರೆಯುವರು. ಹಳೆ ಮೈಸೂರಿನ ೯ ಜಿಲ್ಲೆಗಳು; ಹೈದ್ರಾಬಾದ್ ಸಂಸ್ಥಾನದ ೩ ಜಿಲ್ಲೆಗಳು; ಮುಂಬೈಪ್ರಾಂತದ ೪ ಜಿಲ್ಲೆಗಳು ಮದ್ರಾಸ್‌ಪ್ರಾಂತದ ೨ ಜಿಲ್ಲೆಗಳು ಮತ್ತು ಕೊಡಗು ಹೀಗೆ ಒಟ್ಟು ೧೯ ಜಿಲ್ಲೆಗಳ ಮೈಸೂರುರಾಜ್ಯ ನವೆಂಬರ್ ೧, ೧೯೫೬ರಂದು ಹುಟ್ಟಿಕೊಂಡಿತು. ೧ನೇ ನವಂಬರ್ ೧೯೭೩ರಂದು ಅದಕ್ಕೆ ಕರ್ನಾಟಕ ಎಂದು ಅಂದಿನ ಮುಖ್ಯಮಂತ್ರಿ ಶ್ರೀ ಡಿ.ದೇವರಾಜ ಅರಸು ಅವರ ಮುಖಂಡತ್ವದಲ್ಲಿ ಪುನರ್‌ನಾಮಕರಣ ಮಾಡಲಾಯಿತು.

೧೯೯೭ರಲ್ಲಿ ಕರ್ನಾಟಕ ಸರ್ಕಾರವು ರಾಜ್ಯದ ೮ ಜಿಲ್ಲೆಗಳ (ಬಿಜಾಪುರ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ಧಾರವಾಡ, ಶಿವಮೊಗ್ಗ, ದಕ್ಷಿಣಕನ್ನಡ ಮತ್ತು ಮೈಸೂರು) ಪುನರ್‌ವಿಂಗಡಣೆ ಮಾಡಿ ಏಳು ಹೊಸಜಿಲ್ಲೆಗಳನ್ನು (ಬಾಗಲಕೋಟೆ, ಕೊಪ್ಪಳ, ಗದಗ, ಹಾವೇರಿ, ದಾವಣಗೆರೆ, ಉಡುಪಿ, ಚಾಮರಾಜನಗರ) ರಚಿಸಿದೆ. ಇದರಿಂದ ೧೯೯೭ಕ್ಕೆ ಹಿಂದಿದ್ದ ೮ ಜಿಲ್ಲೆಗಳ ವಿಸ್ತೀರ್ಣ, ಜನಸಂಖ್ಯೆ ಇತ್ಯಾದಿಗಳಲ್ಲಿ ಬದಲಾವಣೆಗಳಾಗಿವೆ. ಇಂದು ಕರ್ನಾಟಕದ ಭೂವಿಸ್ತೀರ್ಣ ೧೯೧,೭೯೧ ಚ.ಕಿ.ಮೀ. ಇದ್ದು, ೨೭ ಜಿಲ್ಲೆಗಳು ಮತ್ತು ೧೭೫ ತಾಲೂಕುಗಳು, ೨೭,೦೨೪ ಗ್ರಾಮಗಳು ಮತ್ತು ೨೫೦ ನಗರಗಳನ್ನು ಹೊಂದಿದೆ.

ಬಾಂಬೆ, ಹೈದರಾಬಾದ, ಮದ್ರಾಸ್‌ರಾಜ್ಯಗಳಿಂದ ಹಲವು ಪ್ರದೇಶಗಳು ನವೆಂಬರ್ ೧, ೧೯೫೬ರಂದು ಭಾಷಾವಾರುಪ್ರಾಂತ ರಚನೆಯಿಂದಾಗಿ ಕನ್ನಡನಾಡಿಗೆ ಕೂಡಿಕೊಂಡವು. ನಂತರ ಆ ಪ್ರದೇಶಗಳಲ್ಲಿಯು ಹಲವು ಜಾತಿಗಳು ಹಾಗೂ ಬುಡಕಟ್ಟುಗಳು ಕನ್ನಡನಾಡಿಗೆ ಕೂಡಿಕೊಂಡು ಪ್ರಾದೇಶಿಕ ಮಿತಿಗಳೊಂದಿಗೆ ೧೯೫೬ರ The Scheduled Castes and Sche duled Tribes (Modification) Order ಪ್ರಕಾರ ಮೇ ೧, ೧೯೬೦ರಿಂದ ಮೀಸಲಾತಿ ಪಡೆಯಲು ಅರ್ಹವಾದವು. The Scheduled Castes and Scheduled Tribes (Amendment) Act, ೧೯೭೬ (No. 108 of 1976 dated 18th September, 1976)ರ ಪ್ರಕಾರ ಕರ್ನಾಟಕರಾಜ್ಯದಲ್ಲಿ ೧೦೧ ಜಾತಿಗಳು ಪರಿಶಿಷ್ಟಜಾತಿ ಪಟ್ಟಿಯಲ್ಲಿ ಮತ್ತು ೪೯ ಬುಡಕಟ್ಟುಗಳನ್ನು ಪರಿಶಿಷ್ಟಪಂಗಡದ ಪಟ್ಟಿಯಲ್ಲಿ ಗುರುತಿಸಲಾಗಿದೆ. (Census of India, 1981; Series 9: Karnataka : Bidar District Hand Book : Part XIII A&B : 1984:41- 42). ಇವುಗಳಲ್ಲಿ ಕಮ್ಮಾರ, ಕಣಿಯನ್ ಅಥವಾ ಕಣ್ಯನ್, ಕುರುಬ, ಮರಾಠ, ಮರಾಟಿ ಬುಡಕಟ್ಟುಗಳ ಪ್ರಾದೇಶಿಕ ಮಿತಿಯನ್ನು ಸಡಿಲಿಸದೆ, ಉಳಿದವುಗಳ ಪ್ರಾದೇಶಿಕ ಮಿತಿಯನ್ನು ಸಡಿಲಿಸಿ ಕರ್ನಾಟಕ ರಾಜ್ಯದಾದ್ಯಂತ ವಿಸ್ತರಿಸಲಾಯಿತು. The Constitution (Scheduled Tribes) Orders (Second Amendment) Act, 1991 (No. 39 of 1991, dated 17th September,1991)ರ ಪ್ರಕಾರ ನಾಯಕ ಬುಡಕಟ್ಟಿನೊಂದಿಗೆ ಅದರ ಪರ್ಯಾಯ ಪದಗಳಾಗಿ ಅದೇ ಸಮುದಾಯದ ನಾಯ್ಕ್ (Naik), ನಾಯಕ್ (Nayak), ಬೇಡ (Beda), ಬೇಡರ್ (Bedar) ಮತ್ತು ವಾಲ್ಮೀಕಿ (Valmiki) ಪದಗಳು ಸೇರಿದವು. ಆದಾಗ್ಯೂ ೧೯ನೇ ಏಪ್ರಿಲ್ ೧೯೯೩ ರಿಂದ ಇವು ಮೀಸಲಾತಿ ಪಡೆಯಲು ಆರಂಭಿಸಿದವು. The Scheduled Castes and Scheduled Tribes Orders (Amendment) Act, 2002 (No.10 of 2003, dated 18.1.2003)ರ ಪ್ರಕಾರ ಮೇದ ಬುಡಕಟ್ಟಿನೊಂದಿಗೆ ಅದರ ಪರ್ಯಾಯ ಪದಗಳಾಗಿ ಅದೇ ಸಮುದಾಯದ ಮೇದಾರಿ, ಗೌರಿಗ, ಬುರುಡ ಪದಗಳು ಮತ್ತು ಪಾರ್ಧಿ ಬುಡಕಟ್ಟಿನೊಂದಿಗೆ ಅದರ ಪರ್ಯಾಯ ಪದವಾಗಿ ಅದೇ ಸಮುದಾಯದ ಹರಣಶಿಕಾರಿ ಪದಗಳು ಸೇರಿದವು; ಹಾಗೂ ಹೊಸದಾಗಿ ಉತ್ತರ ಕನ್ನಡಜಿಲ್ಲೆಗೆ ಸೀಮಿತಗೊಂಡಂತೆ ಸಿದ್ದಿ ಜನಾಂಗವನ್ನು ಬುಡಕಟ್ಟುಪಟ್ಟಿಗೆ ಸೇರಿಸಲಾಗಿದೆ. ಹೀಗಾಗಿ ಇಂದು ಕರ್ನಾಟಕದಲ್ಲಿ ಸಂವಿಧಾನಬದ್ಧವಾಗಿ ಒಟ್ಟು ೫೦ ಬುಡಕಟ್ಟುಗಳು ದಾಖಲಾದಂತಾಗಿದೆ. ಇನ್ನೂ ಈ ಪಟ್ಟಿಗೆ ಸೇರಲು ಹಲವಾರು ಸಮುದಾಯಗಳು ಅರ್ಹವಾಗಿರುವವು.

ಕರ್ನಾಟಕರಾಜ್ಯದಲ್ಲಿ ರಾಜ್ಯದ ಒಟ್ಟು ಜನಸಂಖ್ಯೆಯ ಶೇಕಡ ೪.೯೧ (೧೮,೨೫, ೨೦೩)ರಷ್ಟು ೧೯೮೧ರಲ್ಲಿ, ೪.೨೬(೧೯,೧೫,೬೯೧)ರಷ್ಟು ೧೯೯೧ರಲ್ಲಿ ೬.೫೫ (೩೪, ೬೩,೯೮೬)ರಷ್ಟು ೨೦೦೧ರ ಜನಗಣತಿಯಲ್ಲಿ ಆದಿವಾಸಿಗಳು ವಾಸವಾಗಿರುವುದಾಗಿ ದಾಖಲಾಗಿದೆ. ಕರ್ನಾಟಕರಾಜ್ಯದ ಆದಿವಾಸಿಗಳ ಸ್ಥಾನವು ಭಾರತದ ಆದಿವಾಸಿಸ್ಥಾನಗಳಲ್ಲಿ

೧೯೬೧ರಲ್ಲಿ ೧೯ನೇ, ೧೯೭೧ರಲ್ಲಿ ೧೮ನೇ, ೧೯೮೧ರಲ್ಲಿ ೯ನೇ ಮತ್ತು ೨೦೦೧ರಲ್ಲಿ ೧೧ನೇ ಸ್ಥಾನದಲ್ಲಿದೆ. ಕರ್ನಾಟಕದ ಕಳೆದ ಐದುದಶಕಗಳ ಆದಿವಾಸಿಗಳ ಅಂಕಿಅಂಶಗಳನ್ನು ಅವಲೋಕಿಸಿದಾಗ ೧೯೬೧ ಮತ್ತು ೧೯೭೧ರ ಅವಧಿಯಲ್ಲಿ ಹೆಚ್ಚಿನ ಬದಲಾವಣೆಗಳು ಕಂಡುಬರುವುದಿಲ್ಲ. ಆದರೆ ೧೯೭೧ ಮತ್ತು ೧೯೮೧ರ ಜನಗಣತಿಯ ಅಂಕಿಅಂಶಗಳಲ್ಲಿ ಅಜಗಜಾಂತರ ವ್ಯತ್ಯಾಸ ಕಂಡುಬರುತ್ತದೆ. ಭಾರತದಲ್ಲಿ ೧೮ನೇ ಸ್ಥಾನದಲ್ಲಿದ್ದ ಕರ್ನಾಟಕ ಒಂದೇ ದಶಕದಲ್ಲಿ ೯ನೇ ಸ್ಥಾನಕ್ಕೇರಿ ಆಶ್ಚರ್ಯವನ್ನುಂಟುಮಾಡಿದೆ. ಅದಕ್ಕೆ 'ಬುಡಕಟ್ಟುಗಳ ಪರ್ಯಾಯಪದಗಳನ್ನು ಪರಿಶಿಷ್ಟಪಂಗಡದ ಪಟ್ಟಿಯಲ್ಲಿ ಸೇರಿಸಿರುವುದು ಮತ್ತು ಬುಡಕಟ್ಟುಗಳ ಪ್ರಾದೇಶಿಕ ನಿರ್ಬಂಧನೆಯನ್ನು ಸಡಿಲಿಸಿರುವುದು' (ಭಾರತದ ಜನಗಣತಿ, ೧೯೮೧; ಸರಣಿ ೧: ಭಾರತ :ಪೇಪರ್II-B (III) :೧೯೮೪:XXII) ಕಾರಣಗಳಾಗಿವೆ ಅನ್ನಲಾಗಿದೆ. ೧೯೮೧ ಮತ್ತು ೧೯೯೧ರ ದಶಕದಲ್ಲಿ ಕರ್ನಾಟಕದ ಆದಿವಾಸಿಗಳ ಬೆಳವಣಿಗೆಯ ಗತಿ ४.೯೬ ಮಾತ್ರವಾಗಿದೆ.

ಇತ್ತೀಚಿನ ಅಧ್ಯಯನಕಾರರು ಹೆಚ್ಚಾಗಿ ಕರ್ನಾಟಕದ ಬುಡಕಟ್ಟುಗಳನ್ನು ಮಲೆನಾಡಿನ ಬುಡಕಟ್ಟುಗಳು, ಕರಾವಳಿ ಬುಡಕಟ್ಟುಗಳು ಮತ್ತು ಬಯಲುಸೀಮೆಯ ಬುಡಕಟ್ಟುಗಳೆಂದು ಪ್ರಾದೇಶಿಕವಾಗಿ ವಿಭಜಿಸಿ ಅಧ್ಯಯನಿಸುವುದುಂಟು. ಇದರಿಂದ ಭಾಷಾವಾರುಪ್ರಾಂತ ರಚನೆಯಿಂದ ಕನ್ನಡನಾಡಿಗೆ ಅನ್ಯನಾಡುಗಳಿಂದ ಕೂಡಿಕೊಂಡ ಬುಡಕಟ್ಟುಗಳ ಅಧ್ಯಯನ ಗೌಣವಾಯಿತು. ಹೀಗಾಗಿ ಈ ಹಿನ್ನೆಲೆಯಿಂದಲೂ ಈ ಪ್ರದೇಶಗಳ ಬುಡಕಟ್ಟುಗಳ ಸಾಮಾಜಿಕ, ಆರ್ಥಿಕ ಅಂಶಗಳ ಸ್ಪಷ್ಟ ಚಿತ್ರಣ ಇದುವರೆಗೂ ಮೂಡಿಸಲಾಗಲಿಲ್ಲ.

೨

## ಕರ್ನಾಟಕ ಬುಡಕಟ್ಟುಗಳ ವೈವಿಧ್ಯತೆ ಹಾಗೂ ವೈಶಿಷ್ಟ್ಯಗಳು

**ಬುಡಕಟ್ಟು ಜನಸಂಖ್ಯೆ :** ಕರ್ನಾಟಕವು ಭಾರತದ ಎಂಟನೇ ದೊಡ್ಡ ರಾಜ್ಯವಾಗಿದೆ. ಅದರ ಭೂವಿಸ್ತೀರ್ಣ ೧೯೧, ೭೯೧ ಚ.ಕಿ.ಮೀ ಆಗಿದ್ದು ೨೭ ಜಿಲ್ಲೆಗಳು, ೧೭೫ ತಾಲೂಕುಗಳು, ೨೭,೦೨೪ ಗ್ರಾಮಗಳನ್ನು ಹೊಂದಿದೆ. ಕರ್ನಾಟಕರಾಜ್ಯದಲ್ಲಿ ರಾಜ್ಯದ ಒಟ್ಟು ಜನಸಂಖ್ಯೆಯ ಶೇ.೬.೫೫ (೩೪,೬೩,೯೮೬)ರಷ್ಟು ೨೦೦೧ರ ಜನಗಣತಿಯಲ್ಲಿ ಆದಿವಾಸಿಗಳು ವಾಸವಾಗಿರು ವುದಾಗಿ ದಾಖಲಾಗಿದೆ. ಈ ಜನಗಣತಿಯ ಅಂಕಿಅಂಶಗಳ ಪ್ರಕಾರ ಕರ್ನಾಟಕದ ಬುಡಕಟ್ಟುಗಳ ಜನಸಂಖ್ಯೆಯಲ್ಲಿ ಅತ್ಯಂತ ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವ ಬುಡಕಟ್ಟೆಂದರೆ ನಾಯಕ ಹಾಗೂ ಅತಿ ಕಡಿಮೆ ಜನಸಂಖ್ಯೆ ಹೊಂದಿರುವ ಬುಡಕಟ್ಟುಗಳೆಂದರೆ ಡುಬ್ಲ, ತಲವಿಯ, ಹಲ್ಪತಿಗಳು.

**ಬುಡಕಟ್ಟಾಗದ ಮತ್ತು ಯಾವ ಪಟ್ಟಿಗೂ ಸೇರದ ಸಮುದಾಯಗಳು :** ಕರ್ನಾಟಕದ ಅಡವಿಗೊಲ್ಲ, ಹಾಲಕ್ಕಿ ಒಕ್ಕಲಿಗ, ಕವಲೆತ್ತಿನವರಂತಹ ಹಲವಾರು ಸಮುದಾಯಗಳು ಬುಡಕಟ್ಟಿನ ಪಟ್ಟಿಯಲ್ಲಿ ಸೇರಬೇಕಾದವುಗಳು. ಅವುಗಳಲ್ಲಿ ಬುಡಕಟ್ಟಿನ ಲಕ್ಷಣಗಳಿದ್ದರೂ

ಈ ಪಟ್ಟಿಯಲ್ಲಿ ಸೇರಲಿಲ್ಲ. ಅಲ್ಲದೆ ಬೇಡಗಂಪಣ, ಓಡಿಗ, ಕಿನ್ನರಿಜೋಗಿ, ಲಾಳಗೊಂಡ ದಂತಹ ಹಲವಾರು ಸ್ವತಂತ್ರ ಸಮುದಾಯಗಳಿದ್ದರೂ ಅವು ಮೀಸಲಾತಿಯ ಯಾವುದೇ ಪಟ್ಟಿಯಲ್ಲಿ ದಾಖಲಾಗದೆ ಇರುವುದು ವಿಪರ್ಯಾಸ. ಕರ್ನಾಟಕದಲ್ಲಿಯ ಘೋಷಿತ ಬುಡಕಟ್ಟು ಸಮುದಾಯಗಳಲ್ಲಿ ಹಲವು ಅಲೆಮಾರಿತನ, ಅರೆಅಲೆಮಾರಿತನ ಮುಂದುವರಿಸು ತ್ತಿದ್ದರೆ ಇನ್ನೂ ಕೆಲವು ಬೇಟೆ, ಪಶುಪಾಲನೆ, ಕೃಷಿ ಮತ್ತು ಕೃಷಿಕೂಲಿಗಳನ್ನು ಅವಲಂಬಿಸಿವೆ. ಶ್ರಮವಿಭಜನೆಯ ಆಧಾರದ ಮೇಲೆ ಕುಲಗಳು ಹುಟ್ಟುವ ಮುನ್ನ ಅವರೆಲ್ಲರದ್ದು ಒಂದೇ ಬುಡಕಟ್ಟು.

**ಅಲೆಮಾರಿ ಬುಡಕಟ್ಟುಗಳು :** ಬೇಟೆ ಹಾಗೂ ಪಶುಪಾಲನೆ ಮೂಲದ ಬುಡಕಟ್ಟುಗಳು ಮೂಲತಃ ಅಲೆಮಾರಿ ಬುಡಕಟ್ಟುಗಳಾಗಿದ್ದವು. ಇಂದಿಗೂ ಹೈದ್ರಾಬಾದಕರ್ನಾಟಕ ಭಾಗದ ಚೆಂಚು, ಪಾರ್ಧಿ, ಅಡ್ವಿಚೆಂಚೇರ್, ಫಾನ್ಸೆ ಪಾರ್ಧಿ, ರಾಜಗೊಂಡ, ಹಕ್ಕಿಪಿಕ್ಕಿ ಬುಡಕಟ್ಟುಗಳು ಬದುಕಿಗಾಗಿ ಅಲೆಮಾರಿ ಜೀವನ ಮುಂದುವರಿಸಿವೆ. ರಾಜಗೊಂಡರು ಆಯುರ್ವೇದದ ವ್ಯಾಪಾರಕ್ಕಾಗಿ ಗೋವಾ, ತಮಿಳುನಾಡು, ಮಹಾರಾಷ್ಟ್ರ, ಆಂಧ್ರಪ್ರದೇಶ ರಾಜ್ಯಗಳಲ್ಲಿ ಅಲೆಯುವರು.

**ಬೇಟೆ ಹಾಗೂ ಆಹಾರಸಂಗ್ರಾಹಕ ಬುಡಕಟ್ಟುಗಳು :** ಹಿಂದೆ ಬಹುಸಂಖ್ಯಾತ ಬುಡಕಟ್ಟುಗಳು ಆಹಾರಸಂಗ್ರಹಣೆ ಹಾಗೂ ಬೇಟೆಯನ್ನೆ ಅವಲಂಬಿದ್ದವು. ಇಂದಿಗೂ ಕಾಡುಕುರುಬ, ಜೇನುಕುರುಬ, ಸೋಲಿಗ, ಚೆಂಚು, ಚೆಂಚವಾರ್, ಹಕ್ಕಿಪಿಕ್ಕಿ, ಪಾರ್ಧಿ, ಅಡ್ವಿಚೆಂಚೇರ್, ಫಾನ್ಸೆ ಪಾರ್ಧಿ, ಬೇಡ ಇತ್ಯಾದಿ ಬುಡಕಟ್ಟುಗಳು ಈ ಕಾಯಕಗಳನ್ನು ಮುಂದುವರಿಸಿವೆ. **ಬೇಟೆ, ಕಾನೂನು ಹಾಗೂ ಅಭಿವೃದ್ಧಿ :** ಬೇಟೆಯ ಕಾನೂನುಗಳು ಬೇಡರ ಬದುಕಿಗೆ ತಿರುವು ನೀಡಿವೆ. ೧೯೫೯ರ ಕರ್ನಾಟಕ ಪ್ರಾಣಿಬಲಿಗಳ ಪ್ರತಿಬಂಧಕ ಅಧಿನಿಯಮ, ೧೯೬೩ ಮತ್ತು ೧೯೭೪ರ ಕರ್ನಾಟಕ ಅರಣ್ಯ (ತಿದ್ದುಪಡಿ) ಅಧಿನಿಯಮ, ೧೯೭೨ರ ವನ್ಯಜೀವಿ ಸಂರಕ್ಷಣಾ ಅಧಿನಿಯಮ, ೧೯೭೬ರ ಕರ್ನಾಟಕ ಮರಗಳ ಸಂರಕ್ಷಣಾ ಅಧಿನಿಯಮ, ಕರ್ನಾಟಕ ಅರಣ್ಯ ಅಧಿನಿಯಮ ೧೯೭೬, ಭಾರತ ಮೀನುಗಾರಿಕೆ ಅಧಿನಿಯಮ ೧೯೮೭ ಮೊದಲಾದ ಅಧಿನಿಯಮಗಳು ಬೇಟೆಯನ್ನು ತಡೆಗಟ್ಟಿ ಅರಣ್ಯ, ವನ್ಯಜೀವಿಗಳ ರಕ್ಷಣೆಗೆ ಉತ್ತಮ ವಾತಾವರಣ ಕಲ್ಪಿಸಿವೆ. ಆದರೆ ಬೇಟೆಯನ್ನೇ ನಂಬಿದ ಬುಡಕಟ್ಟುಗಳ ಬದುಕು ಅತಂತ್ರವಾಗಿದೆ. ಅಭಿವೃದ್ಧಿಯ ಹೆಸರಿನಲ್ಲಿ ಅಭಯಾರಣ್ಯಗಳ ರಕ್ಷಣೆ, ಉದ್ಯಾನವನ, ಧಾಮ, ಕೈಗಾರಿಕೆ, ನಗರಾಭಿವೃದ್ಧಿ, ಅಣೆಕಟ್ಟುಗಳ ನಿರ್ಮಾಣಕಾರ್ಯ ಮುಂದುವರಿಯುತ್ತಲೇ ಇದೆ. ಈ ತರಹದ ಯೋಜನೆಗಳೆಲ್ಲವೂ ಬುಡಕಟ್ಟುಗಳು ವಾಸಿಸುವ ಪ್ರದೇಶಗಳಲ್ಲೇ ರೂಪಗೊಳ್ಳುತ್ತಿವೆ.

**ಪಶುಪಾಲಕ ಬುಡಕಟ್ಟುಗಳು :** ಬೇಟೆಗಾರಿಕೆ ಹಾಗೂ ಆಹಾರಸಂಗ್ರಹಣೆಯಿಂದ ಬಹಳ ಹಿಂದೆಯೆ ಪಶುಪಾಲನೆಗೆ ಕೂಡಿಕೊಂಡ ಕರ್ನಾಟಕ ಬುಡಕಟ್ಟುಗಳಲ್ಲಿ ಮುಖ್ಯವಾಗಿ ಕುರುಬ, ಕಾಡುಕುರುಬ, ಜೇನುಕುರುಬ, ಹಸಲ, ಇರುಳ, ಕೋಟ, ಪಳ್ಳಿಯನ್,

ಪಣಿಯನ್, ತೋಡ, ನಾಯಕ, ಯರವ ಇತ್ಯಾದಿ ಬುಡಕಟ್ಟುಗಳು ಕುರಿ ದನಗಳ ಪಾಲನೆಯನ್ನು ಇನ್ನೂ ಮುಂದುವರಿಸಿಕೊಂಡು ಬಂದಿರುವವು. ಗೋಮಾಳ, ಗಾಯರಾಣ, ಪರಂಪೋಕ ಭೂಮಿಯ ಕೊರತೆಯೊಂದಿಗೆ ಕೆರೆಕಟ್ಟೆಗಳ ನಿರ್ಮಾಣ, ಗ್ರಾಮ ಮತ್ತು ಪಟ್ಟಣಗಳ ಬೆಳವಣಿಗೆಯಿಂದ ಹಾಗೂ ಪಶುಪಾಲನೆಯ ಬೆಳವಣಿಗೆಗೆ ಅವಶ್ಯಕವಿರುವ ವಾತಾವರಣದ ಕೊರತೆಯಿಂದ ಇಂದು ಪಶುಪಾಲನೆ ಕುಂಠಿತಗೊಳ್ಳುತ್ತಿರುವುದು. ಹೀಗಾಗಿ ಪಶುಪಾಲನೆಯನ್ನೇ ನಂಬಿದ ಬುಡಕಟ್ಟುಗಳು ಅನಿವಾರ್ಯವಾಗಿ ಅನ್ಯ ಕಾಯಕಗಳನ್ನು ಅವಲಂಬಿಸಬೇಕಾಗಿರುವುದು. ಕಾರಣ ಬುಡಕಟ್ಟಿನವರಲ್ಲಿ ಪಶುಪಾಲನೆಯನ್ನು ಪ್ರಧಾನ ಕಸಬಾಗಿ ಉಳಿಸಿಕೊಳ್ಳಲಾಗಲಿಲ್ಲ.

**ಕೃಷಿಕ ಬುಡಕಟ್ಟುಗಳು :** ಕೃಷಿಯೂ ಬುಡಕಟ್ಟಿನ ಭದ್ರನೆಲೆಗೆ ಕಾರಣವಾಗಿರುವುದು. ಆರಂಭದಲ್ಲಿ ಕುಮ್ರಿ ಬೇಸಾಯ ಹಾಗೂ ಸ್ಥಳಾಂತರದ ಬೇಸಾಯ ಮಾಡುತ್ತ ಕ್ರಮೇಣ ಪಾರಂಪರಿಕ ಬೇಸಾಯದತ್ತ ಬುಡಕಟ್ಟುಗಳು ಚಲಿಸಿವೆ ಹಾಗೂ ಚಲಿಸುತ್ತಿವೆ. ಇಂದು ಬಹುತೇಕ ಬುಡಕಟ್ಟುಗಳಿಗೆ ಪ್ರಧಾನ ಆಶ್ರಯನೀಡುವ ಕಸಬೇ ಕೃಷಿ, ಇಲ್ಲವೇ ಕೃಷಿಕೂಲಿಯಾಗಿರುವುದು. ಅಲೆಮಾರಿ ಬುಡಕಟ್ಟುಗಳನ್ನು ಹೊರತುಪಡಿಸಿ ಅನ್ಯ ಬುಡುಕಟ್ಟುಗಳೆಲ್ಲವೂ ಕೃಷಿಯನ್ನೇ ಹೆಚ್ಚಾಗಿ ಅವಲಂಬಿಸಿರುವವು.

**ಅಪರಾಧಿ ಬುಡಕಟ್ಟುಗಳು :** ಭಾರತದ ಬುಡಕಟ್ಟುಗಳಲ್ಲಿ ಜಾತಿಪಂಚಾಯತಿಯು ಬಿಗಿಯಗಿತ್ತು. ಜಾತಿಕಟ್ಟಳೆಗಳನ್ನು ಮೀರಿದವರಿಗೆ ಅಪರಾಧಿಗಳೆಂದು ಜಾತಿಯಿಂದ ಹೊರಹಾಕಲಾಗುತ್ತಿತ್ತು. ಜಾತಿ ಆಶ್ರಯ ಕಳೆದುಕೊಂಡ ಕುಟುಂಬಗಳು ಬಲಹೀನವಾಗಿ ಸಮೂಹರೂಪದಲ್ಲಿ ಅಲೆಮಾರಿ ಅಪರಾಧಿ ಬುಡಕಟ್ಟುಗಳಾಗಿ ರಚನೆಗೊಂಡವು. ಈ ಅಪರಾಧಿ ಬುಡಕಟ್ಟುಗಳಿಂದ ಎಚ್ಚರದಿಂದಿರಲು ಹಾಗೂ ಇವುಗಳಿಗೆ ವಿಶೇಷ ಸೌಲಭ್ಯಗಳನ್ನು ಕಲ್ಪಿಸಲು ಬ್ರಿಟಿಷ್ ಸರಕಾರ ಇಂತಹ ಗುಂಪುಗಳನ್ನು ಪತ್ತೆಹಚ್ಚಿ ಅಪರಾಧಿ ಬುಡಕಟ್ಟು ಅಧಿನಿಯಮವನ್ನು ೧೮೭೧ ರಲ್ಲಿ ರಚಿಸಿತ್ತು. ಜೊತೆಗೆ ಅಪರಾಧಿ ಬುಡಕಟ್ಟು (ತಿದ್ದುಪಡಿ) ಅಧಿನಿಯಮ ೧೮೯೭, ಅಪರಾಧಿ ಬುಡಕಟ್ಟು ಅಧಿನಿಯಮ ೧೯೧೧, ಅಪರಾಧಿ ಬುಡಕಟ್ಟು (ತಿದ್ದುಪಡಿ) ಅಧಿನಿಯಮ ೧೯೨೩, ಅಪರಾಧಿ ಬುಡಕಟ್ಟು ಅಧಿನಿಯಮ ೧೯೨೪ ,ಅಪರಾಧಿ ಬುಡಕಟ್ಟು (ತಿದ್ದುಪಡಿ) ಅಧಿನಿಯಮ ೧೯೪೭ಗಳು ರಚನೆಗೊಂಡವು. ಈ ಅಧಿನಿಯಮಗಳಡಿಯಲ್ಲಿ ಬೇಡ, ಭಿಲ್, ಪಾರ್ಧಿ, ತಡ್ವಿ, ಇರುಳ, ಕುರುಂಬ, ಯಾನಾದಿ, ಗೊಂಡ ಇತ್ಯಾದಿ ಬುಡಕಟ್ಟುಗಳು ಅಲ್ಲಲ್ಲಿ ಸೇರ್ಪಡೆಗೊಂಡಿದ್ದವು.

## ೩
## ಬುಡಕಟ್ಟು ನ್ಯಾಯ

ನ್ಯಾಯವು ಅನ್ಯಾಯಕ್ಕೆ ಪರಿಹಾರ. ಇದನ್ನರಿತ ಮಾನವ ಈ ಭೂಮಿಯ ಮೇಲೆ ಹುಟ್ಟಿದಂದಿನಿಂದ ಒಂದಿಲ್ಲೊಂದು ರೂಪದಲ್ಲಿ ಅವನಿಗೆ ನ್ಯಾಯವನ್ನು ನೀಡಲಾಗುತ್ತಿದೆ.

ಆಸ್ತಿ ಎಂಬುದು ಅಸ್ತಿತ್ವಕ್ಕೆ ಬಂದಮೇಲೆ ಅವನ ನ್ಯಾಯ ವ್ಯವಹಾರಗಳು ಹೆಚ್ಚುತ್ತಹೋಗಿ ನ್ಯಾಯಶಾಸ್ತ್ರದ ವ್ಯಾಪಕ ಪದ್ಧತಿಗಳ ಅವಶ್ಯಕತೆ ಹೆಚ್ಚಿಸಿರುವವು. ಆದರೆ ಈ ಹಂತವನ್ನು ತಲುಪುವ ಮೊದಲೇ ಅವನ ವೈಯಕ್ತಿಕ ಸ್ವಾತಂತ್ರ್ಯದ ಮೇಲೂ, ಅನಂತರ ಅವನ ಪರಿಮಿತ ಆಸ್ತಿಯ ಮೇಲೂ ಉಂಟಾದ ಆಕ್ರಮಣಗಳಿಂದಾಗಿ ಜಗಳಗಳು, ವಾದವಿವಾದಗಳು ಹುಟ್ಟಿಕೊಂಡವು. ಆದಿಮ ಮಾನವ ಅಸ್ತಿತ್ವಕ್ಕೆ ಬಂದಮೇಲೂ ಹಾಗೂ ಅವನ ಅನಂತರದ ಕಾಲದಲ್ಲೂ ವಿಶ್ವದ ಎಲ್ಲ ಕಡೆಯೂ ಹೀಗೆಯೇ ಇತ್ತು. ನ್ಯಾಯವನ್ನು ಕೊಡುವ ವಿಧಾನಗಳು ದೇಶದಿಂದ ದೇಶಕ್ಕೆ, ಸ್ಥಳದಿಂದ ಸ್ಥಳಕ್ಕೆ ಬುಡಕಟ್ಟಿನಿಂದ ಬುಡಕಟ್ಟಿಗೆ ಬೇರೆಯಾಗುತ್ತವೆಂಬುದರಲ್ಲಿ ಸಂದೇಹವಿಲ್ಲ. ಭಿನ್ನ ಪರಿಸರಗಳು, ಆಚಾರ, ವಾತಾವರಣ, ಜೀವನ ನಿರ್ವಹಣೆಯ ವಿಧಾನ ಇತ್ಯಾದಿಗಳು ಇದಕ್ಕೆ ಕಾರಣಗಳಾಗುವವು. ಅತಿ ಪ್ರಾಚೀನಕಾಲದಲ್ಲಿ ಮಾನವ ತನಗಾದ ಅನ್ಯಾಯಕ್ಕೆ ಸೇಡುತೀರಿಸಿಕೊಳ್ಳುವ ಕಾನೂನುಬದ್ಧವಾದ ಹಕ್ಕು ತನಗಿದೆಯೆಂದೂ, ಅದಕ್ಕೆ ಪರಿಹಾರವನ್ನು ಕಂಡುಕೊಳ್ಳುವುದು ತನಗೆ ಮಾತ್ರ ಬಿಟ್ಟಿದ್ದೆಂದೂ ಭಾವಿಸಿದ್ದನು. ಈ ಹಕ್ಕನ್ನು ಬಹುಪಾಲು ಬುಡಕಟ್ಟುಗಳು ಒಪ್ಪಿಕೊಂಡಿದ್ದವು. ಇಂದಿಗೂ ಇದನ್ನು ಆಂಶಿಕವಾಗಿ ಅನುಸರಿಸುತ್ತಿದ್ದಾರೆಂದರೆ ಆಶ್ಚರ್ಯವೇನಿಲ್ಲ.

ಸತ್ಯಾನ್ವೇಷಣೆಯನ್ನು ಸತ್ವಪರೀಕ್ಷೆ, ಪ್ರಮಾಣ ಮತ್ತು ಇತರ ವಿಧಾನಗಳಿಂದ ಮಾಡಲಾಗುತ್ತದೆ. ತಪ್ಪು ಮಾಡಿದವನ ಮೇಲೆ ದೇವರಿಗೆ ಕೋಪವೂ, ಮುಗ್ಧರ ಮೇಲೆ ದೇವನ ಅನುಗ್ರಹವೂ ಉಂಟಾಗುವಂತೆ ಪ್ರಾರ್ಥಿಸುವುದೇ ಈ ವಿಧಾನ. ಇಂದಿಗೂ ಭಾರತ ಮತ್ತು ಇತರ ದೇಶಗಳ ನ್ಯಾಯಾಲಯಗಳಲ್ಲಿ ಪವಿತ್ರ ಪ್ರಮಾಣವಚನವನ್ನು ಹೇಳಿಸುವುದರಿಂದ ಸಾಕ್ಷಿಯ ಸತ್ಯಾಸತ್ಯತೆಯನ್ನು ಪರೀಕ್ಷಿಸುವುದುಂಟು. ಆದರೆ ಇದರ ಸತತ ಉಪಯೋಗದಿಂದ ಪವಿತ್ರತೆ ದುರುಪಯೋಗವಾಗಿ ಅದರ ಪರಿಣಾಮ ಕಡಿಮೆಯಾಯಿತು. ಸಾಕ್ಷಿಗಳಿಂದ ಸತ್ಯವನ್ನು ಹೊರಗೆಳೆಯಲು ಪವಿತ್ರ ಗ್ರಂಥಗಳನ್ನು, ಪವಿತ್ರ ನದಿಜಲವನ್ನು ಸಾಮಾನ್ಯವಾಗಿ ಬಳಸಲಾಗುತ್ತದೆ. ಆಧುನಿಕ ಕಾನೂನನ್ನು ಅನುಸರಿಸುವವರಿಗೆ ಈ ವಿಧಾನಗಳು ವಿಪರೀತವಾಗಿಯೂ, ಹಳೆಯ ರೀತಿಯದಾಗಿಯೂ, ಅರ್ಥಹೀನವಾಗಿಯೂ ಕಂಡುಬರುತ್ತವೆ. ಆದರೂ ಈ ನಂಬಿಕೆಗಳನ್ನು ಈ ಆಚರಣೆಗಳ ಹಿಂದಿರುವ ಸಿದ್ಧಾಂತಗಳನ್ನು ಬದಲಾಯಿಸುವಾಗ ಇವು ಅನೇಕ ಶತಮಾನಗಳಿಂದ ಅಸ್ತಿತ್ವದಲ್ಲಿರುವುದನ್ನು ತಿಳಿದಿರಬೇಕು. ಇಡೀ ದೇಶಕ್ಕೆ ಒಂದೇ ತರಹದ ನ್ಯಾಯದಾನ ಪದ್ಧತಿಯನ್ನು ರೂಪಿಸುವ ಮುನ್ನ, ಪರಿಶಿಷ್ಟಕ್ಷೇತ್ರಗಳೆನ್ನುವ ಪ್ರಾಚೀನ ಬುಡಕಟ್ಟುಗಳ ಕ್ಷೇತ್ರಗಳಿಗೂ ವಿಸ್ತರಿಸುವ ಮುನ್ನ ಪ್ರಾಚೀನ ನ್ಯಾಯಶಾಸ್ತ್ರವೆಂದರೇನು, ಪ್ರಾಚೀನ ಜನರು ತಮ್ಮ ವಿವಾದಗಳನ್ನು ಹೇಗೆ ಬಗೆಹರಿಸಿಕೊಳ್ಳುತ್ತಿದ್ದರು ಎಂಬುದನ್ನು ಅರಿಯಬೇಕು. ಅವರು ಪ್ರಾಚೀನ ನ್ಯಾಯವಿಧಾನವನ್ನು ಬಲು ಗೌರವದಿಂದ ಕಾಣುವರು. ಈ ಕ್ಷೇತ್ರಗಳಲ್ಲಿರುವ ಹೆಚ್ಚಿನ ಜನರು ಆಧುನಿಕ ನ್ಯಾಯಾಲಯಗಳಿಗೆ ಹೋಗುವುದಿಲ್ಲ.

ಅವರು ತಮ್ಮ ವಂಶ ಅಥವಾ ಗುಂಪಿನ ಮುಖ್ಯಸ್ಥರು ನೀಡಿದ ಪರಿಹಾರದಿಂದಲೇ ತೃಪ್ತರಾಗುತ್ತಾರೆ. ಕಾರಣ ಇವರಿಗೆ ಆಧುನಿಕ ಕಾನೂನು ತಿಳಿಯದು. ತಿಳಿದರೂ ಅದರತ್ತ ತಮ್ಮ ಒಲವು ತೋರಿಸುವುದಿಲ್ಲ.

ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳು ಸಮುದಾಯಗಳ ಸಾಂಸ್ಕೃತಿಕ ಚಹರೆಗಳು. ಇವು ಆಯಾ ಸಮುದಾಯಗಳ ಗತಕಾಲದ ಸಾಮಾಜಿಕ ಒಪ್ಪಂದಗಳಾಗಿರುವವು. ಇವುಗಳಿಂದ ಸಮುದಾಯಗಳ ಬೆಳವಣಿಗೆ ಕುಂಠಿತಗೊಳ್ಳುವುದಾದರೆ ಸಮುದಾಯಗಳ ಬುದ್ಧಿವಂತರು ಸಾರ್ವಜನಿಕರನ್ನು ನಂಬಿಕೆಗೊಳಪಡಿಸಿ ಹೊಸ ನಿಯಮಗಳನ್ನು ರೂಪಿಸುವರು. ದೀರ್ಘಕಾಲೀನ ನಿಯಮಪಾಲನೆಗಳಿದ್ದರೆ ಅವುಗಳ ಮುಂದುವರಿಕೆಗೆ ಸಂಪ್ರದಾಯಗಳನ್ನು ರೂಢಿಸುವರು ಮತ್ತು ಅವುಗಳ ಪಾಲನೆಗಾಗಿ ಆಚರಣೆಗಳನ್ನು ಏರ್ಪಡಿಸುವರು. ಇವೆಲ್ಲವೂ ಅಲಿಖಿತವಾಗಿದ್ದರೂ ಇವುಗಳನ್ನು ಸಮಾಜದ ಶಾಶ್ವತ ನಿಯಮಗಳೆಂದು ಮತ್ತು ಇವುಗಳ ಪಾಲನೆ ತಮ್ಮ ಕರ್ತವ್ಯವೆಂದು ಪಾಲಿಸುವುದುಂಟು. ಜೀವನಾವರ್ತಕ ಸಂಸ್ಕಾರಗಳು ಮತ್ತು ಸಮುದಾಯಗಳ ಆಚರಣೆಗಳು ಸಾಂಪ್ರದಾಯಿಕವಾಗಿ ಮುಂದುವರಿಯುವುದರಿಂದ ಸಮಾಜದ ಗತಕಾಲದ ಸಂಸ್ಕೃತಿಗೆ ಭಂಗಬರುವುದಿಲ್ಲ. ಹಲವು ಸಮುದಾಯಗಳ ಅಭಿವೃದ್ಧಿಗೆ ಈ ಸಂಪ್ರದಾಯಗಳೇ ಅಡ್ಡಿಯಾಗುವುದುಂಟು. ಹಲವಾರು ಸಮುದಾಯಗಳು ಅಭಿವೃದ್ಧಿಪರ ಚಿಂತನೆ ನಡೆಸಿ ಹೊಸ ಸಂಪ್ರದಾಯ ಮತ್ತು ಆಚರಣೆಗಳನ್ನು ರೂಢಿಸಿಕೊಂಡಿರುವರು. ಅವು ಇಂದು ಸಮಾಜದ ಮುಖ್ಯವಾಹಿನಿಯಲ್ಲಿ ಕಾಣಸಿಗುವವು. ಬುಡಕಟ್ಟುಗಳವರು ಸರಳವಾಗಿ ಹಳೆಯ ನಂಬಿಕೆ ಸಂಪ್ರದಾಯಗಳನ್ನು ಬಿಡರು. ಅವು ಅವರ ಪೂರ್ವಜರ ಕುರುಹುಗಳೆಂದು ನಂಬಿ ಮುಂದುವರೆಸುವರು. ಈ ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳಿಗೆ ಭಂಗ ಬರದಂತೆ ಎಚ್ಚರವಹಿಸುವರು. ಹಾಗೇನಾದರೂ ಭಂಗ ಉಂಟಾದಲ್ಲಿ ಜಾತಿಪಂಚಾಯತಿಯಲ್ಲಿ ಅದನ್ನು ಸರಿಪಡಿಸಲು ಪ್ರಯತ್ನಿಸುವರು. ಸಮಾಜದ ಮುಖ್ಯಧಾರೆಯಲ್ಲಿರುವ ಸಮುದಾಯಗಳು ಜಾತಿಪಂಚಾಯತಿಯಿಂದ ವಿಮುಖವಾಗುತ್ತಿವೆ. ಅವು ಸರಕಾರ ರಚಿಸಿದ ಸಂವೈಧಾನಿಕ ಪಂಚಾಯತಿಯ ಮೊರೆಹೋಗುವುದುಂಟು. ಅವುಗಳಿಗೆ ಸಮಾಜದ ಸಾಂಪ್ರದಾಯಿಕ ನ್ಯಾಯದಲ್ಲಿ ನಂಬಿಕೆಯಿಲ್ಲ. ಬುಡಕಟ್ಟುಗಳಲ್ಲಿಯೂ ನ್ಯಾಯಪಂಚಾಯತಿ ದಿನೇ ದಿನೇ ಕಡಿಮೆಯಾಗುತ್ತಿರುವುದು. ಆದರೆ, ಅಲ್ಪಸಂಖ್ಯಾತ, ಅಲೆಮಾರಿ, ಅರೆಅಲೆಮಾರಿ, ನಗರ ಮತ್ತು ಗ್ರಾಮೀಣ ಸಂಪರ್ಕ ಹೊಂದಿರದ ಗುಡ್ಡಗಾಡು ಬುಡಕಟ್ಟುಗಳಲ್ಲಿ ನ್ಯಾಯಪಂಚಾಯತಿಗಳು ಚುರುಕಾಗಿ ಕಾರ್ಯನಿರ್ವಹಿಸುತ್ತಿವೆ.

ಬುಡಕಟ್ಟು ನ್ಯಾಯಗಳು ಆಧುನಿಕ ನ್ಯಾಯವ್ಯವಸ್ಥೆಗೆ ಮುಖಾಮುಖಿಯಾಗುತ್ತಿವೆ. ಇವು ಅಭಿವೃದ್ಧಿಗೆ ಹಲವೊಮ್ಮೆ ಕಂಟಕವಾಗುತ್ತಿವೆ. ಆದರೂ, ಬುಡಕಟ್ಟುಗಳು ಆಧುನಿಕ ನ್ಯಾಯವ್ಯವಸ್ಥೆಗೆ ಸ್ಪಂದಿಸುತ್ತಿಲ್ಲ. ಅವು ತಮ್ಮ ಸಾಂಪ್ರದಾಯಿಕ ನ್ಯಾಯವ್ಯವಸ್ಥೆಯನ್ನೇ ನಂಬಿ ಬದುಕುತ್ತಿವೆ. ಮುಸ್ಲಿಂ ಲಾ, ಹಿಂದೂ ಲಾ ಗಳಿಗೆ ಸಂವಿಧಾನ ಬದ್ಧವಾಗಿದೆ. ಆದರೆ,

ಭಾರತದಲ್ಲಿ ಬುಡಕಟ್ಟು ಲಾ ಇದುವರೆಗೆ ಜಾರಿಗೆ ಬರಲೇ ಇಲ್ಲ. ಆದರೂ ಬಹುಸಂಖ್ಯಾತ ಬುಡಕಟ್ಟುಗಳು ತಮ್ಮ ಹಳೆಯ ನ್ಯಾಯಪಂಚಾಯತಿ ಪದ್ಧತಿಯನ್ನೇ ಮುಂದುವರಿಸುತ್ತಲಿವೆ. ಈ ಹಿನ್ನೆಲೆಯಲ್ಲಿ ಹಲವು ಬುಡಕಟ್ಟುಗಳು ಅನುಸರಿಸುವ ಪಂಚಾಯತಿ ವಿಧಾನಗಳನ್ನು ಅವಲೋಕಿಸೋಣ.

### ಬುಡಕಟ್ಟುಗಳ ನ್ಯಾಯತೀರ್ಮಾನ ವಿಧಾನಗಳು: ಕೆಲವು ನಿದರ್ಶನಗಳು

ರಾಜಗೊಂಡರು ಕರ್ನಾಟಕದಲ್ಲಿ ಬೀದರಿನ ಹೊರವಲಯದ ರಾಜಗೊಂಡ ಕಾಲೋನಿಯಲ್ಲಿ, ದಾವಣಗೆರೆ ಜಿಲ್ಲೆಯ ಹರಿಹರ ತಾಲೂಕಿನ ಬೆಳ್ಳೊಡಿಗ್ರಾಮದಲ್ಲಿ ಮತ್ತು ಬೆಂಗಳೂರಿನ ಮಾರುತಿಸೇವಾನಗರದಲ್ಲಿ ನೆಲೆಗೊಂಡಿರುವರು. ಇವರು ಗೊಂಡವಾನಾದ ಮೂಲಿಗರು. ಗೊಂಡಿ ಇವರ ಮಾತೃಭಾಷೆ. ಗಿಡಮೂಲಿಕೆಯೇ ಇವರ ಬದುಕು. ಇದರ ವ್ಯಾಪಾರಕ್ಕಾಗಿ ಇವರು ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ, ಗೋವ, ಕೇರಳ ಮತ್ತು ತಮಿಳುನಾಡಿನವರೆಗೂ ಅಲೆಯುವುದುಂಟು. ಆರಂಭದಲ್ಲಿ ಕುದುರೆಗಳ ಮೇಲೆ, ಆಮೇಲೆ ರೈಲಿನಲ್ಲಿ ಇವರು ತಮ್ಮ ಗುಡಾರಗಳ ಸಮೇತ ಪ್ರಯಾಣ ಬೆಳೆಸುವವರಾಗಿದ್ದರು. ತಮ್ಮ ವ್ಯವಹಾರ ನಡೆಯುವ ಪ್ರದೇಶಗಳಲ್ಲೆಲ್ಲ ಗುಡಾರ ಹೂಡಿ ಅಲ್ಪಕಾಲ ತಂಗಿ ಮತ್ತೇ ಮುಂದೆ ಸಾಗುವವರಾಗಿದ್ದರು. ಹೀಗಿರಲು ೧೯೬೦ರಲ್ಲಿ ಒಂದು ಘಟನೆ ಘಟಿಸಿತು. ಇದು ಜಾತಿಪಂಚಾಯತಿಯಲ್ಲಿ ಕೊನೆಗೊಂಡಿತ್ತು. ಬಹುಕಾಲದವರೆಗೆ ಬೀದರಿನಲ್ಲಿ ನೆಲೆಗೊಂಡ ಅಲೆಮಾರಿ ರಾಜಗೊಂಡರ ಸುಮಾರು ೨೦ ಕುಟುಂಬಗಳು ಆಂಧ್ರಪ್ರದೇಶದ ನೆಲಗೊಂಡಜಿಲ್ಲೆಯ ಭೊಂಗೀರಿಗೆ ಜಡಿಬೂಟಿಗಳ ವ್ಯಾಪಾರಕ್ಕಾಗಿ ವಲಸೆಹೋಗಿದ್ದವು. ಹೀಗೆ ವ್ಯಾಪಾರಕ್ಕಾಗಿ ವಲಸೆಹೋಗುವುದು ಇವರಲ್ಲಿ ಸಾಮಾನ್ಯ. ಆದರೆ, ವಲಸೆ ಹೋದಲ್ಲೆಲ್ಲ ಇವರು ಸಂಬಂಧಪಟ್ಟ ಆರಕ್ಷಕಠಾಣೆಗೆ ತಮ್ಮ ವಿವರ ನೀಡುವುದುಂಟು. ತಾವ್ಯಾರು, ಎಲ್ಲಿಂದ ಬಂದಿರುವುದು, ಯಾವ ಕಾರಣಕ್ಕಾಗಿ ಬಂದಿರುವುದು, ಎಷ್ಟುದಿನ ತಂಗುವುದು, ಎಲ್ಲಿ ತಂಗಿರುವುದು, ಅಲ್ಲಿಂದ ಮುಂದೆ ಎಲ್ಲಿಗೆ ಹೋಗುವುದು ಎಂಬಿತ್ಯಾದಿ ಮಾಹಿತಿಗಳನ್ನು ಠಾಣೆಗೆ ನೀಡುವುದುಂಟು. ಈ ಎಲ್ಲ ಮಾಹಿತಿಗಳನ್ನು ಭೊಂಗೀರಠಾಣೆಗೂ ನೀಡಲಾಗಿತ್ತು. ಭೊಂಗೀರ ನೆಲಗೊಂಡಜಿಲ್ಲೆಯ ಒಂದು ತಾಲೂಕು ಕೇಂದ್ರ. ರಾಜಗೊಂಡರ ಈ ತಂಡ ವರದಿ ಮಾಡಿದ ವಾರದಲ್ಲೇ ಇವರು ನೆಲೆಗೊಂಡ ಕಾಲೋನಿಯ ಮನೆಯೊಂದರಲ್ಲಿ ಕಳುವಾಯಿತು. ಕಳ್ಳರು ರಾಜಗೊಂಡರ ಡೇರೆಗಳನ್ನು ಹಾದು ಕಣ್ಮರೆಯಾದರು. ಡೇರೆಗಳತ್ತ ಹಾದ ಕಳ್ಳರು ರಾಜಗೊಂಡರೇ ಇರಬಹುದೆಂದು ಕಳುವು ಆದ ಮನೆಯವರು ಇವರ ಮೇಲೆ ಠಾಣೆಯಲ್ಲಿ ದೂರುನೀಡಿದರು. ದೂರಿನ ಆಧಾರದ ಮೇಲೆ ಆರಕ್ಷಕರು ರಾಜಗೊಂಡರ ಏಳುಜನ ಯುವಕರನ್ನು ರಾತ್ರಿಯಲ್ಲಿ ಡೇರೆಯಿಂದ ಎಬ್ಬಿಸಿಕೊಂಡು ಅವಾಚ್ಯವಾಗಿ ಬೈಯುತ್ತ ಹೊಡೆಯುತ್ತ ಠಾಣೆಗೆ ಕರೆದೊಯ್ದು ಲಾಕಪ್‌ದಲ್ಲಿಟ್ಟು ಕಳ್ಳತನ ಒಪ್ಪಿಕೊಳ್ಳಲು ಸರ್ವ ಪ್ರಯತ್ನ ಮಾಡಿದರು.

ವಿದ್ಯುತ್ ಶಾಕ್ ಕೊಟ್ಟರು. ಆದರೂ ರಾಜಗೊಂಡರು ತಪ್ಪುಮಾಡಿಲ್ಲವೆಂದು ಪರಿಪರಿಯಾಗಿ ವಿನಂತಿಸಿಕೊಂಡರು. ಮೂರುದಿನ ಅನ್ನನೀರಿಲ್ಲದೆ ಲಾಕಪ್‌ದಲ್ಲಿಟ್ಟು, ಕಾನೂನುಬಾಹಿರ ಕೃತ್ಯಗಳನ್ನು ಆರಕ್ಷಕರು ರಾಜಗೊಂಡ ಬುಡಕಟ್ಟಿನ ಮೇಲೆ ಎಸಗಿದರು. ಇದನ್ನರಿತ ರಾಜಗೊಂಡರ ಹೆಂಗಸರು ಭಯಭೀತರಾದರು. ತಮ್ಮ ಬಂಧುಗಳ ಮತ್ತು ಸಮಾಜಸೇವಕ ಬೀದರಿನ ಶ್ರೀ ಬಿ. ನಾರಾಯಣರಾವ್ ಅವರ ಸಹಕಾರ ಪಡೆದರು. ಭೊಂಗೀರಠಾಣೆಯಿಂದ ತಮ್ಮವರನ್ನು ಬಿಡಿಸಿಕೊಂಡು ಬಂದರು. ಕೆಲವು ದಿನಗಳ ನಂತರ ನಿಜವಾದ ಕಳ್ಳರು ಸಿಕ್ಕರು. ನಿರಪರಾಧಿ ರಾಜಗೊಂಡರಿಗೆ ಚಿತ್ರಹಿಂಸೆ ನೀಡಿದ ಆರಕ್ಷಕರಿಗೆ ಸಸ್ಪೆಂಡ್ ಮಾಡಲಾಯಿತು.

ಆದರೂ, ಲಾಕಪ್‌ನಲ್ಲಿದ್ದ ರಾಜಗೊಂಡರನ್ನು ಬೀದರಿನ ರಾಜಗೊಂಡರೂ ಜಾತಿ ಪಂಚಾಯತಿಯ ಸಾಂಪ್ರದಾಯಿಕ ವಿಧಾನಗಳ ಪ್ರಕಾರವೇ ಸೇರಿಸಿಕೊಂಡರು. ಲಾಕಪ್‌ನಲ್ಲಿದ್ದವರನ್ನು ಕಾಲೋನಿಗೆ ಬಿಡದೇ ಕಾಲೋನಿ ಹೊರಗಡೆ ಕೂಡಿಸಿ ಪಂಚಾಯಿತಿ ಸೇರಿಸಿದರು. ಕಳುವು ಅಪರಾಧ ಹೊಂದಿದವರನ್ನು ವಿಚಾರಣೆಗೆ ಒಳಪಡಿಸಿ ಇವರನ್ನು ಜಾತಿಗೆ ಸೇರಿಸಿಕೊಳ್ಳಲು ತಲೆಕೂದಲು ಮತ್ತು ಮೀಸೆ ಬೋಳಿಸಿ, ಸ್ನಾನಮಾಡಿಸಿ, ಕೋಳಿಗಳನ್ನು ತಂದು ಯಾವುದೇ ಅಸ್ತ್ರದ ಸಹಾಯವಿಲ್ಲದೇ ಬರಿಗೈಯಲ್ಲಿ ಅವುಗಳ ಕತ್ತು ಹಿಸುಕಿ ಅವುಗಳ ಕರುಳು ಬೇರ್ಪಡಿಸಿ ವಿಚಾರಣಾಧೀನರ ಕೊರಳಿಗೆ ಕರುಳುಗಳನ್ನೇ ಮಾಲೆಯಾಗಿ ಹಾಕಿದರು. ರಾಜಗೊಂಡರಲ್ಲಿ ತಲೆಕೂದಲು ಮತ್ತು ಮೀಸೆ ಬೋಳಿಸಿಕೊಳ್ಳುವುದೆಂದರೆ ಅಪಮಾನ. ಕಳುವು ರಾಜಗೊಂಡರಲ್ಲಿ ಶಿಕ್ಷಾರ್ಹ ಅಪರಾಧ. ಸರಕಾರ ಮತ್ತು ಸಮಾಜ ಕಳ್ಳರನ್ನು ಕ್ಷಮಿಸಿ ಹಲವೊಮ್ಮೆ ಬಿಡಬಹುದು. ಆದರೆ ರಾಜಗೊಂಡರ ಜಾತಿಪಂಚಾಯಿತಿ ಬಿಡದು. ಕಳ್ಳತನದ ಆರೋಪ ಹೊತ್ತು ಲಾಕಪ್‌ದಲ್ಲಿದ್ದರಿಂದ ವಿಚಾರಣಾಧೀನ ರಾಜಗೊಂಡರಿಗೆ ಜಾತಿಪಂಚಾಯಿತಿ ಅನಿವಾರ್ಯವಾಗಿ ಸಾಂಪ್ರದಾಯಿಕ ಶಿಕ್ಷೆ ವಿಧಿಸಿತು. ಕಳ್ಳತನ ಮಾಡಕೂಡದೆಂಬುದೇ ಇದರ ಹಿಂದಿರುವ ನೀತಿಯಾಗಿರುವುದು.

ರಾಜಗೊಂಡರಲ್ಲಿ ಬಳಕೆಯಲ್ಲಿರುವ ಹಲವಾರು ಅಪರಾಧಗಳು ಮತ್ತು ಅದಕ್ಕೆ ನೀಡುವ ಶಿಕ್ಷೆಗಳು ವೈಶಿಷ್ಟ್ಯಪೂರ್ಣವಾಗಿವೆ. ಉದಾಹರಣೆಗೆ, ಕುಟುಂಬದ ಸದಸ್ಯನೊಬ್ಬನಿಗೆ ಅಪರಾಧಿಯೆಂದು ಇಲ್ಲವೆ ತಪ್ಪಿಸ್ಥನೆಂದು ಬಗೆದು ಅವನಿಗೆ ಹೊಡೆದಾಗ ಹೊಡೆತದಿಂದ ಗಾಯಗೊಂಡು ಗಾಯದಲ್ಲಿ ಹುಳುಗಳು ಕಂಡುಬಂದರೆ, ಹೊಡೆದ ವ್ಯಕ್ತಿಯೇ ನಿಜವಾದ ಅಪರಾಧಿಯೆಂದು ತಿಳಿಯುವರು. ಹೊಡೆದ ವ್ಯಕ್ತಿಯು ಪಂಚಾಯಿತಿ ವಿಧಿಸಿದ ಶಿಕ್ಷೆ ಮತ್ತು ದಂಡ ತೆತ್ತಬೇಕಾಗುವುದು.

ಗಂಡನು ಹೆಂಡತಿಯ ತಪ್ಪಿಗಾಗಿ ಸಿಟ್ಟಿನಿಂದ ಹೊಡೆದಾಗ, ಹೊಡೆತದಿಂದ ಅವಳ ಕಿವಿ ಅಥವಾ ಮೂಗು ಹರಿದು ರಕ್ತ ಸುರಿದರೆ, ಗಂಡನೇ ಅಪರಾಧಿಯೆಂದು ಪರಿಗಣಿಸಿ ದಂಡ ವಿಧಿಸುವರು. ಇದರ ಹಿಂದಿರುವ ತರ್ಕವಿಷ್ಟೆ: ಶಿಕ್ಷೆಯು ತಪ್ಪುತಿದ್ದುವ ರೀತಿಯದಿರಬೇಕಷ್ಟೆ. ಯಾವ ಕಾರಣಕ್ಕೂ ತಮ್ಮನ ಹೆಂಡತಿಗೆ ಮುಟ್ಟುವಂತಿಲ್ಲ. ತಪ್ಪಿ ಮುಟ್ಟಿದ್ದರೂ

ನ್ಯಾಯಪಂಚಾಯತಿಗೆ ದಂಡಕಟ್ಟಬೇಕಾಗುವುದು. ಇದರ ಹಿಂದಿರುವ ತರ್ಕ ತಮ್ಮನ ಹೆಂಡತಿ ತನ್ನ ಹೆಂಡತಿಗಿಂತಲೂ ವಯಸ್ಸಿನಲ್ಲಿ ಚಿಕ್ಕವಳಿರುವುದರಿಂದ ಅವಳ ಶೀಲದ ರಕ್ಷಣೆ ಈ ಸಂಪ್ರದಾಯ ರಕ್ಷಿಸುವುದು. ಹಿಂದೆ ಮನೆಯಲ್ಲಿ ಮಾತೃಭಾಷೆ ಕಡ್ಡಾಯವಿತ್ತು. ಹೆಂಗಸರಿಗೆ ಚಪ್ಪಲಿ ಮತ್ತು ಮೇಲಂಗಿ ತೊಡುವುದು ನಿಷೇಧವಿತ್ತು. ಇಂದು ಈ ನಿಷೇಧಗಳು ಮರೆಯಾಗುತ್ತಿವೆ.

ಬೇಡರ ನ್ಯಾಯಕೇಂದ್ರಗಳಿಗೆ ಕಟ್ಟೆಮನೆಗಳೆಂದರೆ, ಆಂಧ್ರಪ್ರದೇಶದ ರಾಜಗೊಂಡರ ನ್ಯಾಯಪಂಚಾಯಿತಿಗಳಿಗೆ ರಾಯಕೇಂದ್ರಗಳೆಂದು ಕರೆಯುವರು. ಪ್ರತಿ ರಾಯಕೇಂದ್ರಕ್ಕೊಬ್ಬ ಸರಪಂಚನಿರುವನು. ಪ್ರತಿ ಜಿಲ್ಲೆಗೊಂದು ರಾಯಕೇಂದ್ರವಿರುವುದು. ಕರ್ನಾಟಕದ ರಾಜಗೊಂಡರಲ್ಲಿಯೂ ಪ್ರತಿ ಕಾಲೋನಿಗಳಲ್ಲಿ ನ್ಯಾಯಪಂಚಾಯಿತಿಗಳಿವೆ. ಆದರೆ ಅವು ತಮ್ಮ ಹಿಂದಿನ ಸ್ವರೂಪದಲ್ಲಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ಹಿಂದೆ ಅಪರಾಧಿಗಳಿಗೆ ಉಗ್ರ ದೈಹಿಕ ಮತ್ತು ಮಾನಸಿಕ ಶಿಕ್ಷೆ, ಅಪಮಾನ, ದಂಡವಿಧಿಸುವುದು ಸಾಮಾನ್ಯವಾಗಿತ್ತು. ಇಂದು ಇದರ ಸ್ವರೂಪ ಬದಲಾಗುತ್ತಿದೆ. ಆದರೂ ಇಂದಿಗೂ ಕರ್ನಾಟಕದ ರಾಜಗೊಂಡರು ತಮ್ಮ ಸಾಂಪ್ರದಾಯಿಕ ನ್ಯಾಯಪಂಚಾಯಿತಿಯಲ್ಲಿ ನಂಬಿಕೆ ಇಟ್ಟಿರುವರು.

ಅಲೆಮಾರಿ ಬುಡ್ಗ ಜಂಗಮ್ ಸಮುದಾಯದಲ್ಲಿ ಕುಲಪಂಚಾಯತಿಗೆ ವಿಶಿಷ್ಟ ಸ್ಥಾನವಿದೆ. ಇವರ ಎಲ್ಲ ವ್ಯಾಜ್ಯಗಳು ಜಾತಿಪಂಚಾಯತಿಯಲ್ಲಿಯೇ ಬಗೆಹರಿಸಲಾಗುತ್ತಿದ್ದವು. ಇವರ ಪಂಚರಿಗೆ ದೈವದವರೆಂದು ಕರೆಯುವರು. ಇವರು ಸಂಕೋನಟ್ಟಿ, ಬಿಜಾಪುರ, ಸೋಲಾಪುರ, ಸಿಕಿಂದರ ಟಾಕಳಿಕೆ, ಜೇವರ್ಗಿ, ಕುದ್ರಿಮೋತಿ, ಯಡ್ರಾಮಿ, ಗುಲಬರ್ಗಾ, ಬಳ್ಳಾರಿ, ಹೊಸಪೇಟೆ, ಬೀದರ, ರಾಯಚೂರು, ನಿಡಗುಂದಿ ಇತ್ಯಾದಿ ನೆಲೆಗಳಲ್ಲಿ ಪಂಚಾಯತಿ ನಡೆಸುವರು. ಕೊಪ್ಪಳಜಿಲ್ಲೆಯ ಕುದ್ರಿಮೋತಿಯ ಪಂಚಾಯತಿಯಂತು ಪ್ರತಿ ಎರಡು ವರ್ಷಕೊಮ್ಮೆ ಮೊಹರಮ್ ಹಬ್ಬದಲ್ಲಿ ತಿಂಗಳುಗಟ್ಟಲೆ ನಡೆಯುವುದು. ದೇಶದ ಎಲ್ಲ ಮೂಲೆಗಳಿಂದ ಬುಡ್ಗ ಜಂಗಮರು ವಿಶೇಷವಾಗಿ ನ್ಯಾಯಪಂಚಾಯತಿಗಾಗಿಯೇ ಇಲ್ಲಿಗೆ ಆಗಮಿಸುವರು. ದೈವದವರ ದೃಷ್ಟಿಯಲ್ಲಿ ಇದು ಸರ್ವೋಚ್ಚ ನ್ಯಾಯಪಂಚಾಯತಿ. ಇಲ್ಲಿ ನೀಡಿದ ನಿರ್ಣಯಗಳೇ ಅಂತಿಮ ಎಂದು ಭಾವಿಸಲಾಗುತ್ತದೆ. ಸ್ಥಳೀಯ ನ್ಯಾಯಪಂಚಾಯತಿಗಳಲ್ಲಿ ತಮಗೆ ನ್ಯಾಯ ಸಿಕ್ಕಿಲ್ಲ ಎಂಬ ಅನುಮಾನಗಳಿದ್ದರೆ ಆ ವ್ಯಾಜ್ಯಗಳು ಇಲ್ಲಿಗೆ ಅಂತಿಮ ನ್ಯಾಯಕ್ಕಾಗಿ ಬರುವುದುಂಟು. ಇತ್ತೀಚಿಗೆ ಕುಲಪಂಚಾಯತಿಗಳು ತಮ್ಮ ಮೂಲಸ್ವರೂಪದಲ್ಲಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ಆಧುನಿಕ ನ್ಯಾಯಪದ್ಧತಿಗಳು ಇದಕ್ಕೆ ಅಡ್ಡಿಯನ್ನುಂಟು ಮಾಡುತ್ತಿವೆ. ವಿದ್ಯಾವಂತರಿಂದ ಕುಲ ಪಂಚಾಯತಿಗಳು ಸಡಿಲುಗೊಳ್ಳುತ್ತಿವೆ.

ಸಿಂಧೋಳ್ಳು ಸಮುದಾಯ ಕರ್ನಾಟಕದ ದಲಿತರಲ್ಲಿ ಅತ್ಯಂತ ಹಿಂದುಳಿದ ಸಮುದಾಯ. ಇವರಲ್ಲಿ ನ್ಯಾಯಪಂಚಾಯತಿಗೆ ವಿಶೇಷ ಸ್ಥಾನ. ಇವರು ಒಮ್ಮೊಮ್ಮೆ ತಿಂಗಳುಗಟ್ಟಲೆ

ನ್ಯಾಯಪಂಚಾಯತಿ ನಡೆಸುವರು. ಬಹಳ ಕಠಿಣವಾದ ಸಮಸ್ಯೆಗಳಿದ್ದರೆ ಗುಡಾರದಲ್ಲಿಯ ದೈವಗಳ ಮುಂದೆ, ಕಾಡಿನ ನಿರ್ಜನ ಪ್ರದೇಶಗಳಲ್ಲಿ ಅಥವಾ ಸ್ಮಶಾನಗಳಲ್ಲ ಕುಲ ಪಂಚಾಯತಿ ನಡೆಸುವರು. ತಮ್ಮ ಸಮುದಾಯದ ಬಹುತೇಕ ಸಮಸ್ಯೆಗಳಿಗೆ ಕುಲ ಪಂಚಾಯತಿಯಲ್ಲಿಯೇ ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುವರು. ವೈಯಕ್ತಿಕ, ಕೌಟುಂಬಿಕ ಮತ್ತು ಸಾಮುದಾಯಿಕ ಸಮಸ್ಯೆಗಳಿಗೆ ಕುಲದ ಮುಖ್ಯಸ್ಥ ಪೂಜಾರಿ ಕುಲಪಂಚಾಯತಿಯಲ್ಲಿ ನ್ಯಾಯಾಧೀಶರಾಗಿ ಪರಿಹಾರ ನೀಡುತ್ತಾರೆ. ಇವರ ತೀರ್ಮಾನಕ್ಕೆ ಎಲ್ಲರೂ ದೈವದ ತೀರ್ಮಾನವೆಂದು ತಿಳಿಯುತ್ತಾರೆ. ಪೂಜಾರಿಗೆ ಸಮುದಾಯದವರು ಆಯ್ಕೆಮಾಡುತ್ತಾರೆ. ಇವರನ್ನು ದೈವಸಮಾನರೆಂದು ಸ್ಥಾನ ನೀಡುತ್ತಾರೆ. ಸಮುದಾಯದ ಸಂಪ್ರದಾಯಗಳನ್ನು ಮೀರಿ ನಡೆದವರಿಗೆ ವಿಚಾರಣೆ ಮಾಡಿ ಶಿಕ್ಷೆವಿಧಿಸುವ ಪರಮಾಧಿಕಾರ ವನ್ನು ಪೂಜಾರಿ ಹೊಂದಿರುತ್ತಾರೆ. ಪೂಜಾರಿ ಕಾಲವಶವಾದರೆ ಮತ್ತೊಬ್ಬ ನೀತಿವಂತನನ್ನು ಸಮುದಾಯದವರು ಆರಿಸಿ ದೈವದ ಮುಂದೆ ಮರಿಪೂಜಾರಿಯ ಪಟ್ಟಕಟ್ಟುತ್ತಾರೆ. ಕಟ್ಟೆಮನೆಗಳು ಕುಲಪಂಚಾಯತಿಯನ್ನು ನಿರ್ವಹಿಸುತ್ತವೆ. ತಪ್ಪಿತಸ್ಥ ತನ್ನ ತಪ್ಪನ್ನು ಒಪ್ಪಿಕೊಳ್ಳಲು ಹಿಂಜರಿದಾಗ ಅವರನ್ನು ಸ್ಮಶಾನದಲ್ಲಿ ನ್ಯಾಯಪಂಚಾಯತಿ ಮಾಡುವರು. ಸತ್ತವ್ಯಕ್ತಿಯ ತಲೆಬುರುಡೆ, ನಿಂಬೆಹಣ್ಣು, ಕುಂಕುಮ, ಅರಿಷಿಣ ಇತ್ಯಾದಿಯನ್ನು ತಪ್ಪಿತಸ್ಥರ ಮುಂದಿಟ್ಟು ತಪ್ಪು ಒಪ್ಪಿಕೊಳ್ಳಲು ಹೇಳುವರು. ದೈವ ಮತ್ತು ದೆವ್ವದಭಯ ಹುಟ್ಟಿಸುವರು. ವಿವಿಧ ತಂತ್ರಗಳನ್ನು ಬಳಸುವರು. ಉದಾಹರಣೆಗೆ, ಭಯಾನಕ ವಾತಾವರಣ ನಿರ್ಮಿಸಿ ಮಣ್ಣಿನಲ್ಲಿ ಉಗುಳಿ ಮಣ್ಣಿನಉಂಡೆ ಮಾಡಿದರೆ ತಪ್ಪಿತಸ್ಥ ಅಲ್ಲ ಎಂದು ತೀರ್ಮಾನಿಸುತ್ತಾರೆ. ತಪ್ಪಿತಸ್ಥನಾಗಿದ್ದರೆ ತಪ್ಪಿನ ಭಯದಲ್ಲಿ, ದೈವ ಮತ್ತು ದೆವ್ವದಭಯದಲ್ಲಿ ಉಗುಳೇ ಬರುವುದಿಲ್ಲ. ತಪ್ಪು ಸಾಬೀತಾಗುತ್ತದೆ. ತಪ್ಪಿಗೆ ತಕ್ಕಂತೆ ಶಿಕ್ಷೆ ವಿಧಿಸುವರು.

ಛತ್ತಿಸಗಢರಾಜ್ಯದ ಧಮತಾರಿಜಿಲ್ಲೆಯ ಗೊಹನಾಲಾಗ್ರಾಮದ ಗೊಂಡರ ನ್ಯಾಯ ಪಂಚಾಯತಿಯಲ್ಲಿ ಜುಲೈ ೨೦೦೨ರಲ್ಲಿ ಅಪರಾಧ ಜರುಗಿದೆ ಎಂಬ ಹಿನ್ನೆಲೆಯಲ್ಲಿ ಕೇಸರಿ ಎಂಬ ೧೮ ವರ್ಷದ ಬಾಲೆಯನ್ನು ಸಾರ್ವಜನಿಕ ಮಹಾಸಭೆಯಲ್ಲಿ ಹರಾಜು ಹಾಕಲಾಯಿತು. ಹರಾಜಿನಲ್ಲಿ ಬಾಬುಲಾಲ ಎಂಬಾತನು ೫೫೧ ರೂಪಾಯಿಗಳಿಗೆ ಇವಳನ್ನು ಖರೀದಿಸಿದನು. ಕೇಸರಿ ೧೦ನೇ ತರಗತಿಯವರೆಗೆ ಅಧ್ಯಯನ ಮಾಡಿದವಳು. ಇವಳು ಸ್ಥಳೀಯ ಆರೋಗ್ಯ ಸಂಸ್ಥೆಯೊಂದರಲ್ಲಿ ಆರೋಗ್ಯ ಕಾರ್ಯಕರ್ತೆಯಾಗಿ ಕಾರ್ಯನಿರ್ವಹಿಸುತ್ತಿರುವಾಗ ಅಂಗಡಿಯ ಭುರ್‍ರು ಎಂಬಾತನು ಇವಳನ್ನು ದೈಹಿಕಸಂಪರ್ಕ ಬಯಸಿ ಹಿಡಿದಿದ್ದ ಎಂಬ ಅಪವಾದ ಹೊಂದಿದ್ದಳು. ಭುರ್‍ರು ಕೇಸರಿಯನ್ನು ವಿವಾಹವಾಗಲು ನಿರಾಕರಿಸಿದ್ದಾಗ ಗೊಂಡರ ನ್ಯಾಯಪಂಚಾಯಿತಿಯು ಸಾರ್ವಜನಿಕವಾಗಿ ಮಹಾಸಭೆಯಲ್ಲಿ ಇವಳನ್ನು ಹರಾಜು ಹಾಕಿ ಕೇಸರಿಯ ಕುಟುಂಬಕ್ಕೆ ೧೫೦೦ ರೂಪಾಯಿ ಮತ್ತು ಭುರ್‍ರು ಕುಟುಂಬಕ್ಕೆ ೨೦೦೦ ರೂಪಾಯಿಗಳ ದಂಡ ವಿಧಿಸಿತು. ಈ ನ್ಯಾಯವನ್ನು ಒಪ್ಪದ

ಅವಮಾನಿತ ಕೇಸರಿಯು ಆತ್ಮಹತ್ಯೆ ಮಾಡಿಕೊಂಡ ವರದಿಯನ್ನು 'ಹಿಂದು' ಪತ್ರಿಕೆಯು ದಿನಾಂಕ ೨೦.೮.೨೦೦೨ರಂದು ಪ್ರಕಟಿಸಿತು.

ಈ ತರಹದ ಇನ್ನೆರಡು ಘಟನೆಗಳು 'ದ ವೀಕ್'ದಲ್ಲಿ ಜನವರಿ ೨೬,೨೦೦೩ರಂದು ಪ್ರಕಟಗೊಂಡವು. ಮಧ್ಯಪ್ರದೇಶದ ಖಾಂಡ್ವಾ ಜಿಲ್ಲೆಯ ಗೌರಿಗ್ರಾಮದ ಭಿಲ್ ಬುಡಕಟ್ಟಿನ ದೇವಕಿಬಾಯಿ ೫೦೦೦ ರೂಪಾಯಿಗಳಿಗೆ ಮತ್ತು ಬಸಂತಾ ೮೦೦೦ ರೂಪಾಯಿಗಳಿಗೆ ಜಾತಿ ಪಂಚಾಯತಿಯ ಹರಾಜಿನಲ್ಲಿ ಮಾರಲ್ಪಟ್ಟರು. ಸಾವಿತ್ರಿ ಮತ್ತು ಲಕ್ಷ್ಮೀ ಇವರು ಅನ್ಯಬುಡಕಟ್ಟುಗಳೊಂದಿಗೆ ವಿವಾಹವಾಗಿರುವುದರಿಂದ ಇವರಿಗೆ ಜಾತಿಪಂಚಾಯಿತಿಯೂ ದಂಡ ವಿಧಿಸಿತು. ಆದರೆ ಇವರನ್ನು ಹರಾಜಿನಲ್ಲಿ ಯಾರೂ ಖರೀದಿಸಲು ಮುಂದೆ ಬರುವುದಿಲ್ಲ. ದೇವಕಿಬಾಯಿಯ ಮೊದಲ ಗಂಡ ಜಗದೀಶನು ಹತ್ತುವರ್ಷಗಳ ಹಿಂದೆ ದೇವಕಿಯನ್ನು ಬಿಟ್ಟಿರುವುದರಿಂದ ದೇವಕಿಯು ಬರೇಲಾ ಬುಡಕಟ್ಟಿನ ಬಾಮನಿಯಾನನ್ನು ವಿವಾಹವಾಗಿದ್ದಳು. ಭಿಲ್ಲರಲ್ಲಿ ಹೊರಜಾತಿಯವರನ್ನು ವಿವಾಹವಾಗುವುದು ಅಪರಾಧವಾಗಿರುವುದು. ಈ ಅಪರಾಧಕ್ಕಾಗಿಯೇ ಪಂಚರು ದೇವಕಿಗೆ ಮಾನಸಿಕದ ಜೊತೆ ಮಾಂಸಲ ಹಿಂಸೆಯೂ ನೀಡಲು ಒಪ್ಪಿದರು. ಇಡೀ ದಿನ ಅವಳ ತಲೆಯ ಮೇಲೆ ಕಲ್ಲೂ ಹೊರಿಸಿದರು. ಬಸಂತಾಳನ್ನು ಖರೀದಿಸಿದ ಖಾರಬಾರನು ಸಾರ್ವಜನಿಕರ ಮುಂದೆ ಅವಳ ತೋಳುಗಳನ್ನು ಬಳಸಿ ಅವಮಾನಿಸುವನು. ಈ ತರಹದ ಅವಮಾನವನ್ನು ಸಹಿಸಲು ಸಿದ್ಧವಾದವಳು ಮಾತ್ರ ತನ್ನೊಂದಿಗೆ ಬಾಳಬಹುದೆಂದು ಖರೀದಿದಾರರು ತರ್ಕಿಸುವರು. ಇಂತಹ ಅಪರಾಧ ಭಿಲ್ ಮಹಿಳೆಯರಿಂದ ನಡೆಯದಿರಲೆಂದು ಜಾತಿ ಪಂಚಾಯತಿಯು ಅವಮಾನದಪರ ಹರಾಜುಹಾಕುವ ಸಂಪ್ರದಾಯ ಮುಂದುವರಿಸಿದೆ. ಈ ಬುಡಕಟ್ಟುಗಳಲ್ಲಿ ಹೆಣ್ಣುಗಳು ಹರಾಜು ಆಗುವುದಕ್ಕೆ ಇವರಲ್ಲಿಯ ಚಲುವಿಕೆಯೇ ಕಾರಣ ಎಂದು ಅಧ್ಯಯನಕಾರರು ಅಭಿಪ್ರಾಯ ಪಡುವರು. ಇಂದು ಹೆಣ್ಣುಗಳ ಹರಾಜು ಕಾನೂನುಬಾಹಿರವಾಗಿದ್ದರೂ ಬುಡಕಟ್ಟುಗಳ ಸಾಂಪ್ರದಾಯಿಕ ನ್ಯಾಯಪದ್ಧತಿಗಳಲ್ಲಿ ಇವುಗಳನ್ನು ಬುಡಕಟ್ಟುಗಳ ರಕ್ಷಣೆಯ ತಂತ್ರಗಳೆಂದು ಆಚರಿಸುವರು.

ಕರ್ನಾಟಕದ ಕೊಡಗಿನ ಬುಡಕಟ್ಟು ವಿದ್ಯಾರ್ಥಿನಿಯರು ಚಿಕ್ಕವಯಸ್ಸಿನಲ್ಲಿಯೇ ತಾಯಿಯಾದ ವರದಿಗಳನ್ನು ಪತ್ರಿಕೆಗಳು ಬಹಿರಂಗಗೊಳಿಸಿದವು. ಬುಡಕಟ್ಟುಗಳು ಇವನ್ನು ಗಂಭೀರವಾಗಿ ಪರಿಗಣಿಸದೆ ಇವುಗಳನ್ನು ತಮ್ಮ ಸಂಪ್ರದಾಯಗಳೆಂದು ಒಪ್ಪಿ ಕೊಂಡವು. ಬುಡಕಟ್ಟು ನ್ಯಾಯಪಂಚಾಯತಿಯ ವ್ಯವಸ್ಥೆಯನ್ನು ಆಧುನಿಕ ಸಾಮಾಜಿಕ ಸತ್ಯಗಳಿಗೆ ಹೊಂದಾಣಿಕೆಯಾಗುವಂತೆ ಪರಿವರ್ತನೆಗೆ ಒಳಪಡಿಸುವುದು ಅನಿವಾರ್ಯವಾಗಿದೆ. ಪರಿವರ್ತನೆಗೆ ಒಳಪಟ್ಟ ಬುಡಕಟ್ಟುಗಳ ಸಾಂಪ್ರದಾಯಿಕ ಪಂಚಾಯತಿವ್ಯವಸ್ಥೆಗೆ ಸರಕಾರ ಮಾನ್ಯತೆಯನ್ನು ನೀಡುವುದು ಅಗತ್ಯವಾಗಿದೆ. ಆಗ ಮಾತ್ರ ಸಿಂಧೊಳ್ಳು, ಬುಡ್ಗ ಜಂಗಮ್, ಗೋಸಂಗಿ, ಶಿಳ್ಳೇಕ್ಯಾತ, ರಾಜಗೊಂಡ, ಹಕ್ಕಿಪಿಕ್ಕಿ ಇತ್ಯಾದಿ ಬುಡಕಟ್ಟುಗಳಿಗೆ, ಜಾತಿಪಂಚಾಯತಿಗಳಿಗೆ ನ್ಯಾಯ ಒದಗಿಸಿದಂತೆ ಆಗುವುದು.

ಆಧಾರಗಳು

೧. 'Auctioned' Girl Commits Suicide'; **The Hindu** Daily, August 20, 2002, p. 11

೨. ಅಕ್ಕಮಹಾದೇವಿ (ಅನು), ಬುಡಕಟ್ಟು ನ್ಯಾಯ, ಮೈಸೂರು ವಿಶ್ವವಿದ್ಯಾನಿಲಯ, ೧೯೮೪)

೩. ಆರ್ಥಿಕವಾಗಿ ಹಿಂದುಳಿದವರಿಗೂ ಮೀಸಲಾತಿ (ಪತ್ರಿಕಾ ವರದಿ), ಪ್ರಜಾವಾಣಿ ದಿನಪತ್ರಿಕೆ, ದಿನಾಂಕ ೨೯.೭.೨೦೦೩, ಪುಟ ೧ ಮತ್ತು ೮

೪. ಭಾರತದ ಜನಗಣತಿ, ೧೯೮೧; ಸರಣಿ ೧: ಭಾರತ :ಪೇಪರ್II-B (III) :1984:XXII

೫. **ಭಾರತದ ಸಂವಿಧಾನ**, ಬೆಂಗಳೂರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ೧೯೮೫

೬. **Census of India**, 1881 to 1991

೭. ಕಾಮತ್, ಸೂರ್ಯನಾಥ್ ಯು (ಪ್ರಸಂ)., **ಕರ್ನಾಟಕ ರಾಜ್ಯ ಗ್ಯಾಸೆಟಿಯರ್**, ಬೆಂಗಳೂರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ೧೯೮೪

೮. ಮೈತ್ರಿ, ಕೆ ಎಂ., **ಬುಡಕಟ್ಟು ಕುಲಕಸುಬುಗಳು**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೯. ನಂಜಮಣ್ಣಿ ಎಂ., **ಸಮಾಜಶಾಸ್ತ್ರ ಪರಿಚಯ ಭಾಗ ೧**, ಮೈಸೂರು ವಿಶ್ವವಿದ್ಯಾನಿಲಯ, ೧೯೭೪

೧೦. ಪರಿಶಿಷ್ಟರ ಪಟ್ಟಿಗೆ ಕರ್ನಾಟಕದ ೫ ಜಾತಿ ಸೇರ್ಪಡೆ : ಓರಾಮ್ (ಪತ್ರಿಕಾ ವರದಿ), ಪ್ರಜಾವಾಣಿ ದಿನಪತ್ರಿಕೆ, ದಿನಾಂಕ ೧೬.೩.೨೦೦೩, ಪುಟ ೧೯

೧೧. Raghavaiah V., **Tribal Justice**, Hyderabad, Tribal Cultural Research and Training Institute, 1968

೧೨. Women for Sale; **The Week** , Jan 26, 2003, p.32-36

೮

# ಬೇಡರ ಕಟ್ಟೆಮನೆಗಳ 'ನ್ಯಾಯಪಂಚಾಯಿತಿ'

ಡಾ. ವಿರೂಪಾಕ್ಷಿ ಪೂಜಾರಹಳ್ಳಿ

'ಮಾನವ' ಬೇಟೆ, ಪಶುಪಾಲನೆ ಮತ್ತು ಕೃಷಿಯಿಂದ ಸ್ಥಿತ್ಯಂತರಗೊಂಡಾಗ ಹಲವು ಮಾರ್ಪಾಟುಗಳಾದವು. ಅವುಗಳಲ್ಲಿ ಪ್ರಮುಖವಾದುದು ಆಹಾರ ಸಂಗ್ರಹಣೆಯ ಬದುಕು. ಕ್ರಮೇಣ ಜನಜೀವನದಲ್ಲಿ ಸಂಭವಿಸುವ ಘಟನೆಗಳಿಗೆ ನ್ಯಾಯ, ತೀರ್ಮಾನ, ಪಂಚಾಯಿತಿಗಳನ್ನು ತಾವೇ ರೂಪಿಸಿಕೊಂಡಿದ್ದು ಗಮನಾರ್ಹ. ಹೀಗೆ ಭೂಮಿಯ ಮೇಲೆ ವಾಸಿಸುವ ಪ್ರತಿಯೊಂದು ಬುಡಕಟ್ಟು ಸಮುದಾಯವು ತನ್ನದೇ ಆದ ನ್ಯಾಯತೀರ್ಮಾನದ ವ್ಯವಸ್ಥೆಯನ್ನು ಹೊಂದಿರುತ್ತದೆ. ಇಂಥಾ ನ್ಯಾಯಪಂಚಾಯಿತಿ ಕಾರ್ಯವಿಧಾನ ಇತರೆ ಸಮುದಾಯಗಳಲ್ಲಿದ್ದರೂ ಬುಡಕಟ್ಟುಗಳಲ್ಲಿ ಮಾತ್ರ ವಿಶಿಷ್ಟ ಸ್ಥಾನ ಪಡೆದ ಆ ವ್ಯವಸ್ಥೆಗೆ ಹೊಂದಿಕೊಂಡಿರುತ್ತದೆ. ಕರ್ನಾಟಕದಲ್ಲಿರುವ ಬುಡಕಟ್ಟುಗಳ ಪೈಕಿ (೪೯) ಬೇಡರ ಬುಡಕಟ್ಟು ಜನಸಂಖ್ಯೆಯಲ್ಲಿ ಮೊದಲನೆಯದಾಗಿದ್ದು, ಚರಿತ್ರೆ ಮತ್ತು ಸಂಸ್ಕೃತಿಯಿಂದ ಅತೀ ಮಹತ್ವ ಹೊಂದಿದೆ. ಇವರು ಕರ್ನಾಟಕದ ಉದ್ದಗಲಕ್ಕೂ ನೆಲೆಸಿದ್ದರೂ ಮಧ್ಯಕರ್ನಾಟಕದಲ್ಲಿ ಮಾತ್ರ ವಿಶೇಷವಾಗಿ ಅಂದರೆ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತಾರೆ. ಇಲ್ಲಿ ರಾಜಪ್ರಭುತ್ವದಲ್ಲಿದ್ದ ನ್ಯಾಯಾಂಗಕ್ಕೆ ಒತ್ತುಕೊಡದೆ, ಜನಸಾಮಾನ್ಯರನ್ನು ಲಕ್ಷ್ಯವಿಟ್ಟು ಅಧ್ಯಯನ ಮಾಡಲಾಗಿದೆ. ಚಿತ್ರದುರ್ಗ, ದಾವಣಗೆರೆ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿನ ಈ ಸಮುದಾಯದ ಸಾಮಾಜಿಕ, ನ್ಯಾಯಾಂಗದ ಕಟ್ಟುಪಾಡುಗಳನ್ನು ವಿಶ್ಲೇಷಿಸುವ ಉದ್ದೇಶ ಇಲ್ಲಿಯದು.

ಬೇಡರು ಆದಿಯಿಂದಲೂ ಸಂಸ್ಕೃತಿ ಮತ್ತು ನಾಗರಿಕತೆ ಹೆಸರಿನಲ್ಲಿ ಶೀಲ, ಶಿಸ್ತು, ನಡವಳಿಕೆಗಳನ್ನು ಉಳಿಸಿಕೊಂಡು ಬಂದಿರುವುದು ಗಮನಾರ್ಹ. ಇತ್ತೀಚಿನ ಸಂದರ್ಭದಲ್ಲಂತೂ ಇವರ ಜೀವನ ವಿಧಾನದಲ್ಲಿ ಏಕಪ್ರಕಾರತೆ ಉಳಿದಿಲ್ಲ. ಚದುರಿಹೋಗಿರುವ ಇವರು ಕರ್ನಾಟಕದ ಮೂಲೆ-ಮೂಲೆಗಳಲ್ಲಿ ಅಂದರೆ ತಮಗಿಷ್ಟವಾದ ನೆಲೆಗಳಲ್ಲಿ ವೈವಿಧ್ಯಮಯವಾದ ಬದುಕನ್ನು ನಡೆಸುತ್ತಾರೆ. ರಾಜಪ್ರಭುತ್ವಗಳು ಕೈತಪ್ಪಿದಾಗ ಗ್ರಾಮ, ಜನಸಂಖ್ಯೆಗೆ ಅನುಗುಣವಾಗಿ ವಿಶೇಷ ಜವಾಬ್ದಾರಿಗಳನ್ನು ಇವರು ಹಂಚಿಕೊಂಡಿರುತ್ತಾರೆ.

ಕರ್ನಾಟಕದಲ್ಲಿನ ಬೇರೆ ಬೇರೆ ಸಮುದಾಯಗಳಲ್ಲಿರುವಂತೆ ಬೇಡರಲ್ಲಿಯೂ ಕಟ್ಟೆಮನೆಗಳಿದ್ದವು. ನಾಯಕರ ಕಟ್ಟೆಮನೆಗಳ ಹೆಸರುಗಳನ್ನು ಆ ಜನಾಂಗದ ಹಿರಿಯ ವ್ಯಕ್ತಿಗಳು ಹೊಂದಿರುತ್ತಿದ್ದ ಉಲ್ಲೇಖಗಳಿವೆ. ಉದಾಹರಣೆಗೆ ತೇಜಸ್ವಿ ಕಟ್ಟೆಮನಿ, ಆರ್.ಪಿ.ಕಟ್ಟೆಮನಿ, ದೊರೆ, ನಾಯಕ, ಗುರಿಕಾರ, ಕಟ್ಟೆನಾಯಕ, ತಳವಾರ ಇತ್ಯಾದಿ. ರಾಜಪ್ರಭುತ್ವದಲ್ಲಿ ಜನಸಾಮಾನ್ಯರಿಗೆ ನ್ಯಾಯ ದೊರಕಿಸಲು ಇಂಥಾ ಕಟ್ಟೆಮನೆಗಳು ಸಹಾಯಕವಾಗಿದ್ದವು. ಇಂದಿನ ವ್ಯವಸ್ಥೆಯಲ್ಲಿ ಮಾತ್ರ ತಾಲ್ಲೂಕು, ಜಿಲ್ಲಾ ನ್ಯಾಯಾಲಯಗಳನ್ನೂ ಹೋಲುತ್ತವೆ ಹಿಂದಿನ ಕಟ್ಟೆಮನೆಗಳು. ಇಂದಿನ ನ್ಯಾಯಪಂಚಾಯಿತಿ ವ್ಯವಸ್ಥೆಯ ಊರುಚಾವಡಿ, ಪೊಲೀಸ್‌ಠಾಣೆ, ಕೋರ್ಟುಗಳಲ್ಲಿ ನಡೆಯುತ್ತಿರುವುದು ಸರ್ಕಾರದ ಸಾಂವಿಧಾನಿಕ ಇತ್ತೀಚಿನ ಬದಲಾವಣೆ ಎನ್ನಬಹುದು.

'ಕಟ್ಟೆಮನೆ' ಎಂದರೆ ಜಾತಿಯ ಶ್ರೇಣಿ-ಸಂಘ, ಸಂಸ್ಥೆ. ಇಂದು ಕಟ್ಟೆಮನೆಯನ್ನು 'ಪಂಚಾಯಿತಿಕಟ್ಟೆ' ಎಂದು ಕರೆಯುವುದೇ ಹೆಚ್ಚು. ಹೀಗೆಂದರೆ : ಚಾವಡಿ. ಅಪರಾಧಿಯನ್ನು 'ನೀನು ಕಟ್ಟೆಮನೆ, ಗುರುಮನೆ-ಅರಮನೆಗಳಿಗೆ ವಿಧೇಯನೋ-ಅವಿಧೇಯನೋ' ಎಂದು ಕೇಳುವರು. 'ನಾನು ಹಿಂದೆಂದೂ ಅಪರಾಧ ಮಾಡಿರಲಿಲ್ಲ'ವೆಂದಾಗ ಹಳ್ಳಿಯ ಕಟ್ಟೆಮನೆ ಮುಚ್ಚಳಿಕೆ ನೀಡಿತೆಂಬ ವಿವರಗಳಿವೆ. ಇನ್ನೊಂದು ಅರ್ಥದಲ್ಲಿ ಕಟ್ಟೆಮನೆಯೆಂಬುದು ಗ್ರಾಮಾಧಿಕಾರಿಯ ಮನೆ; ಊರ ಮುಖಂಡರ ಮನೆ. ಬುಡಕಟ್ಟು ಸಮುದಾಯಗಳಲ್ಲಿ ಕಟ್ಟೆಮನೆ ಯಜಮಾನನು ಊರಿನ-ಜಾತಿಯ ಮುಖಂಡನೂ ಆಗಿರುತ್ತಿದ್ದ.

ಕರ್ನಾಟಕದಲ್ಲಿ ನೆಲೆಸಿರುವ ಬೇಡರು ತಮಗೆ ಇಷ್ಟವಾದ ಸ್ಥಳದಲ್ಲಿ ಸಾಮೂಹಿಕ ಭೋಜನ, ವಿವಾಹ, ಹಬ್ಬ-ಹರಿದಿನಗಳನ್ನು ಮಾಡುತ್ತಿದ್ದರು. ಜನಸಂಖ್ಯೆ ಹೆಚ್ಚಿದಂತೆ ಜಾತಿಯಲ್ಲಿ ಕಲಹ, ಸಂಘರ್ಷಗಳು ಹುಟ್ಟಿಕೊಂಡವು. ಅನೈತಿಕ, ಕಾನೂನುಬಾಹಿರ ಚಟುವಟಿಕೆಗಳನ್ನು ತಡೆಗಟ್ಟಲು ಜನಾಂಗದ ಹಿರಿಯರ ನೇತೃತ್ವದಲ್ಲಿ ನ್ಯಾಯಾಂಗವನ್ನು ಭದ್ರಪಡಿಸಲು ಮುಂದಾದರು. ಅದಕ್ಕೆ ತನು ಮನ ಧನಗಳನ್ನು ಅರ್ಪಿಸುವ ಸಂಕಲ್ಪ ಕೈಗೊಳ್ಳಲಾಯಿತು. ಇದು ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಮಾಡಿಕೊಂಡ ವ್ಯವಸ್ಥೆಯೇ ಆಗಿತ್ತು.

ಬೇಡಜನಾಂಗ ದಿನದಿಂದ ದಿನಕ್ಕೆ ಅಭಿವೃದ್ಧಿ ಹೊಂದುವ ಹಂತದಲ್ಲಿರುವಾಗಲೇ ದೊರೆ ಯರಮಂಚಿನಾಯಕ, ದಳವಾಯಿ ಮೊದಲಾದವರು ಸೇರಿ ಬೇಡಜನಾಂಗದ ಕಟ್ಟುಪಾಡು, ನೀತಿ-ನಿರ್ಬಂಧಗಳ ಬಗ್ಗೆ ಚಿಂತಿಸುತ್ತಾರೆ. ಜಾತಿಕಲಹ (Caste Conflict), ಕೋಮುವಾದ-ಗಲಭೆ (Communal Conflict), ಗೋತ್ರಗಳ ಕಲಹ, ಗುರು-ಪೂಜಾರಿಗಳ, ಆಯಾ ದೇವರುಗಳ ಐಕ್ಯತೆಗಾಗಿ ಮತ್ತು ಎಲ್ಲ ವಿಧವಾದ ವಿವಾದಗಳನ್ನು ಪರಿಹರಿಸಿಕೊಳ್ಳಲು ಕಟ್ಟೆಮನೆಗಳನ್ನು ಸ್ಥಾಪಿಸುವ ಉದ್ದೇಶ ಹೊಂದಿದ್ದರು. ಹೀಗೆ ಸ್ಥಾಪಿಸಲ್ಪಡುವ ಗುಡಿಕಟ್ಟೆ, ಕಟ್ಟೆಮನೆಗಳಿಗೆ ಯಜಮಾನರುಗಳನ್ನು ನೇಮಕ ಮಾಡುವುದು, ಗೋತ್ರದ ವಿವಾದಗಳನ್ನು ಬಗೆಹರಿಸುವಂತೆ ಕಾರ್ಯಸೂಚಿ ಸಿದ್ಧಪಡಿಸಿದ್ದರು. ಈ ನೇತೃತ್ವವನ್ನು ವಹಿಸಿದ್ದವರು

ಯರಮಂಚಿನಾಯಕ, ಗಾದರಿಪಾಲನಾಯಕ, ರಪ್ಪಲಸೂರಿ ಇತರರು. ಇವರು ಗೋದಾವರಿ ನದಿ ಪ್ರದೇಶದಲ್ಲಿರುವಾಗ ಕಟ್ಟೆಮನೆಗಳನ್ನು ಸ್ಥಾಪಿಸುವ ವಿಚಾರ ಹಿಂದೊಮ್ಮೆ ಮಾಡಿದ್ದರು. ಮೂಲತಃ ಆಂಧ್ರದಲ್ಲಿನ ಧಾರ್ಮಿಕಕ್ಷೇತ್ರಗಳನ್ನು ಆರಾಧಿಸುವ ಬೇಡರು ವಿಜಯನಗರದ ತರುವಾಯ ತಮಗೆ ದಿಕ್ಕುತಪ್ಪಿದಂತಾಗಿ ಆನೆಗೊಂದಿ 'ನರಪತಿ ಸಂಸ್ಥಾನ'ದ ಆಶ್ರಯ ಪಡೆಯಬೇಕಾಯಿತು. ನರಪತಿಗಳು ಅರಮನೆ ಮತ್ತು ಗುರುಮನೆಗಳಿಗೆ ಒಡೆಯರಾಗಿದ್ದರು. ಹೀಗಿರುವಾಗ ಬೇಡರ ೧೨ ಪೆಟ್ಟಿಗೆದೇವರುಗಳನ್ನು ಆನೆಗೊಂದಿ ಕೋಟೆಯಲ್ಲಿ ಬಂಧಿಸಿಡುತ್ತಾರೆ. ಯರಮಂಚಿನಾಯಕ ಇತರ ಬೇಡರ ಹಿರಿಯರ ಆದೇಶದಂತೆ ವೀಳ್ಯೆಹಿಡಿದು ಕೊಡಗಲುಬೊಮ್ಮ ಎಂಬ ವೀರ ಕೋಟೆಯನ್ನು ಭೇದಿಸಿ ಈ ೧೨ ಪೆಟ್ಟಿಗೆ ದೇವರುಗಳನ್ನು ತರುತ್ತಾನೆ. ಆಗ ಅವನು ಬೇಡರ ಕಟ್ಟೆಮನೆ ಮೊದಲಾದ ಸುಗಮಕಾರ್ಯಗಳಿಗೆ ಕಾರಣನಾದ. ಇವನು ಕಿರುಪಾಳೆಯಗಾರನಾದರೂ ಬಹಳಷ್ಟು ದಿನ ಇರಲಿಲ್ಲ. ಪಾಳೆಯಪಟ್ಟುಗಳಿಂದ ಕಟ್ಟೆಮನೆಗಳು ಭಿನ್ನವಾಗಿರುವಂತವುಗಳು. ಆರಂಭದಲ್ಲಿ ಎಲ್ಲ ಕಡೆ ಕಟ್ಟೆಮನೆಗಳಿದ್ದರೂ ಅವುಗಳ ಅಸ್ತಿತ್ವ ಕಾಪಾಡಿಕೊಂಡಿದ್ದು ಕೆಲವು ಮಾತ್ರ. ನಾಯಕನಹಟ್ಟಿ, ಜರಿಮಲೆ, ಗುಡಿಕೋಟೆಗಳು ಪಾಳೆಯಪಟ್ಟುಗಳಾದರೂ ನನ್ನಿವಾಳ, ಗೋನೂರು, ನಾಯಕನಹಟ್ಟಿಗಳು ಕಟ್ಟೆಮನೆಗಳಾಗಿರುತ್ತವೆ. ನಾಯಕರಲ್ಲಿ ಅತ್ಯಾಚಾರ ನಡೆದಾಗ, ಕುಲಕೆಟ್ಟವರನ್ನು, ಕೆಟ್ಟಕೆಲಸ ಮಾಡುವವರನ್ನು ಕುಲದಿಂದ ಹೊರಹಾಕುತ್ತಿದ್ದರು. ಊರಿನ ಪವಿತ್ರಸ್ಥಳದಲ್ಲಿ ದೇವಾಲಯ ಕಟ್ಟೆ ಪಂಚಾಯಿತಿ ಚಾವಡಿಗಳಲ್ಲಿ ಬೇಡಸಮುದಾಯ ದವರು ಸೇರಿ ನಡೆಸುವ ನ್ಯಾಯಪಂಚಾಯಿತಿ ಸ್ಥಳಕ್ಕೆ 'ಕಟ್ಟೆಮನೆ' ಎಂದು ಹೆಸರಾಯಿತು. ಬೇಡರ ಕಟ್ಟೆಮನೆಗಳು ಸರ್ವತೋಮುಖ ಅಭಿವೃದ್ಧಿಯನ್ನು ಧ್ಯೇಯವಾಗಿಟ್ಟುಕೊಂಡಿದ್ದವು ಎಂಬುದರಲ್ಲಿ ಎರಡುಮಾತಿಲ್ಲ.

ಚಿತ್ರದುರ್ಗ ಜಿಲ್ಲೆ ಮತ್ತು ಅದರ ಆಸುಪಾಸಿನಲ್ಲಿ (ಬೇಡರನಾಡು) ಬೇಡನಾಯಕರ ಕಟ್ಟೆಮನೆಗಳಿದ್ದವು. ೧೨ ಪೆಟ್ಟಿಗೆದೇವರುಗಳ ಸ್ಥಳಗಳನ್ನೇ ಹೋಲುವ ಕಟ್ಟೆಮನೆಗಳಿದ್ದವೆಂದು ಹೇಳಲಾಗಿದೆ. ಆದರೆ ಬೇಡರಲ್ಲಿ ಕ್ರಮೇಣ ೩ ಕಟ್ಟೆಮನೆಗಳು ಮಾತ್ರ ಉಳಿದಿವೆ (ಗೋನೂರು, ನನ್ನಿವಾಳ ಮತ್ತು ನಾಯಕನಹಟ್ಟಿ). ೧೨ ಕಟ್ಟೆಮನೆಗಳನ್ನು ಉತ್ಪ್ರೇಕ್ಷೆಗಾಗಿ ಹೇಳಿಕೊಳ್ಳುತ್ತಾರೆ. ಆ ೧೨ ಕಟ್ಟೆಮನೆಗಳೆಂದರೆ:

೧. ರಾಯಲುಕಟ್ಟೆ : ಪದಿಮುತ್ತಿಗಾರು ಕಟ್ಟೆಮನೆ, ಪದಿನಾರು ದೇವರುಹಟ್ಟಿ, ಮೊಳಕಾಲ್ಮೂರು ತಾಲ್ಲೂಕು.

೨. ರಾಗಿಮಾನುಕಟ್ಟೆ : ಕಂಪಳದೇವರ ಕಟ್ಟೆಮನೆ, ಕಂಪಳದೇವರಹಟ್ಟಿ, ಮೊಳಕಾಲ್ಮೂರು ತಾಲ್ಲೂಕು.

೩. ರಚ್ಚಕಟ್ಟೆ : ಕಲ್ಲೇದೇವರಪುರ ಕಟ್ಟೆಮನೆ, ಕಲ್ಲೇದೇವರಪುರ, ಜಗಳೂರು ತಾಲ್ಲೂಕು.

೪. ಮೊಲಕಾಲಕಟ್ಟೆ : ಚಿಂತಗುಂಟ್ಲು ಕಟ್ಟೆಮನೆ, ಕುದಾಪುರ, ಚಳ್ಳಕೆರೆ ತಾಲ್ಲೂಕು.

೫. ನಾಯಕನಹಟ್ಟಿ(ನೂಕಲಕಟ್ಟೆ) : ಹಟ್ಟಿಮಲ್ಲಪ್ಪನಾಯಕ ಕಟ್ಟೆಮನೆ, ನಾಯಕನಹಟ್ಟಿ, ಚಳ್ಳಕೆರೆ ತಾಲ್ಲೂಕು.

೬. ಗೋನೂರು (ಏಕಲುಕಟ್ಟೆ) : ಸೂರಪ್ಪನಾಯಕ ಕಟ್ಟೆಮನೆ, ಹೂಡೇಂ (ಗೋನೂರು/ಚಿತ್ರದುರ್ಗ), ಕೂಡ್ಲಿಗಿ ತಾಲ್ಲೂಕು.

೭. ಪೋಕಲಕಟ್ಟೆ : ಚಿನ್ನಪಾಲನಾಯಕ ಕಟ್ಟೆಮನೆ, ನನ್ನಿವಾಳ, ಚಳ್ಳಕೆರೆ ತಾಲ್ಲೂಕು.

೮. ಆಚಾರಕಟ್ಟೆ : ಕಾಮಗೇತಹಳ್ಳಿ ಕಟ್ಟೆಮನೆ, ಜಗಳೂರು ತಾಲ್ಲೂಕು, ದಾವಣಗೆರೆ ಜಿಲ್ಲೆ.

೯. ಗಿರಿಕಲಕಟ್ಟೆ : ಜಂಬುದ್ವೀಪಗಳಗುಡ್ಡೆ ಕಟ್ಟೆಮನೆ, ಥಳಕು (ಬಂಜಗೆರೆ), ಚಳ್ಳಕೆರೆ ತಾಲ್ಲೂಕು.

ಈ ಬಗ್ಗೆ ಇನ್ನೂ ೩ ಕಟ್ಟೆಮನೆಗಳ ಹೆಸರುಗಳು ಮಾತ್ರ ಪುನರಾವರ್ತನೆಯಾಗುತ್ತವೆ.

ಯಾವುದೋ ಒಂದು ಹಂತಕ್ಕೆ ಬೇಡಜನಾಂಗ ಇಬ್ಭಾಗವಾದಾಗ ದೊರೆ ಯರಮಂಚಿನಾಯಕ ಐವೋದಿ(ಗೌರಸಮುದ್ರ)ಮಠವನ್ನು ಕೇಂದ್ರಸ್ಥಾನವಾಗಿ ಮಾಡಿಕೊಂಡು ಅಧಿಕಾರ ನಡೆಸುತ್ತಿದ್ದ. ಆ ಕಟ್ಟೆಮನೆಗಳ ವಿವರ ಇಂತಿದೆ:

೧. ನಲ್ಲಚೆರವು ಓಬಳದೇವರು ಕಟ್ಟೆಮನೆ (ರುದ್ರಮ್ಮನಹಳ್ಳಿ)

೨. ಪೆದ್ದತಿರುಮಲದೇವರ ಕಟ್ಟೆಮನೆ (ಪದಿಮುತ್ತಿಗಾರ) (ಬೇಡರೆಡ್ಡಿಹಳ್ಳಿ)

೩. ಸೂರಲಿಂಗನ ಕಾಮಗೇತನಹಳ್ಳಿ ಕಟ್ಟೆಮನೆ (ಆಚಾರ ವಿಚಾರ ಇಲ್ಲದ್ದು)

೪. ಕಂಪಳದೇವರ ಕಟ್ಟೆಮನೆ (ಕಂಪಳದೇವರಹಟ್ಟಿ)

೫. ಕಲ್ಲೇದೇವರಪುರದ ರಚ್ಚಕಟ್ಟೆಮನೆ (ಕಲ್ಲೆದೇವರಪುರ)

೬. ಜಂಬುದ್ವೀಪದ ಗಿಲುಕಲು ಕಟ್ಟೆಮನೆ (ಕುದಾಪುರ-ತಳಕು-ಬಂಜಗೆರೆ) ಇತ್ಯಾದಿ.

ಕ್ರಮೇಣ ೩ ಕಟ್ಟೆಮನೆಗಳ ಬಗ್ಗೆ ಉಲ್ಲೇಖವಿದೆ (ಆಂಧ್ರದಿಂದ ವಲಸೆ ಬಂದವು)

೧. ಪೆನ್ನೋಬಳದೇವರ ಕಟ್ಟೆಮನೆ - ಸುರಪತಿ

೨. ಅಹೋಬಲದೇವರ ಕಟ್ಟೆಮನೆ - ನರಪತಿ

೩. ಬುಗ್ಗೋಬಳದೇವರ ಕಟ್ಟೆಮನೆ - ಗಜಪತಿ ಮುಖಂಡರಾಗಿದ್ದರು.

ಈ ಸಂದರ್ಭದಲ್ಲಿ ೩ ಕಟ್ಟೆಮನೆಗಳು, ೩ ಜನ ಪೂಜಾರಿ, ೩ ಮಂದಿ ನಾಯಕರು, ೩ ಮಂದಿ ದಾಸರು, ೭ ಜನ ಹಿರಿಯರು, ೭೭ ಮಂದಿ ಮನ್ನೆಗಾರರನ್ನು ಮತ್ತು ಕಿಲಾರಿಗಳನ್ನು ದೊರೆಗಳು ನೇಮಿಸಿದ್ದರು.

ಕರ್ನಾಟಕದ ಬೇಡರ ೩ ಕಟ್ಟೆಮನೆಗಳು (ಆನೆಗೊಂದಿರಾಜರ ಅಪ್ಪಣೆಯಂತೆ ಸ್ಥಾಪನೆ):

೧. ನನ್ನಿವಾಳ - ಸಲ್ಲಗೇತಿ - ಗಟ್ಟಿಮುತ್ತಿನಾಯಕ - ದೊರೆ ಬಯ್ಯಣ್ಣ

೨. ನಾಯಕನಹಟ್ಟಿ - ಕಾಮಗೇತಿ -ಮೀಸಲುನಾಯಕ - ದೊರೆ ತಿಪ್ಪೇಸ್ವಾಮಿ

೩. ಗೋನೂರು - ಬುಲ್ಲುಡುಲೋರು - ಬೋಸೆನಾಯಕ - ಪಾಪನಾಯಕ.

ನಾಯಕರು ಪಾಳೆಯಗಾರರಾಗಿ ಮುಂದುವರೆದಾಗ ನಿಡಗಲ್ಲು, ರತ್ನಗಿರಿ ಮತ್ತು ಹರತಿಕೋಟೆಗಳನ್ನು ಕಟ್ಟೆಮನೆಗಳಾಗಿ ಹೊಂದಿದ್ದರೆಂದು ತಿಳಿದುಬರುತ್ತದೆ. ಕೆಲವು

ಸಂಸ್ಥಾನಗಳಲ್ಲಿ ಇಂದಿಗೂ ಕಟ್ಟೆಮನೆಯ ಪರಿಸ್ಥಿತಿ ಬಗ್ಗೆ ರಾಜಪರಂಪರೆಯವರು ವಿಶ್ಲೇಷಿಸುತ್ತಾರೆ :

೩ ಜನ ಪೂಜಾರಿಗಳು (ಆನೆಗೊಂದಿರಾಜರ ಅಪ್ಪಣೆಯಂತೆ ನೇಮಕ):

೧. ಕಾಮಗೇತಿ

೨. ನಲ್ಲಗೇತಿ

೩. ಬುಲ್ಲುಡುಲು (ಎರಿಪೋತಿ)

೩ ಜನ ದಾಸಯ್ಯನವರು (ಆನೆಗೊಂದಿರಾಜರ ಅಪ್ಪಣೆಯಂತೆ ನೇಮಕ):

೧. ಮುಂಡಾಸು ದಾಸರಿ

೨. ಗೊಡಗು ದಾಸರಿ

೩. ಬೋಡಿ ದಾಸರಿ

೭ ಜನ (ಪೆದ್ದಲು) ಹಿರಿಯರು (ಆನೆಗೊಂದಿರಾಜರ ಅಪ್ಪಣೆಯಂತೆ ನೇಮಕ): ಬೇಡರ ವ್ಯಾಜ್ಯಗಳು ಈ ೭ ಜನ ಹಿರಿಯರ ಸಮ್ಮುಖದಲ್ಲಿ ತೀರ್ಮಾನವಾಗುತ್ತಿದ್ದವು.

೧. ಕಾಟಬ್ಬನವನು

೨. ಯರಗೊಡ್ಲವನು

೩. ನಳಬಾಳಸಿವಾಡು

೪. ಗಡಗಿಲೋಡು

೫. ವರಗನೋಡು

೬. ಚಿನ್ನಮುತ್ತಿವಾಡು

೭. ಜೂಗನೋಡು.

ಈ ಏಳುಜನ ಹಿರಿಯರಿಗೆ ತೆಲುಗಿನಲ್ಲಿ 'ಪೆದ್ದಲು' ಎಂದು ಕರೆಯುತ್ತಾರೆ. ಬೋಡಿಕಾಟನಾಡು, ಗಾದಿಪ್ಪಲಾರು, ಪಡ್ಲೋಡು, ಪರಮೇಶ್ವರನಾರು, ಕುರುಬಲೋರು, ಗೂನೋಡು ಮತ್ತು ಕಾಮನಾಡು ಎಂಬ ಏಳುಜನ ಹಿರಿಯರು ನಾಯಕ ಸಮುದಾಯದ ಸಾಂಸ್ಕೃತಿಕ ನಾಯಕರಾಗಿಯೂ ಪ್ರಮುಖ ಪಾತ್ರ ವಹಿಸಿರುತ್ತಾರೆ.

೯ ಜನ ಮುತ್ತಿಗಾರರು (ಶ್ರೀಶೈಲ ಮಲ್ಲಿಕಾರ್ಜುನ ವರಪ್ರಸಾದದಿಂದ ದೇವರೆತ್ತುಗಳನ್ನು ಮೇಯಿಸಿಕೊಂಡು ಬಂದವರು):

೧. ಕಗ್ಗಲಾರು

೨. ಮಲ್ಲೂರರು

೩. ಗಜಗನಾರು

೪. ಬೆದನೂರು (ಮಂದಲ)

೫. ನಲ್ಲಟಬ್ಬನೂರು (ಮಲ್ಲನಾಯಕ)

೬. ಗವಿನಹಟ್ಟಿನೂರು

೭. ಜೋಡಿ ಬೋರವನವರು

೮. ಮಾಸಿನವರು

೯. ಪರಮೇಶಿನವರು.

೧೨ ಪೆಟ್ಟಿಗೆದೇವರುಗಳು :

೧. ಪಚ್ಚಪದಿ ದೊಡ್ಡತಿರುಮಲದೇವರು - ಬೇಡರೆಡ್ಡಿಹಳ್ಳಿ - ಚಳ್ಳಕೆರೆ

೨. ಕಾಪುಕಂಪಳ ರಂಗಸ್ವಾಮಿ - ಕಂಪಳದೇವರಹಟ್ಟಿ - ಮೊಳಕಾಲ್ಮೂರು

೩. ದಡ್ಲುಮಾರಮ್ಮ - ದೇವರಹಳ್ಳಿ - ಚಳ್ಳಕೆರೆ

೪. ಚಿಂತಗುಟ್ಲ ಬೋರೆದೇವರು - ಕುದಾಪುರ-ಚಳ್ಳಕೆರೆ

೫. ಮಂದಬೊಮ್ಮದೇವರು - ದೊಣಮಂಡಲಹಟ್ಟಿ - ಚಳ್ಳಕೆರೆ

೬. ಪೆದ್ದಕ್ಕ ರಾಯಮ್ಮ (ಮಾರಮ್ಮ) - ಗೌರಸಮುದ್ರ - ಚಳ್ಳಕೆರೆ

೭. ಮಂಗಪೋಟಿ ಓಬಳದೇವರು - ತಾಳಿಕೆರೆ-ರಾಯದುರ್ಗ (ಅನಂತಪುರ ಜಿಲ್ಲೆ)

೮. ನಲ್ಲಚೆ(ಜೆ)ರವು ಓಬಳದೇವರು - ರುದ್ರಮ್ಮನಹಳ್ಳಿ - ಚಳ್ಳಕೆರೆ

೯. ಮಲ್ಲಿನಾಯಕ ಬೊಮ್ಮದೇವರು - ವರವು - ಚಳ್ಳಕೆರೆ

೧೦. ಬಂಗಾರಿದೇವರು- (ಬಂಗಾರದೇವರಹಟ್ಟಿ) ನನ್ನಿವಾಳ-ಚಳ್ಳಕೆರೆ

೧೧. ಬೋಸೇದೇವರು - ಬೋಸೆದೇವರಹಟ್ಟಿ - ಚಳ್ಳಕೆರೆ

೧೨. ಮಾಕನಡಕು ಓಬಳದೇವರು - ಮಾಕನಡಕು - ಕೂಡ್ಲಿಗಿ ತಾಲ್ಲೂಕು.

(ಚಿತ್ರದೇವರು-ಉಡೇಗೊಳ-ರಾಯದುರ್ಗ ತಾಲ್ಲೂಕು, ಕಾಟಮಲಿಂಗೇಶ್ವರ-ಕಾಟಪ್ಪನಹಟ್ಟಿ, ಪದಿನಾನದೇವರು- ರಾಯಪುರ, ಗೆದ್ದಲಗಟ್ಟೆ ಓಬಳದೇವರು - ದಾಸರಮುತ್ತೇನಹಳ್ಳಿ- ಇವುಗಳನ್ನು ಪೆಟ್ಟಿಗೆದೇವರುಗಳ ಸಾಲಿಗೆ ಸೇರಿಸುತ್ತಾರೆ).

ಈ ಮೇಲಿನಂತೆ ೩ ಕಟ್ಟೆಮನೆ, ೩ ಜನ ಪೂಜಾರಿ, ೩ ಜನ ದಾಸರು, ೩ ಜನ ನಾಯಕರು, ೭ ಜನ ಹಿರಿಯರು, ೯ ಜನ ಮುತ್ತಿಗಾರರು, ೧೨ ಪೆಟ್ಟಿಗೆದೇವರುಗಳು ಬೇಡರ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿವೆ. ಇವುಗಳಿಂದ ಜನಾಂಗದ ಪರಿವರ್ತನೆ, ಅಭಿವೃದ್ಧಿ ಆದದ್ದು ನಿಜ. ಪ್ರಾದೇಶಿಕ, ಸಾಮಾಜಿಕ, ಸಾಂಸ್ಕೃತಿಕ ಕಾರಣಗಳಿಂದ ಹಾಗೂ ನಂಬಿಕೆ, ಆಚರಣೆ, ಆದರ್ಶ ಮೌಲ್ಯಗಳಿಂದ ಮೇಲಿನಂತೆ ಎಲ್ಲ ಹಂತಗಳ ನ್ಯಾಯಾಂಗ ವ್ಯವಸ್ಥೆಯನ್ನು ರೂಪಿಸಿಕೊಂಡಿರುತ್ತಾರೆ. ಈ ಲಕ್ಷಣಗಳು ಇಂದಿನ ಪೊಲೀಸ್‌ಠಾಣೆ, ಕೋರ್ಟು, ಕಚೇರಿಗಳಿದ್ದಂತೆ ಎಂದು ಮತ್ತೊಮ್ಮೆ ಹೇಳಬೇಕಾಗಿಲ್ಲ. ನಾಯಕರು ಹೆಚ್ಚಾಗಿ ವಾಸಿಸುವ ಪ್ರದೇಶಗಳಲ್ಲಿ ಕಟ್ಟೆಮನೆ ಸ್ಥಾಪಿಸಿದ್ದು ನಿಜ. ಅವು ಚಾರಿತ್ರಿಕ-ಸಾಂಸ್ಕೃತಿಕವಾಗಿ ಮಹತ್ವ ಪಡೆದಿದ್ದು ಇತ್ತೀಚೆಗೆ. ಪ್ರತಿಯೊಂದು ವಿಚಾರಕ್ಕೂ ಕಟ್ಟೆಮನೆಯ ಯಜಮಾನ ನಿರ್ಣಾಯಕ ವ್ಯಕ್ತಿಯಾಗಿರುತ್ತಾನೆ. ೭ ಜನ ಹಿರಿಯರು ಕುಲಸಾವಿರ ಅಥವಾ ಕೋಮುದಾರರು ಕಟ್ಟೆಮನೆಗಳಿಗೆ ಸೂಕ್ತ ಸಲಹೆ-ನಿರ್ದೇಶನ ನೀಡುತ್ತಾರೆ.

## ನನ್ನಿವಾಳ ಕಟ್ಟೆಮನೆ

'ನನ್ನಿವಾಳ' ಚಳ್ಳಕೆರೆ ತಾಲೂಕಿನ ಒಂದು ಗ್ರಾಮ. ಚಳ್ಳಕೆರೆಯಿಂದ ಚಿತ್ರದುರ್ಗಕ್ಕೆ ರಾಮಜೋಗಿಹಳ್ಳಿ-ಹಾಯ್ಕಲ್ ಮಾರ್ಗವಾಗಿ ಹೋದರೆ ಈ ನನ್ನಿವಾಳ ಸಿಗುತ್ತದೆ. ಇಲ್ಲಿ ಗಾದರಿಪಾಲನಾಯಕ, ಬಂಗಾರುದೇವರು ಮತ್ತು ಜಗಳೂರು ಪಾಪಜ್ಜನಿಗೆ ಸಂಬಂಧಿಸಿದ ಧಾರ್ಮಿಕ ನೆಲೆಗಳಿವೆ. ಇಂಥಾ ಗ್ರಾಮದಲ್ಲಿ ಕಟ್ಟೆಮನೆ ಸ್ಥಾಪನೆಯಾದದ್ದು ಅಷ್ಟೇ ಮಹತ್ವದ ಘಟನೆಯಾಗಿದೆ.

ಯರಮಂಚಿನಾಯಕ ಒಮ್ಮೆ ಗೆದ್ವಾಲ್‌ಸೀಮೆಯ ಮುಸಲ್ಮಾನ ಅರಸನನ್ನು (ಆದಿಲ್‌ಷಾಹಿ ಅಥವಾ ನಿಜಾಮ?) ಅಂತ್ಯಗೊಳಿಸಿ ಮಳೆಲುರಾಜನನ್ನು ಬಿಡುಗಡೆ ಮಾಡಿಕೊಂಡು ಬರುವಾಗ ಆ ರಾಜನ ಮಗಳು ನನ್ನಮ್ಮನನ್ನು ಕರೆತರುತ್ತಾನೆ. ಬೇಡ ಕಂಪಳದ ನನ್ನುಲ ಚಿನ್ನಪಾಲನಾಯಕನಿಗೂ-ನನ್ನಮ್ಮನಿಗೂ ಪ್ರೀತಿ ಬೆಳೆದು ಯರಮಂಚಿನಾಯಕನ ನೇತೃತ್ವದಲ್ಲಿ ಅವರಿಬ್ಬರೂ ಒಂದಾಗುತ್ತಾರೆ. ಒಮ್ಮೆ ನನ್ನಮ್ಮ ಚಿನ್ನಪಾಲನಾಯಕನಿಗೆ ನಿನ್ನ ಕುಲದಲ್ಲಿ ಸೇರಿ ನಿನ್ನವಳಾಗಿ ಬಾಳಿ ಬದುಕಿದೆ. ಆದರೆ ನಿನ್ನಿಂದ ನನ್ನ ಕುಲಕ್ಕೆ ಏನಾದರೂ ಕೊಡುಗೆ ಸಲ್ಲಿಸೆಂದು ಬೇಡುತ್ತಾಳೆ. ನಾಯಕ ನನ್ನಮ್ಮನಿಗೆ ಏನು ಬೇಕೋ ಕೇಳೆಂದು ಹೇಳುತ್ತಾನೆ. ಅದರಂತೆ ಅವಳು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಗಂಡುಮಕ್ಕಳಿಗೆ ಮುಂಜಿ ಮಾಡಿಸಬೇಕು. ನೀನು ದರ್ಬಾರಿನಲ್ಲಿರುವಾಗ ನಮ್ಮ ತಂದೆಯವರಂತೆ ಒಂದು ಕೈಯಿಂದ ಸಲಾಂ ತೆಗೆದುಕೊಳ್ಳಬೇಕು. ನನ್ನ ವಂಶದ ಹೆಸರು ನಾನಿರುವ ಕಡೆ ಉಳಿಯಬೇಕು ಎಂದಳು. ನಾಯಕನು ಅವಳ ವ್ಯಾಮೋಹಕ್ಕೆ ಒಳಗಾಗಿ ಕೇಳಿದ ಬೇಡಿಕೆಗಳೆಲ್ಲವನ್ನೂ ಈಡೇರಿಸಲು ಒಪ್ಪಿಕೊಂಡ. ಆ ಗ್ರಾಮಕ್ಕೆ ನನ್ನಿವಾಳವೆಂದು ಹೆಸರಿಟ್ಟು, ಮಕ್ಕಳಿಗೆ ಕಟ್ಟೆಮನೆ ಅಧಿಕಾರ, ಮುಂಜಿಮಾಡುವ ಪದ್ಧತಿ ಇತ್ಯಾದಿ ಬೇಡಿಕೆಗಳ ಜೊತೆಗೆ ನನ್ನಮ್ಮನನ್ನೂ ನನ್ನಿವಾಳದ ದೊರೆಸಾನಿಯೆಂದು ಕರೆದನು. ಈ ನನ್ನಿವಾಳದ ಕಟ್ಟೆಮನೆ ವ್ಯಾಪ್ತಿಯಲ್ಲಿ ಅನೇಕ ಗ್ರಾಮಗಳು ಬರುತ್ತವೆ : ಬಂಗಾರು ದೇವರಹಟ್ಟಿ, ತೊಡಲಾರಹಟ್ಟಿ, ಪೆತ್ತಮ್ಮಾರಹಟ್ಟಿ, ಬೋರಪ್ಪನಹಟ್ಟಿ, ಕರೆಕಾಲ್ಲಟ್ಟಿ, ದೊರೆಗಳಟ್ಟಿ, ಚಿತ್ರೈಯ್ಯನಹಟ್ಟಿ ಮೊದಲಾದವು. ಅನೇಕ ಮಂದಿ ನಾಯಕರು ಆಗಿ ಹೋಗಿದ್ದು, ಈಗ ಈ ಕಟ್ಟೆಮನೆಗೆ ನಾಯಕನಾಗಿ ದೊರೆ ಬಯ್ಯಣ್ಣನನ್ನು ಮತ್ತು ಪೂಜಾರಿ ಸೂರಯ್ಯನನ್ನು ಮುಖಂಡರು ನೇಮಿಸಿದ್ದಾರೆ.(ಮಧ್ಯಕಾಲೀನ ಕರ್ನಾಟಕದ ಅಂತರ್ಜಾತೀಯ ವಿವಾಹ, ವರ್ಣಸಂಕರ, ಸಂಕೀರ್ಣ ಜಾತಿಗಳಾಗಿದ್ದು ಕಂಡುಬರುವುದು ಬೇಡರಲ್ಲಿ ವಿಶೇಷವಾಗಿದೆ).

## ಗೋನೂರು ಕಟ್ಟೆಮನೆ

ಚಿತ್ರದುರ್ಗ ನಗರಕ್ಕೆ ಸಮೀಪದಲ್ಲಿರುವ ಗ್ರಾಮ ಗೋನೂರು. ದುರ್ಗದಿಂದ ಹಾಯ್ಕಲ್‌ಗೆ ಬರುವ ಮಾರ್ಗದಲ್ಲಿದೆ. ಚಾರಿತ್ರಿಕ ಮಹತ್ವ ಪಡೆದ ಗ್ರಾಮ. ಗೋನೂರಿಗೆ ಒಂದು ತಿರುವು ಸಿಕ್ಕಿದ್ದು ಕಟ್ಟೆಮನೆ ಆದ ಮೇಲೆಯೇ. ಈ ಕಟ್ಟೆಮನೆಯ ಯಜಮಾನ

ಸೂರಪ್ಪನಾಯಕ. ನಂತರ ಆತನ ವಂಶಸ್ಥರಿಂದ ಮುಂದುವರೆದಿದೆ. ಹೂಡೇಂ ಗ್ರಾಮದ ಬೋಸೆಮಲ್ಲನಾಯಕ ಇದರ ನಾಯಕನಾಗಿದ್ದ. ಅವನು ದಿವಂಗತನಾದ ಮೇಲೆ ಹಿರಿಯ ಮಗನಾದ ಪಾಪನಾಯಕನು ಕಟ್ಟೆಮನೆ ದೊರೆ(ನಾಯಕ)ಯಾಗಿರುವನು. ಹಿಂದೆ ಗೋನೂರಿನಲ್ಲಿ ಪಿಂಜಾರ ಬುಡ್ಡಯ್ಯನ ಮಗಳ ಸಂಬಂಧ ಬೆಳೆಸಿದ್ದರಿಂದ ಆ ಹೆಸರನ್ನೇ ಕಟ್ಟೆಮನೆಗೆ ಇಟ್ಟಿದ್ದ. ಬೇಡರ ಸಂಸ್ಕೃತಿಗೆ ವಿರುದ್ಧವಾಗಿ ನಡೆದುಕೊಂಡಿದ್ದರಿಂದ (ಏಕಲಕಟ್ಟೆ) ೧೨ ಪೆಟ್ಟಿಗೆಗಳ ಪಟ್ಟಿಯಿಂದ ಇದನ್ನು ತೆಗೆದುಹಾಕಿದರಂತೆ. ಗೋನೂರು ದೊರೆ ಸೂರಪ್ಪನಾಯಕನಿಗೆ ಅವಮಾನ ಸಹಿಸಿಕೊಳ್ಳಲಾಗಲಿಲ್ಲ. ಇತ್ತ ಹಟ್ಟಿಮಲ್ಲಪ್ಪನಾಯಕ ಮತ್ತು ನನ್ನಿವಾಳದ ಚಿನ್ನಪಾಲನಾಯಕರು ಚರ್ಚಿಸಿ ಯರಮಂಚಿನಾಯಕನನ್ನು ಅವಮಾನಗೊಳಿಸಿ ಮ್ಯಾಸಮಂಡಲದಿಂದ ದೂರಮಾಡುವ ಸಂಚು ರೂಪಿಸಿದರು. ಇದರ ವ್ಯಾಪ್ತಿಗೆ ೩೩ ಹಳ್ಳಿ, ೭೭ ಹಟ್ಟಿ ದೊರೆಗಳು ಸೇರಿದ್ದು ನಿಜ.

ಸಾಸಲಹಟ್ಟಿ, ಮುತ್ತೈನಹಟ್ಟಿ, ಮಲ್ಲಾಪುರ, ಹೊಸಮಾಳಿಗೆ, ಕೂನಬೇವು, ಚಿಂತಲಕಟ್ಟೆ, ಬೆಳಗಟ್ಟೆ, ಹಾಯ್ಕಲ್ ಇತರ ಸ್ಥಳಗಳು ಗೋನೂರು ಕಟ್ಟೆಮನೆ ವ್ಯಾಪ್ತಿಗೆ ಸೇರಿದ್ದವು. ಅನೇಕ ಘಟನೆ, ಸಂಘರ್ಷಗಳನ್ನು ಪಂಚಾಯಿತಿ ಮೂಲಕ ತೀರ್ಮಾನಗೊಳಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ.

**ನಾಯಕನಹಟ್ಟಿ ಕಟ್ಟೆಮನೆ**

ನಾಯಕ ಜನಾಂಗದ ೩ ಕಟ್ಟೆಮನೆಗಳಲ್ಲಿ ನಾಯಕನಹಟ್ಟಿಯೂ ಒಂದು. ಇದು ಚಳ್ಳಕೆರೆ ತಾಲೂಕಿನ ಐತಿಹಾಸಿಕ ಸ್ಥಳ ಹಾಗೂ ಹೋಬಳಿ ಕೇಂದ್ರ. ನಾಯಕನಹಟ್ಟಿಯನ್ನು ಆಳಿದ ಪಾಳೆಯಗಾರರ ವಂಶಸ್ಥರೇ ಈ ಕಟ್ಟೆಮನೆಯ ಯಜಮಾನ ಅಥವಾ ನಾಯಕ ರಾಗಿರುವುದು ವಿಶೇಷ. ಅನೇಕ ಬಗೆಯ ವ್ಯಾಜ್ಯಗಳನ್ನು ಈ ಕಟ್ಟೆಮನೆಯಿಂದ ತೀರ್ಮಾನಿಸಲಾಗಿದೆ. ಇದಕ್ಕೆ ಸಂಬಂಧಿಸಿದ ವಂಶಸ್ಥರು ನಾಯಕನಹಟ್ಟಿ, ಪರಶುರಾಂಪುರ, ಚಿತ್ರದುರ್ಗ ತಾಲೂಕಿನ ಮಲ್ಲಾಪುರ ಗ್ರಾಮಗಳಲ್ಲಿದ್ದಾರೆ. ಇದರ ವ್ಯಾಪ್ತಿಗೆ ಬೋಸೇದೇವರ ಹಟ್ಟಿ, ನಲಗೇತಲಹಟ್ಟಿ, ದೊಣಮಂಡ್ಲಹಟ್ಟಿ, ಗೌರಿಪುರ, ಮಹದೇವಪುರ, ಮನಮೈನಹಟ್ಟಿ, ಕುದಾಪುರ, ಗೆಜ್ಜೆಗಾನಹಳ್ಳಿ, ರಾಮಸಾಗರ, ಓಬಯ್ಯನಹಟ್ಟಿ, ಚನ್ನಬಸಯ್ಯನಹಟ್ಟಿ, ಜಾಗನೋರಹಟ್ಟಿ ಇತರ ಸ್ಥಳಗಳು ಸೇರಿದ್ದವು.

ಕೇವಲ ಕಟ್ಟೆಮನೆಗಳೇ ಅಲ್ಲದೇ ಇಡೀ ಸಮಾಜಕ್ಕೆ ಧಾರ್ಮಿಕ ನೆಲೆ ಮತ್ತು ಗುರುಸ್ಥಾನವಾದ ಕಂಪಳದೇವರಹಟ್ಟಿಯು (ಚಿಕ್ಕಂತಿ) ನ್ಯಾಯಪಂಚಾಯಿತಿಯ ಸರ್ವೋನ್ನತ ಸ್ಥಾನ ಪಡೆದಿತ್ತು. ಮ್ಯಾಸಮಂಡಳಿಯ ಮುಖಂಡರು ಇಲ್ಲಿನ ಕಾರ್ಯವೈಖರಿಗಳನ್ನು ರೂಪಿಸುತ್ತಾರೆ. ಮೊಗಲಹಳ್ಳಿ, ಕೊಂಡ್ಲಹಳ್ಳಿ, ಕೋನಸಾಗರ, ಕೊಮ್ಮನಪಟ್ಟೆ, ಹಾನಗಲ್ಲು, ರಾಯಾಪುರ, ಯರ್ರವ್ವನಹಳ್ಳಿ, ಪದಿನಾರುದೇವರಹಟ್ಟಿ, ಮಾರನಪಳ್ಳಿ, ಕರಿನಾರಹಟ್ಟಿ, ಕಪ್ಪಡಬಂಡಹಟ್ಟಿ, ಕುಂಟೋಬಯ್ಯನಹಟ್ಟಿ, ಹಾನಗಲ್ಲು, ಸೂರವ್ವನಹಳ್ಳಿ, ಊಡೆಗೊಳ, ಪೂಜಾರಹಳ್ಳಿ, ಹೂಡೇಂ ಮೊದಲಾದ ಸ್ಥಳಗಳು ಇದರ ವ್ಯಾಪ್ತಿಯಲ್ಲಿ ಬರುತ್ತವೆ.

ಮೇಲೆ ಹೇಳಿದ ಕಟ್ಟೆಮನೆಗಳಲ್ಲದೆ, ರತ್ನಗಿರಿ, ನಿಡುಗಲ್ಲು ಮತ್ತು ಹರ್ತಿಕೋಟೆಗಳು ಒಂದು ಕಾಲಕ್ಕೆ ನಾಯಕರ ಕಟ್ಟೆಮನೆಗಳೆಂದು ಖ್ಯಾತಿ ಪಡೆದಿದ್ದವು. ಹೀಗೆಯೇ ಉತ್ತರ ಕರ್ನಾಟಕದಲ್ಲಿ ಸುರಪುರ, ಅರಕೇರಾ, ಗುರುಗುಂಟಾ, ಹುಲಿಹೈದರ, ಕನಕಗಿರಿ ಮೊದಲಾದ ಸಂಸ್ಥಾನಗಳ ದೊರೆಗಳು ನ್ಯಾಯಪಂಚಾಯಿತಿಯನ್ನು ಮುಂದುವರೆಸಿಕೊಂಡು ಬಂದಿರುವುದು ಗಮನಾರ್ಹ.

**ಕಟ್ಟೆಮನೆ ನ್ಯಾಯಪಂಚಾಯಿತಿಯ ಪ್ರಮುಖ ಸಂಗತಿಗಳು**

ಕಟ್ಟೆಮನೆಯ ಕಾರ್ಯಸ್ವರೂಪವು ಜನಾಂಗದ ಆಚಾರ-ವಿಚಾರ, ರೂಢಿ ಮತ್ತು ಸಂಪ್ರದಾಯಗಳನ್ನು ಕೇಂದ್ರೀಕರಿಸಿಕೊಂಡಿರುತ್ತದೆ. ಹಟ್ಟಿ ಅಥವಾ ಬೇಡಕಂಪಳದಲ್ಲಿ ಉದ್ಭವಿಸುವ ಜಗಳ, ಹೊಡೆದಾಟ, ಸಂಘರ್ಷ, ವ್ಯಾಜ್ಯ, ನ್ಯಾಯಗಳನ್ನು ತೀರ್ಮಾನಿಸಿ ಕೊಳ್ಳಲು ಕಟ್ಟೆಮನೆಯ ಒಗ್ಗಟ್ಟು ಅಗತ್ಯ. ಕಾಡಿನಲ್ಲಿ ಜೀವನ ನಡೆಸಿದ ಬೇಡರಿಗೆ ಬೆಂಕಿ, ನೀರು, ಗಾಳಿ, ಬೇಟೆ, ಹೆಣ್ಣು- ಇಂಥ ಸಂಗತಿಗಳಿಗೂ ಭಯ-ಭೀತಿ, ವೈಮನಸ್ಸು ಬಂದಾಗ ಯಜಮಾನರ ಸಲಹೆ ಅಗತ್ಯವಿತ್ತು. ಪಂಚಾಯಿತಿಯಲ್ಲಿ ಕಟ್ಟೆಮನೆ ಹಿರಿಯರು ದೈವದ ತೀರ್ಮಾನದಂತೆ ಎಲ್ಲ ಸಮಸ್ಯೆಗಳು ಸೌಹಾರ್ದಯುತವಾಗಿ ಬಗೆಹರಿಯುತ್ತಿದ್ದವು. ಹೆಂಡ ಅಥವಾ ಸಾರಾಯಿ, ಕೋಳಿ-ಮೊಟ್ಟೆ-ಮಾಂಸ ಸೇವಿಸಿದರೆ; ಈಚಲುಹಣ್ಣು-ಚಾಪೆ ಬಳಸಿದರೆ ಅಂಥವರಿಗೆ ಕಟ್ಟೆಮನೆಯವರು ದಂಡ ಹಾಕುತ್ತಿದ್ದರು. ಬೇಡರಲ್ಲಿ ಕುಲಕೆಡಿಸುವ ಸುಲಭಮಾರ್ಗವೆಂದರೆ ಮೆಟ್ಟಿನಿಂದ ಹೊಡೆಯುವುದು. ಪಾದರಕ್ಷೆಯಿಂದ ಹೊಡೆದರೆ ಹೊಡೆಸಿಕೊಂಡವನು - ಹೊಡೆದವನು ಇಬ್ಬರೂ ಕುಲದಿಂದ ಹೊರಗೆ ಇದ್ದು, ದಂಡ ಕೊಡುತ್ತಾರೆ. ಹೀಗೆ ಮೆಟ್ಟಿನಿಂದ ಹೊಡೆಸಿಕೊಂಡು ಕುಲಕೆಟ್ಟವನು ಕುಲಕ್ಕೆ ಬರಬೇಕಾದರೆ ತನ್ನ ಹಟ್ಟಿ ಯಜಮಾನರಿಗೆ ಬೇಟೆ-ಭತ್ಯೆಗಳನ್ನು ಕೊಡಬೇಕು. ಅವರು ಊರಿನ ಹೊರಗೆ ತೆಗೆದುಕೊಂಡು ಹೋಗಿ ಅಡುಗೆಮಾಡಿಕೊಂಡು ದೇವರೆತ್ತುಗಳ ದೇವರಮನೆ-ಪೂಜಾರಿ-ಕಿಲಾರಿಯಿಂದ ತೀರ್ಥಹಾಕಿಸಿಕೊಂಡು ಅವರನ್ನು ಕುಲಕ್ಕೆ ಸೇರಿಸಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ನಾಲಿಗೆ ಸುಡಿಸಿ ಎಲ್ಲರೂ ಊಟ ಮಾಡುತ್ತಾರೆ. ಮೆಟ್ಟಿನ ಏಟು ತಿಂದವರೆಲ್ಲರ ಫಜೀತಿಯು ಇದೇ ಬಗೆಯದು. ಹಾಗಾಗಿ ಯಾರೂ ಇಂಥ ಕಠಿಣ ಕಟ್ಟುಪಾಡುಗಳನ್ನು ಎದುರಿಸಲು ಸಿದ್ಧರಿಲ್ಲದ ಕಾರಣ ಮೆಟ್ಟಿಗೆ ಗೌರವವಿದೆ. ಜನರಿಗೆ ಅದರ ಬಗ್ಗೆ ಹೆದರಿಕೆ ಇದೆ ಎಂಬುದು ಸತ್ಯ. ಮೆಟ್ಟಿನಿಂದ ಹೊಡೆಯುವುದು ಬೇಡರಲ್ಲಿ ಘೋರ ಅಪರಾಧವೇ ಸರಿ. ಇವರಲ್ಲಿ ಹೆಣ್ಣು ಉನ್ನತ ಜಾತಿಯವನನ್ನು ಮದುವೆ ಆದರೆ ದಂಡವಿಲ್ಲ. ಆದರೆ ಬೇಡರಿಗಿಂತ ಕೆಳದರ್ಜೆಯವರೊಂದಿಗೆ ಕೂಡಿದರೆ, ಜೊತೆಯಲ್ಲಿ ಊಟ ಮಾಡಿದರೆ ಬುಡಕಟ್ಟಿನಿಂದಲೇ ಬಹಿಷ್ಕರಿಸುತ್ತಿದ್ದರು. ಹಿಂದೆ ಪ್ರತಿಯೊಂದು ಸಂಗತಿಗೂ ಕಟ್ಟೆಮನೆಗಳಿಗೆ ಹೋಗುವ ಪರಿಪಾಟವಿತ್ತು. ಇವರಲ್ಲಿ ವಂಶಪರಂಪರೆಯ ಆಡಳಿತ, ದಾಯಾದಿಗಳ ಕಲಹಗಳಿಂದ ಕಟ್ಟೆಮನೆಗಳು ತಮ್ಮ ಮೂಲ ಆಶಯಗಳಿಗೆ ಧಕ್ಕೆಯನ್ನು ತಂದುಕೊಂಡಿವೆ. ಬೇಡರು ಇಂದು ಪೊಲೀಸ್‌ಠಾಣೆ ಮತ್ತು ಕೋರ್ಟುಗಳಿಗೆ

ಹೋಗುವುದರಿಂದ ಆಧುನಿಕತೆ ಎಲ್ಲ ರಂಗಗಳಲ್ಲೂ ಪ್ರವೇಶಿಸಿ ಪರಿವರ್ತನೆಗೆ ನಾಂದಿ ಹಾಡಿದೆ. ಆಚಾರ-ವಿಚಾರವಿಲ್ಲದ ಕಟ್ಟೆಮನೆ ಎಂದು ಹೆಸರಾದ ಕಾಮಗೇತನಹಳ್ಳಿ ಸೂರಲಿಂಗೇಶ್ವರ ವಾರಸುದಾರರು ಮ್ಯಾಸಬೇಡರಿಗೆ ದೀಕ್ಷೆ ನೀಡಿ ತಮ್ಮ ಕುಲಕ್ಕೆ ಹೀನಕುಲದವರನ್ನು ಸೇರಿಸಿಕೊಳ್ಳುತ್ತಾರೆಂಬುದು ಸಮಾನತೆಯ ಸಂಕೇತವಾಗಿದೆ.

ಬೇಡರಲ್ಲಿ ಅತ್ಯಾಚಾರ ನಡೆದಾಗ ಕುಲಕೆಟ್ಟವರನ್ನು, ಕೆಟ್ಟ ಕೆಲಸ ಮಾಡಿದವರನ್ನು ತಮ್ಮ ಕುಲದಿಂದ ಹೊರಹಾಕುತ್ತಿದ್ದರು. ತಮ್ಮ ದೇವರುಗಳನ್ನು ಬೇರೆ ಕಡೆಗೆ ಕೊಂಡೊಯ್ಯುತ್ತಿದ್ದು, ಗೋನೂರು ಕಟ್ಟೆಮನೆದೇವರು, ಸಾಲಿಗ್ರಾಮ, ಶಂಖು, ಆಯುಧಗಳನ್ನು ದೇವರಗಂಜಿಗಟ್ಟೆ ಗಾದರಿಪಾಲನಾಯಕ ಮಹಾಸಂಸ್ಥಾನದಿಂದ ಪುನೀತಗೊಳಿಸುತ್ತಾರೆ. ಇವರಲ್ಲಿ ಎಡ ಮತ್ತು ಬಲಮುರಿ ಶಂಖು, ನಾಗಮುರಿಬೆತ್ತ, ಎತ್ತಿನತುರಾಯಿ, ಸೂರ್ಯನಂದನ ಅಲಗು, ಧರ್ಮಗಿರಿ ಗದ್ದಿಗೆ, ಭೂಚಕ್ರದ ಗೊಡಗು, ಕೋರಿನಿಶಾನಿ, ಕಂಡುಗನಗಂಟೆ ಮೂಲೆ ಮೂಲೆಯಿಂದ ಬಂದು ಸೇರುತ್ತವೆ. ನಂತರ ಎಲ್ಲ ಮ್ಯಾಸಮಂಡಳಿಯ ಕಂಪಳಗಳು ಸೇರಿ ಕೆಲವು ನಿರ್ಣಯಗಳನ್ನು ತೆಗೆದುಕೊಳ್ಳುತ್ತಾರೆ. ಆ ನಿರ್ಣಯಕ್ಕೆ ಎಲ್ಲರೂ ಬದ್ಧರಾಗುತ್ತಾರೆಂದು ತಿಳಿಸಲಾಗಿದೆ.

### ಕಟ್ಟೆಮನೆಯಲ್ಲಿ ತೀರ್ಮಾನಕ್ಕೆ ಬಂದ ಫಿರ್ಯಾದುಗಳು

ಬೇಡರ ಕಟ್ಟೆಮನೆಗಳಿಗೆ ಬಂದ ಸಮಸ್ಯೆ ಅಥವಾ ಫಿರ್ಯಾದುಗಳು ಇಂದಿಗೆ ಕ್ಷುಲ್ಲಕ ಎಂದು ಕಂಡುಬಂದರೂ ಅವರಲ್ಲಿ ಅವು ಮಹತ್ವ ಪಡೆದಿರುತ್ತವೆ. ಊಟ ಮತ್ತು ವೈವಾಹಿಕ ಸಂಬಂಧದಲ್ಲಿ ವ್ಯತ್ಯಯವಾದರೆ ಅಪವಿತ್ರರಾಗುವರೆಂಬ ನಂಬಿಕೆಯಿದೆ. ಕಟ್ಟೆಮನೆ ನಾಯಕನಿಗೆ ಗೌರವದ ಸಂಬೋಧನೆಯಿತ್ತು. ಮದಫಳಾಂಕ ಕೋಟಿಬ್ರಹ್ಮಾಂಡ ನಾಯಕ, ನಾಯ್ಕಾಚಾರ್ಯ-ನನ್ನಿವಾಳದ ದೊರೆ ಪಾಲನಾಯ್ಕರು, ದಡ್ಡಿನಾಯ್ಕ ಜನ್ನಳ್ಳಿ ಪಾಲನಾಯಕ, ಐರೇಲ ಸಣ್ಣಪಾಪಯ್ಯ, ಯರಗಾಡ್ಲ ಪಾಪಯ್ಯ, ಕಟ್ಟೆಮನಿ ಬುಲ್ಲುಡ್ಲು ಸಣ್ಣಕಾಟಯ್ಯ, ಬುಲ್ಲುಡ್ಲು ದೊಡ್ಡಕಾಟಯ್ಯ, ಯತ್ತಿನಗೌಡ ಚಿನ್ನಯ್ಯ, ಮತ್ತೈಯ್ಯನ ಎತ್ತುಗಳ ಕಿಲಾರಿ ಪಾಪಯ್ಯ, ರಾಯ್ಪೊರ ಹಿರಿಯ ಪಾಪಯ್ಯ ಮುಂತಾದ ಕುಲಸಾವಿರದವರು ಚಳ್ಳಕೆರೆ ಕಾರೇರ ತಾತಯ್ಯನು ಬರೆದುಕೊಂಡ ಮನವಿ.... ಎಂಬಾತನು.... ಬೈಲು ಮಗಳನ್ನು ರಖಾವು ಮಾಡಿಕೊಂಡು ಅಲ್ಲಿಯೇ ಬಳಕೆ ಭೋಜನ ಮಾಡಿಕೊಂಡು ಇರುತ್ತಾನೆ. ಝುಂಡಾ ಗೋವಿಂದಯ್ಯನು ಕರ್ಕುದ್ರಯ್ಯನು ತನ್ನ ಮಗಳ ಲಗ್ನದಲ್ಲಿ ಸಮ್ಮಿಶ್ರ ಮಾಡಿಕೊಂಡು ಇರುತ್ತಾನೆ. ಹೀಗೆ ಇನ್ನೂ ವಿವರವಿದೆ. ಇಂಥಾ ಅನಾಚಾರವನ್ನು ತಡೆಗಟ್ಟಿ ತಮ್ಮ ಮತದ ಶ್ರೇಷ್ಠತೆ ಕಾಪಾಡಿಕೊಳ್ಳಲು ಮನವಿ ಮಾಡಿಕೊಂಡಿದ್ದಾರೆ.

ಬೇಡರ ಕಟ್ಟೆಮನೆಗಳಲ್ಲಿ ಪಂಚಾಯಿತಿ ಮಾಡುವ ವಿಚಾರಗಳೆಲ್ಲವೂ ಆಯಾ ಹಟ್ಟಿಗಳ ಕೊಟ್ಟು-ಕೊಳ್ಳುವ ಸಂಬಂಧವನ್ನೇ ಸಂಕೇತಿಸುತ್ತವೆ:

೧. ದಿನಾಂಕ ೮-೮-೧೯೪೮೧ರಲ್ಲಿ ನನ್ನಿವಾಳ ಕಟ್ಟೆಮನೆಗೆ ಪತ್ರ ಬರೆಯಲು ಲಗ್ನಕ್ಕೆ ಸಂಬಂಧಿಸಿದಂತೆ ಫಿರ್ಯಾದು ಸಲ್ಲಿಸಿದ್ದಾರೆ.

೨. ೧೬.೫.೧೯೪೨ : ನಾಯ಼್ಕರ ೩ ಕಟ್ಟೆಮನೆಗಳ ಅಧಿಕಾರಿ, ಯಜಮಾನರಿಗೆ ಮತ್ತು ಕುಲಸಾವಿರದ(೨೬ ಜನರ ಹೆಸರು)ವರಿಗೆ - ಹೊಳಲ್ಕೆರೆ ತಾಲ್ಲೂಕು ಕಾಮಸಮುದ್ರದ ಹಾವಳಿಹಟ್ಟಿ ಊರುನಾಯ್ಕರ ಮತಕ್ಕೆ..... ಮನೆಯಲ್ಲಿ ಬಳಕೆ ಭೋಜನೆ ಮಾಡಿದ ಬಗ್ಗೆ ಫಿರ್ಯಾದು-ನೋಟಿಸು, ಗುರು ಹಿರಿಯರಿಗೆ ತಿರಸ್ಕಾರ, ಅಪರಾಧಿಗಳು ಶುಭಕಾರ್ಯಗಳಿಗೆ ಬಹಿಷ್ಕಾರ ಇತರ ವಿವರಗಳಿವೆ.

೩. ೧೦-೯-೧೯೫೮ : ಮ್ಯಾಸಮಂಡಳ ಗುರುಮೂರ್ತಿ ಶ್ರೀ ಶ್ರೀ ದೊರೆಪಾಲನಾಯ್ಕ ಮಹಾಸ್ವಾಮಿಯವರ.... ಉರಿಮೆ ಬಡಪ್ಪ ಮಾಡುವ ನಮಸ್ಕಾರ. ಊಟಕ್ಕಾಗಿ ಆಯಾಗಾರರ ಹತ್ತಿರ ಹೋದರೆ ಏನೂ ಕೊಡಲಿಲ್ಲ.

೪. ದೇವರೆತ್ತುಗಳನ್ನು ಕಾಯುವ ಬಗ್ಗೆ ಕಟ್ಟೆಮನೆಗೆ ದೂರು (ನೀರಿಲ್ಲ-ಮೇವೂ ಇಲ್ಲ).

ಕಟ್ಟೆಮನೆಗಳಿಗೆ ಸಲ್ಲಿಸಿದ ಫಿರ್ಯಾದಿಗಳಿಗೆ ನೋಟಿಸು ಕೊಟ್ಟು ಪಂಚಾಯಿತಿ ವಿಚಾರಣೆ ನಡೆಯುವುದು ಸಹಜ. ಹೀಗೆ ಪಂಚಾಯಿತಿಯಲ್ಲಿ ಕೆಲವೊಮ್ಮೆ ಸೋಲು-ಗೆಲುವುಗಳಾಗಿರುತ್ತವೆ. ಇಲ್ಲಿ ಕಟ್ಟೆಮನೆ ಮತ್ತು ಗುರುಸ್ಥಾನಗಳು ಬೇರೆ ಬೇರೆ. ಕೆಲಸ ಕಾರ್ಯಗಳಲ್ಲಿ ಒಂದೇ ರೂಪವನ್ನು ಹೋಲುತ್ತವೆ. ಬೇಡರಹಟ್ಟಿಯ ಜಗಳ, ಗಲಾಟೆ, ಸಂಘರ್ಷ, ಸಂಭವಿಸಿದರೂ ಒಮ್ಮೆ ಕಟ್ಟೆಮನೆ-ಗುರುಮನೆಗೆ ಬರುವಂತಿಲ್ಲ. ಇವು ಹೆಚ್ಚಾಗಿ ವೈಯಕ್ತಿಕವಾದವುಗಳು. ಸಂಸ್ಕೃತಿಯ ಗಟ್ಟಿತನವನ್ನು ಬೆಳೆಸಲು ದೇವರ, ಕುಲಗೋತ್ರಗಳ ವ್ಯಾಜ್ಯಗಳನ್ನು ಹೆಚ್ಚಾಗಿ ಪರಿಗಣಿಸುತ್ತಾರೆ. ಕಟ್ಟೆಮನೆಯಲ್ಲಿ ನ್ಯಾಯ ಸಿಗದಿದ್ದರೆ ಗುರುಸ್ಥಾನದಲ್ಲಿ ಕೇಳುವುದು ವಾಡಿಕೆ. ಉದಾ : ಹೊಳಲ್ಕೆರೆ ತಾಲೂಕಿನ ಮಾಳೇನಹಳ್ಳಿಯ ಊರುನಾಯಕರಿಗೆ ಕುಂಚಿಗನಹಾಳು ಮ್ಯಾಸಬೇಡರು ಹೆಣ್ಣುಕೊಟ್ಟು ಸಂಬಂಧ ಬೆಳೆಸಿದ್ದರಿಂದ, ಕುಂಚಿಗನಹಾಳು ಮ್ಯಾಸಬೇಡರಿಗೆ ಕಟ್ಟೆಮನೆಯುವರು ಎಲ್ಲವನ್ನೂ ಪರಿಶೀಲಿಸಿ ಬಹಿಷ್ಕಾರ ಹಾಕಿದ್ದರು. ತರುವಾಯ ಅವರು (ಕುಂಚಿಗನಹಾಳು) ಗುರುಸ್ಥಾನದಲ್ಲಿ ನ್ಯಾಯ ಕೇಳಿದರು (ಇದರ ಕೇಂದ್ರಸ್ಥಳ ಕಂಪಳದೇವರಹಟ್ಟಿ. ಬೇಡರ ತಪ್ಪುಗಳನ್ನು ತಿದ್ದಲು ಕರೆಯಿಸಿ ಬುದ್ಧಿವಾದ ಹೇಳಲು ಕಟ್ಟೆಮನೆ, ಗುರುಮನೆಗಳು ಆಧಾರಸ್ತಂಭಗಳಾಗಿರುತ್ತವೆ). ಇವರಿಬ್ಬರೂ ಮ್ಯಾಸಬೇಡರೆಂದು ಆಧಾರ ಕಂಡುಬಂದ ಹಿನ್ನೆಲೆಯಲ್ಲಿ ಗುರುಸ್ಥಾನದ ಪಂಚಾಯಿತಿಯವರು ಇಬ್ಬರಿಗೂ ಗೆಲುವಾಗಲು ನೆರವಾದರು.

ಬೇಡರ ಹೆಣ್ಣುಮಕ್ಕಳ ಬಗ್ಗೆ ನ್ಯಾಯ, ನೀತಿ, ಕಾನೂನುಗಳಿವೆ. ಇವಳು ಉನ್ನತ ವ್ಯಕ್ತಿಯೊಡನೆ ಅನೈತಿಕ ಸಂಬಂಧ ಬೆಳೆಸಿದ್ದರೂ ಜೊತೆಗೆ ಒಂದೇ ತಟ್ಟೆಯಲ್ಲಿ ಊಟ ಮಾಡುವಂತಿಲ್ಲ. ಆದರೆ ಆ ವ್ಯಕ್ತಿಯ ಜೊತೆ ಇದ್ದರೂ ಅಂಥ ಕಠಿಣಕ್ರಮಗಳೇನೂ ಇಲ್ಲ. ಇವುಗಳಿಗೆ (ಊಟ) ವಿರುದ್ಧವಾಗಿ ನಡೆದುಕೊಂಡರೆ ಅವಳನ್ನು ಬಹಿಷ್ಕರಿಸುತ್ತಿದ್ದರು. ಸುಳ್ಳುಪತ್ರ ಬರೆದ ಬೆಳಗಟ್ಟದ ಮಹಿಳೆ ಬಗ್ಗೆ ವಿಚಾರಣೆ ನಡೆಸಿದ ಕಟ್ಟೆಮನೆಯುವರು, ಅಪರಾಧಿಯಲ್ಲದ ಹೆಣ್ಣಿನ ಬಗ್ಗೆ ಕರುಣೆಬಂದು ಹೊಸ ಸೀರೆ-ಕುಪ್ಪಸ ಕೊಡಿಸಿ, ಯರಗಾಟ ನಾಯಕದೇವರಿಗೆ ಎಣ್ಣೆಹಾಕಿಸಲು ತಪ್ಪುಕಾಣಿಕೆ ೫೦ ರೂಪಾಯಿ ಕೊಟ್ಟ ಪ್ರಸಂಗವಿದೆ.

ಇತ್ತೀಚಿನವರೆಗೆ ಯಾವುದೇ ಗಂಡು ಮದುವೆಯಾಗಬೇಕಾದರೆ ಮುತ್ತಿಗಾರಹಳ್ಳಿ ಗುರುಸ್ಥಾನಕ್ಕೆ ಬಂದು ತೀರ್ಥ (ಹರಿನೀರು) ಹಾಕಿಸಿಕೊಳ್ಳಬೇಕಿತ್ತು. ಹೋಗಲಿಲ್ಲ ಎಂದರೆ ಬಹಿಷ್ಕರಿಸಲಾಗುತ್ತಿತ್ತು. ಇಂದು ಆಯಾ ಮನೆದೇವರಿಗೆ ಮಾತ್ರ ಹೋಗಿ ತೀರ್ಥ ಹಾಕಿಸಿಕೊಳ್ಳುತ್ತಾರೆ.

ಶ್ರೀ ಚಿಂತಗುಟ್ಲು ಬೋರೇದೇವರು ಮತ್ತು ಕಂಪಳದೇವರಿಗೆ ಸಂಬಂಧಿಸಿದಂತೆ ೨೪-೩-೧೯೩೨ರಂದು ಕಟ್ಟೆಮನೆಗಳಿಗೆ ಬರೆದ ಪತ್ರ, ಇದೇರೀತಿ ಶ್ರೀ ಮುತ್ತಯ್ಯಗಳ ದೇವರು ಮತ್ತು ಕಟ್ಟೆಮನೆಗೆ ಸೇರಿದ ಪತ್ರ, ಶ್ರೀಮಹಾನಾಯಕಾಚಾರ್ಯ, ನಾಯ್ಕಶಿರೋಮಣಿ, ಕಸ್ತೂರಿ ಕೋಲಾಹಲ ಸದಿಬಾಧ್ಯರಾದ ನಾಯಕನಹಟ್ಟಿ ಸಂಸ್ಥಾನಕ್ಕೆ ಕಾರಣಕರ್ತರಾದ ಶ್ರೀಮಾನ್ ಬಸಪ್ಪನಾಯ್ಕರವರ ಸನ್ನಿಧಾನದಿಂದ ಬರೆದ ಪತ್ರ, ರಾಮಜೋಗಿಹಳ್ಳಿ ತಳವಾರ ಹನುಮಯ್ಯನ ಮಗ ಮಲ್ಲಯ್ಯನಿಗೆ ನೋಟೀಸು, ಕಾಸೋರಹಟ್ಟಿ ಕಂಪಳಯ್ಯ, ರಾಮಜೋಗಿಹಳ್ಳಿ ದೊಡ್ಡ ಓಬಯ್ಯ ೧೩-೧-೧೯೩೦ರಂದು ಕಟ್ಟೆಮನೆ ಕುಲಸಾವಿರದವರ ಸಭೆ (ವ್ಯಾಜ್ಯ) ನಡೆಸಿದ್ದರು ಇತ್ಯಾದಿ.

೧೯೪೨ ಜನವರಿ ೨೩ರಂದು ಚಳ್ಳಕೆರೆ ತಾಲೂಕಿನ ಚಂದ್ರಗಿರಿ ಬೂದಾಳು ಪಟ್ಟಣಕ್ಕೆ ಸೇರಿದ ಗೌಡಗೆರೆ ಗ್ರಾಮದ ಹಿರಿಯರು- ಕುಲಸಾವಿರದವರಿಂದ ಕಟ್ಟೆಮನೆಗೆ ಬರೆದ ಪತ್ರ: ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲ್ಲೂಕು ಮ್ಯಾಸಮಂಡಳಿಗೆ ಸೇರಿದ ಗಾರ್‍ರಹಟ್ಟಿಯ ಕೊಡಗಳ್ಳಿ ರಂಗಪ್ಪನ ಮಗ ರಂಗಣ್ಣನಿಗೆ ಗೌಡಗೆರೆಯ ಶ್ರೀ ತಿರುಮಲದೇವರ ಗುಡಿಕಟ್ಟಿಗೆ ಸೇರಿದವನೆಂದು (ಅನುಮಾನ ಬಂದ ಕಾರಣ) ತಿಳಿಸುವ ಜ್ಞಾಪನಾಪತ್ರ.

ಚಿಂತಗುಟ್ಲು ಬೋರೆದೇವರಹಟ್ಟಿ ಗ್ರಾಮದವರು ಕಟ್ಟೆಮನೆ ಅಧಿಕಾರಿಗಳಿಗೆ ನನ್ನಿವಾಳದ ಮಜುರೆ ಮುಚ್ಚುಗಂಟೆ ಗ್ರಾಮದಲ್ಲಿನ ತಮ್ಮನ ಮುತ್ತೆಪೂಜಾರಿ ಪಾಪಯ್ಯ ಮಗ ಮಲ್ಲಯ್ಯನಿಗೆ ಕೊಟ್ಟ ಬಹಿಷ್ಕಾರಪತ್ರ. ಕ್ರಯದಲ್ಲಿ ಮ್ಯಾಸ(ನಾಯಕರ)ಮಂಡಳಿಯ ಮತಕ್ಕೆ ವಿರೋಧವಾಗಿ ನಡೆದುಕೊಂಡಿದ್ದರಿಂದ ಹೊಳಲ್ಕೆರೆ ತಾಲ್ಲೂಕು ಊರುನಾಯ್ಕರ ರಂಗಯ್ಯನ ಮನೆಯಲ್ಲಿ ಬಳಕೆ ಭೋಜನಾದಿಗಳನ್ನಲ್ಲದೆ ಇತರೆ ಕೆಲಸ ವಿಷಯಗಳಿಗೆ ಸಂಬಂಧಿಸಿದಂತೆ ೧೯೨೨ ಆಗಸ್ಟ್ ೩ಂರಂದು ಅಪರಾಧಿಯಾದ ಮಲ್ಲಯ್ಯನಿಗೆ ಹಿಯರಿಂಗ್ ಸಂಬಂಧಿಸಿದಂತೆ ಪತ್ರ ಬರೆದಿರುವುದನ್ನು ಗುರುತಿಸಬಹುದು (ಇಂಥ ಅನೇಕ ಪತ್ರಗಳ ವಿವರವಿದೆ).

ಹಿರೇಹಳ್ಳಿ ಕಟ್ಟೆಮನೆಗೆ ಸಂಬಂಧಿಸಿದಂತೆ ಮಾರಮ್ಮನಹಳ್ಳಿ ನಲಬಾಪಲ (ಬೇಡನಾದ ಬ್ರಾಹ್ಮಣ) ಬೈಯ್ಯಣ್ಣನ ಮಗ ಪಾಪಯ್ಯನು ನಾಯಕರಿಗೆ ಫಿರ್ಯಾದು ಸಲ್ಲಿಸಿದ್ದನ್ನು ತಿಳಿಯಬಹುದು. ಹೀಗೆ ಕರ್ನಾಟಕದ ಬೇರೆ ಬೇರೆ ಕಡೆ ನಾಯಕರು ನೆಲೆಸಿದ್ದರೂ ಇಂಥ ಬಿಗಿಕ್ರಮ ಇಲ್ಲ. ಚಿತ್ರದುರ್ಗ ಪರಿಸರದಲ್ಲಿ ಮಾತ್ರ ನ್ಯಾಯಪಂಚಾಯಿತಿ ಜೀವಂತಿಕೆ ಪಡೆದುಕೊಂಡಿದೆ.

ಈ ಮೊದಲೇ ಚರ್ಚಿಸಿದಂತೆ, ಕಟ್ಟೆಮನೆಗಳು ವಿಜಯನಗರೋತ್ತರ ಕಾಲದಲ್ಲಿ ಸ್ಥಾಪನೆಯಾದಂತಿವೆ. ಆನೆಗೊಂದಿ ಅರಸರ ಪ್ರೇರಣೆ ಮತ್ತು ಪ್ರೋತ್ಸಾಹಗಳಿಂದ ಇವು

ಕಾರ್ಯನಿರ್ವಹಿಸಿದ್ದವು. ಬ್ರಿಟಿಷರ ಆಳ್ವಿಕೆಯಲ್ಲಿ ಅವರ ಕಾಯ್ದೆ ಕಾನೂನುಗಳೇನೇ ಇದ್ದರೂ ತಮ್ಮ ಬುಡಕಟ್ಟಿನ ನ್ಯಾಯಪಂಚಾಯಿತಿಗಳಂತೆ ಸುಲಭವಾಗಿ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ಜಟಿಲವಾದವು ಹಾಗೆಯೇ ಜ್ವಲಂತವಾಗಿರುತ್ತಿದ್ದವು. ಏನೇ ಆದರೂ ಪರಸ್ಪರ ನಂಬಿಕೆ, ವಿಶ್ವಾಸಗಳಿಂದ ಬದುಕು ಸುಂದರವಾಗಿರಲು ಕಟ್ಟೆಮನೆಗಳ ಶ್ರಮ ಸಾರ್ಥಕ ಎನಿಸಿತ್ತು.

ಕಟ್ಟೆಮನೆಗಳು ಚಿತ್ರದುರ್ಗ ಜಿಲ್ಲೆಯಲ್ಲಿಯೇ ಇರುವುದು ವಿಶೇಷ. ಇವು ಇಂದು ಚಾರಿತ್ರಿಕ ಮತ್ತು ಸಾಂಸ್ಕೃತಿಕ ನೆಲೆಗಳಾಗಿವೆ. ನಾಯಕನಹಟ್ಟಿ, ಗೊನೂರು ಮತ್ತು ನನ್ನಿವಾಳಗಳು ಪ್ರಮುಖ ಕಟ್ಟೆಮನೆಗಳು. ಇವುಗಳಿಗೆ ಪ್ರತಿಯೊಬ್ಬ ನಾಯಕನಿದ್ದು ಹಿರಿಯರ ಆಜ್ಞೆಯಂತೆ ನ್ಯಾಯಪಂಚಾಯಿತಿಗಳನ್ನು ಮಾಡುತ್ತಾನೆ. ಕಟ್ಟೆಮನೆಯಲ್ಲಿ ಇತ್ಯರ್ಥವಾಗದಿದ್ದರೆ ಅಥವಾ ಸೋಲಾದರೆ ಗುರುಸ್ಥಾನವಾದ ಕಂಪಳದೇವರಹಟ್ಟಿ ನ್ಯಾಯಪಂಚಾಯಿತಿಗೆ ಹೋಗುತ್ತಾರೆ. ಹೀಗೆ ಇಲ್ಲಿ ಹೈಕೋರ್ಟು ಮತ್ತು ಸುಪ್ರಿಂಕೋರ್ಟಿನ ತೀರ್ಪುಗಳಂತೆ ಬೇಡ ಬುಡಕಟ್ಟಿನ ಯಜಮಾನರ ತೀರ್ಪು ಅಂತಿಮ. ಕರೆಕಂಬಳಿ ಗದ್ದಿಗೆ ಹಾಕಿ ಅದರ ಮೇಲೆ ಎಲೆ-ಅಡಿಕೆ ಇಟ್ಟು ಕುಲಸಾವಿರದವರಿಗೆ ಒಂದು ಎಲೆ-ಅಡಿಕೆ ಕೊಟ್ಟರೆ ಸಾಕು ಪಂಚಾಯಿತಿಗೆ- ಜನಾಂಗಕ್ಕೆ ಬದ್ಧರಾಗುವರೆಂಬ ನಂಬಿಕೆಯಿದೆ. ಎಲೆ-ಅಡಿಕೆ ಪ್ರಾಮಾಣಿಕತೆಯನ್ನು (ಇಂದಿಗೂ ಬೇಡ ಪರಂಪರೆಯಲ್ಲಿ) ಉಳಿಸಿಕೊಂಡು ಬಂದಿದೆ.

ಕಟ್ಟೆಮನೆಗಳಿಗೆ ಬರುವ ಸಮಸ್ಯೆಗಳು ಪ್ರಮುಖವಾಗಿ ಜೀವನ ರೂಪಿಸಿಕೊಳ್ಳುವ, ಸುಧಾರಣೆಗೊಳ್ಳುವ ಹಂತದಲ್ಲಿರುತ್ತವೆ. ಇಲ್ಲಿ ಪರಸ್ಪರ ಅರಿವು-ತಿಳುವಳಿಕೆಗಳಿದ್ದರೆ ಬಹುಶಃ ಅನೈಕ್ಯತೆ, ಕಲಹ, ನಿಯಮಬಾಹಿರ ಕೃತ್ಯಗಳನ್ನು ತಡೆಯಬಹುದು. ಬೇಡರ ಜಾತಿ ಮಾತ್ರ ಶ್ರೇಷ್ಠ; ಉಳಿದವು ಕನಿಷ್ಠ ಎಂಬ ಕಲ್ಪನೆ ಇದ್ದರೂ ಉನ್ನತಜಾತಿಗಳೊಂದಿಗೆ ಗುರುತಿಸಿಕೊಳ್ಳುವುದು ನಿಂತಿಲ್ಲ. ಅಂತರಭೋಜನ, ಅಂತರ್ಜಾತಿ ವಿವಾಹಗಳು ಸುಲಭವಾಗಿ ನಡೆಯುವುದಿಲ್ಲ. ಬೇರೆ ಬೇರೆ ಜಾತಿಯವರು ಸೇರಿ ಸಹಭೋಜನ (ಒಂದೇ ತಟ್ಟೆಯಲ್ಲಿ) ಮಾಡುವಂತಿಲ್ಲ. ಹಾಗೇನಾದರೂ ಆದರೆ ಜಾತಿಬಾಹಿರರಾಗುತ್ತಾರೆ ಬೇಡರು.

ಬೇಡರ ಹೆಣ್ಣಿಗೆ ಸಮಾಜದಲ್ಲಿ ಉನ್ನತ ಸ್ಥಾನ-ಮಾನವಿದ್ದಂತೆ ಕನಿಷ್ಠ ಸ್ಥಾನ-ಮಾನವೂ ಇದೆ. ಉನ್ನತಜಾತಿಯ ವ್ಯಕ್ತಿಯನ್ನು ಇವಳು ಪ್ರೀತಿಸಿದರೆ, ಮದುವೆಯಾದರೆ ಒಪ್ಪಿಗೆ ಇರುತ್ತದೆ. ಆದರೆ ಅವನೊಂದಿಗೆ ಒಂದೇ ತಟ್ಟೆಯಲ್ಲಿ ಭೋಜನ ಮಾಡುವಂತಿಲ್ಲ. ಮತ್ತು ತನ್ನ ಜಾತಿಗಿಂತ ಕೀಳಾದ ಜಾತಿಯವನೊಂದಿಗೆ ಪ್ರೇಮವಿವಾಹ ಬೆಳೆಸುವಂತಿಲ್ಲ. ಒಂದೊಮ್ಮೆ ಆದರೆ ಜಾತಿಬಾಹಿರವಾಗುತ್ತಿದ್ದರು. ಅನಾಥಮಹಿಳೆ, ವಿಧವೆ, ನಿರ್ಗತಿಕರು, ವೃದ್ಧರು ಈ ಸಮುದಾಯದಲ್ಲಿ ನಿಕೃಷ್ಟ ಜೀವನ ನಡೆಸುತ್ತಾರೆ. ಕೆಲವೊಮ್ಮೆ ಜಾತಿಯ ಕಟ್ಟುಪಾಡುಗಳನ್ನು ಮೀರಿ ಬದುಕುವ ಸಾಧ್ಯತೆಯಿದೆ. ಅವರ ಪಾಡು ಹೇಳತೀರದು.

ಬೇಡರ ನ್ಯಾಯಪಂಚಾಯಿತಿಗಳು ಭೂಮಿಯ ಮೇಲೆ ಹಕ್ಕುಸ್ಥಾಪನೆಯಾದಾಗಲೇ ಅಸ್ತಿತ್ವಕ್ಕೆ ಬಂದಂತಿವೆ. ದೇವರು, ಕಟ್ಟೆಮನೆ, ಗುಡಿಕಟ್ಟು ಮೊದಲಾದವುಗಳ ಜವಾಬ್ದಾರಿ

ಸ್ಥಾನಗಳಿಗಾಗಿ ಪೈಪೋಟಿ-ಜಗಳಗಳಾಗುತ್ತವೆ. ಆದರೆ ಪರಸ್ಪರ ಒಪ್ಪಿಗೆ ಮೂಲಕ ಕೆಲವೊಮ್ಮೆ ಇವನ್ನು ಬಗೆಹರಿಸಿಕೊಂಡರೂ ದ್ವೇಷ-ಅಸೂಯೆಗಳನ್ನು ಸಾಧಿಸುವುದೇ ಹೆಚ್ಚು.

ಭಾರತದೇಶಕ್ಕೆ ಒಂದು ಸಂವಿಧಾನವಿರುವಂತೆ ಆಯಾ ಪ್ರಾದೇಶಿಕತೆಗೆ ತಕ್ಕಂತೆ ನ್ಯಾಯಾಲಯಗಳಿವೆ. ಇಲ್ಲಿ ಜಾತಿಗೊಂದು (ಬೇಡ) ಸಂವಿಧಾನ, ಗುರುಮನೆ, ಅರಮನೆಗಳಿರುವುದು ಗಮನಾರ್ಹ ಸಂಗತಿ. ಬೇಡ ಕಟ್ಟೆಮನೆ-ಗುಡಿಕಟ್ಟೆಗಳು ಇಂದಿಗೂ ಜೀವಂತವಾಗಿವೆ. ಕರ್ನಾಟಕದ ಚರಿತ್ರೆಯಲ್ಲಿ ನ್ಯಾಯಾಂಗವ್ಯವಸ್ಥೆ ಪ್ರಾಚೀನ, ಮಧ್ಯಕಾಲ ಮತ್ತು ಆಧುನಿಕ ಕರ್ನಾಟಕದಲ್ಲಿದ್ದರೂ ಇಂಥಾ ಪಂಚಾಯಿತಿ ತೀರ್ಮಾನಗಳಿಗಾಗಿ ಅನೇಕ ಹೋರಾಟಗಳನ್ನು ಮಾಡಲು ಮುಂದಾಗಿರುತ್ತಾರೆ.

ಬೇಡರ ಕಟ್ಟೆಮನೆಗಳ ನ್ಯಾಯಪಂಚಾಯಿತಿಯಲ್ಲಿ ಹಿರಿಯರ ಮಾತು, ಎಲೆ ಅಡಿಕೆ, ದಂಡಹಾಕುವ ಪ್ರಕ್ರಿಯೆ ಪ್ರಮುಖವಾಗಿರುತ್ತದೆ. ಇಂಥ ನಿಯಮಗಳಿಗೆ ಹೆಣ್ಣು-ಗಂಡು ಇಬ್ಬರೂ ಒಳಪಡುತ್ತಾರೆ. ಹೆಚ್ಚಾಗಿ ದೇವರು-ಹಬ್ಬ-ಜಾತ್ರೆಗಳಲ್ಲಿ ಹಕ್ಕು ಚಲಾಯಿಸುವಾಗ ಇವರ ಅಧಿಕಾರದ ಬಗ್ಗೆ ಸಮಸ್ಯೆಗಳು ಉಲ್ಬಣವಾಗುತ್ತವೆ. ಇಡೀ ನಾಯಕ ಅಥವಾ ಬೇಡ ಜನಾಂಗಕ್ಕೆ ತಾನೇ ನಾಯಕ, ಪೂಜಾರಿ, ದೊರೆ ಎಂಬ ಪರಿಕಲ್ಪನೆ ಇಂದಿಲ್ಲ. ಮೊದಲೇ ತಿಳಿಸಿರುವಂತೆ ಛಿದ್ರ ಛಿದ್ರವಾಗಿ ನೆಲೆಸಿರುವ ಬೇಡರು ತಮ್ಮ ಅನುಕೂಲತೆಗೆ ತಕ್ಕಂತೆ ದೇವರು, ಕಟ್ಟೆಮನೆ, ಗುಡಿಕಟ್ಟೆಗಳನ್ನು ಹೊಂದಿರುವುದು ಸಹಜ. ಪಾರಂಪರಿಕವಾಗಿ ಇಂಥ ನ್ಯಾಯಾಂಗವ್ಯವಸ್ಥೆ ಇದ್ದರೂ ಇತ್ತೀಚೆಗೆ ಇದರ ಸದುಪಯೋಗ ಆಗುತ್ತಿಲ್ಲ. ಹಳೆತಲೆಮಾರಿನವರಲ್ಲಿ ಮಾತ್ರ ಸಣ್ಣಪುಟ್ಟ ಪಂಚಾಯಿತಿಗಳಾಗುವುದನ್ನು ಹೊರತುಪಡಿಸಿದರೆ ಅಂಥಾ ಗಮನಾರ್ಹ ಬದಲಾವಣೆಗಳು ಕಂಡುಬರುತ್ತಿಲ್ಲ. ಹೊ.ಚಿ.ಬೋರಯ್ಯ, ಟಿ. ಮಾರಪ್ಪ, ಎ.ಭೀಮಪ್ಪನಾಯಕರ ಕಾಲಕ್ಕೆ ಜನಾಂಗದ ಸುಧಾರಣೆ ಪಥಕ್ಕೆ ಕಾಲಿಟ್ಟಿತು. ವಿವಿಧ ರೀತಿಯಲ್ಲಿ ಚಾಲ್ತಿಯಲ್ಲಿರುವ ನಾಯಕರ ಕಟ್ಟೆಮನೆ ಪಂಚಾಯಿತಿಗಳು ಎಲ್ಲೋ ಒಂದು ಕಡೆ ನಿಸ್ವಾರ್ಥಸೇವೆಯಿಂದ ಈ ದೇಶದ ಸಂಸ್ಕೃತಿ ಮತ್ತು ನಾಗರಿಕತೆಗೆ ಮಾದರಿಯಾಗುವಂಥ ಕೆಲಸ ಕಾರ್ಯಗಳನ್ನು ಮಾಡುವಲ್ಲಿ ನಿರತವಾಗಿದ್ದವೆಂದರೆ ತಪ್ಪಾಗದು.

## ಅಭ್ಯಾಸಮಾಡಿದ ಗ್ರಂಥಗಳು


೧. ಅಕ್ಕಮಹಾದೇವಿ (ಅನು), ೧೯೮೪, ಬುಡಕಟ್ಟು ನ್ಯಾಯ (ವಿ.ರಾಘವಯ್ಯ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨. ಈಶ್ವರಪ್ಪ ಎಂ.ಜಿ, ೧೯೮೨, ಮ್ಯಾಸಬೇಡರು, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು

೩. ಕರಿಶೆಟ್ಟಿ ರುದ್ರಪ್ಪ, ೧೯೯೫, ಮ್ಯಾಸನಾಯಕರು : ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೪. ಕೃಷ್ಣಮೂರ್ತಿ ಹನೂರು, ೧೯೯೩, ಮ್ಯಾಸಬೇಡರ ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೫. ಪಂಡಿತ ರೇವಣ್ಣಶಾಸ್ತ್ರಿ, ೧೯೫೫. ವಾಲ್ಮೀಕರ ಪುರಾಣವು!, ದ್ಯಾಮವ್ವನಹಳ್ಳಿ, ಜಗಳೂರು ತಾಲ್ಲೂಕು
೬. ರಾಜನ ರಾಜಣ್ಣ, ೧೯೮೨. ನಾಯಕ ಜನಾಂಗದ ಇತಿಹಾಸ, ಚಳ್ಳಕೆರೆ
೭. ವಿರೂಪಾಕ್ಷಿ ಪೂಜಾರಹಳ್ಳಿ, ೧೯೯೯, ಗಾದರಿ ಪಾಲನಾಯಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, ಅಕ್ಕಮ್ಮನ ಆಚರಣೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೯. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಕನ್ನಡ ವಿಶ್ವವಿದ್ಯಾಲಯ, ಹಂಪಿ
೧೦. ವೀಣಾ ಎಂ.ಪಿ., ೨೦೦೦. ಮನೆ, ಸಮಾಜ ಮತ್ತು ಸಂಸ್ಕೃತಿ (ಮ್ಯಾಸನಾಯಕರು ಹಾಗೂ ಊರನಾಯಕರ ಅಧ್ಯಯನ), ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ
೧೧. ಶ್ರೀನಿವಾಸನಾಯಕ ಬಿ.ಎಸ್., ೧೯೮೪, ಚಿತ್ರದುರ್ಗದ ಕಾಮಗೇತಿ ಅರಸರು, ತರೀಕೆರೆ

## ಸ್ಮರಣಸಂಚಿಕೆ/ಲೇಖನ/ಮಾಸಪತ್ರಿಕೆ/ಇತ್ಯಾದಿ

೧೨. ಎಂ.ಕೆ.ನಾಯಕ (ಸಂ), ವಾಲ್ಮೀಕಿ ವಾಣಿ, ಫೆಬ್ರವರಿ ೧೯೯೮. ಚಿತ್ರದುರ್ಗ
೧೩. ಹರ್ತಿಕೋಟೆ ವೀರೇಂದ್ರಸಿಂಹ (ಸಂ), ವಾಲ್ಮೀಕಿ ಕಿರಣ (೯-೨-೧೯೯೮), ಶ್ರೀ ವಾಲ್ಮೀಕಿ ಮಹಾಸಂಸ್ಥಾನ, ರಾಜನಹಳ್ಳಿ
೧೪. ನಾಯಕನಹಟ್ಟಿದೊರೆ ಬಸಪ್ಪನಾಯಕರ ಪತ್ರ : ೧೪-೩-೧೯೩೦ (ಈ ಬಗ್ಗೆ ೧೫ಕ್ಕೂ ಹೆಚ್ಚು ಪತ್ರಗಳಿವೆ)
೧೫. ಹಿರೇಹಳ್ಳಿ ದಡ್ಡಿಸೂರನಾಯಕದೇವರಿಗೆ ಸಂಬಂಧಿಸಿದ ಸುಮಾರು ೨೦ ದಾಖಲೆಗಳು
೧೬. ಹಿರೇಹಳ್ಳಿ ಕಟ್ಟೆಮನೆಗೆ ಸಂಬಂಧಿಸಿದ ಪತ್ರ (೨೦ ಪತ್ರಗಳು)

೯

# ಬೇಡರ ಕಟ್ಟೆಮನೆಗಳ ನೀತಿ-ನಿಬಂಧನೆಗಳಿಗೆ ಸಂಬಂಧಿಸಿದ ಒಂದು ದಾಖಲೆ

ಸಂಗ್ರಹ / ಪ್ರೊ. ಲಕ್ಷ್ಮಣ್ ತೆಲಗಾವಿ

ಬೇಡರ ಕಟ್ಟೆಮನೆಗಳಿಗೆ ಸಂಬಂಧಿಸಿದಂತೆ, ಕಳೆದ ಶತಮಾನದಲ್ಲಿ ಜಾರಿಯಲ್ಲಿದ್ದ ಅಥವಾ ಜಾರಿಗೊಳಿಸಲು ಪ್ರಯತ್ನಿಸಲಾದ ಕೆಲವು ನೀತಿ-ನಿಬಂಧನೆಗಳು ಅಥವಾ ರೂಲ್ಸ್‌ಗಳ ದಾಖಲೆಯೊಂದನ್ನು ಇಲ್ಲಿ ಸಂಗ್ರಹಿಸಿಕೊಟ್ಟಿದೆ. ಈ ನೀತಿ-ನಿಬಂಧನೆಗಳನ್ನು ರೂಪಿಸಿ ಅಥವಾ ಸಂಗ್ರಹಿಸಿ ತಮ್ಮ 'ಕಾಮಗೇತಿ ಗುರುಪೀಠ'ದ ವತಿಯಿಂದ ಬೇಡ ಸಮುದಾಯದಲ್ಲಿ ಜಾರಿಗೊಳಿಸಲೆತ್ನಿಸಿದವರು, ಚಿತ್ರದುರ್ಗ ನಾಯಕ ಅರಸರ ಸಂತತಿಯವರಾಗಿ ಗುರುತಿಸಿಕೊಂಡಿದ್ದ ಬಿಚ್ಚುಗತ್ತಿ ದೊಡ್ಡಮದಕರಿನಾಯಕರು; ಭರಮಸಾಗರದ ಅಂಬಾವಿಲಾಸದಲ್ಲಿ ವಾಸಿಸಿದ್ದವರು. ಇವರು ಚಿತ್ರದುರ್ಗ ಸಂಸ್ಥಾನದ ಕೊನೆಯ ಅರಸ ಚಿಕ್ಕಮದಕರಿನಾಯಕ ಅಥವಾ ರಾಜಾ ವೀರಮದಕರಿನಾಯಕ(೧೭೫೪-೧೭೭೯)ನ ಸೋದರಸಂಬಂಧಿ ದೊಡ್ಡ ಮದಕರಿನಾಯಕ(ದೊಡ್ಡೇರಿ ಮದಕರಿನಾಯಕ)ರ ಸಂತತಿಯವರಲ್ಲೊಬ್ಬರು. ತಮ್ಮ ಜೀವಿತ ಕಾಲದಲ್ಲಿ ಬಿ.ಡಿ.ಮದಕರಿನಾಯಕರೆಂದೇ ಗುರುತಿಸಲ್ಪಡುತ್ತಿದ್ದರು.

ಬಿ.ಡಿ.ಮದಕರಿನಾಯಕರ ಈರ್ವರು ಮಕ್ಕಳೆಂದರೆ, ರಾಜಾ ಜಿ.ಎಸ್.ಪರಶುರಾಮ ನಾಯಕ (ರಾಜಾ ಜಿ.ಎಸ್.ಪಾಳ್ಳೇಗಾರ್) ಮತ್ತು ಯಶೋದಮ್ಮನಾಗತಿ. ರಾಜಾ ಜಿ.ಎಸ್.ಪಾಳ್ಳೇಗಾರ್ ಅವರು ಚಿತ್ರದುರ್ಗದಲ್ಲಿಯೇ ವಾಸಿಸುತ್ತಿದ್ದರು.* ಆದರೆ ಇವರ ಅಕ್ಕ ಯಶೋದಮ್ಮನಾಗತಿಯವರನ್ನು ತರೀಕೆರೆ ಪಾಳೆಯಗಾರ ಮನೆತನದ ಐದನೇ ಹನುಮಪ್ಪನಾಯಕ ಅಥವಾ ಸರ್ಜಾ ಹನುಮಪ್ಪನಾಯಕರಿಗೆ ಮದುವೆ ಮಾಡಿಕೊಡಲಾಗಿದ್ದಿತು. ಯಶೋದಮ್ಮನಾಗತಿಯವರು ಈ ಹನುಮಪ್ಪನಾಯಕರಿಗೆ ಮೂರನೇ ಪತ್ನಿ.

---

* ಬೇಡರ ಕಟ್ಟೆಮನೆಗಳಿಗೆ ಸಂಬಂಧಿಸಿದ ನಿಬಂಧನೆಗಳು ಮತ್ತಿತರ ಪ್ರಕಟಣೆಗಳನ್ನು, ಕೆಲವು ದಾಖಲೆಗಳನ್ನು ನನಗೆ ಒದಗಿಸಿದವರು ಇವರೇ. ಇವರೊಡನೆ ನಾನು ನಡೆಸಿದ ಚರ್ಚೆಯಿಂದಲೂ ಕೆಲವು ವಿಚಾರಗಳು ತಿಳಿದಿರುತ್ತವೆ.

೧೯೪೭ರಲ್ಲಿ ಹನುಮಪ್ಪನಾಯಕರು ಹಠಾತ್ತನೆ ತೀರಿಕೊಳ್ಳಲು, ಇಡೀ ಸಂಸ್ಥಾನದ ಹೊಣೆಗಾರಿಕೆ ವಹಿಸಿಕೊಂಡು ಸಮರ್ಥವಾಗಿ ನಿರ್ವಹಿಸಿದವರು ಈ ಯಶೋದಮ್ಮನಾಗತಿ. ಇವರು ಚಿತ್ರದುರ್ಗದಲ್ಲೆ ತಮ್ಮ ಕೊನೆಯುಸಿರೆಳೆದರು.

ಬಿಚ್ಚುಗತ್ತಿ ದೊಡ್ಡಮದಕರಿನಾಯಕರು ತಮ್ಮ ಅಭಿಧಾನವನ್ನು ಕಾಣಿಸಿರುವುದು ಹೀಗೆ : 'ಚಿತ್ರದುರ್ಗಸೀಮೆ ವಾಲ್ಮೀಕಮತದ ಆಚಾರ ವಿಚಾರಕ್ಕೆ ಮೊಖ್ತೇಸರರಾದ ಶ್ರೀಮನ್ ಮಹಾನಾಯಕಾಚಾರ್ಯ, ನಾಯಕ ಶಿರೋಮಣಿ, ಕಾಮಗೇತಿ ಕಸ್ತೂರಿ ದೊಡ್ಡಮದಕರಿನಾಯಕರವರು'. 'ವಾಲ್ಮೀಕಮತದ ಮೊಖ್ತೇಸರ' (ಪ್ರಧಾನ ಅಧಿಕಾರಿ - Chief Officer)ರೆಂದು ತಮ್ಮನ್ನು ಕರೆದುಕೊಂಡ ಈ ಬಿ.ಡಿ.ಮದಕರಿನಾಯಕರು, ಪ್ರಸ್ತುತ ಬೇಡರ ಕಟ್ಟೆಮನೆಗಳಿಗೆ ಸಂಬಂಧಿಸಿದ ನೀತಿ-ನಿಬಂಧನೆಗಳನ್ನು ಎರಡು ಸಾರ್ವಜನಿಕ ಪ್ರಕಟಣೆ(ಪ್ರಸಿದ್ಧಪತ್ರಿಕೆ)ಗಳ ಮೂಲಕ ಬೇಡ ಸಮುದಾಯದವರ ಗಮನಕ್ಕೆ ತಂದಿದ್ದಾರೆ. ಅವುಗಳೆಂದರೆ, 'ಶ್ರೀ ವಾಲ್ಮೀಕಮತೋದ್ಧಾರಕ ಪ್ರಚಾರಕ ಪತ್ರ' (೧೯೧೭) ಮತ್ತು 'ಊರುನಾಯಕರಿಗೂ ಮೇಸನಾಯಕರಿಗೂ ಇರುವ ಭೇದಾಭೇದಗಳು'(೧೯೩೦). ಇವುಗಳಲ್ಲಿ ಮೊದಲನೆಯ ಕೈಪಿಡಿಯನ್ನು ಈ 'ಲೇಖನ'ದೊಡನಿರುವ ಅನುಬಂಧ-೧ರಲ್ಲಿ ಯಥಾವತ್ತಾಗಿ ಮುದ್ರಿಸಿದೆ. ಎರಡನೆಯ ಕೈಪಿಡಿಯಲ್ಲಿ, ಬಿ.ಡಿ.ಮದಕರಿನಾಯಕರು ಪೂರಕ ಮಾಹಿತಿಯಾಗಿ ಸೇರಿಸಿರುವ, 'ಕಟ್ಟೆಮನೆ ಮತ್ತು ಕಟ್ಟೆಮನೆಗೆ ಸೇರಿದ ಗ್ರಾಮ ಗಳಲ್ಲಿ ನೆಲಸಿರುವ ವಾಲ್ಮೀಕಮತದವರಲ್ಲಿ ಜಾರಿಯಲ್ಲಿರುವ ನಿಬಂಧನೆಗಳು ಅಥವಾ ರೂಲ್ಸು'ಗಳ ದಾಖಲೆಯನ್ನು ಮಾತ್ರ ಪ್ರತ್ಯೇಕಿಸಿ ಅದನ್ನೂ ಅನುಬಂಧ-೨ರಲ್ಲಿ ಯಥಾ ವತ್ತಾಗಿ ಮುದ್ರಿಸಿದೆ.

ನಾಯಕ ಅರಸರ ಮನೆತನದವರು ತಮ್ಮ ಹಿಂದಿನ ಪ್ರತಿಷ್ಠೆ, ಅಧಿಕಾರಗಳನ್ನು ತಮ್ಮ ಸಮುದಾಯದಲ್ಲಾದರೂ ಉಳಿಸಿಕೊಳ್ಳುವ ಪ್ರಯತ್ನವಾಗಿ ತಮ್ಮದೇ 'ಗುರುಪೀಠ' ಸ್ಥಾಪನೆಗೆ ಮುಂದಾದುದು ಇಲ್ಲಿ ಕಂಡುಬರುತ್ತದೆ. ಸಮುದಾಯದ ಕೆಲವು ವರ್ಗ ಗಳನ್ನಾದರೂ ತಮ್ಮ ನಿಯಂತ್ರಣದಲ್ಲಿರಿಸಿಕೊಳ್ಳುವುದು ಇದರ ಉದ್ದೇಶವಾಗಿರಬೇಕು. ಬಿ.ಡಿ.ಮದಕರಿನಾಯಕರು ಹೊರಡಿಸಿದ 'ಪ್ರಸಿದ್ಧ ಪತ್ರಿಕೆ'ಗಳು ಚಿತ್ರದುರ್ಗಸೀಮೆಯ ವಾಲ್ಮೀಕಮತದವರಿಗೆ ಮಾತ್ರ ಸಂಬಂಧಿಸಿದುದು ಸ್ಪಷ್ಟ. ಇವುಗಳ ಸಾರಾಂಶವು ಈ ಕೆಳಗಿನಂತಿದೆ :

೧. ಮೊದಲಿಗೆ, ೧೯೧೭ರಲ್ಲಿ, 'ಶ್ರೀ ವಾಲ್ಮೀಕಮತೋದ್ಧಾರಕ ಪ್ರಚಾರಕ ಪತ್ರ' (ವೈ.ಬಿ-ಸುಬ್ಬಯ್ಯ ಅಂಡ್ ಸನ್ಸ್ , ಬೆಂಗಳೂರು, ಪುಟಗಳು ೧೪)ವನ್ನು ಕೈಪಿಡಿರೂಪದಲ್ಲಿ ಹೊರತಂದು, ವಾಲ್ಮೀಕಮತ ಆಚಾರ ವಿಚಾರಕ್ಕೆ ತಾವು ಹೇಗೆ ಬಾಧ್ಯರಾಗಿರುವೆವೆಂಬುದನ್ನು ಸಮರ್ಥಿಸಿಕೊಂಡಿದ್ದಾರೆ ಬಿ.ಡಿ.ಮದಕರಿನಾಯಕ. ಮಹರ್ಷಿ ವಾಲ್ಮೀಕಿ, ಆತನ ಹಿರಿಯ ಮಗ ಕಾಮಗೇತಲ, ಈ ಪೀಳಿಗೆಯಲ್ಲಿ ಬಂದ ಚಿತ್ರನಾಯಕ, ಈತನ ನಂತರ ಮುಂದು ವರೆದು ಬಂದ ಕಾಮಗೇತಲ ಗುರುಪೀಠ; ಈ ಗುರುಪೀಠಾಧಿಕಾರಿಗಳಿಂದ ವಾಲ್ಮೀಕಮತಸ್ಥರು

ತಮ್ಮ ಆಚಾರ ವಿಚಾರ ತೀರಿಸಿಕೊಳ್ಳುವುದು ಇತ್ಯಾದಿ ಕುರಿತು ಸಂಕ್ಷಿಪ್ತವಾಗಿ ವಿವೇಚಿಸುತ್ತಾರೆ. ಕಟ್ಟೆಮನೆಯ ಸ್ವರೂಪ ಹಾಗೂ ಹಕ್ಕುಬಾಧ್ಯತೆಗಳು, ಕಟ್ಟೆಮನೆಯ ನೆಲೆ, ಅದರ ಪೂರ್ವ ಮತ್ತು ಈಗಿನ ಸ್ಥಿತಿ; ನ್ಯಾಯಾಸ್ಥಾನವಾಗಿ ಕಟ್ಟೆಮನೆ, ಅಲ್ಲಿಯ ತೀರ್ಮಾನಗಳು ಇತ್ಯಾದಿಯನ್ನು ಸೂಕ್ಷ್ಮವಾಗಿ ಪ್ರಸ್ತಾಪಿಸುತ್ತಾರೆ. ವಾಲ್ಮೀಕ ಮತಸ್ಥರ ಸಮಕಾಲೀನ ಸಮಸ್ಯೆಗಳ ಬಗೆಗೂ ವಿಚಾರದ ಬೆಳಕು ಹಾಯಿಸಲೆತ್ನಿಸುತ್ತಾರೆ.

ಒಂದು ಗಮನಾರ್ಹ ಉದಾಹರಣೆಯೆಂದರೆ, ವಾಲ್ಮೀಕ ಸಮುದಾಯದಲ್ಲಿ ವಿದ್ಯೆಯ ಪ್ರಸಾರದ ಅಗತ್ಯ ಕುರಿತು ಬಿ.ಡಿ.ಮದಕರಿನಾಯಕರು ವ್ಯಕ್ತಪಡಿಸಿರುವ ಕಳಕಳಿ. ಇಪ್ಪತ್ತನೇ ಶತಮಾನದ ಆದಿಭಾಗದಲ್ಲಿ ಚಿತ್ರದುರ್ಗ ಜಿಲ್ಲೆಗೆ ಸೀಮಿತಗೊಂಡಂತೆ ಈ ಸಮುದಾಯದಲ್ಲಿ ೧೦೦ಕ್ಕೆ ೩ರಂತೆ ಮಾತ್ರ ವಿದ್ಯಾವಂತರಿದ್ದರೆಂಬ ಇವರ ಗ್ರಹಿಕೆ ವಿಷಾದದ ನೆಲೆಯಲ್ಲಿ ವ್ಯಕ್ತಪಟ್ಟಿರುವಂಥಾದ್ದು. 'ಹಿಂದೆ ಹೇಗೆ ಮತದ ಒಗ್ಗಟ್ಟಿನಿಂದ ಅನೇಕ ರಾಜ್ಯಗಳನ್ನು ಗೆದ್ದಂತೆಯೇ ಈಗಲೂ ಅದೇ ಒಗ್ಗಟ್ಟಿನ ಬಲದಿಂದ ವಿದ್ಯಾ ಎಂಬ ರಾಜ್ಯವನ್ನು ಗೆಲ್ಲಬೇಕೆಂದು' ಸ್ವಮತೀಯರಿಗೆ ಕರೆನೀಡುತ್ತಾರೆ. ಮತೋದ್ಧಾರಕ್ಕೆ ಐಕ್ಯ ಮತ್ಯವೇ ಬಲ; ಇದರ ಬೆಂಬಲದಿಂದ, ಅಂದರೆ ಈ ಮತದ ಗ್ರಾಮೀಣ ಗುರುಪೀಠಾಧಿಕಾರಿ ಗಳಿಂದ ಮಾರ್ಗದರ್ಶನ ಪಡೆಯುವುದರಿಂದ, ಇದು ಸಾಧ್ಯವೆಂಬುದು ಅವರ ನಿಲುವು. ಇದು ಪರೋಕ್ಷವಾಗಿ ಕಟ್ಟೆಮನೆಗಳ ಪ್ರಸ್ತುತತೆಯನ್ನು ಪ್ರತಿಪಾದಿಸುತ್ತದೆ ಯಲ್ಲದೆ ಬೇರೆ ಅಲ್ಲ. ಇಂಥಾ ಹಲವಾರು ವಿಚಾರಪ್ರಬೋಧಕ ಅಂಶಗಳಿವೆ ಈ ಪುಸ್ತಿಕೆಯಲ್ಲಿ. (ಅನುಬಂಧ-೧ನ್ನು ಗಮನಿಸಿ).

ಇಲ್ಲಿಯ ವಿಚಾರಗಳೇನೇ ಇದ್ದರೂ ಕಾಮಗೇತಲ ಗುರುಪೀಠದ ಹಿನ್ನೆಲೆ ಮತ್ತು ಹಕ್ಕುಬಾಧ್ಯತೆಗಳು ಮಾತ್ರ ಪ್ರಶ್ನಾರ್ಹ. ಬಿ.ಡಿ. ಮದಕರಿನಾಯಕರು ಒದಗಿಸುವ ಪೌರಾಣಿಕ ವಿವರಗಳ ವಸ್ತುನಿಷ್ಠತೆಯನ್ನು ಮರುಪರಿಶೀಲಿಸಬೇಕಾಗುತ್ತದೆ. 'ಕಿರಾತರ ಯಜಮಾನ'ನಾಗಿ ಗುರುತಿಸಲ್ಪಟ್ಟ ವಾಲ್ಮೀಕಿಯು, ತನ್ನ ಕಾಮಕೇತು, ಲಕ್ಷ, ಮೀನ, ಮಲ್ಲರೇ ಮೊದಲಾದ ಏಳುಜನ ಮಕ್ಕಳ ನಾಯಕತ್ವದಲ್ಲಿ ಏಳುಪಡೆಗಳನ್ನು ರಚಿಸಿ ದರೋಡೆ ನಡೆಸುತ್ತಿದ್ದನೆಂಬ ಕತೆಯೊಂದಿದ್ದು, ಇಲ್ಲಿ ಕಾಮಕೇತುವೇ ಹಿರಿಯಮಗನೆಂಬುದು ಸ್ಪಷ್ಟಪಡುತ್ತದೆ. ಜ್ಞಾನೋದಯದ ನಂತರ ವಾಲ್ಮೀಕಿಯು ಮಹರ್ಷಿಯೆನಿಸಿದರೆ, ಆತನ ಮಕ್ಕಳು ವೀರಪುರುಷರೆನಿಸಿ ಇತರರಿಗೆ ಮಾರ್ಗದರ್ಶಕರಾದರು. ಬಿ.ಡಿ.ಮದಕರಿನಾಯಕರು ತಮ್ಮ ಕಾಮಗೇತಲ ಗುರುಪೀಠದ ಮೂಲಪುರುಷನೆಂದು ಗುರುತಿಸಿರುವುದು ಇದೇ ಕಾಮಕೇತುವನ್ನು. ಚಿತ್ರದುರ್ಗ ರಾಜವಂಶೀಕರ ಬೆಡಗು ಸಹಾ ಕಾಮಕೇತಲು/ಕಾಮಗೇತಲು ಆಗಿರುವುದರಿಂದ, ಬಿ.ಡಿ.ಮದಕರಿನಾಯಕರು ತಮ್ಮ ಕಟ್ಟೆಮನೆಯ ಮೂಲಪುರುಷನೆಂದು ಕಾಮಕೇತುವನ್ನೆ ಸೂಚಿಸಿರುವುದು ಸಹಜವೇ ಆಗಿದೆ. ಆದರೆ, ಇನ್ನೊಂದೆಡೆ, ವಾಲ್ಮೀಕಿಗೆ ಒಟ್ಟು ಹನ್ನೆರಡು ಜನ ಮಕ್ಕಳಿದ್ದು, ಅವರಲ್ಲಿ ಮಂದಲ ಮುನಿಬೆಟ್ಟುರಾಜು ಎಂಬವನೇ ಹಿರಿಯನೆಂದು ಹೇಳಿದೆ. ಬೇಡರ ಬೆಡಗುಗಳಲ್ಲಿ ಒಂದಾದ ಮಂದಲವರ (ಮಂದಾರು,

ಮಂದಲೋರು, ಮಂದ್ಲೋರು, ಮಂದೆಯವರು) ಗುಂಪಿಗೆ ಮುಖ್ಯಸ್ಥ ಅಥವಾ ಮೂಲ ಪುರುಷ ಈತನೇ ಅಂತೆ. ನಿಜಕ್ಕೂ ಇವರೀರ್ವರಲ್ಲಿ ವಾಲ್ಮೀಕಿಯ ಹಿರಿಯಪುತ್ರ ಯಾರು? ಇಂಥಾ ಗೊಂದಲಗಳ ಕಾರಣವಾಗಿ ಬಿ.ಡಿ. ಮದಕರಿನಾಯಕರ ವಿವರಣೆಯನ್ನು ಮರು ವಿಮರ್ಶಿಸುವುದು ಅನಿವಾರ್ಯವೆನ್ನಬೇಕು.

ಪ್ರಸ್ತುತ ಸಂದರ್ಭದಲ್ಲಿ, ಇಂಥಾ ವಿಚಾರಗಳ ಬಗೆಗೆ ವಾಲ್ಮೀಕಮತಸ್ಥರಾಗಲಿ, ವಿದ್ವಾಂಸರಾಗಲಿ ಪ್ರಸ್ತಾಪಿಸದಿರುವುದು ಹಾಗೂ ಪ್ರತಿಕ್ರಿಯಿಸದಿರುವುದನ್ನು ಗಮನಿಸಿದರೆ, ಬಿ.ಡಿ.ಮದಕರಿನಾಯಕರ ಗುರುಪೀಠದ ವಿಚಾರಗಳು ಅವರಿಗಷ್ಟೆ ಸೀಮಿತಗೊಂಡಿದ್ದವೆಂಬುದು ದೃಢಪಡುತ್ತದೆ. ಆದರೆ ಅವರ ಕಾಲಾವಧಿಯ ಕಟ್ಟೆಮನೆಗಳ ಸ್ವರೂಪದ ಬಗೆಗಿನ ಅವರ ಅಭಿಪ್ರಾಯಗಳನ್ನು ಇಲ್ಲಿ ಪರಿಗಣಿಸವಿರುವಂತಿಲ್ಲ. 'ನ್ಯಾಯಪಂಚಾಯಿತಿ'ಯಾಗಿ ಕಟ್ಟೆಮನೆಗಳು ನಿರ್ವಹಿಸಬೇಕಿದ್ದ ಕರ್ತವ್ಯಗಳನ್ನು ಕುರಿತು ಅವರು ಪ್ರಸ್ತಾಪಿಸಿರುವುದು ಉಚಿತವೇ ಆಗಿದೆಯೆನ್ನಬಹುದು.

೨. ಕಟ್ಟೆಮನೆ ಮತ್ತು ಕಟ್ಟೆಮನೆಗೆ ಸೇರಿದ ಗ್ರಾಮಗಳಲ್ಲಿ ನೆಲೆಸಿದ ವಾಲ್ಮೀಕಮತದವರಿಗೆ ಸಂಬಂಧಿಸಿದ ನಿಬಂಧನೆಗಳು ಅಥವಾ ರೂಲ್ಸುಗಳನ್ನು ರೂಪಿಸಿದವರು ಬಿ.ಡಿ. ಮದಕರಿನಾಯಕರು. ೧೯೩೦ಂಕ್ಕೂ ಹಿಂದಿನಿಂದಲೇ ಈ ನಿಬಂಧನೆಗಳನ್ನು ಇವರು ಜಾರಿಗೆ ತರಲು ಪ್ರಯತ್ನಿಸಿದರೆಂದು ತೋರುತ್ತದೆ. ಈ ನಿಬಂಧನೆಗಳ ಹಾಳೆಗಳು ಮುದ್ರಣಗೊಂಡುದು 'ದಾವಣಗೆರೆ ಪ್ರೆಸ್'ನಲ್ಲಿ. ಈ ನಿಬಂಧನೆಗಳು ಇವರು ಸ್ಥಾಪಿಸಿದ ಕಾಮಗೇತಲ ಗುರುಪೀಠದ ಅಂಗವಾಗಿಯೇ ಜಾರಿಗೆ ಬಂದುದೆಂಬುದು ವ್ಯಕ್ತಪಡುತ್ತದೆ. ಇವರು ಒಟ್ಟು ೨೨ ನಿಬಂಧನೆಗಳನ್ನು ವಿಧಿಸಿದ್ದು, ೨೩ನೇ ನಿಬಂಧನೆಯಾಗಿ 'ಈ ಹಿಂದೆ ಇದ್ದ ನಿಬಂಧನೆಗಳನ್ನು ರದ್ದುಮಾಡಿರುತ್ತೆ' ಎಂದು 'ಆಜ್ಞೆ ವಿಧಿಸುತ್ತಾರೆ'. ಈ 'ಸಂಸ್ಥಾನದ ಪೀಠಾಧಿಕಾರಿ'ಯೆಂದೂ 'ಮೊಕ್ತೇಸರರು' ಎಂದೂ ಕರೆದುಕೊಂಡಿದ್ದಾರೆ ಬಿ.ಡಿ. ಮದಕರಿನಾಯಕರು. 'ಅರಮನೆ'ಯೆಂತಲೂ ಸೂಚಿಸುತ್ತಾರೆ. ಇಲ್ಲಿ ಸಂಸ್ಥಾನವೆಂದರೆ ಚಿತ್ರದುರ್ಗ ಸಂಸ್ಥಾನ; ಅರಮನೆಯೆಂದರೆ ದುರ್ಗದ ಅರಮನೆ. ಆದರೆ ಇವೆರಡೂ ೧೭೭೯ರಲ್ಲಿಯೇ ಇತಿಹಾಸದ ಪುಟಕ್ಕೆ ಸೇರಿಹೋದುದು ಎಲ್ಲರಿಗೂ ತಿಳಿದದ್ದೆ.

ಸಾಮಾನ್ಯವಾಗಿ, ನಾಯಕ ಸಂಸ್ಥಾನಿಕರ ವಂಶಜರು ಆ ನಂತರದಲ್ಲಿ ಸಾರ್ವಜನಿಕವಾಗಿ ವ್ಯವಹರಿಸುವಾಗ, ತಮ್ಮ ಹಿಂದಿನ ಪರಂಪರೆಯ ಮುಂದುವರಿಕೆಯೆಂಬಂತೆ ತೋರ್ಪಡಿಸಿಕೊಳ್ಳುತ್ತಿದ್ದುದೊಂದು ವಾಡಿಕೆ. ತಮ್ಮನ್ನು 'ಗುರು'ಗಳೆಂದು, ತಮ್ಮ ನಿವಾಸ/ಕಚೇರಿಯನ್ನು 'ಗುರುಪೀಠ'ವೆಂದು ಕರೆದುಕೊಂಡು, ಆ ಮೂಲಕ ತಮ್ಮ 'ನಾಯಕತನ'ದ ಹಳೆಯ ವರ್ಚಸ್ಸನ್ನು ಊರ್ಜಿತಗೊಳಿಸಿಕೊಳ್ಳಲು ಹವಣಿಸುತ್ತಿದ್ದುದು ಸಹಜವೆನ್ನಬಹುದು. ಕರ್ನಾಟಕದ ಕೆಲವು ಭಾಗಗಳಲ್ಲಿ ಇಂಥಾ ಪ್ರವೃತ್ತಿ ಇಂದಿಗೂ ಮುಂದುವರೆದಿರುವುದು ದಿಟ. ಆಯಾ ಸಂತತಿಯವರು ತಮ್ಮ ತಮ್ಮ ಆರ್ಥಿಕ, ಸಾಮಾಜಿಕ, ರಾಜಕೀಯ ಮೊದಲಾದ ಶಕ್ತಿ-ಸಾಮರ್ಥ್ಯಗಳಿಗನುಗುಣವಾಗಿ ತಮ್ಮ ಮತಸ್ಥರಿಂದ ಭಕ್ತಿ-ನಿಷ್ಠೆ-

ಗೌರವ-ಕಾಣಿಕೆಗಳನ್ನು ನಿರೀಕ್ಷಿಸುವುದರೊಡನೆ, ನ್ಯಾಯಿಕ ಕಾರ್ಯ-ಕಲಾಪಗಳಲ್ಲಿ ನ್ಯಾಯಾಧಿಪತಿಗಳ ಪಾತ್ರ ವಹಿಸುವುದನ್ನು ಕಾಣಬಹುದು. ಕೆಲವು ವಿಶಿಷ್ಟ ಸಾಂಸ್ಕೃತಿಕಾಚರಣೆ ಮತ್ತಿತರ ಸಂದರ್ಭಗಳಲ್ಲಿ ಇದು ಇನ್ನಷ್ಟು ದೃಢಪಡುತ್ತದೆ.

ಬೇಡರ ಕಟ್ಟೆಮನೆಗಳ ಕಾರ್ಯಸ್ವರೂಪ ಕುರಿತು ಈಗಾಗಲೇ ವಿವಿಧ ವಿದ್ವಾಂಸರು/ಸಂಶೋಧಕರು ಉಲ್ಲೇಖಿಸಿರುವ ಹಾಗೂ ಚರ್ಚಿಸಿರುವ ಅಂಶಗಳೇ ಬಿ.ಡಿ.ಮದಕರಿನಾಯಕರ ಇಲ್ಲಿಯ ನಿಬಂಧನೆಗಳಲ್ಲಿಯೂ ಕಂಡುಬರುತ್ತವೆ.* ಆದರೆ ಇವು 'ಕಾಮಗೇತಲ ಗುರುಪೀಠ'ದ ವತಿಯಿಂದ 'ತಿದ್ದಿ ಸರಿಪಡಿಸಿ ಜಾರಿಗೊಳಿಸಿದ' ನಿಬಂಧನೆಗಳಾದ್ದರಿಂದ ಕುತೂಹಲಕಾರಿಯೆನಿಸುತ್ತವೆ. ಮುಖ್ಯವಾಗಿ, ನೈತಿಕ, ಕೌಟುಂಬಿಕ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ರೀತಿ-ನೀತಿಗಳಿಗೆ ಸಂಬಂಧಿಸಿದವು ಇವು. ವೈಯಕ್ತಿಕ ಪರಿಶುದ್ಧತೆಗೆ ಆದ್ಯತೆ ನೀಡಿರುವುದು ಇಲ್ಲಿಯ ವೈಶಿಷ್ಟ್ಯ. ಗ್ರಾಮಸಮಾಜವನ್ನು ಗಮನದಲ್ಲಿರಿಸಿಕೊಂಡು ವಿಧಿಸಲ್ಪಟ್ಟಂಥವು ಇವು. ನ್ಯಾಯಪಂಚಾಯಿತಿಗೆ ಮಾನ್ಯತೆ ನೀಡಿದ್ದು, ಇದರಲ್ಲಿ ಸಂಸ್ಥಾನ (ಕಾಮಗೇತಲ ಗುರಪೀಠ)ದ ಪೀಠಾಧಿಕಾರಿ(ಮೊಖ್ತೇಸರ - ಪ್ರಧಾನ ಅಧಿಕಾರಿ)ಯಾಗಿರುತ್ತಿದ್ದು, ಈತನ ಅಧೀನದಲ್ಲಿ ಕ್ರಮವಾಗಿ ಈ ಕೆಳಕಂಡವರಿರುತ್ತಿದ್ದರು:

೧. ಕಟ್ಟೆಮನೆ ಗೌಡ
೨. ಯಜಮಾನ
೩. ಮುಖ್ಯಸ್ಥರು
೪. ಕಟ್ಟೆಮನೆಗೆ ಸೇರಿದ ಗ್ರಾಮದ ಮುಖ್ಯಸ್ಥರು.

ಆಯಾ ಅಪರಾಧ ಅಥವಾ ದುರ್ನಡತೆಗಳಿಗೆ ತಕ್ಕಂತೆ ವಿಚಾರಣೆ-ತೀರ್ಪು-ತೀರ್ಮಾನ-ಶಿಕ್ಷೆ-ಬಹಿಷ್ಕಾರ ಇತ್ಯಾದಿಗಳು ಜಾರಿಯಲ್ಲಿರಬೇಕೆಂಬ 'ಕಟ್ಟಾಜ್ಞೆ'ಗಳೇ ನೀತಿ-ನಿಬಂಧನೆಗಳ ರೂಪದಲ್ಲಿ ಇಲ್ಲಿ ಸಾಲಾಗಿ ಕಂಡುಬರುತ್ತವೆ. ವಾಲ್ಮೀಕಮತಸ್ಥರು ಈ ನೀತಿ-ನಿಬಂಧನೆಗಳಿಗೆ ಹೇಗೆ ಪ್ರತಿಕ್ರಿಯಿಸಿದರೆಂಬುದು ಸರಿಯಾಗಿ ತಿಳಿದುಬರುವುದಿಲ್ಲ. ಇವುಗಳನ್ನು ಹೇಗೆ ಕಾರ್ಯರೂಪಕ್ಕೆ ತರಲಾಯಿತೆಂಬುದರ ಬಗೆಗೂ ಸ್ಪಷ್ಟ ಮಾಹಿತಿಯಿಲ್ಲ. ಆದರೆ ಈ ಸಮುದಾಯದ ಕೆಲವು ಪ್ರಗತಿಪರರು ಹಾಗೂ ವಿದ್ಯಾವಂತರು ಸಾಮಾಜಿಕ ಸಮಸ್ಯೆಗಳನ್ನು ಸುಧಾರಿಸುವ ನಿಟ್ಟಿನಲ್ಲಿ ಇಲ್ಲಿಯ ಕೆಲವು ನಿಬಂಧನೆಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸಿದ್ದರೆಂದು ತಿಳಿದುಬರುತ್ತದೆ. ಭಾರತ ಸ್ವಾತಂತ್ರ್ಯ ಹೋರಾಟದ ಕಾವು ದೇಶವನ್ನೆ ಆವರಿಸಿದ್ದಾಗ, ಇಂಥಾ ಸುಧಾರಣಾ ತತ್ವಗಳಿಗೆ ಕೆಲವರಾದರೂ ಬೆಲೆಕೊಟ್ಟಿರಬಹುದು.

---

* ವಿವರಗಳಿಗೆ, ಇದೇ ಸಂಪುಟದಲ್ಲಿ ಪ್ರಕಟಗೊಂಡಿರುವ ೧. ಡಾ.ವಿರೂಪಾಕ್ಷಿ ಪೂಜಾರಹಳ್ಳಿಯವರ 'ಬೇಡರ ಕಟ್ಟೆಮನೆಗಳ ನ್ಯಾಯಪಂಚಾಯಿತಿ', ೨. ಡಾ.ಮೀರಾಸಾಬಿಹಳ್ಳಿ ಶಿವಣ್ಣನವರ 'ನಾಯಕನಹಟ್ಟಿ ಪಾಳೆಯಗಾರರ ನ್ಯಾಯಾಡಳಿತ', ೩. ಡಾ.ಎಂ.ಕೆ.ದುರಗಪ್ಪನವರ 'ಕನಕಗಿರಿ ಪಾಳೆಯಗಾರರ ನ್ಯಾಯಾಡಳಿತ' ಹಾಗೂ ೪. ಡಾ.ಅಮರೇಶ ಯತಗಲ್‌ರವರ 'ದೇವದುರ್ಗ ಸಂಸ್ಥಾನಿಕರ ನ್ಯಾಯಾಡಳಿತ' ಲೇಖನಗಳನ್ನು ಗಮನಿಸಬಹುದು.

ಅಲ್ಲದೆ, ಪಾಳೆಯಗಾರ ವ್ಯವಸ್ಥೆಯಲ್ಲಿ ಬೇಡರ ಕಟ್ಟೆಮನೆಗಳಿಗೆ ಸಂಬಂಧಿಸಿದ ನಿಬಂಧನೆಗಳು ಇತರ ಸಂಸ್ಥಾನಿಕರಲ್ಲೂ ಒಂದೇ ತೆರನಾಗಿದ್ದಂತೆ ಕಂಡುಬರುವುದರಿಂದ, ಆಗೆಲ್ಲ ಇಂಥಾ ನೀತಿ-ನಿಬಂಧನೆಗಳು ಸಾರ್ವತ್ರಿಕವಾಗಿದ್ದವೆನ್ನಬಹುದು. ಕಳೆದ ಶತಮಾನದಲ್ಲೂ ಇವುಗಳನ್ನು ಪ್ರಚಾರಮಾಡುವ ಮಟ್ಟಿಗೆ ಬಿ.ಡಿ.ಮದಕರಿನಾಯಕರಂಥವರು ಕಾರ್ಯಪ್ರವೃತ್ತರಾಗಿದ್ದರೆನ್ನಬೇಕು. ಏನೇ ಇದ್ದರೂ ಕಾಲಾನಂತರದಲ್ಲಿ ಗುರುಪೀಠಕ್ಕೆ ಸಲ್ಲಬೇಕಿದ್ದ 'ಕಾಣಿಕೆ'ಯು 'ಬಲತ್ಕಾರ ವಸೂಲಿ'ಯ ಸ್ವರೂಪ ಪಡೆದುಕೊಂಡಿದ್ದರೆ ಆಶ್ಚರ್ಯ ಪಡಬೇಕಿಲ್ಲ.

ಬೇಡರ ಕಟ್ಟೆಮನೆಗಳ ನ್ಯಾಯಪಂಚಾಯಿತಿಗೆ ಸಂಬಂಧಿಸಿದಂತೆ, ಆಯಾ ಕಾಲಘಟ್ಟಗಳಲ್ಲಿ ಜಾರಿಯಲ್ಲಿದ್ದ ನೀತಿ-ನಿಬಂಧನೆಗಳನ್ನು ಅರಿಯಲು ಹಾಗೂ ಅಧ್ಯಯನಿಸಲು ಇಂಥಾ ದಾಖಲೆಯೂ ನೆರವಾಗಬಲ್ಲದೆಂಬ ಕಾರಣಕ್ಕೆ ಇದನ್ನು ಇಲ್ಲಿ ಪುನರ್ ಮುದ್ರಿಸಿದೆ.

## ಅನುಬಂಧ ೧

## 'ಓಂ'

## ಶ್ರೀ ವಾಲ್ಮೀಕಮತೋದ್ಧಾರಕ ಪ್ರಚಾರಕ ಪತ್ರ

**ಉತ್ಪತ್ತಿ**

ಬ್ರಹ್ಮಋಷಿಯಾದ ವಲ್ಮೀಕಮಹರ್ಷಿಯ ೭ ಜನ ಮಕ್ಕಳ ಪೈಕಿ ಹಿರಿಯಮಗ ಗುರುಪೀಠಾಧಿಕಾರಿಯಾದ ಕಾಮಗೇತಲನೆಂಬುವರ ಹೊಟ್ಟೆಯಲ್ಲಿ ನಮ್ಮ ಹಿರಿಯರಾದ ಮೂಲಪುರುಷ ಚಿತ್ರನಾಯಕರು ಜನಿಸಿ, ಈ ಮತ ಉದ್ಧಾರಮಾಡಲೋಸುಗ ಅನೇಕ ಬೆಡಗುಗಳು ಅಥವಾ ವಳಭೇದಗಳನ್ನು ವಿಂಗಡಿಸಿದರು. ಇವೆಲ್ಲವನ್ನು ಇವರಲ್ಲಿ ಮೈತ್ರತ್ವವು, ಬಾಂಧವ್ಯವು, ವಕ್ಕಟ್ಟು ಸ್ಥಿರವಾಗಿ ನೆಲಗೊಳಲಿಕ್ಕೆ ಬೇರೆ ಬೇರೆ ಸ್ಥಾನಗಳನ್ನು ಕಲ್ಪಿಸಿಕೊಟ್ಟರು. ಇವರಿಗೆಲ್ಲ ಕಾಮಗೇತಲ ಪೀಠವೆ ಗುರುಪೀಠವೇ ಹೊರ್ತು ಮತ್ತೆ ಯಾವದೂ ಇಲ್ಲ. ಈ ಗುರುಪೀಠದಿಂದ ಪಡೆದ ಅಥವಾ ಇವರ ಗೋತ್ರ ಅಥವಾ ಬೆಡಗನ್ನು ಹೇಳುವ ಅಥವಾ ಇದಕ್ಕೆ ಸಂಬಂಧಪಟ್ಟ ಬೆಡಗಿನವರು ಗುರುಪೀಠಾಧಿಕಾರಿಗಳಿಂದ ಅಧಿಕಾರಹೊಂದಿ ಈ ಮತದಲ್ಲಿ ಆಚಾರ ವಿಚಾರ ತೀರಿಸಬಹುದಾಗಿರುತ್ತೆ. ಈ ವಾಲ್ಮೀಕ ಮತದವರಲ್ಲಿ ಏಳು ಅಜ್ಜನವರೆಂದು ಹೇಳುವುದುಂಟು. ಆ ಪೈಕಿ ಮೇಸನಾಯಕರು ಊರನಾಯ್ಕರು ಎಂಬುವರು ಒಬ್ಬ ಅಜ್ಜನ ಸಂತತಿಯವರು. ಬಾಕಿ ೬ ಜನರು ಆಯಾ ಅಜ್ಜನ ಸಂತತಿಯವರು. ಇವರಿಂದ ವಡೆದ ಬೆಡಗುಗಳು, ಇವರು ಆಚರಿಸುವ ಪದ್ಧತಿ ವಗೈರೆ ಕಾಮಗೇತಿ ಧೊರೆ ಚಿತ್ರನಾಯಕರಿಂದ ನಿರ್ಣಯಿಸಿದ್ದು ಮುಂದೆ ಪ್ರಚಾರಗೊಳಿಸುತ್ತೇವೆ. "ನಾಯಕ" ಎಂಬ ಮಾತಿಗೆ ಯಜಮಾನ ಅಥವಾ ಶ್ರೇಷ್ಠನೆಂದರ್ಥವಾಗುತ್ತೆ. ಈ ಮತವನ್ನು ಸ್ಥಾಪಿಸಿದವರು ನಮ್ಮ ಮೂಲಪುರುಷ ಕಾಮಗೇತಿ ಗುರುಪರಂಪರೆಯನ್ನು ಹಿಡಿದ ನಾವು ಈ ಮತ ಆಚಾರ ವಿಚಾರಕ್ಕೆ ಬಾಧ್ಯರಾಗಿರುತ್ತೇವೆ.

## ಕಟ್ಟೆಮನೆ

ಈ ವಾಲ್ಮೀಕಮತದವರು, ತಮ್ಮ ಆಚಾರ ವಿಚಾರ ಮಾಡಿಕೊಳ್ಳಲಿಕ್ಕೂ, ಶುಭಾಶುಭ ಕಾರ್ಯಗಳಿಗೂ ಸಹ ತಕ್ಷಣ ವಟ್ಟುಗೂಡತಕ್ಕ ಅನುಕೂಲವಾದ ಸ್ಥಳಕ್ಕೆ ಕಟ್ಟೆಮನೆ ಎಂದರ್ಥ. ಗುರುಪೀಠಾಧಿಕಾರಿಗಳು ಈ ಮತದ ಅನುಕೂಲಕ್ಕಾಗಿ ಹೊಸದಾಗಿ ಕಟ್ಟೆಮನೆ ಸ್ಥಾಪಿಸಲಿಕ್ಕೂ ಕಾಲಾನುಗುಣ್ಯವಾಗಿ ತೆಗೆದುಹಾಕಲಿಕ್ಕೂ, ಅಲ್ಲಲ್ಲಿ ಹೊಸ ಅಧಿಕಾರಿಗಳನ್ನು ಮತಪದ್ಧತಿ ಪ್ರಕಾರ ನಿಯಾಮಿಸಲಿಕ್ಕೂ, ಕಾರಣಾಂತರದಿಂದ ಅಂಥವರನ್ನು ತೆಗೆದು ಹಾಕಲಿಕ್ಕೂ ಸಹ ಪೀಠಾಧಿಕಾರಿಗಳು ಸರ್ವ ಸ್ವತಂತ್ರರಾಗಿರುತ್ತಾರೆ. ಈ ರೀತಿ ಸ್ಥಾಪಿಸಲ್ಪಟ್ಟ ಕಟ್ಟೆಮನೆಯಲ್ಲಿ ವಾಲ್ಮೀಕಮತದವರಿಂದ ವಪ್ಪಿ ಪೀಠಾಧಿಕಾರಿಗಳಿಂದ ನಿಯಮಿಸಲ್ಪಟ್ಟು ಅಧಿಕಾರಪತ್ರ ಪಡೆದು ಇರುವವರು, ಪೀಠಾಧಿಕಾರಿಗಳ ಆಜ್ಞೆಯಂತೆ ಆಚಾರ ತೀರಿಸುತ್ತಾ ಮತೋದ್ಧಾರ ಮಾಡಲಿಕ್ಕೆ ಬೇಕಾಗುವ ಸುಸಲಹೆಗಳನ್ನು ಕೊಡುತ್ತಾ ಬರಬೇಕು.

## ಪೂರ್ವ ಮತ್ತು ಈಗಿನ ಸ್ಥಿತಿ

ಪೂರ್ವದಲ್ಲಿ ಈ ಮತದವರು ಯುದ್ಧಾಸಕ್ತರಾದ್ದರಿಂದ ವಿದ್ಯಾಭ್ಯಾಸ ಮಾಡಲು ಅನುಕೂಲಿಸದೆ ಹೋಯ್ತು. ಆ ಕಾಲವು ಹೋಗಿ ಈಗ ಬ್ರಿಟಿಷ್ ಸಾರ್ವಭೌಮರ ಪ್ರಭುತ್ವದಲ್ಲಿ ಶಾಂತತೆಯು ಸ್ಥಿರವಾಗಿ ನೆಲೆಗೊಂಡಿದ್ದರಿಂದ ನಮ್ಮ ಶ್ರೀಮನ್ಮ ಮಹಾರಾಜಾಸಾಹೇಬ್ ಬಹದ್ದೂರವರು ವಿದ್ಯಕ್ಕೆ ಹೆಚ್ಚಿಗೆ ಪ್ರಾಶಸ್ತತೆಯನ್ನು ಕೊಟ್ಟು ಹಿಂದುಳಿದವರಿಗೆ ಸಕಲ ಸಹಾಯವನ್ನು ಮಾಡುತ್ತಿರುವುದರಿಂದ ನಾವುಗಳು ಈ ಸಮಯದಲ್ಲಿಯೂ ಹಿಂದುಳಿದಿರುವುದು ನಮ್ಮಗಳ ಮೌಢ್ಯವೆಂದರಿತು ಹಿಂದೆ ಯುದ್ಧದಲ್ಲಿ ಆಸಕ್ತರಾಗಿ ಎಷ್ಟೋ ಪ್ರಶಸ್ತತೆಯನ್ನು ನಾವು ಪಡೆದಿದ್ದೇವೋ ಹಾಗೆಯೇ ಈಗ ವಿದ್ಯೆಯಲ್ಲಿ ಪ್ರಾಶಸ್ತತೆಯನ್ನು ಪಡೆದು ಪ್ರಸಿದ್ಧರಾಗಲು ಸ್ಥಿರಪ್ರಯತ್ನ ಮಾಡೋಣ. ಈ ಡಿಸ್ಟ್ರಿಕ್ಟಿನಲ್ಲಿ ವಾಲ್ಮೀಕಮತದವರು ೯೬ ಸಾವಿರ ಜನರಿರುತ್ತಾರೆ. ೧೦೦೦, ಇವರಲ್ಲಿ ೧೦೦ಕ್ಕೆ ೩ರಂತೆ ವಿದ್ಯಾವಂತರು ಇಲ್ಲವೆಂದು ಹೇಳುವುದು ಆಶ್ಚರ್ಯವಲ್ಲ! ಬಹುಭಾಗದ ಜನರು ವ್ಯವಸಾಯ ಮಾಡತಕ್ಕವರಾಗಿರುತ್ತಾರೆ. ಇವರ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಬೇಕಾದರೆ ಹಿಂದೆ ಇವರು ಹ್ಯಾಗೆ ಮತವಗ್ಗಟ್ಟಿನಿಂದ ಅನೇಕ ರಾಜ್ಯಗಳನ್ನು ಗೆದ್ದರೋ ಹಾಗೆಯೇ ಈಗಲೂ ವಿದ್ಯಾ ಎಂಬ ರಾಜ್ಯವನ್ನು ವಗ್ಗಟ್ಟಿನಿಂದ ಸ್ಥಿರಪ್ರಯತ್ನ ಮಾಡಿ ಗೆಲ್ಲಬೇಕೆಂಬುದನ್ನು ಜ್ಞಾಪಕದಲ್ಲಿಡಬೇಕು.

## ನಾವು ಯೇನು ಮಾಡಬೇಕು?

ನಾವು ವಿದ್ಯೆಯನ್ನು ಹರಡಲಿಕ್ಕೆ ಮುಂಚೆ ನಾವು ನಮ್ಮ ಮನೆಯ ಯಜಮಾನಿಕೆಯನ್ನು ವಹಿಸಿ ಕಾರ್ಯವನ್ನು ನಿರ್ವಹಿಸುವ ಶಕ್ತಿಯನ್ನು ಪಡೆಯಬೇಕು. ಹ್ಯಾಗೆಂದರೆ, ಪ್ರತಿಯೊಂದು ಗ್ರಾಮದ ವಾಲ್ಮೀಕಮತದವರು ತಮ್ಮ ತಮ್ಮ ಗ್ರಾಮಗಳಲ್ಲಿ ಅವಶ್ಯಕವಾಗಿ ಗುರು ಪೀಠಾಧಿಕಾರಿಗಳಿಂದ ತಮ್ಮ ಮತದ ಆಚಾರ ವಿಚಾರ ಬಾಬಿನಲ್ಲಿ ಅಧಿಕಾರ ಹೊಂದಿದ ಅಲ್ಲಿನ ಮುಖ್ಯ ಯಜಮಾನ ಮುಂತಾದವರ ಆಧೀನದಲ್ಲಿದ್ದು ಐಕ್ಯಮತ್ಯದಿಂದ

ಇಲ್ಲದಲ್ಲದೆ ಯಾವ ಮಹತ್ಕಾರ್ಯವನ್ನೂ ಮಾಡಲಿಕ್ಕೆ ಮಾರ್ಗವಾಗುವುದಿಲ್ಲ. ಮತೋದ್ಧಾರಕ್ಕೆ ಐಕ್ಯಮತ್ಯವೇ ಬಲ. ಐಕ್ಯಮತ್ಯದಿಂದ ಬಹುಜಾಗ್ರತೆ ನಮ್ಮ ಉದ್ದೇಶ ಗಳನ್ನು ನೆರವೇರಿಸಿಕೊಳ್ಳಬಹುದು. ಆದ್ದರಿಂದ ನಾವುಗಳೆಲ್ಲರೂ ಒಂದೇ ಮನಸ್ಕರಾಗಿ ನಾವು ಮಾಡಬೇಕೆಂದಿರುವ ಸದುದ್ದೇಶವನ್ನು ನೆರವೇರಿಸುವವರಿಗೂ ಯಾವ ವಿಘ್ನಬಂದರೂ ಹೆದರದೆ ಸ್ಥಿರಪ್ರಯತ್ನದಿಂದ ಮುಂದಿನ ಲಕ್ಷ್ಯದ ಮೇಲೆ ದೃಷ್ಟಿಯಿಟ್ಟು ಕೆಲಸ ಮಾಡಬೇಕು.

**ಕಟ್ಟೆಮನೆ ಎಲ್ಲಿರಬೇಕು? ಆಚಾರ ವಿಚಾರ, ನ್ಯಾಯಸ್ಥಾನ, ತೀರ್ಮಾನ**

ಹಿಂದೆ ನಾವು ಹೇಳಿದ ಪ್ರಕಾರ ಒಂದೊಂದು ಗ್ರಾಮಕ್ಕೆ ಅಲ್ಲಿನ ವಾಲ್ಮೀಕನಾಯಕರ ಪೈಕಿ ಯಜಮಾನ ಮೊದಲಾದವರನ್ನು ಸ್ಥಾಪಿಸಿದಂತೆ ಆಯ್ತು. ಅಂದರೆ, ಅಲ್ಲಲ್ಲಿಯೇ ಆಯಾ ಗ್ರಾಮದವರೇ ಮತವಿಚಾರದಲ್ಲಿ ಒಬ್ಬ ನೇಮಕವಾದ ಮೇಲ್ಪಸ್ತಿನ ಅಧಿಕಾರಿಯಿಂದ ಗ್ರಾಮಗಳು ವಗ್ಗಟ್ಟಿಗೆ ಬಂದಹಾಗೆ ಆಯ್ತು. ಹಿಂದಿನಕಾಲದಲ್ಲಿ ಆಚಾರ ವಿಚಾರ ತೀರಿಸಲು ಕೆಲವು ಕಟ್ಟೆಮನೆಯಂತೆ ಗೊತ್ತುಮಾಡಿದ್ದರು. ಆಗಿನ ಕಾಲಕ್ಕೆ ಅವು ಅನುಕೂಲಿಸಿದ್ದವು. ಅವುಗಳನ್ನು ಈಗ ತೆಗೆದುಹಾಕತಕ್ಕದ್ದೂ ಇಲ್ಲ. ಆಗ್ಯೆ ಅವು ಎಷ್ಟು ದೂರ ಫಾಸಲೆ ಇದ್ದಾಗ್ಯೂ ಅಲ್ಲಿಗೆ ಎಲ್ಲಾ ವಾಲ್ಮೀಕಮತದವರು ಸೇರಲೇಬೇಕಾಗಿತ್ತು. ಅಲ್ಲಿ ತೀರ್ಮಾನವಾಗುವ ನ್ಯಾಯವು ಅನ್ಯಾಯವಾದಾಗ್ಯೂ ನ್ಯಾಯವೆಂದು ಭಾವಿಸಬೇಕಾಗಿತ್ತು. ಅಲ್ಲಿನ ಕಟ್ಟೆಮನೆ ಯಜಮಾನ ಮುಂತಾದವರು ಸ್ವಾತಂತ್ರರಾಗಿ ಇತರೇಯವರನ್ನು ಹಿಂಸಿಸಲಿಕ್ಕೂ ಪಾರ್ಟಿಗಳು ಕಲ್ಪನೆಯಾಗಿ ಮತದ ಕಟ್ಟು ಒಡೆಯಲಿಕ್ಕೂ ಪ್ರಾರಂಭವಾಯ್ತು. ಬೇರೆ ಮತದವರು ನಮ್ಮಲ್ಲಿ ಬೆರತು ತಮ್ಮ ಸ್ವಪ್ರಯೋಜನಕ್ಕಾಗಿ ಈ ಮತಕ್ಕೆ ಇದ್ದ ಗೌರವವನ್ನು ಹಾಳುಮಾಡಿ ಕೋರ್ಟು ಕಚೇರಿಗಳಿಗೆ ಎಳೆಯುತ್ತಿರುತ್ತಾರೆ. ಇದೆಲ್ಲವನ್ನು ನಮ್ಮ ಸ್ವಾನುಭವದಿಂದ ತಿಳಿದು ಈ ಮತವನ್ನು ಉದ್ಧಾರ ಮಾಡಲೋಸುಗ ಮೇಲೆ ಹೇಳಿದ ಪ್ರಕಾರ ಆಯಾ ಗ್ರಾಮದ ಯಜಮಾನತ್ವವನ್ನು ಆಯಾ ಗ್ರಾಮದವರೇ ವಹಿಸುವುದರಿಂದ ಪಾರ್ಟಿವ್ಯಾಜ್ಯಗಳು ನಿರ್ಮೂಲವಾಗಿ ಅವರೇ ನಿರ್ವಾಹಶಕ್ತಿಯುಳ್ಳವರಾಗುತ್ತಾರೆ. ಇಂಥವರು ಪ್ರತಿ ಗ್ರಾಮಕ್ಕೂ ೩ ಅಥವಾ ೪ ಜನರಂತೆ ದೊರೆತರೆ ಸಾಕಾಗಿರುತ್ತೆ.

ಒಂದೊಂದು ದೊಡ್ಡ ಗ್ರಾಮದ ಸುತ್ತು ೩ ರಿಂದ ೫ ಮೈಲಿ ಫಾಸಲೆವಳಗೆ ಇದ್ದ ಚಿಕ್ಕ ಗ್ರಾಮಗಳ ಮೇಲೆ ಹೇಳಿದ ಮುಖ್ಯ ಯಜಮಾನರು ವಗೈರೇರು ಸಮೀಪದ ದೊಡ್ಡ ಗ್ರಾಮಕ್ಕೆ ಕೂಡಲೆ ಬರುವಹಾಗೆ ಮಾಡಿ ದೊಡ್ಡ ಗ್ರಾಮದ ಯಜಮಾನ ಮುಖ್ಯಸ್ತರು ಬಳಗದವರೂ ಸಹ ವಟ್ಟು ಸೇರಿ ಆಚಾರ ವಿಚಾರ ಪೀಠಾಧಿಕಾರಿಗಳಿಂದ ನಿಯಮಿಸಲ್ಪಟ್ಟ ವರಿಂದ ತೀರಿಸಿಕೊಳ್ಳಬೇಕು. ಮತ್ತು ಆಚಾರ ಸಂಬಂಧ ಯಾವುದಾದರು ತಪ್ಪು ನೇಮಕ ವಾದ ದೊಡ್ಡ ಗ್ರಾಮದ ಗುಂಪಿಗೆ ಸೇರಿದ ಚಿಕ್ಕ ಗ್ರಾಮಗಳಲ್ಲಿ ಎಲ್ಲಿಯಾದರೂ ನಡೆದರೂ ಕೂಡಲೇ ಆ ಗ್ರಾಮದ ಯಜಮಾನರು ಆ ವಿಷಯ ಆಯಾ ಗ್ರಾಮದ ಮುಖ್ಯಸ್ತರಿಗೆ (ಅಂದರೆ ನಿಯಾಮಕವಾದ ಗ್ರಾಮಗಳಿಗೆ ಮಾತ್ರ) ಬಯಲ್ಪಪಡಿಸಿ ಈ ವಿಷಯ

ಪೀಠಾಧಿಕಾರಿಗಳಿಗೆ ಬಿನ್ನಹಪತ್ರ ಬರೆದುಕೊಳ್ಳಬೇಕು. ಕೂಡ್ಲೆ ಪೀಠಾಧಿಕಾರಿಗಳು ಹೀರಿಂಗು ಯಿಟ್ಟು ಮುಂದಿನ ಕ್ರಮ ನಡೆಸಲಿಕ್ಕೆ ಅಪ್ಪಣೆಮಾಡಿದ ಪ್ರಕಾರ ನಡೆಯತಕ್ಕದಿದೆ. ಈರೀತಿ ವಾಲ್ಮೀಕಮತದವರು ನೆಲಸಿರುವ ಎಲ್ಲಾ ತಾಲ್ಲೂಕಿನವರು ಏಕಮಸ್ಕರಾಗಿ ವರ್ತಿಸಿ ಮತೋದ್ಧಾರ ವಿದ್ಯಾ ಪ್ರೋತ್ಸಾಹವನ್ನು ಪಡಿಸಿ ನಮ್ಮ ಮನೋರಥವನ್ನು ಈಡೇರಿಸುತ್ತಾರೆಂದು ನಂಬಿರುತ್ತೇವೆ.

ಮತದ ಆಚಾರ ವಿಚಾರ ಬಾಬಿನಲ್ಲಿಯು ಮತ್ತು ಈ ಮತದ ಪ್ರಚಾರಕ ಪುಸ್ತಕಗಳನ್ನು ಜಾಗ್ರತೆ ಪ್ರಿಂಟ್‌ಮಾಡ್ಸಿ ಸಿದ್ಧಗೊಳಿಸುತ್ತೇವೆ.

ಚಿತ್ರದುರ್ಗ — ಬಿಚ್ಚುಕತ್ತಿ ದೊಡ್ಡಮದಕರಿನಾಯ್ಕರು

೨.೧.೧೯೧೬ — ಚಿತ್ರದುರ್ಗದ ಶೀಮೆ ವಾಲ್ಮೀಕಮತಕ್ಕೆ ಮೊಖ್ತೇಸರರು

## ಅನುಬಂಧ ೨

||ಓಂ||

||ಶ್ರೀ ಉತ್ಸವಾಂಬ ಪ್ರಸನ್ನ ||

ಚಿತ್ರದುರ್ಗದ ಸೀಮೆ ವಾಲ್ಮೀಕಮತ ಆಚಾರ ವಿಚಾರಕ್ಕೆ ಮೊಕ್ತೇಸರರಾದ
ಶ್ರೀಮನ್‌ಮಹಾನಾಯ್ಕಚಾರ್ಯ, ನಾಯ್ಕಶಿರೋಮಣಿ, ಕಾಮಗೇತಿ ಕಸ್ತೂರಿ
ದೊಡ್ಡಮದಕರಿ ನಾಯ್ಕರವರು

ಕಟ್ಟೆಮನೆ ಮತ್ತು ಕಟ್ಟೆಮನೆಗೆ ಸೇರಿದ ಗ್ರಾಮಗಳಲ್ಲಿ ನೆಲಸಿರುವ ವಾಲ್ಮೀಕಮತದವರಲ್ಲಿ ಈ ಕೆಳಕಂಡ ಜಾರಿಯಲ್ಲಿರುವ ನಿಬಂಧನೆಗಳು ಅಥವಾ ರೂಲ್ಸು:

೧. ಈ ಆಡಳಿತ, ಈ ಕಟ್ಟೆಮನೆಗೆ ನಿಯಮಿಸಿರತಕ್ಕ ಗೌಡ, ಯಜಮಾನ ಮತ್ತು ಮುಖ್ಯಸ್ಥರಿಂದಲು; ಮತ್ತು ಕಟ್ಟೆಮನೆಗೆ ಸೇರಿದ ಆಯಾಗ್ರಾಮಗಳಲ್ಲಿ ನಿಯಮಿಸಲ್ಪಟ್ಟ ಮುಖ್ಯಸ್ಥರಿಂದ ನಡೆಯತಕ್ಕದ್ದಾಗಿರುತ್ತೆ.

೨. ಅನೂಚೀನವಾಗಿದ್ದ ಹಿಂದಿನ ಪದ್ಧತಿಗಳನ್ನು, ಈ ಕಾಲದ ಮೇರೆಗೆ ತಿದ್ದಿ ಸರಿಪಡಿಸಿ ಯಿದೆ. ಈ ನಿಬಂಧನೆಗಳು ಸಂಸ್ಥಾನದಲ್ಲಿ ಪೀಠಾಧಿಕಾರಿಗಳಿಂದ ಆರ್ಡರ್ ಆದಲಾಗಾಯ್ತು ಜಾರಿಯಲ್ಲಿರತಕ್ಕದ್ದು.

೩. ಕಟ್ಟೆಮನೆಗೆ ಬರತಕ್ಕ ಪ್ರತಿಯೊಂದು ಫಿರ್ಯಾದು ಬರಹದಲ್ಲಿಯೇ ಇರಬೇಕು. ಬಂದ ಫಿರ್ಯಾದನ್ನು ಮತ್ತು ಆದ ತೀರ್ಮಾನವನ್ನು ಸಹ ಬೇರೆ ಪುಸ್ತಕದಲ್ಲಿ ಬರೆಯಬೇಕು.

೪. ನಿಬಂಧನೆ "೬, ೭, ೧೩, ೧೪ ಮತ್ತು ೧೫" ಇವುಗಳನ್ನೊಳಗೊಂಡು ಫಿರ್ಯಾದಿಯ ಪೈಸಲಿಗೆ ಒಂದು ತಿಂಗಳೊಳಗಾಗಿ ಸಂಸ್ಥಾನದ ಪೀಠಾಧಿಕಾರಿಗಳಲ್ಲಿ ಅಪೀಲ್ ಮಾಡಬಹುದು.

೫. ಈ ಕಟ್ಟೆಮನೆಗೆ ಬರತಕ್ಕ ಅಥವಾ ಬಂದ "೬ ರಿಂದ ೧೬"ನೇ ನಿಬಂಧನೆಗಳೊಳಗೊಂಡ ಫಿರ್ಯಾದುಗಳು ವಿಚಾರವಾಗಿ ವಿಲೇವಾರಿಯಾಗಿ ಆರುತಿಂಗಳಿಗೊಮ್ಮೆ ಪೀಠಾಧಿಕಾರಿಗಳಲ್ಲಿಗೆ ರಿಪೋರ್ಟು ಮಾಡಬೇಕು.

೬. ಕಟ್ಟೆಮನೆಯವರಿಗೆ ಅಗೌರವಪಡಿಸಿದರೆ: ಕರೆಸಿದರೆ ಬರುವುದಿಲ್ಲವೆಂದು ಹೇಳಿದವರಿಗೆ ರುಜುವಾತು ಬಂದರೆ ಫಿ.ಇ.ಸಂ.೫ ರೂಪಾಯಿನಂತೆ, ದಂಡಾ ವಿಧಿಸಬೇಕು. ಈ ದಂಡಾ ಕೊಡದೆ ಹೋದರೆ ಅಂಥವರಲ್ಲಿ ಬಳಕೆ, ಭೋಜನ ನಿಲ್ಲಿಸಿ ಸಂಸ್ಥಾನದ ಪೀಠಾಧಿಕಾರಿಗಳಿಗೆ ಅರಿಕೆ ಮಾಡಿಕೊಂಡು, ಅಲ್ಲಿನ ಆರ್ಡರಿನಂತೆ ನಡೆಯುವುದು.

೭. ಈ ಮತದವರಲ್ಲಿ ಪಾದರಕ್ಷೆ ಪ್ರಯೋಗ ಮಾಡಿಸಿಕೊಂಡವರಿಗೆ ರುಜುವಾತು ಬಂದರೆ ೧೫ ರೂಪಾಯಿ ದಂಡ ಮತ್ತು ಪಾದರಕ್ಷೆಯನ್ನು ಎತ್ತಿದವರಿಗೆ ೨೫ ರೂಪಾಯಿ ದಂಡ ವಿಧಿಸತಕ್ಕದ್ದು. ಮತ್ತು ಪದ್ಧತಿ ಪ್ರಕಾರ ಪ್ರಾಯಶ್ಚಿತ್ತವಾಗತಕ್ಕದ್ದು.

೮. ಈ ಮತದವರಲ್ಲಿ ಸೂಳೆಯರನ್ನು ಬಿಡಕೂಡದಾಗಿ ಈ ಹಿಂದೆಯೇ ಆಜ್ಞೆಯಾಗಿರುತ್ತೆ. ಆಜ್ಞೆ ಮೀರಿಬಿಟ್ಟಿರುವುದಾಗಿ ಕಟ್ಟೆಮನೆಗೆ ರಿಪೋರ್ಟು ಬಂದರೆ, ಪದ್ಧತಿಮೇರೆಗೆ ಬಳಕೆ, ಭೋಜನ ವಗೈರೆಗಳಿಗೆ ಕಟ್ಟುಮಾಡಿ, ಸಂಸ್ಥಾನದ ಪೀಠಾಧಿಕಾರಿಗಳಿಗೆ ಅರಿಕೆ ಮಾಡಿಕೊಂಡು ಮುಂದೆ ಅಪ್ಪಣೆಯಾಗುವಂತೆ ನಡೆಯಬೇಕು. ೨. ಈ ಹಿಂದೆಯಿದ್ದ ಈ ಮತದ ಸೂಳೆಯರನ್ನು, ಇತರ ಮತದವರ್‍ಯಾರು ರಖಾವು ಮಾಡಿಕೊಳ್ಳಕೂಡದು. ಹಾಗೆ ರಖಾವು ಮಾಡಿಕೊಂಡವರಲ್ಲಿ ಯಾರೂ ಬಳಕೆ, ಭೋಜನ ವಗೈರೆ ಮಾಡ ಕೂಡದು. ಹಾಗೆ ಮಾಡಿದ್ದು ರುಜುವಾತು ಬರುವಪಕ್ಷ ಸಂಸ್ಥಾನದ ಪೀಠಾಧಿಕಾರಿಗಳಲ್ಲಿ ಅರಿಕೆ ಮಾಡಿಕೊಂಡು ಮುಂದೆ ಅಪ್ಪಣೆಯಾದಂತೆ ನಡೆಯುವುದು. ೩. ಸೂಳೆಯರು ಪರಸ್ಥಳಗಳಿಗೆ ಹೋಗಬೇಕಾದರೆ ಆಯಾ ಗ್ರಾಮದಲ್ಲಿನ ಈ ಮತದ ಮುಖ್ಯಸ್ಥರ ಅಪ್ಪಣೆ ಪಡೆದು ಹೋಗಬೇಕು. ಹಾಗೆ ಅಪ್ಪಣೆ ಪಡೆಯದೆ ಹೋದರೆ ಫಿ. ಇ. ಸಂ. ೫ ರೂಪಾಯಿ ದಂಡಾ ಕೊಡಬೇಕು. ಲನೇ ನಿಬಂಧನೆಯ ೨ನೇ ವಳನಿಬಂಧನೆಗೆ ಆಜ್ಞೆ ತಿರಸ್ಕಾರಕ್ಕೆ ಫಿ. ಇ. ಸಂ.೧೦ ರೂಪಾಯಿನಂತೆ ದಂಡಾಕೊಡಬೇಕು.

೯. ಗಂಡಸತ್ತವರು ಹೊಸದಾಗಿ ಮುದ್ರೆ ಹೊರಸಿಕೊಳ್ಳುವುದು ಮತವಿರೋಧವಾದದ್ದು. ಈ ವಿಚಾರದಲ್ಲಿ ಕಟ್ಟೆಮನೆಗೆ ಫಿರ್‍ಯಾದು ಬಂದರೆ ಬಳಕೆ, ಭೋಜನ ನಿಲ್ಲಿಸಿ ಸಂಸ್ಥಾನದ ಪೀಠಾಧಿಕಾರಿಗಳಿಗೆ ರಿಪೋರ್ಟು ಮಾಡಿ ಮುಂದೆ ಅಪ್ಪಣೆಯಾದಂತೆ ನಡೆಯುವುದು.

೧೦. ಗಂಡಸತ್ತವರು ಗರ್ಭಿಣಿಯರಾದರೆ, ಹೆತ್ತರೆ ಈ ವಿಚಾರವಾಗಿ ಕಟ್ಟೆಮನೆಗೆ ಫಿರ್‍ಯಾದು ಬಂದರೆ ರುಜುವಾತು ಬರುವ ಪಕ್ಷ ಸಂಸ್ಥಾನಕ್ಕೆ ೫೦ ರೂಪಾಯಿ ದಂಡವು ಮತ್ತು ಕುಲಕ್ಕೆ ಊಟ ಸಹ ಕೊಡಬೇಕು. ಕುಲದವರು ಊಟಕ್ಕೆ ಬದಲು ಹಣವನ್ನು ತೆಗೆದುಕೊಳ್ಳಬಹುದು.

೧೧. ಕನ್ಯೆ ಹುಡುಗಿಯರು ಹಾದರತನದಿಂದ ವಿವಾಹಕ್ಕೆ ಮುಂಚಿತವಾಗಿಯೇ ಗರ್ಭಿಣಿಯ ರಾದರೆ ಸ್ವಮತದವರಾದರೆ, ಸಂಸ್ಥಾನಕ್ಕೆ ೫೦ ರೂಪಾಯಿ ದಂಡವನ್ನು ಕುಲಕ್ಕೆ ಊಟವನ್ನು ಕೊಡಬೇಕು. ಕುಲದವರು ಊಟಕ್ಕೆ ಬದಲು ಹಣವನ್ನು ತೆಗೆದು

ಕೊಳ್ಳಬಹುದು. ೨. ಒಂದೇ ಬೆಡಗಿನ ಸ್ತ್ರೀಪುರುಷರು ಸಂಪರ್ಕ ಮಾಡಿದ್ದು ಫಿರ್ಯಾದು ಬಂದು ರುಜುವಾತು ಆಗುವಪಕ್ಷಕ್ಕೆ ಸಂಸ್ಥಾನಕ್ಕೆ ೫೦ ರೂಪಾಯಿ ದಂಡವನ್ನು ಕುಲಕ್ಕೆ ಊಟವನ್ನು ಕೊಡಬೇಕು. ಕುಲದವರು ಊಟಕ್ಕೆ ಬದಲು ಹಣವನ್ನು ತೆಗೆದುಕೊಳ್ಳಬಹುದು.

೧೨. ಗಂಡಸತ್ತವಳು ಹಾದರತನ ಮಾಡಿದ್ದು ಫಿರ್ಯಾದು ಬಂದು ರುಜುವಾತು ಬರುವ ಪಕ್ಷ ಸಂಸ್ಥಾನಕ್ಕೆ ೫೦ ರೂಪಾಯಿ ದಂಡವನ್ನು ಕುಲಕ್ಕೆ ಊಟ ಸಹ ಕೊಡಬೇಕು. ಕುಲದವರು ಊಟಕ್ಕೆ ಬದಲು ಹಣವನ್ನು ತೆಗೆದುಕೊಳ್ಳಬಹುದು.

೧೩. ವಾಲ್ಮೀಕಮತಕ್ಕೆ ವಿರೋಧವಾಗಿ ಅಂದರೆ ೧. ಮದ್ಯಪಾನ ಮಾಡುವುದು, ೨. ಹಂದಿ ೩. ದನ ೪. ಕೋಳಿ ಇವುಗಳನ್ನು ತಿನ್ನುವುದು, ೫. ಅನ್ಯಜಾತಿಯವರಿಂದ ವುಗುಳಿಶಿ ಕೊಳ್ಳುವದು, ಈ ಅಕೃತ್ಯಗಳನ್ನು ನಡೆಸಿದ್ದು ಫಿರ್ಯಾದು ಬಂದು ರುಜುವಾತು ಬರುವಪಕ್ಷ ಫಿ.ಇ.ಸಂ.೫ ರೂಪಾಯಿನಂತೆ ದಂಡಾ ಕೊಡಬೇಕು. ಮತಪದ್ಧತಿಪ್ರಕಾರ ಪ್ರಾಯಶ್ಚಿತ್ತ ಮಾಡಿಸಿಕೊಳ್ಳಬೇಕು.

೧೪. ಗಂಡಸರು ಕುಲಹೀನ ಸ್ತ್ರೀಯರಲ್ಲಿ ವ್ಯಭಿಚಾರನಡಿಸಿದ್ದು ಫಿರ್ಯಾದು ಬಂದು ರುಜುವಾತು ಬರುವಪಕ್ಷ ೨೫ ರೂಪಾಯಿ ದಂಡಾ ಕೊಡಬೇಕು.

೧೫. ಈ ಮತದವರು ಬ್ರಾಹ್ಮಣ, ಲಿಂಗಾಯಿತ ಮತದವರ ವಿನಃ ಮತ್ಯಾವ ಇತರೆ ಮತದವರಲ್ಲಿಯು ಅಂದರೆ ಕಬ್ಬಾರು, ಹಾಲುಮತ, ಉಪ್ಪಾರು, ಕಮ್ಮಾರು, ಬಡಗಿ, ಅಕ್ಕಸಾಲೆ, ಬೆಸ್ತುವ ವಗೈರೆ ಇವರಲ್ಲಿ ಊಟಮಾಡಕೂಡದು. ಹಾಗೆಮಾಡಿದ್ದು ರುಜುವಾತು ಬರುವಪಕ್ಷ ಫಿ.ಇ.ಸಂ.೧೦ ರೂಪಾಯಿನಂತೆ ದಂಡಾ ಕೊಡಬೇಕು.

೧೬. ಗಂಡಸತ್ತವಳು ವ್ಯಭಿಚಾರನಡಿಸಲಿಕ್ಕೆ ಬದಲಾಗಿ ಉಡಿಕೆ ಮಾಡಿಕೊಳ್ಳಬಹುದು. ಈ ರೀತಿ ರಿಪೋರ್ಟು ಬಂದರೆ ವಿಚಾರದಿಂದ ಗಂಡನ ಮನೆಗೆ ಬರುವ ವಡಿವೆ ವಗೈರೆಯನ್ನು ಮತ್ತು ಬಿಡುಗಡೆಗೆ ೧೦ ರೂಪಾಯಿ ಪರಿಹಾರದ್ರವ್ಯವನ್ನು ಕೊಡಬೇಕು. ಕುಲಕ್ಕೆ ಊಟ ಮತ್ತು ಸಂಸ್ಥಾನಕ್ಕೆ ೨೦ ರೂಪಾಯಿ ಕೊಡಬೇಕು. ಕುಲದವರು ಊಟಕ್ಕೆ ಬದಲು ಹಣವನ್ನು ತೆಗೆದುಕೊಳ್ಳಬಹುದು.

೧೭. ಸಂಸ್ಥಾನಕ್ಕೆ ಪ್ರತಿವರುಷವೂ ಕಟ್ಟೆಮನೆಗೆ ಸೇರಿದ ಗ್ರಾಮಗಳಲ್ಲಿ ನೆಲೆಸಿರತಕ್ಕ ವಾಲ್ಮೀಕಮತದವರಿಂದ ಒಂದುರೂಪಾಯಿನಂತೆ ಕಾಣಿಕೆ ವಸೂಲ್ಮಾಡಿ ಸಂಸ್ಥಾನದಿಂದ ಪೀಠಾಧಿಕಾರಿಗಳ ಸವಾರಿ ಮಕ್ಕಾಂಮಾಡಿದ ಕಾಲದಲ್ಲಿ ಒಪ್ಪಿಸಬೇಕು. ಇಲ್ಲವೇ ಸಂಸ್ಥಾನಕ್ಕಾದರೂ ಒಪ್ಪಿಸುವುದು. ಈ ಒಂದುರೂಪಾಯಿ ಕಾಣಿಕೆಯನ್ನು ಯುಗಾದಿ ಮತ್ತು ದಸರಾ ಎಂಬುವ ಆರುತಿಂಗಳಿಗೊಂದುಸಾರಿ ವಸೂಲ್ಮಾಡಬಹುದು. ಕಟ್ಟೆಮನೆಗೆ ಬರತಕ್ಕ ದಂಡರೂಪವಾದ ಮೊಬಲಗನ್ನು ಮೂರುಭಾಗ ಮಾಡಿ ಅಂದರೆ ೬, ೭, ಲನೇ ವಳನಿಬಂಧನೆ ೨; ೩; ೧೩; ೧೪; ೧೫ ಇವುಗಳಲ್ಲಿನ ಮುಂದೆ ಹೇಳತಕ್ಕ ಆಚಾರಕಾಣಿಕೆ ಎಂದು ಅರಮನೆಕಾಣಿಕೆ ಎಂದು ಎರಡು ಭಾಗ

ಪೀಠಾಧಿಕಾರಿಗಳಿಗೂ ಉಳಿಯುವ ಒಂದು ಭಾಗವನ್ನು ಕುಲಕ್ಕೆ ವಿನಿಯೋಗಿಸಬೇಕು. ಕುಲದವರು ಊಟಕ್ಕೆ ಬದಲಾಗಿ ಹಣವನ್ನಾದರೂ ತೆಗೆದುಕೊಳ್ಳಬಹುದು.

೧೮. ಕಟ್ಟೆಗೆ ಸೇರಿದ ಗ್ರಾಮಗಳಲ್ಲಿ ಲಗ್ನವಾದರೆ ಗೌಡನಿಗೆ ಮತ್ತು ಕೋಲುಕಾರನಿಗೆ ಫಿ.ಇ.ಸಂ. ಒಂದುರೂಪಾಯಿನಂತೆಯೂ ಸಂಸ್ಥಾನಕ್ಕೆ ಗಂಡುಹೆಣ್ಣಿನ ಕಡೆಯಿಂದ ಫಿ.ಇ.ಸಂ. ಒಂದುರೂಪಾಯಿನಂತೆ ಕೊಡಬೇಕು.

೧೯. ಈ ನಿಬಂಧನೆಗಳ ಪೈಕಿ "೮, ೯, ೧೦, ೧೧, ೧೨, ೧೬" ಇವುಗಳನ್ನೊಳಕೊಂಡ ಅಂಶಕ್ಕೆ ಕಟ್ಟೆಮನೆಗೆ ಫಿರ್ಯಾದುಬಂದರೆ ಅಲ್ಲಿನ ರಿಜಿಸ್ಟರಿಗೆ ಕೇಸುದಾಖಲೆ ಮಾಡಿಕೊಂಡು, ಪ್ರತಿವಾದಿಗಳಿಗೆ ಈ ಕೇಸು ಪೈಸಲಾಗುವವರಿಗು ಬಳಕೆ, ಭೋಜನ ವಗೈರೆ ವ್ಯವಹಾರಗಳನ್ನು ನಿಲ್ಲಿಸುವಂತೆ ಕಟ್ಟುಮಾಡಿ, ಮುಂದಿನ ನಡೆವಳಿಕೆ ಮತ್ತು ವ್ಯವಸ್ತೆ ಬಗ್ಗೆ ಸಂಸ್ಥಾನದ ಪೀಠಾಧಿಕಾರಿಗಳಿಗೆ ರಿಕಾರ್ಡು ರವಾನಿಸುವುದು.

೨೦. ನಿಬಂಧನೆ ೬, ೮, ೯ನೇ ವಳನಿಬಂಧನೆ ೨ ಮತ್ತು ೩, ೧೩, ೧೪, ೧೫ ಇವುಗಳನ್ನೊಳಗೊಂಡ ಅಂಶಕ್ಕೆ ಕಟ್ಟೆಮನೆಗೆ ಫಿರ್ಯಾದು ಬಂದರೆ ಕುಲದಗೌಡ, ಯಜಮಾನ, ಮುಖ್ಯಸ್ಥರು ಮತ್ತು ನಿಸ್ಪಕ್ಷಪಾತಿಗಳಾದ ದೈವದವರನ್ನು ಪಂಚಾಯಿತರನ್ನಾಗಿ ನಿಯಮಿಸಿಕೊಂಡು, ವಿಚಾರ ನಡಿಸಿ ತೀರ್ಮಾನಹೇಳಿ, ಫೈಸಲಾದ ರಿಕಾರ್ಡನ್ನು ಪೀಠಾಧಿಕಾರಿಗಳಲ್ಲಿಗೆ ರವಾನಿಸತಕ್ಕದ್ದು.

೨೧. ಭಯಿಷ್ಕಾರವನ್ನು ಹಾಕತಕ್ಕ ವಗೈರೆ ಹೆಚ್ಚಿನ ಅಧಿಕಾರವನ್ನು ಸಂಸ್ಥಾನದ ಪೀಠಾಧಿಕಾರಿಗಳು ಉಳಿಸಿಕೊಂಡಿರುತ್ತಾರೆ. ಕಟ್ಟೆಮನೆಗೌಡ, ಯಜಮಾನ, ಮುಖ್ಯಸ್ಥರು ಕಟ್ಟೆಮನೆಗೆ ಬಂದ ಫಿರ್ಯಾದನ್ನು, ನಡವಳಿಕೆಯಂತೆ ಫೈಸಲ್ ಆಗುವ ವರಿಗೂ ಬಳಕೆ ಭೋಜನ ವಗೈರೆ ಮಾಡಕೂಡದೆಂದು ಕಟ್ಟುಮಾಡಬಹುದು.

೨೨. ಕಟ್ಟೆಮನೆಗಳಲ್ಲಿನ ಲೆಖ್ಖವಗೈರೆಗಳನ್ನು ತನಿಖೆಮಾಡಲು ಸಂಸ್ಥಾನದಪರವಾಗಿ ಅಧಿಕಾರಪತ್ರವನ್ನು ಹೊಂದಿದ ಸೂಪ್ರುವೈಜರ್‌ಗಳು ಬಂದರೆ ಅವರುಗಳಿಗೆ ಲೆಖ್ಖ ವಗೈರೆಯನ್ನು ಹಾಜರ್ ಮಾಡಬೇಕು.

೨೩. ಈ ಹಿಂದೆಯಿದ್ದ ನಿಬಂಧನೆಗಳನ್ನು ರದ್ದುಮಾಡಿರುತ್ತೆ.

ಚಿತ್ರದುರ್ಗದ ಶೀಮೆ ವಾಲ್ಮೀಕಮತ ಆಚಾರ ವಿಚಾರಕ್ಕೆ ಮೊಕ್ತೇಸರರು.

೧

# ಚಿತ್ರದುರ್ಗ ನಾಯಕ ಅರಸರ ನ್ಯಾಯಾಡಳಿತ

**ಪ್ರೊ. ಲಕ್ಷ್ಮಣ್ ತೆಲಗಾವಿ**

ಚಿತ್ರದುರ್ಗ ನಾಯಕ ಅರಸರ ಆಡಳಿತಾವಧಿಯಲ್ಲಿ ಪ್ರಚಲಿತವಿದ್ದ ನ್ಯಾಯಾಡಳಿತ ಸ್ವರೂಪವು ಅವರಿಗೆ ಸಂಬಂಧಿಸಿದ ಶಾಸನ, ದಾಖಲೆ, ಕಾಗದ-ಪತ್ರ ಇತ್ಯಾದಿ ಆಕರಗಳಲ್ಲಿ ಕಂಡುಬರುತ್ತದೆ. ಈ ನಾಯಕ ಅರಸರ 'ವಂಶಾವಳಿ'ಯಲ್ಲಿ ಸೇರಿರುವ 'ಆಯಗಾರರ ನಿರ್ಣಯ'ದಲ್ಲಿಯೂ ಕೆಲವು ವ್ಯಾಜ್ಯಗಳ ವಿವರ ದೊರೆಯುತ್ತದೆ. ಅಲ್ಲದೆ, ಪ್ರತ್ಯೇಕ ದಾಖಲೆಗಳ ರೂಪದಲ್ಲಿಯೂ ಈ ವ್ಯಾಜ್ಯಗಳ ವಿವರ ಸಂಗ್ರಹಗೊಂಡಿದೆ. ಸಾಮಾನ್ಯವಾಗಿ 'ಆಯಗಾರರ ನಿರ್ಣಯ' ವಿಭಾಗದಲ್ಲಿಯ ವ್ಯಾಜ್ಯಗಳು ಆಯಾ ಜನಸಮುದಾಯಗಳ ಕುಲಸಂಬಂಧಿ ವಿವರವನ್ನು ಒಳಗೊಂಡಿರುತ್ತವೆ. ಆಯಾ ಕುಲಗಳ ಪೂರ್ವನೆಲೆ, ವಲಸೆಗೆ ಕಾರಣ, ಸಾಗಿಸಿ ತಂದ ದೇವತೆಗಳು, ಕುಲಾಚಾರಗಳು, ಆಶ್ರಯಿಸಿದ ರಾಜರು, ಆಯ್ಕೆ ಮಾಡಿಕೊಂಡ ಹೊಸ ವಾಸದ ನೆಲೆ, ಪಡೆದುಕೊಂಡ ಗೌಡಿಕೆಯ ಸ್ವಾಸ್ತಿವಿವರ ಇನ್ನಿತರ ಸಂಗತಿಗಳನ್ನು ಸಂಗ್ರಹವಾಗಿ ನಿರೂಪಿಸುತ್ತವೆ. ಹೊಸನೆಲೆಯಲ್ಲಿ ಹುಟ್ಟಿಕೊಂಡ ಸ್ಥಳದ ಒಡೆತನದ ಹಕ್ಕಿಗೆ ಸಂಬಂಧಿಸಿದ ವ್ಯಾಜ್ಯಗಳನ್ನೂ ತೀರ್ಮಾನಗಳನ್ನೂ ಇವು ಒಳಗೊಂಡಿವೆ. ಇಂಥಾ ಕೆಲವು ವ್ಯಾಜ್ಯಗಳನ್ನೂ ವಿವಾದಗಳನ್ನೂ ಇಲ್ಲಿ ಪರಿಶೀಲಿಸಲು ಪ್ರಯತ್ನಿಸಿದೆ. ಹಾಗೆಯೇ, ಅಪರಾಧಸ್ವರೂಪದಲ್ಲಿರುವ ಒಂದು ಪ್ರಕರಣವನ್ನೂ ವ್ಯಾಜ್ಯವೊಂದಕ್ಕೆ ಸಂಬಂಧಿಸಿದ ಸಾಕ್ಷ್ಯಗಳನ್ನೂ ಇಲ್ಲಿ ಪ್ರಸ್ತಾಪಿಸಿದೆ.

ವಿಜಯನಗರದ ಸಾಮಂತರಾಗಿ ಚಿತ್ರದುರ್ಗ ಪ್ರದೇಶದಲ್ಲಿ ಆಳ್ವಿಕೆಯನ್ನಾರಂಭಿಸಿದ ಚಿತ್ರದುರ್ಗ ನಾಯಕ ಅರಸರಲ್ಲಿ ಮೊದಲಿಗನೆಂದರೆ ಮತ್ತಿ ತಿಮ್ಮಣ್ಣನಾಯಕ (೧೫೬೮-೧೫೮೮). ಚಿತ್ರದುರ್ಗವನ್ನು ಕೇಂದ್ರವಾಗಿಸಿಕೊಂಡು ಆಳ್ವಿಕೆ ನಡೆಸಿದ ಈತನ ಪೀಳಿಗೆಯವರು (ಒಟ್ಟು ೧೩ ಮಂದಿ) ೨೧೧ ವರುಷಗಳ ಕಾಲ, ಅಂದರೆ ೧೫೬೮ ರಿಂದ ೧೭೭೯ರ ವರೆಗೆ ಇಲ್ಲಿ ಆಳ್ವಿಕೆ ನಡೆಸಿದರು. ಮತ್ತಿ ತಿಮ್ಮಣ್ಣನಾಯಕನ ತರುವಾಯ ಚಿತ್ರದುರ್ಗವನ್ನು ಆಳಿದ ಅರಸರುಗಳೆಂದರೆ, ಒಂದನೇ ಓಬಣ್ಣನಾಯಕ (ಠಾಣ್ಯದ ಓಬಳನಾಯಕ/ ಅಣ್ಣಗಾರ ಓಬಣ್ಣ/ ಗಡ್ಡದ ಮದಕರಿನಾಯಕ) (೧೫೮೮-೧೬೦೨), ಒಂದನೇ ಕಸ್ತೂರಿ

ರಂಗಪ್ಪನಾಯಕ (೧೬೭೨-೧೬೫೨), ಇಮ್ಮಡಿ ಮದಕರಿನಾಯಕ (೧೬೫೨-೧೬೭೫), ಇಮ್ಮಡಿ ಓಬಣ್ಣನಾಯಕ (೧೬೭೫), ಚಿಕ್ಕಣ್ಣನಾಯಕ (೧೬೭೫-೧೬೮೬), ಮುಮ್ಮಡಿ ಮದಕರಿನಾಯಕ (ಲಿಂಗಣ್ಣನಾಯಕ) (೧೬೮೬-೧೬೮೮), ದೊಣ್ಣೆರಂಗಪ್ಪನಾಯಕ (೧೬೮೮), ಸೂರ್ಯಕಾಂತಿ ರಂಗಪ್ಪನಾಯಕ (೧೬೮೯), ಬಿಚ್ಚುಗತ್ತಿ ಭರಮಣ್ಣನಾಯಕ (೧೬೮೯-೧೭೨೧), ಹಿರೇಮದಕರಿನಾಯಕ (೧೭೨೧-೧೭೪೯), ಇಮ್ಮಡಿ ಕಸ್ತೂರಿರಂಗಪ್ಪನಾಯಕ (೧೭೪೯-೧೭೫೪) ಮತ್ತು ರಾಜಾ ವೀರಮದಕರಿನಾಯಕ (೧೭೫೪-೧೭೭೯).

ಈ ಅರಸರ ಪೈಕಿ ಎರಡನೆಯವನಾದ ಒಂದನೇ ಓಬಣ್ಣನಾಯಕನ ಅವಧಿಯಲ್ಲಿ ಈ ಪೀಳಿಗೆಯವರು ಸ್ವತಂತ್ರರಾಗಿ ಆಳ್ವಿಕೆ ನಡೆಸಲಾರಂಭಿಸಿದರು. 'ವಾಲ್ಮೀಕಿಗೋತ್ರದ ಶ್ರೀಮನ್ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ' ಎಂಬುದು ಇವರ ಅಭಿಧಾನ (ನಾಮಧೇಯ). ಹಗಲುಕಗ್ಗೊಲೆಯಮಾನ್ಯ, ಗಂಡುಗೊಡಲಿಯಸರ್ಜಾ, ಗಾಧುರಿಮಲೆ ಹೆಬ್ಬುಲಿ, ಚಂದ್ರಗಾವಿಥಲದಾಂಕ್ಯ, ಧೂಳ್‌ಕೋಟೆವಜೀರ ಮೊದಲಾದವು ಈ ಅರಸರು ಧರಿಸಿಕೊಂಡ ಬಿರುದುಗಳು. ಈ ಅರಸರು ರಣಪರಾಕ್ರಮಿಗಳು; ಧರ್ಮನಿಷ್ಠರು; ನ್ಯಾಯಪಕ್ಷಪಾತಿಗಳು; ಗುರುವರ್ಗದಲ್ಲಿ ಅಪಾರ ಭಕ್ತಿಯುಳ್ಳವರು. ಮುಖ್ಯವಾಗಿ, ಪ್ರಜಾವತ್ಸಲರಾಗಿ ಪರಂಪರೆಗೆ ಧಕ್ಕೆಯುಂಟಾಗದಂತೆ ಪಕ್ಷಪಾತರಹಿತ ರಾಜನೀತಿಯನ್ನು ರೂಪಿಸಿದ ನಿಪುಣರು. ಇವರು ಕೃಷಿ, ವಾಣಿಜ್ಯ, ಕೈಗಾರಿಕೆಗಳನ್ನು ಪೋಷಿಸಿದರು ಮಾತ್ರವಲ್ಲದೆ, ತಮ್ಮ ರಾಜ್ಯದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಪರಿಸ್ಥಿತಿಗಳನ್ನು ಸುಧಾರಿಸಲು, ಸಂರಕ್ಷಿಸಲು ಪ್ರಯತ್ನಿಸಿದರು. ಇವರ ಚರಿತ್ರೆ ವ್ಯಕ್ತಪಡಿಸುವಂತೆ, ಇವರು ನ್ಯಾಯನಿಷ್ಠುರರಾದರೂ ಪ್ರಜೆಗಳಿಗೆ ಹೊರೆಯೆನಿಸದ ರಾಜಧರ್ಮವನ್ನು ಪರಿಪಾಲಿಸಿದವರು; ಅವರೊಡನೆ ಸಹಕಾರ, ಸಹನೆ, ಸೌಹಾರ್ದತೆಗಳನ್ನು ಉಳಿಸಿಕೊಂಡು ಬಂದವರು.

ಚಿತ್ರದುರ್ಗ ನಾಯಕ ಅರಸರ ಕಾಲದ ನ್ಯಾಯಾಡಳಿತವು ಅನೂಚಾನವಾಗಿ ಬಂದ ವಿಧಿ-ವಿಧಾನಗಳನ್ನೆ ಅನುಸರಿಸಿದ್ದಿತು. ಈ ಅರಸರಿಗೆ ಸಂಬಂಧಿಸಿದ ಕೆಲವು ಶಾಸನಗಳು ಹಾಗೂ ದಾಖಲೆಗಳು ಇವರ ಅವಧಿಯ ನ್ಯಾಯವಿಧಾನದ ಮೇಲೆ ಬೆಳಕು ಚೆಲ್ಲುತ್ತವೆ. ಹಿಂದೂ ನ್ಯಾಯಪದ್ಧತಿಯಂತೆ ನ್ಯಾಯಾಧಿಪತಿಯಾಗಿರುತ್ತಿದ್ದವನು ಅರಸನೇ. ಹಿಂದಿನಿಂದಲೂ ರೂಢಿಯಲ್ಲಿದ್ದ ಇದೇ ಪದ್ಧತಿ ಚಿತ್ರದುರ್ಗ ನಾಯಕ ಅರಸರ ಕಾಲದಲ್ಲೂ ಮುಂದುವರೆದಿದ್ದಿತು. ಸಾಮಾನ್ಯವಾಗಿ ಎಲ್ಲ ವಿವಾದಗಳ ನ್ಯಾಯತೀರ್ಮಾನ ನಡೆಯುತ್ತಿದ್ದುದು ರಾಜಧಾನಿಯಾಗಿದ್ದ ಚಿತ್ರದುರ್ಗದಲ್ಲಿಯೇ. ಮೇಲುದುರ್ಗದ (ಬೆಟ್ಟದ ಮೇಲಿದ್ದ) ರಾಜದರ್ಬಾರು ಅಥವಾ ನ್ಯಾಯಾಲಯವನ್ನು 'ಮಹಾರಾಜೇಶ್ರೀ ಹುಜೂರು' ಅಥವಾ 'ಹುಜೂರು' ಎನ್ನಲಾಗುತ್ತಿತ್ತು. ವ್ಯಾಜ್ಯಗಾರರು ತಮ್ಮ ತಮ್ಮ ದೂರು/ಮನವಿಗಳನ್ನು ಮೇಲುದುರ್ಗದ ಚಾವಡಿ ಅಥವಾ ಅರಮನೆ-ಕಚೇರಿಯಲ್ಲಿ ದಾಖಲಿಸುತ್ತಿದ್ದರು. ಆದರೆ ನ್ಯಾಯವಿಚಾರಣೆ ಮತ್ತು ತೀರ್ಮಾನಗಳು ಸರ್ವಮಾನ್ಯವಾದ ಯಾವುದೇ ಎಡೆಯಲ್ಲಿ ನಡೆಯಬಹುದಿತ್ತು. ಇತರೆಡೆಗಳಲ್ಲಿದ್ದಂತೆ, ನ್ಯಾಯತೀರ್ಮಾನಕ್ಕೆಂದು ಸಮಸ್ತರು ಸೇರುತ್ತಿದ್ದ

ಸಾರ್ವಜನಿಕ ಸ್ಥಳಗಳೆಂದರೆ ಅರಳೀಮರದಕಟ್ಟೆ, ದೇವಾಲಯ, ಅಯ್ಯನವರ ಚಾವಡಿ, ಪಂಚಾಯಿತಿಕಟ್ಟೆ ಇತ್ಯಾದಿ. ಗ್ರಾಮೀಣ ನ್ಯಾಯಾಡಳಿತ ಪ್ರಚಲಿತವಿದ್ದ ಈ ಕಾಲದಲ್ಲಿ, ಗ್ರಾಮೀಣ ಹಂತದಲ್ಲಿ ತೀರ್ಮಾನಗೊಳ್ಳದ ವ್ಯಾಜ್ಯಗಳು ಮಾತ್ರ ಅಂತಿಮವಾಗಿ ಮೇಲುದುರ್ಗದ ರಾಜದರ್ಬಾರ್‌ನಲ್ಲಿ ಇತ್ಯರ್ಥಗೊಳ್ಳುತ್ತಿದ್ದವು.

ವ್ಯಾಜ್ಯಗಳನ್ನು ಬಗೆಹರಿಸುವಲ್ಲಿ ವಿಚಾರಣವಿಧಾನ ಮಾತ್ರವಲ್ಲದೆ, ವಿವಿಧ ಬಗೆಯ ಉಗ್ರಪರೀಕ್ಷೆ ಅಥವಾ ಸವಾಲುಗಳನ್ನೂ ಒಡ್ಡಲಾಗುತ್ತಿತ್ತು. ಇದೇ ದಿವ್ಯ(ದೈವ)ಪ್ರಮಾಣ. ಆದರೆ ಇಂಥಾ ಪರೀಕ್ಷೆಗಳು ಎದುರಾಗುತ್ತಿದ್ದುದು ಸಾಕ್ಷಿ-ಪುರಾವೆಗಳಿಲ್ಲದ ಅಥವಾ ನಂಬಿಕೆಗನರ್ಹವೆನಿಸುವ ಸಾಕ್ಷಿಗಳಿದ್ದ ವ್ಯಾಜ್ಯಗಳಿಗೆ ಸಂಬಂಧಿಸಿದಂತೆ ಮಾತ್ರ. ಇವು ನಿರ್ಣಯಗೊಳ್ಳುತ್ತಿದ್ದುದು ದೈವದವರು ಅಥವಾ ತೀರ್ಪುಗಾರರಿಂದ ಊರಿನ ಸಮಸ್ತರ (ಗ್ರಾಮ ಮುಖಂಡರ) ಸಮ್ಮುಖದಲ್ಲಿ. ನ್ಯಾಯದಾನ ಮಾಡುವ ಈ ದೈವದವರು ಸಮಾಜದ ವಿವಿಧ ದೇವರಒಕ್ಕಲು, ಜಾತಿ ಮತ್ತು ಕೇರಿಗಳಿಗೆ ಸೇರಿದ ಹಿರಿಯರಾಗಿರುತ್ತಿದ್ದರು. ಇಂಥವರು ತಮ್ಮ ವೈಯಕ್ತಿಕ ವರ್ಚಸ್ಸು, ವಿದ್ಯೆ, ನ್ಯಾಯಪರಿಜ್ಞಾನ ಇತ್ಯಾದಿ ಅರ್ಹತೆಗಳನ್ನು ಹೊಂದಿದ ಪ್ರಭಾವಶಾಲಿಗಳಾಗಿರುತ್ತಿದ್ದುದು ಸಹಜ. ಆಗೆಲ್ಲ ಆಚರಣೆಯಲ್ಲಿದ್ದ ಉಗ್ರಪರೀಕ್ಷೆಗಳೆಂದರೆ, ಕುದಿಯುವ ತುಪ್ಪ/ಎಣ್ಣೆಯಲ್ಲಿ ಕೈಯನ್ನು ಅದ್ದುವುದು, ಕಾದ ಕಬ್ಬಿಣದ ಸಲಾಕಿ/ಗುಂಡನ್ನು ಹಿಡಿಯುವುದು, ದಿಷ್ಟಿದೀವಿಗೆ, ಮುದ್ದೆತುಪ್ಪದಪ್ರಮಾಣ, ವಿಘ್ನೇಶ್ವರಶಾಸ್ತ್ರ ಓದಿಸುವುದು ಇತ್ಯಾದಿ. ಹಿರೇಮದಕರಿನಾಯಕನ ಕಾಲದಲ್ಲೆ ವ್ಯಾಜ್ಯವೊಂದರಲ್ಲಿ 'ವಿಘ್ನೇಶ್ವರಶಾಸ್ತ್ರ'ವನ್ನು ವಿಜ್ಞಾನೇಶ್ವರಶಾಸ್ತ್ರವೆಂದು ಸರಿಯಾಗಿ ಗುರುತಿಸಿದೆ.

ರಾಜನ ಆಸ್ಥಾನ ಅಥವಾ ಹುಜೂರಿನಲ್ಲಿ ನಡೆಯುತ್ತಿದ್ದ ನ್ಯಾಯತೀರ್ಮಾನ ಸಂದರ್ಭದಲ್ಲಿ ಮುಖ್ಯ ನ್ಯಾಯಾಧೀಶನ ಸ್ಥಾನದಲ್ಲಿರುತ್ತಿದ್ದ ಅರಸನೊಡನೆ ಆತನ ಪ್ರಧಾನರು, ದಳವಾಯಿಗಳು, ಕುಮಾರರು, ಅಳಿಯಂದಿರು, ಮೈದುನರು, ಪಾರುಪತ್ತೆಗಾರರು (ಅರಮನೆಗೆ ಸಂಬಂಧಿಸಿದ ಕರ್ತವ್ಯಗಳನ್ನು ನಿರ್ವಹಿಸುವ ಅಧಿಕಾರಿಗಳು), ಗುರಿಕಾರರು (ಸೇನಾ ನಾಯಕರು/ಮುಂದಾಳುಗಳು), ಊಳಿಗದವರು (ಅರಮನೆಯ ಪ್ರಮುಖ ನೌಕರರು), ಸಾಮಾಜಿಕರು (ಸಭಾಸದರು), ಸಮಸ್ತರು (ಗ್ರಾಮದ ಅಥವಾ ಕುಲದ ಹಿರಿಯರು) ಮೊದಲಾದವರು ಉಪಸ್ಥಿತರಿರುತ್ತಿದ್ದರೆಂಬುದು ಗಮನಿಸಬೇಕಾದ ಅಂಶ.

ಈ ನಾಯಕ ಅರಸರು ವಿಧಿಸುತ್ತಿದ್ದ ಶಿಕ್ಷೆಗಳು ಸಹಾ ವಿಜಯನಗರ ಕಾಲದಲ್ಲಿದ್ದ ಶಿಕ್ಷಾಪದ್ಧತಿಯಂತೆಯೇ ಇದ್ದುದನ್ನು ನೋಡಬಹುದು. 'ಸಿವಿಲ್' ಮತ್ತು 'ಕ್ರಿಮಿನಲ್' ಅಪರಾಧಗಳಿಗೆ ತಕ್ಕಂತೆ ಇವು ಜಾರಿಗೊಳ್ಳುತ್ತಿದ್ದವು. ರಾಜದ್ರೋಹದ ಅಪರಾಧ ಎಸಗಿದವರಿಗೆ, ಅರಸನ ವಿರುದ್ಧ ಅನುಚಿತ ಮಾತುಗಳನ್ನಾಡಿದವರಿಗೆ, ದುರ್ವರ್ತನೆ ತೋರಿದವರಿಗೆ ಕೆಲವು ಕಠಿಣಶಿಕ್ಷೆಗಳನ್ನು ಜಾರಿಗೊಳಿಸಲಾಗುತ್ತಿತ್ತು. ಉದಾಹರಣೆಗೆ, ಗಡಿಪಾರು, ಬೇಗಾರುಗಾಯ, ಕಾಲುಭೇದನ, ಗಲ್ಲುಚಡಾವು, ತಲೆಹೊಯ್ಯುವುದು (ಶಿರಭೇದನ), ಮರಣಾಂತಕ, ಮೂಗು ಕೊಯ್ಯಿಸುವುದು, ಹಲ್ಲುಗಳನ್ನು ಕೀಳಿಸುವುದು

ಮುಂತಾದವು ರೂಢಿಯಲ್ಲಿದ್ದವು. ಕ್ಷಮಾದಾನ, ವಾಗ್ದಂಡನೆ (ಬುದ್ಧಿಗಲಿಸುವುದು) ಸಹಾ ಅನುಸರಿಸಲಾಗುತ್ತಿತ್ತು. ಅರಸರೇ ಅಲ್ಲದೆ, ಸೇನಾ ನಾಯಕರೂ ನ್ಯಾಯನಿರ್ಣಯ ಕೈಗೊಂಡು ಶಿಕ್ಷೆಗಳನ್ನೂ ವಿಧಿಸುತ್ತಿದ್ದರು. ಇವೆಲ್ಲವೂ ಏಕವ್ಯಕ್ತಿ ಅಥವಾ ಏಕಮುಖಿ ತೀರ್ಮಾನಗಳಾಗಿರದೆ, ಆಯಾ ಸಂದರ್ಭಗಳಲ್ಲಿ ಕನಿಷ್ಠ ನ್ಯಾಯಪಂಚಾಯಿತಿಯ ವಿಧಾನವನ್ನು ಅನುಸರಿಸಲಾಗುತ್ತಿದ್ದಿತೆಂದು ತಿಳಿಯಬಹುದು. ಶಿಕ್ಷೆಯಾಗಿ ವಿಧಿಸಿದ ದಂಡವನ್ನು ವರಹಗಳ ರೂಪದಲ್ಲಿ ವಸೂಲು ಮಾಡಲಾಗುತ್ತಿತ್ತು. 'ಬೇಗಾರುಗಾಯ'ವೆಂಬ ಶಿಕ್ಷೆಯ ಸ್ವರೂಪ ಎಂಥದೋ ತಿಳಿಯದು. ಬಹುಶಃ ಇದು ಬಲತ್ಕಾರದ ದುಡಿಮೆ ಅಥವಾ ಬಿಟ್ಟಿದುಡಿಮೆ ಇರಬಹುದು.

ಇಲ್ಲಿ ಪ್ರಸ್ತಾಪಿಸಲಾಗಿರುವ ವ್ಯಾಜ್ಯ/ವಿವಾದ/ಅಪರಾಧ ಮುಂತಾದವು ಇಮ್ಮಡಿ ಮದಕರಿನಾಯಕ, ಮುಮ್ಮಡಿ ಮದಕರಿನಾಯಕ (ಲಿಂಗಣ್ಣನಾಯಕ), ಬಿಚ್ಚುಗತ್ತಿ ಭರಮಣ್ಣನಾಯಕ ಮತ್ತು ಹಿರೇಮದಕರಿನಾಯಕರ ಅವಧಿಯವು. ಈ ನಾಯಕರ ಸಂತತಿಗೆ ಸೇರಿದ ದೊಡ್ಡೇರಿಯ 'ಪಾಳ್ಯೇಗಾರ್ ಕಾಟ್ಟಪ್ಪನಾಯಕ'ರ ಅವಧಿ(೨೦ನೇ ಶ.)ಯಲ್ಲಿ ನಡೆದ ವ್ಯಾಜ್ಯವೊಂದರ ಸಾಕ್ಷ್ಯಗಳನ್ನು ಉದಾಹರಣಾರ್ಥ ಇಲ್ಲಿ ಪ್ರಸ್ತಾಪಿಸಲಾಗಿದೆ. ಈ ನಾಯಕರ ಅವಧಿಯ ಕೆಲವು ಅಪರಾಧ ಪ್ರಕರಣಗಳನ್ನು ಈ ಕೆಳಗಿನಂತೆ ಪ್ರಸ್ತಾಪಿಸಲಾಗಿದೆ; ಇವುಗಳ ನ್ಯಾಯನಿರ್ಣಯ ಸ್ವರೂಪವನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗಿದೆ:

**೧. ಇಮ್ಮಡಿ ಮದಕರಿನಾಯಕ (೧೬೫೨-೧೬೭೫)**

**ಅಪರಾಧ ೧:** ಹುಲ್ಲೂರು ವೀರಭದ್ರದೇವರಿಗೆ ಸಲ್ಲುವ ಆಸ್ತಿಯನ್ನು ಮಾರಿಕೊಂಡ ಅಪರಾಧ

**ಅಪರಾಧಿ :** ತಮ್ಮಡಿ ಉದ್ದಂಡ

**ತೇದಿ :** ೧೬೬೯ ಸೆಪ್ಟೆಂಬರ್ ೨೬ ಭಾನುವಾರ

**ನ್ಯಾಯತೀರ್ಮಾನವಾದ ಸ್ಥಳ :** ಮೇಲುದುರ್ಗ

ಈ ಪ್ರಕರಣವು ವ್ಯಾಜ್ಯಗಳ ಸಾಲಿಗೆ ಬರುವುದಿಲ್ಲವಾದರೂ ಅಪರಾಧವೆಸಗಿದ ವ್ಯಕ್ತಿಯನ್ನು ವಿಚಾರಣೆಗೊಳಪಡಿಸಿ ಆತನಿಗೆ ದಂಡ ವಿಧಿಸಿದ ಹಾಗೂ ಅದನ್ನು ಶಾಸನದ ರೂಪದಲ್ಲಿ ದಾಖಲಿಸಿದ ಸಂದರ್ಭಕ್ಕೆ ಉತ್ತಮ ಉದಾಹರಣೆಯಾಗಿದೆ. ಹುಲ್ಲೂರು (ಚಿತ್ರದುರ್ಗ ತಾಲ್ಲೂಕು) ವೀರಭದ್ರದೇವರ ತಮ್ಮಡಿ (ಪೂಜಾರಿ) ಉದ್ದಂಡನು 'ತನಗೆ ಗತಿಯಿಲ್ಲದೆ ತನ್ನ ವೀರಭದ್ರದೇವರ ಹೊಲಮನೆ, ಗದ್ದೆಗಳ ಸ್ವಾಮ್ಯವನ್ನು (ಸ್ವತ್ತನ್ನು) ಮಣಿಹದ ಮಲ್ಲಪ್ಪನಿಗೆ ೨೬ ವರಹಗಳಿಗೆ ಮಾರಿಕೊಂಡ' ಕಾರಣವಾಗಿ, ಆತನಿಗೆ ದುರ್ಗದ ದೊರೆ ಶ್ರೀಮನ್ಮಹಾನಾಯಕಾಚಾರ್ಯ ಕಾಮಗೇತಿ ಇಮ್ಮಡಿ ಮದಕರಿನಾಯಕನು (ಅಯ್ಯನವರು) ೨೩ ಹಣವನ್ನು ಅರಮನೆಗೆ (ನ್ಯಾಯಾಲಯಕ್ಕೆ) ದಂಡವಾಗಿ ತೆರುವಂತೆ ಆದೇಶಿಸುತ್ತಾನೆ. ಉದ್ದಂಡನು ತನ್ನ ದೇವರ ಆಸ್ತಿ ಮಾರಿದುದರ ಬಗೆಗೆ ದಳವಾಯಿ

ಗಿರಿಯಪ್ಪನು ವಿಚಾರಣೆ ನಡೆಸಿ ತೀರ್ಮಾನವನ್ನು ಶಾಸನ ಮಾಡಿಸಿದರೆ, ಅದಕ್ಕೆ ಸಾಕ್ಷಿಯಾಗಿ ನಿಲ್ಲುವವರೆಂದರೆ, ಗೌಡರ ಅಚ್ಚಣ್ಣ, ಸೇನಬೋಗ ಮಲ್ಲಣ್ಣ, ಬಡಗೇರ ಬಸವಣ್ಣ, ಕಮ್ಮಾರ ಪರುಮಣ್ಣ, ಅಕ್ಕಸಾಲಿಗರ ಜೋಗಣ್ಣ, ಗಣಾಚಾರಿ ದೊಡ್ಡಣ್ಣ, ತಮ್ಮಡಿ ಚೆನ್ನಣ್ಣ, ಪೂಜಾರಿ ತಿಮ್ಮದಾಸ, ಸಿದ್ದೇದೇವರ ಪೂಜಾರಿ ಬೋಳೊಡೆಯರು, ತಳವಾರ ಓಬಯ್ಯ, ಮೂಲಕರ್ತೃವಿನ ಓಬಯ್ಯ ಹಾಗೂ ಶ್ರೀಹರಿಹರಾದಿಗಳು (ದೇವತೆಗಳು).

ಪ್ರಸ್ತುತ ಪ್ರಕರಣವು ಬಿ.ಎಲ್.ರೈಸ್ ಅವರು ಪ್ರಕಟಿಸಿದ ಚಿತ್ರದುರ್ಗ ಜಿಲ್ಲೆಯ ಶಾಸನಗಳ ಸಂಪುಟದಲ್ಲಿ[೧] ಸೇರಿರುವ 'ಹುಲ್ಲೂರು ೨೨'ರ ಶಾಸನದಲ್ಲಿ ಪ್ರಸ್ತಾಪಗೊಂಡಿದೆ. ಡಾ.ಬಿ.ರಾಜಶೇಖರಪ್ಪನವರು ಇದರ ಪಾಠವನ್ನು ಪರಿಷ್ಕರಿಸಿ ಅಧ್ಯಯನಿಸಿದ್ದಾರೆ.[೨] ಇಲ್ಲಿ ಇವರು ಪರಿಷ್ಕರಿಸಿ ಪ್ರಕಟಿಸಿದ ಪಾಠವನ್ನೆ ಅನುಸರಿಸಿದೆ.

ಇಮ್ಮಡಿ ಮದಕರಿನಾಯಕನು, ತಮ್ಮಡಿ ಉದ್ದಂಡನ ವಿರುದ್ಧ ಅರಮನೆಗೆ ಬಂದ ದೂರಿನ ಹಿನ್ನೆಲೆಯಲ್ಲಿ ಸೂಕ್ತ ವಿಚಾರಣೆಗೆ ಆದೇಶಿಸಿ, ಅದು ಸಾಕ್ಷಿಸಹಿತ ದೃಢಪಟ್ಟನಂತರ ಶಿಕ್ಷೆಯನ್ನು ವಿಧಿಸಿದುದು ಸ್ಪಷ್ಟಪಡುತ್ತದೆ. ಈ ಅಪರಾಧ ಪ್ರಕರಣದ ನ್ಯಾಯವಿಚಾರಣೆಯ ಹೊಣೆಹೊತ್ತವನು ದುರ್ಗದ ದಳವಾಯಿ ಗಿರಿಯಪ್ಪ. ಇದಕ್ಕೆ ಸಾಕ್ಷಿಯಾದವರು ಹುಲ್ಲೂರುಗ್ರಾಮದ ೧೨ ಮಂದಿ ಕೈವಾಡದವರು ಹಾಗೂ 'ಶ್ರೀ ಹರಿಹರಾದಿಗಳು'. ಇಂಥಾ ಅನೀತಿಯುತ ಅಪರಾಧವು ಇತರ 'ದೇವರ ಆರಾಧಕ'ರಿಂದಲೂ ನಡೆಯಬಾರದೆಂಬ ಸಂದೇಶವನ್ನು ರವಾನಿಸಲೋಸುಗ ಈ ಪ್ರಕರಣ ಶಾಸನೋಕ್ತವಾದಂತಿದೆ. ಅಲ್ಲದೆ, ವೀರಭದ್ರದೇವರಗುಡಿಯಲ್ಲೆ ಈ ಶಾಸನದ ಕಲ್ಲನ್ನು ನೆಡಿಸಿದುದು ಈ ಅಪರಾಧದ ಗಂಭೀರತೆಯನ್ನು ಮನದಟ್ಟು ಮಾಡಿಸುತ್ತದೆ.

ತನ್ನ ದೇವರ ಆಸ್ತಿಯನ್ನೆ ಎತ್ತಿಹಾಕಿದಂಥಾ ಗುರುತರ ಅಪರಾಧವೆಸಗಿದ ಉದ್ದಂಡನನ್ನು ಆ ನಂತರ ವೀರಭದ್ರದೇವರ ಪೂಜಾರಿಯ ಸ್ಥಾನದಿಂದ ತೆಗೆದುಹಾಕಲಾಯಿತೊ ಇಲ್ಲವೊ ಸ್ಪಷ್ಟವಿಲ್ಲ. ಆದರೆ ಈ ಉದ್ದಂಡನು ಅಪರಾಧವೆಸಗಲು ತನ್ನ ದಾರಿದ್ರ್ಯದ ಕಾರಣ ನೀಡಿದುದು ಮಾತ್ರ ಮನಮಿಡಿಯುತ್ತದೆ. ಆಗ ಪೂಜಾರಿಕೆಯೆಂಬುದು ಸೇವಾಕಾರ್ಯ ವಾಗಿದ್ದಿತೇ ವಿನಾ ವೃತ್ತಿಯಾಗಿರಲಿಲ್ಲವೆಂಬುದು ವ್ಯಕ್ತಪಡುತ್ತದೆ. ವೀರಭದ್ರದೇವರ ಆಸ್ತಿಯಲ್ಲಿ (ಹುಟ್ಟುವಳಿಯಲ್ಲಿ) ಈತನಿಗೆ ನಿರ್ದಿಷ್ಟ ಪಾಲು ಸಲ್ಲುತ್ತಿತ್ತೊ ಇಲ್ಲವೋ ತಿಳಿಯದು; ಅಥವಾ ದುರಾಸೆಪೀಡಿತನಾಗಿ ಇಂಥಾ ಕೃತ್ಯ ಎಸಗಿದನೊ? ಏನೇ ಇದ್ದರೂ ಸಮಕಾಲೀನವಾಗಿ ನಡೆಯುತ್ತಿದ್ದ ಇಂಥಾ ಹಲವಾರು ಅಪರಾಧಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ಉದ್ದಂಡನಿಗೆ ಶಿಕ್ಷೆಗೊಳಪಡಿಸಿ ಶಾಸನವನ್ನೂ ಹಾಕಿಸಿದ ಉದಾಹರಣೆ ಇದೊಂದೇ ಇರಬೇಕು![೩]



ವೀರಭದ್ರದೇವರಗುಡಿ, ಹುಲ್ಲೂರು



ಗುಡಿಯ ಮುಂದಿರುವ ಶಾಸನಕಲ್ಲು



ಶಾಸನಪಾಠದಲ್ಲಿ ಕಂಡರಿಸಲಾದ ಗೋಂದಲಕ್ಕಿಡೆಮಾಡಿಕೊಟ್ಟಿರುವ ತೇದಿ

೨. ಮುಮ್ಮಡಿ ಮದಕರಿನಾಯಕ (ಲಿಂಗಣ್ಣನಾಯಕ) (೧೬೮೬-೧೬೮೮)

ವ್ಯಾಜ್ಯ ೧ : ಕುರೇಬೈಲುರೊಪ್ಪಸ್ಥಳದ ವ್ಯಾಜ್ಯ

ವ್ಯಾಜ್ಯಗಾರರು : ಚಿಕ್ಕಪ್ಪನ ಮಗ ಬಸಪ್ಪ v/s ಪಂಚಮರ ದೈಯಣ್ಣ

ತೇದಿ : ೧೬೮೭ ಆಗಸ್ಟ್ ೧೩ ಶನಿವಾರ

ನ್ಯಾಯತೀರ್ಮಾನವಾದ ಸ್ಥಳ : ಗುಂಟನೂರಿನ ಗುಂಟನೂರಮ್ಮನ ಗುಡಿ

ಶ್ಯಾನುಬೋಗತನದ ಸ್ವಾಸ್ತಿಗಳನ್ನು ನಿರೂಪಿಸುವ ದಾಖಲೆಯಲ್ಲಿ ಹಾಲೇಲೋರ ಚಿಕ್ಕಪ್ಪಗೌಡನ ಸ್ಥಳವನ್ನು ಕುರಿತ ವಿವರವಿದೆ. ಈ ಚಿಕ್ಕಪ್ಪಗೌಡ ಮತ್ತು ಈತನ ಮಗ ಬಸಪ್ಪ ಎಂಬೀರ್ವರು ೧೫೫೫ರಲ್ಲಿ (ಶಕ ೧೪೭೭ನೇ ರಾಕ್ಷಸ ಸಂವತ್ಸರದಲ್ಲಿ) ಚೋಳ ದೇವಣ್ಣಒಡೆಯನ ಬಳಿಗೆ ಹೋಗಿ ೨೦೦೦ ವರಹ ಪಾದಗಾಣಿಕೆ ಮಾಡಿ ಅರಿಕೆ ಮಾಡಿಕೊಳ್ಳುತ್ತಾರೆ. ಆ ಪ್ರಕಾರ, ದೇವಣ್ಣಒಡೆಯನು "ನಿಮ್ಮ ಮನೋಭೀಷ್ಟವಿದ್ದಕಡೆ ಗ್ರಾಮಗಳನ್ನು ನೋಡಿಕೊಳ್ಳಿರಿ. ಆ ನಂತರ ನೀವು ಒಪ್ಪಿಕೊಂಡ ಗ್ರಾಮಗಳನ್ನು ನಿರೂಪಿಸುತ್ತೇವೆ" ಎಂದು ಅಪ್ಪಣೆ ನೀಡುತ್ತಾನೆ. ಇದರಂತೆ ಇವರೀರ್ವರು ಒಪ್ಪಿಕೊಂಡ ೧೧ ಗ್ರಾಮಗಳ ಗೌಡಿಕೆಸ್ವಾಸ್ತಿಗೆ ನಿರೂಪ ಬರೆಯಿಸಿಕೊಡಲಾಗುತ್ತದೆ. ಆ ಗ್ರಾಮಗಳೆಂದರೆ ಹಳೆ(ಳಿ)ಯೂರು, ಮಾರಗಟ್ಟ, ಕ್ಯಾಸಾಪುರ, ಬಳ್ಳೆಕಟ್ಟೆ, ಸಾದರಹಳ್ಳಿ, ಮಾನಂಗಿ, ಕತ್ತಲಗೆರೆ, ಕಾರಿಗನೂರು, ಯಲ್ಲೋಡಹಳ್ಳಿ, ಗಿರಿಯಾಪುರ ಮತ್ತು ಹೊಸಹಳ್ಳಿ.

ಈ ಈರ್ವರೂ ಈ ಮೇಲಿನ ಗ್ರಾಮಗಳನ್ನು ತಮ್ಮಲ್ಲೆ ಎರಡುಪಾಲು ಮಾಡಿಕೊಳ್ಳುತ್ತಾರೆ. ಅಲ್ಲದೆ, ಕುರೇಬೈಲು ಎಂಬಲ್ಲಿ ಪಂಚಮರ ದೈಯಣ್ಣ ಎಂಬಾತನು ದನಗಳ ರೊಪ್ಪ ಹಾಕಿಕೊಂಡಿದ್ದ ಸ್ಥಳವನ್ನು ನ್ಯಾಯವಾಗಿ ಪಡೆದುಕೊಳ್ಳುತ್ತಾರೆ. ಗುಂಟನೂರು ಬಳಿಯಿದ್ದ ಚಿಕ್ಕಪ್ಪನು ಕುರೇಬೈಲುಗ್ರಾಮದ ಅಡವಿಯಲ್ಲಿ ಮನೆಕಟ್ಟಿಸಿಕೊಂಡು ದನಗಳ ರೊಪ್ಪವನ್ನೂ ಹಾಕಿಕೊಂಡಿರುತ್ತಾನೆ. ಈ ಚಿಕ್ಕಪ್ಪನು ಮೃತನಾದ ನಂತರ, ಈತನು ಹಾಕಿಕೊಂಡಿದ್ದ ರೊಪ್ಪ ಹಾಳುಬೀಳುತ್ತದೆ. ಸ್ವಲ್ಪ ಕಾಲಾನಂತರ ದೈಯಣ್ಣನು ಅಲ್ಲಿಗೆ ಮರುಪ್ರವೇಶಿಸಿ ಗ್ರಾಮಕಟ್ಟಿಕೊಂಡು ವಾಸಿಸತೊಡಗುತ್ತಾನೆ. ಆದರೆ ಇದನ್ನು ಚಿಕ್ಕಪ್ಪನ ಮಗ ಬಸಪ್ಪನು ಆಕ್ಷೇಪಿಸಿದ್ದರಿಂದ ಈರ್ವರ ಮಧ್ಯೆ ಆ ಸ್ಥಳದ ಬಗೆಗೆ ವ್ಯಾಜ್ಯ ತಲೆದೋರುತ್ತದೆ.

ಆಗ ದುರ್ಗದ ಸಿಂಹಾಸನದ ಹಕ್ಕುದಾರನಾಗಿದ್ದ ಮುಮ್ಮಡಿ ಮದಕರಿನಾಯಕನ ಮುಂದೆ ಈ ವ್ಯಾಜ್ಯವು ವಿಚಾರಣೆಗೆ ಬರುತ್ತದೆ. ಇದರ ನ್ಯಾಯತೀರ್ಮಾನ ಮಾಡಲು ಪಂಚಾಯಿತಿಗೆ ವಹಿಸಲಾಗುತ್ತದೆ. ಈ ನ್ಯಾಯತೀರ್ಮಾನದಲ್ಲಿ ಭಾಗವಹಿಸಿದ್ದವರೆಂದರೆ, ದಳವಾಯಿ ಮುದ್ದಣ್ಣ, ಗುಂಟನೂರು ಶ್ಯಾನುಬೋಗ ಕಾಶಣ್ಣ, ಗುಂಟನೂರು ಗೌಡ ದೇಮಪ್ಪ, ಹುಲ್ಲೂರು ಗೌಡ ಅಂಬಲಿ ಮಲ್ಲಪ್ಪ, ಮನೆವಾರ್ತೆ ಯಲ್ಲಪ್ಪ, ಚಿನ್ನದಮನೆ ಭೂಸಪ್ಪ, ಕಂದನಕೋವಿ ಭರಮಣ್ಣ, ಕ್ಯಾಸಾಪುರದ ತಿಮ್ಮಪ್ಪ, ಗುರಿಕಾರ ಓಬಣ್ಣ, ರಾಯಪ್ಪ ಮುಂತಾದವರು. ಗುಂಟನೂರಿನ ಗುಂಟನೂರಮ್ಮನ ಗುಡಿಯಲ್ಲಿ ಮೇಲ್ಕಂಡ ದಿನಾಂಕದಂದು ಈ ವ್ಯಾಜ್ಯದ ವಿಚಾರಣೆ ನಡೆಯುತ್ತದೆ. ವಾದ-ವಿವಾದದಲ್ಲಿ ಪಂಚಮರ ದೈಯಣ್ಣನ ಮಾತು ಸೋತುಹೋಗುತ್ತದೆ. 'ರೊಪ್ಪಹಾಕಿ ಮನೆಕಟ್ಟಿದವರಿಗೇ ಸ್ಥಳಾ' ಎಂದು ನಿರ್ಣಯವಾಗಿ, ಕುರೆಬೈಲುರೊಪ್ಪದ ಹಕ್ಕನ್ನು ಬಸಪ್ಪನಿಗೇ ಉಳಿಸಲಾಗುತ್ತದೆ.[೪]

ಪ್ರಸ್ತುತ ವ್ಯಾಜ್ಯಕ್ಕೆ ಸಂಬಂಧಿಸಿದಂತೆ, ಈ ಮಾಹಿತಿಯನ್ನು ಒಳಗೊಂಡಿರುವ ದಾಖಲೆಯಲ್ಲಿ, ಹಾಲೇಲೋರ ಚಿಕ್ಕಪ್ಪಗೌಡ ಮತ್ತು ಈತನ ಮಗ ಬಸಪ್ಪ ಅವರುಗಳು ೧೫೫೫ರಲ್ಲಿ, ಅಂದರೆ ವಿಜಯನಗರ ಕಾಲಾವಧಿಯಲ್ಲಿ ಚೋಳ ದೇವಣ್ಣ ಒಡೆಯನೆಂಬವನಿಂದ ೧೧ ಗ್ರಾಮಗಳ ಗೌಡಿಕೆಸ್ವಾಸ್ತಿಯನ್ನು ಪಡೆದುಕೊಂಡಂತೆ ಸೂಚಿತವಾಗಿದೆ. ಆದರೆ ಈ ವ್ಯಾಜ್ಯ ಗುಂಟನೂರಿನಲ್ಲಿ ತೀರ್ಮಾನಗೊಂಡುದು ೧೬೮೭ರಲ್ಲಿ; ಚಿತ್ರದುರ್ಗ ನಾಯಕ ಅರಸರ ಕಾಲಾವಧಿಯಲ್ಲಿ ಸ್ವಾಸ್ತಿ ಪಡೆದುಕೊಂಡ ೧೩೨ ವರ್ಷಗಳ ನಂತರ ಈ ವ್ಯಾಜ್ಯವು ಉದ್ಭವಿಸಿ ವಿಚಾರಣೆಗೆ ಬಂದುದು ಇಲ್ಲಿ ದೃಢಪಡುತ್ತದೆ. ಇಷ್ಟು ದೀರ್ಘ ಕಾಲಾವಧಿಯವರಿಗೆ ಚಿಕ್ಕಪ್ಪಗೌಡನ ಮಗ ಬಸಪ್ಪನು ಜೀವಿಸಿದ್ದನೇ ಎಂಬ ಜಿಜ್ಞಾಸೆ ಇಲ್ಲಿ ಎದುರಾಗುವುದು ಸಹಜ. ಅಲ್ಲದೆ, ಚೋಳ ದೇವಣ್ಣ ಒಡೆಯನ ಬಗೆಗೂ ಗಮನಿಸಬೇಕಿದೆ. ಆದ್ದರಿಂದ ಪ್ರಸ್ತುತ ವ್ಯಾಜ್ಯಪೂರ್ವದ ಕಾಲಾವಧಿಯ ಗೊಂದಲವನ್ನು ನಿವಾರಿಸುವ ಅಗತ್ಯವಿದೆ. ಏನೇ ಇದ್ದರೂ ನಾಯಕ ಅರಸರ ಕಾಲಾವಧಿಯಲ್ಲಿ ನಡೆದ ಈ ವ್ಯಾಜ್ಯದ ವಿವರಗಳು ಮಾತ್ರ ಅಧಿಕೃತವಾದವು.

ಈ ಮೇಲಿನ ವ್ಯಾಜ್ಯವನ್ನು ತೀರ್ಮಾನಿಸಿದವರಲ್ಲಿಯ ಕೆಲವರು ದುರ್ಗದ ಆಡಳಿತದಲ್ಲಿ ಪ್ರಮುಖ ಸ್ಥಾನ-ಮಾನಗಳನ್ನು ಹೊಂದಿದ್ದವರು. ಇವರಲ್ಲಿ ಅತ್ಯಂತ ಪ್ರಬಲನಾಗಿದ್ದವನು ದಳವಾಯಿ ಮುದ್ದಣ್ಣ. ರಾಯಪ್ಪನೆಂಬವನು ಈ ಮುದ್ದಣ್ಣನ ಮೂವರು ತಮ್ಮಂದಿರಲ್ಲಿ ಕಿರಿಯವನಾದ ರಾಯಣ್ಣನೆಂದು ತೋರುತ್ತದೆ. ಕೆಲವು ನಿಗೂಢ ಕಾರಣಗಳಿಗಾಗಿ ಈ ವ್ಯಾಜ್ಯವು ಮುಂದೆ ದುರ್ಗದಲ್ಲಿ ಕೆಲವು ರಾಜಕೀಯ ವಿಪ್ಲವಗಳಿಗೆ ನಾಂದಿಹಾಡಿತೆನ್ನಬಹುದು. ಏಕೆಂದರೆ ವ್ಯಾಜ್ಯದಲ್ಲಿ ಸೋತುಹೋದ ಪಂಚಮರ ದೈಯಣ್ಣನು ಅತ್ಯಂತ ಪ್ರಬಲನೆನಿಸಿದವನು. ಇವನು 'ಉತ್ತರದೇಶದ' ಕಿತ್ತೂರಿನಿಂದ ಬಂದವನು ಹಾಗೂ ಕುದುರೆ ಸವಾರನೆಂದು ಗುರುತಿಸಲ್ಪಟ್ಟವನು. ಕ್ಷತ್ರಿ



ಗುಂಟನೂರಮ್ಮ
(ಶ್ರೀ ದ್ಯಾಮಲಾಂಬ)ನ
ದೇವಾಲಯದ
ಪ್ರವೇಶದ್ವಾರ ಮಂಟಪ
ಗುಂಟನೂರು



ಗುಂಟನೂರಮ್ಮ
(ಶ್ರೀ ದ್ಯಾಮಲಾಂಬ)ನ
ದೇವಾಲಯ



ಗುಂಟನೂರಮ್ಮ
(ಶ್ರೀ ದ್ಯಾಮಲಾಂಬ)ನ
ಗರ್ಭಗುಡಿ

(ಕ್ಷತ್ರಿಯ) ಹುಚ್ಚಪ್ಪನೆಂಬ ಇನ್ನೊರ್ವ ಕುದುರೆ ಸವಾರನೊಡನೆ ದಾವಣಗೆರೆ ತಾಲ್ಲೂಕು ಅಣಜಿಗೆ ಬಂದು ನೆಲೆಸಿದ ದೈಯಣ್ಣನು, ಆ ನಂತರ ಅಣಜಿಗೆ ಸಮೀಪದಲ್ಲಿಯೇ ತನ್ನದೇ ಗ್ರಾಮ ಹಾಕಿಕೊಂಡು ಅದಕ್ಕೆ ಕಿತ್ತೂರು ಎಂತಲೇ ಹೆಸರಿಟ್ಟ. ಇದು ಇಂದಿಗೂ ಜೀವಂತವಿರುವ ಗ್ರಾಮ. ಇವನೊಡನೆ ಬಂದಿದ್ದ ಕ್ಷತ್ರಿ ಹುಚ್ಚಪ್ಪನು ಕುರೇಬೈಲು ಗ್ರಾಮದಲ್ಲಿಯೇ ಇದ್ದು, ಆ ನಂತರ 'ಗಣಾಧೀಶ್ವರರಾದ ಹುಚ್ಚಪ್ಪಪಡೆಯರರ ಉಪದೇಶ ದಿಂದ ಲಿಂಗಧಾರಣೆ ಮಾಡಿಕೊಂಡು ಪಂಚಮರ ಜಾತಿಯಲ್ಲಿ ನಡೆದುಕೊಳ್ಳ ತೊಡಗಿದ.'

ಚಿತ್ರದುರ್ಗದ ದರ್ಪಿಷ್ಠ ದಳವಾಯಿ ಮುದ್ದಣ್ಣನೂ ಪಂಚಮರ ಜಾತಿಯವನೆಂಬುದು ಗಮನಾರ್ಹ. ದೈಯಣ್ಣನು ವ್ಯಾಜ್ಯಪೂರ್ವದಲ್ಲಿ ಈ ಮುದ್ದಣ್ಣನ ಕುಮ್ಮಕ್ಕಿನಿಂದಲೇ ಕುರೇಬೈಲುರೊಪ್ಪದ ಸ್ಥಳವನ್ನು ಮತ್ತೆ ತನ್ನ ವಶಕ್ಕೆ ತಂದುಕೊಳ್ಳಲು ಪ್ರಯತ್ನಿಸಿದ್ದಿರಬಹುದು. ಏಕೆಂದರೆ 'ಚಿತ್ರದುರ್ಗ ಸಂಸ್ಥಾನದ ದಳವಾಯಿ ಮುದ್ದಣ್ಣನ ದಿವಸದಲ್ಲಿ ಜಾನಕಲ್ಲವರ ಉಪದ್ರವದಿಂದ ಕುರೇಬೈಲುಗ್ರಾಮ ಹಾಳುಬಿದ್ದಿದ್ದರಿಂದ ಪಂಚಮರ ದೈಯಣ್ಣನು ಈ ಗ್ರಾಮವನ್ನು ಕಟ್ಟಿಕೊಂಡು ಇದ್ದನು' ಎಂಬ ವಿವರವೂ ದಾಖಲೆಯಲ್ಲಿ ಉಕ್ತಗೊಂಡಿದೆ. ಈ ಹಿನ್ನೆಲೆಯಲ್ಲಿ ಇಲ್ಲಿ ಎದುರಾಗುವ ಪ್ರಶ್ನೆಗಳೆಂದರೆ, ತಮ್ಮ 'ಸ್ವಜಾತಿ'ಯ ಪಂಚಮರ ದೈಯಣ್ಣನಿಗೆ ನ್ಯಾಯನಿರ್ಣಯದಲ್ಲಿ ಆದ ಸೋಲಿನಿಂದಾಗಿ, ನ್ಯಾಯಪಂಚಾಯಿತಿದಾರರಾಗಿ ಈ ವಿಚಾರಣೆಯಲ್ಲಿ ಭಾಗವಹಿಸಿದ್ದ ದಳವಾಯಿ ಮುದ್ದಣ್ಣ ಮತ್ತು ಆತನ ತಮ್ಮ ರಾಯಣ್ಣ ಅಸಮಾಧಾನಗೊಂಡು ನಾಯಕ ಆಡಳಿತದ ವಿರುದ್ಧ ರೊಚ್ಚಿಗೆದ್ದರೆ? ಈ ಸಂದರ್ಭವು ದುರ್ಗದ ಚರಿತ್ರೆಯಲ್ಲಿ ರಕ್ತಸಿಕ್ತ ಆಡಳಿತವನ್ನು ಹುಟ್ಟುಹಾಕಿತೆ? 'ಜಾತಿಪ್ರತಿಷ್ಠೆ'ಯ ನಾಯಕಪ್ರಭುತ್ವದ ವಿರುದ್ಧ ಸೆಣಸಲು ಪ್ರೇರಣೆ ನೀಡಿತೆ? (ಈ ಕುರಿತು ಪ್ರತ್ಯೇಕವಾಗಿ ಚರ್ಚಿಸಿದೆ).

ಗಮನಾರ್ಹ ಅಂಶವೆಂದರೆ, ಈ ವ್ಯಾಜ್ಯ ತೀರ್ಮಾನಗೊಂಡ ಒಂದು ವರುಷದಲ್ಲೆ, ಅಂದರೆ ೧೬೮೮ ಸೆಪ್ಟೆಂಬರ್‌ನಲ್ಲಿ, ಇತರ ದಳವಾಯಿಗಳ ಬೆಂಬಲ ಪಡೆದ ಮುದ್ದಣ್ಣನು, ದೊರೆಯಾದ ಮುಮ್ಮಡಿ ಮದಕರಿನಾಯಕನ ವಿರುದ್ಧವಾಗಿ ತಿರುಗಿಬಿದ್ದು ಬಂಡಾಯದ ಕಹಳೆ ಮೊಳಗಿಸಿದ. ಈತನ ತಮ್ಮಂದಿರಾದ ಚುಕ್ಕಣ್ಣ, ಚಿಕ್ಕಪ್ಪ ಮತ್ತು ರಾಯಣ್ಣರು ಅಣ್ಣನ ಬೆನ್ನಿಗೆ ನಿಂತರು. ಮುದ್ದಣ್ಣನ ಬಂಡಾಯದ ಪರಿಣಾಮವಾಗಿ ಒಂದು ತಿಂಗಳಿನಲ್ಲೆ (೧೬೮೮ ಅಕ್ಟೋಬರ್) ಮುಮ್ಮಡಿ ಮದಕರಿನಾಯಕ ತನ್ನ ಪ್ರಾಣವನ್ನು ಕಳೆದುಕೊಂಡ. ಅದೇ ತಿಂಗಳಿನಲ್ಲೆ (ಅಕ್ಟೋಬರ್ ೨೬ ಶುಕ್ರವಾರದಂದು) ದೊಣ್ಣೆರಂಗಪ್ಪನಾಯಕನಿಗೆ ಪಟ್ಟವಾಯಿತು. ಈ ನಾಯಕನು ದೊರೆಯೆನಿಸಿದುದು ನೆಪಮಾತ್ರಕ್ಕೆ: ದಳವಾಯಿ ಮುದ್ದಣ್ಣನೇ ಸರ್ವಾಧಿಕಾರಿಯಾಗಿ ದುರ್ಗದ ಎಲ್ಲ ಆಡಳಿತಸೂತ್ರಗಳನ್ನೂ ತನ್ನ ಕೈಯಲ್ಲಿಟ್ಟುಕೊಂಡ. ಹೀಗೆ ಈತನ ಸರ್ವಾಧಿಕಾರತ್ವದ ಅವಧಿಯು ದುರ್ಗದ ಚರಿತ್ರೆಯಲ್ಲಿ ಹೊಸ ಅಧ್ಯಾಯವೊಂದನ್ನು ತೆರೆಯಿತು.

## ೩. ಬಿಚ್ಚುಗತ್ತಿ ಭರಮಣ್ಣನಾಯಕ (೧೬೮೯-೧೭೨೧)

**ವ್ಯಾಜ್ಯ ೧ : ಉಂಬಳಿಗ್ರಾಮ ಒಡೆತನದ ವ್ಯಾಜ್ಯ**

**ವ್ಯಾಜ್ಯಗಾರರು :** ಗುಜ್ಜೆಲೋರ ಬಡಗಿ (ಬಡಾ?) ಗಿರಿಯಣ್ಣ v/s ಹಣ್ಣೇ(ಅನ್ನೇ)ಹಾಳು ಲಚ್ಚುಮಲೋರ ಭರಮಯ್ಯ

**ತೇದಿ : ೧೬೯೦ ಮಾರ್ಚ್ ೭ ಶನಿವಾರ**

**ನ್ಯಾಯತೀರ್ಮಾನವಾದ ಸ್ಥಳ : ಮೇಲುದುರ್ಗದ ಬಣ್ಣದಚಾವಡಿ**

ಗ್ರಾಮವೊಂದರ ಉಂಬಳಿ (ಮಾನ್ಯವಾಗಿ ಕೊಟ್ಟ ಗ್ರಾಮದ) ಹಕ್ಕಿನ ಬಗೆಗೆ ಗುಜ್ಜೆಲೋರ ಬಡಗಿ (ಬಡಾ=ದೊಡ್ಡ) ಗಿರಿಯಣ್ಣ ಮತ್ತು ಲಚ್ಚುಮಲೋರ ಭರಮಯ್ಯರ ನಡುವೆ ವ್ಯಾಜ್ಯ ಆರಂಭವಾಗುತ್ತದೆ. ಈ ಈರ್ವರೂ ಚಿತ್ರದುರ್ಗದ ಹತ್ತನೇ ದೊರೆ ಕಾಮಗೇತಿ ಬಿಚ್ಚುಗತ್ತಿ ಭರಮಣ್ಣನಾಯಕನಿಗೆ ಅರಿಕೆ ಮಾಡಿಕೊಳ್ಳುತ್ತಾರೆ. ಭರಮಣ್ಣ ನಾಯಕನು ಈ ವ್ಯಾಜ್ಯವನ್ನು ಮೇಲುದುರ್ಗದ ಬಣ್ಣದಚಾವಡಿಯ ಪಾರುಪತ್ತೆಗಾರ ಕೆಂಚಪ್ಪ ಮತ್ತು ಮಲಿಯಪ್ಪರಿಗೆ ವಹಿಸುತ್ತಾನೆ. ಈ ಪಾರುಪತ್ತೆಗಾರರ ಸಮ್ಮುಖದಲ್ಲಿ ಈ ವ್ಯಾಜ್ಯದ ವಿಚಾರಣೆ ನಡೆಯುತ್ತದೆ. ಅಲ್ಲಿ ಕೈಗೊಂಡ ತೀರ್ಮಾನಕ್ಕೆ ಈರ್ವರೂ ಬದ್ಧರಾಗಿರಬೇಕೆಂದು ಆದೇಶಿಸಲಾಗುತ್ತದೆ. ಅಲ್ಲದೆ, ಪಾರುಪತ್ತೆಗಾರರು ಈ ವ್ಯಾಜ್ಯಗಾರರ ನಡುವೆ ಇನ್ನೋರ್ವ ಪಾಲುದಾರನಾಗಿದ್ದ ಮೇಣಲೋರ ನಂದಯ್ಯ ಎಂಬಾತನನ್ನು ನಿಗದಿಗೆ (ತೀರ್ಮಾನಕ್ಕೆ) ನಿಲ್ಲಿಸಿಕೊಂಡು, ಆತನ ನಿರ್ಣಯಕ್ಕೆ ಈರ್ವರೂ ಬದ್ಧರಾಗಿರಬೇಕೆಂದು ಆದೇಶಿಸುತ್ತಾರೆ. ಈ ಪ್ರಕಾರ ನಂದಯ್ಯನನ್ನು ಕೇಳುವಲ್ಲಿ, ಆತ "ಕನಕಗಿರಿಯವರಿಗೆ ಈ ಹಕ್ಕು ಸಲ್ಲದು" ಎನ್ನುತ್ತಾನೆ.

ಆದರೆ ಈ ತೀರ್ಮಾನವನ್ನು ಬಡಗಿ (ಬಡಾ) ಗಿರಿಯಣ್ಣನು ಒಪ್ಪುವುದಿಲ್ಲ. ಆಗ ನಿರ್ವಾಹವಿಲ್ಲದೆ ಪಾರುಪತ್ತೆಗಾರರು ಈ ವ್ಯಾಜ್ಯವನ್ನು 'ಧಣಿಯುವರ', ಅಂದರೆ ಭರಮಣ್ಣ ನಾಯಕನ ತೀರ್ಮಾನಕ್ಕೆ ಒಪ್ಪಿಸುತ್ತಾರೆ. ನಾಯಕನು ಬಡಗಿ (ಬಡಾ) ಗಿರಿಯಣ್ಣನನ್ನು ತನ್ನ ಎದುರಿಗೆ ಕರೆಯಿಸಿಕೊಂಡು, "ನಿನ್ನ ವ್ಯಾಜ್ಯ ಅನ್ಯಾಯುದ್ದು. ಅದ್ದರಿಂದಲೇ ಸೋತಿತು. ಈಗ ನೀನು ಅರಮನೆಗೆ ೧೨ ವರಹ ಅಪರಾಧ (ದಂಡ) ಕೊಡಬೇಕು. ಇನ್ನೊಂದು ವೇಳೆ ಅನ್ಯಾಯವಾಗಿ ನ್ಯಾಯಕೇಳಲು ಬಂದಲ್ಲಿ ೨೪ ವರಹ ತಪ್ಪುದಂಡ ವಿಧಿಸಿ ಗಡಿಪಾರು ಮಾಡಬೇಕಾದೀತು" ಎಂದು ಎಚ್ಚರಿಸಿ ನ್ಯಾಯತೀರ್ಮಾನ ಮಾಡುತ್ತಾನೆ.[೫]

ಈ ನ್ಯಾಯನಿರ್ಣಯವನ್ನು ಗಮನಿಸಿದರೆ, ಅನ್ಯಾಯುವನ್ನು ಸಾಧಿಸಲೆತ್ನಿಸುವ ಹಟಮಾರಿ ವ್ಯಾಜ್ಯಗಾರರ ಬಗೆಗೆ ದುರ್ಗದ ಅರಸರು ತಳೆಯುತ್ತಿದ್ದ ಕಠೋರ ನಿಲುವು ಸ್ಪಷ್ಟಪಡುತ್ತದೆ. ಬಿಚ್ಚುಗತ್ತಿ ಭರಮಣ್ಣನಾಯಕ ಶೂರನೂ ಪ್ರಜಾಹಿತರಕ್ಷಕನೂ ಆಗಿದ್ದಂತೆಯೇ ನ್ಯಾಯನಿಷ್ಠುರಿಯೂ ಆಗಿದ್ದನೆಂಬುದಕ್ಕೆ ಈ ಪ್ರಕರಣ ಪುರಾವೆ ಒದಗಿಸುತ್ತದೆ. ಈ ವ್ಯಾಜ್ಯದ ವಿಚಾರಣೆ ನಡೆಸಿದವರು ದುರ್ಗದ ಅರಮನೆಗೆ ಸಂಬಂಧಿಸಿದ ಪ್ರತಿಷ್ಠಿತ ಅಧಿಕಾರಿಗಳು (ಪಾರುಪತ್ತೆಗಾರರು). ಆದರೆ ಈ ನ್ಯಾಯವಿಚಾರಣೆಯಲ್ಲಿ

ಅವರು ಮೇಣಲೋರ ನಂದಯ್ಯನನ್ನು ಕರೆಸಿ ಅವನ ಹೇಳಿಕೆ ಪಡೆದುಕೊಂಡುದು ಗಮನಾರ್ಹ. ಈ ಸಾಕ್ಷಿಯ ಬಲದಿಂದ ಉಂಬಳಿಗ್ರಾಮದ ಒಡೆತನವು ಲಚ್ಚುಮಲೋರ ಭರಮಯ್ಯನದೆಂದು ನಿರ್ಣಯಿಸಲು ಸಾಧ್ಯವಾಯಿತು. ಅಲ್ಲದೆ, ಪಾರುಪತ್ತೆಗಾರರ ತೀರ್ಮಾನವನ್ನು ಪ್ರಶ್ನಿಸಿದ ಬಡಗಿ (ಬಡಾ) ಗಿರಿಯಣ್ಣನು ಕನಕಗಿರಿ ಮೂಲದವನೆಂಬ; ಅವನು ಸ್ಥಳೀಯನಲ್ಲವೆಂಬ ಹಾಗೂ ಅವನ ಈ ವ್ಯಾಜ್ಯವು ನ್ಯಾಯಯುತವಾದುದಲ್ಲವೆಂಬ ವಾಸ್ತವವೂ ಬಹಿರಂಗಗೊಂಡಿತು. ಆದ್ದರಿಂದಲೇ ಭರಮಣ್ಣನಾಯಕನು ಈ ಗಿರಿಯಣ್ಣನ ವಿಚಾರದಲ್ಲಿ ನಿಷ್ಠುರದಿಂದ ವರ್ತಿಸಿದನೆನ್ನಬೇಕು.

ಪ್ರಸ್ತುತ ವ್ಯಾಜ್ಯದ ನ್ಯಾಯವಿಚಾರಣೆ ನಡೆದ ಎಡೆಯೆಂದರೆ ಬಣ್ಣದಚಾವಡಿ. ದುರ್ಗದರಸರ ಕಾಲದಲ್ಲಿದ್ದ ಚಾವಡಿ(ಕಚೇರಿ)ಗಳು ಹದಿನೈದಕ್ಕೂ ಹೆಚ್ಚು. ಇವುಗಳಲ್ಲಿ ಮುಖ್ಯವಾದವುಗಳೆಂದರೆ, ಅಟ್ಟವಣೆಚಾವಡಿ, ಬೊಕ್ಕಸದಚಾವಡಿ, ಸುಂಕದಚಾವಡಿ, ಠಾಣ್ಯದಚಾವಡಿ, ಚದುರಂಗದಚಾವಡಿ ಮತ್ತು ಬಣ್ಣದಚಾವಡಿ. ಈ ಆರು ಮುಖ್ಯ ಚಾವಡಿಗಳೊಡನೆ ಗಮನಿಸಬೇಕಾದ ಇತರ ಚಾವಡಿಗಳೆಂದರೆ, ಕೊತ್ವಾಲಚಾವಡಿ, ಚಪ್ಪೆಚಾವಡಿ, ಕಾವಲುಚಾವಡಿ, ದೊಡ್ಡಚದುರುಚಾವಡಿ, ಪಲ್ಲಕ್ಕಿಚಾವಡಿ, ಮೇಲುದುರ್ಗದ ಚಾವಡಿ, ರಾಯಸದಚಾವಡಿ, ರಣಮಂಡಲಗುಡ್ಡದ ಟೆಂಕಮುಖದ ಚಾವಡಿ ಇತ್ಯಾದಿ. ಪ್ರಮುಖ ಚಾವಡಿಯೆನಿಸಿದ ಬಣ್ಣದಚಾವಡಿಯು ಒಂದನೇ ಕಸ್ತೂರಿ ರಂಗಪ್ಪನಾಯಕನ ಕಾಲದಲ್ಲೆ ಇದ್ದಿತು. ಇದಕ್ಕೆ ಬಲವಾದ ಕಾವಲಿದ್ದಿತೆಂದು ತಿಳಿಯುತ್ತದೆ. ಈ ಚಾವಡಿಯ ರಕ್ಷಣೆಗೆ ನಿಯುಕ್ತನಾಗಿದ್ದವನೆಂದರೆ 'ಗಂಡುಗೊಡಲಿಸರ್ಜಾ' ಎಂಬ ಬಿರುದಿಗೆ ಪಾತ್ರನಾಗಿದ್ದ ಕೊಮಾರ ಮೆದಕೇರಣ್ಣ; ರಂಗಪ್ಪನಾಯಕನ ಮಗ. ಈ ಕಾರಣಕ್ಕಾಗಿಯೇ ಇದನ್ನು 'ಕೊಮಾರನಚಾವಡಿ'ಯೆಂತಲೂ ಕರೆದಂತೆ ತೋರುತ್ತದೆ. ಇದು ಮೇಲುದುರ್ಗದ ಅರಮನೆಯ ಎದುರಿನಲ್ಲೆ ಅದಕ್ಕೆ ಹೊಂದಿಕೊಂಡಂತೆ ಇದ್ದುದರಿಂದ, ಇದು ಬಹುಮುಖ್ಯ ಚಾವಡಿಯೆಂದೇ ಭಾವಿಸಬೇಕಾಗುತ್ತದೆ. ಈ ಚಾವಡಿಯ ಒಳಭಿತ್ತಿಗಳನ್ನು ವರ್ಣಚಿತ್ರಗಳಿಂದ ಅಲಂಕರಿಸಲಾಗಿದ್ದಿತಂತೆ. ಕೆಲವು ಹೆಸರಾಂತ ಪಾಳೆಯಗಾರರ ಭಾವಚಿತ್ರಗಳನ್ನು ಇಲ್ಲಿ ಬರೆಯಿಸಲಾಗಿದ್ದಿತು. ಆದ್ದರಿಂದಲೇ ಇದನ್ನು ಬಣ್ಣದಚಾವಡಿ ಎನ್ನಲಾಯಿತು. ಭರಮಣ್ಣ ನಾಯಕನ ಕಾಲದಲ್ಲಿ ಈ ಚಾವಡಿಯ ಪಾರುಪತ್ತೆಗಾರನಾಗಿ ನಿಯುಕ್ತನಾದವನು ಕೆಂಚಪ್ಪನೆಂದು ತೋರುತ್ತದೆ. ಈತನೊಡನೆ ಮಲಿಯಪ್ಪನೆಂಬ ಅಧಿಕಾರಿಯೂ ಇದ್ದಿರಬೇಕು.

* * *

**ವ್ಯಾಜ್ಯ ೨ :** ಏಕನಾಥಮ್ಮನ ಬಂಡಿಸಿಡಿ ಆಡುವವರಿಗೆ ಕೊಂಡಿಚುಚ್ಚುವ ಹಕ್ಕಿನ ವ್ಯಾಜ್ಯ

**ವ್ಯಾಜ್ಯಗಾರರು :** ಹಳೇಪೈಕದ ರಾಮ v/s ಹೆಗ್ಗಡೆಲೋರ ಗಿರಿಯ

**ತೇದಿ :** ೧೬೭೮ ಮಾರ್ಚ್

**ನ್ಯಾಯತೀರ್ಮಾನವಾದ ಸ್ಥಳ :** ಮೇಲುದುರ್ಗ

ಬಿಚ್ಚುಗತ್ತಿ ಭರಮಣ್ಣನಾಯಕನ ಅವಧಿಯಲ್ಲಿ ಕೆಳಗಿನಪೇಟೆ(ಕೆಳದುರ್ಗ)ಯಲ್ಲಿ ಏಕನಾಥಮ್ಮನ ಪಾದಗುಡಿಯನ್ನು ಕಟ್ಟಿಸಲಾಯಿತು. ಕೆಳಗಿನಪೇಟೆಯಲ್ಲಿ ಈ ದೇವತೆಯ ರಥೋತ್ಸವ ಹಾಗೂ ಬಂಡಿಸಿಡಿಯ ಆಚರಣೆಯನ್ನು ಏರ್ಪಡಿಸಿದಾಗ, ಬಂಡಿಸಿಡಿಯನ್ನು ಏರುವ ಅಥವಾ ಆಡುವ ಭಕ್ತರ ಬೆನ್ನಿಗೆ ಕೊಂಡಿಚುಚ್ಚುವ ಹಕ್ಕಿನ ಸಂಬಂಧದಲ್ಲಿ ಹಳೇ ಪೈಕದ ರಾಮ ಮತ್ತು ಉಚ್ಚಂಗಮ್ಮನ ಪವಾಡಿ (Sycophant) ಹೆಗ್ಗಡೆಲೋರ ಗಿರಿಯ ಎಂಬವರ ನಡುವೆ ವ್ಯಾಜ್ಯವುಂಟಾಗುತ್ತದೆ. ಈ ಹಕ್ಕು ಪೂರ್ವತ್ರವಾಗಿ (ಪರಂಪರೆಯಿಂದ) ಬಂದುದೆಂಬ ಕಾರಣಕ್ಕಾಗಿ, ದುರ್ಗದ ದೊರೆ ಭರಮಣ್ಣನಾಯಕನ ಸಮ್ಮುಖದಲ್ಲಿ ಫಿರ್ಯಾದು ಮಾಡಲಾಗುತ್ತದೆ. ಈ ವ್ಯಾಜ್ಯದ ವಿಚಾರಣೆಯನ್ನು ಭರಮಣ್ಣನಾಯಕನೇ ಖುದ್ದಾಗಿ ನಡೆಸುತ್ತಾನಲ್ಲದೆ, ರಾಮ ಮತ್ತು ಗಿರಿಯ- ಈ ಈರ್ವರಿಗೂ ಸಲ್ಲುವಂತೆ ಆಯಾ ದೇವರುಗಳನ್ನು ಎರಡು ಪಾಲುಗಳಾಗಿ ವಿಂಗಡಿಸಿ ಅವರ ನಡುವೆ ಈ ಕೆಳಗಿನಂತೆ ಹಂಚುತ್ತಾನೆ :

| ಗಿರಿಯನ ಪಾಲು | ರಾಮನ ಪಾಲು |
|---|---|
| ಏಕನಾಥಮ್ಮನ ಸಿಡಿ | ಯರಬಳ್ಳಿ ಮಾರಮ್ಮ |
| ಬರಿಗೇರಮ್ಮ | ಐಮಂಗಲದ ಕಲ್ಲುಕುಂಟಮ್ಮ |
| ತಿಪ್ಪನಗಟ್ಟಮ್ಮ | ಹೂವತೊಟ್ಲಲ ಮಾರಮ್ಮ |
| ಮಸಿಯಮ್ಮ | ಮತ್ಸಮುದ್ರದ ಕರಿಯಮ್ಮ |
| ಅಂತರಗಟ್ಟಮ್ಮ | ಕಣಿವೆಮಾರಮ್ಮ |
| ಚೀರನಹಳ್ಳಿ ದುರುಗಮ್ಮ | ಹೊದಿಗೆರೆ ಸಿದ್ದಪ್ಪ. |
| (ಜಂಪಣ್ಣಾಯ್ಕನಕೋಟೆ) | |

ಈ ನ್ಯಾಯನಿರ್ಣಯದಂತೆ, ಹೆಗ್ಗಡೆಲೋರ ಗಿರಿಯನಿಗೇ ಏಕನಾಥಮ್ಮನ ಸಿಡಿ ಸಂದರ್ಭದಲ್ಲಿ ಭಕ್ತರ ಬೆನ್ನಿಗೆ ಕೊಂಡಿಚುಚ್ಚುವ ಹಕ್ಕು ಉಳಿದಂತಾಯಿತು. ಆಯಾ ದೇವತೆಗಳ ಉತ್ಸವ ಸಂದರ್ಭದಲ್ಲಿ ಸರಕಾರ(ದುರ್ಗದ ಆಡಳಿತ)ವು ಕೊಂಡಿ ಮಾಡಿಸಿ ಕೊಟ್ಟಿರುತ್ತದೆ; ಅದನ್ನು ಭಕ್ತರಿಗೆ ಚುಚ್ಚುವಾಗ ಊರುಕಾಣಿಕೆ, ಹುಚ್ಚು(ಉತ್ಸವ) ಕಾಣಿಕೆ, ಹಚ್ಚಡ (ಉತ್ತರೀಯ) ಮುಂತಾದ ಮರ್ಯಾದೆಗಳನ್ನು ಪಡೆದುಕೊಂಡು ತಮ್ಮ ತಮ್ಮ ದೇವತೆಗಳನ್ನು ಓಲೈಸಿಕೊಂಡು ಇರಬೇಕೆಂದು ಭರಮಣ್ಣನಾಯಕನು ನೇಮಿಸುತ್ತಾನೆ. ಅಲ್ಲದೆ, ಈ ನ್ಯಾಯನಿರ್ಣಯದ ಸಂದರ್ಭದಲ್ಲೆ ಅರಮನೆಯಿಂದ ನಾಗತಿಯರು ಕಾಣಿಕೆಯಾಗಿ ಕೊಟ್ಟ ಜೋಡು (ಜವಳಿ=ಸೀರೆ; ದಗಲೆ; ವಸ್ತ್ರ) ೨ ಮತ್ತು ವಜ್ರದ ಜೋಡು ೫- ಒಟ್ಟು ೭ ಜೋಡುಗಳನ್ನು ಸಲ್ಲಿಸಲಾಗುತ್ತದೆ. ಆ ನಂತರ ಇದರಲ್ಲಿ ಒಂದು ಜೋಡು ಕಳುವಾಗುತ್ತದೆ. ಉಳಿದುಕೊಂಡ ೬ ಜೋಡುಗಳಲ್ಲಿ ೩ ಜೋಡುಗಳನ್ನು ರಾಮನ ವಶಕ್ಕೆ ನೀಡಲಾಗುತ್ತದೆ. ಗಿರಿಯನ ಬಳಿಯಲ್ಲಿ ೧ ಜೋಡು, ಐಮಂಗಲದ ಮಣ್ಣುಗನ ಮಗ ಅಡವಿ ಬಳಿಯಲ್ಲಿ ೧ ಜೋಡು ಮತ್ತು ಮಾರಿಕಣಿವೆಯ ವೀರಹನುಮನ ಬಳಿಯಲ್ಲಿ ೧ ಜೋಡು ಉಳಿಯುತ್ತವೆ.[೬]



ಗಾರೆಬಾಗಿಲು ಬಳಿಯಿರುವ ಏಕನಾಥಮ್ಮ(ಏಕನಾಥೇಶ್ವರಿ)ನ ಪಾದಗುಡಿ, ಚಿತ್ರದುರ್ಗ

ಸಮಕಾಲೀನ ಧಾರ್ಮಿಕ ವಿಧಿ-ವಿಧಾನಗಳಿಗೆ ಸಂಬಂಧಿಸಿದಂತೆ ಇದೊಂದು ಮುಖ್ಯವಾದ ನಿರ್ಣಯವೆನ್ನಬೇಕು. ದುರ್ಗದ ಅಧಿದೇವತೆ ಏಕನಾಥಮ್ಮ(ಏಕನಾಥೇಶ್ವರಿ)ನಿಗೆ ಭಕ್ತರು ಸಲ್ಲಿಸುವ ಸಿಡಿಸೇವೆಯ ಮಟ್ಟಿಗೆ, ಅವರ ಬೆನ್ನಿಗೆ ಕೊಂಡಿಚುಚ್ಚುವ ಆಚರಣೆಯಂಥಾ ವಿಶಿಷ್ಟ ಅಂಶವೊಂದನ್ನು ಒಳಗೊಂಡಿದೆ ಈ ವ್ಯಾಜ್ಯ. ಹೆಗ್ಗಡೆಲೋರ ಗಿರಿಯನನ್ನು 'ಪವಾಡಿ' ಎಂದು ಕರೆದಿರುವುದು ಗಮನಾರ್ಹ. ಈತ ಪಾರಂಪರಿಕವಾಗಿ ಮುಂದುವರೆದು ಕೊಂಡು ಬಂದ ಉಚ್ಚಂಗಮ್ಮ (ರಾಜ ಉತ್ಸವಾಂಬಾ) ದೇವತೆಯ ಸ್ತುತಿಪಾಠಕ(ಜೋಗಿ-ಜೋಗಪ್ಪ?)ರ ಸಾಲಿಗೆ ಸೇರಿದ್ದಿರಬಹುದು. ಏಕನಾಥಮ್ಮನಿಗೆ ಇಂದಿಗೂ ವರುಷಕ್ಕೊಮ್ಮೆ 'ಸಿಡಿಸೇವೆ' ಸಲ್ಲಿಸಲಾಗುತ್ತಿದೆ. ಆದರೆ ಈ ದೇವತೆಗೆ 'ಬಂಡಿಸಿಡಿ' ಸೇವೆ ನಡೆಯುತ್ತಿದ್ದುದನ್ನು ಈ ವ್ಯಾಜ್ಯದಲ್ಲಿ ದಾಖಲಿಸಿರುವುದು ಗಮನಾರ್ಹ.

ಚಿತ್ರದುರ್ಗ ನಾಯಕ ಅರಸರು ಗ್ರಾಮದೇವತೆಗಳ ಧಾರ್ಮಿಕವಿಧಿಗಳಿಗೆ ಸಂಬಂಧಿಸಿದಂತೆ ಪಾರಂಪರಿಕವಾಗಿ ಬಂದ ಆಚರಣೆಗಳನ್ನೆ ಮುಂದುವರೆಸುವುದಕ್ಕೆ ಬದ್ಧರಾಗಿದ್ದುದು ಸ್ಪಷ್ಟ. ಅಲ್ಲದೆ, ಈ ದೇವತೆಗಳಿಗೆ ಅರಮನೆ(ಸರಕಾರ)ಯಿಂದ ಸಲ್ಲುತ್ತಿದ್ದ ಗೌರವ/ಕಾಣಿಕೆಗಳ ವಿವರವೂ ಈ ವ್ಯಾಜ್ಯದ ಮೂಲಕ ದೊರೆಯುತ್ತದೆ. ನಾಯಕನೇ ಅಲ್ಲದೆ, ನಾಗತಿಯರೂ ಸೇವಾಕರ್ತರಾಗಿದ್ದುಕೊಂಡು ಈ ದೇವತೆಗಳಿಗೆ ತಮ್ಮ ಪಾಲಿನ ಕಾಣಿಕೆ ಸಲ್ಲಿಸುತ್ತಿದ್ದುದು ಸಹಾ ವ್ಯಕ್ತಪಡುತ್ತದೆ. ಕೆಲವು ವಸ್ತ್ರಗಳು ಮತ್ತು ಒಡವೆಗಳೇ ಇಲ್ಲಿಯ ಕಾಣಿಕೆ ವಸ್ತುಗಳು. ಇವುಗಳನ್ನು ಆರುಭಾಗಗಳಾಗಿ ವಿಂಗಡಿಸಿ ವಿತರಿಸಿದುದನ್ನು ನೋಡಬಹುದು. ಇನ್ನೊಂದು ಭಾಗವು ಕಳುವಾದ ಪ್ರಸಂಗವೂ ಇಲ್ಲಿ ದಾಖಲಾಗಿರುವುದರಿಂದ, 'ದೇವರಭಯ'ವಿಲ್ಲದ ಹೀನವ್ಯಕ್ತಿಗಳೂ ಇಂಥಾ ಸಂದರ್ಭಗಳಲ್ಲಿ ಸನಿಹದಲ್ಲಿಯೇ ಸುಳಿದಾಡುತ್ತಿದ್ದಿರಬಹುದು!

ಇತರ ಅರಸರಂತೆಯೇ ಭರಮಣ್ಣನಾಯಕನೂ ಏಕನಾಥಮ್ಮನ ಬಗೆಗೆ ಅಪಾರ ಭಕ್ತಿಯನ್ನು ಹೊಂದಿದ್ದ. ಈತನು ಕೆಳಗಿನಪೇಟೆಯಲ್ಲಿ ಈ ದೇವತೆಯ ಪಾದದ ಗುಡಿಯನ್ನು ಮಾಡಿಸಿದ ಪ್ರಸ್ತಾಪವಿದೆ ದಾಖಲೆಯಲ್ಲಿ. ಇಲ್ಲಿ ಕೆಳಗಿನಪೇಟೆಯೆಂದರೆ, ಹಿಂದಿನ ಗಾರೆಬಾಗಿಲು (ಕೋಟೆಯ ೨ನೇ ಹೆಬ್ಬಾಗಿಲು) ಹೊರಗಿನ ಪೇಟೆ. ಮೊದಲಿಗೆ ಈ ಪಾದದಗುಡಿ (ಮರದಲ್ಲಿ ನಿರ್ಮಿಸಲಾದ ಗುಡಿ) ಇದ್ದುದು ಕರುವಿನಕಟ್ಟೆ ಬಳಿಯ ಅಗಳು ಪರಿಸರದಲ್ಲಿದ್ದ ತೊಟ್ಟಿಲುಬಾವಿಯ ಬಳಿ. ಈ ನಾಯಕ ಯಾವುದೋ ಕಾರಣಕ್ಕೆ ತೊಟ್ಟಿಲುಬಾವಿ ಬಳಿಯಿದ್ದ ಈ ಮರದಗುಡಿಯನ್ನು ಕಿತ್ತು ಗಾರೆಬಾಗಿಲು ಬಳಿಯಲ್ಲಿ ಹೊಸದಾಗಿ ನಿರ್ಮಿಸಲು ನಿರ್ಧರಿಸಿದ. ಮೇಲುದುರ್ಗದ ಮೂಲಗುಡಿಯನ್ನು ಹೊರತುಪಡಿಸಿದರೆ, ಮೇಲುದುರ್ಗ ಮತ್ತು ಕೆಳದುರ್ಗಗಳಲ್ಲಿರುವ ಏಕನಾಥಮ್ಮನ ಪಾದಗಟ್ಟೆ/ಗುಡಿಗಳ ಒಟ್ಟು ಸಂಖ್ಯೆ ೬. ಈಗ ಸಿಡಿ ನಡೆಯುತ್ತಿರುವ ಪ್ರಮುಖ ಎಡೆಯೆಂದರೆ ಗಾರೆಬಾಗಿಲು ಬಳಿಯಿರುವ ಪಾದದಗುಡಿಯ ಬಯಲು.

* * *

**ವ್ಯಾಜ್ಯ ೩ :** ದಾವಣಗೆರೆಗ್ರಾಮದ ಗೌಡಿಕೆಪಕ್ಕಿನ ವ್ಯಾಜ್ಯ

**ವ್ಯಾಜ್ಯಗಾರರು :** ಸಾದರ ಮುದಿಯಣ್ಣಗೌಡ v/s ಕುರುಬರ ನಾಗಯ್ಯ ಮತ್ತು ಗೊಲ್ಲರ ಗಿಡ್ಡಯ್ಯಗೌಡ

**ತೇದಿ :** ೧೭೦೬ ಸೆಪ್ಟೆಂಬರ್ ೨೯ ಭಾನುವಾರ

**ನ್ಯಾಯತೀರ್ಮಾನವಾದ ಸ್ಥಳ :** ಕೆಳದುರ್ಗದ ಅಯ್ಯಣ್ಣನಪೇಟೆ ಆಂಜನೇಯಸ್ವಾಮಿ ದೇವಾಲಯ

ಬಿಚ್ಚುಗತ್ತಿ ಭರಮಣ್ಣನಾಯಕನ ಆಳ್ವಿಕೆಯ ೧೭ನೇ ವರುಷದಲ್ಲಿ, ದಾವಣಗೆರೆ ಗ್ರಾಮದ ಗೌಡಿಕೆ ಮೇಲಿನ ಹಕ್ಕನ್ನು ಕುರಿತ ವ್ಯಾಜ್ಯ ಎದುರಾಯಿತು. ಆದರೆ ಈ ವ್ಯಾಜ್ಯ ಇತ್ಯರ್ಥವಾದುದು ದಿವ್ಯಪ್ರಮಾಣದ ಮೂಲಕ ಎಂಬುದು ಇಲ್ಲಿಯ ವಿಶೇಷತೆ. ಆಯಗಾರರು, ದೈವದವರು, ಅಧಿಕಾರಿಗಳು ಮೊದಲಾದವರ ಸಮಕ್ಷಮದಲ್ಲಿ ಇದು ನೆರವೇರಿತು. ವ್ಯಾಜ್ಯದ ವಿವರ ಇಂತಿದೆ: ಚಿತ್ರದುರ್ಗರಾಜ್ಯಕ್ಕೆ ಸಲ್ಲುವ ಬೇತೂರು ಹೋಬಳಿ ದಾವಣಗೆರೆಗ್ರಾಮದ ಗೌಡನಾಗಿದ್ದವನೂ ಸಾದವಕ್ಕಲು ಕರುಣಗೌಡನ ಮಗನೂ ಆದ ಮುದಿಯಣ್ಣಗೌಡ; ಹಾಗೂ ಕುರುಬರ ಬೀರೇದೇವರ ಪೂಜಾರಿ ಕುರುಬರ ಕರಿಯಣ್ಣನ ಮಗ ನಾಗಯ್ಯ ಮತ್ತು ಗೊಲ್ಲರ ಗಿಡ್ಡ (ಬಡಾ) ಗಿರಿಯಣ್ಣನ ಮೊಮ್ಮಗ ಗಿಡ್ಡಯ್ಯಗೌಡ -ಈ ಮೂವರು, ಅಂದರೆ ಎರಡು ಪಕ್ಷಗಳ ನಡುವೆ, ದಾವಣಗೆರೆಗ್ರಾಮದ ಗೌಡಿಕೆ 'ನಮ್ಮದು-ತಮ್ಮದು' ಎಂದು ವ್ಯಾಜ್ಯ ಆರಂಭವಾಗುತ್ತದೆ. ಈ ಸಂಬಂಧದಲ್ಲಿ ಎರಡೂ ಪಕ್ಷಗಳವರು ಚಿತ್ರದುರ್ಗದ ಹುಜೂರು(ರಾಜದರ್ಬಾರ್)ಗೆ ಅರಿಕೆ ಮಾಡಿಕೊಳ್ಳುತ್ತಾರೆ.

ಭರಮಣ್ಣನಾಯಕನು ವ್ಯಾಜ್ಯಗಾರರಲ್ಲಿ ಸಾದರ ಮುದಿಯಣ್ಣ ಮತ್ತು ಕುರುಬರ ನಾಗಯ್ಯರನ್ನು ದರ್ಬಾರಿಗೆ ಕರೆಯಿಸಿ, ಈರ್ವರೂ ತಮ್ಮ ತಮ್ಮ ಪೂರ್ವೋತ್ತರ ಹಾಗೂ ಸದ್ಯದ ಪರಿಸ್ಥಿತಿಗಳನ್ನು ವಿವರಿಸುವಂತೆ ಸೂಚಿಸುತ್ತಾನೆ. ದರ್ಬಾರಿನಲ್ಲಿ ಉಪಸ್ಥಿತರಿದ್ದ ಕುಮಾರ ಲಿಂಗಣ್ಣ, ಪ್ರಧಾನಿ ಗುಂಟನೂರು ಮಲ್ಲಪ್ಪ, ಹೊಗರಿ ಹರುಗಪ್ಪ, ಆನಂದಪುರದ ಈಶಣ್ಣ, ಬೊಕ್ಕಸದ ತಿಮ್ಮಪ್ಪ, ಜೊಕ್ಕಸದ ಪುಟ್ಟಪ್ಪ, ಪರಿಮಳದ ಅಯ್ಯಣ್ಣ, ಮಹಾನಾಡಿಗ ಗುರಸ್ತರು, ಉರಲಗಟ್ಟ ಲಿಂಗಣ್ಣ, ನಾರಾಯಣಪ್ಪ, ಆನೆ ಕೊಂಡದ ಗೌಡರ ಸಿದ್ದಯ್ಯ, ಶಿಖರಯ್ಯ ಮೊದಲಾದ ಗೌಡರು, ಸಾಮಾಜಿಕರು (ಗಣ್ಯರು), ಅಧಿಕಾರಸ್ಥರು, ರಾಜಬಂಧುಗಳು ಮೊದಲಾದವರು ಇವರ ವಾದಗಳನ್ನು ಆಲಿಸುತ್ತಾರೆ.

ತನ್ನ ವಾದವನ್ನು ಮೊದಲಿಗೆ ಮಂಡಿಸುವ ಸಾದರ ಮುದಿಯಣ್ಣಗೌಡನು, "ಕಾಮಗೇತಿವಂಶದ ಹಿಂದಿನ ಮೂವರು ಅರಸರು ದುರ್ಗವನ್ನು ಆಳುತ್ತಿದ್ದ ಕಾಲದಿಂದಲೂ ನಾನು ದಾವಣಗೆರೆಗ್ರಾಮದ ಗೌಡಿಕೆಯನ್ನು ಮಾಡುತ್ತಾ ಬಂದಿದ್ದೇನೆ. ಇದಕ್ಕೆ ಆಯಗಾರರಿಂದ ಸಾಕ್ಷಿಯನ್ನು ನುಡಿಸುತ್ತೇನೆ" ಎನ್ನುತ್ತಾನೆ. ಈತನ ಹೇಳಿಕೆಯನ್ನು ಪರಿಗಣಿಸುವ ಸಮಸ್ತ ದೈವದವರು (ಹಿರಿಯರು), ದಾವಣಗೆರೆಗ್ರಾಮದ ತಳವಾರ, ಕಮ್ಮಾರ, ಬಡಗಿ, ಅಕ್ಕಸಾಲೆ, ಕೆಲಸಿ -ಈ ಐದುಮಂದಿಯನ್ನು ಕರೆಯಿಸಿ ಅವರ ಗೌಡರು ಯಾರೆಂದು ಕೇಳುತ್ತಾರೆ. "ಸಾದರ ಮುದಿಯಣ್ಣನೇ ಗೌಡ; ಇನ್ನು ಕುರುಬರನ್ನು, ಗೊಲ್ಲರನ್ನು ಅರಿಯೆವು" ಎನ್ನುತ್ತಾರೆ ಈ ಆಯಗಾರರು. ಈ ಐದುಮಂದಿಯನ್ನು ಹೊರತುಪಡಿಸಿ ಬೇಗಾರಿಯನ್ನು ಕರೆಯಿಸಿ ಆತನ ಸಾಕ್ಷ್ಯ ಕೇಳಲಾಗುತ್ತದೆ. ಆಗ ಬೇಗಾರಿಯು, "ತರೀಕೆರೆ ಪಾಳೆಯಗಾರ ಹನುಮಪ್ಪನಾಯಕನ ದಾಳಿಯಿಂದಾಗಿ ದಾವಣಗೆರೆಗ್ರಾಮ ಹಾಳುಬಿದ್ದಿತ್ತು. ಆಗ ಮುದಿಯಣ್ಣನು ಗ್ರಾಮವನ್ನು ಎತ್ತಿಹಾಕುತ್ತಿದ್ದಲ್ಲಿ (ಅಕ್ರಮವಾಗಿ ವಶಪಡಿಸಿಕೊಳ್ಳುತ್ತಿದ್ದಲ್ಲಿ), ಕುರುಬರ ಕರಿಯಣ್ಣನ ಮಗ ನಾಗಯ್ಯನು ಅಲ್ಲಿಗೆ ಬಂದು 'ಗ್ರಾಮ ನಮ್ಮದು, ನೀನು ಗ್ರಾಮವನ್ನು ಹಾಕಬೇಡ'ವೆಂದು ಅಡ್ಡಿಪಡಿಸಿದ. ಆದರೆ ಮುದಿಯಣ್ಣಗೌಡನು ತನ್ನ (ಬೇತೂರು) ಸೀಮೆಯ ನಾಡಿಗರು, ಅಧಿಕಾರಿಗಳನ್ನು ಸಾಕ್ಷಿಯಾಗಿ ಕರೆಯಿಸಿ, ಕುರುಬರ ಕರಿಯಣ್ಣ(ನಾಗಯ್ಯ)ನನ್ನು ಬೆದರಿಸಿ ಅಲ್ಲಿಂದ ಓಡಿಸಿದನೆಂದು ನನ್ನ ಹಿರಿಯರು ಹೇಳುವರು" ಎಂದು ಸಾಕ್ಷ್ಯ ನುಡಿಯುತ್ತಾನೆ.

ಆಯಗಾರರಿಂದ ಈ ಪ್ರಕಾರ ಎರಡುಬಗೆಯ ಸಾಕ್ಷ್ಯ ಹೊರಬೀಳುತ್ತದೆ. ಇದರಿಂದ ದೈವದವರಿಗೆ ವ್ಯಾಜ್ಯವನ್ನು ಬಗೆಹರಿಸುವ ಮಾರ್ಗ ತೋರದಾದಾಗ, ಅವರು ಅಂತಿಮವಾಗಿ ಹಾಗೂ ಅನಿವಾರ್ಯವಾಗಿ ದಿವ್ಯಪ್ರಮಾಣಸಾಕ್ಷ್ಯದ ತೀರ್ಮಾನ ಕೈಗೊಳ್ಳುತ್ತಾರೆ. ಮುದಿಯಣ್ಣಗೌಡ ಮತ್ತು ನಾಗಯ್ಯ- ಈ ಈರ್ವರನ್ನೂ ಉಗ್ರಪರೀಕ್ಷೆಗೆ ಒಳಪಡಿಸಲು ನಿರ್ಧರಿಸುತ್ತಾರೆ. ದೇವರ ಸನ್ನಿಧಿಯಲ್ಲಿ ಕಾಯಿಸಿದ ಹಾರೆಯಗಟ್ಟಿಯನ್ನು ಕೈಯಲ್ಲಿ ಹಿಡಿದು ತೋರಿಸುವುದರೊಡನೆ ತಮ್ಮ ನ್ಯಾಯದ ನಿಲುವನ್ನು ಸಮರ್ಥಿಸಿಕೊಳ್ಳುವಂತೆ

ಸೂಚಿಸುತ್ತಾರೆ. ಇದಕ್ಕೆ ಸಮ್ಮತಿಸಿದ ನಾಗಯ್ಯ ಮತ್ತು ಗಿಡ್ಡಯ್ಯ ಈರ್ವರೂ ಅಲ್ಲಿಯೇ ತಮ್ಮ 'ಒಪ್ಪಿಗೆ ಪತ್ರ'ವನ್ನು ಬರೆದುಕೊಡುತ್ತಾರೆ. ಇದಕ್ಕೆ ಪ್ರತಿಯಾಗಿ ಮುದಿಯಣ್ಣಗೌಡನು, "ನಾಗಯ್ಯನು ಕಾದ ಹಾರೆಯುಗಟ್ಟಿಯನ್ನು ಎತ್ತಿ ವ್ಯಾಜ್ಯವನ್ನು ಗೆದ್ದರೆ ನಾನು ಅಪರಾಧ(ದಂಡ)ವನ್ನು ಕೊಟ್ಟು, ಗ್ರಾಮವನ್ನು ಬಿಟ್ಟುಕೊಡುತ್ತೇನೆ" ಎಂದು ಕರಾರುಪತ್ರ ಬರೆದುಕೊಡುತ್ತಾನೆ. ಹೀಗೆ ಎರಡೂ ಪಕ್ಷದವರು ಒಪ್ಪಂದಕ್ಕೆ ಪರಸ್ಪರ ಬದ್ಧರಾಗುತ್ತಾರೆ.

ಭರಮಣ್ಣನಾಯಕನು ತನ್ನ ದಳವಾಯಿಗಳು, ಕುಮಾರರು, ಅಳಿಯಂದಿರು, ಗುರಿಕಾರರು, ಸಾಮಾಜಿಕರು, ಮಹಾನಾಡಿಗ ಗುರಸ್ತರು, ಗುರಿಕಾರರು, ಊಳಿಗದವರು ಮೊದಲಾದ ಸುಮಾರು ೩೬ ಮಂದಿ ಸಮಸ್ತರನ್ನು ಕರೆಯಿಸುತ್ತಾನೆ. ಕೆಳದುರ್ಗದ ಪೇಟೆಯ ಹನುಮಂತರಾಯ ದೇವಸ್ಥಾನದಲ್ಲಿ ಎಲ್ಲರೂ ಸಭೆ ಸೇರುತ್ತಾರೆ. ಎರಡೂ ಪಕ್ಷದವರಿಂದ ದೇವರಮುಂದೆ ಪ್ರಮಾಣ ಮಾಡಿಸಲಾಗುತ್ತದೆ. ದೇವರಪೂಜೆಯ ನಂತರ ಪರೀಕ್ಷೆಗೆಂದು ತಂದ ಉಕ್ಕಿನಗಟ್ಟಿಗೂ ಪೂಜೆ ಮಾಡಿಸಲಾಗುತ್ತದೆ; ಹಾಗೂ ಅದನ್ನು ಕಾಯಿಸಲು ಕೊಡಲಾಗುತ್ತದೆ. ಆ ನಂತರ ನಾಗಯ್ಯನಿಗೆ ಸ್ನಾನಮಾಡಿಸಿ ಮಡಿಹೊದಿಕೆ ಹೊದಿಸಿ, ದೇವರ ಎದುರಾಗಿ ನಿಲ್ಲಿಸಿ ಏಳುಮಂಡಲವನ್ನು ಬರೆಯಿಸಲಾಗುತ್ತದೆ. ಆತನ ಕೈಯೊಳಗೆ ಅರಳೆಎಲೆ ಹಿಡಿಸಿ, ಅದನ್ನು ಅಂಗನೂಲಿನಿಂದ ಸುತ್ತಿ ಅದರ ಮೇಲೆ ದೇವರ ಪ್ರಸಾದ ಇರಿಸಲಾಗುತ್ತದೆ. ಆಗ ಚಿತ್ರದುರ್ಗದವನೇ ಆದ ಕಮ್ಮಾರ ತಿಮ್ಮಯ್ಯನು ಚೆನ್ನಾಗಿ ಕಾದ ಉಕ್ಕಿನಗಟ್ಟಿಯನ್ನು ಇಕ್ಕಳದಲ್ಲಿ ಹಿಡಿದು ಅದನ್ನು ನಾಗಯ್ಯನ ಕೈಯೊಳಗೆ ಇರಿಸುತ್ತಾನೆ. ಅದನ್ನು ಹಿಡಿದ ನಾಗಯ್ಯನು ಏಳುಮಂಡಲವನ್ನು ದಾಟಿ ನಡೆದು ದೇವರಿಗೆ ಆರತಿ ಬೆಳಗಿ ಅದನ್ನು ಕೆಳಕ್ಕೆ ಹಾಕುತ್ತಾನೆ. ಆತನ ಕೈ ಸುಟ್ಟಿರುವುದಿಲ್ಲ. ಇದನ್ನು ವೀಕ್ಷಿಸಿದ ದೈವದವರು ನಾಗಯ್ಯ ಗೆದ್ದನೆಂದು ಘೋಷಿಸುತ್ತಾರೆ; ಹಾಗೂ ಇದನ್ನು ಭರಮಣ್ಣನಾಯಕನಿಗೆ ತಿಳಿಸುತ್ತಾರೆ. ನಾಯಕನು ವ್ಯಾಜ್ಯದಲ್ಲಿ ಗೆದ್ದ ನಾಗಯ್ಯ ಮತ್ತು ಗಿಡ್ಡಯ್ಯರನ್ನು ಕರೆಯಿಸಿ ಉಡುಗೊರೆ ವೀಳೆಯಗಳನ್ನು ಕೊಡಿಸಿ, ದಾವಣಗೆರೆ ಗೌಡಿಕೆ ಉಭಯರಿಗೂ ಸೇರಿದೆಯೆಂದು ತೀರ್ಪುಕೊಡುತ್ತಾನೆ. ಅಲ್ಲದೆ, ಈ ನ್ಯಾಯತೀರ್ಮಾನವನ್ನು ಜಯರೇಖೆ/ಜಯಪತ್ರದ ರೂಪದಲ್ಲಿ ತಾಮ್ರಪಟದ ಮೇಲೆ ಬರೆಯಿಸಲಾಗುತ್ತದೆ.[೨]

ಚಿತ್ರದುರ್ಗ ಚರಿತ್ರೆಯಲ್ಲಿ ದಾಖಲುಗೊಂಡಿರುವ ದಿವ್ಯಪ್ರಮಾಣದ (Trial by ordeal) ಮೂರು ಸಂದರ್ಭಗಳಲ್ಲಿ ಇದು ಮೊದಲನೆಯದು. ಎರಡು ಮತ್ತು ಮೂರನೇ ಉದಾಹರಣೆಗಳು ಆ ನಂತರ ಬಂದ ಅರಸ ಹಿರೇಮದಕರಿನಾಯಕನ ಕಾಲದಲ್ಲಿ ದೊರೆಯುತ್ತವೆ. (೧೭೩೫ರಲ್ಲಿ ಮುದ್ದೆತುಪ್ಪದಪ್ರಮಾಣ; ೧೭೩೬ರಲ್ಲಿ ದಿಪ್ಪಿದೀವಿಗೆ ಮುಟ್ಟಿಸುವ ದಿವ್ಯ). ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತವಿದ್ದ ಇಂಥಾ ದಿವ್ಯಪ್ರಮಾಣ ಪ್ರಕರಣಗಳಲ್ಲಿ ಕಾಯಿಸಿದ ಉಕ್ಕಿನ ಸರಳು/ಗುಂಡು ಹಿಡಿಸುವುದೂ ಒಂದು. ಇದೊಂದು ಸಾಮಾನ್ಯವಾದ ಹಾಗೂ ಸರಳವಾದ ಉಗ್ರಪರೀಕ್ಷೆ. ಇದಕ್ಕೆ ಸಾಕಷ್ಟು ಉದಾಹರಣೆಗಳು ಕಂಡುಬರುತ್ತವೆ. ಇದೊಂದು 'ಅಗ್ನಿದಿವ್ಯ'ದ ಪ್ರಕಾರ. ೧೮ನೇ ಶತಮಾನದಲ್ಲೂ ಇದು



ಪೇಟೆ
ಆಂಜನೇಯಸ್ವಾಮಿ
ದೇವಸ್ಥಾನದ
ಪ್ರವೇಶದ್ವಾರ
ಅಯ್ಯಣ್ಣನಪೇಟೆ
ಚಿತ್ರದುರ್ಗ



ದೇವಸ್ಥಾನದ
ಮೂಲರಚನೆ



ಆಂಜನೇಯಸ್ವಾಮಿಯ
ಗರ್ಭಗುಡಿ

ಆಚರಣೆಯಲ್ಲಿದ್ದಿತೆಂಬುದನ್ನು ಈ ವ್ಯಾಜ್ಯವು ಸಮರ್ಥಿಸುತ್ತದೆ. (ಕೆಲವು ವರ್ಷಗಳ ಹಿಂದಿನವರೆಗೆ, ಗ್ರಾಮೀಣ ಪರಿಸರದಲ್ಲಿ ಕೆಲವು ಅಪರಾಧ ಪ್ರಕರಣಗಳನ್ನು ಇತ್ಯರ್ಥ ಪಡಿಸಲೋಸುಗ ಇದನ್ನು ಅನುಸರಿಸಲಾಗುತ್ತಿದ್ದಿತೆನ್ನಲು ಆಧಾರಗಳಿವೆ). ಪ್ರಸ್ತುತ ಪ್ರಕರಣದಲ್ಲಿ, ಈ 'ದೇವರಸತ್ಯ'ವನ್ನು ಅನುಮೋದಿಸಿ ನಾಯಕ ಮತ್ತು ದೈವದವರು ತೀರ್ಪು ನೀಡಿದ್ದರೆ, ಇದನ್ನು ವಾದಿ-ಪ್ರತಿವಾದಿಗಳು ಗೌರವಪೂರ್ವಕ ಮಾನ್ಯಮಾಡಿ ತಮ್ಮ ವ್ಯಾಜ್ಯವನ್ನು ಬಗೆಹರಿಸಿಕೊಂಡುದು ಗಮನಾರ್ಹ.

ಈ ನ್ಯಾಯತೀರ್ಮಾನಕ್ಕೆ ಸಂಬಂಧಿಸಿದ ತಾಮ್ರಪತ್ರದಲ್ಲಿ ಇದರಲ್ಲಿ ಭಾಗವಹಿಸಿದ ಸುಮಾರು ೩೬ ಮಂದಿಯ ಹೆಸರುಗಳಿವೆ. ಈ ಮಟ್ಟಿಗೆ ಇದೊಂದು ಉಪಯುಕ್ತ ದಾಖಲೆ. ಈ ಕಾಲದ ಪ್ರಸಿದ್ಧ ಅಧಿಕಾರಿಗಳು ಹಾಗೂ ವ್ಯಕ್ತಿಗಳು ಈ ಪಟ್ಟಿಯಲ್ಲಿ ಕಂಡುಬರುತ್ತಾರೆ. ನ್ಯಾಯತೀರ್ಮಾನವಾದ ಎಡೆಯಾದರೂ ಕೆಳದುರ್ಗದ ಅಯ್ಯಣ್ಣನಪೇಟೆಯಲ್ಲಿರುವ 'ಪೇಟೆ ಆಂಜನೇಯಸ್ವಾಮಿಗುಡಿ'. ಅಂದಿಗೂ ಇಂದಿಗೂ ಭಾವನಾತ್ಮಕವಾಗಿ ಹಾಗೂ ಸಾಂಸ್ಕೃತಿಕವಾಗಿ ಇದು ಈ ಭಾಗದ ಪ್ರಮುಖಕೇಂದ್ರವೆಂದು ಪರಿಗಣಿಸಲ್ಪಟ್ಟಿದೆ. 'ಚಿತ್ರದುರ್ಗದ ಬಖೈರ್' ನಲ್ಲಿ ಈ ಆಂಜನೇಯನನ್ನು 'ಪೇಟೆಯ ಮುಖ್ಯಪ್ರಾಣ' ಎಂದು ಸಂಬೋಧಿಸಿದೆ. ಅಯ್ಯಣ್ಣನೆಂಬವನು ಭರಮಣ್ಣನಾಯಕನ ಸೇವೆಯಲ್ಲಿದ್ದ ಓರ್ವ ಅಧಿಕಾರಿ. ಈತನ ಪೂರ್ತ ಹೆಸರು ಪರಿಮಳದ ಅಯ್ಯಣ್ಣ ಅಥವಾ ಶೆಟ್ಟರ ಅಯ್ಯಣ್ಣ. ಈತ ಜನಪ್ರಿಯ ಅಧಿಕಾರಿಯಾಗಿದ್ದನೆನ್ನಲು ಪ್ರಸಿದ್ಧ ಚಿಕ್ಕಪೇಟೆಗೆ ಹೊಂದಿಕೊಂಡಿರುವ ಪೇಟೆಗೆ (ಹಳೆಯ ಬಡಾವಣೆಗೆ) ಈತನ ಹೆಸರು ಇಟ್ಟಿರುವುದೇ ಸಾಕ್ಷಿ. ಈತ ತನ್ನ ಹೆಸರಿನಲ್ಲಿ ಚಿತ್ರದುರ್ಗದಲ್ಲಿ (ಅಯ್ಯಣ್ಣನ)ಬಾವಿಯನ್ನೂ ಮಠ ಮತ್ತು ಕಟ್ಟೆ(ಒಡ್ಡು)ಗಳನ್ನೂ ಮಾಡಿಸಿದ. ಪ್ರಸ್ತುತ ವ್ಯಾಜ್ಯತೀರ್ಮಾನದಲ್ಲಿ ಭಾಗವಹಿಸಿದ್ದ ಪಂಚಾಯಿತರಲ್ಲಿ ಈತನೂ ಒಬ್ಬ.

ಒಟ್ಟಿನಲ್ಲಿ, ಈ ವ್ಯಾಜ್ಯದ ವಿಚಾರಣೆಯು ಮೇಲುದುರ್ಗದಲ್ಲಿ ಬಿಚ್ಚುಗತ್ತಿ ಭರಮಣ್ಣ ನಾಯಕನ ಸಮ್ಮುಖದಲ್ಲಿ ನಡೆದಿದ್ದರೆ, ದಿವ್ಯಪ್ರಮಾಣದ ಉಗ್ರಪರೀಕ್ಷೆ ನಡೆದುದು ಕೆಳದುರ್ಗದ ಪೇಟೆ ಆಂಜನೇಯಸ್ವಾಮಿಗುಡಿಯಲ್ಲಿ, ಅಂದರೆ ದೇವರ ಸಮ್ಮುಖದಲ್ಲಿ. ಇಂಥಾ ಪ್ರಕರಣಗಳಲ್ಲಿ ಅಧಿಕಾರಸ್ಥರು, ಗ್ರಾಮಮುಖಂಡರು, ಹಿರಿಯರು ಮತ್ತಿತರರು ಆಯಗಾರರ ಮಾತಿಗೆ ನೀಡುತ್ತಿದ್ದ ಆದ್ಯತೆ ಇದರಿಂದ ದೃಢಪಡುತ್ತದೆ. ಅಲ್ಲದೆ, ಆಯಾಕಾಲದ ನಂಬಿಕೆಗಳ ನೆಲೆಯ ಆಚರಣೆಯನ್ನೂ ಈ ಪ್ರಕರಣವು ಸ್ಪಷ್ಟಪಡಿಸುತ್ತದೆ. ಅಂದಹಾಗೆ, ದಾವಣಗೆರೆಯು ಇಂದು ಕರ್ನಾಟಕದ ಪ್ರಮುಖ ವಾಣಿಜ್ಯನಗರಿಯಾಗಿ, ಜಿಲ್ಲಾಕೇಂದ್ರವಾಗಿ ಬೆಳಗುತ್ತಿದೆ. ಆದರೆ ೧೮ನೇ ಶತಮಾನದ ಆರಂಭದಲ್ಲಿ (೧೭೦೬) ಅದಿನ್ನೂ ಚಿತ್ರದುರ್ಗರಾಜ್ಯದ ಬೇತೂರು (ದಾವಣಗೆರೆ ತಾಲ್ಲೂಕು)ಸೀಮೆಗೆ ಸೇರಿದ್ದ ಒಂದು ಪುಟ್ಟ ಗ್ರಾಮವಾಗಿದ್ದಿತು; ಅದರ ಗೌಡಿಕೆಗೆ ಸಂಬಂಧಿಸಿದ ವ್ಯಾಜ್ಯವು ಚಿತ್ರದುರ್ಗದಲ್ಲಿ

ಇತ್ಯರ್ಥಗೊಂಡಿದ್ದಿತೆನ್ನುವುದೇ ಕಾಲಚಕ್ರದ ಪರಾವರ್ತನೆಗೆ ಒಂದು ಅಪರೂಪದ ಉದಾಹರಣೆಯೆನ್ನಬಹುದೇನೊ.*

**೪. ಹಿರೇಮದಕರಿನಾಯಕ (೧೭೨೧-೧೭೪೯)**

**ವ್ಯಾಜ್ಯ ೧ : ವಿರೂಪಾಕ್ಷಜೋಯಿಸರ ಸ್ವಾಸ್ತಿಗ್ರಾಮಗಳ ಹಕ್ಕಿನ ವ್ಯಾಜ್ಯ**

**ವ್ಯಾಜ್ಯಗಾರರು : ಯೋಗಪ್ಪ v/s ಚೆಂಗರಾಮಣ್ಣನ ಮಗ ಕೆಂಚಪ್ಪ**

**ತೇದಿ : ೧೭೨೪**

**ನ್ಯಾಯತೀರ್ಮಾನವಾದ ಸ್ಥಳ : ಚಿತ್ರದುರ್ಗ**

ಬಿಳಿಚೋಡು ಜೋಯಿಸರ ಸಂತತಿಗೆ ಸೇರಿದ ಚಿನ್ನದಮನೆ ಚೆಂಗರಾಮಣ್ಣನ ಮಗ ಕೆಂಚಪ್ಪನಿಗೂ ಅದೇ ಸಂತತಿಗೆ ಸೇರಿದ ಯೋಗಪ್ಪನಿಗೂ ವಿರೂಪಾಕ್ಷಜೋಯಿಸರ ಸ್ವಾಸ್ತಿ ಗ್ರಾಮಗಳ ಹಕ್ಕಿನ ವಿಚಾರದಲ್ಲಿ ಭಿನ್ನಾಭಿಪ್ರಾಯ ಉಂಟಾಗುತ್ತದೆ. ಅದೇ ಸಂದರ್ಭದಲ್ಲಿ ಚಿನ್ಮೂಲಾದ್ರಿಗಿರಿದುರ್ಗ(ಚಿತ್ರದುರ್ಗ)ಕ್ಕೆ ದಯಮಾಡಿಸಿದ್ದ ಶ್ರೀಮನ್ನೃಸಿಂಹ ಭಾರತೀಸ್ವಾಮಿ ಗಳವರ ಸಮ್ಮುಖದಲ್ಲಿ ಈ ಎರಡೂ ಪಕ್ಷದವರು ತಮ್ಮ ತಮ್ಮ ಅಹವಾಲನ್ನು ಸಲ್ಲಿಸುತ್ತಾರೆ. ವಿರೂಪಾಕ್ಷಜೋಯಿಸರ ಕಾಲದಲ್ಲಿ ಜಗಲೂರು ಮತ್ತು ಲಿಂಗದಹಳ್ಳಿ ಪಟ್ಟಡಿಗಳು ಚಿತ್ರದುರ್ಗ ನಾಯಕ ಅರಸರಿಂದ ದಾನಧಾರಾಪೂರ್ವಕ ಕೊಡಲಾಗಿದ್ದು, ಅದರಲ್ಲಿ ತನ್ನ ಪಾಲನ್ನು ಪಡೆಯಲಿಚ್ಛಿಸುತ್ತಾನೆ ಯೋಗಪ್ಪ. ಆದರೆ ಇದಕ್ಕೆ ಕೆಂಚಪ್ಪನಿಂದ ವಿರೋಧ ವ್ಯಕ್ತಪಟ್ಟು, ಇವರೀರ್ವರ ನಡುವೆ ಇದು ವ್ಯಾಜ್ಯವಾಗಿ ಮಾರ್ಪಡುತ್ತದೆ.

ಶ್ರೀಮನ್ನೃಸಿಂಹಭಾರತೀಸ್ವಾಮಿಗಳವರು ಸ್ಥಳೀಯರಾದ ಬ್ರಾಹ್ಮಣಸಭೆಯ ಜೋಯಿ ಸರು, ಶಾಸ್ತ್ರಿಗಳು, ಅವಧಾನಿಗಳು, ದೀಕ್ಷಿತರು, ಉಪಾಧ್ಯಾಯ ಮೊದಲಾದವರನ್ನೆ ಅಲ್ಲದೆ, ಗುಂಟನೂರ ಕೋನೇಲಭಟ್ಟ, ಬಿಳಿಚೋಡು ಶಾನುಭೋಗ ಸರ್ಜಿರಾಯರ ತಿಮ್ಮಣ್ಣ, ಈಸಾಮುದ್ರದ ಶಾನಬೋಗ ಅಪ್ಪಣ್ಣ, ಹುಲ್ಲೂರು ಶಾನುಬೋಗ ನಾರಾಣಪ್ಪ ಚಲುವಪ್ಪ, ಗುಂಟನೂರ ಶಾನುಬೋಗ ಹೊನ್ನಪ್ಪ, ದುರ್ಗದ ಸುಂಕದ ಶಾನುಬೋಗ ಮಲ್ಲಪ್ಪ ಮುಂತಾಗಿ ಸಕಲರನ್ನೂ ಸೇರಿಸಿ ಧರ್ಮಶಾಸ್ತ್ರದಲ್ಲಿ ವಿಜ್ಞಾನೇಶ್ವರಶಾಸ್ತ್ರವನ್ನು ಓದಿಸುತ್ತಾರೆ; ಹಾಗೂ ಅದರಲ್ಲಿಯ ನ್ಯಾಯವಿಧಿಗಳಂತೆ ತೀರ್ಮಾನ ಕೈಗೊಳ್ಳುತ್ತಾರೆ. ಶಾಸ್ತ್ರನಿರ್ಣಯವಿದ್ದಂತೆ, ಸ್ವಾಸ್ತಿಯನ್ನು ಧಾರಾಪೂರ್ವಕ ಸಂಪಾದಿಸಿದವರು ವಿರೂಪಾಕ್ಷ ಜೋಯಿಸರಾದ್ದರಿಂದ, ಅವರ ಮಗ ಪರಶುರಾಮಪ್ಪ ಮತ್ತು ಆತನ ಸಂತತಿಗೆ ಈ ಸ್ವಾಸ್ತಿ ಗ್ರಾಮಗಳು ಸಲ್ಲತಕ್ಕದ್ದೆಂದು ಅಪ್ಪಣೆ ಕೊಡಿಸುತ್ತಾರೆ. ಅಲ್ಲದೆ, ಈ ಸ್ವಾಸ್ತಿಗೆ ಎರಡು ಪಕ್ಷದವರೂ (ಉಭಯತರೂ) ಸಲ್ಲತಕ್ಕವರೆಂದು ಆಯಗಾರರೂ ತಮ್ಮ ನಿರ್ಣಯ ನೀಡುತ್ತಾರೆ. ಅನಾವಶ್ಯಕವಾಗಿ ಇಂಥಾ ವ್ಯಾಜ್ಯವನ್ನು ಉಂಟುಮಾಡಿದ ಉಭಯತರೂ ತಲಾ ೬ ವರಹ ದಂಡಕೊಡಬೇಕೆಂದು ತೀರ್ಮಾನಿಸಲಾಗುತ್ತದೆ.[೪]

---

* ಹೆಚ್ಚಿನ ವಿವರಗಳಿಗೆ, ಇದೇ ಸಂಪುಟದಲ್ಲಿ ಪ್ರಕಟಗೊಂಡಿರುವ ಬಿಚ್ಚುಗತ್ತಿ ಭರಮಣ್ಣ ನಾಯಕನ ಅವಧಿಯಲ್ಲಿ ದಾವಣಗೆರೆ ಗೌಡಿಕೆವ್ಯಾಜ್ಯದ ನ್ಯಾಯತೀರ್ಮಾನ ಎಂಬ ನನ್ನ ಲೇಖನವನ್ನು ಗಮನಿಸಿ.

ನಾಯಕ ಅರಸರಿಂದ ದತ್ತಿಯಾಗಿ ಪಡೆದುಕೊಂಡ ಈ ಸ್ವಾಸ್ತಿಗ್ರಾಮಗಳ ಮೇಲಿನ ಹಕ್ಕಿಗೆ ಸಂಬಂಧಿಸಿದ ಈ ವ್ಯಾಜ್ಯವು ಅತ್ಯಂತ ವಿಶಿಷ್ಟವಾದುದು. ಏಕೆಂದರೆ ಇದರ ನ್ಯಾಯತೀರ್ಮಾನವು ಚಿತ್ರದುರ್ಗ(ಕೆಳದುರ್ಗ)ದಲ್ಲೆ ಆಗಿದ್ದರೂ ದುರ್ಗದ ಅರಸನ ಸಮ್ಮುಖದಲ್ಲಾಗಲೀ ಇತರ ಅಧಿಕಾರಸ್ಥರ ಸಭೆಯಲ್ಲಾಗಲೀ ಆದುದಲ್ಲ. ಇದು ಇತ್ಯರ್ಥಗೊಂಡಿರುವುದು ಒಂದು ಪ್ರತಿಷ್ಠಿತ ಸಂಸ್ಥಾನದ ಧರ್ಮಗುರುಗಳೋರ್ವರ, ಅಂದರೆ ಶ್ರೀಮನ್ನೃಸಿಂಹಭಾರತೀಸ್ವಾಮಿಗಳವರ ಸಾನ್ನಿಧ್ಯದಲ್ಲಿ. ಇನ್ನು ಸ್ವಾಸ್ತಿಗ್ರಾಮಗಳ ಹಕ್ಕಿನ ಬಗೆಗೆ ವ್ಯಾಜ್ಯಹೂಡಿದವರಾದರೂ ಚಿತ್ರದುರ್ಗ ನಾಯಕ ಅರಸರಿಗೆ ತೀರಾ ಆಪ್ತರಾದ ಮನೆತನದವರು. ಈ ಎರಡೂ ಕಾರಣಗಳಿಗಾಗಿ ಇದಕ್ಕೆ ವಿಶೇಷ ಮಹತ್ವವಿದೆ. ಈ ನ್ಯಾಯತೀರ್ಮಾನದಲ್ಲಿ ಎರಡೂ ಪಕ್ಷಗಳವರು ಸಮಾನ ದಂಡ ತೆರುವಂತಾದುದೊಂದು ವಿರಳ ಉದಾಹರಣೆ.

ಪ್ರಸ್ತುತ ವ್ಯಾಜ್ಯದಲ್ಲಿ ಪ್ರಸ್ತಾಪಗೊಂಡಿರುವ ವಿರೂಪಾಕ್ಷಜೋಯಿಸರು ಚಿತ್ರದುರ್ಗ ಚರಿತ್ರೆಯಲ್ಲಿ ಗಣನೀಯ ಸ್ಥಾನ-ಮಾನ ಪಡೆದಂಥವರು. ಚರಿತ್ರೆ ಹೇಳುವಂತೆ, ಚಿತ್ರದುರ್ಗ ನಾಯಕ ಸಂಸ್ಥಾನವನ್ನು ಸ್ಥಾಪಿಸಿದ ಮತ್ತಿ ತಿಮ್ಮಣ್ಣನಾಯಕ(೧೫೬೮-೧೫೮೯)ನ ಪೂರ್ವಜರೊಡನೆ ಬಂದಂಥಾ ಈರ್ವರು ಸಹೋದರರೆಂದರೆ ಕರೇಜೋಯಿಸ ಮತ್ತು ವಿರೂಪಾಕ್ಷಜೋಯಿಸ. ಇದಕ್ಕೆ ಮೊದಲು ಇವರೀರ್ವರೂ ಹಂಪಿಯ ಶ್ರೀ ವಿರೂಪಾಕ್ಷೇಶ್ವರ ದೇವಸ್ಥಾನದಲ್ಲಿ 'ಮಂತ್ರಪುಷ್ಪಸೇವಾ' ನಿರತರಾಗಿದ್ದರು. ಮಂತ್ರಪುಷ್ಪ ವೆಂದರೆ, 'ದೇವರಿಗೆ ಮಹಾಮಂಗಳಾರತಿಯಾದ ಮೇಲೆ ಮಂತ್ರಪೂರ್ವಕ ಅರ್ಪಿಸುವ ಹೂವು ಮತ್ತು ಆಗ ಹೇಳುವ ಮಂತ್ರಸಮುದಾಯ.' ಈ ಸಹೋದರರು ನೆಲೆನಿಂತುದು ಬಿಳಿಚೋಡಿನಲ್ಲಿ (ಜಗಲೂರು ತಾಲ್ಲೂಕು). ಮತ್ತಿ ತಿಮ್ಮಣ್ಣನಾಯಕನಿಗೆ ಮುಂದೆ ಉನ್ನತ ಪದವಿ ದೊರೆಯುವುದೆಂದು ಭವಿಷ್ಯ ನುಡಿದವರು ವಿರೂಪಾಕ್ಷಜೋಯಿಸರು. ಇವರ ಮಗ ಪರಶುರಾಮಪ್ಪನು ಚಿತ್ರದುರ್ಗದಲ್ಲಿ ಮತ್ತಿ ತಿಮ್ಮಣ್ಣನಾಯಕನ ಬಳಿ ಅಧಿಕಾರಕ್ಕೆ ನಿಂತ. ಈತನು 'ಹರಿಯದ ಹಚ್ಚಡ, ಮುರಿಯದ ಒಡವೆ' ಕೊಡಿಸಬೇಕೆಂದು ನಾಯಕನನ್ನು ಕೇಳಿದಾಗ, ನಾಯಕನು ಈತನ ಮಕ್ಕಳಾದ ಯಲ್ಲಪ್ಪ ಮತ್ತು ಭೂನಪ್ಪ(ಭುವನಪ್ಪ)ರಿಗೆ ಲಿಂಗದಹಳ್ಳಿ ಸೇನಬೋವ(ಶಾನುಬೋಗ)ತನವನ್ನು ಕೊಟ್ಟ.

ಈ ವ್ಯಾಜ್ಯಕ್ಕೆ ಸಂಬಂಧಿಸಿದ ವಿವರದಲ್ಲಿ ಜಗಲೂರು ಮತ್ತು ಲಿಂಗದಹಳ್ಳಿ (ತೊರೆಲಿಂಗದಹಳ್ಳಿ) ಪಟ್ಟಡಿಗಳೆಂದು ಸೂಚಿಸಿದೆ. ಪಟ್ಟಡಿಯೆಂಬುದು ಆಡಳಿತಾತ್ಮಕ ಶಬ್ದವಾಗಿದ್ದು, ಗ್ರಾಮಗಳ ಸಮೂಹವೆಂದಾಗುತ್ತದೆ. ವಿರೂಪಾಕ್ಷಜೋಯಿಸರ ಮಗ ಪರಶುರಾಮಪ್ಪನ ಈರ್ವರು ಮಕ್ಕಳಿಗೆ ನೀಡಲಾದ ಜಗಲೂರು ಪಟ್ಟಡಿಯಲ್ಲಿ ೪೩ ಗ್ರಾಮಗಳು; ಲಿಂಗದಹಳ್ಳಿ ಪಟ್ಟಡಿಯಲ್ಲಿ ೧೯ ಗ್ರಾಮಗಳು- ಒಟ್ಟು ೬೨ ಗ್ರಾಮಗಳಿದ್ದವು. ವಿರೂಪಾಕ್ಷಜೋಯಿಸರ ಕಾಲದಲ್ಲಿ ಚಿತ್ರದುರ್ಗದ ನಾಯಕರು ದತ್ತಿಯಾಗಿ ನೀಡಿದ್ದ 'ಸ್ವಾಸ್ತಿಗ್ರಾಮಗಳು' ಇವೇ.

ಬ್ರಾಹ್ಮಣರಲ್ಲಿ ತಲೆದೋರಿದ ವ್ಯಾಜ್ಯಗಳು ಸಾಮಾನ್ಯವಾಗಿ ಬ್ರಾಹ್ಮಣರ ಸಭೆಗಳಲ್ಲಿ ಅವರ ಧಾರ್ಮಿಕಗುರುಗಳ ಸಮ್ಮುಖದಲ್ಲಿ ತೀರ್ಮಾನವಾಗುತ್ತಿದ್ದವೆಂಬುದನ್ನು ಈ ನ್ಯಾಯತೀರ್ಮಾನ ಸಂದರ್ಭವು ಸಮರ್ಥಿಸುತ್ತದೆ. ಕೆಲವು ಸಾಮಾಜಿಕ, ಅಂದರೆ ಕೌಟುಂಬಿಕ ಪ್ರಕರಣಗಳನ್ನು ಇತ್ಯರ್ಥಮಾಡುವಲ್ಲಿ ಧರ್ಮಗುರುಗಳೂ ನ್ಯಾಯಾಧೀಶರ ಪಾತ್ರವಹಿಸುತ್ತಿದ್ದರೆಂಬುದನ್ನು ಈಗಾಗಲೇ ಗಮನಿಸಲಾಗಿದೆ. ಪ್ರಸ್ತುತ ವ್ಯಾಜ್ಯತೀರ್ಮಾನ ದಲ್ಲಿ ನ್ಯಾಯಾಧೀಶನ ಸ್ಥಾನದಲ್ಲಿದ್ದವರು 'ಶ್ರೀಮನ್ನೃಸಿಂಹಭಾರತೀಸ್ವಾಮಿಗಳಯ್ಯನವರು'. ಇವರನ್ನು ದಾಖಲೆಯಲ್ಲಿ 'ಅಪ್ಪಯ್ಯಗಳು' ಎಂದು ಗೌರವದಿಂದ ಗುರುತಿಸಿದೆ. ಇವರು ಶ್ರೀ ಕೂಡಲೀ ಶೃಂಗೇರಿ ಸಂಸ್ಥಾನದ ಗುರುಪರಂಪರೆಯಲ್ಲಿ ಎಂಟನೆಯವರಾದ ಚತುರ್ಥ ಶ್ರೀ ನರಸಿಂಹ ಭಾರತೀಸ್ವಾಮಿಗಳಿರಬೇಕು. ಇವರ ಕಾಲ ೧೬೯೩ ರಿಂದ ೧೭೨೪. ಈ ವ್ಯಾಜ್ಯತೀರ್ಮಾನವಾದ ವರುಷದಲ್ಲೆ (೧೭೨೪) ಅವರು ಬ್ರಹ್ಮೀಭೂತರಾದುದು ದಾಖಲೆ ಯಿಂದ ತಿಳಿದುಬರುತ್ತದೆ. ಜಗಲೂರು ತಾಲ್ಲೂಕಿನ ಉದ್ದಗಟ್ಟ ಇವರು ಸಮಾಧಿಯಾದ ಸ್ಥಳ.

ಶ್ರೀಮನ್ನೃಸಿಂಹಭಾರತೀಸ್ವಾಮಿಗಳವರು ಉಪಸ್ಥಿತರಿದ್ದ ಸಭೆಯಲ್ಲಿ ಭಾಗವಹಿಸಿದ್ದ ಪ್ರತಿಷ್ಠಿತರು, ಅಧಿಕಾರಸ್ಥರು, ವಿದ್ವಾಂಸರು ಮೊದಲಾದವರನ್ನು ಗಮನಿಸಿದರೆ, ಇದೊಂದು ಮಹತ್ವದ ಸಂದರ್ಭವೆನ್ನುವುದರಲ್ಲಿ ಅನುಮಾನವಿಲ್ಲ. ಈ ಧರ್ಮಸಭೆಯು ವಿರೂಪಾಕ್ಷಜೋಯಿಸರ ಸ್ವಾಸ್ತಿಗ್ರಾಮಗಳ ಮೇಲಿನ ಹಕ್ಕುಸ್ಥಾಪನೆಯ ವಿಚಾರಣೆಯ ಸಂಬಂಧದಲ್ಲಿ ನ್ಯಾಯಸಭೆಯೂ ಆಗಿ ಮಾರ್ಪಟ್ಟಿದ್ದಿರಬಹುದು. ಈ ನ್ಯಾಯತೀರ್ಮಾನ ವಾದ ನಿರ್ದಿಷ್ಟ ಎಡೆಯ ಪ್ರಸ್ತಾಪವಿಲ್ಲ. ಆದರೆ ಇದು ಚಿತ್ರದುರ್ಗದ ಕರುವಿನಕಟ್ಟೆ ಪರಿಸರದಲ್ಲಿರುವ ಶ್ರೀ ಕೂಡಲೀ ಶೃಂಗೇರಿಮಠವೇ ಆಗಿದ್ದಿರಬಹುದು.

* * *

**ವ್ಯಾಜ್ಯ ೨ : ಗೋಪಗೊಂಡನಹಳ್ಳಿ ಗೌಡಿಕೆ ಹಕ್ಕಿನ ವ್ಯಾಜ್ಯ**

**ವ್ಯಾಜ್ಯಗಾರರು :** ಅಡಕೆಲೋರ ಜವನಯ್ಯ v/s ಎಮ್ಮೆಲೋರ ನಿಬಗೂರು ಕರಿಸಿದ್ದಯ್ಯ

**ತೇದಿ :** ೧೭೩೦ ನವೆಂಬರ್ ೮ ಭಾನುವಾರ

**ನ್ಯಾಯತೀರ್ಮಾನವಾದ ಸ್ಥಳ :** ಮೇಲುದುರ್ಗದ ಚಾವಡಿ

ಗೋಪಗೊಂಡನಹಳ್ಳಿ (ಜಗಲೂರು ತಾಲ್ಲೂಕು) ಗೌಡಿಕೆ ಹಕ್ಕಿನ ಬಗೆಗೆ ಸ್ಥಳೀಯರಾದ ಅಡಕೆಲೋರ ಜವನಯ್ಯ ಮತ್ತು ಎಮ್ಮೆಲೋರ ನಿಬಗೂರು ಕರಿಸಿದ್ದಯ್ಯರ ನಡುವೆ ವ್ಯಾಜ್ಯವುಂಟಾಗುತ್ತದೆ. ಈ ಸಂಬಂಧವಾಗಿ ದುರ್ಗದ ಹುಜೂರಿಗೆ ಮನವಿ ಸಲ್ಲಿಸಲಾಗುತ್ತದೆ. ಮೇಲುದುರ್ಗದ ಚಾವಡಿಯಲ್ಲಿ ಪಾರುಪತ್ತೆಗಾರ ಚಿಕ್ಕಯ್ಯ, ಕೆಂಚಯ್ಯ, ಮಲೆ(ಲಿ)ಯಪ್ಪ ಮುಂತಾದವರ ಎದುರಿನಲ್ಲಿ ಇದರ ವಿಚಾರಣೆ ನಡೆಯುತ್ತದೆ. ಮೊದಲಿಗೆ ತನ್ನ ವಾದವನ್ನು ಮಂಡಿಸುವ ಜವನಯ್ಯನು, "ಈ ಊರು ಮಾಡಿದವರು ನಮ್ಮ ಹಿರಿಯರು.

ನಮ್ಮ ಹಿರಿಯರೆಂದರೆ ಬಿದರಕೆರೆ ಸಂಕಣ್ಣಗೌಡ, ಜಗಲೂರು ಸಂಕಣ್ಣಗೌಡ, ಶಿವಣ್ಣಗೌಡ, ಸಿರೇನಗೌಡ ಮುಂತಾದವರು. ಅಡಕೆಲೋರು ಎಂಬುದು ನಮ್ಮ ಬೆಡಗು'' ಇತ್ಯಾದಿಯಾಗಿ ಹೇಳಿದರೆ; ''ನಮ್ಮ ಹಿರಿಯರೆಂದರೆ ಗೋಪಣ್ಣಗೌಡ, ಸಾ(ಮಾ?)ದೇವಗೌಡ, ದೇವಗೊಂಡನಗೌಡ ಮತ್ತು ಕರಿದೇಮಗೌಡ. ಎಮ್ಮೆಲೋರು ಎಂಬುದು ತಮ್ಮ ಬೆಡಗು'' ಎಂದು ಪ್ರತಿಯಾಗಿ ಹೇಳುತ್ತಾನೆ ಕರಿಸಿದ್ದಯ್ಯ.

ನ್ಯಾಯಸಭೆಯಲ್ಲಿದ್ದ ಪಂಚಾಯಿತರು, ''ಪೂರ್ವದ ಹಳೇಕಡತದಲ್ಲಿ ಜವನಯ್ಯ ಹೇಳಿದ ಹೆಸರಿದ್ದರೆ ಅದು ಜವನಯ್ಯನದು. ಕರಿಸಿದ್ದಯ್ಯ ಹೇಳಿದ ಹೆಸರಿದ್ದರೆ ಅದು ಕರಿಸಿದ್ದಯ್ಯನದು. ಇವರಿಬ್ಬರ ಹೆಸರುಗಳಿಲ್ಲದೆ ಪರಭಾರೆ (ತಮಗೆ ಸಂಬಂಧಪಡದವರ) ಹೆಸರಿದ್ದಲ್ಲಿ ಈರ್ವರೂ ಅರಮನೆಗೆ ದಂಡ ಕೊಡಬೇಕು'' ಎಂದು ನಿರ್ಣಯಿಸಿ, 'ಚಿನ್ನದ ಮನೆ'ಯವರಲ್ಲಿದ್ದ ಹಳೇ ಕಡತವನ್ನು ತರಿಸಲು ನಿರ್ಧರಿಸುತ್ತಾರೆ. ಈ ಹಳೇ ಕಡತವನ್ನು ಪರಿಶೀಲಿಸಿ ನೋಡುವಲ್ಲಿ, ಅದರಲ್ಲಿ 'ಎಮ್ಮೆಲೋರ ಗೋಪಗೊಂಡ(ಗೋಪಣ್ಣಗೌಡ)'ನ ಹೆಸರಿರುತ್ತದೆ. ಇದರಿಂದ ಅಡಕೆಲೋರ ಜವನಯ್ಯನ ಮಾತು ಸೋತು ನಿಬಗೂರು ಕರಿಸಿದ್ದಯ್ಯನ ಮಾತು ಗೆಲ್ಲುತ್ತದೆ. ಪಂಚಾಯಿತರು ''ಅರಮನೆಗೆ ೧೨ ವರಹ ದಂಡ ಕೊಡಬೇಕು'' ಎಂದು ಜವನಯ್ಯನಿಗೆ ತಾಕೀತುಮಾಡಿ ನ್ಯಾಯವನ್ನು ನಿರ್ಣಯಿಸುತ್ತಾರೆ.[೯]

ಇದೊಂದು ಸಾಮಾನ್ಯ ವ್ಯಾಜ್ಯದಂತೆ ಮೇಲ್ನೋಟಕ್ಕೆ ಕಂಡುಬಂದರೂ ಇದರಲ್ಲಿ ಕೆಲವು ಸೂಕ್ಷ್ಮ ಅಂಶಗಳಿರುವುದನ್ನು ಗುರುತಿಸಬಹುದು. ಕೆಲವೊಮ್ಮೆ ಗ್ರಾಮೀಣನ್ಯಾಯದ ನೆಲೆಯಲ್ಲಿ ಜಾತಿ-ಬೆಡಗುಗಳು ನಿರ್ಣಾಯಕ ಪಾತ್ರವಹಿಸುತ್ತವೆನ್ನುವುದು ದಿಟ. ಈ ಪ್ರಕರಣದಲ್ಲೂ ಇಂಥಾ ಲಕ್ಷಣಗಳಿವೆ. 'ಎಮ್ಮೆಲೋರು' ಮತ್ತು 'ಅಡಕೆಲೋರು' ಎಂಬುವು ಸಾದುವೀರಶೈವ ಜನಾಂಗದ ಎರಡು ಪಂಗಡಗಳು. ಇವರಲ್ಲಿ 'ಸಾವಂತಲೋರು' ಎಂಬ ಬೆಡಗಿನವರೇ ಎಲ್ಲರಿಗೂ ಹಿರಿಯರೆಂದು ತಿಳಿದುಬರುತ್ತದೆ. ಒಂದೇ ಜಾತಿಮೂಲಕ್ಕೆ ಸೇರಿದ ಇಲ್ಲಿಯ ಈರ್ವರು ವ್ಯಾಜ್ಯಗಾರರು, ಪರಸ್ಪರರ ಇತಿವೃತ್ತ ಹೇಳಿಕೊಳ್ಳುವಲ್ಲಿ ತಮ್ಮ ತಮ್ಮ ಬೆಡಗುಗಳನ್ನೂ ಆ ಬೆಡಗುಗಳಿಗೆ ಸಂಬಂಧಿಸಿರಬಹುದಾದ ತಮ್ಮ ಬಂಧುಗಳನ್ನೂ (ಹಿರಿಯರನ್ನು) ಪ್ರಸ್ತಾಪಿಸುತ್ತಾರೆ. ಇದು ಗೋಪಗೊಂಡನಹಳ್ಳಿ ಗೌಡಿಕೆಗೆ ಸಂಬಂಧಿಸಿದಂತೆ ಸ್ಥಳೀಯವಾಗಿ ಅನೂಚಾನವಾಗಿ ಉಳಿಸಿಕೊಂಡು ಬಂದ ತಮ್ಮ ಹಕ್ಕನ್ನು ಸ್ಥಾಪಿಸುವ ಪ್ರಯತ್ನದಂತಿದೆ.

ಈ ವಾಸ್ತವವನ್ನು ಗ್ರಹಿಸಿರಬಹುದಾದ ಪಂಚಾಯಿತರು, ಇವರೀರ್ವರ ವಾದಗಳನ್ನು ಆಲಿಸಿದರೂ ಇವುಗಳಲ್ಲಿಯ ನಂಬಲರ್ಹವಾದ ಅಂಶಗಳನ್ನು ಗುರುತಿಸಿದರೂ ಗೌಡಿಕೆ, ಶಾನುಬೋಗತನ, ಸ್ವಾಸ್ತಿಗ್ರಾಮಗಳು ಇತ್ಯಾದಿ ವಿವರಗಳುಳ್ಳ ಅರಮನೆಯ ಹಳೇಕಡತವನ್ನು ಪರಿಶೀಲಿಸುವ ಕ್ರಮ ಕೈಗೊಳ್ಳುತ್ತಾರೆ. ಅದರಂತೆ, ಅರಮನೆಯ ಆಗುಹೋಗುಗಳನ್ನು ಕ್ರಮವಾಗಿ ದಾಖಲಿಸುತ್ತಿದ್ದ ಚಿನ್ನದಮನೆಯವರ ಹಳೇಕಡತವನ್ನು ಖುದ್ದಾಗಿ ಪರಿಶೀಲಿಸಿ, ಸತ್ಯವನ್ನು ಮನಗಂಡು, ಯಾವುದೇ ಗೊಂದಲಕ್ಕೆ ಆಸ್ಪದವಿಲ್ಲದಂತೆ ಈ ವ್ಯಾಜ್ಯವನ್ನು

ಬಗೆಹರಿಸುತ್ತಾರೆ; ಎಮ್ಮೆಲೋರ ನಿಬಗೂರು ಕರಿಸಿದ್ದಯ್ಯನೇ ಗೋಪಗೊಂಡನಹಳ್ಳಿಯ ಗೌಡನೆಂಬುದಾಗಿ ಅಧಿಕೃತವಾಗಿ ಘೋಷಿಸುತ್ತಾರೆ. ಅಡಕೆಲೋರ ಜವನಯ್ಯನಿಗೆ ದಂಡತೆರುವ ಶಿಕ್ಷೆ ವಿಧಿಸಲಾಗುತ್ತದೆ. ಇದರಿಂದ ಮನದಟ್ಟಾಗುವ ಅಂಶವೆಂದರೆ, ಸರಿಯಾದ ವಿವರಗಳನ್ನು ದಾಖಲಿಸುವುದರೊಡನೆ ಗ್ರಾಮಮಟ್ಟದ ಅಧಿಕಾರಿಗಳ, ಪ್ರಜೆಗಳ ಭಿನ್ನಾಭಿಪ್ರಾಯಗಳನ್ನು, ವ್ಯಾಜ್ಯಗಳನ್ನು ಪರಿಹರಿಸುವ ಸರಿಯಾದ ವ್ಯವಸ್ಥೆ ದುರ್ಗದಲ್ಲಿಯೂ ಇದ್ದಿತು.

ಈ ವ್ಯಾಜ್ಯತೀರ್ಮಾನದಲ್ಲಿ ಚಿನ್ನದಮನೆಯವರ ಪ್ರಸ್ತಾಪವಿದೆ. 'ಚಿನ್ನದ ಮನೆ'ಯೆಂಬುದು ಒಂದು ಬ್ರಾಹ್ಮಣರ ಮನೆತನ. ಚಿತ್ರದುರ್ಗ ಚರಿತ್ರೆಯಲ್ಲಿ ಇದಕ್ಕೆ ಗೌರವಯುತ ಸ್ಥಾನ ದೊರೆತಿದೆ. ಈ 'ಮನೆತನ' ಹುಟ್ಟಿದ್ದು ೧೭೦೮ರಲ್ಲಿ; ಬಿಚ್ಚುಗತ್ತಿ ಭರಮಣ್ಣನಾಯಕನ ಆಡಳಿತಾವಧಿಯಲ್ಲಿ. ದಾಖಲೆಯಲ್ಲಿ ಪ್ರಸ್ತಾಪಗೊಂಡಂತೆ, ನಾಯಕರ ಖಾಸಾ ನಾಗತಿಯರು, ಕುಮಾರಿಯರು ಹಾಗೂ ರಾಜಪರಿವಾರದವರ ಕುದುರೆಗಳ ಅಲಂಕರಣಕ್ಕೆ ಅಗತ್ಯವಿದ್ದ ಆಭರಣಗಳನ್ನು ಮಾಡಿಸುವುದಕ್ಕೆ ಮೇಲುದುರ್ಗದ ಅರಮನೆಯ ಬಳಿ ಒಂದು ಚೌಕಿ (ಚೌಕಾಕಾರದ ಕಲ್ಲುಕಟ್ಟಡ) ಕಟ್ಟಿಸಲಾಯಿತು. ಇಲ್ಲಿ ತಲಾ ೨ ದುರ್ಗಿವರಹಗಳ ಸಂಬಳ ಗೊತ್ತುಮಾಡುವುದರೊಡನೆ ಒಂದೇ ವಯಸ್ಸಿನ (ಪ್ರೌಢವಯಸ್ಸಿನ) ಎಂಟುಮಂದಿ ಅಕ್ಕಸಾಲಿಗರನ್ನು ನೇಮಕ ಮಾಡಲಾಯಿತು. ಬೊಕ್ಕಸ(ಖಜಾನೆ)ದಿಂದ ನಾಣ್ಯಗಳನ್ನೂ ಚಿನಿವಾರಗಟ್ಟೆಯಲ್ಲಿ (ಬಂಗಾರ-ಬೆಳ್ಳಿ ಒಡವೆಗಳನ್ನು ಮಾರಾಟ ಮಾಡುವವರಲ್ಲಿ) ಚಿನ್ನ-ಬೆಳ್ಳಿಗಳನ್ನೂ ತೆಗೆದುಕೊಂಡು ಬಂದು ಬೇಕಾದ ಒಡವೆಗಳನ್ನು ಸಿದ್ಧಪಡಿಸಲು ವ್ಯವಸ್ಥೆ ಮಾಡಲಾಯಿತು. ಚಿನ್ನ - ಬೆಳ್ಳಿಗಳನ್ನು ಪಡೆದುಕೊಳ್ಳುವುದು ಮತ್ತು ಇವುಗಳಿಂದ ಒಡವೆಗಳನ್ನು ಮಾಡಿಸಿ ಅರಮನೆಗೆ ಒಪ್ಪಿಸುವವರೆಗಿನ ಸರಿಯಾದ ಲೆಕ್ಕ-ಪತ್ರಗಳನ್ನು ಬರೆದಿಡಲು ಬಿಳಿಚೋಡು ದೇಮಣ್ಣನೆಂಬವನನ್ನು ನೇಮಿಸಲಾಯಿತು. ಈತನ ಸಂತತಿಯವರೇ ಚಿನ್ನದಮನೆಯವರೆಂದು ಹೆಸರಾದರು.

ಚಿನ್ನದಮನೆ ದೇಮಣ್ಣನ ಹಿನ್ನೆಲೆ ಹಾಗೂ ಪೀಳಿಗೆಯವರ ವಿವರ ದೊರೆಯುವುದು, ೧೮೫೮ ನವೆಂಬರ್ ೧೮ ಗುರುವಾರದಂದು ನೀಡಲಾದ 'ಭೀಮಣ್ಣನ ಸ್ವಾಸ್ತಿವಿವರ'ವುಳ್ಳ ದಾನಶಾಸನವೊಂದರಲ್ಲಿ. ಆಪಸ್ತಂಭಸೂತ್ರ, ಕಶ್ಯಪಗೋತ್ರದ ಚಿನ್ನದಮನೆ ಪುಟ್ಟರಾಮಪ್ಪನ ಮಗನೇ ದೇಮಪ್ಪ ಎಂದು ಇದರಿಂದ ತಿಳಿದುಬರುತ್ತದೆ. ಈ ಪುಟ್ಟರಾಮಪ್ಪನು ಚಿತ್ರದುರ್ಗದ ಕರಣಿಕ(ಲೆಕ್ಕಿಗ)ನಾಗಿದ್ದವನು. ಈ ಕಾರಣಕ್ಕೆ ದುರ್ಗದರಸರು ದೇಮಪ್ಪನಿಗೆ ಅರಮನೆಗೆ ಸಂಬಂಧಿಸಿದ ಗುರುತರ ಹೊಣೆಗಾರಿಕೆ ಕೊಟ್ಟಿದ್ದರೆನ್ನಬೇಕು. ಈತನ ಮಗನೇ ಚಿನ್ನದಮನೆ ರಾಮಪ್ಪ. ಈತ ಚಿತ್ರದುರ್ಗದ ಹಿಂದಿನ ಮತ್ತು ಸಮಕಾಲೀನ ನಾಯಕ ಅರಸರ ಎಲ್ಲ ವೃತ್ತಾಂತವನ್ನೂ ಅಧಿಕೃತವಾಗಿ ಸಂಗ್ರಹಿಸಿಕೊಂಡಿದ್ದರಿಂದಲೇ, ಚಿತ್ರದುರ್ಗ ಚರಿತ್ರೆಯ ಎಲ್ಲ ವಿಧದ ಘಟನೆಗಳ ಹಿನ್ನೆಲೆಯನ್ನೂ ಖಚಿತ ಕಾಲಮಾನವನ್ನೂ

ಸೂಚಿಸುವಂಥಾ 'ಶ್ರೀಚಿನ್ಮೂಲಾದ್ರಿಗಿರಿದುರ್ಗದಲ್ಲಿ ಆಳಿದ ಹಿಂದಿನ ಅರಸರುಗಳು' ಅಥವಾ 'ಚಿನ್ಮೂಲಾದ್ರಿಯ ಪೂರ್ವಾಪರ ವಿಚಾರವಿಸ್ತಾರ' ಎಂಬ 'ವಂಶಾವಳಿ'ಯನ್ನು ರಚಿಸಿದ. 'ವಂಶಾವಳಿ'ಯಲ್ಲಿ ಈತ ಸೂಚಿಸಿರುವಂತೆ, 'ಶ್ರೀಚಿನ್ಮೂಲಾದ್ರಿಗಿರಿದುರ್ಗದ ಸೀಮೆಯೊಳಗಣ ಶಿಲಾಶಾಸನ ಪ್ರತಿಗಳು, ಈ ದುರ್ಗವನ್ನಾಳಿದ ಅರಸರುಗಳು, ಗ್ರಾಮಸ್ತರ ಸ್ವಾಸ್ತಿವೃತ್ತಿಗಳು ಸಹಿತ' ಈ 'ಪುಸ್ತಕ'(ವಂಶಾವಳಿ)ವನ್ನು ಬರೆದಿದ್ದಾನೆ. ವಾಸ್ತವದಲ್ಲಿ ಇದು ಸಹಾ ಹಳೇಕಡತದ ನಕಲು. ದುರ್ಗದ ಕ್ರಮಾನುಗತ ದಾಖಲೆಗಳು ಮತ್ತು ದೈನಂದಿನ ಕಾರ್ಯಕಲಾಪಗಳ ವಿವರವನ್ನು ಈ ಮನೆತನದವರು ವ್ಯವಸ್ಥಿತವಾಗಿ ಸಂರಕ್ಷಿಸಿದ್ದರಿಂದಲೇ ಮೇಲಿನ ವ್ಯಾಜ್ಯಕ್ಕೆ ಸಂಬಂಧಿಸಿದಂತೆ 'ಹಳೇಕಡತ'ದ ಪ್ರಸ್ತಾಪ ಬಂದಿದೆ.

* * *

**ವ್ಯಾಜ್ಯ ೩ : ಹಿರಿಯೂರು ಮತ್ತು ಬೊಬ್ಬೂರುಗಳ ಕಮ್ಮಾರಿಕೆಯ ಹಕ್ಕಿನ ವ್ಯಾಜ್ಯ**

**ವ್ಯಾಜ್ಯಗಾರರು : ಪೂಜಾರಿ ತೇರಯ್ಯ v/s ಲಿಂಗಯ್ಯ**

**ತೇದಿ : ೧೭೩೫ ಮಾರ್ಚ್ ೩ ಸೋಮವಾರ**

**ನ್ಯಾಯತೀರ್ಮಾನವಾದ ಸ್ಥಳ : ಚಿತ್ರದುರ್ಗ**

ಹಿರಿಯೂರು ತೇರುಮಲ್ಲ(ತೇರುಮಲ್ಲೇಶ್ವರ)ದೇವರ ಪೂಜಾರಿ ತೇರಯ್ಯ ಮತ್ತು ಲಿಂಗಯ್ಯ ಎಂಬವರ ನಡುವೆ ಹಿರಿಯೂರು ಮತ್ತು ಬೊಬ್ಬೂರು- ಈ ಎರಡು ಗ್ರಾಮಗಳ ಕಮ್ಮಾರಿಕೆಯ ಹಕ್ಕಿನ ಬಗೆಗೆ ವ್ಯಾಜ್ಯವುಂಟಾಗುತ್ತದೆ. ಈ ಎರಡೂ ಗ್ರಾಮಗಳ ಕಮ್ಮಾರಿಕೆಯನ್ನು ಹಿಂದಿನಿಂದಲೂ ಲಿಂಗಯ್ಯನೇ ಮುಂದುವರೆಸಿಕೊಂಡು ಬಂದಿರುತ್ತಾನೆ. ಆದರೆ ಇದನ್ನು ಪ್ರಶ್ನಿಸಿ ವ್ಯಾಜ್ಯ ಹೂಡುತ್ತಾನೆ ತೇರಯ್ಯ. ಪಂಚಾಯಿತರ ಮುಂದೆ ಈ ವ್ಯಾಜ್ಯವು ವಿಚಾರಣೆಗೆ ಬರುತ್ತದೆ. ಈ ವ್ಯಾಜ್ಯವನ್ನು ಸ್ಥಳದ ಹನ್ನೆರಡು ಜನ ಕೈವಾಡದವರ ಹೇಳಿಕೆಯ ಮೇರೆಗೆ ತೀರ್ಮಾನಿಸಲು ನಿರ್ಧರಿಸುತ್ತಾರೆ ಪಂಚಾಯಿತರು. ಆದರೆ ಕೈವಾಡದವರ ಮಾತನ್ನು ಒಪ್ಪಲು ವ್ಯಾಜ್ಯಗಾರರು ನಿರಾಕರಿಸುತ್ತಾರೆ. ಪಂಚಾಯಿತರ ಮಾತಿನಿಂದಲೂ ವ್ಯಾಜ್ಯವು ಬಗೆಹರಿಯುವುದಿಲ್ಲ. ಅಂತಿಮವಾಗಿ ದಿವ್ಯಪ್ರಮಾಣದ ಕ್ರಮವನ್ನು ಅನುಸರಿಸಲು ನಿರ್ಧರಿಸಲಾಗುತ್ತದಲ್ಲದೆ, 'ಮುದ್ದೆತುಪ್ಪದಪ್ರಮಾಣ'ದ ಮೂಲಕ ನ್ಯಾಯನಿರ್ಣಯ ಕೈಗೊಳ್ಳುವ ಪರೀಕ್ಷೆಯಲ್ಲಿ ಲಿಂಗಯ್ಯನು ಗೆಲ್ಲುತ್ತಾನೆ. ಸೋತುಹೋದ ತೇರಯ್ಯನು ಅರಮನೆಗೆ ೧೨ ವರಹ ದಂಡವನ್ನು ತೆರಬೇಕೆಂದು ತೀರ್ಮಾನಿಸಲಾಗುತ್ತದೆ.[೧೦]

ಇದೊಂದು ವಿಚಿತ್ರವಾದ ವ್ಯಾಜ್ಯಸಂದರ್ಭ. ದೇವರನ್ನು ಪೂಜಿಸುವಂಥಾ ಪವಿತ್ರ ಕಾಯಕವನ್ನು ನಿರ್ವಹಿಸುತ್ತಿದ್ದ ಪೂಜಾರಿಯೇ 'ಸತ್ಯ'ದ ಎದುರಿನಲ್ಲಿ ತಪ್ಪಿತಸ್ಥನೆನಿಸಿದುದು ಇಲ್ಲಿಯ ವೈಶಿಷ್ಟ್ಯ. ಅಲ್ಲದೆ, 'ತೇರಯ್ಯ' ಎಂಬ ಈತನ ಹೆಸರೇ ತೇರುಮಲ್ಲೇಶ್ವರ ದೈವದ ಪ್ರತೀಕವಾಗಿ ಬಂದುದೆಂಬುದು ಗಮನಾರ್ಹ. ಏನೇ ಇದ್ದರೂ ಮಾತಿನಸಾಕ್ಷ್ಯವನ್ನು

ಅಂಗೀಕರಿಸದೆ ದಿವ್ಯಪ್ರಮಾಣಕ್ಕೆ ಮೊರೆಹೊಕ್ಕುದು ಈ ವ್ಯಾಜ್ಯದ ಸಂಕೀರ್ಣತೆಯನ್ನು ಎತ್ತಿ ತೋರುತ್ತದೆ. ಈರ್ವರು ವ್ಯಾಜ್ಯಗಾರರೂ ಅನುಸರಿಸಿದುದು ಕಮ್ಮಾರವೃತ್ತಿಯನ್ನು. ಈ ವೃತ್ತಿ ಇವರೀರ್ವರಿಗೂ ವಂಶಪಾರಂಪರ್ಯವಾಗಿ ನಡೆದುಬಂದುದೆಂಬುದು ಸ್ಪಷ್ಟ. ಹಿರಿಯೂರು (ತಾಲ್ಲೂಕು ಕೇಂದ್ರ) ತೇರುಮಲ್ಲೇಶ್ವರದೇವರ ಪೂಜಾರಿಕೆಯನ್ನು ಕೈಗೊಂಡಿದ್ದ ತೇರಯ್ಯನು, ಹಿರಿಯೂರು ಮತ್ತು ಬೊಬ್ಬೂರು (ಹಿರಿಯೂರುಪಟ್ಟಣಕ್ಕೆ ಹೊಂದಿಕೊಂಡ ಗ್ರಾಮ; ಹಳೆಯ ಹಿರಿಯೂರಿಗೆ ಈಶಾನ್ಯ ದಿಕ್ಕಿನಲ್ಲಿದೆ) ಗ್ರಾಮದ ಕಮ್ಮಾರಿಕೆಯ ಹಕ್ಕನ್ನು ಮತ್ತೆ ಸಾಧಿಸಲು ಪ್ರಯತ್ನ ನಡೆಸಿದುದನ್ನು ಗಮನಿಸಿದರೆ, ಈತ ತನ್ನ ಕುಲವೃತ್ತಿಯನ್ನು ಬಹುಹಿಂದೆಯೇ ನಿಲ್ಲಿಸಿದ್ದಿರಬಹುದು. ಲಿಂಗಯ್ಯನು ಅದನ್ನು ಈ ಸ್ಥಳಗಳಲ್ಲಿ ಮುಂದು ವರೆಸಿದುದರಲ್ಲಿ ತನ್ನ ಪಾಲನ್ನು ಕೇಳುವ ಹಂಬಲ ಈತನಲ್ಲಿ ಉಂಟಾಗಿರಬಹುದು.

ದಿವ್ಯಪ್ರಮಾಣದ ಮೂಲಕ ವ್ಯಾಜ್ಯಗೆಲ್ಲುವ ಪ್ರಸ್ತುತ ಸಂದರ್ಭವನ್ನು ಗಮನಿಸಿದರೆ, ಧಾರ್ಮಿಕ ನಂಬಿಕೆಯನ್ನು ಇಲ್ಲಿ ಯಶಸ್ವಿಯಾಗಿ ಬಳಸಿಕೊಂಡಂತೆ ತೋರುತ್ತದೆ. 'ಮುದ್ದೆತುಪ್ಪದಪ್ರಮಾಣ'ದ ಮೂಲಕ ವ್ಯಾಜ್ಯವನ್ನು ಬಗೆಹರಿಸಿದ ವಿಧಾನದ ಬಗೆಗೆ ನಿರ್ದಿಷ್ಟ ಸೂಚನೆಯಿಲ್ಲ. ಕುದಿಯುವ ತುಪ್ಪ ಅಥವಾ ಎಣ್ಣೆಯ ಪಾತ್ರೆಯಲ್ಲಿ ಮುಳುಗಿಸಿದ ಕಬ್ಬಿಣದ ತುಂಡನ್ನು ಹೊರತೆಗೆಯಲೋಸುಗ ಕೈಯನ್ನು ಅದ್ದಿಸುವ ದಿವ್ಯದ ಇನ್ನೊಂದು ಪ್ರಕಾರವಿರಬಹುದು. ಕನ್ನಡ ಶಾಸನವೊಂದರಲ್ಲಿ[೧೧] ಪ್ರಸ್ತಾಪಗೊಂಡಿರುವ 'ತುಪ್ಪದ ದೃಷ್ಟಪವಾಡ'ಕ್ಕೂ 'ಮುದ್ದೆತುಪ್ಪದಪ್ರಮಾಣ'ಕ್ಕೂ ಸಂಬಂಧವಿರಬಹುದೇನೊ. ದೇವಸ್ಥಾನ ವೊಂದರಲ್ಲಿ ಕಬ್ಬಿಣದ ಕೊಪ್ಪರಿಗೆ(ಅಗಲವಾದ ಬಾಯಿಯುಳ್ಳ ದೊಡ್ಡಪಾತ್ರೆ) ಯಲ್ಲಿ ತುಪ್ಪವನ್ನು ಹೊಯಿದು ಅದನ್ನು ಚೆನ್ನಾಗಿ ಕಾಯಿಸಿ, ಅದರಲ್ಲಿ ಮೂರು ಫಿರಂಗಿ ಗುಂಡು(ಉಕ್ಕಿನಗುಂಡು)ಗಳನ್ನು ಹಾಕಿ, ಅದನ್ನು ಇನ್ನೊಮ್ಮೆ 'ಹುಣಿಸೆಕೆಂಡ'ದಿಂದ ಚೆನ್ನಾಗಿ ಕುದಿಸಿ, ಕುದಿಯುವ ತುಪ್ಪದಪಾತ್ರೆಯಲ್ಲಿ ಕೈಯನ್ನು ಅದ್ದಿ ಈ ಗುಂಡುಗಳನ್ನು ಹೊರತೆಗೆಯುವ ಪವಾಡವನ್ನು ಗೆದ್ದ ವಿವರವಿದೆ ಈ ಶಾಸನದಲ್ಲಿ. ಹಾಗೆಯೇ, ಮಹಾರಾಷ್ಟ್ರದಲ್ಲಿ ಪೇಷ್ವೆಗಳ ಅವಧಿಯಲ್ಲಿಯೂ ಆಚರಣೆಯಲ್ಲಿದ್ದ 'ದಿವ್ಯ'ಗಳ ಪೈಕಿ 'ರಾವಾದಿವ್ಯ'ವೂ ಒಂದಾಗಿದ್ದು, ಇದು 'ಮುದ್ದೆತುಪ್ಪದಪ್ರಮಾಣ'ವನ್ನು ಹೋಲುವಂತೆ ತೋರುತ್ತದೆ. ಚೆನ್ನಾಗಿ ಕಾಯಿಸಿದ ಅಥವಾ ಕುದಿಯುವ ತುಪ್ಪ ಮತ್ತು ಎಣ್ಣೆಗಳ ಮಿಶ್ರಣವಿರುವ ಪಾತ್ರೆ(ರಾವಾಪಾತ್ರೆ)ಯಲ್ಲಿ ರಾವಾ(ಲೋಹದತುಂಡು)ವನ್ನು ಮುಳುಗಿಸಿ, ಪಂಚಾಯಿತರ ಎದುರಿನಲ್ಲಿ ಅದರಲ್ಲಿ ಕೈಯನ್ನು ಅದ್ದಿ ಆ ಲೋಹದತುಂಡನ್ನು ಹೊರತೆಗೆದು ವ್ಯಾಜ್ಯವನ್ನು ಗೆಲ್ಲುವ ದಿವ್ಯವನ್ನು ಕುರಿತು ಇದು ಹೇಳುತ್ತದೆ. ಏನೇ ಇದ್ದರೂ ಇಂಥಾ ದಿವ್ಯಗಳ ಪರಸ್ಪರ ಹೋಲಿಕೆ-ಸಂಬಂಧಗಳನ್ನು ಕುರಿತು ಸ್ಪಷ್ಟವಾಗಿ ಹೇಳಲಾಗುವುದಿಲ್ಲ.

* * *

ವ್ಯಾಜ್ಯ ೪ : ಹಾರೋಬೇತೂರುಗ್ರಾಮದ ಶಾನುಬೋಗತನದ ಹಕ್ಕಿನ ವ್ಯಾಜ್ಯ

ವ್ಯಾಜ್ಯಗಾರರು : ಪ್ರಸನ್ನಯ್ಯ v/s ಸಾಶತಿ ಕರಿಯಪ್ಪ

ತೇದಿ : ೧೭೩೫ ಮಾರ್ಚ್ ೧೦ ಸೋಮವಾರ

ವ್ಯಾಜ್ಯತೀರ್ಮಾನವಾದ ಸ್ಥಳ : ಮೇಲುದುರ್ಗದ ರಾಯಸದಚಾವಡಿ

ಹಾರೋಬೇತೂರು (ದಾವಣಗೆರೆ ತಾಲ್ಲೂಕಿನ ಇಂದಿನ ಬೇತೂರು) ಗ್ರಾಮದ ಶಾನುಬೋಗತನದ ಹಕ್ಕಿನ ಬಗೆಗೆ ಪ್ರಸನ್ನಯ್ಯ ಮತ್ತು ಸಾಶತಿ ಕರಿಯಪ್ಪ ಎಂಬವರ ನಡುವೆ ವ್ಯಾಜ್ಯ ಹುಟ್ಟಿಕೊಳ್ಳುತ್ತದೆ. ಇದನ್ನು ಮೇಲುದುರ್ಗದ ಹುಜೂರಿಗೆ ಅರಿಕೆ ಮಾಡಿಕೊಳ್ಳಲಾಗುತ್ತದೆ. ಇದರ ನ್ಯಾಯನಿರ್ಣಯ ಮಾಡಲೋಸುಗ ಅರಮನೆಯ ಅಧಿಕಾರಿಗಳಾದ ಪಾರುಪತ್ತೆಗಾರ ಚಿಕ್ಕಕೆಂಚಯ್ಯ, ಅಪ್ಪಯ್ಯ, ರಾಯರ ಕೆಂಚಪ್ಪ, ಚಿನ್ನದಮನೆ ದ್ಯಾಮಣ್ಣ ಮುಂತಾದವರ ಪಂಚಾಯಿತಿ ಸೇರಿಸಲಾಗುತ್ತದೆ. ಮೇಲುದುರ್ಗದ ರಾಯಸದಚಾವಡಿಯಲ್ಲಿ ಈ ನ್ಯಾಯಪಂಚಾಯಿತಿ ವಿಚಾರಣೆ ಆರಂಭಿಸುತ್ತದೆ. ಹಾರೋಬೇತೂರುಸ್ಥಳದ ೧೨ ಮಂದಿ ಕೈವಾಡದವರು ಚಾವಡಿಗೆ ಬಂದು ಶಾನುಬೋಗತನದ ಹಕ್ಕು ಈ ಈರ್ವರು ವ್ಯಾಜ್ಯಗಾರರಲ್ಲಿ ಯಾರದೆಂದು ಹೇಳಿದರೆ ಮಾತ್ರ ಅವರ ಮಾತನ್ನು ನಿರ್ಣಯವಾಗಿ ಸ್ವೀಕರಿಸಬೇಕೆಂದು ತೀರ್ಮಾನಿಸಲಾಗುತ್ತದೆ. ಅದರಂತೆ, ೧೨ ಮಂದಿ ಕೈವಾಡದವರು ಬಂದು, ಈ ಈರ್ವರು ವ್ಯಾಜ್ಯಗಾರರೂ ಹಾರೋಬೇತೂರುಗ್ರಾಮದ ಶಾನುಬೋಗತನದ ಹಕ್ಕಿಗೆ ಬಾಧ್ಯಸ್ಥರೆಂದು ಹೇಳಿಕೆ ಕೊಡುತ್ತಾರೆ. ಆಗ ಅನಾವಶ್ಯಕವಾಗಿ ವ್ಯಾಜ್ಯವನ್ನು ಚಾವಡಿಗೆ ಎಳೆದುತಂದ ಪ್ರಸನ್ನಯ್ಯ ಮತ್ತು ಸಾಶತಿ ಕರಿಯಪ್ಪ - ಈ ಈರ್ವರೂ ತಲಾ ೬ ವರಹ ದಂಡವನ್ನು ಅರಮನೆಗೆ ತೆರುವಂತೆ ಪಂಚಾಯಿತರು ತೀರ್ಪು ನೀಡುತ್ತಾರೆ.[೨]

ಈ ಮೇಲಿನ ವ್ಯಾಜ್ಯದಲ್ಲಿ ಕಂಡುಬರುವ 'ಸಾಶತಿ' ಕರಿಯಪ್ಪನು ಚಿತ್ರದುರ್ಗ ಚರಿತ್ರೆಯಲ್ಲಿಯೂ ದಾಖಲುಗೊಂಡಿದ್ದಾನೆ. ನಾಯಕ ಅರಸರ ಕಾಲದಲ್ಲಿ ನೀಡಲಾದ ಶಾನುಬೋಗತನದ ಸ್ವಾಸ್ತಿಗಳ ಪೈಕಿ ಹಾರೋಬೇತೂರುಸ್ವಾಸ್ತಿಗೆ ಸೇರಿದ ೧೨ ಗ್ರಾಮಗಳನ್ನು ಈತನಿಗೆ ವಹಿಸಲಾಗಿದ್ದಿತು. ಬೇತೂರು, ಕಲ್ಲಪ್ಪನಹಳ್ಳಿ, ಆನೆಕೊಂಡ, ನಿಟ್ಟುವಳ್ಳಿ, ದಾವಣಗೆರೆ, ಚಿಕ್ಕನಹಳ್ಳಿ, ಬಸಾಪುರ, ದೇವರಹ(ಟ್ಟಿ)ಳ್ಳಿ, ಬೂದಿಹಾಳು, ಚಿಕ್ಕಬೂದಿಹಾಳು, ನಾಗರಕಟ್ಟೆ ಮತ್ತು ರಾಂಪುರ - ಇವೇ ಈ ೧೨ ಗ್ರಾಮಗಳು. ಇವು ದಾವಣಗೆರೆ ತಾಲ್ಲೂಕಿನಲ್ಲಿರುವಂಥವು. ಆದರೆ ಪ್ರಸನ್ನಯ್ಯ ಎಂಬವನ ಪ್ರಸ್ತಾಪವು ಪ್ರಸ್ತುತ ವ್ಯಾಜ್ಯದಲ್ಲಿ ಮಾತ್ರ ಕಂಡುಬರುತ್ತದೆ. ಕರಿಯಪ್ಪನ ಹೆಸರಿನೊಡನೆ ಅಂಟಿಕೊಂಡಿರುವ 'ಸಾಶತಿ'ಯೆಂಬುದು 'ಸ್ವಾಸ್ತಿ'ಯ ಗ್ರಾಮ್ಯರೂಪವಿರಬಹುದು.

ಹಿಂದೆಯೇ ಹೇಳಿದಂತೆ, ಚಿತ್ರದುರ್ಗ ನಾಯಕ ಅರಸರ ಕಾಲದಲ್ಲಿದ್ದ ಹದಿನೈದಕ್ಕೂ ಹೆಚ್ಚು ಚಾವಡಿಗಳಲ್ಲಿ ರಾಯಸದಚಾವಡಿಯೂ ಒಂದು. ೧೭೩೦ನೇ ವರುಷದಲ್ಲಿ ನಡೆದ ವ್ಯಾಜ್ಯತೀರ್ಮಾನದಲ್ಲಿ ಭಾಗವಹಿಸಿದ್ದ ಪಾರುಪತ್ತೆಗಾರರಲ್ಲಿ ಕೆಲವರು ಈ ನ್ಯಾಯ ವಿಚಾರಣೆಯಲ್ಲಿಯೂ ಪ್ರಮುಖ ಪಾತ್ರವಹಿಸಿದ್ದಾರೆ. ಆಯಾ ಗ್ರಾಮದಲ್ಲಿ ವಾಸಿಸುವ

ಜೋಯಿಸ, ಬಡಗಿ, ಕಮ್ಮಾರ, ಕುಂಬಾರ, ಅಕ್ಕಸಾಲಿ, ತೋಟಿ, ತಳವಾರ, ಓಲೆಕಾರ, ಪೂಜಾರಿ, ಕೆಲಸಿಗ, ನೇಕಾರ ಮತ್ತು ಬೇಗಾರಿ - ಈ ೧೨ ಮಂದಿ ಕೈವಾಡದವರಿಗಿದ್ದ ಆದ್ಯತೆ ಇಲ್ಲಿ ದೃಢಪಡುತ್ತದೆ. ದಾಖಲೆಯು ತಿಳಿಸುವಂತೆ, ಇವರಲ್ಲಿ ನಿಜಆಯಗಾರರು ಮತ್ತು ಅರ್ಧಆಯಗಾರರು ಎಂದು ಎರಡು ವಿಧವಾಗಿ ವಿಂಗಡಿಸಲ್ಪಟ್ಟಿದ್ದರು. ಇವರೆಲ್ಲರೂ ಸೇರಿ ಕೈಗೊಂಡ ಪ್ರಸ್ತುತ ತೀರ್ಮಾನದಂತೆ ಈರ್ವರು ವ್ಯಾಜ್ಯಗಾರರೂ ದಂಡವನ್ನು ತೆರುವಂತಾಯಿತಲ್ಲದೆ, ತಮ್ಮ ವ್ಯಾಜ್ಯವನ್ನು ಇನ್ನೆಂದೂ ದುರ್ಗದ ಹುಜೂರಿಗೆ ತರದಂತೆ ಎಚ್ಚರವಹಿಸುವಂತಾಯಿತು.

* * *

**ವ್ಯಾಜ್ಯ ೫ : ನಂದಿಹಳ್ಳಿ ರಂಗನಾಥಸ್ವಾಮಿ ಪೂಜಾರಿಕೆ ಹಕ್ಕಿನ ವ್ಯಾಜ್ಯ**

**ವ್ಯಾಜ್ಯಗಾರರು : ನಂದ್ಯೆಯ್ಯ v/s ತಿಮ್ಮಯ್ಯ**

**ತೇದಿ : ೧೭೩೬ ನವೆಂಬರ್ ೨೨ ಸೋಮವಾರ**

**ವ್ಯಾಜ್ಯತೀರ್ಮಾನವಾದ ಸ್ಥಳ : ಕೆಳದುರ್ಗದ ಹನುಮಂತದೇವರ ಗುಡಿ**

ಹಿರಿಯೂರು ಸೀಮೆ ನಂದಿಹಳ್ಳಿಯ ರಂಗನಾಥಸ್ವಾಮಿದೇವರ ಪೂಜಾರಿಕೆ ಹಕ್ಕಿನ ಬಗೆಗೆ ನಂದ್ಯೆಯ್ಯ (ನಂದಿಗ) ಮತ್ತು ತಿಮ್ಮಯ್ಯ (ತಿಮ್ಮ) ಎಂಬವರ ನಡುವೆ ವ್ಯಾಜ್ಯ ತಲೆದೋರುತ್ತದೆ. ಈ ಈರ್ವರು ವ್ಯಾಜ್ಯಗಾರರೂ ಚಿತ್ರದುರ್ಗದ ದಳವಾಯಿ ಹೊರಕಣ್ಣನ ಮೂಲಕ 'ಕರ್ತರಯ್ಯ', ಅಂದರೆ ದುರ್ಗದ ದೊರೆ ಹಿರೇಮದಕರಿನಾಯಕನ ಬಳಿಗೆ ಹೋಗಿ ಬಿನ್ನವಿಸಿಕೊಳ್ಳುತ್ತಾರೆ. ಈ ವ್ಯಾಜ್ಯವನ್ನು ವಿಚಾರಣೆಯ ಮೂಲಕ, ಅಂದರೆ ಮಾತಿನಸಾಕ್ಷ್ಯದ ಮೂಲಕ ಇತ್ಯರ್ಥಪಡಿಸಲಾಗುವುದಿಲ್ಲ. ಆದ್ದರಿಂದಲೊ ಏನೊ ಕೆಳದುರ್ಗದ ಹನುಮಂತದೇವರ ಮುಂದೆ 'ದಿಷ್ಟಿಯ ದೀವಿಗೆ ಮುಟ್ಟಿಸುವ' ದಿವ್ಯಪ್ರಮಾಣದ ವಿಧಾನವನ್ನು ಅನುಸರಿಸಲು ಅನುಮತಿ ನೀಡಲಾಗುತ್ತದೆ. ಈರ್ವರು ವ್ಯಾಜ್ಯಗಾರರೂ ಸೋತುಹೋದರೆ ಅರಮನೆಗೆ ತಲಾ ೧೨ ವರಹ ದಂಡವನ್ನು ತೆರಬೇಕೆಂದು ತೀರ್ಮಾನ ವಾಗುತ್ತದೆ. ದಳವಾಯಿ ರಂಗಪ್ಪ ಮತ್ತು ಮಲೆ(ಲಿ)ಯಪ್ಪನವರ ಮುಖಾಂತರ ಹನುಮಂತದೇವರ ಗುಡಿಯಲ್ಲಿ ಏರ್ಪಡಿಸಲಾದ ದಿಷ್ಟಿದೀವಿಗೆಯ ಪರೀಕ್ಷೆಯಲ್ಲಿ ತಿಮ್ಮಯ್ಯನು ಗೆಲ್ಲುತ್ತಾನಲ್ಲದೆ, ನಂದ್ಯೆಯ್ಯನು ಸೋತುಹೋಗುತ್ತಾನೆ. ಪಂಚಾಯಿತರ ತೀರ್ಮಾನದಂತೆ, ನಂದ್ಯೆಯ್ಯನು ಅರಮನೆಗೆ ೧೨ ವರಹ ದಂಡವನ್ನು ಸಲ್ಲಿಸುತ್ತಾನೆ.[೧೩]

ಪ್ರಸ್ತುತ ವ್ಯಾಜ್ಯವನ್ನು ದಿವ್ಯಪ್ರಮಾಣದ ಮೂಲಕ ಬಗೆಹರಿಸಲಾಗಿದೆ. ದಿಷ್ಟಿದೀವಿಗೆ ಮುಟ್ಟಿಸುವ ದಿವ್ಯವನ್ನು ಕುರಿತು ಬೇರೆ ಬೇರೆ ವಿವರಗಳಿವೆ. ಈ ದಿವ್ಯದ ಸ್ವರೂಪವನ್ನು ನಿರ್ದಿಷ್ಟಗೊಳಿಸಲಾಗಿಲ್ಲವೆಂಬುದೊಂದು ಅಭಿಪ್ರಾಯವಾದರೆ; ತೊಯ್ದಬಟ್ಟೆಯೊಡನೆ ಹನುಮಂತದೇವರ ಮುಂದೆ ತುಪ್ಪದದೀವಿಗೆಯನ್ನು ಒಬ್ಬರು ಮುಡಿಸಿದರೆ, ಇನ್ನೊಬ್ಬರು ಆರಿಸುವ ನ್ಯಾಯವೆಂಬುದು ಇನ್ನೊಂದು ಅಭಿಪ್ರಾಯ. ಈ ಮೇಲಿನ ವ್ಯಾಜ್ಯ ತೀರ್ಮಾನದಲ್ಲಿ ಈ ದಿಷ್ಟಿದೀವಿಗೆದಿವ್ಯದ ಸ್ವರೂಪ ಯಾವ ತೆರನಾಗಿದ್ದಿತೊ ತಿಳಿಯದು.

ಆದರೆ ದೃಷ್ಟಿಯಿಂದಲೇ ದೀವಿಗೆಯನ್ನು ಆರಿಸುವ ದಿವ್ಯದ ಬಗೆಗೆ ಕೆಲವು ಸೂಚನೆಗಳು ದೊರೆಯುತ್ತವೆ. ಇಲ್ಲಿ ದೃಷ್ಟ(ದಿಷ್ಟಿ;ದಿಟ್ಟಿ)ವೆಂದರೆ ನೋಟ, ದರ್ಶನ, ಕಣ್ಣು, ನೇತ್ರ; 'ಪರಿಣಾಮವನ್ನುಂಟುಮಾಡುವ ನೋಟ' ಎಂಬ ವಿವರಣೆಯೂ ಇದೆ. ನೋಟದಿಂದಲೇ ವಿಷವನ್ನು ಅಮೃತವನ್ನಾಗಿಸುವ 'ದೃಷ್ಟವಿಷ' ಮತ್ತು ಮುನಿದು ನೋಡಿದೊಡನೆಯೇ ಸಾಯುವಂತೆ ಮಾಡುವ 'ದೃಷ್ಟಿವಿಷತ್ವ' ಎಂಬ ಎರಡು ಉದಾಹರಣೆಗಳೂ ದೊರೆಯುತ್ತವೆ. 'ದಿಷ್ಟಿದೀವಿಗೆದಿವ್ಯ'ವೆಂಬುದು, ದಿಟ್ಟಿಸಿ ನೋಡುವುದರಿಂದಲೇ ದೀವಿಗೆ(ಜ್ಯೋತಿ)ಯನ್ನು ಹೊತ್ತಿಸು(ಮುಟ್ಟಿಸು)ವ ದಿವ್ಯವಾಗಿರಬಹುದು. ದೀಪವನ್ನು ನಂದಿಸುವ ದಿವ್ಯವಾಗಿಯೂ ಇದನ್ನು ಗುರುತಿಸಲಾಗುತ್ತದೆ. ಈ 'ದಿಷ್ಟಿದೀವಿಗೆದಿವ್ಯ'ಕ್ಕೂ 'ತುಪ್ಪದ ದೃಷ್ಟಪವಾಡ'ಕ್ಕೂ ಯಾವುದೇ ಸಂಬಂಧ ಇರುವಂತೆ ತೋರುವುದಿಲ್ಲ.

ವ್ಯಾಜ್ಯಗಾರರು ದುರ್ಗದ ದಳವಾಯಿ ಹೊರಕಣ್ಣನ ಮೂಲಕ ಅರಸನನ್ನು ಸಂಪರ್ಕಿಸಿದುದು ಕುತೂಹಲಕಾರಿಯಾಗಿದೆ. ಈ ವ್ಯಾಜ್ಯತೀರ್ಮಾನದಲ್ಲಿ ಮಧ್ಯವರ್ತಿಯಂತೆ ಕಾರ್ಯನಿರ್ವಹಿಸಿದವನು ಹೊರಕಣ್ಣ. ಬಿಚ್ಚುಗತ್ತಿ ಭರಮಣ್ಣನಾಯಕನ ಕಾಲದಲ್ಲಿ ದಳವಾಯಿಯಾಗಿದ್ದ ಹೊರಕೇನಾಯಕನೇ ಈ ದಳವಾಯಿ ಹೊರಕಣ್ಣನೆನ್ನುವುದು ಸ್ಪಷ್ಟ. ದಿವ್ಯಪ್ರಮಾಣದ ಪರೀಕ್ಷೆ ನಡೆದುದು ಹನುಮಂತದೇವರಗುಡಿಯಲ್ಲಿ ಎಂದಿರುವುದರಿಂದ, ಇದು ಕೆಳದುರ್ಗದ ಆಯ್ಯಣ್ಣನಪೇಟೆಯಲ್ಲಿರುವ ಪೇಟೆ ಆಂಜನೇಯಸ್ವಾಮಿ ದೇವಸ್ಥಾನವೆಂದೇ ತೋರುತ್ತದೆ. ಭರಮಣ್ಣನಾಯಕನ ಕಾಲದಲ್ಲಿ ದಾವಣಗೆರೆಗ್ರಾಮದ ಗೌಡಿಕೆಹಕ್ಕಿನ ವ್ಯಾಜ್ಯದ ತೀರ್ಮಾನವಾದುದು ಸಹಾ ಇದೇ ದೇವಸ್ಥಾನದಲ್ಲಿ; ಕಾಯಿಸಿದ ಉಕ್ಕಿನ ಗಟ್ಟಿಯನ್ನು ಕೈಯಲ್ಲಿ ಹಿಡಿದುತೋರುವದಿವ್ಯದ ಮೂಲಕ.

* * *

**ವಿವಾದ ೬ : ಕೋಗುಂಡೆ (ಕೊಂಗುಂಟೆ) ವೇಶ್ಯೆ ಕುರಿತ ವಿವಾದ**

**ವಾದಿ-ಪ್ರತಿವಾದಿಗಳು : ಗುರುಪಾದದೇಶಿಕರು v/s ಹಿರೇಮದಕರಿನಾಯಕ**

**ತೇದಿ : ಸು. ೧೬೩೦-೧೬೪೮**

**ವಿವಾದನಡೆದ ಸ್ಥಳ : ಚಿತ್ರದುರ್ಗ**

ಚಿತ್ರದುರ್ಗ ಮುರಿಗಾಮಠದ ೧೨ನೇ ಅಧ್ಯಕ್ಷರಾಗಿ ಬಂದವರು ಗುರುಪಾದದೇಶಿಕರು [ನಾಯಕನಹ(ಳ್ಳಿ)ಟ್ಟಿ ಗುರುಪಾದಪ್ಪ; ಸು.೧೬೫೦-೧೬೬೦?]. ಈ ಅವಧಿಯಲ್ಲಿ ದುರ್ಗದ ದೊರೆಯಾಗಿದ್ದವನು ಹಿರೇಮದಕರಿನಾಯಕ. ಒಮ್ಮೆ ಕೊಂಗುಂಟೆ(ಚಿತ್ರದುರ್ಗ ತಾಲ್ಲೂಕಿನ ಈಗಿನ ಕೋಗುಂಡೆ)ಗ್ರಾಮದ ಕೆಲವು 'ಭಕ್ತವೃದ್ಧರು' ಗುರುಪಾದಗುರುವರ್ಯರಲ್ಲಿಗೆ ಬಂದು ಒಂದು ವಿಲಕ್ಷಣವೆನಿಸುವ ಬಿನ್ನಹವನ್ನು ಮಾಡಿಕೊಳ್ಳುತ್ತಾರೆ. ಕೊಂಗುಂಟೆಯಲ್ಲಿರುವ 'ಚಂಡಾಲಜಾತಿಯಲಿ ಜನಿಸಿರ್ಪ' ಓರ್ವ ವೇಶ್ಯೆಯ ಸಂಗದಿಂದ ಗ್ರಾಮದ 'ಶತಯವ್ವನಿಗರು' ಹಾಳಾಗುತ್ತಿದ್ದಾರೆ; ಅವರ ವಿರುದ್ಧ ಕ್ರಮ ಕೈಗೊಂಡು ರಕ್ಷಿಸಬೇಕೆಂಬುದೇ ಆ ಬಿನ್ನಹ. ಇದನ್ನು ಲಾಲಿಸಿದ ಗುರುಪಾದದೇಶಿಕರು, ಇದು

ಧರ್ಮಬಾಹಿರಕಾರ್ಯವೆಂದು ಬಗೆದು, ಆ ಚಾಂಡಾಲಕಾರ್ತಿಯಲ್ಲಿ ಲಂಪಟಾಸಕ್ತರಾದ ದುರ್ಮತಿಗಳಿಗೆ, ಅಂದರೆ ದುರಾಚಾರಿಗಳಾದ ಯುವಕರಿಗೆ ಧರ್ಮದ ಹೆಸರಿನಲ್ಲಿ ಬಹಿಷ್ಕಾರ ಹಾಕುತ್ತಾರೆ.

ಧರ್ಮಗುರುಗಳ ಸಾನ್ನಿಧ್ಯದಿಂದ ದೂರವಾದುದಕ್ಕೆ ಭಯಪಟ್ಟುಕೊಂಡ ಆ ಅಪರಾಧಿ ಯುವಕರು, ಹಿರೇಮದಕರಿನಾಯಕನ ಬಳಿಗೆ ಬಂದು ತಮ್ಮೆಲ್ಲರನ್ನು ಈ ಶಿಕ್ಷೆಯಿಂದ ರಕ್ಷಿಸಬೇಕೆಂದು ಬೇಡಿಕೊಳ್ಳುತ್ತಾರೆ. ಆಗಬಹುದೆಂದು ಅಭಯವನ್ನೀಯುತ್ತಾನೆ ನಾಯಕ. ಹಾಗೆಯೇ, ಗುರುಪಾದದೇಶಿಕರ ಬಳಿಗೆ ಹೋಗಿ ಯುವಕರ ಮೇಲೆ ವಿಧಿಸಿರುವ ಬಹಿಷ್ಕಾರದ ಆದೇಶವನ್ನು ಹಿಂತೆಗೆದುಕೊಳ್ಳುವಂತೆ ವಿನಂತಿಸುತ್ತಾನೆ. "ಶಿವಭಕ್ತರ ಸಂಸರ್ಗದಿಂದ ಪ್ರಾಣಿ-ಪಕ್ಷಿಗಳೂ ಪುನೀತವಾಗುತ್ತವೆಯೆಂದ ಮೇಲೆ ವೇಶ್ಯಾಸಂಸರ್ಗದಿಂದ ಆ ಶಿವಭಕ್ತರು ದೂಷಿತರಾಗುವರೆಂಬುದು ಎಲ್ಲಿಯ ಮಾತು? ಅಂಥವರು ಶಿವಭಕ್ತರೇ ಅಲ್ಲದುದರಿಂದ ಅವರು ಅತೀತರು" ಎಂದು ವಾದವನ್ನೂ ಮಂಡಿಸುತ್ತಾನೆ. "ಪ್ರೇಮ-ತ್ಯಾಗ-ಪ್ರಜ್ಞೆಗಳನ್ನು ಕಾಮ-ಲೋಭ-ಮೋಹದಲ್ಲಿಯೂ ವಿನಯ-ಸಹನೆ-ಸಹಕಾರಗಳನ್ನು ಮದ-ಕ್ರೋಧ-ಮತ್ಸರದಲ್ಲಿಯೂ ನೀಗಿಕೊಂಡವರು ಭಕ್ತರಾದಾರೆ? ಅನ್ಯರನ್ನು ಶುದ್ಧಿ ಮಾಡುವವರು ಮೊದಲು ತಾವು ಶುದ್ಧರಿರಬೇಡವೆ? ಭವಿಗಳನ್ನು ಭಕ್ತರನ್ನಾಗಿ ಪರಿವರ್ತಿಸಬಹುದು. ಆದರೆ ಭ್ರಷ್ಟರನ್ನು ಭಕ್ತರನ್ನಾಗಿಸುವುದು ಸಾಧ್ಯವಿಲ್ಲದ ಮಾತು. ಅಕ್ಕಿಯನ್ನು ಬೇಯಿಸಿದರೆ ಸವಿಯನ್ನವಾಗುವುದೆಂದು ಹಳಸಿದನ್ನವನ್ನು ಬಿಸಿಮಾಡಿದರೆ ಅದು ರುಚಿಪಾಕವಾದೀತೆ? ಈ ವೇಶ್ಯಾಲಂಪಟರು ಶಿವಭಕ್ತರೆಂಬ ಮಾತಂತಿರಲಿ -ಅವರು ಎಲ್ಲ ವಿಧವಾದ ಅಪರಾಧಿಗಳಿಗಿಂತ ಕೀಳು. ಅವರಿಗೆ ಸಮಾಜದಲ್ಲಿ ಪುರಸ್ಕಾರ ಕೂಡದೆಂದು ಬಹಿಷ್ಕರಿಸಿದೆವು. ನಿನಗೆ ಇನ್ನು ಈ ಗೋಜು ಬೇಡ" ಎಂದು ಪ್ರತಿವಾದವನ್ನು ಮಂಡಿಸುತ್ತಾರೆ ಸ್ವಾಮಿಗಳು.

ತನ್ನನ್ನು ಈ ವಿವಾದದಿಂದ ದೂರವಿರುವಂತೆ ಆದೇಶಿಸಿದ ಸ್ವಾಮಿಗಳ ನಿಲುವನ್ನು ದಿಟ್ಟತನದಿಂದ ಪ್ರಶ್ನಿಸುತ್ತಾನೆ ನಾಯಕ. ವಾದ-ವಿವಾದ ಮುಂದುವರೆಯುತ್ತದೆ. ಸಹಜವಾಗಿಯೇ ನಾಯಕನಿಂದ ದರ್ಪದ ಮಾತುಗಳು ಹೊರಬೀಳುತ್ತವೆ. ಇದರಿಂದ ಅಲ್ಲಿ ಅಸಹನೀಯ ವಾತಾವರಣ ಏರ್ಪಡುತ್ತದೆ. ಇದರಿಂದ ಮುನಿಸಿಕೊಂಡ ಗುರುಪಾದದೇಶಿಕರು, ತಮ್ಮ ಮಠ-ಮಾನ್ಯವನ್ನು ತೊರೆದು ತಮ್ಮ ಅನುಯಾಯಿಗಳ ಜೊತೆಗೂಡಿ ಗುಣಮೆಟ್ಟುಕಲ್ಲು (ಹಾವೇರಿ ತಾಲ್ಲೂಕು) ಎಂಬ ಗ್ರಾಮಕ್ಕೆ ಹೋಗಿನಿಂತು ಅಲ್ಲಿಯೇ ಶಿವೈಕ್ಯರಾಗುತ್ತಾರೆ.[೧೪]

ಈ ಮೇಲಿನ ಪ್ರಕರಣದಲ್ಲಿ ಪರಿಶೀಲಿಸಲರ್ಹವೆನಿಸುವ ಕೆಲವಾರು ಸೂಕ್ಷ್ಮ ಅಂಶಗಳಿವೆ. ಇದಕ್ಕೆ ಮೊದಲು ಇಲ್ಲಿ ಪ್ರಸ್ತಾಪಿಸಬೇಕಾದ ಸಂಗತಿಗಳೆಂದರೆ, ಕೋಗುಂಡೆಯ ವೇಶ್ಯೆಯ ಹೆಸರಾಗಲಿ, ಆಕೆಯ ಹಿನ್ನೆಲೆ ಮತ್ತು ಈ ಘಟನೆಗೆ ಸಂಬಂಧಿಸಿದ ವಿವರವಾಗಲಿ ಚಿತ್ರದುರ್ಗ ಚರಿತ್ರೆಯಲ್ಲಿ ದೊರೆಯುವುದಿಲ್ಲ. ಈ ಘಟನೆಯ ಪ್ರಸ್ತಾಪ ಕಂಡುಬರುವುದು

ಮುರಿಗಾಮಠದ ಗುರುಪರಂಪರೆಯನ್ನು ಹೇಳುವ 'ಮಹಾದೇವನ ಮಹಾಲಿಂಗೇಂದ್ರ ವಿಜಯ'ದಲ್ಲಿ ಮಾತ್ರ. ಈ ಕಾವ್ಯವೂ ಈ ವೇಶ್ಯೆಯ ಬಗೆಗೆ ವಸ್ತುನಿಷ್ಠವಾಗಿ ನಿರೂಪಿಸುವುದಿಲ್ಲ. ಅಲ್ಲದೆ, ಮುರಿಗಾಮಠದ ಕೆಲವು ಪೀಠಾಧ್ಯಕ್ಷರ ಕಾಲಮಾನವು ನಿರ್ದಿಷ್ಟವಾಗಿಲ್ಲದಿರುವುದು ಸಹಾ ಗೊಂದಲಕ್ಕೆ ಕಾರಣವಾಗಿದೆ. ಪ್ರಸ್ತುತ ಪ್ರಕರಣದಲ್ಲಿ ಕಾಣಿಸಿಕೊಂಡಿರುವ ಗುರುಪಾದದೇಶಿಕರ ಕಾಲಮಾನವೂ ಖಚಿತವಲ್ಲ. ಈಚಿನ ಸಂಶೋಧನೆಗಳು ದೃಢಪಡಿಸುವಂತೆ, ಈ ಘಟನೆ ನಡೆದುದು ಹಿರೇಮದಕರಿನಾಯಕ ಆಡಳಿತಾವಧಿಯಲ್ಲಿ. ಆದ್ದರಿಂದ ಇಲ್ಲಿ ಕಂಡುಬರುವ ಕಾಲಮಾನ ವ್ಯತ್ಯಾಸವನ್ನು ಸರಿಪಡಿಸಬೇಕಿದೆ.

ಕೋಗುಂಡೆ ವೇಶ್ಯೆಯನ್ನು ಕುರಿತ ಈ ಹಗರಣವು ಗುರುಮನೆ ಮತ್ತು ಅರಮನೆಗಳನ್ನು ಆವರಿಸಿಕೊಂಡುದು ಗಮನಾರ್ಹ. ಚಿತ್ರದುರ್ಗ ನಾಯಕ ಅರಸರ ಚರಿತ್ರೆಯಲ್ಲಿ ಇಂಥಾ ಇನ್ನೊಂದು ಸೂಕ್ಷ್ಮ ಪ್ರಸಂಗವು ಕಂಡುಬರುವುದಿಲ್ಲ. ಇದೊಂದು ಸರಳ ವಿವಾದವಾಗಿ ಮೇಲ್ನೋಟಕ್ಕೆ ಕಂಡುಬಂದರೂ ತನ್ನ ಆಂತರ್ಯದಲ್ಲಿ ಇದು ಹೊಂದಿರುವ 'ಶೀಲ ಸಂಹಿತೆ'ಯ ಕಾರಣವಾಗಿ, ಪ್ರತಿಷ್ಠಿತ ಹಾಗೂ ಬಲಿಷ್ಠ ಶಕ್ತಿಗಳು ಮುಖಾಮುಖಿಯಾದುದು ಹಾಗೂ ಸೈದ್ಧಾಂತಿಕ ನೆಲೆಯಲ್ಲಿ ಸ್ವಾಭಿಮಾನ-ಸ್ವಪ್ರತಿಷ್ಠೆಗಳು ನಿರ್ಣಾಯಕ ಪಾತ್ರವಹಿಸಿದುದು ಇದರ ಒಂದು ಮುಖವಾದರೆ; ತಮ್ಮ ತಮ್ಮ ಪರಮಾಧಿಕಾರವನ್ನು ಹಾಗೂ ಧಾರ್ಮಿಕ ಮತ್ತು ರಾಜಕೀಯ ಇಚ್ಛಾಶಕ್ತಿಗಳನ್ನು ಪ್ರದರ್ಶಿಸಲು ಕ್ರಿಯಾಶೀಲವಾದುದು ಇದರ ಇನ್ನೊಂದು ಮುಖ. ತನ್ನ ಪ್ರಜೆಗಳ ದೂರು-ದುಮ್ಮಾನಗಳನ್ನು ಆಲಿಸುವ ಮತ್ತು ಯೋಗ್ಯರೀತಿಯಲ್ಲಿ ನ್ಯಾಯನಿರ್ಣಯಮಾಡುವ ಕರ್ತವ್ಯ ರಾಜನದು; ಅದರಂತೆ, ಸಮಾಜದಲ್ಲಿ ನೈತಿಕತೆಯನ್ನು ಎತ್ತಿಹಿಡಿಯುವ ಕರ್ತವ್ಯ ಗುರುವಿನದು. ಇವೆರಡೂ ನೆಲೆಗಳು ಜೊತೆಗೂಡಿದರೆ ನ್ಯಾಯಪರಿಪಾಲನೆಯಲ್ಲಿ ಪರಿಶುದ್ಧತೆ ಮತ್ತು ಭರವಸೆಗಳು ಹೆಚ್ಚುತ್ತವೆ. ನೈತಿಕತೆಯ ಮಟ್ಟಿಗೆ, ಈ ಪ್ರಕರಣದಲ್ಲಿ ತಾತ್ವಿಕ ಭಿನ್ನಾಭಿಪ್ರಾಯ ತಳೆದ ರಾಜ ಮತ್ತು ಗುರು - ಈ ಈರ್ವರೂ ತಾವೇ ಪರಸ್ಪರ ವಿರೋಧಿಗಳಾದುದು ವಿಪರ್ಯಾಸ.

ಶೂನ್ಯಸಿಂಹಾಸನ ಪರಂಪರೆಯ ಮುರಿಗಾಮಠವು ಚಿತ್ರದುರ್ಗದಲ್ಲಿ ಭದ್ರನೆಲೆ ಕಂಡುಕೊಂಡುದು ಬಿಚ್ಚುಗತ್ತಿ ಭರಮಣ್ಣನಾಯಕನ ಅವಧಿಯಲ್ಲಿ. ಈ ನಾಯಕನ ಕಾಲದಲ್ಲಿ ಅರಮನೆಯ ಮಟ್ಟಿಗೆ ಅತ್ಯಂತ ಗೌರವದ ಸ್ಥಾನ ಪಡೆದುಕೊಂಡಿದ್ದಿತು ಈ ಗುರುಮನೆ. ಈ ನಾಯಕನ ನಂತರ ಸಿಂಹಾಸನವನ್ನೇರಿದ ನಾಯಕರು ಈ ಮಠದ ಗುರುಗಳಿಗೆ ತೋರಬೇಕಿದ್ದ ನಿಷ್ಠೆಯಲ್ಲಿ ಅನಿರೀಕ್ಷಿತ ಏರುಪೇರುಂಟಾಯಿತು. ಇದಕ್ಕೆ ನಿರ್ದಿಷ್ಟ ಕಾರಣವನ್ನು ಹುಡುಕಿ ಹೇಳುವುದು ಕಷ್ಟ. ಭರಮಣ್ಣನಾಯಕನು ಅಳಿದ ಕೂಡಲೇ ದುರ್ಗದರಸರ ಧಾರ್ಮಿಕ ಒಲವು ಬದಲಾದುದಂತೂ ಸ್ಪಷ್ಟ. ಇದಕ್ಕೆ ರಾಜಕೀಯ ಹಿನ್ನೆಲೆಯೂ ಇರಬಹುದು. ಹಿರೇಮದಕರಿನಾಯಕನೂ ಇದಕ್ಕೆ ಸ್ಪಂದಿಸಿರಬಹುದು. ಬಿದನೂರು-ಕೆಳದಿ, ಹರಪನಹಳ್ಳಿ ಮೊದಲಾದ ವೀರಶೈವ ಸಂಸ್ಥಾನಿಕರು

ದುರ್ಗದವರನ್ನು ಸದಾ ದ್ವೇಷಿಸುತ್ತಿದುದು; ಹಾಗೂ ಕೆಳದಿಯರಸರೂ ಮುರಿಗಾಮಠದ ಅಭಿಮಾನಿಗಳಾಗಿದ್ದುದು ಮಠದ ಬಗೆಗಿನ ನಾಯಕನ ಧೋರಣೆಯಲ್ಲಿ ಬದಲಾವಣೆ ಉಂಟುಮಾಡಿರಬಹುದು. ಪ್ರಾಯಶಃ ಇದೇ ಹಿನ್ನೆಲೆಯಲ್ಲಿ, ಹಿರೇಮದಕರಿನಾಯಕನು ಶ್ರೀ ಕೂಡಲೀ ಶೃಂಗೇರಿ ಮಠಾಧೀಶರಿಗೆ (ಶಿವಮೊಗ್ಗ ಜಿಲ್ಲೆ) ಹೆಚ್ಚು ಗೌರವ ತೋರಲಾರಂಭಿಸಿದ; ಸ್ಫಟಿಕಶಿಲೆಯಲ್ಲಿ ಚಂದ್ರಮೌಳೇಶ್ವರಲಿಂಗವನ್ನು ಮಾಡಿಸಿಕೊಂಡು ಪ್ರತ್ಯೇಕವಾಗಿ ಪೂಜಿಸಲಾರಂಭಿಸಿದ; ಬ್ರಾಹ್ಮಣರು ನಾಯಕನ ಪೂಜಾಕಾರ್ಯಗಳಲ್ಲಿ ಮುಖ್ಯಪಾತ್ರ ವಹಿಸಲಾರಂಭಿಸಿದರು.

ಪ್ರಸ್ತುತ ವಿವಾದವು ರಾಜಧರ್ಮದಂತೆ ತೀರ್ಮಾನಗೊಳ್ಳಲಿಲ್ಲವೆನ್ನುವುದು ವಾಸ್ತವ. ಧಾರ್ಮಿಕ ಮುಖಂಡರ ನಿರ್ಣಯವನ್ನು ತೆಗೆದುಹಾಕುವಂಥಾ ಪರಿಸ್ಥಿತಿ ಆಗ ಇರಲಿಲ್ಲವಾಗಿ, ನ್ಯಾಯಾಧೀಶನಾಗಿ ಕಾರ್ಯನಿರ್ವಹಿಸುವ ರಾಜನ ಪರಮೋಚ್ಚ ಅಧಿಕಾರವು ಈ ಸಂದರ್ಭದಲ್ಲಿ ಕಡೆಗಣಿಸಲ್ಪಟ್ಟುದು ಸಹಾ ನಿಜ. ರಾಜ ಮತ್ತು ಗುರುಗಳ ಮಧ್ಯೆ ನಡೆದ ವಾದ-ವಿವಾದ ಸಂದರ್ಭದ ಪೂರ್ವದಲ್ಲೆ ಬೇರೆ ಬೇರೆ ಕಾರಣಗಳಿಗಾಗಿ ಅರಮನೆ-ಗುರುಮನೆಗಳ ನಡುವಣ ಸಂಬಂಧವು ಹಳಸಿಹೋಗಿದ್ದಿರಬಹುದಾದ್ದರಿಂದ, ಕೋಗುಂಡೆ ವೇಶ್ಯಾಪ್ರಕರಣವು ಒಂದು ನೆಪವಾಗಿ, ಅದಕ್ಕಿಂತಲೂ ಮುಖ್ಯವಾಗಿ ಒಂದು ಅರ್ಥಹೀನ ವಿವಾದವಾಗಿ ಮಾರ್ಪಟ್ಟುದು ಸಹಜ. ಈ ಪ್ರಕರಣದಿಂದ ಎರಡೂ ಸಂಸ್ಥಾನಗಳ ಪಾರಂಪರಿಕ ವರ್ಚಸ್ಸಿಗೆ ತಕ್ಕಮಟ್ಟಿಗಾದರೂ ಧಕ್ಕೆ ತಗುಲಿತೆನ್ನುವುದರಲ್ಲಿ ಅನುಮಾನವಿಲ್ಲ.

* * *

**೫. 'ಪಾಳೈಗಾರ್' ಕಾಟಪ್ಪನಾಯಕ (ದೊಡ್ಡಮದಕರಿನಾಯಕರ ಸಂತತಿ)(೧೮೪೦-೧೯೨೫?)**

ವ್ಯಾಜ್ಯ ೧ : ಬೇಗಾರೀ ಅಡವಿಗನ ಮೇಲೆ ತಳವಾರ ರಂಗಯ್ಯ ಹಲ್ಲೆಮಾಡಿದ ವ್ಯಾಜ್ಯ

ವ್ಯಾಜ್ಯಗಾರರು : ಪೂಜಾರಿ ವೃಂದಾವನ ಇನ್ನಿತರರು (ಫಿರ್ಯಾದಿ) ಹಾಗೂ ರುದ್ರನ ಮಗ ರಂಗಯ್ಯ (ಅಪರಾಧಿ)

ತೇದಿ : ೧೯೧೩ ಜನವರಿ ೨೦

ವ್ಯಾಜ್ಯನಡೆದ ಸ್ಥಳ : ಗೌರೀಪುರ

ಚಳ್ಳಕೆರೆ ತಾಲ್ಲೂಕು ಗೌರೀಪುರದ ಬೇಗಾರೀ ಅಡವಿಗ(ಬೇಗಾರ ಹನುಮನ ಮಗ) ನೆಂಬವನ ಮೇಲೆ ಅಲ್ಲಿಯ ಸರಕಾರಿ ಚಾವಡಿಯ ತಳವಾರ ರಂಗಯ್ಯನೆಂಬವನು ಯಾವುದೋ ಕಾರಣಕ್ಕೆ ಹಲ್ಲೆಮಾಡಿದ್ದರಿಂದ ಈ ವ್ಯಾಜ್ಯ ಹುಟ್ಟಿಕೊಳ್ಳುತ್ತದೆ. ಈ ವ್ಯಾಜ್ಯದ ವಿವರವು ತಿಳಿದುಬರುವುದು ಆ ಸಂದರ್ಭದಲ್ಲಿ ಸ್ಥಳದಲ್ಲಿದ್ದ ಪ್ರತ್ಯಕ್ಷದರ್ಶಿಗಳು (ಸಾಕ್ಷಿಗಳು) ನೀಡಿದ ಬರಹರೂಪದ ಹೇಳಿಕೆಗಳಿಂದ. ಈ ಘಟನೆಗೆ ಸಂಬಂಧಿಸಿದ ಸಾಕ್ಷಿಗಳ ಸಂಖ್ಯೆ ನಿರ್ದಿಷ್ಟವಿಲ್ಲದಿದ್ದರೂ ೧ ರಿಂದ ೪ ಸಾಕ್ಷಿಗಳು ಈ ಘಟನೆಯನ್ನು ತಾವು ಕಂಡಂತೆ (ಅಲ್ಪಸ್ವಲ್ಪ ವ್ಯತ್ಯಾಸದೊಡನೆ) ವಿವರಿಸಿರುವುದು ಕಂಡುಬರುತ್ತದೆ. ಇಲ್ಲಿ ೩ನೇ ಸಾಕ್ಷಿಯ ಹೇಳಿಕೆಯ ಪತ್ರವು ಲಭ್ಯವಿಲ್ಲದಿರುವುದರಿಂದ, ೧, ೨ ಮತ್ತು ೪ನೇ ಸಾಕ್ಷಿಗಳ

ಹೇಳಿಕೆಗಳನ್ನು ಮಾತ್ರ ಈ ಕೆಳಕಂಡಂತೆ ಸಂಗ್ರಹರೂಪದಲ್ಲಿ, ಸರಳಭಾಷೆಯಲ್ಲಿ ನೀಡಿದೆ; ಹಾಗೂ ಘಟನೆಯಾನುಸಾರ ಈ ಹೇಳಿಕೆಗಳನ್ನು ಕ್ರಮಗೊಳಿಸಲಾಗಿದೆ.

ಈ ಹೇಳಿಕೆಗಳ ದಾಖಲೆಗಳನ್ನು ತಮ್ಮ ಸಂಗ್ರಹದಿಂದ ಹೊರತೆಗೆದು ನನಗೆ ಒದಗಿಸಿದವರು ಚಿತ್ರದುರ್ಗ ನಾಯಕರ ಅರಸರ ನೇರವಂಶಸ್ಥರಾದ ಚಳ್ಳಕೆರೆಯ ಪಿ.ಆರ್. ವೀರಭದ್ರನಾಯಕರು.

**ಅ. ಫಿರ್ಯಾದಿ ಪರ ೪ನೇ ಸಾಕ್ಷಿ ಅಡವಿಗನ ಮಗ ಹನುಮನ ಹೇಳಿಕೆ**

ನಾನು ಈ ಫಿರ್ಯಾದಿ-ಅಪರಾಧಿಗಳನ್ನು ಬಲ್ಲೆ. ಈಗ ಸುಮಾರು ೩-೪ ತಿಂಗಳುಗಳ ಕೆಳಗೆ ರಾತ್ರಿಹೊತ್ತಿನಲ್ಲಿ ನನ್ನ ಮಗ (ಅಡವಿಗ) ಚಾವಡಿ ಬಳಿಯಲ್ಲಿ ಹೊಡೆದರೆಂದು ಅಳುತ್ತಾ ಮನೆಗೆ ಬಂದ. ನನ್ನ ಮಗನನ್ನು ಬಡಿದರೆಂಬ ಆಕ್ರೋಶದಿಂದ ನಾನು ಚಾವಡಿ ಬಳಿಗೆ ಬಂದೆ. ಆಗ ನನ್ನ ಮಗನನ್ನು ಬಡಿದ ತಳವಾರ ರಂಗಯ್ಯನು ಚಾವಡಿಯಲ್ಲಿ ಇದ್ದ. 'ನನ್ನ ಮಗನನ್ನು ಯಾಕೆ ಬಡಿದೆ? ಅವನು ಹುಡುಗ. ನನ್ನನ್ನು ಬಡಿಯಕೂಡದೆ?' ಎಂದು ಕೇಳಿದ್ದಕ್ಕೆ ತಳವಾರನಾಯಕನು ಎದ್ದುಬಂದು ನನ್ನನ್ನು ಮೆಟ್ಟಿನಿಂದ ಹೊಡೆದ. ಅಷ್ಟರಲ್ಲಿ ಅಲ್ಲಿ ಇದ್ದವರು ಬಂದು ನಮ್ಮಿಬ್ಬರನ್ನೂ(ತಂದೆ-ಮಗ) ಆಚೆಗೆ ತಳ್ಳಿದರು. ನಾನು ಆಚೆಗೆ ಹೋದೆನೇ ಹೊರತು ತಳವಾರನಾಯಕನಿಗೆ ನಾನು ಉಗುಳಿದವನಲ್ಲ.

ಓದಲಾಯಿತು. ಸರಿಯಾಗಿದೆ. ಇಷ್ಟೆ ನನ್ನ ಹೇಳಿಕೆ.

(ಬೇಗಾರ ಹನುಮನ ರುಜುವಿಗೆ ಭೀಮರಾಯನ ಬರಹ).

**ಆ. ಫಿರ್ಯಾದಿ ಪರ ೧ನೇ ಸಾಕ್ಷಿ ಹುಸೇ(ಶೇ)ನ್‌ಬೇಗ್‌ನ ಹೇಳಿಕೆ**

ನಾನು ಈ ಗ್ರಾಮ(ಗೌರೀಪುರ)ದ ಫಿರ್ಯಾದಿ-ಅಪರಾಧಿಗಳನ್ನು ಬಲ್ಲೆ. ಈಗ ಸುಮಾರು ೩-೪ ತಿಂಗಳುಗಳ ಹಿಂದೆ ಈ ಗ್ರಾಮದ ಸರಕಾರಿ ಚಾವಡಿಯ ಬಳಿ ಈ ಗ್ರಾಮದ ತಳವಾರ ರಂಗಯ್ಯ ಮತ್ತು ಬೇಗಾರ ಹನುಮ ಈರ್ವರೂ ವಾದಾಡುತ್ತಾ (ವಾದಿಸುತ್ತಾ) ಗದ್ದಲ ಮಾಡುತ್ತಾ ಇದ್ದರು. ಆಗ ನಾನು ನಮ್ಮ ಮನೆಯ ಮುಂದೆ ಕುಳಿತುಕೊಂಡಿದ್ದೆ. ನನ್ನ ಮನೆ ಚಾವಡಿಗೆ ಸಮೀಪದಲ್ಲಿಯೇ ಇದೆ. ಈ ಹನುಮನ ಮಗ (ಬೇಗಾರೀ ಅಡವಿಗನು) ಚಾವಡಿ ಬಳಿಯಿಂದ ಅಳುತ್ತಾ ಹೋದ. ಇವನು ಅಳುತ್ತಾ ಹೋದನಂತರ ಇವನ ತಂದೆ (ಹನುಮ) ಬಂದು ಚಾವಡಿ ಬಳಿ ಗದ್ದಲವನ್ನು ಮಾಡಿದ. ಬಹಳ ಗದ್ದಲವಾಗುತ್ತಿದ್ದುದರಿಂದ ನಾನು ಚಾವಡಿ ಬಳಿಗೆ ಬಂದೆ. ಆಗ ಇನ್ನು ಕೆಲವು ಜನ ಬೇಗಾರರು ಬಂದು, "ನಮ್ಮ ಪೂಜಾರಿಯನ್ನು ಮೆಟ್ಟಿನಿಂದ ಬಡಿದಿರುವಿ. ಅವನು ಪೂಜಾರಿಯಾದುದರಿಂದ ಅವನಿಗೆ ಕುಲದಲ್ಲಿ ದಂಡ ಹಾಕುತ್ತೇವೆ. ಆ ದಂಡವನ್ನು ನೀನೇ ಕೊಡಬೇಕು'' ಎಂದು ಅಪರಾಧಿ ತಳವಾರ ರಂಗಯ್ಯನನ್ನು ಕೇಳುತ್ತಾ ಇದ್ದರು. ಆ ವೇಳೆಗೆ (ರಂಗಯ್ಯನಿಂದ) ಹೊಡೆಸಿಕೊಂಡ ಹುಡುಗ(ಅಡವಿಗ)ನು ಅಲ್ಲಿಗೆ ಬಂದ. "ಈ ರಂಗಯ್ಯನು ಯಾತರಿಂದ ನಿನ್ನನ್ನು ಹೊಡೆದ?'' ಎಂದು ಅವನನ್ನು ಕೇಳಿದಾಗ, "ಕಟ್ಟಿಗೆಯಿಂದ ಹೊಡೆದ'' ಎಂದು ಹೇಳಿದ. ಆದ್ದರಿಂದ ಅಲ್ಲಿಗೆ ಬಂದಿದ್ದ ಬೇಗಾರರು ಎಲ್ಲರೂ ತಮ್ಮ ಮನೆಗಳಿಗೆ ಹೋದರು. ಈ

ಹುಡುಗನ ತಂದೆ ಹನುಮನು ಮಾತ್ರ ಚಾವಡಿಯ ಬಳಿಯೇ ಇದ್ದ. ಬೇಗಾರವನನ್ನು (ಹನುಮನನ್ನು) ಈ ಅಪರಾಧಿಯು (ರಂಗಯ್ಯನು) ಹೊಡೆದದ್ದನ್ನು ನಾನು ಕಾಣೆ. ಅಪರಾಧಿಯ ಮೇಲೆ ಬೇಗಾರವನು ಉಗುಳಿದುದನ್ನೂ ನಾನು ಕಾಣೆ.

ಇದನ್ನು ಓದಲಾಯಿತು. ಸರಿಯಾಗಿದೆ. ಇಷ್ಟೆ ನನ್ನ ಹೇಳಿಕೆ.

(ಉರ್ದುವಿನಲ್ಲಿ 'ಹುಸೇನ್‌ಬೇಗ್' ಎಂದು ಸಹಿ).

**೩. ಫಿರ್ಯಾದಿ ಪರ ೨ನೇ ಸಾಕ್ಷಿ ಕೊಡಜ್ಜನ ಮಗ ಹನುಮನ ಹೇಳಿಕೆ**

ನಾನು ಈ ಮೇಲ್ಕಂಡ ಫಿರ್ಯಾದಿ-ಅಪರಾಧಿಗಳನ್ನು ಬಲ್ಲೆ. ಈಗ ಸುಮಾರು ೨-೩ ತಿಂಗಳುಗಳ ಕೆಳಗೆ ಈ ಗ್ರಾಮ(ಗೌರೀಪುರ)ದ ಸರಕಾರಿ ಚಾವಡಿಯ ಬಳಿ ಅಪರಾಧಿ (ತಳವಾರ ರಂಗಯ್ಯ) ಮತ್ತು ಫಿರ್ಯಾದಿ ಪರ ಸಾಕ್ಷಿಗಳು ಇದ್ದರು. ಬೇಗಾರೀ ಅಡವಿಗ ಎಂಬುವನು ಚಾವಡಿಯಿಂದ ಅಳುತ್ತಾ ಹೋದ. ನಾನು ನನ್ನ ಮನೆಯ ಮುಂದೆ ಇದ್ದೆ. ಇವನು (ಅಡವಿಗ) ಅಳುತ್ತಾ ಹೋದುದರಿಂದ ಚಾವಡಿಯ ಬಳಿಗೆ ಬಂದು "ಬೇಗಾರವನು ಯಾಕೆ ಅಳುತ್ತಾ ಹೋದ?" ಎಂದು ಕೇಳಿದೆ. ಅದಕ್ಕೆ "ತಳವಾರನಾಯ್ಕ ಹೊಡೆದಿದ್ದರಿಂದ ಅಳುತ್ತಾ ಹೋದ" ಎಂದು ತಿಳಿಯಿತು. ಆ ನಂತರ ಈ ಹುಡುಗ(ಅಡವಿಗ)ನ ತಂದೆ, ಇನ್ನೂ ಕೆಲವು ಜನ ಬೇಗಾರರು ಚಾವಡಿಯ ಬಳಿಗೆ ಬಂದರು. ಹುಡುಗನ ತಂದೆ ಮಾತ್ರ ಕೆಲವು ಮಾತುಗಳನ್ನು ಬೈದುಕೊಳ್ಳುತ್ತಾ ಬಂದ. ಚಾವಡಿಯ ಹತ್ತಿರ ನಿಂತುಕೊಂಡು ಪುನಾ ಬೈಯುತ್ತಾ ಇದ್ದ. ಆಗ ಅಲ್ಲಿದ್ದ ಮಾನಂಗಿ ತಿಮ್ಮಯ್ಯನೆಂಬುವನು ಹನುಮನ ಬೈಗುಳಗಳನ್ನು ಕೇಳಿ ತಳವಾರ ರಂಗನಿಗೆ, "ಇವನ ಮುಖಾ ಏನು ನೋಡುತ್ತಿರುವುದು" ಎಂದು ಹುರಿದುಂಬಿಸಿದ. ಇದರಿಂದಾಗಿ ತಳವಾರನು ಹನುಮನಿಗೆ ಬರ್ರೆಯಿಂದ (ಕೋಲಿನಿಂದ) ನಾಲ್ಕು ಪೆಟ್ಟುಕೊಟ್ಟು ಚಾವಡಿಯ ಒಳಕ್ಕೆ ಹೋದ. ಅವನು ಒಳಹೋದನಂತರ ಅಲ್ಲಿದ್ದ ಬೇಗಾರರೆಲ್ಲರೂ ಸೇರಿ, "ನಮ್ಮ ಹುಡುಗನನ್ನು ಮೆಟ್ಟನಿಂದ ಯಾಕೆ ಬಡಿದೆ?" ಎಂದು ಕೇಳುವಷ್ಟರಲ್ಲಿ, ತಳವಾರನಿಂದ ಹೊಡೆಸಿಕೊಂಡ ಹುಡುಗ (ಅಡವಿಗ)ನು ಅಲ್ಲಿಗೆ ಬಂದ. ಅವನನ್ನು ಕೇಳಲಾಗಿ ಅವನು, "ಮೆಟ್ಟನಿಂದ ಹೊಡೆಯಲಿಲ್ಲ. ಬರ್ರೆಯಿಂದ ಹೊಡೆದ" ಎಂದು ಹೇಳಿದ. ನಂತರ ಅಲ್ಲಿ ಸೇರಿದ್ದ ಜನರು ತಮ್ಮ ತಮ್ಮ ಮನೆಗಳಿಗೆ ಹೊರಟುಹೋದರು. ಅಡವಿಗನ ತಂದೆ ಹನುಮನು ಮಾತ್ರ 'ಏನನ್ನೋ ಕಳೆದುಕೊಂಡಿದ್ದೇನೆ' ಎಂದು ಅಲ್ಲಿಯೇ ಹುಡುಕುತ್ತಾ ಇದ್ದ. ತಳವಾರ ಮತ್ತು ಹನುಮರು ಗುದ್ದಾಡುವ ಸಮಯದಲ್ಲಿ ಅವರ ಸಮೀಪದಲ್ಲಿಯೇ ಇದ್ದೆ. ಆಗ ಇವರು ಬಾಯಿಗುದ್ದಾಟ(ಮಾತಿನ ಜಗಳ)ದಿಂದ ಇದ್ದರೇ ಹೊರತು, ಮಾದಿಗರವನು (ಹನುಮನು) ತಳವಾರನಿಗೆ ಉಗುಳಲಿಲ್ಲ.

ಓದಲಾಯಿತು. ಸರಿಯಾಗಿದೆ. ಇಷ್ಟೆ ನನ್ನ ಹೇಳಿಕೆ.

(ಕುಂಟ ಹನುಮನ ರುಜುವಿಗೆ ಭೀಮರಾಯನ ಬರಹ).

ಈ ವ್ಯಾಜ್ಯದ ವಿಚಾರಣೆಯು 'ಶ್ರೀಮನ್ಮಹಾನಾಯಕ ನಾಯಕಾಚಾರ್ಯ ನಾಯಕ ಶಿರೋಮಣಿ ಕಾಮಗೇತಿ ಕಸ್ತೂರಿ ವೀರರಾಜಾಧಿರಾಜ ಚಿತ್ರದುರ್ಗ ಪಾಳೆಯಗಾರರು ಭರಮಣ್ಣನಾಯಕರವರ ಕಾಟಪ್ಪನಾಯಕರವರ ಸನ್ನಿಧಿಯಲ್ಲಿ' ನಡೆದಿರುವುದು ಇಲ್ಲಿಯ ಸಾಕ್ಷಿಪತ್ರಗಳಿಂದ ತಿಳಿದುಬರುತ್ತದೆ. ಈ ಕಾಟಪ್ಪನಾಯಕರು ದೊಡ್ಡೇರಿಯ ದೊಡ್ಡಮದಕರಿನಾಯಕರ ಸಂತತಿಯವರು. ಮೈಸೂರು ಅರಮನೆ ಮತ್ತು ಸ್ಥಳೀಯ ಮಠ-ಮಾನ್ಯಗಳು ಇವರನ್ನು 'ಪಾಳೈಗಾರ್ ಮಿಸ್ಟರ್ ಕಾಟಪ್ಪನಾಯಕರು', 'ಪಾಳೈಗಾರ್ ಕಾಟಪ್ಪನಾಯಕರು' ಇತ್ಯಾದಿಯಾಗಿ ಗೌರವಪೂರ್ವಕ ಸಂಬೋಧಿಸಿವೆ. ಪ್ರಸ್ತುತ ವ್ಯಾಜ್ಯದ ವಿಚಾರಣೆಯು ಇವರ ಸಮ್ಮುಖದಲ್ಲಿ ನಡೆದಿರುವುದನ್ನು ನೋಡಿದರೆ, ಇವರು ವರ್ಚಸ್ವೀ ವ್ಯಕ್ತಿಯಾಗಿ ಹಾಗೂ ಹಿರಿಯತನವುಳ್ಳ ನ್ಯಾಯಾಧೀಶರಾಗಿ ಕಂಡುಬರುತ್ತಾರೆ.

ಮೇಲಿನ ಮೂವರು ಸಾಕ್ಷಿಗಳ ಹೇಳಿಕೆಗಳಿಂದ ಪ್ರಸ್ತುತ ವ್ಯಾಜ್ಯದ ಸ್ವರೂಪ ಸ್ಪಷ್ಟಗೊಳ್ಳುತ್ತದೆ. ಇದೊಂದು ಸಾಮಾನ್ಯ ಘಟನೆಯಾದರೂ ಇದು ಕಾನೂನು ತೊಡಕಿಗಿಂತಲೂ ಮಿಗಿಲಾದ ಸಾಮಾಜಿಕ ಸಮಸ್ಯೆಯನ್ನು ಎತ್ತಿತೋರುತ್ತದೆ. ಇಲ್ಲಿ ಪರಿಶಿಷ್ಟಜಾತಿ-ಪಂಗಡಗಳ ನಡುವಣ ಸಂಘರ್ಷದಿಂದ ಉಂಟಾದ ತ್ವೇಷಮಯ ಪರಿಸ್ಥಿತಿಯು ಅರಿವಿಗೆ ಬರುತ್ತದೆ. ಮೆಟ್ಟಿನಲ್ಲಿ ಏಟುತಿನ್ನುವ ಪೂಜಾರಿ(ಹನುಮ) ಅಥವಾ ಯಾವುದೇ ವ್ಯಕ್ತಿಗೆ ಆಯಾ ಜಾತಿಪದ್ಧತಿಗನುಗುಣವಾಗಿ ದಂಡ ವಿಧಿಸಬಹುದಿತ್ತೆಂಬುದು ಇಲ್ಲಿ ವ್ಯಕ್ತಪಡುತ್ತದೆ. ತಮ್ಮ ಜಾತಿಯವನಿಗೆ ತೊಂದರೆಯುಂಟಾದರೆ ಜಾತಿಸಮುದಾಯದವರು ಒಟ್ಟಾಗಿ ಪ್ರತಿಭಟಿಸುತ್ತಿದ್ದುದಕ್ಕೆ ಹಾಗೂ ನ್ಯಾಯವಿಚಾರಣೆಗಾಗಿ ಒತ್ತಾಯಿಸುತ್ತಿದ್ದುದಕ್ಕೆ ಇದು ಇನ್ನೊಂದು ಉದಾಹರಣೆಯೆನ್ನಬಹುದು. ಈ ವ್ಯಾಜ್ಯದ ವಿಚಾರಣೆ ನಡೆದ ಎಡೆ, ವಿಚಾರಣೆಯ ಸ್ವರೂಪ, ವಿಚಾರಣೆ ನಡೆಸುವವರ ಹಕ್ಕುಬಾಧ್ಯತೆ; ತೀರ್ಪಿನ ವಿವರ, ಅದರ ಫಲಿತಾಂಶ ಇತ್ಯಾದಿ ಅಂಶಗಳಾವುವೂ ದೊರೆಯುವುದಿಲ್ಲ. ಇಲ್ಲಿಯವು ಫಿರ್ಯಾದಿಗಳು ನೀಡಿದ ಸಾಕ್ಷ್ಯಗಳಾಗಿರುವುದರಿಂದ, ವ್ಯಾಜ್ಯದ ಒಂದು ಮುಖ ಮಾತ್ರ ಗಮನಕ್ಕೆ ಬರುತ್ತದೆ. ಅಪರಾಧಿಯ ಯಾವ ಹೇಳಿಕೆಯೂ ಲಭ್ಯವಿಲ್ಲದಿರುವುದರಿಂದ, ಈ ಘಟನೆಯ ಸಮಗ್ರ ಹಾಗೂ ವಾಸ್ತವಚಿತ್ರ ದೊರೆಯುವುದು ಕಷ್ಟ. ಆದರೆ ಅಡವಿಗನ ಮಗ ಹನುಮನು (ಫಿರ್ಯಾದಿ) ಜಗಳ ನಡೆದ ಸಂದರ್ಭದಲ್ಲಿ ತನ್ನ ಮೇಲೆ ಉಗುಳಿದನೆಂಬ ಪ್ರತ್ಯಾರೋಪವನ್ನು ತಳವಾರ ರಂಗಯ್ಯನು (ಅಪರಾಧಿ) ಮಾಡಿರುವನೆಂಬುದು ಸಾಕ್ಷಿಗಳ ಹೇಳಿಕೆಗಳಿಂದ ಮಾತ್ರ ತಿಳಿಯುತ್ತದೆಯೇ ವಿನಾ ಇದು ಅಪರಾಧಿಯ ನೇರ ಹೇಳಿಕೆಯಿಂದಲ್ಲ. ಇಷ್ಟಲ್ಲದೆ ಬೇರೆ ಯಾವ ವಿವರವೂ ದೊರೆಯುವುದಿಲ್ಲ. ಅಪರಾಧಿಯ ಹೇಳಿಕೆಯ ದಾಖಲೆಯೂ ಇದ್ದಿರಬಹುದು.

ಏನೇ ಇದ್ದರೂ ಈ ವ್ಯಾಜ್ಯದ ಹಿನ್ನೆಲೆಯಲ್ಲಿ, ಚಿತ್ರದುರ್ಗ ನಾಯಕ ಅರಸರ ಸಂಬಂಧಿಗಳು, ೨೦ನೇ ಶತಮಾನದ ಮಧ್ಯಭಾಗದವರೆಗೂ ಸ್ಥಳೀಯವಾಗಿ ತಮ್ಮ ಪ್ರಭಾವವನ್ನು ಉಳಿಸಿಕೊಂಡುದು ಸ್ಪಷ್ಟ. ೧೯೪೧ ನವೆಂಬರ್ ೧೪ ಶನಿವಾರದ

ತೇದಿಯುಳ್ಳ; 'ಶ್ರೀರ್ಮ ಚಿತ್ರದುರ್ಗದ ಸಮಸ್ಥಾರ್ ಧೊರ್‍ರಿಗಳು ಜಂಪಂಣನಾಯ್ಕರ್‍ರು-ಕಾಟಪ್ಪನಾಯ್ಕರ ಸಹಾ' ಎಂಬ ಒಕ್ಕಣೆಯುಳ್ಳ; ಹಾಗೂ 'ಜಂಪಂಣನಾಯ್ಕರು'ಎಂದು ರುಜುಹಾಕಲಾದ ಪತ್ರದ ಆರಂಭದಲ್ಲಿ ಈ ಮುಂದಿನಂತೆ ವಿವರಗಳಿವೆ: 'ಮಲ್ಲೂರ್‍ರು-ಕೊಳಪಾಳ-ಕ್ಯಾದಿಗುಂಟೆ-ಕೆಂಚಂಮ್ಮನಹಳ್ಳಿ-ಪಿಳೇಹಳ್ಳಿ- ಮಹಾದೇವಪುರ-ಪರ್‍ರಿಶರಾಂಪುರ-ಗೌರ್‍ರಿಪುರ-ಯಿ ಗ್ರಾಮಗಳ ವಾಲ್ಮೀಕ ಕುಲಬಳಾಸ್ತಾರ್‍ರಿಗೆ ಬರಶಿ ಕಳುಹಿಸಿದ ನಿರ್‍ರೂಪ ಯೆನಂದರ್‍ರೆ-ತಮಡಿಹಳ್ಳಿ ದೊಡ್ಡಚಲ್ಲೂರ್‍ರು ಚಿಕ್ಕಚಲ್ಲೂರ್‍ರು ವೋಬನಹಳೀ ಒಳಗಸ್ತರಿಗೆ ಸಹಾ-' ಇತ್ಯಾದಿ. (ಈ ದಾಖಲೆಯ ಪ್ರತಿಮಾಡಿದವರು ಡಾ.ಬಿ.ರಾಜಶೇಖರಪ್ಪ; ನನಗೆ ಒದಗಿಸಿದವರು ಪಿ.ಆರ್.ವೀರಭದ್ರನಾಯಕ).

ಈ ನಿರೂಪದಲ್ಲಿ ವಿಷಯ ಏನಿದೆಯೊ ಸದ್ಯಕ್ಕೆ ತಿಳಿಯದು. ಆದರೆ ದೊಡ್ಡಮದಕರಿ ನಾಯಕರ ಸಂತತಿಯವರು ಚಳ್ಳಕೆರೆ ತಾಲ್ಲೂಕಿನ ಹಲವಾರು ಗ್ರಾಮಗಳ ವಾಲ್ಮೀಕಿ ಕುಲ-ಬಳಗಸ್ಥರೊಡನೆ ಸಂಪರ್ಕ ಇರಿಸಿಕೊಂಡಿದ್ದುದು, ಅವರಿಗೆ ಆದೇಶ/ಸೂಚನೆ ನೀಡುತ್ತಿದ್ದುದು ಇಲ್ಲಿ ಸ್ಪಷ್ಟಪಡುತ್ತದೆ. ಚಳ್ಳಕೆರೆ ತಾಲ್ಲೂಕಿನ ಸುಮಾರು ೫೦ ಹಳ್ಳಿಗಳ ವಾಲ್ಮೀಕಿ ಮತಸ್ಥರ ಮೇಲೆ ಇವರ 'ಯಜಮಾನಿಕೆ' ಇದ್ದಿತೆಂದು ತಿಳಿದುಬರುತ್ತದೆ. ಈ ಗ್ರಾಮಗಳ ವಾಲ್ಮೀಕಿಬಂಧುಗಳು ಈ ಸಂತತಿಯವರನ್ನು 'ರಾಜಮರ್ಯಾದೆ'ಯಿಂದ ನಡೆಸಿಕೊಳ್ಳುತ್ತಿದ್ದರಲ್ಲದೆ, ವರುಷಕ್ಕೊಮ್ಮೆ ಹಣ-ಕಾಳು-ಕಡ್ಡಿ-ದಿನಸಿ ಮುಂತಾದುವನ್ನು 'ವಾರ್ಷಿಕ ಕಪ್ಪ' ವಾಗಿ ಸಲ್ಲಿಸುತ್ತಿದ್ದರು. ಇವರ ಮನೆಗೇ ತಂದು ಒಪ್ಪಿಸುತ್ತಿದ್ದುದುಂಟು. ಈ ಕಾಣಿಕೆಯು ಮುಖ್ಯ ಹಬ್ಬ-ಹರಿದಿನ ಸಂದರ್ಭಗಳಲ್ಲೆಲ್ಲ ಇವರಿಗೆ ತಪ್ಪದೆ ಸಂದಾಯವಾಗು ತ್ತಿತ್ತು. ಈ ಹಿನ್ನೆಲೆಯಲ್ಲಿ, ಈ ವಾಲ್ಮೀಕಿ ಮತಸ್ಥರಿಗೆ ಈ ಸಂತತಿಯವರು 'ಕಟ್ಟೆಮನೆ ಗುರು'ಗಳಾಗಿಯೂ ಇದ್ದು, ನ್ಯಾಯಪಂಚಾಯಿತಿ ನಡೆಸುತ್ತಿದ್ದುದೂ ದೃಢಪಡುತ್ತದೆ.

ಮೇಲ್ಕಂಡ ವ್ಯಾಜ್ಯಕ್ಕೆ ಸಂಬಂಧಿಸಿದಂತೆ ಯಾವುದೇ ಸ್ವರೂಪದ ತೀರ್ಪು ಹೊರ ಬಿದ್ದಿದ್ದರೂ ಅಪರಾಧಿಯು ಅದನ್ನು ಒಪ್ಪಿಕೊಂಡಿರುವ ಸಾಧ್ಯತೆಯೇ ಹೆಚ್ಚು. ಪ್ರಸ್ತುತ ವ್ಯಾಜ್ಯದಲ್ಲಿ ಫಿರ್ಯಾದಿಗಳು ನಿಮ್ನವರ್ಗದವರು. ಅಂದರೆ ಅವರಿಗೂ ಈ ನಾಯಕದೊರೆಗಳೇ 'ಯಜಮಾನ'ರಾಗಿದ್ದಿರಬಹುದು; ಅಥವಾ ಮೈಸೂರು ಸಂಸ್ಥಾನದ ಸ್ಥಳೀಯ ಅಧಿಕೃತ 'ರಾಜಪ್ರತಿನಿಧಿ'ಯಾಗಿದ್ದು ಪಾಳೈಗಾರ್ ಕಾಟಪ್ಪನಾಯಕರು ಈ ವ್ಯಾಜ್ಯವನ್ನು ಆಲಿಸಿರಬಹುದು ಹಾಗೂ ಇದನ್ನು ಇತ್ಯರ್ಥಪಡಿಸಿರಬಹುದು. ಈ ಕುರಿತು ಅಧ್ಯಯನವಿನ್ನೂ ಮುಂದುವರೆಯಬೇಕಿದೆ.

* * *

ಚಿತ್ರದುರ್ಗ ನಾಯಕ ಅರಸರ ಈ ಮೇಲಿನ ನ್ಯಾಯಾಡಳಿತ ಸ್ವರೂಪ ಕುರಿತು ಇಲ್ಲಿ ಪರಾಮರ್ಶಿಸುವುದಾದರೆ, ವಿಜಯನಗರದ ನ್ಯಾಯನಿರ್ಣಯ ವಿಧಾನವೇ ಈ ಅರಸರ ಅವಧಿಯಲ್ಲೂ ಮುಂದುವರೆದುದು ಕಂಡುಬರುತ್ತದೆ. ಮುಖ್ಯ ನ್ಯಾಯಾಧೀಶನಾದ ಅರಸನು ಪ್ರಮುಖ ವ್ಯಾಜ್ಯಗಳ ನ್ಯಾಯತೀರ್ಮಾನ ಮಾಡುತ್ತಿದ್ದಂತೆಯೇ, ಆತನ

ಆದೇಶದೊಡನೆ ಇತರ ಅಧೀನ ಅಧಿಕಾರಿಗಳೂ ಕೆಲವು ವ್ಯಾಜ್ಯಗಳನ್ನು ಬಗೆಹರಿಸಿದ್ದು ದುಂಟು. ಸಾಮಾನ್ಯವಾಗಿ ದಳವಾಯಿಗಳು, ಪಾರುಪತ್ತೆಗಾರರು, ಸಾಮಾಜಿಕರು, ಕೈವಾಡ ದವರು/ಆಯಗಾರರು ಮೊದಲಾದವರು ಇಂಥಾ ನ್ಯಾಯವಿಚಾರಣೆಯ ಸಂದರ್ಭದಲ್ಲಿ ಉಪಸ್ಥಿತರಿರುತ್ತಿದ್ದರು. ರಾಜನ ಆಸ್ಥಾನದಲ್ಲಿ ಅಥವಾ ಮುಖ್ಯ ನ್ಯಾಯಾಲಯದಲ್ಲಿ, ಎಲ್ಲರ ಸಮ್ಮುಖದಲ್ಲಿ ರಾಜಧರ್ಮಕ್ಕನುಸಾರವಾಗಿ ಪ್ರಕರಣಗಳ ಬಹಿರಂಗ ವಿಚಾರಣೆ ನಡೆದು, ಸೂಕ್ತ ಸಾಕ್ಷ್ಯಾಧಾರ, ಹೇಳಿಕೆ ಇತ್ಯಾದಿಗಳನ್ನು ಪರಿಶೀಲಿಸಿ ಹಾಗೂ ಆಲಿಸಿ ತೀರ್ಪು ನೀಡುತ್ತಿದ್ದುದು ಸ್ಪಷ್ಟಪಡುತ್ತದೆ. ಆಯಾ ಮತ ಮತ್ತು ಸಂಪ್ರದಾಯಗಳಿಗೆ ಸಂಬಂಧಿಸಿದ ಕೆಲವು ವ್ಯಾಜ್ಯಗಳು ಮಾತ್ರ ಆಯಾ ಧರ್ಮಗುರುಗಳು ಹಾಗೂ ಹಿರಿಯರ ಸಮ್ಮುಖದಲ್ಲಿ ಇತ್ಯರ್ಥಗೊಂಡಿವೆ. ಧರ್ಮಗುರುಗಳ ನಿರ್ಣಯವನ್ನು ಅಂಗೀಕರಿಸದೆ ವಿರೋಧಿಸಿದವರ ಮೇಲ್ಮನವಿಯನ್ನು ರಾಜನು ಮರುವಿಚಾರಣೆಗೊಳಪಡಿಸಿದ ಅಥವಾ ಪರಿಶೀಲಿಸಿದ ಸಂದರ್ಭಗಳು ವಿರಳವೆಂದೇ ಹೇಳಬೇಕು. ಆದರೆ ಇದು ಸಹಾ ಅಪರೂಪಕ್ಕೊಂಬಂತೆ ಸಂಭವಿಸಿ, ರಾಜ ಮತ್ತು ಧರ್ಮಗುರುಗಳ ಮಧ್ಯೆ ಹೊಸವಿವಾದವನ್ನು ಹುಟ್ಟುಹಾಕಿದು ದುಂಟು. ಇಷ್ಟಾದರೂ ಯಾವುದೇ ಅಪರಾಧ ಪ್ರಕರಣದಲ್ಲಿಯೂ ಈ ಅರಸರು ನಿಷ್ಪಕ್ಷಪಾತವಾಗಿ ನ್ಯಾಯನಿರ್ಣಯ ಮಾಡಿರುವುದು ಕಂಡುಬರುತ್ತದೆ. ವ್ಯಾಜ್ಯಗಳ ವಿಚಾರಣೆಯಲ್ಲಿ ನ್ಯಾಯಪಂಚಾಯಿತಿಯು ಮಾತಿನ ಸಾಕ್ಷ್ಯವನ್ನಷ್ಟೆ ಪರಿಗಣಿಸದೆ, ಅಗತ್ಯ ದಾಖಲೆಗಳನ್ನು ಪರಿಶೀಲಿಸಿ ನ್ಯಾಯತೀರ್ಮಾನ ಮಾಡಿದುದು ಸ್ಪಷ್ಟಪಡುತ್ತದೆ.

ನೇರ ಅಥವಾ ಬಹಿರಂಗ ನ್ಯಾಯವಿಚಾರಣೆ ಪ್ರಕ್ರಿಯೆಯ ಆಚೆ, ದಿವ್ಯಪ್ರಮಾಣದ (Trial by ordeal) ಮೂಲಕವೂ ನ್ಯಾಯತೀರ್ಮಾನಗೊಂಡುದು ವಾಸ್ತವ. ದೈವಸಾಕ್ಷಿಯನ್ನು ಗಂಭೀರವಾಗಿ ಪರಿಗಣಿಸುವ ಪರಿಸ್ಥಿತಿ ಆಗ ಹೆಚ್ಚು ಪ್ರಚಲಿತವಿದ್ದು, ರಾಜರೂ ನ್ಯಾಯಪಂಚಾಯಿತಿಗಳೂ ಅದನ್ನು ಮೀರುವಂತಿರಲಿಲ್ಲವೆಂಬುದು ಗಮನಿಸಬೇಕಾದ ಅಂಶ. ದೈವಸಿದ್ಧಾಂತದಲ್ಲಿ ಆಳ ನಂಬಿಕೆಯನ್ನಿರಿಸಿ, ಅದರ ಎಲ್ಲ ಪ್ರತೀಕಗಳನ್ನು ಹಾಗೂ ವಿಶ್ವಾಸಿಗಳನ್ನು ಗೌರವಿಸುವ ಪರಂಪರೆಯನ್ನು ಈ ಅರಸರು ಶ್ರದ್ಧೆಯಿಂದ ಅನುಸರಿಸಿದುದು ಇಲ್ಲಿ ದೃಢಪಡುತ್ತದೆ. ದಿವ್ಯಪ್ರಮಾಣಕ್ಕೆ ಬದ್ಧವಾದ ಸಂದರ್ಭಗಳಲ್ಲಿ ಆಗೆಲ್ಲ ರೂಢಿಯಲ್ಲಿದ್ದ ಕಠಿಣತರ ಪರೀಕ್ಷೆಗಳನ್ನೆ ನ್ಯಾಯಾಕಾಂಕ್ಷಿಗಳಿಗೆ ಒಡ್ಡಲಾಗುತ್ತಿತ್ತು. ಇಂಥಾ ದಿವ್ಯಪ್ರಮಾಣದ ಮೂಲಕ 'ಗೆದ್ದವರ' ವಿರುದ್ಧ ಮೇಲ್ಮನವಿ ಸಲ್ಲಿಸುವ ಎದೆಗಾರಿಕೆ ಆಗ ಯಾರಿಗೂ ಇರಲಿಕ್ಕಿಲ್ಲ! ಹೀಗಿದ್ದರೂ ತಪ್ಪಿತಸ್ಥರಿಗೆ ದಂಡ ವಿಧಿಸುವಾಗ ಆಯಾ ಅಪರಾಧ/ವ್ಯಾಜ್ಯದ ಸ್ವರೂಪವನ್ನೂ ಗಮನಿಸಲಾಗುತ್ತಿತ್ತೆನ್ನ ಬಹುದು. ಹಣದ ರೂಪದಲ್ಲಿ ದಂಡವನ್ನು ವಸೂಲು ಮಾಡುತ್ತಿದ್ದಂತೆಯೇ ಗಡಿಪಾರು, ವಾಗ್ದಂಡನೆ ಮುಂತಾದ ಶಿಕ್ಷೆಗಳನ್ನೂ ವಿಧಿಸುತ್ತಿದ್ದರು. ರಾಜೀಸೂತ್ರವನ್ನೂ ಅನುಸರಿಸಿ ವ್ಯಾಜ್ಯವನ್ನು ಬಗೆಹರಿಸಲಾಗುತ್ತಿತ್ತು.

ಈ ಮೇಲಿನ ವ್ಯಾಜ್ಯ/ಅಪರಾಧ/ವಿವಾದಗಳ ಪೈಕಿ ಹುಲ್ಲೂರು ವೀರಭದ್ರದೇವರಗುಡಿಯ ಆಸ್ತಿಯನ್ನು ಅನ್ಯರಿಗೆ ವಿಕ್ರಯಿಸಿದ ಅಪರಾಧವೆಸಗಿದ ಆ ದೇವಾಲಯದ ತಮ್ಮಡಿ ಉದ್ದಂಡನಿಗೆ ಹಣದ ರೂಪದಲ್ಲಿ ದಂಡವಿಧಿಸಿದ ಪ್ರಸಂಗ ನಡೆದುದು ಇಮ್ಮಡಿ ಮದಕರಿನಾಯಕನ ಕಾಲದಲ್ಲಿ. ನ್ಯಾಯಪಂಚಾಯಿತಿಯ ಮೂಲಕ ಆತನ ಅಪರಾಧ ಸಾಬೀತುಗೊಂಡಿದ್ದರಿಂದ, ಸರ್ಕಾರದ ತೀರ್ಪನ್ನು ಶಾಸನದ ಮೂಲಕ ಸಾರ್ವಜನಿಕಗೊಳಿಸಿ ಇತರರಿಗೆ ಎಚ್ಚರಿಕೆ ನೀಡಿದುದು ಚಿತ್ರದುರ್ಗ ಚರಿತ್ರೆಯ ಮಟ್ಟಿಗೆ ವಿರಳ ಉದಾಹರಣೆಯೆನ್ನಬಹುದು. ಮುಮ್ಮಡಿ ಮದಕರಿನಾಯಕನ ಅವಧಿಯಲ್ಲಿ ನಡೆದ ಕುರೇಬೈಲುರೊಪ್ಪಸ್ಥಳದ ವ್ಯಾಜ್ಯವು ತೀರಾ ಸಂಕೀರ್ಣವಾದುದೆನ್ನಬೇಕು. ಇದನ್ನು ನ್ಯಾಯ ಪಂಚಾಯಿತಿಯ ಮೂಲಕ ಸೂಕ್ತವಾಗಿ ಬಗೆಹರಿಸಿದರೂ ಈ ವ್ಯಾಜ್ಯದ ಪರಿಣಾಮವಾಗಿ ಆ ನಂತರ ದುರ್ಗದ ಚರಿತ್ರೆಯಲ್ಲಿ ರಾಜಕೀಯವಾಗಿ ವಿಷಮ ಪರಿಸ್ಥಿತಿ ಉಂಟಾದುದನ್ನು ಇಲ್ಲಿ ಗುರುತಿಸಬಹುದು. ಈ ವ್ಯಾಜ್ಯದ ತರುವಾಯ ದುರ್ಗದಲ್ಲಿ ಏರ್ಪಟ್ಟ ರಕ್ತ ಚೆಲ್ಲಾಟದ ಆಳ್ವಿಕೆ ಅಥವಾ ಭಯಪ್ರೇರಿತ/ಹಿಂಸಾತ್ಮಕ ಆಳ್ವಿಕೆಗೆ (Reign of Terror) ನಾಂದಿಹಾಡಿದುದು ಇದೇ ವ್ಯಾಜ್ಯವಿದ್ದಿರಬೇಕೆಂದು ಭಾವಿಸಬಹುದು.

ಬಿಚ್ಚುಗತ್ತಿ ಭರಮಣ್ಣನಾಯಕನ ಅವಧಿಯ ಮೂರು ವ್ಯಾಜ್ಯಗಳಲ್ಲಿ ಉಂಬಳಿ ಗ್ರಾಮವೊಂದರ ಒಡೆತನದ ವ್ಯಾಜ್ಯವು, ತಪ್ಪಿತಸ್ಥನು ರಾಜನಿಗೇ ನೇರವಾಗಿ ಮೇಲ್ಮನವಿ ಸಲ್ಲಿಸಲು ಪ್ರಯತ್ನಿಸಿದಾಗ ನಾಯಕನು ಆತನಿಗೆ ಎಚ್ಚರಿಕೆ ನೀಡಿದುದನ್ನು ದಾಖಲಿಸಿದೆ. ದಾವಣಗೆರೆಗ್ರಾಮದ ಗೌಡಿಕೆಹಕ್ಕಿನ ವ್ಯಾಜ್ಯವೂ ವಿಶಿಷ್ಟಬಗೆಯದಾಗಿದ್ದು, ದಿವ್ಯಪ್ರಮಾಣದ ಮೂಲಕ ಇದನ್ನು ಬಗೆಹರಿಸಲಾಗಿದೆ. ಈ ಸಂಬಂಧದಲ್ಲಿ ಗೆದ್ದವರಿಗೆ ಜಯರೇಖೆ/ ಜಯಪತ್ರವನ್ನೂ ನೀಡಲಾಗಿದೆ. ಸಮಕಾಲೀನ ನ್ಯಾಯತೀರ್ಮಾನ ಪದ್ಧತಿಯನ್ನರಿಯಲು ಇದೊಂದು ಉಪಯುಕ್ತ ದಾಖಲೆ. ಸಾಂಸ್ಕೃತಿಕ ಮಹತ್ವವುಳ್ಳ ಅಪರೂಪದ ಪ್ರಕರಣವೆಂದರೆ ಏಕನಾಥಮ್ಮನ ಬಂಡಿಸಿಡಿ ಆಡುವವರಿಗೆ ಕೊಂಡಿಚುಚ್ಚುವ ಹಕ್ಕಿನ ವ್ಯಾಜ್ಯ. ಸಮಕಾಲೀನ ಉತ್ಸವ, ಆಚರಣೆ, ನಂಬಿಕೆ, ವಿಧಿ-ವಿಧಾನ ಇತ್ಯಾದಿ ಕುರಿತು ಇದು ಒದಗಿಸುವ ಮಾಹಿತಿ ಅಮೂಲ್ಯವಾದುದು. ಬಹುಜನರು ನಡೆದುಕೊಳ್ಳುವ ಗ್ರಾಮೀಣದೈವಗಳನ್ನು ಎರಡು ಸಮೂಹಗಳಾಗಿ ವಿಂಗಡಿಸಿ, ಆಯಾ ಪದ್ಧತಿಯವರಿಂದ ಆರಾಧನೆಗೆ ಅವಕಾಶ ಕಲ್ಪಿಸಿಕೊಟ್ಟ ದುರ್ಗದರಸನ ನಿರ್ಣಯವನ್ನೂ ಅನೂಚಾನವಾಗಿ ಬಂದ ಪದ್ಧತಿಯಂತೆ ಈ ದೇವತೆಗಳಿಗೆ ಅರಮನೆಯಿಂದ ಸಲ್ಲಬೇಕಿದ್ದ ಗೌರವವನ್ನೂ ಇದು ದಾಖಲಿಸಿಕೊಂಡಿದೆ.

ಹಿರೇಮದಕರಿನಾಯಕನ ಅವಧಿಯ ಆರು ಪ್ರಕರಣಗಳಲ್ಲಿ, ಚಿತ್ರದುರ್ಗ ಚರಿತ್ರೆಯಲ್ಲಿ ಪ್ರಮುಖ ಸ್ಥಾನ ಪಡೆದಿರುವ ವಿರೂಪಾಕ್ಷಜೋಯಿಸರ ಸ್ವಾಸ್ತಿಗ್ರಾಮಗಳ ಹಕ್ಕಿಗೆ ಸಂಬಂಧಿಸಿದಂತೆ ಅವರ ಪೀಳಿಗೆಯವರಲ್ಲಿ ಉಂಟಾದ ವ್ಯಾಜ್ಯವೂ ಒಂದು. ಇದನ್ನು ಬಗೆಹರಿಸಿದವರು ಶ್ರೀಮನೃಸಿಂಹಭಾರತೀಸ್ವಾಮಿಗಳವರು; ಶ್ರೀಕೂಡಲೀ ಶೃಂಗೇರಿ ಸಂಸ್ಥಾನದ ಗುರುಪರಂಪರೆಯಲ್ಲಿ ಎಂಟನೆಯವರು. ಬ್ರಾಹ್ಮಣರಲ್ಲಿ ತಲೆದೋರಿದ ವ್ಯಾಜ್ಯವು ಅವರ

ಧರ್ಮಗುರುಗಳ ಸಮ್ಮುಖದಲ್ಲೆ ತೀರ್ಮಾನಗೊಳ್ಳುವಂಥಾ ಹಿಂದಿನಿಂದಲೂ ನಡೆದುಬಂದ ಪದ್ಧತಿಯನ್ನೆ ಇದು ಸಮರ್ಥಿಸುತ್ತದೆ. ವಿರೂಪಾಕ್ಷಜೋಯಿಸರು ಮತ್ತು ಅವರ ಪೀಳಿಗೆಯವರ ಇತಿವೃತ್ತವನ್ನು ಗುರುತಿಸಬಹುದಾದ ಪ್ರಕರಣವಿದು. ಕೋಗುಂಡೆ (ಕೊಂಗುಂಟೆ) ವೇಶ್ಯೆ ಕುರಿತ ವಿವಾದದಲ್ಲಿ ಚಿತ್ರದುರ್ಗ ಮುರಿಗಾಮಠದ ೧೨ನೇ ಅಧ್ಯಕ್ಷರಾದ ಗುರುಪಾದದೇಶಿಕರು ಮತ್ತು ಹಿರೇಮದಕರಿನಾಯಕ- ಈ ಈರ್ವರೇ ವಾದಿ-ಪ್ರತಿವಾದಿಗಳಾಗಿ ಮಾರ್ಪಟ್ಟುದು ಸ್ವಾರಸ್ಯಕರವಾದುದು. ರಾಜ್ಯದ ಮುಖ್ಯನ್ಯಾಯಾಧೀಶನಾದ ರಾಜನೇ ಈ ವಿವಾದದಲ್ಲಿ ಒಂದು ಪಕ್ಷವಾಗಿ ಪರಿಗಣಿತನಾಗಿದ್ದಾನೆ. ಈ ವಿವಾದದಲ್ಲಿ ಅಂತಿಮವಾಗಿ ಯಾವ ತೀರ್ಮಾನವನ್ನು ಕೈಗೊಳ್ಳಲಾಯಿತೊ ಸ್ಪಷ್ಟವಿಲ್ಲ. ನಾಯಕನ ಮಾತಿನ ಪ್ರಹಾರದಿಂದ ಮುನಿಸಿಕೊಂಡ ಗುರುಪಾದದೇಶಿಕರು ತಮ್ಮ ಮಠವನ್ನು ತೊರೆದು ಹೋದುದರಿಂದ ಇದೊಂದು ಬಗೆಹರಿಯದ ವಿವಾದವಾಗಿಯೇ ಉಳಿದುಕೊಂಡಿದ್ದಿರಬಹುದು. ಅರಮನೆ-ಗುರುಮನೆಗಳ ನಡುವೆ ವಿರಸ ಮೂಡಲು ಈ ಪ್ರಕರಣ ಕಾರಣವೆನಿಸಿದುದು ಒಂದೆಡೆಯಾದರೆ, ಇನ್ನೊಂದೆಡೆ ಇದರಿಂದ ದೊರೆ ಮತ್ತು ಸ್ವಾಮಿಗಳ ವ್ಯಕ್ತಿತ್ವಗಳಿಗೂ ಧಕ್ಕೆ ತಗುಲಿದುದನ್ನು ಮರೆಮಾಚುವಂತಿಲ್ಲ. ಇಂಥಾ ಪ್ರಕರಣಗಳನ್ನು ತಾತ್ವಿಕನೆಲೆಯಲ್ಲಿ ಮರುವಿಶ್ಲೇಷಿಸುವ ಅಗತ್ಯ ತೋರುತ್ತದೆ.

ಹಿರೇಮದಕರಿನಾಯಕನ ಕಾಲದಲ್ಲಿ ಉಂಟಾದ ಇತರ ವ್ಯಾಜ್ಯಗಳಲ್ಲಿ, ಗೋಪಗೊಂಡನ ಹಳ್ಳಿ ಗೌಡಿಕೆಹಕ್ಕಿನ ವ್ಯಾಜ್ಯವನ್ನು ಇತ್ಯರ್ಥಪಡಿಸುವಲ್ಲಿ ಹಳೆಯ ಕಡತಗಳನ್ನು ಪರಾಮರ್ಶಿಸುವುದೊಂದು ಪ್ರಮುಖ ಅಂಶ. ಈ ವ್ಯಾಜ್ಯವು ಮೂಲದಲ್ಲಿ ಚಿತ್ರದುರ್ಗ ಚರಿತ್ರೆಯನ್ನು ರಚಿಸಿಕೊಟ್ಟಿರುವ 'ಚಿನ್ನದಮನೆ'ಯವರ ಬಗೆಗೆ ಸುಳಿವು ಕೊಡುವಂಥಾದ್ದು. ಅರಮನೆ/ಚಾವಡಿಯ ಅಧಿಕೃತ ದಾಖಲೆಗಳನ್ನು ಇನ್ನಿತರ ಪೂರಕ ಮಾಹಿತಿ ಸಹಿತ ಬಳಸಿಕೊಳ್ಳುವುದರೊಡನೆ ನಾಯಕ ಅರಸರ ವಿಸ್ತಾರವಾದ 'ವಂಶಾವಳಿ'ಯನ್ನು ಬರೆದಿಟ್ಟವರು ಈ ಚಿನ್ನದಮನೆಯವರೆಂಬುದು ಇಲ್ಲಿ ಸ್ಪಷ್ಟಪಡುವ ಅಂಶ. ಹಿರಿಯೂರು ಮತ್ತು ಬೊಬ್ಬೂರುಗಳ ಕಮ್ಮಾರಿಕೆಯ ಹಕ್ಕಿನ ವ್ಯಾಜ್ಯವನ್ನು 'ಮುದ್ದೆತುಪ್ಪದಪ್ರಮಾಣ'ವೆಂಬ ದಿವ್ಯದ ಮೂಲಕ ಬಗೆಹರಿಸಲಾಗಿದ್ದರೆ, ನಂದಿಹಳ್ಳಿ ರಂಗನಾಥಸ್ವಾಮಿ ಪೂಜಾರಿಕೆ ಹಕ್ಕಿನ ವ್ಯಾಜ್ಯವನ್ನು 'ದಿಪ್ಪಿದೀವಿಗೆದಿವ್ಯ'ದ ಮೂಲಕ ಬಗೆಹರಿಸಲಾಗಿದೆ. ಈ ದಿವ್ಯಗಳ ಸ್ವರೂಪವನ್ನಾಗಲಿ, ನ್ಯಾಯವಿಚಾರಣೆ ಸಂದರ್ಭದಲ್ಲಿಯ ಇವುಗಳ ವಿಶ್ವಾಸಾರ್ಹತೆಯನ್ನಾಗಲಿ ವಿಮರ್ಶಿಸುವುದು ಸುಲಭವಲ್ಲ. ಇತರೆಡೆಗಳಲ್ಲೂ ಈ ದಿವ್ಯಗಳನ್ನು ಹೋಲುವ ಪರೀಕ್ಷೆಗಳ ಪ್ರಸ್ತಾಪ ಕಂಡುಬರುವುದರಿಂದ ನಿಜಕ್ಕೂ ಈ ದಿವ್ಯಗಳನ್ನು ನ್ಯಾಯತೀರ್ಮಾನ ಸಂದರ್ಭಗಳಲ್ಲಿ ಅತ್ಯಂತ ಶ್ರದ್ಧೆಯಿಂದ ಆಚರಿಸುತ್ತಿದ್ದಿರಬೇಕು. ಹಾರೋಬೇತೂರು ಗ್ರಾಮದ ಶಾನುಬೋಗತನದ ಹಕ್ಕಿನ ವ್ಯಾಜ್ಯವು ಸಾಮಾನ್ಯವಾದುದಾದರೂ ಈ ಪ್ರಕರಣದಲ್ಲಿ ಈರ್ವರು ವ್ಯಾಜ್ಯಗಾರರೂ ಅರಮನೆಗೆ ದಂಡ ಕಟ್ಟುವಂತಾದುದು ಮಾತ್ರ ಕುತೂಹಲಕಾರಿಯಾಗಿದೆ. ಇದಕ್ಕೆ ಕಾರಣವಾದರೂ ಈ ಗ್ರಾಮದ ಶಾನುಬೋಗತನದ

ಪಕ್ಕಿಗೆ ಎರಡು ಪಕ್ಷಗಳವರೂ ಬಾಧ್ಯಸ್ಥರೆಂದು ೧೨ ಮಂದಿ ಕೈವಾಡದವರು ಸಾಕ್ಷಿ ಹೇಳಿದುದು.

ಈಗಾಗಲೇ ತಿಳಿದಿರುವಂತೆ, ಚಿತ್ರದುರ್ಗ ನಾಯಕ ಅರಸರು ಬೇಡಸಮುದಾಯದವರು; ಈಗಿನ ಮಟ್ಟಿಗೆ ಪರಿಶಿಷ್ಟಪಂಗಡದವರು. ಆದರೆ ರಾಜ್ಯಾಡಳಿತದ ನೆಲೆಯಲ್ಲಿ, ಅವರು ಕ್ಷತ್ರಿಯರಂತೆ ವರ್ತಿಸಬೇಕಾದುದು ಸಹಜ. ತಮ್ಮ ನ್ಯಾಯಾಡಳಿತದಲ್ಲಿ ಅವರು ಎಲ್ಲ ಜಾತಿವರ್ಗಗಳವರೊಡನೆ ಪರಿಶಿಷ್ಟಜಾತಿ-ಪಂಗಡಗಳವರನ್ನೂ ಎಂದಿನ ನೀತಿ-ನಿಬಂಧನೆಗಳಿಗನುಸಾರವಾಗಿಯೇ ವಿಚಾರಣೆ ನಡೆಸಿದ್ದಾರೆ. ಇಲ್ಲಿ ಕಂಡುಬರುವ ವ್ಯಾಜ್ಯಗಳು ವೀರಶೈವ, ಬೇಡ, ಕುರುಬ, ಗೊಲ್ಲ, ಕಮ್ಮಾರ-ಇನ್ನೂ ಒಂದೆರಡು ಇತರ ಹಿಂದುಳಿದ ಜಾತಿಗಳಿಗೆ ಸಂಬಂಧಿಸಿದವು. ಅಸ್ಪೃಶ್ಯಜಾತಿ-ಪಂಗಡಗಳವರಿಗೆ ಪ್ರತ್ಯೇಕ ನ್ಯಾಯವಿಚಾರಣಾ ವ್ಯವಸ್ಥೆಯಿದ್ದಂತೆ ತೋರುವುದಿಲ್ಲ. ಆದರೆ ಅವರದೇ ಪ್ರತ್ಯೇಕ ಕಟ್ಟೆಮನೆಗಳಿಗೆ ಇಂಥಾ ಜವಾಬ್ದಾರಿ ವಹಿಸಲಾಗಿದ್ದಿತೆಂಬುದು ಸ್ಪಷ್ಟ. ಬೇಡರ ಕಟ್ಟೆಮನೆಗಳು ಇಂಥಾ ಕಾರ್ಯವನ್ನು ನಿರ್ವಹಿಸುತ್ತಿದ್ದುದು ಹಾಗೂ ಚಲವಾದಿ (ಹೊಲೆಯ) ಸಮುದಾಯದವರು ಪ್ರತ್ಯೇಕ ಕಟ್ಟೆಮನೆಯನ್ನು ಸ್ಥಾಪಿಸಿಕೊಂಡಿದ್ದುದು ಚರಿತ್ರೆಯಲ್ಲಿ ಕಂಡುಬರುತ್ತದೆ. ಚಿತ್ರದುರ್ಗ ಬೆಟ್ಟದ ಇಂದಿನ ತುಂಗಭದ್ರೇಶ್ವರ ದೇವಾಲಯವು ಹಿಂದೆ ಶ್ರೀ ಲಕ್ಷ್ಮೀನರಸಿಂಹಸ್ವಾಮಿಯ ನೆಲೆಯಾಗಿದ್ದು, ಇದರ ಎಡಬದಿಯಲ್ಲಿ ಬೃಹತ್ ಕಲ್ಲಾಸರೆಯಲ್ಲಿರುವ ಹಾಗೂ ಇಂದಿಗೂ ಸುಸ್ಥಿತಿಯಲ್ಲಿ ಉಳಿದುಕೊಂಡಿರುವ ಕಟ್ಟೆ ಅಥವಾ ಎತ್ತರದ ಜಗಲಿಯು ಚಲವಾದಿಗಳು ತಮ್ಮ ಜಾತಿವ್ಯಾಜ್ಯಗಳನ್ನು ನ್ಯಾಯತೀರ್ಮಾನ ಮಾಡುವ ಎಡೆಯಾಗಿದ್ದಿತೆಂದು ತಿಳಿದುಬರುತ್ತದೆ. ಇದನ್ನು ಯಜಮಾನನಕಟ್ಟೆ/ಪಂಚಾಯಿತಿಕಟ್ಟೆಯೆಂತಲೂ ಉಗ್ರಾಣದಕಟ್ಟೆಯೆಂತಲೂ ಕರೆಯಲಾಗುತ್ತಿತ್ತು. ಅಂದರೆ ಚಲವಾದಿ ಜನಾಂಗದವರ ಹಳೆಯ ಕಟ್ಟೆಮನೆಯು ಚಿತ್ರದುರ್ಗ ಕೋಟೆಯಲ್ಲಿಯೇ ಇದ್ದಿತು. ಇಂದಿನ ಪರಿಸ್ಥಿತಿಯಲ್ಲಿಯೂ ಇಂಥಾ ಕಟ್ಟೆಮನೆಗಳು ಅಲ್ಲಲ್ಲಿ ಉಳಿದುಬಂದಿರುವುದು ಇದಕ್ಕೆ ಸಾಕ್ಷಿಯಾಗುತ್ತದೆ. ಮಾದಿಗ ಸಮುದಾಯವರಿಗೆ ಸಂಬಂಧಿಸಿದಂತೆಯೂ ಕೆಲವು ಉದಾಹರಣೆಗಳು ದೊರೆಯುತ್ತವೆ. ಮಾದಾರಿಕೆ ಅಥವಾ ಮಾದಿಗತನ (ಮಾದಿಗವೃತ್ತಿ)ಕ್ಕೆ ಸಂಬಂಧಿಸಿದಂತೆ ನ್ಯಾಯತೀರ್ಮಾನಗೊಂಡ ಸಂದರ್ಭವೊಂದು ತಾಮ್ರಪತ್ರಗಳಲ್ಲಿ ದಾಖಲುಗೊಂಡಿದೆ.* ಇದು ನಾಯಕರ ಆಳ್ವಿಕೆಗೆ ಸಂಬಂಧಿಸಿದುದೇನಲ್ಲ. ಆದರೆ ಬೇಗಾರ ಪೂಜಾರಿಗೆ ಆದ ಅಪಮಾನಕ್ಕೆ ಸಂಬಂಧಿಸಿದ ವ್ಯಾಜ್ಯ ಕುರಿತು ಸಾಕ್ಷಿಗಳ ಹೇಳಿಕೆಗಳನ್ನು ಚಿತ್ರದುರ್ಗ ನಾಯಕ ವಂಶಸ್ಥರು ಆಲಿಸಿದುದು ಇಂಥಾ ಇನ್ನೊಂದು ಉದಾಹರಣೆಯೆನ್ನಬಹುದು.

ಮೇಲೆಯೇ ನೋಡಿದಂತೆ, ನ್ಯಾಯಪಂಚಾಯಿತಿಯ ಎದುರಿನಲ್ಲಿ ಹಾಗೂ ಕೆಲವೊಮ್ಮೆ ಅರಸನ ಸಮ್ಮುಖದಲ್ಲಿ ವ್ಯಾಜ್ಯಗಳು ಇತ್ಯರ್ಥಗೊಳ್ಳುತ್ತಿದ್ದು, ಅಲ್ಲಿ ಘೋಷಿಸಲಾಗುತ್ತಿದ್ದ

---

* ವಿವರಗಳಿಗೆ, ಇದೇ ಸಂಪುಟದಲ್ಲಿ ಪ್ರಕಟಗೊಂಡಿರುವ ‘ಮದ್ದಿಹಳ್ಳಿ ಮಾದಿಗತನದ ಕಾಣಾಚಿವ್ಯಾಜ್ಯ ಕುರಿತ ಜೋಡಿ ತಾಮ್ರಪತ್ರಗಳು’ ಎಂಬ ನನ್ನ ಲೇಖನವನ್ನು ನೋಡಬಹುದು.

ತೀರ್ಪನ್ನು ವ್ಯಾಜ್ಯಗಾರರು ಒಪ್ಪಿಕೊಳ್ಳಲೇಬೇಕಾಗಿತ್ತು. ಮುಖ್ಯವಾಗಿ, ಇಂಥಾ ತೀರ್ಪು ವ್ಯಾಜ್ಯಗಾರರು ಎಲ್ಲರ ಎದುರಿನಲ್ಲಿ ಪರಸ್ಪರ ಮಂಡಿಸುತ್ತಿದ್ದ ವಾದಗಳ ಸ್ವರೂಪವನ್ನೂ ಆಧರಿಸಿರಬಹುದಿತ್ತು. ತೀರ್ಪು ನ್ಯಾಯೋಚಿತವೆನಿಸಿದ್ದರೂ ಕೆಲವೊಮ್ಮೆ ವಾದಮಂಡನೆಯ ವೈಖರಿಯನ್ನೂ ವಾದಿ ಅಥವಾ ಪ್ರತಿವಾದಿಯ ಜಾಣ್ಮೆಯನ್ನೂ ಅನುಸರಿಸಿದ್ದಿತೆಂಬುದನ್ನು ನಿರಾಕರಿಸಲಾಗುವುದಿಲ್ಲ. ಆಗೆಲ್ಲ ನ್ಯಾಯವಿಚಾರಣಾ ವಿಧಾನದಲ್ಲಿ ವ್ಯಾಜ್ಯಗಾರರ ಪರ ಮತ್ತು ವಿರೋಧವಾಗಿ ವಾದ-ಪ್ರತಿವಾದಗಳನ್ನು ಮಂಡಿಸಲು, ಇಂದಿನ ನ್ಯಾಯಾಂಗವ್ಯವಸ್ಥೆ ಹೊಂದಿರುವ ವೃತ್ತಿನಿರತ 'ನ್ಯಾಯವಾದಿ' ಅಥವಾ 'ವಕೀಲ (Advocate/Lawyer) ರಂಥವರು ಕಾರ್ಯನಿರ್ವಹಿಸುತ್ತಿದ್ದರೆನ್ನಲು ಸೂಚನೆಗಳಿಲ್ಲ. ಇಂಥಾ ಒಂದು ಪದ್ಧತಿಯ ಕಲ್ಪನೆಯೂ ಆಗ ಇದ್ದಿರಲಾರದು. ಚಿತ್ರದುರ್ಗ ಚರಿತ್ರೆಗೆ ಸಂಬಂಧಿಸಿದ 'ಚಿತ್ರದುರ್ಗದ ಬಖೈರು' ಮತ್ತು 'ವಂಶಾವಳಿ'ಗಳಲ್ಲಿ ವಕೀಲರ ಪ್ರಸ್ತಾಪ ಮೇಲಿಂದ ಮೇಲೆ ಬರುತ್ತದೆ. ಆದರೆ ಈ ವಕೀಲರು ಈಗಿನ ನ್ಯಾಯವಾದಿಗಳಂತಿರದೆ ರಾಯಭಾರಿಗಳಾಗಿರುತ್ತಿದ್ದುದು ವಿಶೇಷ. ಈ ವಕೀಲರು ತಮ್ಮ ಸಂಸ್ಥಾನದ ಪರವಾಗಿ ರಾಯಭಾರಿಗಳಂತೆ ವ್ಯವಹರಿಸುತ್ತಿದ್ದರು.

ಚಿತ್ರದುರ್ಗದ ಕೊನೆಯ ಅರಸ ರಾಜಾ ವೀರಮದಕರಿನಾಯಕ ಮತ್ತು ಶ್ರೀರಂಗಪಟ್ಟಣದ ಹೈದರ್‌ಅಲಿಖಾನರ ನಡುವೆ ನಡೆದ ಅಂತಿಮ ಯುದ್ಧಸಂದರ್ಭದಲ್ಲಿ, ಈ ಈರ್ವರು ಸಂಸ್ಥಾನಿಕರೂ ಒಪ್ಪಂದದ ಪ್ರಯತ್ನವಾಗಿ ತಮ್ಮ ತಮ್ಮ ವಕೀಲರುಗಳನ್ನು ರಾಯಭಾರಿಗಳಾಗಿ ಕಳುಹಿಸಿದ್ದರು. ಆಗ ಚಿತ್ರದುರ್ಗ ಆಸ್ಥಾನದಲ್ಲಿದ್ದ ವಕೀಲರುಗಳೆಂದರೆ, ಕಡಪಾ ಶಿವರಾಮಪಂತ್, ಲಕ್ಷ್ಮಣರಾವ್, ಪುರುಷೋತ್ತಮ ಪಂತ್, ಬಾಳಾಜಿ ತಮ್ಮಾಜಿ, ರಂಗೋ ತಮ್ಮಾಜಿ ಮತ್ತು ಸಾರ್ವಭೌಮರಾವ್, ಮೈಲಾರಪಂತ್ (ಚಂದ್ರಗಿರಿ ಭೀಮಾಜಿ ಪಂತನ ಅಳಿಯ). ಇವರೆಲ್ಲರೂ ಕೆಳದುರ್ಗದಲ್ಲೆ ನೆಲೆಸಿದ್ದಂತೆ ತೋರುತ್ತದೆ. ವೀರಮದಕರಿನಾಯಕನ ಪರವಾಗಿ ಹೈದರ್‌ಅಲಿ ಬಳಿಗೆ ತೆರಳಿದ್ದ ವಕೀಲರುಗಳೆಂದರೆ ಲಕ್ಷ್ಮಣರಾವ್ ಮತ್ತು ಸಾರ್ವಭೌಮರಾವ್. ಹಾಗೆಯೇ, ಹೈದರ್‌ಅಲಿಯ ಕಡೆಯಿಂದ ದುರ್ಗದ ಆಸ್ಥಾನಕ್ಕೆ ಬಂದಿದ್ದ ವಕೀಲರುಗಳೆಂದರೆ ಮಾನವಿ ಶ್ರೀನಿವಾಸರಾವ್ ಮತ್ತು ಕಡಪೆ ಸುಬ್ಬರಾವ್. ಸಾಮಾನ್ಯವಾಗಿ ಈ ವಕೀಲರು ಬ್ರಾಹ್ಮಣವರ್ಗದವರಾಗಿದ್ದು, ಧರ್ಮಶಾಸ್ತ್ರ, ನ್ಯಾಯಶಾಸ್ತ್ರ, ಇತಿಹಾಸ ಮೊದಲಾದವನ್ನು ಆಳವಾಗಿ ಗ್ರಹಿಸಿದವರಾಗಿರುತ್ತಿದ್ದರು. ಉತ್ತಮ ವಾಕ್ಪಟು ('ಮಾತುಬಲ್ಲ ಜನ')ಗಳಾಗಿರುತ್ತಿದ್ದರು. ವರ್ತಮಾನದ ರಾಜಕೀಯ ಆಗುಹೋಗುಗಳ ಬಗೆಗೆ ಅವರಿಗೆ ಅಗಾಧ ತಿಳಿವಳಿಕೆಯಿದ್ದಿತು. ಸ್ಥಳೀಯ ಸಮುದಾಯ, ಸಂಸ್ಕೃತಿ, ಜನಜೀವನ, ನೈಸರ್ಗಿಕ ಸಂಪನ್ಮೂಲ, ಐತಿಹ್ಯ ಇತ್ಯಾದಿಗಳ ಸ್ಪಷ್ಟ ಅರಿವು ಹೊಂದಿದ್ದರು. ಈ ಹಿನ್ನೆಲೆಯಲ್ಲಿ, ಇವರು ರಾಜರು ಮತ್ತು ಅವರ ಅಧಿಕಾರಿಗಳ ಬಳಿ ಸಂದರ್ಭೋಚಿತವಾಗಿ ನಡೆದುಕೊಂಡು, ತಮ್ಮ ರಾಯಭಾರತ್ವದ ಹೊಣೆಗಾರಿಕೆಯನ್ನು ಸೂಕ್ಷ್ಮವಾಗಿ ನಿಭಾಯಿಸುವಷ್ಟು ಸಮರ್ಥರಿರುತ್ತಿದ್ದರು. ಇಷ್ಟಲ್ಲದೆ,

ಇಂದಿನ 'ನ್ಯಾಯವಾದಿ'ಗಳಂತೆ ಅಂದಿನ ವಕೀಲರು ನ್ಯಾಯನಿರ್ಣಯ ಕರ್ತವ್ಯದಲ್ಲಿ ಪಾಲ್ಗೊಳ್ಳುತ್ತಿರಲಿಲ್ಲವೆನ್ನಬೇಕು.

ಸಾಮಾನ್ಯವಾಗಿ, ಚಿತ್ರದುರ್ಗ ಅರಸರ ನ್ಯಾಯಾಡಳಿತದಲ್ಲಿ, ಯಾವುದೇ ತಾರತಮ್ಯದ ಲಕ್ಷಣಗಳು ಗೋಚರಿಸುವುದಿಲ್ಲ. ಸಾಂಪ್ರದಾಯಿಕ ನ್ಯಾಯದಾನ ವಿಧಾನವನ್ನು ಅನುಸರಿಸಿದುದು ಕಂಡುಬರುತ್ತದೆ. ಇಂಥಾ ನ್ಯಾಯಪರ ಕಾರ್ಯನೀತಿಯನ್ನು ತಮ್ಮ ಆಡಳಿತದಲ್ಲಿ ಅನುಸರಿಸಿದ್ದರಿಂದಲೇ ಈ ನಾಯಕರು ದಕ್ಷಿಣಭಾರತದಲ್ಲಿ ಬಲಿಷ್ಠ ಸಂಸ್ಥಾನಿಕರಲ್ಲೊಬ್ಬರೆನಿಸಿದುದು; ಸ್ವಾಭಿಮಾನದಿಂದ ಬದುಕಿದುದು. ಪ್ರಜಾರಕ್ಷಕರಾಗಿದ್ದುದರಿಂದಲೇ ಉತ್ತಮ ನ್ಯಾಯಾಡಳಿತ ರೂಪಿಸಿಕೊಂಡುದು. ಡಾ.ನಟರಾಜ್ ಹೇಳುವಂತೆ, "ಚಿತ್ರದುರ್ಗದ ಪಾಳೆಯಗಾರರು ಪರಾಕ್ರಮಿಗಳು, ಯುದ್ಧತಂತ್ರ ನಿಪುಣರು, ಸಾಹಸಿಗಳು, ಪರಧರ್ಮ ಸಹಿಷ್ಣುಗಳು, ಧರ್ಮನಿಷ್ಠರು, ದೈವಭಕ್ತರು; ಜೊತೆಯಲ್ಲಿ 'ನ್ಯಾಯಪರತೆ'ಗೆ ಹೆಸರಾದವರು; ವ್ಯಾಜ್ಯ-ವಿವಾದಗಳಾಗಲಿ, ದಿವಾಣಿ ಪ್ರಕರಣಗಳಾಗಲಿ ಅಥವಾ ಅಪರಾಧ ಪ್ರಕರಣಗಳೇ ಆಗಿರಲಿ, ಅವರು ಯಾರ ಪ್ರಭಾವಕ್ಕೂ ಒಳಗಾಗದೆ, ನಿಷ್ಪಕ್ಷಪಾತದಿಂದ ನ್ಯಾಯವಿತರಣೆ ನಡೆಸಿ ತೀರ್ಮಾನಗಳನ್ನು ನೀಡುತ್ತಿದ್ದರು... ಇಂಥಾ ವಿವೇಕ, ನ್ಯಾಯವಿಮರ್ಶೆ, ದೂರದೃಷ್ಟಿ, ವ್ಯಾಜ್ಯದಲ್ಲಿ ಅಮಾಯಕರ ಹಾಗೂ ಸಾತ್ವಿಕರ ರಕ್ಷಣೆ ಇತ್ಯಾದಿ ಕ್ರಮಗಳಿಂದ ಪಾಳೆಯಗಾರರ ನ್ಯಾಯವಿತರಣ ಪದ್ಧತಿ ಗಮನ ಸೆಳೆಯುತ್ತದೆ."[೧೫]

ಕರ್ನಾಟಕ ನಾಯಕ ಪಾಳೆಯಗಾರರ ನ್ಯಾಯಾಡಳಿತವನ್ನು ಸಮಗ್ರವಾಗಿ ನಿರೂಪಿಸುವಲ್ಲಿ ಚಿತ್ರದುರ್ಗ ನಾಯಕ ಅರಸರ ನ್ಯಾಯಾಡಳಿತದಲ್ಲಿ ಕಂಡುಬರುವ ಪ್ರಸಂಗಗಳೂ ಉಪಯುಕ್ತವೆನಿಸುತ್ತವೆಂಬುದು ದಿಟ.*

**ಟಿಪ್ಪಣಿಗಳು**

೧. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೧೧ (೧೯೦೩), ಹುಲ್ಲೂರು ೨೨, ಚಿತ್ರದುರ್ಗ ತಾಲ್ಲೂಕು, ಕ್ರಿ.ಶ. ೧೬೬೯

೨. ಇತಿಹಾಸ ದರ್ಶನ, ಸಂಪುಟ ೨೦, ಪು.೪೨೬-೪೩೦

೩. ಈ ಶಾಸನದ ತೇದಿವಿಚಾರ : ಬಿ.ಎಲ್.ರೈಸ್ ಅವರು ಪ್ರಕಟಿಸಿದ ಪಾಠದಲ್ಲಿ ಈ ಶಾಸನದ ತೇದಿಯು 'ಶಕ ೧೫೩೧ ಸೌಮ್ಯ ಸಂವತ್ಸರ ಆಶ್ವೀಜ ಶುದ್ಧ ೧೫ ಬುಧವಾರ' ಎಂದಿದ್ದು, ಇದನ್ನು ಅವರು ತಮ್ಮ ಇಂಗ್ಲಿಷ್ ಅನುವಾದದಲ್ಲಿ 'ಕ್ರಿ.ಶ.೧೬೦೯' ಎಂದಷ್ಟೆ ನಮೂದಿಸಿದ್ದಾರೆ (ಆಂಗ್ಲಾನುವಾದ, ಪು.೭). ಇದನ್ನು ನಾವು ೧೬೦೯ ಸೆಪ್ಟೆಂಬರ್ ೨೭ ಬುಧವಾರಕ್ಕೆ ಸರಿಹೊಂದಿಸಬಹುದಾದರೂ ಇದು ನಿಖರವಾದುದಲ್ಲ. ಡಾ.ರಾಜಶೇಖರಪ್ಪನವರು ಈ ಶಾಸನಪಾಠದ ಮರುಓದಿಕೆಯಲ್ಲಿ ಈ ತೇದಿಯನ್ನು 'ಶಕ ೧೫೩೧ ಸೌಮ್ಯ ಸಂವತ್ಸರದ ಆಶ್ವೀಜ ಶುದ್ಧ ೬ ಆದಿವಾರ'ವೆಂದು ಪರಿಷ್ಕರಿಸಿದ್ದು, ಇದನ್ನು ೧೬೦೯ ಸೆಪ್ಟೆಂಬರ್ ೨೪ ಆದಿತ್ಯವಾರಕ್ಕೆ ಹೊಂದಿಸಿದ್ದಾರೆ; ವರುಷದ ಮಟ್ಟಿಗೆ, ರೈಸ್ ಅವರನ್ನು ಬೆಂಬಲಿಸಿದ್ದಾರೆ.

---

* ಹೆಚ್ಚಿನ ಮಾಹಿತಿಗೆ 'ಚಿತ್ರದುರ್ಗ ನಾಯಕ ಅರಸರ ನ್ಯಾಯಾಡಳಿತ' ಎಂಬ ನನ್ನ ಪುಸ್ತಕವನ್ನು ಪರಾಮರ್ಶಿಸಬಹುದು.

ಪ್ರಸ್ತುತ ಶಾಸನದ ಪ್ರಕಾರ, ಈ ಮೇಲಿನ ಉದ್ದಂಡನ ಪ್ರಕರಣ ನಡೆದುದು ಇಮ್ಮಡಿ ಮದಕರಿನಾಯಕನ ಅವಧಿಯಲ್ಲಿ. ಇದು ಸರಿಯಾದುದು ಸಹಾ. ದಾಖಲೆಗಳು ಹೇಳುವಂತೆ, ಈ ನಾಯಕನ ಆಳ್ವಿಕೆಯ ಕಾಲ ೧೬೫೨ ರಿಂದ ೧೬೭೫. ಇದು ಸಹಾ ಖಚಿತಗೊಂಡಿರುವ ಕಾಲಾವಧಿ. ಈಗ ಗುರುತಿಸಲಾಗಿರುವಂತೆ, ಈ ಶಾಸನದ ಕಾಲ ಕ್ರಿ.ಶ.೧೬೬೯. ಆದರೆ ಈ ವರುಷದಲ್ಲಿ ದುರ್ಗದ ದೊರೆಯಾಗಿದ್ದವನು ಈತನ ತಂದೆ ಒಂದನೇ ಕಸ್ತೂರಿರಂಗಪ್ಪನಾಯಕ(೧೬೦೨-೧೬೫೨)ನೇ ವಿನಾ ಇಮ್ಮಡಿ ಮದಕರಿನಾಯಕನಲ್ಲ. ಶಾಸನದಲ್ಲಿ 'ಯಿಂಮ್ಮಡಿ ಮೆದಕೇರಿನಾಯ್ಕ' ಎಂದೇ ಸ್ಪಷ್ಟವಾಗಿ ಉಲ್ಲೇಖಿಸಿರುವಾಗ, ಉದ್ದಂಡನ ಪ್ರಕರಣವು ಈತನ ತಂದೆ ಒಂದನೇ ಕಸ್ತೂರಿ ರಂಗಪ್ಪನಾಯಕನ ಕಾಲದಲ್ಲಿ ನಡೆದುದೆಂದು ಇಲ್ಲಿ ಸಮರ್ಥಿಸಲಾಗುವುದಿಲ್ಲ. ಅಂದರೆ ಇಲ್ಲಿ ತೇದಿಯು ವ್ಯತ್ಯಾಸವಾದಂತೆ ತೋರುತ್ತದೆ.

ಪ್ರತಿ ೬೦ ಸಂವತ್ಸರಗಳ ನಂತರ ಯಾವುದೇ ಸಂವತ್ಸರವೂ ಮತ್ತೊಮ್ಮೆ ಪುನರಾವರ್ತನೆಯಾಗುತ್ತದೆ. ಅದರಂತೆ ಇದೇ ಸೌಮ್ಯ ಸಂವತ್ಸರವು ಇಮ್ಮಡಿ ಮದಕರಿನಾಯಕನ ಕಾಲಾವಧಿಯಲ್ಲಿ ೬೦ನೇ ಸಂವತ್ಸರವಾಗಿ ಪುನರಾವರ್ತನೆಗೊಂಡಿದೆ; ಹಾಗೂ ಈ ಸಂವತ್ಸರವು 'ಶಕವರುಷ ೧೫೯೧' ಆಗಿರುವುದರಿಂದ ಅದು ಕ್ರಿ.ಶ.೧೬೬೯ಕ್ಕೆ ಹೊಂದುತ್ತದೆ. ಈ ತೇದಿಯನ್ನು 'ಶಕ ೧೫೯೧ ಸೌಮ್ಯ ಸಂವತ್ಸರದ ಆಶ್ವೀಜ ಶುದ್ಧ ೬ ಆದಿವಾರ'ವೆಂದು ಭಾವಿಸಿದರೆ, ಇದನ್ನು 'ಕ್ರಿ.ಶ.೧೬೬೯ ಸೆಪ್ಟೆಂಬರ್ ೨೬ ಆದಿವಾರ'ಕ್ಕೆ ಹೊಂದಿಸಬಹುದು. ಇದು ಇಮ್ಮಡಿ ಮದಕರಿನಾಯಕನ ಕಾಲಾವಧಿಗೆ ಹೊಂದುವಂಥಾದ್ದು.

ನಾವು ಸ್ವಯಂ ಪರಿಶೀಲಿಸಿದಂತೆ, ಈ ಶಾಸನದಲ್ಲಿ ಕಂಡರಿಸಲಾಗಿರುವ '೧೫೩೧' ಎಂಬ ತೇದಿಯಲ್ಲಿರುವ ಮೂರನೇ ಅಂಕಿ '೩' ಎಂಬುದು ನಿರ್ದಿಷ್ಟವಾದುದಲ್ಲ. '೯' ಅಂಕಿಯನ್ನೆ ಯಾವುದೋ ಗೊಂದಲದಲ್ಲಿ ತಿರುವುಮುರುವಾಗಿ ಮೂಡಿಸಿರುವಂತೆ ಭಾಸವಾಗುತ್ತವೆ. (ಚಿತ್ರ ನೋಡಿ). ಇದು ಕಂಡರಣೆಕಾರನು ಎಸಗಿರುವ ಪ್ರಮಾದವೆನ್ನದೆ ವಿಧಿಯಿಲ್ಲ; ಅಥವಾ ಆತನ ಕೈತಪ್ಪಿನಿಂದಲೂ ಇಂಥಾ ವ್ಯತ್ಯಸ್ತ ಉಂಟಾಗಿರಬಹುದು. ಸಾಮಾನ್ಯವಾಗಿ ಶಾಸನಗಳಲ್ಲಿ ಕೆಲವೊಮ್ಮೆ ಸಹಜವಾಗಿಯೋ ತಪ್ಪಿನಿಂದಲೋ ಈ ರೀತಿ ಉಲ್ಲೇಖಿಸಲಾಗಿರುತ್ತದೆ.

ಹುಲ್ಲೂರು ಶಾಸನದ ಮರುಪರಿಶೀಲನೆ ಸಂದರ್ಭದಲ್ಲಿ ಜೊತೆಯಲ್ಲಿದ್ದು ಸಹಕರಿಸಿದ ಚಿತ್ರದುರ್ಗದ ಎಸ್.ಆರ್.ಗುರುನಾಥ್ ಮತ್ತು ಈ ಶಾಸನದ ತೇದಿನಿರ್ಣಯ ವಿಚಾರದಲ್ಲಿ ನನ್ನ ಅಭಿಪ್ರಾಯವನ್ನು ಅನುಮೋದಿಸಿದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಾಸನತಜ್ಞ ಡಾ.ಡಿ.ವಿ.ಪರಮಶಿವಮೂರ್ತಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

೪. ಚೆನ್ನದಮನೆ ರಾಮಪ್ಪನ ಚಿನ್ಮೂಲಾದ್ರಿಗಿರಿದುರ್ಗದಲ್ಲಿ ಆಳಿದ ಹಿಂದಿನ ಅರಸರುಗಳು (ಅಪ್ರಕಟಿತ ದಾಖಲೆ)

೫. ಚೆನ್ನಪ್ಪ ಎರೇಸೀಮೆ, 'ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ನ್ಯಾಯತೀರ್ಮಾನ'. ಚಂದ್ರವಳ್ಳಿ, ಪು.೧೬-೧೭

೬. ಚೆನ್ನದಮನೆ ರಾಮಪ್ಪನ ಚಿನ್ಮೂಲಾದ್ರಿಗಿರಿದುರ್ಗದಲ್ಲಿ ಆಳಿದ ಹಿಂದಿನ ಅರಸರುಗಳು (ಅಪ್ರಕಟಿತ ದಾಖಲೆ)

೭. ಲಕ್ಷ್ಮಣ್ ತೆಲಗಾವಿ, 'ದಾವಣಗೆರೆ ಗೌಡಿಕೆಗೆ ಸಂಬಂಧಿಸಿದ ತಾಮ್ರಶಾಸನದ ನಕಲು (ಜಯರೇಖೆ)'. ಶಾಸನ ಅಧ್ಯಯನ, ೨-೨, ೨೦೦೫, ಪು.೩೩-೪೬

೮. ಚೆನ್ನಪ್ಪ ಎರೇಸೀಮೆ, ಪೂರ್ವೋಕ್ತ, ಪು.೧೭-೧೮

೯. ಅಲ್ಲೇ, ಪು.೧೪-೧೫

೧೦. ಅಲ್ಲೇ, ಪು.೧೬

೧೧. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೭(ಹೊಸಸಂಪುಟ-೧೯೭೯), ಗುತ್ತಲು ೬೩, ಮಂಡ್ಯ ತಾಲ್ಲೂಕು, ಕ್ರಿ.ಶ.೧೬೫೪

೧೨. ಚನ್ನಪ್ಪ ಎರೇಸೀಮೆ, ಪೂರ್ವೋಕ್ತ, ಪು.೧೮

೧೩. ಅಲ್ಲೇ, ಪು.೧೫-೧೬

೧೪. ಮಹಾದೇವನ ಮಹಾಲಿಂಗೇಂದ್ರವಿಜಯ, ಪು.೯೨-೯೩

೧೫. ಚಿತ್ರದುರ್ಗಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪು.೩೧೬, ೩೧೯

## ಆಕರಸಾಹಿತ್ಯ


ಶ್ರೀಮಜ್ಜಗದ್ಗುರು ಶ್ರೀ ಕೂಡ್ಲಿ-ಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನಲೇಖನ ಸಂಗ್ರಹ, ಭಾಗ ೧, ೧೯೬೫, ಶ್ರೀ ಕೂಡಲೀಕ್ಷೇತ್ರ, ಶಿವಮೊಗ್ಗ ಜಿಲ್ಲೆ

ಎಂ.ಚಿದಾನಂದಮೂರ್ತಿ, ೧೯೬೬, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ (ಕ್ರಿ.ಶ.೪೫೦-೧೧೫೦), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಎಲ್.ಬಸವರಾಜು (ಸಂ.), ೧೯೭೧, ಮಹಾದೇವನ ಮಹಾಲಿಂಗೇಂದ್ರವಿಜಯ, ಶ್ರೀಬೃಹನ್ಮಠ ಸಂಸ್ಥಾನ, ಚಿತ್ರದುರ್ಗ

ಎಂ.ವಿ.ಶ್ರೀನಿವಾಸ್, ಲಕ್ಷ್ಮಣ್ ತೆಲಗಾವಿ (ಸಂ.), ೧೯೭೬, ಚಂದ್ರವಳ್ಳಿ, ಜಿಲ್ಲಾ ಇತಿಹಾಸ ಸಂಶೋಧನ ಮಂಡಲಿ, ಚಿತ್ರದುರ್ಗ

Vithal Trimbak Gune, 1953, **The Judicial System of the Marathas,** Deccan College, Poona

Ullal Narasinga Rao, 1985 (1891), **A Kisamwar Glossary of Kannada Words,** Asian Educational Services, New Delhi

ಲಕ್ಷ್ಮಣ್ ತೆಲಗಾವಿ, 'ಶ್ರೀ ಬೃಹನ್ಮಠ ಮತ್ತು ಚಿತ್ರದುರ್ಗ ನಾಯಕ ಅರಸರ ಸಂಬಂಧ', ಚಿನ್ಮೂಲಾದ್ರಿ ಚೇತನ (ರಜತಮಹೋತ್ಸವ ಸ್ಮರಣಸಂಚಿಕೆ, ೧೯೮೯ : ಸಂ. : ಜಿ.ಶಿವಕುಮಾರ್ ಮತ್ತಿತರರು), ಚಿತ್ರದುರ್ಗ

- - -'ಚಿತ್ರದುರ್ಗ ನಾಯಕ ಅರಸರು-ರಾಜಕೀಯ ಚಿತ್ರ', ದವನಸಿರಿ (ಅಖಿಲಭಾರತ ೬೧ನೇ ಕನ್ನಡಸಾಹಿತ್ಯ ಸಮ್ಮೇಳನದ ಸ್ಮರಣಸಂಚಿಕೆ, ೧೯೯೨ : ಸಂ. : ಎಂ.ಜಿ.ಈಶ್ವರಪ್ಪ), ದಾವಣಗೆರೆ

ಬಿ.ರಾಜಶೇಖರಪ್ಪ, 'ಹುಲ್ಲೂರು ವೀರಭದ್ರ ದೇವಾಲಯದ ಶಾಸನ - ಒಂದು ಮರುಪರಿಶೀಲನೆ', ಇತಿಹಾಸ ದರ್ಶನ, ಸಂಪುಟ ೨೦, ೨೦೦೫, (ಸಂ. : ಎಂ.ಜಿ.ನಾಗರಾಜ್, ಪಿ.ವಿ.ಕೃಷ್ಣಮೂರ್ತಿ), ಬೆಂಗಳೂರು

ನಟರಾಜ್, 'ಚಿತ್ರದುರ್ಗ ಪಾಳೆಯಗಾರರ ಆಳ್ವಿಕೆಯಲ್ಲಿ ನ್ಯಾಯವಿತರಣ ಪದ್ಧತಿ', ಚಿತ್ರದುರ್ಗಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ೨೦೦೫, (ಸಂ. : ಆರ್. ಗೋಪಾಲ್), ಹೊಸಪೇಟೆ

೨

# ಬಿಚ್ಚುಗತ್ತಿ ಭರಮಣ್ಣನಾಯಕನ ಅವಧಿಯಲ್ಲಿ ದಾವಣಗೆರೆ ಗೌಡಿಕೆವ್ಯಾಜ್ಯದ ನ್ಯಾಯತೀರ್ಮಾನ

ಪ್ರೊ. ಲಕ್ಷ್ಮಣ್ ತೆಲಗಾವಿ

ಮೂಲ ತಾಮ್ರಶಾಸನವೊಂದರ ನಕಲಾಗಿದ್ದು, ಜಯರೇಖೆಯೆಂತಲೂ ಕರೆಸಿಕೊಂಡಿರುವ ಪ್ರಸ್ತುತ ದಾಖಲೆ, ದಾವಣಗೆರೆ ಗೌಡಿಕೆಗೆ ಸಂಬಂಧಿಸಿದುದು. ಈ ದಾಖಲೆಯ ಕಾಲ ಶಕ ೧೬೨೮ನೇ ಹಗಲು ಆಶ್ವೀಜ ಶುಕ್ಲ ೩ ತದಿಗೆ ರವಿವಾರ, ಅಂದರೆ ೧೭೦೬ ಸೆಪ್ಟೆಂಬರ್ ೨೯ ರವಿವಾರ. ಇಲ್ಲಿಯ ತದಿಗೆ-ತೃತಿಯಾ, ಅಂದರೆ ಪ್ರತಿಪಕ್ಷದ ಮೂರನೇ ತಿಥಿ. ಈ ಅವಧಿಯಲ್ಲಿ ಚಿತ್ರದುರ್ಗದ ಅರಸನಾಗಿದ್ದವನು ಕಾಮಗೇತಿ ಕಸ್ತೂರಿ ಬಿಚ್ಚುಗತ್ತಿ ಭರಮಣ್ಣನಾಯಕ (೧೬೮೯-೧೭೨೧). ಆಗ ದಾ(ಡಾ)ವಣಗೆರೆಯು ಚಿತ್ರದುರ್ಗ ಸೀಮೆಗೆ ಸೇರಿದ ಬೇತೂರು ಹೋಬಳಿಯಲ್ಲಿದ್ದ ಒಂದು ಗ್ರಾಮ. ದಾವಣಗೆರೆಯ ಆರೇರಹಟ್ಟಿಯಲ್ಲಿರುವ ಬೀರೇದೇವರ ದೇವಸ್ಥಾನದಲ್ಲಿ ಸಂಗ್ರಹಿಸಲಾದ ಈ ದಾಖಲೆಯಲ್ಲಿ ಜಾತಿನೆಲೆಯ ವ್ಯಾಜ್ಯ ಕುರಿತ ವಿವರಗಳಿವೆ.

ಇದೊಂದು ಅಪ್ಪಟ ಜಯರೇಖೆ ಅಥವಾ ಜಯಪತ್ರವೆನ್ನಲು ಈ ದಾಖಲೆ ಹೊಂದಿರುವ ವಸ್ತುವಿನ ಸ್ವರೂಪವೇ ಆಧಾರ. ಸಾಮಾನ್ಯವಾಗಿ, ಎರಡು ಭಿನ್ನ ಜಾತಿಸಮುದಾಯಗಳಿಗೆ ಸೇರಿದವರು ಯಾವುದಾದರೂ ನಿರ್ದಿಷ್ಟ ವಿಷಯ ಅಥವಾ ವ್ಯಾಜ್ಯ ಕುರಿತು ಭಿನ್ನಾಭಿಪ್ರಾಯ ತಳೆದಾಗ, ತಮ್ಮ ಪರವಾಗಿ ದೈವದವರು ಅಥವಾ ತೀರ್ಪುಗಾರರಿಂದ ಊರಿನ ಸಮಸ್ತರ ಸಮ್ಮುಖದಲ್ಲಿ ನ್ಯಾಯ ಪಡೆಯಲೋಸುಗ ಸಮಕಾಲೀನವಾಗಿ ಆಚರಣೆಯಲ್ಲಿದ್ದ ಕೆಲವು ಪರೀಕ್ಷೆ/ಸವಾಲುಗಳನ್ನು ಎದುರಿಸಬೇಕಾಗಿತ್ತು. ಆದರೆ ಇಂಥಾ ಪರೀಕ್ಷೆ ಎದುರಾಗುತ್ತಿದ್ದುದು ಸಾಕ್ಷಿ ಪುರಾವೆಗಳಿಲ್ಲದ ಅಥವಾ ನಂಬಿಕೆಗನರ್ಹವೆನಿಸುವ ಸಾಕ್ಷಿಗಳಿದ್ದ ವ್ಯಾಜ್ಯಗಳಿಗೆ ಸಂಬಂಧಿಸಿದಂತೆ ವಿನಾ ಇತರ ಸಾಮಾನ್ಯ ವ್ಯಾಜ್ಯಗಳಿಗಲ್ಲ. ಕೆಲವೊಮ್ಮೆ ತಪ್ಪಿತಸ್ಥ ಅಥವಾ ತನ್ನ ಪ್ರಾಮಾಣಿಕತೆಯನ್ನು ಸಮರ್ಥಿಸಿಕೊಳ್ಳುವ ಸ್ಥಾನದಲ್ಲಿರುವ ವ್ಯಕ್ತಿಗೆ ಇದು ಅನಿವಾರ್ಯವಾಗಬಹುದಿತ್ತು. ಅಂಥವರಿಗೆ ದೈವದವರು ಒಪ್ಪಲಾಗುತ್ತಿದ್ದ ಪರೀಕ್ಷೆ ಅಥವಾ ಸವಾಲುಗಳು ವಿವಿಧ

ಬಗೆಯವು; ಕೆಲವು ಉಗ್ರಪರೀಕ್ಷೆಗಳು. ಕುದಿಯುವ ತುಪ್ಪದಲ್ಲಿ ಕೈಯನ್ನು ಅದ್ದಿಸುವುದು, ಕಾದ ಕಬ್ಬಿಣದ ಸಲಾಕೆಯನ್ನು ಕೈಯಲ್ಲಿ ಹಿಡಿಸುವುದು ಇತ್ಯಾದಿ. ಸಾಕ್ಷಿ ಪುರಾವೆಗಳಿಲ್ಲದ ಎಡೆಗಳಲ್ಲಿ ದಿವ್ಯ(ದೈವ)ಪ್ರಮಾಣದ ಮೂಲಕ ಪರಿಹಾರ ಕಂಡುಕೊಳ್ಳಲಾಗುತ್ತಿದ್ದುದು ಸಹಜ. ಅಲ್ಲದೆ, ಚಿತ್ರದುರ್ಗ ನಾಯಕ ಅರಸರ ಕಾಲದಲ್ಲಿ ದಿಪ್ಪಿದೀವಿಗೆ, ಮುದ್ದೆತುಪ್ಪದ ಪ್ರಮಾಣ, ವಿಘ್ನೇಶ್ವರಶಾಸ್ತ್ರ ಓದಿಸುವುದು  ಮೊದಲಾದ ವಿಧಾನಗಳ ಮೂಲಕವೂ ವಿವಾದಗಳನ್ನು ತೀರ್ಮಾನಿಸಲಾಗುತ್ತಿತ್ತು.

ನ್ಯಾಯದಾನ ಮಾಡುವ ದೈವದವರು ಅಥವಾ ಗ್ರಾಮ ಮುಖಂಡರು ಸಮಾಜದ ವಿವಿಧ ಸ್ತರಗಳಿಗೆ, ಅಂದರೆ ದೇವರ ಒಕ್ಕಲಿಗೆ, ವಿವಿಧ ಜಾತಿಗಳಿಗೆ ಹಾಗೂ ಕೇರಿಗಳಿಗೆ ಸೇರಿದವರಾಗಿರುತ್ತಿದ್ದರು. ಇವರು ಸಾಮಾನ್ಯವಾಗಿ ಗ್ರಾಮಮುಖಂಡರು ಅಥವಾ ಹಿರಿಯರೇ ಆಗಿರುತ್ತಿದ್ದುದುಂಟು. ಇಂಥವರು ತಮ್ಮ ವೈಯಕ್ತಿಕ ವರ್ಚಸ್ಸು, ವಿದ್ಯೆ, ನ್ಯಾಯಪರಿಜ್ಞಾನ ಇತ್ಯಾದಿ ಗುಣಗಳ ಕಾರಣವಾಗಿಯೂ ಪ್ರಭಾವಶಾಲಿಗಳಾಗಿರುತ್ತಿದ್ದರು. ನ್ಯಾಯದಾನ ಮಾಡುವ ಹೊಣೆಗಾರಿಕೆ ಕೆಲವೊಮ್ಮೆ ಅನುವಂಶೀಯವಾಗಿಯೂ ಮುಂದುವರೆಯಬಹುದಿತ್ತು. ಇದು ಗ್ರಾಮೀಣ ನ್ಯಾಯಾಡಳಿತ ಕ್ರಮವಾಗಿದ್ದಿತು. ಗ್ರಾಮೀಣ ಹಂತದಲ್ಲಿ ತೀರ್ಮಾನವಾಗದ ಕೆಲವು ವ್ಯಾಜ್ಯಗಳು ಅಂತಿಮವಾಗಿ ಅರಸನ ಆಸ್ಥಾನದಲ್ಲಿ ತೀರ್ಮಾನಗೊಳ್ಳುತ್ತಿದ್ದವು.

ಗ್ರಾಮಮಟ್ಟದಲ್ಲಿ ವ್ಯಾಜ್ಯಗಳನ್ನು ಬಗೆಹರಿಸುವ ಸಂದರ್ಭದಲ್ಲಿ, ನ್ಯಾಯ ಕೋರಿ ಬಂದ ವ್ಯಕ್ತಿ ತನ್ನ ಪರಿಶುದ್ಧತೆಯನ್ನು ನೈತಿಕ ನೆಲೆಯಲ್ಲಿ ಸಮರ್ಥಿಸಿಕೊಳ್ಳಲು ಯಾವುದಾದರೊಂದು ಪರೀಕ್ಷೆಗೆ ಒಳಪಡಲೇಬೇಕಿತ್ತು. ಕೆಲವೊಮ್ಮೆ ಇಂಥಾ ಪರೀಕ್ಷೆಗಳು ಪವಾಡಸದೃಶವಾಗಿರುವಂತೆ ತೋರಿಬಂದು ಸಮಸ್ತರನ್ನು ಭಾವಪರವಶರನ್ನಾಗಿಸುತ್ತಿದ್ದು ದುಂಟು. ಇಂಥಾ ವಿಲಕ್ಷಣ ಪರೀಕ್ಷೆಗಳಲ್ಲಿ ಗೆದ್ದವರಿಗೆ ಅವರು ಪಡೆದ ಜಯದ ಕುರುಹಾಗಿ, ಇನ್ನೊಮ್ಮೆ ಇಂಥಾ ಭಿನ್ನಾಭಿಪ್ರಾಯಗಳಿಗೆ ಅವಕಾಶವಾಗದಂತೆ, ಸವಾಲಿನ ಸಕಲ ವಿವರದೊಡನೆ ತೀರ್ಪನ್ನು ಬರಹರೂಪದಲ್ಲಿ, ಅಂದರೆ ತಾಮ್ರಪಟದ ಮೇಲೆ ಬರೆಯಿಸಿ ಕೊಡಲಾಗುತ್ತಿತ್ತು. ಇದೇ ಜಯರೇಖೆ ಅಥವಾ ಜಯಪತ್ರ. ಕೆಲವೊಮ್ಮೆ ಪವಾಡ ನಡೆಯಿಸಿದ ವ್ಯಕ್ತಿಗಳಿಗೂ ಜಯರೇಖೆ/ಜಯಪತ್ರಗಳನ್ನು ನೀಡುತ್ತಿದ್ದುದುಂಟು. ಇವುಗಳ ವಿಶ್ವಸನೀಯತೆ ಚರ್ಚಾರ್ಹವೆನಿಸಿದರೂ ಇಂಥಾ ಪದ್ಧತಿ ಹಿಂದೆ ಜಾರಿಯಲ್ಲಿದ್ದುದಂತೂ ದಿಟ. ಗ್ರಾಮೀಣ ಪ್ರದೇಶದಲ್ಲಿ ಅಲ್ಲಲ್ಲಿ ಈಗಲೂ ಈ ಸ್ವರೂಪದ ಪರೀಕ್ಷೆಗಳು ಅಪರೂಪಕ್ಕೆಂಬಂತೆ ನಡೆಯುವುದುಂಟು. ಏನೇ ಇದ್ದರೂ ಜಯರೇಖೆ ಅಥವಾ ಜಯಪತ್ರಗಳನ್ನೂ ಶಾಸನಪ್ರಕಾರಕ್ಕೆ ಸೇರಿಸಿ ಅಧ್ಯಯನ ಕೈಗೊಂಡಿರುವುದನ್ನು ಕಾಣಬಹುದು. ಪ್ರಸ್ತುತ ದಾಖಲೆಯೂ ಇಂಥಾದ್ದಕ್ಕೆ ಇನ್ನೊಂದು ಉದಾಹರಣೆಯಂತಿದೆ.

ಬಿಚ್ಚುಗತ್ತಿ ಭರಮಣ್ಣನಾಯಕನ ಆಡಳಿತಾವಧಿಯಲ್ಲಿ ದಾವಣಗೆರೆ ಗ್ರಾಮದ ಗೌಡಿಕೆ ವಹಿಸಿಕೊಂಡಿದ್ದವನು ಸಾದವಕ್ಕಲು ಕರುಣಗೌಡನ ಮಗ ಮುದಿಯಣ್ಣ/ಮುದಿಯಣ್ಣಗೌಡ.

ಈ ಮುದಿಯಣ್ಣ ಮತ್ತು ಕುರುಬರ ಬೀರೇದೇವರ ಪೂಜಾರಿ ಕರಿಯಣ್ಣನ ಮಗ ನಾಗಯ್ಯ ಹಾಗೂ ಗೊಲ್ಲರ ಗಿಡ್ಡ(ಬಡ)ಗಿರಿಯಣ್ಣನ ಮೊಮ್ಮಗ ಗಿಡ್ಡಯ್ಯ/ಗಿಡ್ಡಯ್ಯಗೌಡರ ನಡುವೆ ದಾವಣಗೆರೆ ಗೌಡಿಕೆ ವಿಚಾರದಲ್ಲಿ ನಡೆದ ವ್ಯಾಜ್ಯದ ವಿವರ ಈ ದಾಖಲೆಯಲ್ಲಿದೆ. ಈ ವ್ಯಾಜ್ಯ ತೀರ್ಮಾನಗೊಂಡುದು ಭರಮಣ್ಣನಾಯಕನ ಸಮ್ಮುಖದಲ್ಲಿ. ಇದನ್ನು ಈ ಜಯರೇಖೆಯಲ್ಲಿ ದಾಖಲಿಸಿದೆ. ಹಿಂದೂ ನ್ಯಾಯಪದ್ಧತಿಯಂತೆ ಅರಸನೇ ನ್ಯಾಯಾಧಿಪತಿಯಾಗಿರುತ್ತಿದ್ದುದು ಸಹಜ. ನ್ಯಾಯಾಪೇಕ್ಷಿಗಳಿಗೆ ಭರಮಣ್ಣನಾಯಕ ಸ್ಪಂದಿಸಿದುದು ಒಂದು ಮುಖ್ಯ ಸಂಗತಿಯಾದರೆ, ಈ ವ್ಯಾಜ್ಯ ತೀರ್ಮಾನಗೊಂಡುದು ಕೆಳದುರ್ಗದ, ಅಂದರೆ ಜನವಸತಿ ಪ್ರದೇಶದ ಪೇಟೆ ಹನುಮಂತರಾಯ ದೇವಸ್ಥಾನದಲ್ಲಿ ಎಂಬುದು ಇನ್ನೊಂದು ಮುಖ್ಯ ಸಂಗತಿ. ಸಾಮಾನ್ಯವಾಗಿ ಎಲ್ಲ ವಿವಾದಗಳ ತೀರ್ಮಾನ ನಡೆಯುತ್ತಿದ್ದುದು ಚಿತ್ರದುರ್ಗದಲ್ಲಿಯೇ. ನ್ಯಾಯತೀರ್ಮಾನಕ್ಕೆಂದು ಸಮಸ್ತರು ಸೇರುತ್ತಿದ್ದ ಸಾರ್ವಜನಿಕ ಸ್ಥಳಗಳೆಂದರೆ ಅರಳೀಕಟ್ಟೆ, ದೇವಾಲಯ, ಅಯ್ಯನವರ ಚಾವಡಿ, ಪಂಚಾಯಿತಿಕಟ್ಟೆ ಇತ್ಯಾದಿ.

ಈ ಜಯರೇಖೆ ಪ್ರಸ್ತಾಪಿಸುವಂತೆ, ದಾವಣಗೆರೆ ಗೌಡಿಕೆಗೆ ಸಂಬಂಧಿಸಿದ ವ್ಯಾಜ್ಯದ ವಿವರ ಇಂತಿದೆ: ಶ್ರೀಮನ್ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ನಾಯಕರ (ಬಿಚ್ಚುಗತ್ತಿ) ಭರಮಣ್ಣನಾಯಕನು ಚಿನ್ನಗಿರಿದುರ್ಗ(ಚಿತ್ರದುರ್ಗ)ದಲ್ಲಿ ಆಳ್ವಿಕೆ ನಡೆಸುತ್ತಿರುತ್ತಾನೆ. ಚಿತ್ರದುರ್ಗಕ್ಕೆ ಸಲ್ಲುವ ಬೇತೂರು ಹೋಬಳಿ ದಾವಣಗೇರಿ (ದಾವಣಗೆರೆ) ಗ್ರಾಮದ ಗೌಡನಾಗಿದ್ದವನೂ ಸಾದವಕ್ಕಲು ಕರುಣಗೌಡನ ಮಗನೂ ಆದ ಮುದಿಯಣ್ಣ; ಹಾಗೂ ಕುರುಬರ ಬೀರ(ಬೀರೇ)ದೇವರ ಪೂಜಾರಿ ಕುರುಬರ ಕರಿಯಣ್ಣನ ಮಗ ನಾಗೈಯ್ಯ (ನಾಗಯ್ಯ) ಮತ್ತು ಗೊಲ್ಲರ ಗಿಡ್ಡ(ಬಡ)ಗಿರಿಯಣ್ಣನ ಮೊಮ್ಮಗ ಗಿಡ್ಡಯ್ಯಗೌಡ - ಈ ಮೂವರು, ಅಂದರೆ ಎರಡು ಪಕ್ಷಗಳ ನಡುವೆ, ದಾವಣಗೆರೆ ಗ್ರಾಮದ ಗೌಡಿಕೆ 'ನಮ್ಮದು-ತಮ್ಮದು' ಎಂದು ವ್ಯಾಜ್ಯ ಆರಂಭವಾಗುತ್ತದೆ. ಎರಡೂ ಪಕ್ಷಗಳ ಕರ್ತರು (ಪ್ರತಿನಿಧಿಗಳು) ಹುಜೂರಿಗೆ (ದೊರೆಯ ಸಮಕ್ಷಮಕ್ಕೆ, ಅಂದರೆ ಚಿತ್ರದುರ್ಗದ ರಾಜದರ್ಬಾರಿಗೆ) ಬಂದು ಬಿನ್ನಹ (ಅರಿಕೆ) ಮಾಡಿಕೊಳ್ಳುತ್ತಾರೆ. ಆಗ 'ಮ| ರಾ| ಶ್ರೀ' (ಮಹಾರಾಜೇಶ್ರೀ ಭರಮಣ್ಣನಾಯಕ)ಯೊಡನೆ ದರ್ಬಾರಿನಲ್ಲಿ ಕುಳಿತಿದ್ದವರು ಕುಮಾರ ಲಿಂಗಣ್ಣ, ಹೊಗರಿ ಹರುಗಪ್ಪ, ಪ್ರಧಾನಿ ಗುಂಟಮಲ್ಲಪ್ಪ (ಗುಂಟನೂರು ಮಲ್ಲಪ್ಪ), ಸಾಮಾಜಿಕರು (ಗಣ್ಯರು), ಆನಂದಪುರದ ಈಸಂಣ್ಣ (ಈಶಣ್ಣ), ಬಕ್ಕಸದ ತಿಮ್ಮಪ್ಪ, ಮಹಾನಾಡಿನ ಗುರಸ್ತರು, ಪರಿಮಳದ ಅಜ್ಯಂಣ್ಣ (ಅಯ್ಯಣ್ಣ), ಉರಲಗಟ್ಟ ಲಿಂಗಣ್ಣ, ಬಕ್ಕಸದ ಪುಟ್ಟಪ್ಪ, ನಾರಾಯಣಪ್ಪ, ಆನೆಕೊಂಡದ ಗೌಡರ ಶಿವ್ವಯ್ಯ, ಶಿಖರಯ್ಯ ಮೊದಲಾದ ಗೌಡರು, ಅಧಿಕಾರಸ್ಥರು ಹಾಗೂ ಇತರ ಆಸ್ಥಾನಿಕರು. ಇವರು ವ್ಯಾಜ್ಯಹೂಡಿದ ಸಾದರ ಮುದಿಯಣ್ಣ ಮತ್ತು ಕುರುಬರ ನಾಗಯ್ಯ-ಈ ಈರ್ವರನ್ನು

ದರ್ಬಾರಿಗೆ ಕರೆಯಿಸಿ, ಈರ್ವರೂ ತಮ್ಮ ತಮ್ಮ ಪೂರ್ವೋತ್ತರ, ಅಂದರೆ ಆರಂಭದ ಮತ್ತು ಸದ್ಯದ ಪರಿಸ್ಥಿತಿ ಕುರಿತು ವಿವರಿಸುವಂತೆ ಕೇಳುತ್ತಾರೆ.

ಸಾದರ ಮುದಿಯಣ್ಣಗೌಡನು, ಕಾಮಗೇತಿವಂಶದ ಹಿಂದಿನ ಮೂವರು ಅರಸರು (ಮೂರುತಲೆಗಳು) ದುರ್ಗ(ಚಿತ್ರದುರ್ಗ)ವನ್ನು ಆಳುತ್ತಿದ್ದ ಕಾಲದಿಂದಲೂ ತಾನು ದಾವಣಗೆರೆ ಗ್ರಾಮದ ಗೌಡಿಕೆಯನ್ನು ಮಾಡುತ್ತಾ ಬಂದಿರುವುದಾಗಿ ಹೇಳುತ್ತಾನೆ. ಇದಕ್ಕೆ ಸಾಕ್ಷಿಯನ್ನು ಆಯಗಾರರಿಂದ ನುಡಿಸು(ಹೇಳಿಸು)ವುದಾಗಿ ತಿಳಿಸುತ್ತಾನೆ. ಈ ಹೇಳಿಕೆಯನ್ನು ಪರಿಗಣಿಸುವ ಸಮಸ್ತದೈವದವರು (ಎಲ್ಲ ಹಿರಿಯರು), ಗ್ರಾಮದ ತಳವಾರ, ಕಮ್ಮಾರ, ಬಡಗಿ, ಅಕ್ಕಸಾಲೆ, ಕೆಲಸಿ-ಈ ಐದುಮಂದಿಯನ್ನು ಕರೆಯಿಸಿ ಅವರ ಗೌಡರು ಯಾರೆಂದು ಕೇಳುತ್ತಾರೆ. ಅದಕ್ಕೆ ಆಯಗಾರರು, ಸಾದರ ಮುದಿಯಣ್ಣನೇ ಗೌಡ; ಇನ್ನು ಕುರುಬರನ್ನು, ಗೊಲ್ಲರನ್ನು ತಾವು ಅರಿಯೆವೆನ್ನುತ್ತಾರೆ. ಈ ಐದುಮಂದಿ ಆಯಗಾರರನ್ನು ಹೊರತುಪಡಿಸಿ ಬೇಗಾರನನ್ನು ಕರೆಯಿಸಿ ಆತನ ಸಾಕ್ಷ್ಯವನ್ನು ಕೇಳಲಾಗುತ್ತದೆ. ಬೇಗಾರಿಯು, ತರೀಕೆರೆ ಪಾಳೆಯಗಾರ ಹನುಮಪ್ಪನಾಯಕನ ಅವಾಂತರ(ದಾಳಿ)ದಿಂದಾಗಿ ದಾವಣಗೆರೆ ಗ್ರಾಮ ಹಾಳುಬಿದ್ದಿದ್ದಿತು; ಮುದಿಯಣ್ಣನು ಗ್ರಾಮವನ್ನು ಎತ್ತಿಹಾಕುತ್ತಿದ್ದಲ್ಲಿ (ಉದ್ಧರಿಸುತ್ತಿದ್ದಲ್ಲಿ), ಕುರುಬರ ಕರಿಯಣ್ಣನ ಮಗ ನಾಗಯ್ಯನು ಅಲ್ಲಿಗೆ ಬಂದು ಗ್ರಾಮ ತಮ್ಮದು, ಗ್ರಾಮ ಹಾಕಕೂಡದೆಂದು ಮುದಿಯಣ್ಣನಿಗೆ ಅಡ್ಡಿಪಡಿಸಿದ; ಆದರೆ ಮುದಿಯಣ್ಣಗೌಡನು ತನ್ನ ಸೀಮೆಯ (ಬೇತನೂರು ಸೀಮೆಯ?) ನಾಡಿಗರು, ಆಳಿದಂಥಾ ವರನ್ನು (ಅಧಿಕಾರಿಗಳನ್ನು?) ಸಾಕ್ಷಿಯಾಗಿ ಕರೆಯಿಸಿ, ಕುರುಬರ ಕರಿಯಣ್ಣನನ್ನು ಬೆದರಿಸಿ ಅಟ್ಟಿದನೆಂದು ತನ್ನ ಹಿರಿಯರು ಹೇಳುವರೆಂದು ಸಾಕ್ಷ್ಯ ನುಡಿಯುತ್ತಾನೆ.

ಆಯಗಾರರಿಂದ ಎರಡು ಬಗೆಯ ಮಾತು/ಸಾಕ್ಷ್ಯ ಹೊರಬೀಳುತ್ತದೆ. ದೈವದವರಿಗೆ ವ್ಯಾಜ್ಯವನ್ನು ಬಗೆಹರಿಸುವ ಮಾರ್ಗ ತೋರದಾಗುತ್ತದೆ. ಆಗ ಅನಿವಾರ್ಯವಾಗಿ ಈರ್ವರನ್ನೂ ಉಗ್ರಪರೀಕ್ಷೆಗೆ ಒಳಪಡಿಸುವ ತೀರ್ಮಾನ ಕೈಗೊಳ್ಳಲಾಗುತ್ತದೆ. ದೈವಾಚಾರ (ದೈವಸಾನ್ನಿಧ್ಯ)ದಲ್ಲಿ ಕಾಯಿಸಿದ ಹಾರೆಯ ಮಂಡಿ(ಗಟ್ಟಿ)ಯನ್ನು ಕೈಯಲ್ಲಿ ಎತ್ತಿತೋರಿಸುವುದರೊಡನೆ ತಮ್ಮ ನ್ಯಾಯದ ನಿಲುವನ್ನು ಸಮರ್ಥಿಸಿಕೊಳ್ಳುವಂತೆ ಹಾಗೂ ಗೌಡಿಕೆಯನ್ನು ಗೆದ್ದುಕೊಳ್ಳುವಂತೆ ಸಮಸ್ತದೈವದವರು ಎರಡೂ ಪಕ್ಷದವರಿಗೆ ಸೂಚಿಸುತ್ತಾರೆ. ಆಗ ಪ್ರತಿಪಕ್ಷದ ಕುರುಬರ ನಾಗಯ್ಯ ಮತ್ತು ಗೊಲ್ಲರ ಗಿಡ್ಡಯ್ಯ-ಈರ್ವರೂ ಈ ಪರೀಕ್ಷೆಗೆ ಸಮ್ಮತಿಸುತ್ತಾರಲ್ಲದೆ, ಕಾಯಿಸಿದ ಹಾರೆಯ ಮಂಡಿ/ಮಂಡೇಯನ್ನು ಎತ್ತುವ ಬಗೆಗೆ ಅಲ್ಲಿಯೇ ಗೊತ್ತಿಗೆ(ಸಮ್ಮತಿ ಪತ್ರ) ಬರೆದುಕೊಡುತ್ತಾರೆ. ಇದಕ್ಕೆ ಪ್ರತಿಯಾಗಿ ಮುದಿಯಣ್ಣ ಗೌಡನು, ನಾಗಯ್ಯನು ಕಾದ ಹಾರೆಯ ಗಟ್ಟಿಯನ್ನು ಎತ್ತುವ ಪರೀಕ್ಷೆಯಲ್ಲಿ ಗೆದ್ದರೆ ತಾನು ಅಪರಾಧ(ದಂಡ)ವನ್ನು ತೆತ್ತು ಗ್ರಾಮವನ್ನು ಬಿಟ್ಟುಕೊಡುವುದಾಗಿ ಹೇಳಿ ಕಡಕ(ಕರಾರುಪತ್ರ)ವನ್ನು ಬರೆದುಕೊಡುತ್ತಾನೆ. ಹೀಗೆ ಎರಡೂ ಪಕ್ಷದವರು ಗೊತ್ತಿಗೆಗೆ (ಒಪ್ಪಂದಕ್ಕೆ) ಬದ್ಧರಾಗುತ್ತಾರೆ.

ಈ ಸಂಬಂಧದಲ್ಲಿ ಭರಮಣ್ಣನಾಯಕನು ತನ್ನ ದಳವಾಯಿಗಳು, ಕುಮಾರರು, ಅಳಿಯಂದಿರು, ಗುರಿಕಾರರು, ಸಾಮಾಜಿಕರು, ಮಹಾನಾಡಿನ ಗುರಿಕಾರರು, ಊಳಿಗದವರು ಮೊದಲಾದ ಸಮಸ್ತರನ್ನು ಕರೆಯಿಸಿಕೊಳ್ಳುತ್ತಾನೆ. ಎರಡೂ ಪಕ್ಷದವರನ್ನು ಪೇಟೆ ಹನುಮಂತರಾಯ ದೇವಸ್ಥಾನಕ್ಕೆ ಕರೆಯಿಸಿ ಸತ್ಯ (ಪ್ರಮಾಣ) ಮಾಡಿಸಲಾಗುತ್ತದೆ. ಈ ದೇವಸ್ಥಾನಕ್ಕೆ ಬಂದಿರುವವರೆಂದರೆ, ಸಿರಿವಾಳದ ಸಭೆಯವರು, ದಳವಾಯಿ ಚಿಕ್ಕಣ್ಣ, ಕುಮಾರ ಲಿಂಗಪ್ಪ (ಲಿಂಗಣ್ಣ), ಮೈದುನ ಚಿಕ್ಕರಂಗಪ್ಪ, ಬಾಣದಪುರದ ಕೆಂಪಯ್ಯ, ಅಳಿಯ ನೆಲ್ಲಿಕಟ್ಟೆ ಕೆಂಚಣ್ಣ, ಜೋಗಣ್ಣ, ಕುಲೀಕಾರ (ಗುರಿಕಾರ?) ಕಡಜ, ಚಿಕ್ಕಪ್ಪ, ಬಿಳಿಚೋಡ ತಿಗಳಯ್ಯ, ತಿಗಳ ಮತ್ತೆಗೌಡ, ಬೊಮ್ಮಕಟ್ಟೆ ಕೆಂಚಯ್ಯ, ಪುಲಸಾರಾಧ್ಯ, ವಲಕಯ್ಯ, ಸೊಂಡೂರ ಲಕ್ಷ್ಮಯ್ಯ, ಅಸಗೋಡು ಬಕ್ಕಸದ ತಿಮ್ಮಪ್ಪ, ತಿರುಕನಾಯಕನ ತಿಮ್ಮಯ್ಯ, ಗವಿಯಪ್ಪನ ಮಗ ಕರಿಯಣ್ಣ, ಸಾಮಾಜಿಕರು, ಗುಂಟನೂರ ಮಲ್ಲಪ್ಪ, ಗರಜೀರಾಯನ ಕೆಂಚಪ್ಪ, ಅನಂತಯ್ಯ, ದೇವರಾಯ, ಕೃಷ್ಣಪ್ಪ, ಉಗ್ರಾಣದ ರಂಗಪ್ಪ, ಕಂದಾಚಾರದ ಶಾನುಭೋಗ ಕೊಡ(ಗ)ನೂರ ಯಂಕಪ್ಪ, ಗುಂಟನೂರ ಸೂರಪ್ಪ, ಮಹಾನಾಡಿನ ಗುರಸ್ತ, ಪರಿಮಳದ ಅಯ್ಯಣ್ಣ, ಗೊಗ್ಗರಿ ಹರುಗಪ್ಪ, ಉರಗಟ್ಟ ಲಿಂಗಪ್ಪ, ಮೀಟಿ ಸೂರಪ್ಪ, ಆನೆಕೊಂಡದ ನೌಗೀ ಸಿದ್ದಯ್ಯ, ಶಿಖರಯ್ಯ, ಕೆಲಸಿ ಬೇತೂರ ದೊಡ್ಡಯ್ಯ, ಹುಚ್ಚ ಬೇಗಾರಿ ಬೂದಿಜೋಗಿ ಮೊದಲಾದ ಸಮಸ್ತರು. ಇವರು ಪೇಟೆ ಹನುಮಂತರಾಯ ದೇವಸ್ಥಾನದಲ್ಲಿ ಕುಳಿತು, ಮೊದಲಿಗೆ ದೇವರಪೂಜೆ ಮಾಡಿಸುತ್ತಾರೆ. ಪರೀಕ್ಷೆಗೆಂದು ತಂದ ಉಕ್ಕಿನಗಟ್ಟಿಗೂ ಪೂಜೆ ಮಾಡಿಸುತ್ತಾರೆ; ಹಾಗೂ ಅದನ್ನು ಕಾಯಿಸಲು ಕೊಡುತ್ತಾರೆ. ಆ ನಂತರ ನಾಗಯ್ಯನಿಗೆ ನೀರನೆರಸಿ (ಸ್ನಾನ ಮಾಡಿಸಿ) ಮಡಿ ಹೊದಿಕೆ ಹೊದಿಸುತ್ತಾರೆ. ನಾಗಯ್ಯನನ್ನು ದೇವರಿಗೆ ಎದುರಾಗಿ ನಿಲ್ಲಿಸಿ ಏಳು ಮಂಡಲವನ್ನು ಬರೆಯಿಸಲಾಗುತ್ತದೆ. ಆತನ ಕೈಯೊಳಗೆ ಅರಳೆ ಎಲೆ ಹಿಡಿಸಿ, ಅದನ್ನು ಅಂಗನೂಲಿನಿಂದ (ಒಗೆದು ಶುಭ್ರಮಾಡಿದ ಬಟ್ಟೆಯಿಂದ?) ಸುತ್ತಿ ಅದರ ಮೇಲೆ ದೇವರ ಪ್ರಸಾದ ಇರಿಸಲಾಗುತ್ತದೆ. ಆಗ ಚಿತ್ರದುರ್ಗದವನೇ ಆದ ಕಮ್ಮಾರ ತಿಮ್ಮಯ್ಯನು ಚೆನ್ನಾಗಿ ಕಾದ ಹಾರೆಗಟ್ಟಿ/ಉಕ್ಕಿನಗಟ್ಟಿಯನ್ನು ಇಕ್ಕಳದಲ್ಲಿ ಹಿಡಿದು ನಾಗಯ್ಯನ ಕೈಯೊಳಗೆ ಇರಿಸುತ್ತಾನೆ. ಅದನ್ನು ಹಿಡಿದ ನಾಗಯ್ಯನು ಏಳುಮಂಡಲವನ್ನು ದಾಟಿ ನಡೆದು ದೇವರಿಗೆ (ಹನುಮಂತರಾಯನಿಗೆ) ಆರತಿ ಬೆಳಗಿ ಉಕ್ಕಿನಗಟ್ಟಿಯನ್ನು ಕೆಳಕ್ಕೆ ಹಾಕುತ್ತಾನೆ. ಆತನ ಕೈ ಅರಳೆ ಎಲೆ ಮತ್ತು ಅಂಗನೂಲುಗಳಿಂದಾಗಿ ಸುಟ್ಟಿರುವುದಿಲ್ಲ. ಇದನ್ನು ವೀಕ್ಷಿಸುತ್ತಿದ್ದ ದೈವದವರು ನಾಗಯ್ಯ ಗೆದ್ದನೆಂದು ಘೋಷಿಸುತ್ತಾರೆ. ಈ ಸಮಾಚಾರವನ್ನು ದೈವದವರು ರಾಮರಾಯನಿಗೆ (ಭರಮಣ್ಣನಾಯಕನಿಗೆ?) ಹೇಳಲಾಗಿ, ಕುರುಬರ ಗೌಡ ನಾಗಯ್ಯನಿಗೂ ಗೊಲ್ಲರ ಬಡಗಿರಿಯಣ್ಣನ ಮೊಮ್ಮಗ ಗಿಡ್ಡಯ್ಯನಿಗೂ ಅರಸನು ಉಡುಗೊರೆ ವೀಳೆಯ ಕೊಡಿಸಿ, ದಾವಣಗೆರೆ ಗ್ರಾಮದ ಗೌಡಿಕೆ ಉಭಯರಿಗೂ ಸೇರಿದೆಯೆಂದು ಘೋಷಿಸುತ್ತಾನೆ. ಈ ವೃತ್ತಾಂತವನ್ನು ತಾಮ್ರಪಟದ ಮೇಲೆ ಬರೆಯಿಸಲಾಗುತ್ತದೆ.

* * *

ದಾವಣಗೆರೆ ಗ್ರಾಮದ ಗೌಡಿಕೆಗೆ ಸಂಬಂಧಿಸಿದ ಪ್ರಸ್ತುತ ದಾಖಲೆ ಮೂಲ ತಾಮ್ರಶಾಸನದ ಯಥಾವತ್ತಾದ ನಕಲಾಗಿರುವಂತೆ ತೋರುತ್ತದೆ. ಇದರಲ್ಲಿ ಉಲ್ಲೇಖಗೊಂಡ ತೇದಿಯಾಗಲಿ, ಚಿತ್ರದುರ್ಗದ ಅರಸ ಬಿಚ್ಚುಗತ್ತಿ ಭರಮಣ್ಣನಾಯಕನ ಆಡಳಿತಾವಧಿಯ ವ್ಯಕ್ತಿಗಳು, ಅಧಿಕಾರಸ್ಥರು ಮೊದಲಾದವರೇ ಆಗಲಿ ಚಿತ್ರದುರ್ಗ ಚರಿತ್ರೆಯಲ್ಲಿ, ಅಂದರೆ ದಾಖಲೆ ಮತ್ತು ಶಾಸನಗಳಲ್ಲಿ ಕಂಡುಬರುತ್ತಾರೆ. ಈ ನಾಯಕ ಅರಸರ ಆಡಳಿತಾವಧಿಯ ಆಯಗಾರರ ನಿರ್ಣಯ ಕುರಿತ ದಾಖಲೆಯನ್ನು ಇದು ಸಂಪೂರ್ಣ ಹೋಲುತ್ತದೆ. ಈ ಜಯರೇಖೆಯಲ್ಲಿರುವ ವಿವರಗಳು ವಿಶ್ವಾಸಾರ್ಹವಾಗಿದ್ದು, ೧೮ನೇ ಶತಮಾನದ ಆದಿಯ ದಾವಣಗೆರೆ ಗ್ರಾಮದ ಗೌಡಿಕೆಯ ಇತಿಹಾಸ ಕುರಿತು ಹೊಸ ಮಾಹಿತಿ ನೀಡುತ್ತವೆ.

ಈ ಜಯರೇಖೆ ಹೊಂದಿರುವ ಮಾಹಿತಿ ವಸ್ತುನಿಷ್ಠವಾಗಿದೆಯೆನ್ನಲು ಚಿತ್ರದುರ್ಗದ ಸ್ಥಳನಾಮವೇ ಸಾಕ್ಷಿ. ಇದರಲ್ಲಿ ಚಿತ್ರದುರ್ಗವನ್ನು 'ಚಿನ್ನನಗಿರಿದುರ್ಗ' ಎನ್ನಲಾಗಿದೆ. ವಾಸ್ತವದಲ್ಲಿ, ಇದು ಭರಮಣ್ಣನಾಯಕನ ಅವಧಿಯಲ್ಲಿ ರೂಢಿಯಲ್ಲಿದ್ದ ಹೆಸರು. ಈ ಅರಸ ಹಾಕಿಸಿರುವ ಅನೇಕ ಶಾಸನಗಳಲ್ಲಿ ಚಿತ್ರದುರ್ಗವನ್ನು ಚಿಂನ್ಮನಗಿರಿದುರ್ಗ (ಎ.ಕ.೧೧, ದಾವಣಗೆರೆ ೧೬೪, ಕ್ರಿ.ಶ. ೧೬೯೭), ಶಿಂಗನಗಿರಿದುರ್ಗ (ಚಿತ್ರದುರ್ಗ ೩೭, ಕ್ರಿ.ಶ. ಸು. ೧೭೦೦), ಚಿಂನನಗಿರಿದುರ್ಗ (ಚಿತ್ರದುರ್ಗ ೩೧, ಕ್ರಿ.ಶ. ೧೭೧೫) ಇತ್ಯಾದಿಯಾಗಿ ಸಂಬೋಧಿಸಿದೆ. ಕೇವಲ 'ದುರ್ಗ' (ಚಿತ್ರದುರ್ಗ ೫೬, ಕ್ರಿ.ಶ. ೧೭೧೮) ಎಂತಲೂ ಕರೆಯಲಾಗಿದೆ. ಹಾಗೆಯೇ, ಈ ದಾಖಲೆಯಲ್ಲಿರುವ ಬೇತೂರು ಈಗ ದಾವಣಗೆರೆ ಹೋಬಳಿಯಲ್ಲಿರುವ ಸ್ಥಳ. ಚಿತ್ರದುರ್ಗ ನಾಯಕ ಅರಸರ ಆಳ್ವಿಕೆಯಲ್ಲಿ ಇದು ಸೀಮೆಯ ಸ್ಥಾನಮಾನ ಪಡೆದಿದ್ದಿತು. ೧೬೫೨ ರಿಂದ ೧೬೭೫ರ ವರೆಗೆ ದುರ್ಗದ ಅರಸನಾಗಿದ್ದ ಇಮ್ಮಡಿ ಮದಕರಿನಾಯಕ ಆಳಿದ ಸೀಮೆ/ಪಟ್ಟಡಿಗಳ ಪೈಕಿ ಬೇತೂರು ಸಹಾ ಒಂದಾಗಿದ್ದಿತು. ದಾವಣಗೆರೆ ಹೋಬಳಿ ಬೂದಿಹಾಳು ಗ್ರಾಮದ ಶಿಲಾಶಾಸನವು (ದಾವಣಗೆರೆ ೧೬, ಕ್ರಿ.ಶ. ೧೭೧೮) ಭರಮಣ್ಣನಾಯಕನ ಕಾಲದ್ದಾಗಿದ್ದು, ಶಾಸನದಲ್ಲಿ 'ನಾಲು ಆಳುವ ಬೇತೂರುಸೀಮೆ' ಎಂತಲೇ ಪ್ರಸ್ತಾಪಿಸಿದ್ದಾನೆ ಈ ಅರಸ. ಹಿಂದಿನಿಂದಲೂ ಇದಕ್ಕಿದ್ದ ಆಡಳಿತಾತ್ಮಕ ಸ್ಥಾನಮಾನ ಗಮನ ಸೆಳೆಯುತ್ತದೆ. ೧೨ನೇ ಶತಮಾನದ ವೇಳೆಗೇ ದಾವಣಗೆರೆಯು ಗ್ರಾಮವಾಗಿ ಗುರುತಿಸಲ್ಪಟ್ಟಿದ್ದಿತೆಂದು ತಿಳಿದರೂ ನಾಯಕ ಅರಸರ ಕಾಲದಲ್ಲಿ ಅದು ಪ್ರಮುಖ ಗ್ರಾಮವಾಗಿ ಅಭಿವೃದ್ಧಿ ಹೊಂದಿದ್ದುದು ಸ್ಪಷ್ಟ. ಆದರೆ ತರೀಕೆರೆಯ ಹನುಮಪ್ಪನಾಯಕನು ಬೇತೂರುಸೀಮೆಯಲ್ಲಿ ಹಾವಳಿ ನಡೆಸಿದಾಗ ದಾವಣಗೆರೆ ಗ್ರಾಮವು ಹಾಳಾಯಿತು ಅಥವಾ ನಿರ್ಜನವಾಯಿತೆಂಬುದು ಗಮನಾರ್ಹ. ಈ ತರೀಕೆರೆಯ ನಾಯಕನೆಂದರೆ ಇಮ್ಮಡಿ ಮದಕರಿನಾಯಕನ ಕಾಲದಲ್ಲಿದ್ದ ಚಿಕ್ಕಹನುಮಪ್ಪ ನಾಯಕನೇ ಇರಬೇಕು. ಆ ಗ್ರಾಮದ ಗೌಡಿಕೆಗೆ ಸಂಬಂಧಿಸಿದಂತೆ ಎರಡು ಪಕ್ಷಗಳ ನಡುವೆ ಆರಂಭಗೊಂಡ ವ್ಯಾಜ್ಯದ ಕಾರಣವಾಗಿ ದಾವಣಗೆರೆ ಗ್ರಾಮವು ತನ್ನ ಹಿಂದಿನ ಆಡಳಿತಾತ್ಮಕ ಅಸ್ತಿತ್ವವನ್ನು ಮತ್ತೆ ಪಡೆದುಕೊಂಡಿತೆಂಬುದು ಮುಖ್ಯ.

ಜಯರೇಖೆಯಲ್ಲಿ ಚಿತ್ರದುರ್ಗ ನಾಯಕರನ್ನು 'ಕಾಮಗೇತಿ ಅರಸುಗಳು' ಎಂತಲೂ ಭರಮಣ್ಣನಾಯಕನನ್ನು 'ಮಹಾರಾಜೇಶ್ರೀಯವರು' ಎಂತಲೂ ಕರೆದಿದೆ. ದುರ್ಗದ ರಾಜದರ್ಬಾರನ್ನು 'ಮ|| ರಾ|| ಶ್ರೀ ಹುಜೂರು' ಮತ್ತು 'ಹುಜೂರು' ಎಂದು ಕರೆಯಲಾಗಿದೆ. ಇವೆಲ್ಲವೂ ಸಮಕಾಲೀನ ಶಾಸನ ಹಾಗೂ ದಾಖಲೆಗಳಲ್ಲಿ ಕಂಡು ಬರುವಂಥವೇ. ರಾಜ್ಯಾಡಳಿತದಲ್ಲಿ ಕೆಳಸ್ತರದಿಂದ ಮೇಲ್‌ಸ್ತರದವರೆಗಿನ ವಿವಿಧ ಸ್ಥಾನ-ಮಾನಗಳನ್ನು ಹೊಂದಿದ್ದ ಪ್ರಧಾನಿ, ದಳವಾಯಿಗಳು, ಬೊಕ್ಕಸದವರು, ನಾಡಿಗರು, ತಳವಾರರು, ಊಳಿಗದವರು, ಗುರಿಕಾರರು, ಆಯಗಾರರು, ಬೇಗಾರರು, ಸಾಮಾಜಿಕರು ಮೊದಲಾದವರನ್ನು ಪ್ರಸ್ತಾಪಿಸುವ ಈ ದಾಖಲೆ, ರಾಜ್ಯದ ನ್ಯಾಯಾಡಳಿತ ಮತ್ತಿತರ ಪ್ರಮುಖ ತೀರ್ಮಾನಗಳನ್ನು ಕೈಗೊಳ್ಳುವಲ್ಲಿ ಅಧಿಕಾರಿಗಳಂತೆಯೇ ಸ್ವಬಂಧುಗಳು, ಅಂದರೆ ಕುಮಾರರು, ಮೈದುನರು ಹಾಗೂ ಅಳಿಯಂದಿರಿಗೂ ಪ್ರಾಶಸ್ತ್ಯ ಅಥವಾ ಸಮಾನ ಸ್ಥಾನ-ಮಾನವನ್ನು ನೀಡಲಾಗಿದ್ದಿತೆಂಬುದನ್ನು ಸಮರ್ಥಿಸುತ್ತದೆ. ಇದರಲ್ಲಿ ಕಂಡುಬರುವ ಕುಮಾರ ಲಿಂಗಣ್ಣ (ಲಿಂಗಪ್ಪ), ಮೈದುನ ಚಿಕ್ಕರಂಗಪ್ಪ ಹಾಗೂ ಅಳಿಯ ನೆಲ್ಲಿಕಟ್ಟೆ ಕೆಂಚಯ್ಯರ ಹೆಸರುಗಳು ಇದಕ್ಕೆ ಕೆಲವು ಉದಾಹರಣೆಗಳು. ಹಾಗೆಯೇ, ಸಿರಿವಾಳದ ಸಭೆಯವರ ಪ್ರಸ್ತಾಪವಿರುವುದು ಗಮನಾರ್ಹ. ಆದರೆ ಇವರು ಯಾರೆಂಬುದು ತಿಳಿದುಬರುವುದಿಲ್ಲ. ನ್ಯಾಯತೀರ್ಮಾನ ಸಂದರ್ಭದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದವರು ದೈವದವರು/ಸಮಸ್ತದೈವದವರು ಎಂದು ವ್ಯಕ್ತಪಡುವುದರಿಂದ, ಇವರು ಧರ್ಮಾಧಿಕಾರಿಗಳು ಅಥವಾ ನ್ಯಾಯಮೂರ್ತಿಗಳ ಸ್ಥಾನದಲ್ಲಿದ್ದು ಕಾರ್ಯ ನಿರ್ವಹಿಸುತ್ತಿದ್ದ ಸಮಾಜದ/ ಕುಲದ ಗಣ್ಯರು/ಹಿರಿಯರು ಎಂಬುದು ಸ್ಪಷ್ಟ.

ಈ ದಾಖಲೆಯಲ್ಲಿ ಕಂಡುಬರುವ ಕೆಲವು ವ್ಯಕ್ತಿಗಳು, ಭರಮಣ್ಣನಾಯಕ ಅರಸನಾಗು ವುದಕ್ಕಿಂತ ಮೊದಲೇ ದುರ್ಗದ ಸೇವೆಯಲ್ಲಿದ್ದವರು. ಇವರಲ್ಲಿ ಕೆಲವರು ತಾವು ಕೈಗೊಂಡ ವಿಶಿಷ್ಟ ಕಾರ್ಯಗಳಿಂದ ಹೆಸರಾದವರು. ಉದಾಹರಣೆಗೆ, ದಳವಾಯಿ ಚಿಕ್ಕಣ್ಣ/ ಚಿಕ್ಕಪ್ಪನು ಚಿತ್ರದುರ್ಗದ ದೊರೆ ಚಿಕ್ಕಣ್ಣನಾಯಕ(೧೬೭೬-೧೬೮೬)ನ ಕಾಲದವನಾಗಿದ್ದು, ೧೬೮೪ರ ಬೂದಿಹಾಳು (ಶ್ರೀರಾಂಪುರ) ಕಾಳಗದಲ್ಲಿ ದಂಡನಾಯಕನಾಗಿ ಭಾಗವಹಿಸಿದ್ದವನು. ಪ್ರಧಾನಿ ಗುಂಟನೂರು ಮಲ್ಲಪ್ಪ/ಮಲ್ಲಯ್ಯನು ದುರ್ಗದ ಪ್ರಧಾನಿಯಾದುದು ಭರಮಣ್ಣನಾಯಕ ಅರಸನಾಗಿ ಸಿಂಹಾಸನವನ್ನು ಪರಿಗ್ರಹಿಸಿದಾಗ. ಅದಕ್ಕೆ ಮುನ್ನ ದುರ್ಗದ ಹಿಂದಿನ ಅರಸರ ಬಳಿ ಈತ ಚಾಕರಿ ಕೈಗೊಂಡಿದ್ದವನು. ಈತ ಪ್ರಧಾನಿಯಾದ ನಂತರ ನಿರ್ವಹಿಸಿದ ಕಾರ್ಯ ವಿಶಿಷ್ಟವಾದುದು. ಚಿತ್ರದುರ್ಗ, ನಾಯಕನಹಟ್ಟಿ, ಹಾಲುರಾಮೇಶ್ವರ ಹಾಗೂ ಗುಂಟನೂರುಗಳಲ್ಲಿಯ ಕೆಲವು ಕಾಮಗಾರಿಗಳಿಗೆ ಈತ ಕಾರಣಕರ್ತನೆನಿಸಿದ್ದಾನೆ. ಪರಿಮಳದ ಅಯ್ಯಣ್ಣ ಅಥವಾ ಶೆಟ್ಟರ ಅಯ್ಯಣ್ಣ ಸಹಾ ಭರಮಣ್ಣನಾಯಕ ಸೇವೆಯಲ್ಲಿದ್ದ ಅಧಿಕಾರಿ. ಈತ ತನ್ನ ಹೆಸರಿನಲ್ಲಿ ಚಿತ್ರದುರ್ಗದಲ್ಲಿ ಅಯ್ಯಣ್ಣನಬಾವಿಯನ್ನೂ ಮಠ ಮತ್ತು ಕಟ್ಟೆ(ಒಡ್ಡು)ಗಳನ್ನೂ ಮಾಡಿಸಿದ. ಕೆಳದುರ್ಗದ

ಹಳೆಯ ಬಡಾವಣೆಗಳ ಪೈಕಿ ಈತನ ಹೆಸರಿನಲ್ಲಿರುವ ಅಯ್ಯಣ್ಣನಪೇಟೆಯೂ ಒಂದು. ಇನ್ನೊರ್ವ ಅಧಿಕಾರಿಯೆಂದರೆ ಬಕ್ಕಸದ/ಬೊಕ್ಕಸದ (ಕೋಶದ) ತಿಮ್ಮಪ್ಪ. ಈತನನ್ನು ಅಸಗೋಡು ಬಕ್ಕಸದ ತಿಮ್ಮಪ್ಪನೆಂತಲೂ ಅಸಗೋಡು ಶ್ಯಾನುಭೋಗ ಬೊಕ್ಕಸದ ತಿಮ್ಮಪ್ಪನೆಂತಲೂ ಕರೆದಿದೆ. ಚಳ್ಳಕೆರೆ ತಾಲ್ಲೂಕು ಗೋಸಿಕೆರೆ ಗ್ರಾಮದಲ್ಲಿರುವ ಕ್ರಿ.ಶ. ೧೭೧೧ರ ಶಿಲಾಶಾಸನದಲ್ಲಿ (ಚಳ್ಳಕೆರೆ ೫೮) ಈತ 'ಬೊಕಸ್ತ ತಿಂಮಪ್ಪ' ಎಂದು ಕಾಣಿಸಿಕೊಂಡಿದ್ದಾನೆ. ಚಿತ್ರದುರ್ಗ ಬೆಟ್ಟದ ಪಶ್ಚಿಮಕ್ಕಿರುವ ವನಿಕೆಕಿಂಡಿಬಾಗಿಲು ಬಳಿಯ ಬಾವಿ ಈತನ ನಿರ್ಮಾಣ. ಹಾಗೆಯೇ, ಗೋಸಿಕೆರೆಯ ಕೋಟೆ-ಕೊತ್ತಳ-ಅಗಳುಗಳನ್ನು ಈತನ ಪಾರುಪತ್ಯದಲ್ಲಿ (ಬರಮಂಣನಾಯಕರೈಯನ ಅಪಣೆಯಲು ಬೊಕಸ್ತ ತಿಂಮಪನ ಪಾರುಪತ್ಯದಲು) ಅದೇ ಸ್ಥಳದ ಜಲಧಿಗೌಡನ ಮಗ ಚಿಕ್ಕಣ್ಣಗೌಡನೆಂಬವನು ಮಾಡಿಸಿದನೆಂದು ಹೇಳುತ್ತದೆ ಮೇಲಿನ ಶಾಸನ.

ಬೊಕ್ಕಸದ ತಿಮ್ಮಪ್ಪನಂತೆಯೇ ನಾರಾಯಣಪ್ಪ ಅಥವಾ ಬೊಕ್ಕಸದ ನಾರಾಯಣಪ್ಪನೂ ಶಾಸನೋಕ್ತನಾಗಿದ್ದಾನೆ. ಈತ ರಾಜಮರ್ಯಾದೆಗೆ ಪಾತ್ರನಾದುದು ವಿಶೇಷ. ಕ್ರಿ.ಶ. ೧೭೧೧ರಲ್ಲಿ ಭರಮಣ್ಣನಾಯಕನು 'ಆಶ್ವಲಾಯನಸೂತ್ರದ ಭಾರದ್ವಾಜಗೋತ್ರದ ನಾರಾಣಪ್ಪನ ಪೌತ್ರನಾದ ಲಕ್ಷ್ಮೀಪತಿ ಪುತ್ರನಾದ ಬೊಕಸ್ತ ನಾರಣಾಪಗೆ' ದಾವಣಗೆರೆ ತಾಲ್ಲೂಕು ಮಲೆಬೆನ್ನೂರು ಹೋಬಳಿಯ ಗಂಡಮುಕ್ತೇನಹಳ್ಳಿಯನ್ನು ಅಗ್ರಹಾರ ಮಾಡಿ ಧಾರಾಪೂರ್ವಕ ಕೊಟ್ಟುದನ್ನು ಶಿಲಾಶಾಸನದಲ್ಲಿ ದಾಖಲಿಸಿದೆ (ದಾವಣಗೆರೆ ೧೩೦). ಬಕ್ಕಸದ ಪುಟ್ಟಪ್ಪನೆಂಬ ಅಧಿಕಾರಿಯು, ವಂಶಾವಳಿ ಹೇಳುವಂತೆ, ಜಾನಕಲ್ಲು ಶ್ಯಾನುಭೋಗ ಪುಟ್ಟಣ್ಣನೇ ಇರಬಹುದು. ಕುಮಾರ ಲಿಂಗಣ್ಣನನ್ನು 'ಚಿತ್ರದುರ್ಗದ ಬಖೈರ್'ನಲ್ಲಿ ಲಿಂಗಳನಾಯ್ಕನೆಂದು ಗುರುತಿಸಲಾಗಿದೆ. ಈತ ಭರಮಣ್ಣನಾಯಕನ ಏಳುಮಂದಿ ಮಕ್ಕಳಲ್ಲಿ ಕೊನೆಯವನು. ನೆಲ್ಲಿಕಟ್ಟೆ ಕೆಂಚಯ್ಯನನ್ನು ಭರಮಣ್ಣನಾಯಕನ ಅಳಿಯನೆಂದು ಗುರುತಿಸಲಾಗಿದ್ದು, ಈತ ಭರಮಣ್ಣನಾಯಕನ ನಂತರವೂ ಮೇಲುದುರ್ಗದ ಚಾವಡಿಯಲ್ಲಿ (ನ್ಯಾಯಾಸ್ಥಾನದಲ್ಲಿ) ಪ್ರಾಮುಖ್ಯತೆ ಪಡೆದುಕೊಂಡಿದ್ದ ಸರ್ಜರಾಯರ ಕೆಂಚಣ್ಣನೇ ಇರಬಹುದು.

ವ್ಯಾಜ್ಯಗಾರರು ತಮ್ಮ ತಮ್ಮ ದೂರು/ಮನವಿಗಳನ್ನು ಮೇಲುದುರ್ಗದ ಚಾವಡಿಯಲ್ಲಿ ದಾಖಲಿಸುತ್ತಿದ್ದರು. ಆದರೆ ವಿಚಾರಣೆ ಹಾಗೂ ನ್ಯಾಯನಿರ್ಧಾರಗಳು ಸರ್ವಮಾನ್ಯವಾದ ಯಾವುದೇ ಎಡೆಯಲ್ಲಿ ನಡೆಯಬಹುದಿತ್ತು. ದಾವಣಗೆರೆ ಗೌಡಿಕೆಗೆ ಸಂಬಂಧಿಸಿದ ನ್ಯಾಯ ವಿಚಾರಣೆ ನಡೆದುದು ಪೇಟೆ ಹನುಮಂತರಾಯನ ದೇವಸ್ಥಾನದಲ್ಲಿ. ಈ ದೇವಾಲಯ ಇರುವುದು ಚಿತ್ರದುರ್ಗದ ಅಯ್ಯಣ್ಣನಪೇಟೆ ಪರಿಸರದಲ್ಲಿ. ಸಾಮಾನ್ಯವಾಗಿ ಇದನ್ನು 'ಪೇಟೆ ಆಂಜನೇಯಸ್ವಾಮಿಗುಡಿ'ಯೆಂದು ಜನರು ಗುರುತಿಸುವುದುಂಟು. ಅಂದಿಗೂ ಇಂದಿಗೂ ಭಾವನಾತ್ಮಕ ಹಾಗೂ ಸಾಂಸ್ಕೃತಿಕ ನೆಲೆಯಲ್ಲಿ ಇದು ಪ್ರಮುಖ ಕೇಂದ್ರವೆಂದು ಗುರುತಿಸಲ್ಪಟ್ಟಿದೆ. ಒಟ್ಟಿನಲ್ಲಿ, ಈ ವ್ಯಾಜ್ಯದ ವಿಚಾರಣೆ ನಡೆದುದು ಮೇಲುದುರ್ಗದಲ್ಲಿ,

ಭರಮಣ್ಣನಾಯಕನ ಎದುರಿನಲ್ಲಿ; ಸಂಬಂಧಿಸಿದ ವ್ಯಕ್ತಿಯು ಕಾದ ಉಕ್ಕಿನಗಟ್ಟಿಯನ್ನು ಹಿಡಿಯುವ ಉಗ್ರಪರೀಕ್ಷೆ ನಡೆದುದು ಕೆಳದುರ್ಗದಲ್ಲಿ, ದೇವರ ಸಮ್ಮುಖದಲ್ಲಿ.

ನ್ಯಾಯತೀರ್ಮಾನ ಸಂದರ್ಭದಲ್ಲಿ ಅಗತ್ಯವಿರುವ ಸಾಕ್ಷಿದಾರರನ್ನು ಈ ವ್ಯಾಜ್ಯದಲ್ಲಿಯೂ ಕಾಣಬಹುದು. ಇಲ್ಲಿ ಸಾಕ್ಷಿಗಳಾಗಿರುವುದು ದಾವಣಗೆರೆ ಗ್ರಾಮದ ಆಯಗಾರರೇ. ಆದರೆ ಅವರಲ್ಲಿ ಎರಡು ಪಕ್ಷವಾದುದು ಅಪರೂಪದ ಸಂದರ್ಭವೆನ್ನಬಹುದು. ಮೇಲೆ ನೋಡಿದಂತೆ, ತಳವಾರ, ಕಮ್ಮಾರ, ಬಡಗಿ, ಅಕ್ಕಸಾಲೆ, ಕೆಲಸಿ - ಈ ಐದು ಮಂದಿ ಒಂದು ಪಕ್ಷವಾದರೆ, ಬೇಗಾರಿ ಇನ್ನೊಂದು ಪಕ್ಷವಾಗಿದ್ದಾನೆ. ಮುದಿಯಣ್ಣಗೌಡನ ಪರವಾಗಿ ಈ ಐದುಮಂದಿ ಸಾಕ್ಷಿ ನುಡಿದರೂ ಬೇಗಾರಿಯ ಹೇಳಿಕೆಯಿಂದಾಗಿ ಇಡೀ ವ್ಯಾಜ್ಯವೇ ಬೇರೆ ಜಾಡು ಹಿಡಿದುದು ಗಮನಾರ್ಹ. ಗ್ರಾಮ ಮುಖಂಡರು, ನ್ಯಾಯಾಧೀಶರು ಹಾಗೂ ಇತರರು ಆಯಗಾರರ ಮಾತಿಗೆ ನೀಡುತ್ತಿದ್ದ ಆದ್ಯತೆ ಇದರಿಂದ ದೃಢಪಡುತ್ತದೆ.

ಈ ಜಯರೇಖೆಯು ದಾವಣಗೆರೆ ಗ್ರಾಮದ ಗೌಡಿಕೆಗೆ ಸಂಬಂಧಿಸಿದ ವ್ಯಾಜ್ಯವನ್ನು 'ಗೌಡಿಕೆ ಗೆಲ್ಲುವ' ವ್ಯಾಜ್ಯವೆಂದು ಒಂದು ಮಾತಿನಲ್ಲಿ ತಿಳಿಸಿದೆ. ಈ ವ್ಯಾಜ್ಯವು ಗ್ರಾಮ ಹಾಕುವುದು, ಗ್ರಾಮ ಎತ್ತಿಹಾಕುವುದು, ಗ್ರಾಮ ಬಿಟ್ಟುಕೊಡುವುದು; ಗೊತ್ತಿಗೆ ನಿಲ್ಲುವುದು, ಗೊತ್ತಿಗೆ ನಿಂತು ಬರೆದುಕೊಡುವುದು, ಅಪರಾಧ (ದಂಡ) ಕೊಡುವುದು ಮೊದಲಾದ ಪ್ರಕ್ರಿಯೆಗಳ ಸುತ್ತಲೇ ನಡೆಯುವುದನ್ನು ಗಮನಿಸಬಹುದು. ದೈವದವರು ವ್ಯಾಜ್ಯದಾರರಿಗೆ ಒಡ್ಡಿದ ಕ್ರೂರಪರೀಕ್ಷೆಯೆಂದರೆ ಕಾದ ಹಾರೆ/ಉಕ್ಕಿನ ಮಂಡಿ/ಗಟ್ಟಿಯನ್ನು ಕೈಯಲ್ಲಿ ಹಿಡಿಯುವುದು. ಜಯರೇಖೆಯಲ್ಲಿ ಇದನ್ನು 'ಕಾದ ಹಾರೆಗಟ್ಟಿ ಗೆಲ್ಲುವುದು' ಎಂದು ಸೂಚಿಸಿದೆ. ಇದು ಸತ್ಯ ಮಾಡಿಸುವುದು, ದೇವರ ಎದುರಿಗೆ ನಿಲ್ಲಿಸುವುದು, ದೇವರಪೂಜೆ ಮಾಡಿಸುವುದು, ಉಕ್ಕಿನಗಟ್ಟಿ ಪೂಜೆ ಮಾಡಿಸುವುದು, ನೀರನೆರಸುವುದು, ಮಡಿ ಹೊದಿಕೆ ಹೊದಿಸುವುದು, ಅರಳೆ ಎಲೆ ಹಿಡಿಸುವುದು, ಅಂಗನೂಲು ಸುತ್ತುವುದು, ದೇವರ ಪ್ರಸಾದ ಇರಿಸುವುದು, ಕಾದ ಉಕ್ಕಿನಗಟ್ಟಿಯನ್ನು ಕೈಯಲ್ಲಿ ಹಿಡಿಸುವುದು, ಏಳುಮಂಡಲ ಬರೆಸುವುದು ಹಾಗೂ ದಾಟಿಸುವುದು, ಆರತಿ ಎತ್ತುವುದು, ಅಂತ್ಯದಲ್ಲಿ ಉಡುಗೊರೆ ವೀಳ್ಯೆ ಕೊಡಿಸುವುದು ಇತ್ಯಾದಿ ಪ್ರಕ್ರಿಯೆಯನ್ನೊಳಗೊಂಡಿದ್ದು, ಆಯಾಕಾಲದ ನಂಬಿಕೆಗಳ ನೆಲೆಯ ಒಟ್ಟು ಆಚರಣೆಯನ್ನು ಸ್ಪಷ್ಟವಾಗಿ ಚಿತ್ರಿಸುತ್ತದೆ.

ಭಾಷಿಕವಾಗಿ, ಸಮಕಾಲೀನ ಆಡಳಿತಾತ್ಮಕ ಶಬ್ದಗಳನ್ನೂ ಬರವಣಿಗೆಯ ಶೈಲಿಯನ್ನೂ ಇದು ಹೊಂದಿದೆ. ಇದರಲ್ಲಿ ಪೂರ್ವೋತ್ತರ, ದೈವಾಚಾರ, ಗೊತ್ತಿಗೆ, ಕಡಕ, ಅಂಗನೂಲು ಮೊದಲಾದ ವಿಶಿಷ್ಟ ಶಬ್ದಗಳಿವೆ. ಮೂಲದಾಖಲೆಯನ್ನು ಪ್ರತಿಮಾಡುವಾಗ ಭಾಷೆಯೂ ಅಲ್ಪಸ್ವಲ್ಪ ಮಾರ್ಪಾಟಿಗೆ ಒಳಗಾಗುವುದು ಸಹಜ. ಅಂಥಾ ಸೂಕ್ಷ್ಮ ಬದಲಾವಣೆ ಇಲ್ಲಿಯೂ ಕಂಡುಬರುತ್ತದೆ. ಅಲ್ಲದೆ, ಮೂಲದಾಖಲೆಯಲ್ಲಿಯೇ ಇದ್ದಿರಬಹುದಾದ

ಅಶುದ್ಧ ಬರವಣಿಗೆ ಈ ಪ್ರತಿಯಲ್ಲಿಯೂ ಪುನರಾವರ್ತನೆಯಾಗಿದೆ. ಹಾಗೆಯೇ, ಜಯರೇಖೆಯ ಕೊನೆಯಲ್ಲಿ ದೈವದವರೆಲ್ಲರೂ ಹೋಗಿ ಇಡೀ ವ್ಯಾಜ್ಯದ ಪ್ರಕ್ರಿಯೆಯನ್ನು (ವಿಜಯನಗರದ) ರಾಮರಾಯನಿಗೆ ಸ್ವತಃ ವರದಿ ಮಾಡಿದಂತೆ ಸೂಚಿಸಲಾಗಿದೆ. ಅಲ್ಲದೆ, ಈ ಜಯಪತ್ರಕ್ಕೆ 'ಮಹಾರಾಜೇಶ್ರೀ ರಾಮರಾಯರು' ಸಹಿ (ಸೈನ್) ಹಾಕಿದಂತೆಯೂ ತೋರಿಸಿದೆ. ಇದೊಂದು ಸಾಂಪ್ರದಾಯಿಕ/ರೂಢಿಗತ ವಿಧಾನವೇ ವಿನಾ ಇದಕ್ಕೆ ಯಾವ ಮಹತ್ವವೂ ಇಲ್ಲ. ನ್ಯಾಯನಿರ್ಣಯ ಕಾರ್ಯದಲ್ಲಿ ಚಿತ್ರದುರ್ಗದ ದೊರೆ ಭರಮಣ್ಣ ನಾಯಕನೇ ಸರ್ವೋಚ್ಚ ಪೀಠವನ್ನಲಂಕರಿಸಿದವನಾದ್ದರಿಂದ, ಆತನ ಸ್ಥಾನದಲ್ಲಿ ರಾಮ ರಾಯನ ಹೆಸರು ಸೂಚಿತವಾಗಿರುವುದು ಈ ಜಯಪತ್ರದ ಕರಡು ಸಿದ್ಧಪಡಿಸಿದವನು ಅಥವಾ ಇದನ್ನು ಆ ನಂತರದಲ್ಲಿ ಪ್ರತಿಮಾಡಿದವನು ಎಸಗಿದ ಉದ್ದೇಶಪೂರ್ವಕ ಪ್ರಮಾದವೆನ್ನಲಡ್ಡಿಯಿಲ್ಲ. ರಾಮರಾಯನಿಗೂ ಭರಮಣ್ಣನಾಯಕನಿಗೂ ಇರುವ ಕಾಲ ಮಾನದ ಅಂತರ ಕೇವಲ ಒಂದೂವರೆ ಶತಮಾನ!

ಕಾಲಮಾನ, ಅರಸ, ವ್ಯಕ್ತಿಗಳು, ಸ್ಥಳಗಳು, ಘಟನೆಯ ಸ್ವರೂಪ ಇತ್ಯಾದಿಯನ್ನು ಅವಲೋಕಿಸಿ ಹೇಳುವುದಾದರೆ, ಈ ಜಯರೇಖೆಯೊಂದು ವಿಶ್ವಾಸಾರ್ಹ ಸಮಕಾಲೀನ ದಾಖಲೆ. ಚಿತ್ರದುರ್ಗ ನಾಯಕ ಅರಸರನ್ನು ಕುರಿತ ವಂಶಾವಳಿ, ಬಖೈರು, ಶಾಸನ ಇತ್ಯಾದಿಗಳಲ್ಲಿ ಪ್ರಸ್ತಾಪಗೊಳ್ಳದ ವ್ಯಕ್ತಿಗಳನೇಕರು, ತಮ್ಮ ಹುದ್ದೆ, ಸ್ಥಾನ-ಮಾನ, ಸಂಬಂಧ, ಮೂಲನೆಲೆಗಳೊಡನೆ ಈ ದಾಖಲೆಯಲ್ಲಿ ಕಾಣಿಸಿಕೊಂಡಿದ್ದಾರೆ. ಅಲ್ಲದೆ, ಇವರೆಲ್ಲರೂ ಬಿಚ್ಚುಗತ್ತಿ ಭರಮಣ್ಣನಾಯಕನ ಕಾಲದವರು ಹಾಗೂ ಆಡಳಿತದ ವಿವಿಧ ವಿಭಾಗಗಳಲ್ಲಿದ್ದವರೆಂಬುದು ಚಿತ್ರದುರ್ಗ ಚರಿತ್ರೆಯ ಅಧ್ಯಯನದ ಮಟ್ಟಿಗೆ ಉಪಯುಕ್ತ ವಿಚಾರವೆನಿಸುತ್ತದೆ.

## ತಾಮ್ರಶಾಸನದ (ಜಯರೇಖೆಯ) ಪಾಠ

ಶ್ರೀ

ನಮಸ್ತುಂಗ ಶಿರಂಚುಂಬಿ ಚಂದ್ರಚಾಮರಾಜುವೇ ತ್ರೈಲೋಕ್ಯ ನಗರಾ
ಭ್ಯ ಮೂಲಸ್ತಂಬಾಯ ಸ್ತಂಬವೇ ಸೊಸ್ತಿ ವಿಜಯಭ್ಯುದಯ ಶಾಲಿವಾ
ಹನ ಶಕವರ್ಷಂಗಳು ೧೬೨೮ನೇ ಹಗಲು ಆಶ್ವೀಜ ಶುಕ್ಲ ೩ ತದಗಿ ರವಿವಾ
ರದಲ್ಲು ಬೇತೂರು ಹೋಬಳಿ ಡಾವಣಗೆರೆ ಗೌಡಿಕೆಯನ್ನು ಕುರುಬರ ಬೀರೇದೇ
ವರ ಪುಜಾರಿ ಕರಿಯಂಣನ ಮಗ ನಾಗೈಯ್ಯ ಗೊಲ್ಲರ ಗಿಡ್ಡಗಿರಿಯಂಣನ
ಮೊಮ್ಮಗ ಗಿಡ್ಡಯ್ಯ ಸಹ ಕಾದ ಹಾರೆದ ಗಟ್ಟಿ ಎತ್ತಿ ಗೌಡಿಕೆ ಗೆದ್ದ ಬಗ್ಯೆ
ಜಯರೇಕೆ ಕ್ರಮವೇನಂದ್ರೆ- - - - - - - -
ಶ್ರೀನಂಮಹಂನಾಯಕಾಚಾರ್ಯ ಕಮಗೇಲ್[ತಿ] ಕಸ್ತೂರಿ ನಾಯಕರ ಭರಮಂ
ಣನಾಯಕರು ಚಿನ್ನನಗಿರಿದುರ್ಗಕ್ಕೆ ಸಲ್ಲುವ ಬೇತೂರು ಹೋಬಳಿ ಡಾವ

ಣಗೇರಿ ಗ್ರಾಮದ ಗೌಡರು ಸಾದವಕ್ಕಲು ಕರುಣಗೌಡನ ಮಗ ಮರಿಯಂ
ಣಗೂ ಕುರುಬರ ಬೀರದೇವರ ಪೂಜಾರಿ ಕುರುಬರ ಕರಿಯಂಣನ ಮಗ
ನಾಗ್ಯೆಯ್ಯ ಗೊಲ್ಲರ ಬಡಗಿರಿಯಂಣ್ಣನ ಮೊಮ್ಮಗ ಗಿಡ್ಡಯ್ಯಗೌಡ
ಉಭಯರು ಗೌಡಿಕೆ ನಂಮ್ಮದು ತಂಮ್ಮದು ಎಂದು ಈ ಕರ್ತರು ಹುಜೂರಿಗೆ
ಬಂದು ಬಿನ್ನವಂ ಮಾಡಿಕೊಂಡಲ್ಲಿ ಮ | ರಾ | ಸ್ರೀ ಹುಜೂರಲ್ಲಿ ಕುಳಿತಿದ್ದ
ಕುಮಾರಾ ಲ್ಲಿಂಗಂಣ ಹೊಗರಿ ಹರುಗಪ್ಪ ಶ್ರೀ ಪ್ರಧಾನಿ ಗುಂಟಮಲ್ಲಪ್ಪ
ಸಮಾಜೀಕರೂ ಆನಂದಪ್ರರದ ಈಸಂಣ್ಣ ಬಕ್ಕಸದ ತಿಂಮ್ಮಪ್ಪ ಮ
ಹಾನಾಡಿಗ ಗುರಸ್ತರು ಪರಿಮಳದ ಅಙ್ಯಂಣ ಉರಲಗಟ್ಟ ಲಿಂಗಂಣ
ಬಕ್ಕಸದ ಪುಟ್ಟಪ್ಪ ನಾರಾಯಣಪ್ಪ ಆನೆಕೊಂಡದ [ಗೌಡರ] ಶಿದ್ದಯ್ಯ
ಶಿಖರಯ್ಯ ಮುಂತಾದ ಗೌಡರು ಸಾರದ ಮುದಿಯಂಣ್ಣ ಕುರುಬರ
ನಾಗ್ಯೆಯ್ಯ ಸಹ ಯಿಬ್ಬರನ್ನು ಕರಸಿ ನಿಂಮ್ಮ ನಿಂಮ್ಮಾ ಪೂರ್‍ವೊತ್ತ
ರವ ಹೇಳೆಂದು ಹೇಳಲಾಗಿ | ಸಾರದ ಮುದಿಯಂಣನು [ಹೇಳಿದ]
ಮಾತು ಕಮಗೇರಿ[ತಿ] ಅರುಷುಗಳು ದುರ್ಗವ ಹತ್ತಿ ಮೂರುತಲೆ
ಆರಾಭ್ಯ ಗೌಡಿಕೆಯನ್ನು ಮಾಡಿದನು ಯಿದಕ್ಕೆ ಆಯಗಾರರ
ನುಡಿಸೇನಂದನು ಅದಕ್ಕೆ ಸಮಸ್ತದೈವವು ಆಯಗಾರರು
ತಳವಾರ ಕಮ್ಮಾರ ಬಡಗಿ ಅಕ್ಕಸಾಲೆ ಕೆಲಸಿ ಸಹ ಕರೆದು ನಿಂಮ್ಮ ಗೌ
ಡರ‍್ಯಾರೆಂದು ಕೇಳಲಾಗಿ ಸಾರದ ಮುದಿಯಂಣನು ಗೌಡನಲ್ಲದೆ
ಕುರುಬರ ಗೊಲ್ಲರ ಅರಿಯವೆಂದು ಹೇಳಿದರು ಬೇಗಾರನ
ಕರದು ಕೇಳಲಾಗಿ ಹನುಮಪ್ಪನಾಯಕರ ಅವಾಂತರದಲ್ಲಿ ದಾ
ವಣಗೇರಿ ಹಾಳಾಗಿ ಯಿದ್ದಲ್ಲಿ ಮುದಿಯಂಣನು ಗ್ರಾಮವ ಯೆ
ತ್ತಿ ಹಾಕುತ್ತಿದ್ದಲ್ಲಿ ಕುರುಬರ ಕರಿಯಂಣನ ಮಗ ನಾಗ್ಯೆಯ್ಯ
ನು ಬಂದು ಗ್ರಾಮ ನಂಮದು ನೀನು ಗ್ರಾಮ ಹಾಕಬೇಡೆಂದು ಅ
ಡ್ಡಿಯ ಮಾಡಲಾಗಿ ಆ ಸೀಮೆಗೆ ನಾಡಿಗರು ಆಳಿತಂಥಾವರು ಮು
ದಿಯಂಣಗೌಡನು ಸಾಕ್ಷಿ ಕರಿಸಿ ಕುರುಬರ ಕರಿಯಂಣನ ಬೆದರಿ
ಸಿ ಅಟ್ಟಿದರು ಎಂಬ ಹಾಗೆ ತಮ್ಮ ಹಿರಿಯರು ಹೇಳುವರು ಎಂ
ದು ಆಡಿದನು ಆಯಗಾರ ಮಾತು ಎರಡು ಬಗೆ ಆಯಿತು
ದೈವಾಚಾರದಲ್ಲು ಕಾದ ಹಾರಿ ಮಂಡಿ ಎತ್ತಿ ಗೌಡಿಕೆಯ ಗೆದ್ದು
ಉಂಟುಮಾಡೆಂದು ಸಮಸ್ತದೈವವು ಯಿಬ್ಬರಿಗೂ ಹೇಳಲಾಗಿ
ಈ ಮಾತಿಗೆ ಕುರುಬರ ನಾಗ್ಯೆಯ್ಯ ಗೊಲ್ಲರ ಗಿಡ್ಡಯ್ಯ ಸಹ ನಾ
ವು ಕಾದ ಹಾರಿ ಮಂಡೇ ಎತ್ತುವೆವೆಂದು ಗೊತ್ತಿಗೆ ನಿಂತು ಬರ

ದು ಕೊಟ್ಟರು ಮುದಿಯಂಣನು ಆಡಿದ್ದು ನಾಗೈಯ್ಯ
ಕಾದ ಹಾರಿ ಗಟ್ಟೀ ಗೆದ್ದರೆ ನಾನು ಅಪರಾಧವ ಕೊಟ್ಟು ಗ್ರಾ
ಮವ ಬಿಟ್ಟುಕೊಡುತ್ತೇವೆಂದು ಕಡಕವ ಬರಕೊಟ್ಟನು ಆ ವುಭಯ
ಗೊತ್ತಿಗೆ ನಿಂತಲ್ಲಿ ಮ | ರಾಜೆಸ್ರಿಯರು ದಳವಾಯಿಗಳು ಕುಮಾ
ರರು ಅಳಿಯಂದಿರು ಗುರಿಕಾರರು ಸಮೋಜಿಕರು ಮಹನಾಡಿನ
ಗುರಿಕಾರು ಊಳಿಗದವರು ಮುಂತಾಗಿ ಸಮಸ್ತರಂನ ಕರೆಸಿ
ಪೇಟೆ ಹನುಮಂತರಾಯನ ದೇವಸ್ತಾನಕ್ಕೆ ಸತ್ಯ ಮಾಡಿಸುವ
ರೇ ಸಿರಿವಾಳದ ಸಭೆಯವರ ದಳವಾಗಿ ಚಿಕ್ಕಂಣ ಕುಮಾರ ಲಿಂಗಪ್ಪ
ಮೆದುನ ಚಿಗರಂಗಪ್ಪ ಬಾಣದಪುರದ ಕೆಂಪಯ್ಯ ಅಳಿಯ ನೆಲ್ಲೀ
ಕಟ್ಟೆ ಕೆಂಚಯ್ಯ ಜೋಗಂಣ ಕುಲೀಕಾರ ಕಡಜ ಚಿಕ್ಕಪ್ಪ ಬಿಳಿ
ಚೊಡ ತಿಗಳಯ್ಯ ತಿಗಳ ಮತ್ತೇಗೌಡ ಬೊಮ್ಮಕಟ್ಟೆ ಕೆಂಚಯ್ಯ
ಪುಲನಾರಾಧ್ಯ ವಲಕಯ್ಯ ಸೊಂಡೂರ ಲಕ್ಷ್ಮಯ್ಯ ಅಸಗೋ
ಡು ಬಕ್ಕಸದ ತಿಮ್ಮಪ್ಪ ತಿರುಕನಾಯಕನ ತಿಮ್ಮಯ್ಯ ಗವಿಯಪ್ಪ
ನ ಮಗ ಕರಿಯಂಣ ಸಮಾಜೀಕರು ಗುಂಟನೂರ ಮಲ್ಲಪ್ಪ
ಗರಜೀರಾಯನ ಕೆಂಚಪ್ಪ ಆನಂತಯ್ಯ ದೇವರಾಯ
ಕೃಷ್ಣಪ್ಪ ಉಗ್ರಾಣದ ರಂಗಪ್ಪ ಕಂದಾಚಾರದ ಶಾನಭೋಗ ಕೊ
ಡನೂರ ಯಂಕಪ್ಪ ಗುಂಟನೂರ ಸೂರಪ್ಪ ಮಹನಾಡಿನ ಗು
ರಸ್ತ ಪರಿಮಳದ ಅಯ್ಯಂಣ ಗೊಗ್ಗರಿ ಹರುಗಪ್ಪ ಉರಗಟ್ಟ
ಲಿಂಗಪ್ಪ ಮೀಟಿ ಸೂರಪ್ಪ ಆನೇಕೊಂಡದ ನೌಗೀ ಸಿದ್ದಯ್ಯ
ಶಿಕಾರಯ್ಯ ಕೆಲಸಿ ಬೇತೂರ ದೊಡ್ಡಯ್ಯ ಹುಚ್ಚ ಬೇಗಾರಿ ಬೂ
ದಿಜೋಗಿ ಮುಂತಾದ ಸಮಸ್ತರನ್ನು ದೇವಸ್ಥಾನಕ್ಕೆ ಕರಸಿ ಸಮಸ್ಥರು
ಕೂತು ದೇವರ ಪೂಜೇ ಮಾಡಿಸಿ ಉಕ್ಕಿನ ಗಟ್ಟೀ ಪೂಜೇ ಮಾಡಿಸಿ
ಕಾಸಿ ಕುರುಬರ ಬೀರದೇವರ ಪೂಜಾರಿ ಕರಿಯಂಣನ ಮಗ ನಾಗೈ
ಯ್ಯಗೆ ನೀರನೆರಸಿ | ಮಡಿ ಹೊದಿಕೆ ಹೊದಿಸಿ ದೇವರಗೆ ಯಿದರಾ
ಗಿ ನಿಲ್ಲಿಸಿ ಏಳುಮಂಡಲವ ಬರಸಿ ನಾಗೈಯ್ಯ ಕೈಯೊಳಗೆ
ಅರಳೀ ಎಲಿ ಹಿಡಿಸಿ ಅಂಗನೂಲು ಸುತ್ತಿ ದೇವರ ಪ್ರಸಾದ ಯಿ
ರಿಸಿ ಮರ್ಗಸ್ಥಳದ ಕಂಮಾರ ತಿಮ್ಮಯ್ಯನು ಕಾದ ಗಟ್ಟಿಯ
ನ್ನು ಯಿಕ್ಕಳದಲ್ಲಿ ಯಿಡಿದು ನಾಗೈಯ್ಯ ಕೈಯೊಳಗೆ ಯಿರ
ಸಲಾಗಿ ನಾಗೈಯ್ಯ ಏಳುಮಂಡಲವ ದಾಟಿ ದೇವರಿಗೆ
ಆರತಿಯಂನ್ನೆತ್ತಿ ಗಟ್ಟಿಯನ್ನು ಕೆಳಗೆ ಹಾಕಲಾಗಿ | ಕೂತಿರು

ವ ದೈವವೆಲ್ಲಾ ನಾಗೈಯ್ಯ ಗೆದ್ದನೆಂದು ಆಡಿದರು ನಾಗೈ
ಯ್ಯನ ಕೈಯನು ಅರಳಿ ಎಲೆ ಅಂಗನೂಲು ಸುಡಲಿಲ್ಲಾ ಈ ಸಮಾ
ಚಾರವನ್ನು ರಾಮರಾಯರಿಗೆ ದೈವವೆಲ್ಲಾ ಹೇಳಲಾಗಿ ಕುರುಬರ ಗೌ
ಡ ನಾಗೈಯ್ಯಗೂ ಗೊಲ್ಲರ ಬಡಗಿರಿಯಂಣನ ಮಗ ಗಿರಿಯಂಣಗೆ
ಸಹ ಉಡಗರೆ ವೀಳ್ಯೆ ಕೊಡಿಸಿ ಡಾವಣಗೆರೇ ಗೌಡಿಕೆ ನಿಂಮ
ದೇ ಎಂದು ಬರದಿದೆ ಯಿದು ತಾಮ್ರಸಾಸನದ ಮೇಲೆ ಬರದಿರು
ತ್ತಾರೆ.

ಮಹಾರಾಜೇಸ್ರಿ ರಾಮರಾಯರ ಸ್ಯೆ
ಯಿರುತ್ತದೆ.

೩

# ಕೆಳದಿ ಅರಸರ ನ್ಯಾಯಾಡಳಿತ

**ಕೆಳದಿ ಗುಂಡಾಜೋಯಿಸ್**

ಕ್ರಿಸ್ತಶಕ ೧೪೯೯ ರಿಂದ ೧೭೬೩ರ ವರೆಗೆ ಭಾರತದಲ್ಲಿ ಜನಸಾಮಾನ್ಯರ ನೆಮ್ಮದಿಯನ್ನು ಧ್ಯೇಯವಾಗಿಟ್ಟುಕೊಂಡು, ಆಡಳಿತ ನಡೆಸಿದ ಕೆಳದಿ ಅರಸರ ಇತಿಹಾಸವು ಈಗಿನ ಪೀಳಿಗೆಗೆ ಮಾದರಿಯಾದುದು; ವಿಜಯನಗರದ 'ಪೂರ್ವಮರ್ಯಾದೆ'[೧] ಗನುಗುಣವಾಗಿ ಆರ್ಥಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕವಾಗಿ ಕೆಳದಿ ಅರಸರ ಕೊಡುಗೆ ಆದರ್ಶಪ್ರಾಯದುದು. ಕೆಳದಿನೃಪವಿಜಯ ಕೃತಿಕಾರ ಕವಿ ಲಿಂಗಣ್ಣನು ಹೀಗೆ ಹೇಳುತ್ತಾನೆ:

ಪುಸಿ ಠಕ್ಕು ಠೌಳಿ ಚೌರ್ಯಂ
ಪಿಸುಣನ್ಯಾಯಂ ವಿರೋಧಮಪಹೃತಿ ಭಯಮು
ಬ್ಬಸ ಮೋಸ ಪಾದರಂಗಳ
ಪೆಸರುಸಿರಲಿಕ್ಕಿಲ್ಲಮೆನಿಸಿ ಪೊರೆದಂ ಧರೆಯಂ.[೨]

ಇದರ ಸಮರ್ಥನೆಯನ್ನು ಈ ಕೆಳಗಿನ ವಿದೇಶೀ ಆಕರಗಳು ಹೀಗೆ ಉದ್ಗರಿಸಿವೆ :

"The subjects of this country observe the laws so well, that Robbery or Murder are hardly heard of among them.[೩] About the Law abiding habits of the people of KELADI rulers John Fryer says: They have well constituted laws and observe them obediently.[೪] Mr.Stoakes in his Survey of Nagar Division remarks about the nature of the people of KELADI State thus-" I have no where in India seen so much honesty and veracity as among the country people of Nagara(Capital of KELADI). The ryots of Nagara have always prided themselves on their nationality."[೫]

**ಆಕರಗಳು**

ಕೆಳದಿ ಅರಸರ ಕಾಲದ ನ್ಯಾಯಾಡಳಿತವನ್ನು ಕುರಿತಂತೆ ಉಪಲಬ್ಧವಿರುವ ಈ ಕೆಳಗಿನ ಮೂಲಸಾಮಗ್ರಿಗಳು ಮಧ್ಯಕಾಲೀನಯುಗದ ಇತಿಹಾಸದಲ್ಲಿ ಬೆಳಕನ್ನು ಬೀರಲು ಸಹಕಾರಿಯಾಗಿವೆ :

I. ದೇಶೀಯ ಆಕರಗಳಲ್ಲಿ

೧. ಕೆಳದಿ ಬಸವರಾಜಕೃತ ಶಿವತತ್ವರತ್ನಾಕರ

೨. ಕೆಳದಿ ಲಿಂಗಣ್ಣಕವಿಯ ಕೆಳದಿನೃಪವಿಜಯ

II. ಶಾಸನಗಳಲ್ಲಿ

ಅ. E.C., Vol VIII ಲ್ಯೂಯಿ ರೈಸ್

ಆ. E.C., Vol VII ಲ್ಯೂಯಿ ರೈಸ್

ಇ. M.A.R., ೧೯೩೦

ಈ. M.A.R., ೧೯೧೬

ಉ. A.R.S.I.E., ೧೯೫೨-೫೩

III.ಕನ್ನಡ ಮೋಡಿಲಿಪಿಯಲ್ಲಿರುವ ಅಪ್ರಕಟಿತ ಚಾರಿತ್ರಿಕ ದಾಖಲೆಗಳು

IV. ವಿದೇಶೀಯ ಬರಹಗಳು

ಅ. Fryer : A New Account

ಆ. Hamilton : A New Account

ಇ. Cartazyes (ಕಾರ್ಟೆಜಸ್, ಡಾ.ಬಿ.ಎಸ್.ಶಾಸ್ತ್ರಿ, ಗೋವಾ)

ಈ. ಕೆಳದಿ ಇತಿಹಾಸೋತ್ತರ ಕಾಲದ ಬ್ರಿಟಿಷರ ದಾಖಲಾತಿ ಸಂಗ್ರಹಗಳು.

ಮುಂದಿನ ಸಂಶೋಧನೆಗಳಲ್ಲಿ ಆಕರಗಳು ಉಪಲಬ್ಧವಾಗುವವರೆಗೂ ಸದ್ಯಕ್ಕೆ ಈ ಸಾಮಗ್ರಿಗಳಿಂದ ಕೆಳದಿ ನ್ಯಾಯಾಡಳಿತದ ಇತಿಹಾಸವನ್ನು ರೂಪಿಸಬಹುದಾಗಿದೆ. ಪ್ರಕೃತ ಇವುಗಳ ಹಿನ್ನೆಲೆಯಲ್ಲಿ ಇವುಗಳನ್ನು ನಿರೂಪಿಸಿ ಚರ್ಚಿಸಲಾಗಿದೆ.

**ಕೆಳದಿಯ ನ್ಯಾಯಾಂಗ ಪದ್ಧತಿ**

ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಪ್ರಜಾಸತ್ತೆಯ ಸೌಧಕ್ಕೆ ನಾಲ್ಕು ಸ್ತಂಭಗಳು ಆಧಾರಭೂತವಾಗಿವೆ. ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ, ಪತ್ರಿಕಾರಂಗ. ಇವುಗಳಲ್ಲಿ ನ್ಯಾಯಾಂಗವೇ ಪ್ರಬಲವಾದ ಸ್ತಂಭ. ಅದು ಕುಸಿದರೆ ಜನರ ನೆಮ್ಮದಿಯೇ ಕುಸಿದುಬೀಳುತ್ತದೆ. ಎಲ್ಲಿ, ಯಾವ ರಾಜ್ಯದಲ್ಲಿ ನಿಷ್ಪಕ್ಷಪಾತವಾಗಿ, ನ್ಯಾಯಾಂಗ ಕಾರ್ಯ ನಿರ್ವಹಿಸುತ್ತದೆಯೋ ಆ ರಾಜ್ಯ ಭದ್ರವಾಗಿಯೂ ನೆಮ್ಮದಿಯಿಂದಲೂ ಕೂಡಿರುತ್ತದೆ. ಈ ಧೋರಣೆಯಿಂದಲೇ ಜನಸಾಮಾನ್ಯರ ಹಿತಕ್ಕೆ ಧಕ್ಕೆಬಾರದಂತೆ ಕೆಳದಿ ದೊರೆಗಳು ನ್ಯಾಯನಿರ್ವಹಣೆಯಲ್ಲಿ ಉಜ್ವಲ ಪರಂಪರೆಯನ್ನು ಹೊಂದಿದ್ದುದು ಇತಿಹಾಸದಲ್ಲಿ ವ್ಯಕ್ತಪಡುತ್ತದೆ. ಕೆಳದಿ ಆಡಳಿತದ ನ್ಯಾಯಾಂಗ ಧೋರಣೆಯನ್ನು ಈ ಕೆಳಕಂಡಂತೆ ವಿಭಜಿಸಬಹುದು :

I ೧. ವಿಜಯನಗರಪೂರ್ವ ಕೆಳದಿ

೨. ವಿಜಯನಗರೋತ್ತರ ಕೆಳದಿ ನ್ಯಾಯಾಡಳಿತ

೩. ಕೆಳದಿ ಇತಿಹಾಸೋತ್ತರ ಕಾಲದ ನ್ಯಾಯಾಡಳಿತ

II ಕೆಳದಿ ಆಡಳಿತ ನ್ಯಾಯಾಂಗಗಳು

ಅ. ಶಿವತತ್ವರತ್ನಾಕರದಲ್ಲಿ ಕಂಡಂತೆ-

೧. ವ್ಯವಹಾರ (Legal Procedure)

೨. ಋಣದಾನ (Recovery of Debts)

೩. ಉಪನಿಧಿ (Deposit)

೪. ದಾಯವಿಭಾಗ (Partition of Heritage)

೫. ಸೀಮಾವಿವಾದ (Boundary Dispute)

೬. ವಾಕ್ಪಾರುಷ್ಯ (Abuse etc)

೭. ದಂಡಪಾರುಷ್ಯ (Assault)

೮. ಸಾಹಸ (Crimes of Violence)

೯. ಸ್ತೇಯ (Theft)

೧೦. ಸ್ತ್ರೀಸಂಗ್ರಹಣ (Adultery)

ಆ. ಇತಿಹಾಸದಲ್ಲಿ ಕಂಡಂತೆ-

೧. ಭೂನ್ಯಾಯ (ಜನಸಾಮಾನ್ಯ)

೨. ಅಧೀನ ಪಾಳೆಯಪಟ್ಟು ನ್ಯಾಯ

೩. ವ್ಯವಹಾರ ನ್ಯಾಯ

೪. ದಂಡ ವಿಭಾಗ

೫. ಭ್ರಷ್ಟಾಚಾರ

ಇ. ಅಂತರರಾಷ್ಟ್ರೀಯ ನ್ಯಾಯಾಂಗಗಳು.

ಕ್ರಿ.ಶ.೧೫೬೫ರಲ್ಲಿ ಜರುಗಿದ ರಕ್ಕಸಗಿ ತಂಗಡಗಿ ಘೋರಯುದ್ಧದ ಪರಿಣಾಮದಿಂದ ಹಾಗೂ ಗೋವಾದಲ್ಲಿ ಜರುಗಿದ ಪೋರ್ಚುಗೀಸ್ ದುರಾಡಳಿತಗಳಿಂದ ಕಂಗೆಟ್ಟ ಅಧಿಕಾರಿ ವರ್ಗದವರೆಲ್ಲರೂ, ಕೆಳದಿ ಅರಸರ ಆಶ್ರಯ ಹೊಂದಿ ವಿವಿಧ ಉದ್ಯೋಗಗಳಲ್ಲಿ ತೊಡಗಿಕೊಂಡಿದ್ದು ಸರಿಯಷ್ಟೆ. ನ್ಯಾಯಾಡಳಿತ ಕುರಿತಂತೆ ಈ ಕಾಲದ ಸಮಕಾಲೀನ ಆಕರಗಳು ಅಲಭ್ಯವಾಗಿದ್ದು, ಸ್ಪಷ್ಟ ನಿರೂಪಣೆ ಅಸಾಧ್ಯವಾಗಿದೆ. ಬಸವರಾಜನ ಶಿವತತ್ವ ರತ್ನಾಕರದಲ್ಲಿ, ಇಮ್ಮಡಿ ವೆಂಕಟಪ್ಪನಾಯಕನು (೧೬೬೧-೧೬೬೨) ಭದ್ರಪ್ಪನಾಯಕನಿಗೆ (೧೬೬೨-೧೬೬೪) ನ್ಯಾಯಾಲಯದ ವ್ಯವಹಾರ ಕುರಿತು ಬೋಧನೆ ಮಾಡಿದುದು ಹೀಗೆ :

ವ್ಯವಹಾರಾನ್ನೃಪಃ ಪಶ್ಯೇದ್ವಿದ್ವದ್ಭಿಃ ಬ್ರಾಹ್ಮಣೈಃ ಸಹ |
ಧರ್ಮಶಾಸ್ತ್ರಾನುಸಾರೇಣ ಕ್ರೋಧಲೋಭವಿವರ್ಜಿತಃ ||

ಈರೀತಿ ವ್ಯವಹಾರದಿಂದ ಆರಂಭಿಸಿ, ನ್ಯಾಯನಿರ್ಣಯ ಸಭ್ಯರ ಸಲಹೆಗಾರರು (ಶಿ.ತ.ರ. VIII/೧/೧೯), ವ್ಯವಹಾರಪದ (ಶಿ.ತ.ರ. VIII/೧/೨೨), ಆಪಾದಿತನ ಆಪಾದನೆಯ ಅಭಿಯೋಗ (ಶಿ.ತ.ರ. VIII/೧/೨೫), ಅಭಿಯೋಗ ಹೂಡಿದಾಗ ಮಾಡಿದ ಆಪಾದನೆ

ಬರಹದಲ್ಲಿ ದಾಖಲು (ಶಿ.ತ.ರ.VIII/೧/೨೬), ಕೊಲೆ ಇತ್ಯಾದಿಗಳ ಆರೋಪ-ಪ್ರತ್ಯಾರೋಪ ವಿವರಣೆಗಳು, ಸ್ತ್ರೀಯರು ತಂದ ವಿವಾದಗಳು ಇತ್ಯಾದಿ (ಅದೇ, ೨೭ ರಿಂದ ೫೦ರ ವರೆಗೆ), ಸಾಕ್ಷಿಗಳ ವಿಚಾರಗಳು (ಅದೇ, ೮೮ ರಿಂದ ೧೦೨ರ ವರೆಗೆ), ಸುಳ್ಳುಸಾಕ್ಷಿ, ಸಾಲಗಳು, ದಾಖಲೆಪತ್ರಗಳು (ಅದೇ, ೧೦೩-೧೧೩) ಅಪರಾಧದ ಸಂದೇಹದಲ್ಲಿ ನಿರ್ಣಯದ ಬಗ್ಗೆ ಅಗ್ನಿಪರೀಕ್ಷೆಗಳು. ಇದಕ್ಕೆ ದಿವ್ಯ(divine proof)ವೆಂದು ಹೆಸರು (ಅದೇ, ೧೧೪-೧೩೪). ಇದೇ ರೀತಿಯಲ್ಲಿ ಋಣನಾದ, ಮಧ್ಯಸ್ಥಿಕೆ ಪಂಚಾಯ್ತಿಗಳು, ಉಪನಿಧಿ (ಮುದ್ರಾಭಂಗಗಳು), ದಾಯಾ ವಿಭಾಗಗಳು, ಗಡಿವಿವಾದ ಪ್ರಕರಣಗಳು, ವಾಕ್ಪರುಷ್ಯ, ದಂಡಪಾರುಷ್ಯ (೧೮೫-೧೮೬), ಅಪಹರಣ, ಮೋಸ, ವಂಚನೆ, ಜೂಜು ಮುಂತಾದ ನ್ಯಾಯವಿವರಣೆಯ ಸಂಗತಿಗಳನ್ನು ಎಂಟನೇ ಕಲ್ಲೋಲ, ಒಂದನೇ ತರಂಗದಲ್ಲಿ ಉಲ್ಲೇಖಿಸಿರುವನು.[೬]

### ನ್ಯಾಯಾಡಳಿತ ಕುರಿತು ಕೆಳದಿನೃಪವಿಜಯ

ಕೆಳದಿ ದೊರೆಗಳು ವಿಜಯನಗರ ಹಾಗೂ ಹಿಂದೂರಾಜ್ಯಗಳಲ್ಲಿ ಪ್ರಚಲಿತವಿದ್ದ 'ಪೂರ್ವಮರ್ಯಾದೆ' ಪದ್ಧತಿಗನುಸಾರವಾಗಿ ನ್ಯಾಯನಿರ್ಣಯ ಮಾಡುತ್ತಿದ್ದರು. ಪ್ರಸಿದ್ಧನಾದ ಕೆಳದಿ ಶಿವಪ್ಪನಾಯಕನ ನ್ಯಾಯಪಾಲನೆಯನ್ನು ಕವಿ ಲಿಂಗಣ್ಣನು ತನ್ನ ಕೆಳದಿ ನೃಪವಿಜಯದಲ್ಲಿ ಈ ರೀತಿ ಉಲ್ಲೇಖಿಸಿದ್ದಾನೆ[೭] :

ಪುಸಿ ಠಕ್ಕು ಠೌಳಿ ಚೌರ್ಯಂ
ಪಿಸುಣನ್ಯಾಯಂ ವಿರೋಧಮಪಹೃತಿ ಭಯಮು |
ಬ್ಬಸ ಮೋಸ ಪಾದರಂಗಳ
ಪೆಸರುಸಿರಲಿಕ್ಕಿಲ್ಲಮೆನಿಸಿ ಪೊರೆದಂ ಧರೆಯಂ ||

ಕರಣಿಕೆಯನಿತ್ತು ಸಿಸ್ತಿನ
ಬರಹಗಳಿಂದಾಯಬೀಯಮಂ ಬಣಿತೆಗೆ ತಂ |
ದುರುದುರ್ವ್ಯಯಂಗಳಂ ತಾಂ
ವಿರಚಿಸಿದಾರ್ಜಿಸಿದನೊಪ್ಪುವಗಣಿತಧನಮಂ ||

ದುಷ್ಟಜನರ್ಕಳ ಶಿಕ್ಷಿಸಿ
ಶಿಷ್ಟರನುರೆ ಪೊರೆದು ಸಂತತಂ ಶಿವಪೂಜಾ |
ನಿಷ್ಠನೆಂದೆನಿಸಿ ಲೋಗರ
ರಿಷ್ಟಗಳಂ ತವಿಸಿ ಪೊಡವಿಯಂ ಪಾಲಿಸಿದಂ ||

ಪರಿವಹಿಯಂ ನಿಲಿಸಿದನಾ
ದೊರೆ ತನ್ನಯ ಮೇಲಣಾಣೆ ಘೊಷಣೆಯಿಂದಂ |
ಪರವಸ್ತುವನೊಯ್ದಡಗಿದ
ನರಿಯಂ ಪಿಡಿತರಿಸಿ ಶಾಸ್ತಿಯಂ ಮಾಡಿಸಿದಂ ||

## ಶಾಸನಗಳಲ್ಲಿ ಕಂಡಂತೆ ಕೆಳದಿ ನ್ಯಾಯಾಡಳಿತ

ವ್ಯವಹಾರ ನ್ಯಾಯಗಳಿಗೆ ಸಂಬಂಧಪಟ್ಟಂತೆ ಶಾಸನಗಳಲ್ಲಿ ಮಾಹಿತಿಗಳು ಉಪಲಬ್ಧವಿವೆ. ವಿಶೇಷ ಸಂದರ್ಭಗಳಲ್ಲಿ ಕೆಳದಿ ದೊರೆಗಳು ನಿಯಮಗಳನ್ನು ರಚಿಸಿಕೊಳ್ಳುವ ಅಧಿಕಾರವನ್ನು ಹೊಂದಿದ್ದರು. ಕ್ರಿ.ಶ.೧೬೫೫ರಲ್ಲಿ ಪ್ರಸಿದ್ಧ ಶಿವಪ್ಪನಾಯಕನು ಹೊಸಂಗಡಿಯಲ್ಲಿ ಚೆನ್ನಣ್ಣನು ಕಟ್ಟಿಸಿದ ಮಹತ್ತುಮಠಕ್ಕೆ ಮಠಾಧಿಪತಿಗಳ ನೇಮಕದಲ್ಲಿ ಕೆಲವು ಬುದ್ಧಿವಂತರು ಮತ್ತು ಬಣಕಾರರ ಸಲಹೆ ಕೇಳಿ ತೀರ್ಮಾನ ಕೈಗೊಂಡಿರುವುದು ಕಂಡುಬರುತ್ತದೆ.[೮] ೧೫೦೬ರಲ್ಲಿ ಚೌಡಗೌಡನು ಕಲ್ಲುಕುಟಿಗ ವೀರಪ್ಪನ ಮಕ್ಕಳಿಗೆ ಭೂದಾನವಿತ್ತಿದ್ದು, ಈ ಆಸ್ತಿಯನ್ನು ಗಂಡಸರು ಹೆಣ್ಣುಮಕ್ಕಳ ಮುಖಾಂತರ ವಾರಸು ಪಡೆಯಬೇಕೆಂದು ಹೇಳಿದೆ. ಹಿಂದೂ ವಾರಸಾ ಕಾಯಿದೆ ಪ್ರಕಾರ ಅಳಿಯ ಸಂತಾನ, ಮರ್ಮಕುಟ್ಟಿಯ ಅಥವಾ ನಂಬೂದಿರಿ ವಾರಸಾ ಕಾಯಿದೆಯು ಆಗ ಪ್ರಚಲಿತವಿತ್ತೆಂದು ತೋರುತ್ತದೆ.[೯] ವಾರಸು ದಾರರಿಲ್ಲದ ಆಸ್ತಿವಂತರು ಗತಿಸಿದಲ್ಲಿ ಅದು ಕೆಳದಿ ಸರಕಾರಕ್ಕೆ ಸೇರಿದ್ದೆಂದು ಶಾಸನವೊಂದು ತಿಳಿಸುತ್ತದೆ. ೧೬೪೦ರಲ್ಲಿ ವೀರಭದ್ರನಾಯಕನು ನೀಡಿದ ಭೂದಾನವು ಅರವದಸೀಮೆ ನಲ್ಲುಂಡೆ ಗ್ರಾಮದ ಗಣೇಶ ದೀಕ್ಷಿತರು ವಾರಸುದಾರರಿಲ್ಲದೆ ಮೃತಪಟ್ಟಿದ್ದರಿಂದ ಅವರ ಆಸ್ತಿಯು ಸರಕಾರಕ್ಕೆ ಸೇರಿರುವುದು ಕಂಡುಬರುತ್ತದೆ.[೧೦] ನ್ಯಾಯತೀರ್ಮಾನದಲ್ಲಿ ಅಡ್ಡಿಯುಂಟು ಮಾಡುವವರಿಗೆ ಕಠಿಣಶಿಕ್ಷೆ ವಿಧಿಸಿರುವುದೂ ಶಾಸನದಲ್ಲಿ ಉಲ್ಲೇಖಗೊಂಡಿದೆ. ಮಂಜೆ ಬರಮನು ಪುಂಡನಾಗಿ ಜನರನ್ನು ಹಿಂಸಿಸುತ್ತಿದ್ದಾಗ, ಕೋಡಿಹಳ್ಳಿ ಬರಮನು ಅವನ ಶಿರಚ್ಛೇದನ ಮಾಡಿದ್ದಕ್ಕೆ ದೊರೆ ಸೋಮಶೇಖರನಾಯಕನು ಅವನಿಗೆ ಬಹುಮಾನವಾಗಿ ಭೂದಾನವಿತ್ತನು. ಇದು ೧೬೮೫ರಲ್ಲಿ ಇಂತಹದೇ ಘಟನೆಯೊಂದು ಇಂಗ್ಲೆಂಡಿನಲ್ಲಿ ಎರಡನೇ ಚಾರ್ಲ್ಸ್ ದೊರೆ ತೀರಿಕೊಂಡಾಗ, ಮಾನ್‌ಮತನ್ ಡ್ಯೂಕ್ ಜೇಮ್ಸ್ ಸ್ಕಾಟನು ದಂಗೆ ಎದ್ದು ಇಂಗ್ಲೆಂಡಿನ ಸಿಂಹಾಸನವೇರಲು ಪ್ರಯತ್ನಿಸಿದನು. "ಎನ್‌ಯಾಕ್ಟ್ ಆಫ್ ಅಟೆಯಿಂಡರ್" ಶಾಸನ ರಚಿಸಿಕೊಂಡು ವಿಚಾರಣೆಯಿಲ್ಲದೆ ಮರಣದಂಡನೆ ವಿಧಿಸಿ ಶಿರಚ್ಛೇದನ ಮಾಡಿದ ಘಟನೆಯಂತಾಗಿದೆ.[೧೦]

೧೬೪೬ರಲ್ಲಿ ವೀರಭದ್ರನಾಯಕನು ಮಾಲ್ವೆಮಠದಲ್ಲಿ ನಡೆದ ಒಳಜಗಳದಲ್ಲಿ ತೊಂದರೆಯನ್ನು ಬಗೆಹರಿಸಿ ತಪ್ಪಿತಸ್ಥರಿಗೆ ಸರಿಯಾದ ಶಿಕ್ಷೆಯಾಗುವಂತೆ ನೋಡಿಕೊಂಡನು.[೧೧] ಕೂಡ್ಲಿಮಠಕ್ಕೆ ಜನರಿಂದ ಸರಿಯಾದ ಗೇಣಿ ಬರುತ್ತಿಲ್ಲವೆಂದು ಮಠದ ಪಾರುಪತ್ಯೆಗಾರನು ಶಿವಪ್ಪನಾಯಕನಲ್ಲಿ ಪ್ರಾರ್ಥಿಸಿಕೊಂಡಾಗ, ಅರಸನು ಅವರನ್ನು ಕರೆಸಿ ಸಮಸ್ಯೆಗಳನ್ನು ಬಗೆಹರಿಸಿದನು.[೧೨] ಇದೇರೀತಿ ಶೃಂಗೇರಿಮಠಕ್ಕೆ ಬರಬೇಕಾದ ಹಣವನ್ನೂ ಕೊಡಿಸಿದನು.[೧೩] ಶೃಂಗೇರಿಮಠದ ಅಧಿಕಾರಿಗಳ ಭ್ರಷ್ಟಾಚಾರಗಳನ್ನು ಈ ದೊರೆಯು ತಾನೇ ವಿಚಾರಣೆ ಕೈಗೊಂಡು, ಅಧಿಕಾರಿಗಳು ಧರ್ಮದಿಂದ ಸರಿಯಾಗಿ ವರ್ತಿಸದಿದ್ದಲ್ಲಿ ಶಿಕ್ಷಿಸುವುದಾಗಿ ಎಚ್ಚರಿಸಿದನು. ಇದರಿಂದ ತಪ್ಪುಮಾಡಿದವರಿಗೆ ಮಾತ್ರವಲ್ಲದೆ ಕೆಲಸದಲ್ಲಿ ಆಲಸ್ಯ

ತೋರಿದವರಿಗೂ ಶಿಕ್ಷೆಯಾಗುತ್ತಿದ್ದುದು ವ್ಯಕ್ತಪಡುತ್ತದೆ.[೧೪] ಈಗಿನ ಪರಿಸ್ಥಿತಿಗೆ ಆಡಳಿತ ಪಟುಗಳಿಗೆ ಕಣ್ತೆರೆಸಲು ಮಾದರಿಯಾಗಿದೆ. ಕೆಳದಿರಾಜ್ಯದಲ್ಲಿ ಪ್ರವಾಸಮಾಡಿದ ವಿದೇಶೀ ಪ್ರವಾಸಿ ಅಲೆಗ್ಝಾಂಡರ್ ಹ್ಯಾಮಿಲ್‌ಟನ್ನನು ತನ್ನ ಪ್ರವಾಸೀಕಥನದಲ್ಲಿ-

ಕೆಳದಿರಾಜ್ಯದಲ್ಲಿ ದರೋಡೆ, ಕೊಲೆ, ಸುಲಿಗೆಗಳನ್ನು ಕೇಳಿಯೇ ಇಲ್ಲ; ಜನರ ಕಾನೂನುಪಾಲನೆ ಮಾದರಿಯಾದುದು.... ಕೆಳದಿರಾಜ್ಯದ ಹೆದ್ದಾರಿಯಲ್ಲಿ ಒಬ್ಬ ಅಪರಿಚಿತ ಬೇಕಾದಷ್ಟು ಹಣ ಇಟ್ಟುಕೊಂಡು ರಸ್ತೆಬದಿಯಲ್ಲಿ ಮರದ ನೆರಳಿನಲ್ಲಿ ಮಲಗಬಹುದು; ಅವನ ಹಣವನ್ನು ಯಾರೂ ದೋಚಲಾರರೆಂದೂ, ಅವನಿಗೆ ಹಿಂಸಿಸಲಾರರೆಂದೂ, ಒಂದು ವೇಳೆ ಈರೀತಿ ಯಾರಾದರೂ ಮಾಡಿದಲ್ಲಿ, ಅಕ್ಕಪಕ್ಕದಲ್ಲಿ ವಾಸಮಾಡುವ ಜನರಿಗೆ ಶಿಕ್ಷೆ ವಿಧಿಸುತ್ತಿದ್ದರಲ್ಲದೆ, ಆ ಹಣವನ್ನು ಅವನಿಗೆ ಭರ್ತಿಮಾಡಬೇಕಾಗುತ್ತಿತ್ತು ಎಂದೂ ಶ್ಲಾಘಿಸುತ್ತಾ ಕೊಂಡಾಡಿದ್ದಾನೆ.

### ಚಾರಿತ್ರಿಕ ದಾಖಲೆಯಲ್ಲಿ ಭೂನ್ಯಾಯಗಳು

ಕ್ರಿ.ಶ.೧೭೦೦ರಲ್ಲಿ ಕೆಳದಿ ಹಿರಿಯಬಸಪ್ಪನಾಯಕನ ಕಾಲದ ಚಾರಿತ್ರಿಕ ದಾಖಲೆಯೊಂದು ಬೊಕ್ಕಸದ ಕೆಂಪುಸಿದ್ದಬಸಯ್ಯನವರಿಗೆ[೧೬] ಕುಬಟೂರು ನಾಡಿಗ ಸಣ್ಣಯ್ಯದೇಸಾಯಿ ಹಾಗೂ ಬೊಮ್ಮಯ್ಯನವರು ತಮ್ಮ ತಮ್ಮಲ್ಲಿ ಉದ್ಭವಿಸಿದ ಭೂವಿವಾದ ಬಗೆಹರಿಸಲು ಪ್ರಾರ್ಥಿಸಿದ್ದರಿಂದ ಕೆಳದಿ ಆಡಳಿತದ ಖಜಾನೆ ಅಧಿಕಾರಿಯ ಆದೇಶದ ಮೇರೆಗೆ ಕುಬಟೂರಿನಲ್ಲಿರುವ ಬುದ್ಧಿವಂತರೆಲ್ಲರನ್ನು (ಹೆಸರುಗಳ ಉಲ್ಲೇಖಗಳಿವೆ) ರಾಜಧಾನಿಗೆ ಕರೆಸಿಕೊಂಡು ತೀರ್ಮಾನಿಸಿದ ಅಪೂರ್ವ ಸಂಗತಿಗಳನ್ನೊಳಗೊಂಡಿದೆ. ಭೂನ್ಯಾಯ ಮಂಡಳಿಗಳ ಕಾರ್ಯನಿರ್ವಹಣೆಯನ್ನು ಕುರಿತು ವಿಶಿಷ್ಟ ಮಾಹಿತಿಗಳೀದ ಕೂಡಿದ ಈ ಚಾರಿತ್ರಿಕ ದಾಖಲೆಯು ಕುಬಟೂರು ನಾಡಿಗ ಶಂಕರಪ್ಪನವರ ಮನೆಯಲ್ಲಿ ನನ್ನ ಸಮೀಕ್ಷೆಯಲ್ಲಿ ಲಭಿಸಿತು.[೧೭] ಕೆಳದಿ ಅರಸರ ಶಿಲಾಶಾಸನವೊಂದು ಕುಬಟೂರು ಆನವಟ್ಟಿ ದೇವಾಲಯದಲ್ಲಿದೆ.

### ದಾಖಲೆಯ ಪಠ್ಯಭಾಗ

ಮುಂಭಾಗ-

೧ ವಿಕ್ರಮಸಂವತ್ಸರದ ಫಾಲ್ಗುಣ ಶು ೫ಲು ಶ್ರೀಮ
೨ x ಬೊಕ್ಕಸದ ಕೆಂಪುಸಿದಬಸವಯ್ಯನವರಿಗೆ ಕು
೩ ಪಟೂರ ನಾಡಿಗ ಪಂಣ್ಯೆಯದೇಶಾಯಿ ಬೊಮ್ಮೆಯ್ಯ ಸಹಾ
೪ ಅರ್ರಿಕೆ ಮಾಡಿಕೊಂಡ ವಿವರಾ ನಮಗೆ ಕುಪಟೂರ ಗ್ರಾ
೫ ಮದಲ್ಲು ನಿವು ನಮಗೆ ಕೊಟ್ಟುಯಿರುವ ವರ್ತನೆ
೬ ಭೂಮಿಯಲ್ಲು ಹೆಚ್ಚುತ್ತ ಗುಮಾನಿ ಕಾಣುತ್ತದೆ ಯೀ
೭ ಭೂಮಿ ನಮಗೆ ವಿವರ ಮಾಡ್ಸಿಕೊಡ್ಸಿಯಮದಾಗಿ
೮ ಹೆಳಿಕೊಂಡಲ್ಲಿ ರಾ|ಯವರ್ರು ಹೆಳಿದು | ಆ ಸ್ತಳದ

೯ ಶಾನಬೊವ ಚಿಕ್ಕರಸಯ್ಯ ಸ್ತಳದ ಬುಧಿವಂತ್ತರ್ರು
೧೦ ಮುದಂಣನ ಮರ್‍ರಿಭಂಮಂಣ | ಧರಣಸೆಟ್ಟಿ ವಿರಪ್ಪ
೧೧ ಹೊಟ್ಟೆ ಸದಾನಂಣ‍ನ ಬಿಂನಿಹಳಿ ತ್ತಿಂಮಂಣ ವಡರ
೧೨ ತ್ತಿಂಮ ಮುಂತ್ತಾದವರಂನು ಬಿದರೂರಿಗೆ ಕರಶಿ
೧೩ ಕೊಂಡು ಯಿವರಂನ್ನು ಕೆಳಿದಲ್ಲಿ ನಾಲು ಎಷ್ಟು
೧೪ ಯಿದಾಗ್ಯೂ ಬಾಯಿಮಾತ್ತಿನವರು ಯಿ ಮಂತ್ತು ಯೆನು ಶಾನುಭೊವ ಚಿಕ್ಕರಸೈಯನೆ ದೆವರ್‍ರಿಗೆ
೧೫ ಅರ್‍ರಿಕೆ ಮಾಡಿಕೊಂಡಲ್ಲಿ ಸಕಲಲು ಶ್ರುತ್ತವಾಧಿತು
೧೬ ಯಂಬದಾಗಿ ಹೆಳಿದಲ್ಲಿ| ಅದೆ ಪ್ರಕಾರಕ್ಕೆ ಬುಧಿ
೧೭ ವಂತ್ತರು ಯೆನು ಹೆಳುತ್ತಾರೆ ಅದಮಾತ್ತಿಗೆ ಯಿ ನಾಡಿ
೧೮ ಗರ್‍ರು ದೆಶಾಯಿಗಳು ಯಾವ ಯಾವ ಭೂಮಿ ಉಂ
೧೯ ಡು ಬರುತ್ತಾರೆ ಹೆಚ್ಚು ಯಾವುದು ಕಡಮೆ ಯಾ
೨೦ ವದು ಯಿದರ ವಿವರವ ನಿನು ಗ್ರಾಮದ ಶಾನುಬೊವ
೨೧ ಸದ್ರಿಯಪ್ಪು ಬರಶಿಕೊಡು ಯೆಂಬುದಾಗಿ ಹೆಳಿ

**ಹಿಂಭಾಗ-**

(ಈ ಭಾಗದಲ್ಲಿ ಲಿಪಿಗಳು ತ್ರುಟಿತ)

೧ ಸೈಯನು ಬರಶಿಕೊಟ್ಟು
೨ ಮಾವಿನಕಬುಗೂಳೆ ಸ್ತು ೧ಕ್ಕೆ ಪೆಸುಗ ೭
೩ ಸಿಸ್ತು ೩ | ಗ ೧೧೦೬೨||೦
೪ ಸ್ತು ಗ ೧೮೩೨||ಕ್ಕೆ ನಷ್ಟ |
೫ ಗ ೪೯೨ ||..... ಧನಾ | ಗ ೧೪ಕ್ಕೆ ಪಟ್ಟೆಗ || ೨ ಉ
೬ ಬೊಹರು | ಗ ೭ ಉಭಯ್ಯಂ | ಗ ೨೧ಕ್ಕೆ ವರ್ತನೆ ಬಗ್ಯೆ
೭ ಸಲುಪದುಗ ೧೫ ಹೊಗಲಾಗಿ ಶುಭಮೆಲುವಾರಿಗ ೬
೮ ನಾಡಿಗರಿಗೆ ತಾನು ಮೂಲೆಸ್ರು ೧ರ ಸೆಸ್ತುಗ ೩
೯ ಯೀವತ್ತಿನ ಹಳಿ ಖಿಸ್ತು ಗ ೧ರ ಗ ೧||೦
೧೦ ಬೂಕೆರೆ ವಳಗಣ ತ್ತಿಮ್ಮರಸಯ್ಯ ಕಪ್ಪೆಗೆರ್ತೆಸ್ತ ೧ರ
೧೧ ಸಿಸ್ತು | ಗ ೧೯೨||೦ ಅಂಮ್ರೂ ಗ ೧೪||೨||೦ಕ್ಕೆ
೧೨ ನಷ್ಟ ಗ ೪||೨||೦ ಹೊಗಲಾಗಿ ಶುಧಸಾಗ ಗಾಂಕ್ಕೆ
೧೩ ವರ್‍ರೆಗ ||೦ ಲ್ಲು | ೧೫ ಉಭಯ್ಯಂ | ಗ ೧೫ಕ್ಕೆ
೧೪ ಸಲ್ಲುವ ರೂಪಾಯಿ ೨ರ ಗ ೭||೦ ಲು ಸಂದಧಾ....

ಅಂತ್ಯದಲ್ಲಿ-

೧. ಶಾಲಿವಾಹನ ಶಕವರುಷ ೧೬೨೨ನೆ ವಿಕ್ರಮ

೨. ಸಂ||ರದ ಫಾಲ್ಗುಣ ಶು ೫ ಉ

ಕೆಳದಿ ಜೋಯ್ಸರ ಮನೆತನದವರಲ್ಲಿದ್ದ ಚಾರಿತ್ರಿಕ ದಾಖಲೆ

Document No.5

**Keladi Basvappa's grant of Exchange of uttara to Kavi Linga-Bhatta**

Raudri Samvatsara Asvija Sudha 10. AD 1740 (Keladi Gunda Jois)

**Contents in brief :**

Keladi Basavappa Nayaka II granted exchange of uttara to Kavi Linga Bhatta. The exchange of uttara site was in the Sulgodu village of KELADI Sime and it was rated 45 varahas in exchange for Linga Bhatta's estate in the Apagara village. This exchange of uttara was granted to Linga Bhatta because the latter made representation to the king that his estate in Apagara village of Sirsi sime rated at 45 varahas was far off, and that another plot of land together with compensation might be granted to him in lieu of his former estate, Guruvappanavaru, the minister of the Keladi kingdom, recommended for the exchange of the uttara. Besides the piece of land as uttara, Linga Bhatta received another piece of land in the same village rated at 16 varahas 6 Hanas and 1 Haga. The king sent uligadava, Huchcha, to the village with an instruction to demarcate the boundary of the exchanged uttara land. The uligadava had to demarcate the boundary of the land by erecting Vamana Mudra stones and he had to do it in the presence of the villagers in such way that no dispute would arise in future. This document is to be recorded in the Kadata of Senabova.[20]

ವಿದೇಶೀ ದಾಖಲೆಯಲ್ಲಿ ಕೆಳದಿ ಆಡಳಿತದ ನ್ಯಾಯಗಳು

ಪೋರ್ತುಗೀಜ ರಾಯಭಾರಿ ರಾಮೂಜಿ ಶೆಣ್ಯೈ ವೆಂಕಟಪ್ಪನಾಯಕನಿಗೂ ಪೋರ್ತುಗೀಜರಿಗೂ ವಾಣಿಜ್ಯೋದ್ಯಮದ ಒಪ್ಪಂದ ಏರ್ಪಡಿಸುವ ಸಂದರ್ಭದಲ್ಲಿ, ಭ್ರಷ್ಟಾಚಾರವೊಂದು ತಲೆದೋರಿದಂತಾಯಿತು. ಮಂತ್ರಿಗಳು ಲಂಚ ಪಡೆಯುವರೆಂಬ ಸಂಗತಿಯೊಂದನ್ನು ಗೋವೆಯ ವೈಸ್‌ರಾಯಿಗೆ ವರದಿಯೂ ಹೋಯಿತು. ೫೦೦ ರಿಂದ ಒಂದು ಸಾವಿರದವರೆಗೆ ಅಶರಫಿ ಲಂಚ ಸಲ್ಲಿಸಬೇಕಾಯಿತು. ಇದನ್ನು ತಿಳಿದ ಕೆಳದಿ ಅರಸರು ನಿರ್ದಾಕ್ಷಿಣ್ಯವಾಗಿ ಅವರಿಗೆ ಶಿಕ್ಷೆನೀಡಿದುದನ್ನು Assentos IV, p.೩೩ರ ವಿದೇಶೀಯ ದಾಖಲೆಗಳಲ್ಲಿ ಕಂಡುಬಂದಿದೆ. ರಾಜ್ಯಶಾಸನದ ಕಣ್ಣುತಪ್ಪಿಸಿ ಸಚಿವರೂ ಲಂಚ ಪಡೆಯುತ್ತಿದ್ದುದನ್ನು

ಹಾಗೂ ಕಠೋರವಾಗಿ ಶಿಕ್ಷೆವಿಧಿಸಿದುದನ್ನು ಮಾದರಿಯಾಗಿಟ್ಟುಕೊಂಡಲ್ಲಿ, ಈ ಕಾಲದ ಲೋಕಾಯುಕ್ತ ನ್ಯಾಯಾಧೀಶರ ನೆನಪುಂಟಾಗುತ್ತದೆ.

### ಕಾರ್ಟೇಜೆಸ್ (Cartazyes) ನ್ಯಾಯ

ವಿದೇಶೀಯ ದಾಖಲೆಯೊಂದರಲ್ಲಿ ಪೋರ್ಚುಗೀಸರ ಭ್ರಷ್ಟಾಚಾರಗಳನ್ನು ಕೆಳದಿ ಅರಸರು ಸಮರ್ಥವಾಗಿ ಎದುರಿಸಿದ ಸಂಗತಿಗಳನ್ನು 'ಕಾರ್ಟೇಜೆಸ್' ಮುಖಾಂತರ ಡಾ.ಬಿ.ಎಸ್.ಶಾಸ್ತ್ರಿಗಳು (ಗೋವಾ) ಹೊರಗೆಡಹಿದ್ದಾರೆ. ದೇಶೀಯ ಸಂಸ್ಥಾನಗಳ ಸ್ವಾತಂತ್ರ್ಯಹರಣವನ್ನು ಪೋರ್ಚುಗೀಸರು ವ್ಯವಸ್ಥಿತವಾಗಿ ಭಾರತೀಯರ ಕಣ್ತಪ್ಪಿಸಿ ಆದಾಯವನ್ನು ವಿಪುಲವಾಗಿ ಪಡೆಯುತ್ತಿದ್ದುದು ಇದರಿಂದ ಕಂಡುಬರುತ್ತದೆ. ಕಾರ್ಟೇಜೆಸ್ ಮುಖಾಂತರ ಸಾಗರೋತ್ತರ ವಾಣಿಜ್ಯ ಅಧಿಕಾರವನ್ನು ಸ್ವಯಂ ಘೋಷಿಸಿಕೊಂಡು ಪೋರ್ಚುಗೀಸರು ತಮ್ಮ ಪರವಾನಿಗೆಯಿಲ್ಲದೆ ಹಡಗನ್ನು ಬಿಡುತ್ತಿರಲಿಲ್ಲ. ಇದರಿಂದ ವಿನಾಕಾರಣದ ಸ್ವಾಭಿಮಾನಕ್ಕೆ ಧಕ್ಕೆಯುಂಟಾಗಿ ಗಲಭೆಗೆ ಕಾರಣವಾಗುತ್ತಿತ್ತು. ಈ ಭ್ರಷ್ಟಾಚಾರದ ಸ್ವಾತಂತ್ರ್ಯಹರಣವನ್ನು ಕೆಳದಿ ಅರಸರು ಸಮರ್ಥನೀಯವಾಗಿ ಎದುರಿಸಿ, ಭಾರತದ ಸ್ವತಂತ್ರ ನ್ಯಾಯಾಂಗವನ್ನು ಕಾಪಾಡಿದುದು ಇತಿಹಾಸದಲ್ಲಿ ಗಮನಾರ್ಹ ಸಂಗತಿಯಾಗಿದೆ.

### ಕೆಳದಿ ಇತಿಹಾಸೋತ್ತರ ನ್ಯಾಯಾಡಳಿತ

ಕ್ರಿ.ಶ.೧೭೬೩ರ ನಂತರ ಕೆಳದಿಯ ಪ್ರಖ್ಯಾತ ರಾಜಧಾನಿಯಾಗಿದ್ದ ಬಿದನೂರನ್ನು (ಹಳೇನಗರ) ಬ್ರಿಟಿಷರು ಚಿತ್ರದುರ್ಗ, ಶಿವಮೊಗ್ಗ ಹಾಗೂ ಕಡೂರು ಜಿಲ್ಲೆಗಳನ್ನೊಳಗೊಂಡ ಪ್ರದೇಶಗಳನ್ನು 'ನಗರ ಡಿವಿಜನ್' ಎಂದು ಹೆಸರಿಸಿ ಆಡಳಿತ ನಡೆಸಿದರು. ೧೮೧೧-೧೮೩೧ರ ವರೆಗೆ ಜರುಗಿದ ನಗರ ಬೂದಿ ಬಸಪ್ಪನಾಯಕನ ಬಂಡಾಯದ ತರುವಾಯ, ಮೈಸೂರು ಸಂಸ್ಥಾನದ ಆರು ತುಕಡಿಗಳಲ್ಲಿ ೧೮ ಕಚೇರಿಗಳೂ ೧೨೫ ತಾಲ್ಲೂಕುಗಳೂ ರಚನೆಗೊಂಡು ನಗರ ತುಕಡಿಯಲ್ಲಿದ್ದ ಇಕ್ಕೇರಿ-ಸಾಗರದಲ್ಲಿ ಸರ್‌ಸಾಯರನ್ನು ನೇಮಿಸಿ ಈ ಕೆಳಕಂಡಂತೆ ಅಧಿಕಾರ ನೀಡಲಾಯಿತು: [೨೧]

| | |
|---|---|
| ೧. ದಾರುಲ್ ಸಲ್ತನತ್ - ಕೊತ್ತಾಗಾಲದಿಂದ ಕೂಡಿದ ಸಾಯರು (ಮೈಸೂರು ರಾಜಧಾನಿ) | (೧) |
| ೨. ಅತ್ತಿಗುಪ್ಪೆ ಸರ್‌ಸಾಯರು | (೧) |
| ೩. ನಗರಕ್ಕೆ ಸೇರಿದ ಸರ್‌ಸಾಯರು[೨೨] | (೨) |
| ೪. ಚಿತ್ರದುರ್ಗ ತುಕಡಿಗೆ ಸೇರಿದ ಸರ್‌ಸಾಯರು | (೧) |

ಕರ್ನಲ್ ಬ್ರಿಗ್ಸ್‌ನ ನಗರ ವಿಭಾಗದ ೧೦ ಇಲಾಖೆಗಳಲ್ಲಿ-

೨. ಫಿರ್ಯಾದ್ ಕಛೇರಿ (ದೂರುಗಳ ಸ್ವೀಕಾರ)

೩. ಹಜೂರು ಅದಾಲತ್ (ನ್ಯಾಯಾಲಯ) (ಹೈಕೋರ್ಟ್ ಇದ್ದಹಾಗೆ)

೪. ಸುಬೇದಾರ ಅಥವಾ ಫೌಜದಾರನ ಕೋರ್ಟು

೫. ತಾಲ್ಲೂಕು ಅಥವಾ ಅಮಲ್ದಾರನ ಕೋರ್ಟು

೬. ಪಟೇಲ್ ಅಥವಾ ಕೊತ್ವಾಲನ ಕೋರ್ಟು

ನ್ಯಾಯಾಲಯಗಳಿದ್ದವು.

### ತಮಿಳು ದಾಖಲೆಯಲ್ಲಿ ಕೆಳದಿ ವಕೀಲರು

ಮದರಾಸಿನ ರಾಜ್ಯಪಾಲನಾಗಿದ್ದ ಆನಂದರಂಗಪಿಳ್ಳೆಯು ದಿನಾಂಕ ೩೧-೮-೧೭೫೨ರಂದು ತಮಿಳು ದಿನಚರಿಯಲ್ಲಿ ಕೆಳದಿ ರಾಣಿಯ ವಕೀಲನ ಬಗ್ಗೆ ಉಲ್ಲೇಖಿಸಿರುವುದು ಗಮನಾರ್ಹವಾಗಿದ್ದು, ಈ ಕೆಳಗಿನಂತಿದೆ:

He then said that tomorrow someone must receive the Bednur (KELADI) Vakil, bring him in and arrange a lodging for him. I observed that it was not fitting for me to go out to meet him, but that Madanananda Pandit, or some one else might be sent. He then told Madanananda Pandit to go. He replied, "KELADI is a large state and should be treated with as much respect as the Raja of Mysore." So he told me to receive and bring him in, being unwilling to oppose him, I agreed and came home.

ಇದು ೧೯೨೨ ರಲ್ಲಿ ಮದರಾಸ್ ಸರಕಾರದ ಪತ್ರಾಗಾರದ ಬ್ರಿಟಿಷ್ ಅಧಿಕಾರಿ ಎಚ್. ಡಾಡ್‌ವೆಲ್‌ರವರು ತಮಿಳಿನಿಂದ ಭಾಷಾಂತರಿಸಿದ ಇಂಗ್ಲೀಷ್ ಸಾರಾಂಶ.[೨೩]

### ನಗರ ಡಿವಿಜನ್ ಮುನ್‌ಷೀಫ್‌ಕೋರ್ಟ್ ಅಪೂರ್ವ ದಾಖಲೆ

ಸನ್ ೧೮೫೦ನೇ ಇಸವಿಯ ಕೆಳದಿ ಇತಿಹಾಸೋತ್ತರ ಕಾಲದ ನಗರ ಡಿವಿಜನ್ 'ಪ್ರಿನಸಪಾಲು ಸದರ ಮುನಶಿಫ ಕೊರರ್ಟು' ದಾಖಲೆಯೊಂದು ನನ್ನ ಸಮೀಕ್ಷೆಯಲ್ಲಿ ಲಭಿಸಿದ್ದು, ಈ ದಿಸೆಯಲ್ಲಿ ಗಮನಾರ್ಹವಾದುದು. ಇಲ್ಲಿ ಉಲ್ಲೇಖನಗೊಂಡ ವಾದಿ ಪ್ರತಿವಾದಿಗಳ ಸಂಗತಿಗಳು, ಮೋಡಿಕನ್ನಡ ಕ್ಲಿಷ್ಟಪದಗಳು, ಉದಾ : ಕೊರರ್ಟು>ಕೋರ್ಟು; ವಕ್ಕಿಲ>ವಕೀಲ; ರಸಪಾಂಡ್ಯಂಟು>ರೆಸ್ಪಾಂಡೆಂಟ್; ದಸ್ತುಆೃವಜು>ದಸ್ತಾವೇಜು; ಡಿಕಿರೆ>ಡಿಕ್ರಿ; ಅಫೆಲು ವ್ಯಾಜ್ಯ>ಅಪೀಲು ವ್ಯಾಜ್ಯಾ ಮುಂತಾದ ಮಾಹಿತಿಗಳು ಆಸಕ್ತಿಯುಂಟು ಮಾಡುತ್ತವೆ:

ಸಾಲು ೧ ನಗರ ಡಿವಿರ್ಜ ಪ್ರಿನಸಪಾಲು ಸದರ ಮುನಶಿಫ ಕೊರರ್ಟು

೨ ಅಧಿಕಾರ್‍ರಸ್ತಾನದಿಂದ್ದಾ

೩ ಪೈಸಲುನಾಮಾ

೪ (a) ಸಾಗರ ತ್ತಾಲ್ಲುಕ ಸರ್ಕ ೧೮೫೦ನೆಯ್ಸಿವಿ ರಿನ ೪ (a)ಕೊರರ್ಟು ಸರ್ಕ ೧೮೫೩ ನೆಯ್ಸಿವಿ ಆಫಿಲು ನ

(b) ೦ಬ್ರು ೧೬೧ (b) ೦ಬರ್‍ರು ೫೫

೫ (a) ವಾದಿ ಕೆಸನ್ನೂರ್‍ರಮಾಗಣಿ ಶಿರಳಿಗೆ ರಾಮ್ಮೈ ೫ ಆಪಿಲಾಟ್ಟು ಸದರ್‍ರಿ ರಾಮ್ಮಯ

(b) ಯ ವಕ್ಕಿಲ ವೆಂಗಟೆಶ್ಶೈಯ

| | |
|---|---|
| ೬ (a) ಪ್ರತಿವಾದಿ ಯಿದೆ ಮಾಗಣಿ ದೊಡೆರ್‍ರಿ ಪುಟ್ಟ | ೬ ರಸಪಾಂಡ್ಯಂಟ ಸದರಿ ಪುಟ್ಟಯ್ಯ |
| (b) ಯ ವಕ್ಕಿಲಿ ಗೋಪಾಲ್ಯಿಯ | |
| ೭ ತ್ರುಟಿತ....ಉಭಯವಾದಿಗೂರನು......ಯಿ..... ..........೧೦ಗೆ ಬಂದ ವೆಚ್ಚ......... | |
| ೯ (a) (ಅಕಿಜಿನಾಲ್) ವ್ಯಾಜ್ಯದ | ೧ ಯೀ ಪ್ರತಿವಾದಿಯಿಂದ ಪ್ಲವಂಗ ಸಂವತ್ಸರದ ಚೈತ್ರ ಬ ೧೩ತ್ತ್ರಿಕಿನ |
| (b) ಸಂಗತ್ತಿ ವಾದಿ ದಾವಾ ಅಭಿ | |
| (c) ಪ್ರಾಯ | ೨ ದಸ್ತು ಆೈವಜು ಬಾಬ್ತು ಅಸಲು ಗ ೭\|\|೨ ಬಿಡಿ ಗ ೫ \|\|೬ ಜುಮಲ್ಲಾ ಗ ೧೦\|\|೩೬ |
| | ೩ ಕ್ಕೆ (ರ್‍ರ?) ೪೩\|೦ ಬರಬೆಕಾಗಿ ದಾವಾದಸ್ತು ಆೈವಜು ಹಾಜರ್‍ರು ಮಾಡಿ ಯೀ |
| | ೪ ದಸ್ತು ಆೈವಜಿನ (ಫಾಯಿದಿ) ಗಾರ್‍ರಿಗೆ ತ್ತನಿಖೆ ಆಗಬೇಕೆಂತ್ತ ವಗೈರ್‍ರೆ |
| ೧೦ (a) ಯೀ ಬಗೆ ಪ್ರತ್ತಿವಾದಿ | ೧ ದಾವಾದಸ್ತು ಆೈವಜು ಕಬೂಲು ಮಾಡಿ ಯೀ ಬಗ್ಗೆ ಅದೆ ಸಂ\|ರದ |
| (b) ಉರುರಣೆ | ೨ ಮಾಘಮಾಸದಲ್ಲಿ ವಾದಿಗೆ ಸರಕು ಕೊಟ್ಟು ಸಂದಾಯಾ ಮಾ |
| | ೩ ಡಿ ದಸ್ತು ಆೈವಜು ವಾಪ್ಸು ಕೊಡಬೆಕೆಂತ್ತ ಕೆಳಿದಕ್ಕೆ ದಸ್ತು ಆೈ |
| | ೪ ವಜು ಯೀತ್ತ ನಂನಮುಂದೆ ಹರದು ಹಾಕ್ಕಿಧಾನ್ನೆ ನಾನ್ನು |
| | ೫ ೮೦ ವರ್ಷದ ಮುದುಕ ಆದರ್‍ರಿಂದ ಯೀಗ ಬೆರೆ ಬಿದ್ದು |
| | ೬ ಮೂಲಕ ಸಂದ ಹಣವಿನ ದಸ್ತು ಆೈವಜು ಮೊಸದಿಂದ |
| | ೭ ಯಿಟ್ಟುಕೊಂಡು ದಾವಾ ಮಾಡಿ ಧಾನ್ನೆ ಯೀ ರುಜುವಾತ್ತಿಗೆ |

೮ ೫ ಜನ ಸಾಕ್ಷಿಯು ಕೊರ್‍ರಿರುತ್ತಾನ್ನೆ

೧೧ (a) ಅರೆಜಿನಾಂ ಪೈಸ
(b) ಲು

೧ ಯೀ ವಿವಾದದ ಕಟ್ಟು ಯಾವತ್ತು
ಪರ್‍ರಿಶೊಧನ್ನೆಯಿಂದ್ದ
೨ ಆಲೊಚಿಸುವಲ್ಲಿ ವಾದಿ ಮಾಡು
ವ ದಾವಾಕ್ಕೆ ಪ್ರತಿವಾದಿಯು
೩ ವಪ್ಪಿಕೊಂಡು ಪ್ಲವಂಗ ಸಂ|
ಮಾಘಮಾಸದಲ್ಲಿ ಸದರ್‍ರಿ
ಹಣಕ್ಕೆ
೪ ಸರಕು ಸಂದಾಯಾ ಮಾಡಿ
ಆನಂತ್ರ ಕೆಲಉ ದಿವಸದ
೫ ಮೆಲೆ ಸದರ್‍ರಿ ದಸ್ತು ಆೖವಜು ತ್ತಂನ್ನ
ಯದರ್‍ರಿಗೆ ವಾದಿ ಹರಪು
೬. ಪರ್‍ರಿಹರ್‍ರಿಶಿ ಬಿಟಹಾಗೆ
ನಮ್ಮೂರ್‍ರು ಆದ ಪ್ರತ್ತಿವಾದಿ
ಮಾತ್ರಾ-ಯೀ
೭ ತ್ತನಕಡೆ ಸಾಕ್ಷಿಗಳಿಂದ (ಯೀ ಛಾ?)
ಪಾ ದಸ್ತೂ ಆೖವಜಿಗೆ ೧೩ ಮಣ
೮ ಅಡಿಕ್ಕೆ ಪ್ರತಿ ವಾದಿ ವಾದಿಗೆ ಕೊಟ
ಹಾಗೂ ಅದೆ ದಸ್ತಾ ಆೖ
೯ ವಜು ಯಂತ್ತ ಹೆಳಿ ತ್ತಂಮ
ಯಿದರ್‍ರಿಗೆ ವಾದಿ ಹರದಹಾ
೧೦ ಗೂ (ಸಾಫು) ರುಜುವಾಗುತ್ತದೆ
ವಾದಿ ಕಡೆ ಸಮಜಾಯಿಶಿ
೧೧ ಸಾಕ್ಷಿಗಳ ಹೆಳಿಕ್ಕೆ ಸಮರ್ಪಕ
ವಾಗುವದುಯಿಲ್ಲಾ ಆದ್ದ
೧೨ ರ್‍ರಿಂದ ಪ್ರತಿವಾದಿ ಕಡೆ ಸಾಕ್ಷಿಗಳ
ಹೆಳಿಕ್ಕೆ ಯಾರ ನೊಡಿದರ್‍ರೆ
೧೩ ವಾದಿಯೂ ಪ್ರತ್ತಿವಾದಿ ಸಮ
ಕ್ಷಮ ದಸ್ತ ಆೖವಜು ಯಿತ್ತ
ವಂದು
೧೪ ಕಾಗದ ಪರ್‍ರಿಹರ್‍ರಿಶಿ ಯೀ ದಸ್ತು
ಆೖ ವಜು ತ್ತಂನ ಹತ್ರಯಿಟ್ಟು

೧೫ ಕೊಂಡು ಪ್ರತ್ತಿವಾದಿ ಮೆಲೆ
ದಾವಾ ದಾಖಲು ಮಾಡಿದ ಹಾಗೆ
ಕಂಡು

೧೬ ಬರುತ್ತದೆ ಆದ್ದರಿಂದ ವಾದಿ
ದಾವಾ (ತ್ರುಟಿತ) ಜೂರ್ರು ಯಂತ್ತ

೧೨ (a) ಆಫೆಲು ವ್ಯಾಜ್ಯ
(b) ದ ಸಂಗತ್ತಿ ಅರೆಜಿ
(c) ನಾಲ್ ವಾದಿಯಾದ
(d) ಆಫೆಲಾಂಟ್‌ನ ಆ
(e) ಫೆಲಅರ್ಜಿ ಅಭಿಪ್ರಾ
(f) ಯಾ

೧ (ತ್ರುಟಿತ) ದಸ್ತು ಲ್ಯಾವಜು ಪ್ರತಿವಾ
... ಮಾಡಿ ಸುಳು

೨ ಸಂದಾಯತ್ತ ಹೆಳುವದಕ್ಕೆ ನಿರ್ಮ
ತ್ತ ಸಾಕ್ಷಿನ್ನೂ(ಡಿಕಿರೆ) (ಡಿಶಿರೆ)

೩ ಮಂಜೂರ್‍ರು ಮಾಡಿ ದಸ್ತು
ಲ್ಯಾವಜಿನ ವ್ಯವಹಾರಕ್ಕೆ ಮಜು

೪ ಬೂತ್ತು ಶ್ರೀ x ತರ ರುಜುವಾತ್ತು
ರಶಿದಿ ವಗ್ಯೆರ್‍ರೆ ಯೆನೊಂ

೫ ದ್ದು ಯಿಲ್ಲರೆ ದಸ್ತು ಲ್ಯಾವಜಿನ
ಕೆಳಗೆ ಸಂದಾಯತ್ತ (ಸಹಿ?)

೬ ಬರಸದೆ ನಿರ್ಮತ್ತನ್ನು ಡಿಶಿರ
ಸಾಕ್ಷಿಲಿ (ತೃ)ಪ್ತಿ ತರುವಾರೆ ಮ

೭ ಂಜೂರ್‍ರು ಮಾಡಿ ನಂನ ದಾವಾನಾ
ಮಂಜೂರ್‍ರು ಮಾಡಿಧಾರ್‍ರೆ

೮ ಮೂಲಕಟ್ಟು ಪರಾಂಬರ್‍ರಿಶಿತ್ತ
(ಚಾಪ್ರ)ಸಲುಲಾಗಬೆಕೆಂತ್ತ ವ

೯ ಗ್ಯೆರ್‍ರೆ ವಿಸ್ತಾರವಾಗಿ ಬರದು
ಯಿರುತ್ತಾನ್ನೆ

೧೩ ಕೊರಟು ಪೈಸಲು

೧ ಯೀ ನಂಬ್ರದ ದಸ್ತು ಲ್ಯಾವಜು
ಗಳಾವತ್ತು ಪರ್‍ರಿಶೊಧಿಸಿ ನೊ

೨ ಡಲಾಯಿತ್ತು-

೩ ಆಫೆಲಾಂಟದ ದಾವಾ ದಸ್ತು
ಲ್ಯಾವಜು ರಸಪಾಂಡುಂಟ

೪ ಕಬೂಲು ಮಾಡಿ (ಸಾರಾಯ)
ಹೆಳುವಂತ್ತ ಯೀತ್ತನ ಕಡೆ ಸಾ

೫ ಕ್ಷಿಗಳಿಂದ ರುಜುವಾಗುವದಲ್ಲದೆ
ಯೀ ಸಂದಾಯತ್ತದ
೬ ಸಂಗತ್ತಿ ವಾಜಿಮಯಾತ್ತ ಖುದ್ದು
ರಸಪಾಂಡ್ಯಾಂಟ.

ಇಲ್ಲಿ ಸಹಿಯಿದೆ.

## ಉಪಸಂಹಾರ

ಕ್ರಿ.ಶ.೧೪೯೯ ರಿಂದ ೧೭೬೩ರ ವರೆಗೆ ಭಾರತದಲ್ಲಿಯೇ ಪ್ರಖ್ಯಾತಿ ಪಡೆದ ಕೆಳದಿ ಇತಿಹಾಸ ಮುಂದಿನ ಪೀಳಿಗೆಗೆ ಅಪಾರ ಕೊಡುಗೆಯನ್ನಿತ್ತಿದೆ. ಇದನ್ನು ಇಕ್ಕೇರಿ ಸಂಸ್ಥಾನ, ಬಿದನೂರು ರಾಜ್ಯ, ನಗರ ಸಂಸ್ಥಾನ ಎಂಬುದಾಗಿ ಇತಿಹಾಸಜ್ಞರು ತಪ್ಪಾಗಿ ಅರ್ಥೈಸಿರುವುದು ಖೇದಕರವಾಗಿದೆ.[೨೪] ಮೈಸೂರು ಅರಸರು ಶ್ರೀರಂಗಪಟ್ಟಣ ರಾಜಧಾನಿಯಾಗಿದ್ದಾಗ, ಶ್ರೀರಂಗಪಟ್ಟಣದ ಅರಸರು ಎಂದು ಹೇಳಿದ್ದಾರೆಯೇ? ಕೆಳದಿ ಮೂಲಸಂಸ್ಥಾನದಲ್ಲಿ ಇಕ್ಕೇರಿ ಹಾಗೂ ಬಿದನೂರು ರಾಜಧಾನಿಯೇ ಹೊರತು ಸಂಸ್ಥಾನದ ಹೆಸರಲ್ಲವೆಂಬುದನ್ನು ಮರೆಯಬಾರದು. ಇದನ್ನು ಅನೇಕ ಬಾರಿ ನನ್ನ ಲೇಖನದಲ್ಲಿ ವಿವರಿಸಿರುವುದರಿಂದ ಇಲ್ಲಿ ಪುನರುಕ್ತಿಸುವುದು ಅನುಚಿತ.[೨೫]

ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಕೆಳದಿ ಚರಿತ್ರೆ ಭಾರತದ ಯಾವ ಸಂಸ್ಥಾನಕ್ಕೂ ಕಡಿಮೆಯಿಲ್ಲದಂತೆ ಮುಂದಿನ ಪೀಳಿಗೆಗೆ ಉಳಿಸಿದೆ. ಕೆಳದಿ ದೊರೆಗಳು ವೀರಶೈವ ಪಂಥದವರಾಗಿದ್ದರೂ ಸರ್ವಧರ್ಮ ಸಮನ್ವಯತೆಯಲ್ಲಿ ಅಚಲ ವಿಶ್ವಾಸ ಹೊಂದಿದ್ದರು. ಇದಕ್ಕೆ ಅವರ ಪಳೆಯುಳಿಕೆಯೇ ಸಾಕ್ಷಿ. ಕೆಳದಿ ರಾಜ್ಯ ದಟ್ಟ ಮಲೆನಾಡುಗಳಿಂದ ಬೆಟ್ಟಗುಡ್ಡ ಪ್ರದೇಶಗಳನ್ನೊಳಗೊಂಡು ಗ್ರಾಮಗಳ ಸ್ವರಾಜ್ಯವಾಗಿತ್ತು. ರೈತಾಪಿ ಜನಸಾಮಾನ್ಯರೇ ಇವರ ಜೀವಾಳವಾಗಿದ್ದು, ಅವರ ನೆಮ್ಮದಿಗಾಗಿ ಶ್ರಮಿಸುತ್ತಿದ್ದ ಸಂಗತಿಗಳನ್ನು ವಿದೇಶೀ ಪ್ರವಾಸಿಕಥನದಲ್ಲಿ, ಶಾಸನೇತ್ಯಾದಿ ಆಕರಗಳಲ್ಲಿ ಕಂಡುಕೊಳ್ಳಬಹುದು. ಬ್ರಿಟಿಷ್ ಸರಕಾರದ ಸ್ಟೋಕ್ಸ್ ಆದಿಯಾಗಿ ಸ್ವಾತಂತ್ರ್ಯ ಪೂರ್ವದ ಅಧಿಕಾರಿಗಳೆಲ್ಲರೂ ಮುಂದಿನ ಪೀಳಿಗೆಗೆ ಇವುಗಳನ್ನು ರಕ್ಷಿಸಿ ಕಾಪಾಡಲು ಸರಕಾರಕ್ಕೆ ವರದಿ ಸಲ್ಲಿಸಿದ್ದರು.

ಈ ಲೇಖನದಲ್ಲಿ ವ್ಯಕ್ತಪಟ್ಟಂತೆ, ಶಿವತತ್ವರತ್ನಾಕರ ಆರಂಭಗೊಂಡು ಕೆಳದಿ ಇತಿಹಾಸೋತ್ತರ ಕಾಲದವರೆಗೂ ಕೆಳದಿ ಆಡಳಿತದಲ್ಲಿ ನ್ಯಾಯಾಂಗ ಹಾಗೂ ವಕೀಲರ ಸಂಗತಿಗಳನ್ನು ಉಪಲಬ್ಧ ಮಾಹಿತಿಯೊಂದಿಗೆ ನಿರೂಪಿಸಲು ಪ್ರಯತ್ನಿಸಲಾಗಿದೆ. ತರುಣ ನ್ಯಾಯಶಾಸ್ತ್ರ ವಿದ್ವಾಂಸರು ಈ ದಿಸೆಯಲ್ಲಿಯೂ ಪ್ರಯತ್ನಿಸಿದಲ್ಲಿ ಮಹಾಪ್ರಬಂಧ ಸಿದ್ಧಪಡಿಸಲು ಸಾಧ್ಯ. ಇದಕ್ಕೆ ಶ್ರಮ, ಆಸಕ್ತಿ, ಸಂಶೋಧನಾ ಸಾಮರ್ಥ್ಯ, ಸಹನೆ ಅಗತ್ಯವೆಂಬುದನ್ನು ಒತ್ತಿಹೇಳಬೇಕಾಗಿಲ್ಲವಷ್ಟೆ.

**ಟಿಪ್ಪಣಿಗಳು**

೧. Chitnis K.N., **Keladi Polity, p.210**

೨. ಕೆಳದಿನೃಪವಿಜಯ, vii ಆ.

೩. Alexander Hamilton : **A New Account**

೪. John Fryer : **A New Account**

೫. Stoakes : **Survey of Nagar Division**

೬. ಲೇಖನ ವಿಸ್ತಾರಭಯದಿಂದ ಸಂಕ್ಷೇಪವಾಗಿ ನೀಡಲಾಗಿದೆ.

೭. ಕೆಳದಿನೃಪವಿಜಯ, vii ಆ.

೮. **EC.**, vii ಶಿಕಾರಿಪುರ ೨೧ D

೯. **M.A.R.**, 1930; No.65, P.219

೧೦. **M.A.R.**, 1943; No.31, P.108

೧೧. **EC.**, vii, ಶಿಕಾರಿಪುರ ಪು.೨೧೦, ಕೆಳದಿ ಅರಸರ ಶಾಸನ ಸಂಪುಟ, ನಂ.೨೫೪, ಪು.೪೪೫

೧೨. ಕೆಅಶಾಸಂ, ಅದೇ, ಪು.೧೩೧

೧೩. ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಡಾ. ಕೆಳದಿ ವೆಂಕಟೇಶ್ ಜೋಯಿಸ್, ಪು.೧೪೦

೧೪. ಅದೇ, ಪು.೧೪೧

೧೫. ಎ.ಕ., ೮, ಸಾಗರ ೫, ಪು.೫೬೩

೧೬. ಕೆಳದಿ ದೇವಾಲಯದ ಧ್ವಜಸ್ತಂಭದಲ್ಲಿರುವ ಶಿಲಾಶಾಸನದಲ್ಲಿ ಬೊಕ್ಕಸದ ಸಿದ್ಧಬಸವಯ್ಯನ ಹೆಸರಿದೆ

೧೭. ಅನುಬಂಧದ ಜೆರಾಕ್ಸ್ ಪ್ರತಿ ನೋಡಿರಿ

೧೮. ಸದಾನಂಣ > ಸದಾನಂದಣ್ಣ

೧೯. ಕೆಳದಿ ರಾಜ್ಯದ ರಾಜಧಾನಿ

೨೦. **Western Karnataka, Its Agrarian Relations 1500-1800 AD**-Dr.K.G. Vasantha Madhava, p.220

೨೧. ಸರ್‌ಸಾಯರ ಅಪೂರ್ವ ಚಾರಿತ್ರಿಕ ದಾಖಲೆಗಳು ಕೆಳದಿ ಸಂಶೋಧನಾಲಯದಲ್ಲಿವೆ

೨೨. ಇಕ್ಕೇರಿ-ಸಾಗರ ಸರ್‌ಸಾಯರಿಗೆ ಹೊನ್ನಾಳಿ, ಸಾಗರ, ಷಿಕಾರಿಪುರ, ಸೊರಬ, ಹೊಸನಗರ, ಬೆಳವಂದೂರು ತಾಲ್ಲೂಕುಗಳು ಸೇರಿದ್ದವು.

೨೩. ಕೆಳದಿ-ಕರ್ನಾಟಕ ಹಾಗೂ ಇತರ ಇತಿಹಾಸದ ಭಾಗ ಕುರಿತಂತೆ ಸುಮಾರು ೮೬,೦೦೦ ದಾಖಲೆಗಳನ್ನು ತಮಿಳುನಾಡು ಸರಕಾರ ಸುಟ್ಟುಹಾಕಿದ್ದು, ಪತ್ರಾಗಾರ ಇಲಾಖೆಯ ಸದಸ್ಯನಾಗಿ ಇವುಗಳ ಕ್ಯಾಟಲಾಗ್‌ನ ನನ್ನ ಪ್ರಯತ್ನ ವಿಫಲವಾಯಿತು.

೨೪. ಎಂ.ಎಸ್.ಪುಟ್ಟಣ್ಣನವರ ಇಕ್ಕೇರಿ ಸಂಸ್ಥಾನದ ಚರಿತ್ರೆ

೨೫. 'ಕೆಳದಿ ಇತಿಹಾಸ-ಪುನರ್ಮೌಲ್ಯೀಕರಣದ ಅವಶ್ಯಕತೆ', ಇತಿಹಾಸದರ್ಶನ, ಸಂಪುಟ ೧೬, ೨೦೦೧, ಪು.೨೯೨-೨೯೬

೪

# ಹಾಗಲವಾಡಿ ನಾಯಕರ ನ್ಯಾಯಾಡಳಿತ

ಡಾ. ಡಿ. ಎನ್. ಯೋಗೀಶ್ವರಪ್ಪ

ದುಷ್ಟಮರ್ದನ, ಶಿಷ್ಟರಕ್ಷಣ, ನ್ಯಾಯಮಾರ್ಗದಿಂದ ಭಂಡಾರವನ್ನು ಸಮೃದ್ಧಿಗೊಳಿಸುವುದು, ವಾದಿಗಳಿಗೆ ನಿಷ್ಪಕ್ಷಪಾತವಾದ ನ್ಯಾಯಪ್ರದಾನ ಮತ್ತು ರಾಜ್ಯರಕ್ಷಣ- ಇವು ರಾಜನ ಐದು ಪವಿತ್ರ ಕರ್ತವ್ಯಗಳು ಎಂದು ವಿಚಾರವೇತ್ತನಾದ ಅತ್ರಿ ಹೇಳಿದ್ದಾನೆ. ಹೀಗೆ ನಿಷ್ಪಕ್ಷಪಾತ ರೀತಿಯಲ್ಲಿ ನ್ಯಾಯಾಡಳಿತ ನಡೆಸುವುದು ರಾಜ್ಯದ ಮೂಲ ಪ್ರಕಾರ್ಯಗಳಲ್ಲಿ ಒಂದಾಗಿತ್ತು. ಇವುಗಳು ಸಮರ್ಪಕವಾಗಿ ನೆರವೇರಬೇಕಾದರೆ ರಾಜನು ಆಗಾಗ್ಗೆ ಶಾಸನ ಅಥವಾ ಆಜ್ಞೆಗಳನ್ನು ಹೊರಡಿಸಬೇಕಾಗುತ್ತದೆ. ಶಿಷ್ಟರಿಗೆ ನ್ಯಾಯವು ದೊರಕುವಂತೆಯೇ ದುಷ್ಟರಿಗೆ ಸರಿಯಾದ ಶಿಕ್ಷೆಯಾಗುವಂತೆಯೂ ಏರ್ಪಾಟು ಮಾಡಬೇಕಾಗುತ್ತದೆ. ಅನ್ಯಾಯವನ್ನು ತುಳಿದುಹಾಕುವುದೇ ದಂಡವೆಂದು ಕಾಮಾಂದಕನು ಹೇಳುತ್ತಾನೆ. ಲೋಕದಲ್ಲಿ ಶುಚಿ ಎನಿಸಿಕೊಳ್ಳುವವನು ದುರ್ಲಭನೆಂದೂ ದುಷ್ಟರೇ ಹೆಚ್ಚಾಗಿರುವುದರಿಂದ ಲೋಕವನ್ನು ದಂಡದಿಂದಲೇ ಜಯಿಸಬೇಕೆಂದೂ ಜಗತ್ತು ಭೋಗ್ಯವಾಗುವುದು ದಂಡದ ಭಯದಿಂದಲೇ ಎಂದೂ ಮನು ಹೇಳುತ್ತಾನೆ. ಅವನು ಇನ್ನೂ ಒಂದು ಹೆಜ್ಜೆ ಮುಂದೆಹೋಗಿ ದಂಡವೇ ಧರ್ಮವೆಂದು ಸಾರುತ್ತಾನೆ. ಕರ್ನಾಟಕವನ್ನಾಳಿದ ರಾಜರು ದಂಡನೀತಿಯನ್ನು ಅಥವಾ ನ್ಯಾಯಪರಿಪಾಲನೆಯನ್ನು ಯಾವರೀತಿ ಕೈಗೊಂಡಿದ್ದರು? ಅದರ ಸ್ವರೂಪವೇನು? ಎಂಬುದರ ಸ್ಪಷ್ಟ ಚಿತ್ರಣವು ನಮಗೆ ದೊರಕುವುದಿಲ್ಲ. ಈ ಹಿನ್ನೆಲೆಯಲ್ಲಿ, ಮಧ್ಯಕಾಲೀನ ಕರ್ನಾಟಕದ ಚರಿತ್ರೆಯಲ್ಲಿ ೨೫೦ ವರ್ಷಕಾಲ ತುಮಕೂರು ಜಿಲ್ಲೆಯಲ್ಲಿ ವಿಜಯನಗರದ ಅಮರನಾಯಕರಾಗಿ, ನಂತರ ಸ್ವತಂತ್ರಗೊಂಡು ಆಳ್ವಿಕೆ ನಡೆಸಿ, ಮೈಸೂರಿನ ಹೈದರಾಲಿಯ ಕೆಂಗಣ್ಣಿಗೆ ಗುರಿಯಾಗಿ ರಾಜ್ಯ ಕಳೆದುಕೊಂಡ ಹಾಗಲವಾಡಿ ನಾಯಕರ ಕಾಲದ ನ್ಯಾಯಾಡಳಿತವನ್ನು ಪರಿಶೀಲಿಸಬಹುದು.

ಹಾಗಲವಾಡಿಯು ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನಲ್ಲಿ ಇಂದು ಹೋಬಳಿ ಗ್ರಾಮವಾಗಿದೆ. ವಿಜಯನಗರದ ಆಳ್ವಿಕೆಯ ಅವಧಿಯಲ್ಲಿ ಉದಯಿಸಿದ ಈ ರಾಜ್ಯದ

ಮೊದಲ ರಾಜಧಾನಿ ಯರೇಕಟ್ಟೆ. ನಂತರ ಚಿಕ್ಕನಾಯಕನಹಳ್ಳಿಗೆ ರಾಜಧಾನಿಯನ್ನು ಬದಲಾಯಿಸಿದ ಇವರು, ಕ್ರಿ.ಶ.೧೬೩೮ರಲ್ಲಿ ಬಿಜಾಪುರದ ಆದಿಲ್‌ಶಾಹಿ ದಂಡನಾಯಕ ರಣದುಲ್ಲಾಖಾನನ ದಾಳಿಗೆ ತುತ್ತಾಗಿ ರಾಜ್ಯ ಕಳೆದುಕೊಂಡು ಹಾಗಲವಾಡಿಯಲ್ಲಿ ನೆಲೆಸಿ ರಾಜ್ಯವಾಳತೊಡಗಿದರು. ಇವರು ಧರ್ಮ, ನೀತಿಯಿಂದ ರಾಜ್ಯವಾಳತೊಡಗಿದ್ದುದರಿಂದ ಇವರ ರಾಜ್ಯಕ್ಕೆ ಹಾಗಲವಾಡಿ ಧರ್ಮಸಂಸ್ಥಾನ ಎಂಬ ಹೆಸರಾಯಿತು. ಕೊನೆಗೆ ೧೭೭೪ರಲ್ಲಿ ಹೈದರಾಲಿ ಇವರನ್ನು ಪದಚ್ಯುತಗೊಳಿಸಿ ರಾಜ್ಯವನ್ನು ಮೈಸೂರಿಗೆ ಸೇರಿಸಿಕೊಂಡನು. ಹೀಗೆ ಇವರ ೨೫೦ ವರ್ಷಗಳ ಆಳ್ವಿಕೆಯ ಅವಧಿಯಲ್ಲಿ ೧೪ ಜನ ನಾಯಕರು ಆಳ್ವಿಕೆ ನಡೆಸಿದ್ದಾರೆ. ಇಂತಹ ಹಾಗಲವಾಡಿ ಧರ್ಮಸಂಸ್ಥಾನ ನಾಯಕರ ಕಾಲದಲ್ಲಿ ನ್ಯಾಯಾಡಳಿತ ಯಾವ ರೀತಿ ಇತ್ತು ಎಂಬುದರ ಬಗ್ಗೆ ನಮಗೆ ನಿಖರವಾದ ಹೆಚ್ಚಿನ ಮಾಹಿತಿ ಲಭ್ಯವಾಗುವುದಿಲ್ಲ. ಈ ನಾಯಕರ ಚರಿತ್ರೆಯ ಬಗ್ಗೆ ಇದುವರೆಗೆ ಲಭ್ಯವಾಗಿರುವ ಆಧಾರಗಳು ಅವರ ನ್ಯಾಯವ್ಯವಸ್ಥೆಯ ಬಗ್ಗೆ ಏನನ್ನೂ ಹೇಳುವುದಿಲ್ಲ. ಆದರೆ ಅವರ ಸಮಕಾಲೀನ ರಾಜಮನೆತನಗಳಲ್ಲಿದ್ದ ನ್ಯಾಯವ್ಯವಸ್ಥೆಯನ್ನು ಇವರೂ ಅನುಸರಿಸುತ್ತಿದ್ದಿರಬಹುದು ಎಂದು ಹೇಳಬಹುದು. ಕೆಳದಿಯರಸ ಬಸವರಾಜನ ಶಿವತತ್ವರತ್ನಾಕರವು ಆ ಕಾಲದ ನ್ಯಾಯಾಡಳಿತದ ಮೇಲೆ ಬೆಳಕುಚೆಲ್ಲಿದ್ದು, ಅದರಲ್ಲಿನ ಅಂಶಗಳೇ ಕೆಲಮಟ್ಟಿನ ಬದಲಾವಣೆಗಳಿಂದ ಹಾಗಲವಾಡಿ ನಾಯಕರ ಆಡಳಿತದಲ್ಲಿಯೂ ಇದ್ದವೆಂದು ಹೇಳಬಹುದು.

ನ್ಯಾಯವಿತರಣೆ ರಾಜನ ಮುಖ್ಯ ಕರ್ತವ್ಯಗಳಲ್ಲಿ ಒಂದು ಎಂದು ಪ್ರಾಚೀನ ಮತ್ತು ಮಧ್ಯಕಾಲೀನದ ಎಲ್ಲ ಕಾನೂನು ಬರಹಗಾರರೂ ತಿಳಿಸುತ್ತಾರೆ. ಉದಾಹರಣೆಗೆ, ಶುಕ್ರನೀತಿಸಾರವು ನ್ಯಾಯಾಡಳಿತದ ಮೂಲಕ ರಾಜನು ದುಷ್ಟರನ್ನು ಸಂಹರಿಸಬೇಕೆಂದು ಹೇಳುತ್ತದೆ. ಆದುದರಿಂದ ಇನ್ನಿತರ ಹಿಂದೂರಾಜ್ಯಗಳಂತೆ ಹಾಗಲವಾಡಿ ಧರ್ಮಸಂಸ್ಥಾನವೂ ಕೂಡಾ ಧರ್ಮಶಾಸ್ತ್ರ, ಸ್ಮೃತಿ, ಮಹಾಭಾರತ, ಮಿತಾಕ್ಷರ, ಮಾನಸೋಲ್ಲಾಸ ಮುಂತಾದ ಕೃತಿಗಳಲ್ಲಿರುವ ನಿಯಮಗಳನ್ನೇ ಪಾಲಿಸುತ್ತಿತ್ತೆಂದು ಹೇಳಬಹುದು. ಭೂಮಿಯ ಹಕ್ಕು ಉತ್ತರಾಧಿಕಾರತ್ವದ ಕಾನೂನು, ಪ್ರಾಣಿ, ಆಹಾರಬೆಳೆಗಳು, ಬಟ್ಟೆ, ದ್ರವ ಮುಂತಾದವುಗಳ ಬಗೆಗಿನ ಕಾಯ್ದೆಗಳು, ಬಡ್ಡಿ, ದಂಡ, ಸಾಕ್ಷಿ, ಶಿಕ್ಷೆ, ಪ್ರಮಾಣಸ್ವೀಕಾರ, ಆಸ್ತಿಯ ಪಾಲು, ಗಡಿವಿವಾದ, ಜಲವಿವಾದ, ಮೋಸ ಮುಂತಾದವುಗಳ ಬಗ್ಗೆಯೂ ಕೂಡ ಹಾಗಲವಾಡಿ ಸಂಸ್ಥಾನದಲ್ಲಿ ಕೆಲವು ನಿಯಮಗಳಿದ್ದವು.

ಹಾಗಲವಾಡಿ ನಾಯಕರ ಆಡಳಿತ ವ್ಯವಸ್ಥೆಯ ಪ್ರಮುಖ ಅಂಗ ನ್ಯಾಯಾಂಗ. ಪಾಳೆಯಗಾರ ಕೇವಲ ಶಾಸಕಾಂಗ ಮತ್ತು ಕಾರ್ಯಾಂಗದ ಮುಖ್ಯಸ್ಥನೇ ಅಲ್ಲ, ಅವನು ನ್ಯಾಯಾಂಗದ ಮುಖ್ಯಸ್ಥನಾಗಿ ರಾಜ್ಯದ ಉನ್ನತ ನ್ಯಾಯಾಧೀಶನಾಗಿದ್ದನು. ಅವನು ನ್ಯಾಯವಿತರಣೆ ಸಮಯದಲ್ಲಿ ಪಂಡಿತೋತ್ತಮರಾದ ಬ್ರಾಹ್ಮಣರ, ರಾಜಗುರುಗಳ ಜೊತೆ ಮಂತ್ರಾಲೋಚನೆ ನಡೆಸುತ್ತಿದ್ದನು. ಯಾವ ಹೊಸ ಸಂಗತಿ ಘನವಿಚಾರ

ಬಂದಾಗ್ಯೂ ಕೂಡಾ ಮೇಲೆ ತಿಳಿಸಿದ ಪ್ರಮುಖರನ್ನು ಸಭೆ ಸೇರಿಸಿ ಆಲೋಚನೆ ಮಾಡುತ್ತಿದ್ದನು. ಹಾಗಲವಾಡಿ ನಾಯಕರು ಬೆಳಗಿನ ವೇಳೆ ಸ್ವತಃ ಕೂತು ದರ್ಬಾರು ಮಾಡುತ್ತಾ ನ್ಯಾಯತೀರ್ಮಾನ ಮಾಡುತ್ತಿದ್ದರು.

ಅಪರಾಧ ಮಾಡಿದವರ ವಿಷಯ, ಸಾಲ, ಕೊಡಬೇಕಾದ ಫಿರ್ಯಾದುಗಳು (ಸಿವಿಲ್ ಬಾಬ್ತು) ಇವುಗಳಿಗೆ ಬೇರೆ ಅಧಿಕಾರ ಸ್ಥಾನವಿರಲಿಲ್ಲ. ಇಂತಹ ವಿಷಯಗಳೇ ಭಾರಿಯಾಗಿದ್ದರೆ ಪಾಳೆಯಗಾರರೇ ಕೂತು ವಿಚಾರಣೆ ಮಾಡುತ್ತಿದ್ದರು. ಸಾಧಾರಣ ವಿಷಯಗಳಾಗಿದ್ದರೆ ಆಯಾ ಸ್ಥಳಗಳಲ್ಲಿನ ಚಿಕ್ಕ ಅಧಿಕಾರಿಗಳು ನ್ಯಾಯತೀರ್ಮಾನ ಮಾಡುತ್ತಿದ್ದರು. ಉದಾಹರಣೆಗೆ, ಹಾಗಲವಾಡಿನಾಯಕ ಮುದಿಯಪ್ಪನಾಯಕನ ದಳವಾಯಿ ಶೀಲವಂತ ಪರಮಪ್ಪನು ಕ್ರಿ.ಶ.೧೬೨೩ರಲ್ಲಿ ನಂದೀಶ್ವರಸ್ವಾಮಿಗಳಿಗೆ ಚಿಕ್ಕನಾಯಕನಹಳ್ಳಿಯಲ್ಲಿ ಮಠವೊಂದನ್ನು ಕಟ್ಟಿಸಿ ಭೂದತ್ತಿ ನೀಡಿದನು. ಇಂತಹ ಮಠದಲ್ಲಿ ಕಾಲಕ್ರಮೇಣ ವೀರಶೈವರಲ್ಲದವರು ಸೇರಿಕೊಂಡರು. ಆದುದರಿಂದ ಆ ಮಠದ ಭಕ್ತರು ಇದರ ಬಗ್ಗೆ ಹಾಗಲವಾಡಿ ನಾಯಕರಿಗೆ ದೂರು ಸಲ್ಲಿಸಿದರು. ಆಗ ಮುದಿಯಪ್ಪನಾಯಕನ ಮಗ ಬೈರಪ್ಪನಾಯಕನ (೧೬೨೭-೧೬೫೪) ಆಳ್ವಿಕೆ ಇತ್ತು. ಭೈರಪ್ಪನಾಯಕನು ಈ ವಿಷಯವನ್ನು ಕೈಗೆತ್ತಿಕೊಂಡು ಪರಿಶೀಲಿಸಿ ಈ ಮಠ ವೀರಶೈವಮಠವೇ ಆಗಿರುವುದರಿಂದ ಇಲ್ಲಿ ವೀರಶೈವರೇ ಇರಬೇಕು ಎಂದು ನ್ಯಾಯತೀರ್ಮಾನ ಮಾಡಿ ಶಾಸನವೊಂದನ್ನು ಹಾಕಿಸಿದನು:

ದಳವಾಯಿ ಶೀಲವಂಥ ವಿರಕ್ತ
ಪರಮಪ್ಪನಮಠದಲ್ಲಿ ವೀರಮಾಹೇಶ್ವರರೇ ಯಿರಬೇಕು
ಯಿದು ಮುದಿಯಪನಾಯಕನ ಬೆಯಿರಪನಾಯಕನ
ವೊಪ್ಪಿತದ ಶಾಸನ (ಎಕ ೧೬, ಚಿಕ್ಕನಾಯ್ಕನಹಳ್ಳಿ ೧).

ಪ್ರಾಯಶಃ ಈ ಮಠದ ನಂದೀಶ್ವರಸ್ವಾಮಿಗಳು ಲಿಂಗೈಕ್ಯರಾದ ನಂತರ ಅದನ್ನು ವೀರಶೈವರಲ್ಲದವರು ಆಕ್ರಮಿಸಿಕೊಂಡಿರಬಹುದು; ಅಥವಾ ಆ ಮಠದ ಆದಾಯವನ್ನು ಅನುಭವಿಸಲಾರಂಭಿಸಿ ಮಠದ ಆಚಾರ ವಿಚಾರಗಳಿಗೆ ಧಕ್ಕೆಯೊದಗಿಸಿರಬಹುದು. ಆದುದರಿಂದ ಆ ಮಠದ ಭಕ್ತರು ಹಾಗಲವಾಡಿ ನಾಯಕರಿಗೆ ದೂರು ಸಲ್ಲಿಸಿ ಮಠದ ಪರವಾದ ನ್ಯಾಯ ಪಡೆದರು. ಆದುದರಿಂದಲೇ ಬೈರಪ್ಪನಾಯಕನು ತನ್ನ ತಂದೆ ಹಾಕಿಸಿದ್ದ ಶಾಸನದ ಕೆಳಭಾಗದಲ್ಲಿಯೇ ತನ್ನ ಶಾಸನವನ್ನು ಹಾಕಿಸಿರುವುದು ಪರೋಕ್ಷವಾಗಿ ಇದನ್ನು ಸಮರ್ಥಿಸುತ್ತದೆ.

ಯುಗಾಂತರದಲ್ಲಿ ಜನಕ ಮಹಾರಾಜನು ಸಿಂಹಾಸನದ ಮೇಲೆ ಕುಳಿತು ಒಂದು ಕಾಲನ್ನು ತಣ್ಣೀರಿನಲ್ಲಿ ಮತ್ತೊಂದು ಕಾಲನ್ನು ಬಿಸಿನೀರಿನಲ್ಲಿ ಇಟ್ಟುಕೊಂಡು ಸಮತೂಕವಾಗಿ ನ್ಯಾಯತೀರ್ಮಾನ ಮಾಡುತ್ತಿದ್ದನು. ಇಂತಹ ಜನಕರಾಯ, ಸಗರ ಚಕ್ರವರ್ತಿಯ ಹೊರತು ಇನ್ನು ಯಾರ ಹೆಸರನ್ನೂ ಪುರಾಣಗಳು ನಮಗೆ ತಿಳಿಸಿಲ್ಲ. ಏಕೆಂದರೆ ನ್ಯಾಯ ತೀರ್ಮಾನಗಳಿಗೆ ಅವರು ಹೆಸರುವಾಸಿಯಾಗಿದ್ದು ಅವರೆತ್ತರಕ್ಕೆ ಯಾರೂ ಈ ವೃತ್ತಿಯಲ್ಲಿ

ಸಾಟಿಯಾಗಿಲ್ಲ. ಆದರೂ ಕೂಡಾ ಹಾಗಲವಾಡಿ ರಾಜ್ಯವು ಧರ್ಮಸಂಸ್ಥಾನವೆಂದು ಇತಿಹಾಸದಲ್ಲಿ ದಾಖಲಾಗಿರುವುದರಿಂದ ಅಲ್ಲಿನ ಪಾಳೆಯಗಾರರು ನ್ಯಾಯತೀರ್ಮಾನದಲ್ಲಿ ಯಾರಿಗೂ ಅನ್ಯಾಯವಾಗದಂತೆ ನೋಡಿಕೊಳ್ಳುತ್ತಿದ್ದುದರಿಂದಲೇ ಅವರ ರಾಜ್ಯಕ್ಕೆ ಧರ್ಮಸಂಸ್ಥಾನ ಎಂಬ ಹೆಸರು ಬಂದಿರುವುದಕ್ಕೆ ಕಾರಣವಿರಲೂಬಹುದು. ಉದಾಹರಣೆಗೆ, ಇಮ್ಮಡಿ ಮುದಿಯಪ್ಪನಾಯಕನ ಆಳ್ವಿಕೆಯನ್ನು ಹೆಸರಿಸಬಹುದು.

ಹಾಗಲವಾಡಿ ನಾಯಕರು 'ಸತ್ಯಭೂಪ ಹರಿಶ್ಚಂದ್ರ' ಎಂಬ ಬಿರುದನ್ನು ಪಡೆದು ಕೊಂಡಿದ್ದರು. ಸತ್ಯಹರಿಶ್ಚಂದ್ರ ಸತ್ಯ, ನ್ಯಾಯ, ಧರ್ಮಗಳಿಗೆ ಹೆಸರುವಾಸಿಯಾದ ವ್ಯಕ್ತಿ. ಅವನು ಇವರಿಗೆ ಆದರ್ಶಪ್ರಾಯನಾಗಿದ್ದನು. ಯಾವುದೇ ಕಾಲದಲ್ಲಿ ಮತ್ತು ಯಾವುದೇ ರಾಜ್ಯದಲ್ಲಿ ಅಪರಾಧಿಗಳು ಇದ್ದೇ ಇರುತ್ತಾರೆ. ಹರಿಶ್ಚಂದ್ರನ ರಾಜ್ಯದಲ್ಲೂ ಇದು ತಪ್ಪಲಿಲ್ಲ. ಅಪರಾಧಿಗಳಿಗೆ ಶಿಕ್ಷೆಕೊಡುವ ದಂಡಶಕ್ತಿ ರಾಜನಿಗೆ ಇದ್ದೇ ಇತ್ತು. ಆದರೆ ಅಂತಹ ದಂಡಶಕ್ತಿಯನ್ನು ಮಾನವೀಯ ದೃಷ್ಟಿಯಿಂದ ಬಳಸಬೇಕಾದುದು ಆದರ್ಶವೆಂದು ಪರಿಗಣಿಸಲಾಗಿತ್ತು. ಹಾಗಲವಾಡಿ ನಾಯಕರಲ್ಲಿ ಶಿಕ್ಷೆಕೊಡುವಾಗ, ನ್ಯಾಯವಿತರಣೆ ಮಾಡುವಾಗ ಅನೇಕ ರಾಜರು ಈ ಆದರ್ಶವನ್ನು ಅನುಸರಿಸುತ್ತಿದ್ದರೆಂದು ನಮಗೆ ಆಧಾರಗಳು ಹೇಳುತ್ತವೆ. ಕ್ರಿ.ಶ. ೧೭೨೦ ರಿಂದ ಕ್ರಿ.ಶ.೧೭೪೦ರ ವರೆಗೆ ರಾಜ್ಯವಾಳಿದ ಹಾಗಲವಾಡಿ ಧರ್ಮಸಂಸ್ಥಾನದ ದೊರೆ ಇಮ್ಮಡಿ ಮುದಿಯಪ್ಪನಾಯಕನು ತನ್ನ ಕಾಲದಲ್ಲಿ ತಪ್ಪುಮಾಡಿ ಶಿಕ್ಷೆಗೆ ಒಳಗಾದವರಿಗೆ ಅವರನ್ನು ಬಂಧೀಖಾನೆಗೆ ಹಾಕಿದರೆ ಅವರಿಗೆ ಅಲ್ಲಿ ಎಮ್ಮೆಮೊಸರು, ದಪ್ಪಕ್ಕಿಅನ್ನ ಊಟ ಕೊಡುವಂತೆಯೂ, ಅವರ ಹಾಸಿಗೆಗೂ ಹೊದಿಕೆಗೂ ಎರಡು ಕಂಬಳಿ ಕೊಡುವಂತೆಯೂ ಅಥವಾ ಬಂಧೀವಾನರ ಅವಧಿ ಮುಗಿದ ಬಳಿಕ, ಆ ಅಪರಾಧಿಗಳನ್ನು ರೂಬು ರೂಬು ಕರೆಯಿಸಿ ವಿವೇಕ ಹೇಳಿ ಬಿಡುಗಡೆ ಮಾಡುವಂತೆಯೂ ಅಪ್ಪಣೆ ಮಾಡಿದ್ದನೆಂದು ಹಾಗಲವಾಡಿ ನಾಯಕರ ವಂಶಾವಳಿ ವಿವರ ಇರುವ ಸುರುಳಿಯು ತಿಳಿಸುತ್ತದೆ. ಆದುದರಿಂದ ಹಾಗಲವಾಡಿ ನಾಯಕರು ಅಪರಾಧಿಗಳನ್ನು ಮಾನವೀಯ ದೃಷ್ಟಿಯಿಂದ ನೋಡಿಕೊಳ್ಳುತ್ತಾ ಅವರ ತಪ್ಪನ್ನು ತಿದ್ದುವ ಪ್ರಯತ್ನ ಮಾಡುವುದರ ಮೂಲಕ ಅವರನ್ನೂ ಸತ್ಪ್ರಜೆಗಳನ್ನಾಗಿ ಮಾಡುವ ಇಂಗಿತ ಹೊಂದಿದ್ದರೆನ್ನಬಹುದು. ಅಲ್ಲದೆ, ಶಿಕ್ಷೆಗಳು ಅಷ್ಟೊಂದು ಕಠಿಣವಾಗಿರಲಿಲ್ಲವೆನ್ನಬಹುದು ಮತ್ತು ಅಪರಾಧಗಳೂ ಕೂಡ ಕಡಿಮೆ ಇದ್ದಿರಬಹುದು ಎಂದು ಹೇಳಬಹುದು.

ಹಾಗಲವಾಡಿ ಅರಸು ಇಮ್ಮಡಿ ಮುದಿಯಪ್ಪನಾಯಕನು ಸಮರದಲ್ಲಿ ವೀರಗುಣ, ನ್ಯಾಯಾಡಳಿತದಲ್ಲಿ ಶಾಂತಿಗುಣ ಅವಶ್ಯಕವೆಂದು ಭಾವಿಸಿದ್ದನು. ಇದಲ್ಲದೇ ಈತನು ಗುರುವಿನ ಅನುಗ್ರಹದಿಂದ ರಾಜ್ಯದ ಶತ್ರುಗಳನ್ನು ಮತ್ತು ಮನುಷ್ಯನ ವೈರಿಯಾಗಿದ್ದ ಅರಿಷಡ್ವರ್ಗಗಳನ್ನು ಜಯಿಸಿ ರಾಜ್ಯಭಾರ ಮಾಡುತ್ತಿದ್ದನೆಂದು; ಸದ್ಗುಣ ಸಂಪತ್ತಿನಿಂದ, ದಾನಶೀಲತೆಯಿಂದ ದುಷ್ಟ ಶಿಕ್ಷಕನಾಗಿ ನ್ಯಾಯಾಡಳಿತ ನಡೆಸುತ್ತಿದ್ದನೆಂದು ಕವಿಕರ್ಣ

ರಸಾಯನ ವ್ಯಾಖ್ಯಾನ ಪೀಠಿಕಾಪದ್ಯವು ವರ್ಣಿಸುತ್ತದೆ. ಅದು ಮುಂದುವರೆದು, ಇಮ್ಮಡಿ ಮುದಿಯಪ್ಪನಾಯಕನು ದೇವೇಂದ್ರನಂತೆ ಮಹಾ ಪ್ರತಾಪಶಾಲಿ, ಯೋಗವಿದ್ಯೆಯಲ್ಲಿ ವಿಶಾರದ, ಶಿವಾನುಭವಸಂಪನ್ನ, ಮಹಾಜ್ಞಾನಿ ಎಂದು ವರ್ಣಿಸುತ್ತದೆ. ಹೀಗೆ ಹಾಗಲವಾಡಿ ನಾಯಕರು ನ್ಯಾಯವಿತರಣೆಯಲ್ಲಿ ಅತ್ಯುತ್ತಮವಾದ ಆದರ್ಶಗಳನ್ನು ಇಟ್ಟುಕೊಂಡಿದ್ದರಲ್ಲದೆ, ಧರ್ಮ ಮತ್ತು ದಂಡಶಕ್ತಿಗಳನ್ನು ಪರಸ್ಪರ ಸಮನ್ವಯಗೊಳಿಸಿ ಆಡಳಿತ ನಡೆಸುತ್ತಿದ್ದರು.

ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಜನರು ಮತ್ತು ಹಿತಾಸಕ್ತಿಗಳ ರಕ್ಷಣೆಗೆ ಮತ್ತು ಸಣ್ಣಪುಟ್ಟ ಸಮಸ್ಯೆಗಳ ನಿವಾರಣೆಗೆ ಆಯಾ ಊರಿನ ಗೌರವಾನ್ವಿತ ಹಿರಿಯರ ಮೊರೆಹೋಗುತ್ತಿದ್ದರು. ನ್ಯಾಯಪಕ್ಷಪಾತಿಗಳಾದ ಇವರು ಊರಿನ ಜನರ ಪ್ರತಿನಿಧಿಗಳಾಗಿ ಸಮಸ್ತ ಆಗುಹೋಗುಗಳಿಗೆ ಸಮದರ್ಶಿಗಳಾಗಿ ಜನತೆ ಮತ್ತು ರಾಜ್ಯಾಡಳಿತದ ಮಧ್ಯದ ಕೊಂಡಿಯಂತೆ ಕೆಲಸ ನಿರ್ವಹಿಸುತ್ತಿದ್ದರು. ಪ್ರತಿ ಹಳ್ಳಿಯೂ ತಮ್ಮನ್ನು ತಾವೇ ಆಳಿಕೊಳ್ಳುವ ಆಡಳಿತದ ಸ್ವಯಂಪೂರ್ಣ ಘಟಕವಾಗಿ ಬೆಳೆದುಬರಲು ಅಲ್ಲಿನ ಈ ಸಹಜನಾಯಕರು ಮತ್ತು ಜನರು ಅವಕಾಶ ಕಲ್ಪಿಸಿಕೊಟ್ಟರು. ಈ ಗ್ರಾಮಗಳ ಹಂತದಲ್ಲಿ ನ್ಯಾಯಾಡಳಿತ ಪರಂಪರೆಯಿಂದ ಬಂದಂತಹ ವ್ಯವಸ್ಥೆಯಂತೆಯೇ ಮುಂದುವರಿಯಿತು. ಹಾಗಲವಾಡಿ ನಾಯಕರ ಸಂಸ್ಥಾನದಲ್ಲಿಯೂ ಕೂಡಾ ಸ್ಥಳೀಯವಾದ ವ್ಯಾಜ್ಯಗಳನ್ನು ಗ್ರಾಮದ ಹಿರಿಯರೇ ನಿಂತು ಬಗೆಹರಿಸಿಕೊಳ್ಳುತ್ತಿದ್ದರು. ಆ ವ್ಯಾಜ್ಯಗಳು ಭಾರೀ ಪ್ರಮಾಣದವುಗಳಾಗಿದ್ದರೆ ಮಾತ್ರ ಹಾಗಲವಾಡಿ ನಾಯಕರ ಆಸ್ಥಾನ ಅದರ ಬಗ್ಗೆ ನ್ಯಾಯತೀರ್ಮಾನ ನೀಡುತ್ತಿತ್ತು.

ಉದಾಹರಣೆಗೆ, ಎ.ಕ.೧೨, ಗುಬ್ಬಿ ೨೭ರ ಕಡಬಗ್ರಾಮಕ್ಕೆ ಸೇರಿದ ಕೋಡಿಪಾಳ್ಯದ ಶಾಸನವೊಂದರಲ್ಲಿ ದಾಖಲಾಗಿರುವಂತೆ, ಕಡಬಗ್ರಾಮದ ಹೊರವಲಯದಲ್ಲಿ ಸಿದ್ದೇಶ್ವರ ಗುಡಿಯೊಂದಿದ್ದು, ಅದು ಕ್ರಿ.ಶ.೧೬೯೭ರ ವೇಳೆಗೆ ಪೂಜೆ ಪುನಸ್ಕಾರವಿಲ್ಲದೆ ಪಾಳುಬಿದ್ದಿತ್ತು. ಅಲ್ಲಿನ ಜನರು ಈ ದೇವಾಲಯದ ಸುತ್ತಮುತ್ತಲಿನ ಆವರಣವನ್ನು ಸ್ಮಶಾನ ಮಾಡಿಕೊಂಡಿದ್ದರು. ಆದರೆ ಆ ಗುಡಿಯ ಸುತ್ತಲೂ ವಾಸಿಸುತ್ತಿದ್ದ ಜನತೆ ಅಲ್ಲಿ ಶವಹೂಳುವುದನ್ನು ವಿರೋಧಿಸಿದರು. ಆಗ ವಿವಾದ ಆರಂಭವಾಯಿತು. ಅಲ್ಲಿನ ಜನತೆ ಈ ಸಮಸ್ಯೆಯನ್ನು ಊರಿನ ಪ್ರಮುಖರ ಗಮನಕ್ಕೆ ತಂದರು. ಆದರಂತೆ ಊರಿನ ಹಿರಿಯ ಪ್ರಮುಖರು ಸೇರಿ ಕುಳಿತು ಚರ್ಚಿಸಿ ಎಲ್ಲರಿಗೂ ಒಪ್ಪಿಗೆಯಾಗುವಂತಹ ತೀರ್ಮಾನ ನೀಡಿದರು. ಅದರಂತೆ, ಆ ಸಿದ್ದೇಶ್ವರ ಗುಡಿಯ ಪ್ರಾಕಾರದಲ್ಲಿ ಬಾವಿಯನ್ನು ತೋಡಿಸಿ, ಆ ಬಾವಿಯ ಬಳಿಯಿಂದ ಬಾಣವನ್ನು ಎಸೆಯುವ ಅಳತೆಯೊಳಗೆ ಯಾರೂ ಕೂಡಾ ಶವಗಳನ್ನು ಹೂಳುವುದಾಗಲೀ ಅಥವಾ ಸುಡುವುದಾಗಲೀ ಮಾಡಕೂಡದು. ಹಾಗೇನಾದರೂ ಈ ತೀರ್ಮಾನವನ್ನು ಉಲ್ಲಂಘಿಸಿದರೆ ಅವರಿಗೆ ಕಠಿಣಶಿಕ್ಷೆಯ ಜೊತೆಗೆ ದೇವಲೋಕಮರ್ತ್ಯಲೋಕಕೆ ಹೊರಗು ಎಂದು ಹೇಳಿ ಹತ್ತುಜನ ಶಿವಭಕ್ತರ ಸಮ್ಮುಖದಲ್ಲಿ ಈ ಜಗಳವನ್ನು ಬಗೆಹರಿಸಿ

ಶಾಸನವನ್ನು ಅಲ್ಲಿ ನೆಡಿಸಿದರು. ಹೀಗೆ ಗ್ರಾಮದಲ್ಲಿ ಉದ್ಭವಿಸಿದ್ದ ವಿವಾದವನ್ನು ಅಲ್ಲಿನ ಹಿರಿಯರೇ ಸುಸೂತ್ರವಾಗಿ ಬಗೆಹರಿಸಿ ಗ್ರಾಮದ ಸಾಮರಸ್ಯವನ್ನು ಕಾಪಾಡಿದರು. ಆದುದರಿಂದ ಸ್ಥಳೀಯ ಸಮಸ್ಯೆಗಳನ್ನು ಸ್ಥಳೀಯರೇ ಕುಳಿತು ಬಗೆಹರಿಸಿಕೊಳ್ಳುತ್ತಿದ್ದರೆಂದು ಇದರಿಂದ ಗೊತ್ತಾಗುತ್ತದೆ.

ಹಾಗಲವಾಡಿ ನಾಯಕರು ನ್ಯಾಯವಿತರಣೆಯಲ್ಲಿ ಪಕ್ಷಪಾತ ಮಾಡುತ್ತಿರಲಿಲ್ಲ. ಅರ್ಜಿದಾರರ ಅಹವಾಲುಗಳನ್ನು ತಾಳ್ಮೆಯಿಂದ ಕೇಳುತ್ತಿದ್ದರು. ಅದಕ್ಕೆ ತಕ್ಕ ನ್ಯಾಯ ನೀಡುತ್ತಿದ್ದರು. ಅವರು ಸ್ಥಳಪರಿಶೀಲನೆ ಮಾಡಿ ನಿಖರ ಮಾಹಿತಿ ಸಂಗ್ರಹಿಸಿ ಅದರ ಆಧಾರದ ಮೇಲೆ ತೀರ್ಮಾನ ನೀಡುತ್ತಿದ್ದರು. ಉದಾಹರಣೆಗೆ, ಹುಣಸಿನಹಳ್ಳಿ ತಿಮ್ಮಯ್ಯ ಎಂಬುವನ ಪೂರ್ವಜರು ಹೊಸೂರಿನಲ್ಲಿ ಕೋಟೆಯೊಂದನ್ನು ಕಟ್ಟಿಸಿ ಆ ಸ್ಥಳದ ಗೌಡಿಕೆಯನ್ನು ಮಾಡುತ್ತಾ ಕರ ಸಂಗ್ರಹಿಸುತ್ತಿದ್ದರು. ತಿಮ್ಮಯ್ಯನು ತನ್ನ ಕಾಲದಲ್ಲಿ ಕಾರಣಾಂತರದಿಂದ ಕೆಲವರ್ಷಗಳ ಕಾಲ ಬೇರೆಕಡೆಗೆ ವಲಸೆಹೋಗಿ ನೆಲೆನಿಂತನು. ಈ ಅವಕಾಶವನ್ನುಪಯೋಗಿಸಿಕೊಂಡ ಇತರರು ಅವನ ಹೆಸರಲ್ಲಿ ಕರವಸೂಲಿ ಆರಂಭ ಮಾಡಿ ತಿಮ್ಮಯ್ಯನ ಪೂರ್ವಜರ ಶಾಸನದ ಕಲ್ಲನ್ನು ಒಡೆದುಹಾಕಿದರು. ತಿಮ್ಮಯ್ಯನು ಪುನಃ ಹೊಸೂರಿಗೆ ಹಿಂತಿರುಗಿದಾಗ, ತನಗೆ ಬರುತ್ತಿದ್ದ ತೆರಿಗೆ ಬೇರೆಯವರಿಗೆ ಹೋಗುತ್ತಿದ್ದುದನ್ನು ಕಂಡನು. ಆಗ ಅವನು ಆ ಪ್ರಾಂತ್ಯದ ಆಡಳಿತಗಾರನಿಗೆ ದೂರು ಸಲ್ಲಿಸಿದನು. ಅವನ ದೂರನ್ನು ಸ್ವೀಕರಿಸಿದ ನಾಯಕರು ಹೊಸೂರಿನಲ್ಲಿದ್ದ ೧೨ ಜನ ಆಯಗಾರರನ್ನು ಸಂಪರ್ಕಿಸಿ ಅವನ ಪೂರ್ವಜರ ಮಾಹಿತಿಯನ್ನು ಸಂಗ್ರಹಿಸಿದರು. ಈ ೧೨ ಜನ ಆಯಗಾರರ ಸಾಕ್ಷಿಯನ್ನಿಟ್ಟುಕೊಂಡು ನಾಯಕರು ತಿಮ್ಮಯ್ಯನೇ ನಿಜವಾದ ಹಕ್ಕುದಾರನೆಂದು ತೀರ್ಮಾನಮಾಡಿ, ಅದನ್ನು ೧೨ ಜನ ಆಯಗಾರರ ಸಹಿಯನ್ನು ಒಳಗೊಂಡ ತಾಮ್ರಪತ್ರದ ಮೂಲಕ ನೀಡಿದರು ಎಂದು ಶಿರಾ ತಾಲ್ಲೂಕಿನ ೧೧೨ನೇ ಶಾಸನವು ದಾಖಲಿಸುತ್ತದೆ. ಹೀಗೆ ನಾಯಕರಿಗೆ ಅಪ್ರತಿಮ ಅಧಿಕಾರವಿದ್ದರೂ ಕೂಡ ಅರಮನೆಯಲ್ಲೇ ಕುಳಿತುಕೊಂಡು ನ್ಯಾಯನೀಡದೆ ಸಾಕ್ಷಿಗಳನ್ನಾಧರಿಸಿದ ತೀರ್ಮಾನ ನೀಡುತ್ತಿದ್ದರು ಎಂದು ಹೇಳಬಹುದು.

ಒಟ್ಟಿನಲ್ಲಿ, ಹಾಗಲವಾಡಿ ನಾಯಕರ ಕಾಲದಲ್ಲಿ ನ್ಯಾಯವಿತರಣೆಯು ಪರಂಪರಾನುಗತವಾಗಿ ಬಂದಿದ್ದ ತತ್ವಗಳನ್ನಾಧರಿಸಿ ನಡೆಯುತ್ತಿತ್ತು. ಎಲ್ಲ ಕಾಲದಂತೆ ರಾಜ್ಯದ್ರೋಹವು ಅತ್ಯಂತ ಹೆಚ್ಚಿನ ಅಪರಾಧವಾಗಿತ್ತು. ಈ ಅಪರಾಧಕ್ಕೆ ಮರಣದಂಡನೆ ನೀಡಲಾಗುತ್ತಿತ್ತು. ನ್ಯಾಯವು ತಮ್ಮ ಆಡಳಿತದ ಸಕ್ರೀಯ ತತ್ವವಾಗಿರಬೇಕೆಂದು ನಾಯಕರು ಸದಾ ತವಕಿಸುತ್ತಿದ್ದರು. ಧರ್ಮಗುರುಗಳೂ ಕೂಡ ಸಾಮಾಜಿಕ ಮತ್ತು ಧಾರ್ಮಿಕ ಸ್ವರೂಪದ ಕೆಲವೊಂದು ಪ್ರಕರಣಗಳನ್ನು ಇತ್ಯರ್ಥಪಡಿಸುತ್ತಿದ್ದರು. ಬಹುಕಾಲದಿಂದ ಮುಂದುವರಿದುಕೊಂಡು ಬಂದ ಸ್ಥಾನಿಕಸಭೆಗಳೂ ಕೂಡ ಸಾಮಾಜಿಕ, ಆಡಳಿತೀಯ ಮತ್ತು ನ್ಯಾಯಿಕ ಸ್ಥಳೀಯ ವಿಷಯಗಳ ತೀರ್ಮಾನವನ್ನು ಮಾಡುತ್ತಿದ್ದವು. ಬಾರ್ಬೋಸನು, "ವಿಜಯನಗರದ

ಕಾಲದಲ್ಲಿ ಕೇವಲ ರಾಜರಷ್ಟೇ ಅಲ್ಲದೆ ಜನತೆಯೂ ಕೂಡ ಅಪಾರ ನ್ಯಾಯಸಾಮ್ಯತೆಯನ್ನು ನ್ಯಾಯವನ್ನು ಪಾಲಿಸಿಕೊಂಡು ಬರುತ್ತಿದ್ದರೆಂದು" ಹೇಳಿದ್ದಾನೆ. ಬುಡಕಟ್ಟು ಜನರೇ ಹೆಚ್ಚಾಗಿ ವಾಸಿಸುತ್ತಿದ್ದ ಪಾಗಲವಾಡಿ ನಾಯಕರ ರಾಜ್ಯದಲ್ಲಿ ಕಟ್ಟೆಮನೆಗಳು ಆಯಾ ಜಾತಿಯ ನ್ಯಾಯತೀರ್ಮಾನಗಳನ್ನು ಮಾಡುತ್ತಿದ್ದವು. ಮತ್ತು ಕೆಲವು ನಿಯಮಗಳನ್ನು ಮಾಡಿಕೊಂಡಿದ್ದವು. ಉದಾಹರಣೆಗೆ, ಕ್ರಿ.ಶ.೧೬೦೦ರ ಹೊನ್ನವಳ್ಳಿ ಶಾಸನದಲ್ಲಿ ದಾಖಲಾಗಿರುವಂತೆ, "ದೇವಾಂಗ, ಅಗಸ, ಕುಂಬಾರರು ಅವಿವಾಹಿತ ಹೆಣ್ಣುಗಳು ಬಾಳು ತಪ್ಪಿದರೆ ಅಂತಹವರು ಮತ್ತು ಅವರ ಮಕ್ಕಳು ಕುಲಾಚಾರಕ್ಕೆ, ಸಹಪಂಕ್ತಿ ಭೋಜನಕ್ಕೆ ಅನರ್ಹರು" ಎಂಬ ಕಠಿಣ ನಿಯಮ ಮಾಡಿಕೊಂಡಿದ್ದರು. ಆದುದರಿಂದ ಕುಲಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಆಯಾ ಕುಲದ ನಿಯಮಗಳಂತೆ ಆಯಾ ಕುಲದವರು ತೀರ್ಮಾನಿಸುತ್ತಿದ್ದುದರಿಂದ ಸರ್ಕಾರದ ಕೆಲಸ ಹಗುರವಾಗಿತ್ತು ಎಂದು ಹೇಳಬಹುದು.

### ಆಕರಗ್ರಂಥಗಳು


೧. ಎ.ಕ., ಸಂ ೧೨ ಮತ್ತು ೧೬

೨. ಮಹಾಲಿಂಗಂ ಟಿ.ವಿ., ಸೌತ್ ಇಂಡಿಯನ್ ಪಾಲಿಟಿ

೩. ಯೋಗೀಶ್ವರಪ್ಪ ಡಿ.ಎನ್., ಹಾಗಲವಾಡಿ ನಾಯಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪. ಪುಟ್ಟಣ್ಣ ಎಂ.ಎಸ್., ಹಾಗಲವಾಡಿ ಪಾಳೆಯಗಾರರು, ಬೆಂಗಳೂರು, ೧೯೩೧

೫. ಸುಪ್ಪಿಮಲ್ಲ, ತೋಂಟದಸಿದ್ದೇಶ್ವರ ಸಾಂಗತ್ಯ, ಎಂ.ಎಸ್.ಬಸವರಾಜಯ್ಯ(ಸಂ), ತಿಪಟೂರು ೧೯೯೫.

೬. ಮುದ್ವೀರಸ್ವಾಮಿ, ಹಾಗಲವಾಡಿ ಮುದ್ವೀರಸ್ವಾಮಿ ಸ್ವರವಚನಗಳು, ವೀರಣ್ಣ ರಾಜೂರ(ಸಂ), ಗದಗ, ೧೯೮೬

೭. ರೈಸ್ ಬಿ.ಎಲ್., ಮೈಸೂರು ಗೆಜೆಟಿಯರ್, ಸಂ ೧ ಮತ್ತು ೨, ಲಂಡನ್, ೧೮೯೭

೮. ಫ್ರಾನ್ಸಿಸ್ ಬುಕಾನನ್, ಎ ಜರ್ನಿ ಫ್ರಂ ಮದ್ರಾಸ್, ಲಂಡನ್, ೧೮೦೭

೩೪

# ಹಂಡೆ ಪಾಳೆಯಗಾರರ ನ್ಯಾಯಾಡಳಿತ

ಡಾ. ಚೆನ್ನಕ್ಕ ಪಾವಟೆ

ಕರ್ನಾಟಕದ ಪ್ರಮುಖ ಅರಸುಮನೆತನಗಳಲ್ಲಿ ವಿಜಯನಗರ ಸಾಮ್ರಾಜ್ಯ ಅದ್ವಿತೀಯವಾದುದು. ಕನ್ನಡ ಜನತೆಯ ಕುಲಕೋಟಿಯ ಆಶೋತ್ತರಗಳನ್ನು ತಲಸ್ಪರ್ಶಿಯಾಗಿ ದಿಗ್‌ದಿಗಂತದಲ್ಲಿ ಹಾರಿಸಿ ಮೆರೆಯಿಸಿದ, ಕೀರ್ತಿಪ್ರತಿಷ್ಠೆಗೆ ಸದವಕಾಶವಿತ್ತ ಸಾಮ್ರಾಜ್ಯ. ವಿಜಯನಗರದ ಪ್ರಸಿದ್ಧ ಪಾಳೆಯಗಾರರಲ್ಲಿ ಹೆಸರುವೇತ್ತ ಸಂಸ್ಥಾನ ಇನ್ನೂ ಪ್ರಕಟಗೊಳ್ಳದ ಹಂಡೆ ಪಾಳೆಯಗಾರರ ವಿಸ್ತೃತ ಅಧ್ಯಯನ. 'ಸ್ವತಂತ್ರ ಸಾಮ್ರಾಜ್ಯದ ರಕ್ಷಕ'ರೆಂಬ ಬಿರುದು ಹೊತ್ತು 'ದುಷ್ಟನಿಗ್ರಹ ಶಿಷ್ಟ ಪರಿಪಾಲನ' ಕ್ರಿಯೆಯಲ್ಲಿ ತಮ್ಮ ಪ್ರಮುಖ ಕರ್ತವ್ಯವನ್ನು ಪಾಲಿಸಿ ಕೀರ್ತಿಶೇಷರಾಗಿರುವರು. ಇವರ ಆಳ್ವಿಕೆಯ ಕಾಲ ೧೫೬೭ ರಿಂದ ೧೮೧೯ರ ವರೆಗೆ ಇದ್ದರೂ ಬ್ರಿಟಿಷರ ಆಗಮನದ ವರೆಗೆ ಇವರ ಆಳ್ವಿಕೆಯನ್ನು ವಿಸ್ತರಿಸಬೇಕಿದೆ. ಕರ್ನಾಟಕ ಮತ್ತು ಆಂಧ್ರಪ್ರದೇಶದ ಮಹತ್ವದ ಕೆಲಭಾಗಗಳನ್ನು ಆಳಿದ ಈ ಪಾಳೆಯಗಾರರು, ಭದ್ರ ಆಡಳಿತಕ್ಕೋಸುಗ ಕೋಟೆಗಳ ಸ್ಥಾಪನೆ, ದೇವಸ್ಥಾನಗಳ ನಿರ್ಮಾಣ, ಮಠಮಾನ್ಯಗಳಿಗೆ ದಾನದತ್ತಿಗಳು, ಜನಪರಸೇವೆಯ ಕಾರ್ಯಗಳೆನಿಸಿದ ಕೆರೆ ಕಟ್ಟೆ ಬಾವಿ ಸರೋವರ ಹೊಂಡ ಮಡುವು ತಟಾಕಗಳನ್ನು ರಚಿಸಿ ಪ್ರಜೆಗಳ ಸರ್ವವಿಧ ಸುಖ ಸಂತೋಷಕ್ಕೆ ಆಸ್ಪದವಿತ್ತವರು. ಅವರ ಆಳ್ವಿಕೆಯ ಅವಧಿಯಲ್ಲಿ ರಾಜ್ಯವನ್ನು ಅಚ್ಚುಕಟ್ಟಾಗಿ ಮುಂದಾಲೋಚನೆ, ಅಷ್ಟೇ ಮುತ್ಸದ್ದಿತನಗಳಿಂದ ವಿಜಯನಗರ ಸಾಮ್ರಾಜ್ಯದಧಿಪತಿಗಳ ಮನಸ್ಸು ಗೆದ್ದಂತೆ, ಬಿಜಾಪುರದ ಸುಲ್ತಾನರ ವಿಶೇಷ ಪ್ರೀತಿ ವಿಶ್ವಾಸವನ್ನೂ ಸಂಪಾದಿಸಿಕೊಂಡಿದ್ದರು.

## ಹಂಡೆ ವಜೀರರ ನಿಷ್ಠೆ

ಪಾಳೆಯಗಾರಿಕೆಯ ಮೂರು ಶತಮಾನಗಳ ಆಳ್ವಿಕೆಯ ಅವಧಿಯಲ್ಲಿ ಇವರೆಂದೂ ಸ್ವತಂತ್ರ ರಾಜರಾಗಿ ಶೋಭಿಸಲಿಲ್ಲ. ತಮ್ಮ ಆಳ್ವಿಕೆಯುದ್ದಕ್ಕೂ 'ವಜೀರ'ರಾಗಿಯೇ ರಾಜ್ಯ ಪ್ರತಿಪಾದನೆಗೈದ ಹಂಡೆ ಅರಸರು, ಮೇಲಿನವರಿಂದ ಅನೇಕ ವಿಷಮ ಸಂದರ್ಭಗಳಲ್ಲಿ

ಎದುರಾಗುವ ಅಷ್ಟೇ ಸ್ವಾಮಿನಿಷ್ಠರಾಗಿ ಬಾಳು ಬದುಕುವ ಗುರುಹಿರಿಯರಲ್ಲಿ ಪ್ರೀತಿ, ವಿಶ್ವಾಸವನ್ನು ಮನಗಂಡು ಅವರಿಗೆ ದಾನದತ್ತಿಗಳನ್ನು ಬೆಳಗುವಂತೆ ಮಾಡಿದ ಕೀರ್ತಿ ಇವರದು.

ರೇವಣಸಿದ್ಧನ ಒಕ್ಕಲಾದ ಇವರು ರೇವಣಸಿದ್ಧೇಶ್ವರನ ವರಪ್ರಸಾದಿತ ಸೊನ್ನಲಾಪುರ ಶ್ರೀ ಸಿದ್ಧರಾಮನನ್ನು ಆರಾಧ್ಯದೈವವನ್ನಾಗಿಸಿಕೊಂಡವರು. ತಮ್ಮ ಬಾಳಿನುದ್ದಕ್ಕೂ ಶ್ರೀಶೈಲ ಜಗದ್ಗುರು ನಿಡುಮಾಮಿಡಿಪೀಠ, ಹಂಪೆ ಹೇಮಕೂಟ ಸಿಂಹಾಸನ, ಶ್ರೀ ಜಗದ್ಗುರು ಕೊಟ್ಟೂರುಸ್ವಾಮಿಪೀಠ, ಕರಿಯ ವೀರಣ್ಣೊಡೆಯನ ಶಿಷ್ಯನಾದ ಚೆನ್ನ ಮಲ್ಲಿಕಾರ್ಜುನದೇವನ ಶಿಷ್ಯನಾದ ಕೇದಾರದೇವ, ಗುರು ತೋಂಟದ ಸಿದ್ಧಲಿಂಗೇಶ್ವರ ಸಂಪ್ರದಾಯ ವಿರಕ್ತಪೀಠ, ಹೀಗೆ ವೀರಶೈವಧರ್ಮದಲ್ಲಿ ಇರಿಸಿದ ಅಪಾರ ನಿಷ್ಠೆ, ಅನ್ಯ ಧರ್ಮಗಳಲ್ಲಿ ಸಹನೆ ಸೌಹಾರ್ದತೆ ವ್ಯಕ್ತಪಡಿಸಿ ತಮ್ಮ ಅರಸುಮನೆತನದ ಅಳಿವು ಉಳಿವಿಗಾಗಿ ಅನನ್ಯ ಭಕ್ತಿ ಶ್ರದ್ಧೆಯನ್ನಿರಿಸಿ ರಾಜ್ಯಾಡಳಿತ ಕೈಕೊಂಡ ಪಾಳೆಯಪಟ್ಟು ಇದು. ತಮ್ಮ ಆಳ್ವಿಕೆಯ ಪರಿಸರದಲ್ಲಿ ಜನಹಿತ ಬಯಸುವ ಕೆರೆ ಬಾವಿ ಒಡ್ಡು ಗದ್ದಿಗೆಗಳನ್ನು ನಿರ್ಮಿಸಿ ಜನತೆಯ ಆಶೋತ್ತರಗಳಿಗೆ ಸ್ಪಂದಿಸಿದವರು. ಅನಂತಪುರ, ಬುಕ್ಕಪಟ್ಟಣಗಳಂಥ ಪಟ್ಟಣಗಳನ್ನು ಕಟ್ಟಿ ಕೋಟೆಗಳನ್ನು ಭದ್ರವಾಗಿರಿಸಿ, ಅರಮನೆಗಳ ಹೂಡೆ ಒಡ್ಡುಗಳ ಸದುಪಯೋಗದಿಂದ ಬಿಜಾಪುರದ ಸುಲ್ತಾನ ಆದಿಲಶಾಹಿಗಳ ವಿಶ್ವಾಸ ಸಂಪಾದಿಸಿಕೊಂಡು ಅವರಿಂದ ಪೌಜದಾರಿ ಮಕರೂರು 'ವಜೀರಪ್ಪ' ಎಂಬ ಬಿರುದಿಗೆ ಹಕ್ಕುದಾರರಾಗಿರುವರು.

## ಪಾಳೆಯಗಾರಿಕೆಯ ಅವಧಿ

ವಿಜಯನಗರ ಕಾಲದಲ್ಲಿಯ ಇವರ ಅಸ್ತಿತ್ವ ಪ್ರಾರಂಭವಾಗಿದ್ದರೂ ಬಿಜಾಪುರದ ಆದಿಲಶಾಹಿ ಆಳ್ವಿಕೆಯಲ್ಲಿ ತಮ್ಮ ಯೋಜನಾಬದ್ಧವಾದ ಆಳ್ವಿಕೆಯನ್ನು ಮುಂದುವರಿಸಿರು ವರು. ಬ್ರಿಟಿಷರ ಆಗಮನದವರೆಗೆ ಅಸ್ತಿತ್ವದಲ್ಲಿ ಮುಂದುವರಿದ ಈ ಸಂಸ್ಥಾನ ವೈಯಕ್ತಿಕ ಒಳಜಗಳ ದ್ವೇಷ ಅಸೂಯೆಯಲ್ಲಿಯೆ ಬೆಳಗಿ ಬಾಳಿದರೂ ಇದಕ್ಕಿಂತ ಹೆಚ್ಚಾಗಿ ದೇವರು ಧರ್ಮಗಳಲ್ಲಿ ಮನಸ್ಸನ್ನಿರಿಸಿ ಅನೇಕ ಧಾರ್ಮಿಕ ಕಾರ್ಯಗೈಯುತ್ತ ನಾಡಿನಲ್ಲಿ ಶಾಂತಿ ಸುವ್ಯವಸ್ಥೆ ಸಮಾಧಾನ ರೂಢಿಸಿಕೊಂಡು ಬಂದ ಸಂಸ್ಥಾನವಿದು. ಹಂಡೆ ಪಾಳೆಯಗಾರರಿಗೆ ಸಂಬಂಧಿಸಿದಂತೆ ಚಿಕ್ಕಪುಟ್ಟ ಕೃತಿಗಳು, ಅವರ ಆಡಳಿತಕ್ಕೆ ಸಂಬಂಧಪಟ್ಟಂತೆ ಕೆಲವು ಲೇಖನಗಳು ಇಲ್ಲಿಯವರೆಗೆ ಪ್ರಕಟವಾಗಿದ್ದರೂ ಪಾಳೆಯಗಾರರ ಸಮಗ್ರ ಅಧ್ಯಯನದ ಅವಶ್ಯಕತೆಯ ಪ್ರಕ್ರಿಯೆಯಲ್ಲಿ ದೊರೆತದು ತುಂಡು ತುಂಡು ದಾಖಲೆಗಳು. ಹತ್ತಾರು ಕೈಫಿಯತ್ತುಗಳಲ್ಲಿ ಈ ಮನೆತನದ ಪ್ರಾಚ್ಯ ಇತಿಹಾಸ ಹರಿದು ಹಂಚಿಹೋಗಿದ್ದು, ಇವರು ತಮ್ಮ ಆಡಳಿತಕಾಲದಲ್ಲಿ ಮಠಮಾನ್ಯಗಳಿಗಿತ್ತ ಅಪಾರ ಧನಕನಕ ದಾನಗಳ ಆಕರಗಳ ಆಧಾರದ ಮೇಲೆ ಇವರ ಆಡಳಿತ ಮತ್ತು ನ್ಯಾಯಾಡಳಿತವನ್ನು ರಚಿಸಬೇಕಿದೆ.

ಆದರೂ ದೊರೆತ ಅಲ್ಪ ಆಧಾರ, ಪ್ರಾಚ್ಯ ಆಕರಗಳ ಸಹಕಾರದಿಂದ ಹಂಡೆ ಪಾಳೆಯಗಾರಿಕೆಯಲ್ಲಿ ದಂಡ, ಹಂಡೆ ಆಡಳಿತ, ಹಂಡೆ ನ್ಯಾಯಾಡಳಿತ- ಹೀಗೆ ಮೂರು ಅಧ್ಯಾಯದಲ್ಲಿ ಪ್ರಬಂಧದ ಒಟ್ಟು ರೂಪರೇಷೆಯ ನೀಲನಕ್ಷೆಯನ್ನು ಚಿತ್ರಿಸಬಹುದಾಗಿದೆ.

## ಹಂಡೆ ಪಾಳೆಯಗಾರರಲ್ಲಿ ದಂಡನೀತಿ

ಯಾರೇ ಆಗಲಿ, ರಾಜ್ಯದ ಸುಗಮತೆಗೆ ಅನ್ನ ಅರಿವೆ ಆಶ್ರಯದಂತಹ ಮೂಲಭೂತ ಸೌಕರ್ಯಗಳ ಬಗ್ಗೆ ಹೆಚ್ಚಿನ ಆಸ್ಥೆವಹಿಸುವ, ಶಿಷ್ಟರಿಗೆ ನ್ಯಾಯ ದೊರಕುವಂತೆ ದುಷ್ಟರಿಗೆ ಸರಿಯಾದ ಶಿಕ್ಷೆ ಅಂದು ತುಂಬ ಅವಶ್ಯಕವಾಗಿತ್ತು. ಇಂಥ ಸಂದರ್ಭದಲ್ಲಿ ಅನ್ಯಾಯವನ್ನು ತುಳಿದುಹಾಕುವುದೇ ದಂಡವೆಂದು ಕಾಮಂದಕನು ಹೇಳುತ್ತಾನೆ. ಲೋಕದಲ್ಲಿ ಶುಚಿ ಎನಿಸಿಕೊಳ್ಳುವವನು ದುರ್ಲಭನೆಂದೂ, ದುಷ್ಟರೇ ಬಹುಸಂಖ್ಯೆಯಲ್ಲಿರುವುದರಿಂದಲೂ ಲೋಕವನ್ನು ದಂಡದಿಂದಲೇ ಜಯಿಸಿಬೇಕೆಂದೂ ಜಗತ್ತು ಭೋಗ್ಯವಾಗಿರುವುದು ದಂಡದ ಭಯದಿಂದಲೇ ಎಂಬುದು, ಅದಕ್ಕೆ 'ದಂಡವೇ ಧರ್ಮ'ವೆಂದೂ ಮನು ಮಹರ್ಷಿ ಹೇಳಿರುವನು. ಪ್ರಾಚೀನ ಕರ್ನಾಟಕದ ರಾಜರು ದಂಡನೀತಿಯನ್ನು, ನ್ಯಾಯ ಪರಿಪಾಲನೆಯನ್ನು ಯಾವರೀತಿ ಕೈಕೊಳ್ಳುತ್ತಿದ್ದರು? ಅದರ ಸ್ವರೂಪವೇನು? ಎಂಬುದರ ಬಗ್ಗೆ ಯಾವ ಶಾಸನ, ಕೈಫಿಯತ್ತು, ಪ್ರಾಚ್ಯ ದಾಖಲೆಗಳಲ್ಲಿ ಸ್ಪಷ್ಟ ಚಿತ್ರಣ ಇಲ್ಲ. ಆದರೆ ಅಂದಿನ ಒಳಜಗಳ, ಸಣ್ಣಪುಟ್ಟ ತಕರಾರು, ಸಂದಿಗ್ಧತೆಯ ವ್ಯಾಜ್ಯಗಳನ್ನು ಸಮಾಜದ ಹಿರಿಯರು ಕೂಡಿ ತಾವೇ ಪರಿಹರಿಸಿಕೊಳ್ಳುತ್ತಿದ್ದರು. ವಿವಾದದ ಪ್ರಮಾಣ ದೊಡ್ಡದಿದ್ದರೆ ದಂಡನಾಯಕ, ಹಿರಿಯ ಅಧಿಕಾರಿವರ್ಗ, ಕೆಲವೊಮ್ಮೆ ಆ ಪರಿಸರದ ಪ್ರತಿಷ್ಠಿತ ಮಠ-ಮಾನ್ಯಗಳ ಆಚಾರ್ಯರು ನ್ಯಾಯಮೂರ್ತಿಗಳಾಗಿ ತೀರ್ಪು ಕೊಡುತ್ತಿದ್ದರು. ಸಮಾಜದ ಬಗ್ಗೆ ಅಧಿಕ ಮಮತೆಯನ್ನಿರಿಸಿಕೊಂಡ ಹಂಡೆ ಪಾಳೆಯಗಾರರು ತಮ್ಮ ಪರಿಸರದ ಎಲ್ಲ ಮಠ ಮಾನ್ಯಗಳಿಗೆ ಅಪಾರ ಧನಕನಕಗಳನ್ನಿತ್ತು, 'ತಮ್ಮ ಹಿರಿಯರಿಗೆ ಪುಣ್ಯಲೋಕವನ್ನು ಆಶಿಸಿ' ದಾನ ದತ್ತಿಗಳನ್ನಿತ್ತು ಅವರ ಆಶೀರ್ವಾದ ಪಡೆಯುವಲ್ಲಿ ಪರಿಶ್ರಮಿಸಿರುವರು.

ರಾಜನು ಹೊರಡಿಸುತ್ತಿದ್ದ ಆಜ್ಞೆಗಳ ಸ್ವರೂಪಗಳು ನಮಗೆ ದೊರಕದೇ ಹೋದರೂ ಯಾವುದೋ ಒಂದು ಗ್ರಾಮವನ್ನೋ ವಿದ್ವಾಂಸರಿಗೆ ಅಥವಾ ವೈದಿಕನಿಗೆ ರಾಜನು ಬಿಟ್ಟುಕೊಟ್ಟಾಗ ಹೊರಡಿಸುತ್ತಿದ್ದ ಆಜ್ಞೆಯ ಒಕ್ಕಣಿಕೆಯನ್ನು ಮಣ್ಣೂರ ಶಾಸನದಿಂದ ಅರಿಯಬೇಕು (ಬಳ್ಳಾರಿಜಿಲ್ಲೆ ಶಾಸನಗಳು, ಸಿರುಗುಪ್ಪ ೬೩). ವೆಂಕಟಪತಿದೇವರಾಯನು ಪೆನುಗೊಂಡೆಯಿಂದ ಆಳುತ್ತಿದ್ದಾಗ ಅವನ ಸಾಮಂತನಾದ ಹಂಡೆ ಹನುಮನಾಯಕ ಅಂಕುಶರಾಯನು ರಾಜನಿಂದ ಅಮರಮಾಗಣಿಯಾಗಿ ಪಡೆದಿದ್ದ ಬಳ್ಳಾರಿ ಸೀಮೆಯ ಮಣ್ಣೂರನ್ನು ತನ್ನ ಮಗನಾದ ರಾಮಪ್ಪನಿಗೆ ಪುಣ್ಯವಾಗಬೇಕೆಂದು ಕರಿಯವೀರಣ್ಣೊಡೆಯನ ಶಿಷ್ಯನಾದ ಚೆನ್ನಮಲ್ಲಿಕಾರ್ಜುನದೇವನ ಶಿಷ್ಯನಾದ ಕೇದಾರದೇವನಿಗೆ ದಾನವಾಗಿ ನೀಡಿರುವನು. ರಾಜನಾದವನು ತನ್ನ ಪ್ರಜೆಗಳ ನೀತಿ ನಡತೆಗಳಿಗೆ ಸಂಬಂಧಿಸಿದಂತೆ ಕೆಲವು ಆಜ್ಞೆಗಳನ್ನು ಹೊರಡಿಸುತ್ತಿದ್ದನು. ಅಂದು ಈ ಪಾಳೆಯಗಾರರು ಹೊರಡಿಸಿದ ಮಾಪನಗಳು ಕೈಫಿಯತ್ತಿನಲ್ಲಿ ದೊರಕುತ್ತವೆ. ಬನವಳ್ಳಿ ಬಣಜಿಗರ ಕೈಫಿಯತ್ತಿನಲ್ಲಿ ಆಯಾ ಸ್ಥಳಗಳಲ್ಲಿ ಹುಟ್ಟುವ ಧಾನ್ಯ, ಕೈಗಾರಿಕಾ ಉತ್ಪತ್ತಿ, ಆಯಾತಿ ನಿರ್ಯಾತಿಗಳ ವಸ್ತುಗಳ ವಿವರಗಳನ್ನು

ಸೂಚಿಸಲಾಗಿದೆ. ಇವುಗಳಿಂದ ಪಾಳೆಯಗಾರಿಕೆ ಕಾಲದಲ್ಲಿಯ ಜನರ ಆರ್ಥಿಕಜೀವನದ ವ್ಯವಸ್ಥೆಯ ಬಗ್ಗೆ ಸ್ಪಷ್ಟ ಚಿತ್ರಣಗಳು ದೊರಕುತ್ತವೆ.

ಕೈಫಿಯತ್ತು ತಿಳಿಯಪಡಿಸುವಂತೆ, 'ಈ ಊರಲ್ಲಿ ತೂಕ ಮಾಡುವುದರ ವಿವರ. ಸವರನ ದುಡ್ಡು ೨೪ಕ್ಕೆ ವಂದು ಕಚ್ಚಾಸೇರು, ಆರು ಕಚ್ಚಾಸೇರಿಗೆ ಒಂದು ಪಂಚೇರು, ೨ಕ್ಕೆ ಧಡಿಯಾ, ಧಡಿಯಾ ನಾಲ್ಕಕ್ಕೆ ಒಂದು ಮಣ, ಮಣಕ್ಕೆ ೪೮ ಕಚ್ಚಾ, ನಾಲ್ವತ್ತೆಂಟು ಸೇರು ಅಂದರೆ ಒಂದು ಮಣ. ಮಣ ಎಂಟಕ್ಕೆ ಒಂದು ಎತ್ತಿನ ಹೇರು, ನಿಜ ೧ಕ್ಕೆ ೨೨ ಮಣ ಯಿರು ಕಿರೇಮಣ ಅಂಗಡಿಯಲ್ಲಿ ನಡಿಯೋವಂಥದ್ದು.'

ಗ್ರಾಮದಲ್ಲಿ ನಡಿಯೋದು ಅಡಿಕೆ ಪೊಗಳಿ, ೬೦ ಕಚ್ಚಾ ಸೇರಿಗೆ ಒಂದು ಮಣ, ಇಂಥ ಇಪ್ಪತ್ತೆರಡು ಮಣಕ್ಕೆ ಒಂದು ನಿಜ. ಯಿರು ಖಂಡಿ ಅಂಥಾರ ಎಂದು ಹೇಳಿರುವುದನ್ನು ನೋಡಿದರೆ, ಅದು ಹಂಡೆ ಪಾಳೆಯಗಾರರು ತಮ್ಮ ವಿಸ್ತಾರವಾದ ಪರಿಸರದಲ್ಲಿ ಬಳಸುತ್ತಿದ್ದ ಅಳತೆ ಮಾಪನಗಳ ವಿವರ ತಿಳಿದುಬರುತ್ತದೆ.

ತಪ್ಪು ಮಾಡಿದವರಿಗೆ ಅಂದು ಶಿಕ್ಷೆ ಕೊಡುವ, ದಂಡ ಕಟ್ಟುವ ಪ್ರಕ್ರಿಯೆ ಜಾರಿಯಲ್ಲಿತ್ತು. ಅಪರಾಧಿಗಳು ಹೀಗೆ ಕಟ್ಟಿದ ದಂಡವನ್ನು, ಅದರಿಂದ ಬಂದ ಹಣದ ಮೊತ್ತವನ್ನು ರಾಜನಾದವನು ಆ ಊರಿನ ಕೆರೆಯ ಜೀರ್ಣೋದ್ಧಾರಾದಿ ಕೆಲಸಗಳಿಗೆ ಬಿಟ್ಟುಕೊಟ್ಟಿರುವನು.

ರಾಜನು ತನ್ನ ಮಕ್ಕಳನ್ನು ತನ್ನ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ಆಳಲು ನೇಮಿಸುತ್ತಿದ್ದ. ಅಂತಹ ರಾಜಕುಮಾರರು ತಮ್ಮ ತಮ್ಮ ನಾಡುಗಳಲ್ಲಿ ಅನೇಕ ಬಗೆಯ ಆಜ್ಞೆಗಳನ್ನು ಹೊರಡಿಸಿರುವುದು ಕಂಡುಬರುತ್ತದೆ. ಬಾಲದ ಹನುಮಪ್ಪನಾಯಕನಿಗೆ ಅಂಕುಶರಾಯ, ದೇವಪ್ಪನಾಯಕ, ನಿಚ್ಚಮದುವಣಿಗ ಲಿಂಗರಾಮಪ್ಪನಾಯಕ, ಹಿರೇಮಲ್ಲಪ್ಪನಾಯಕ, ಚಿಕ್ಕಮಲ್ಲಪ್ಪ ನಾಯಕರೆಂಬ ಮಕ್ಕಳಿದ್ದರೆಂಬುದನ್ನು ಸೂಚಿಸಿದೆ. ಅದರಲ್ಲಿ ಅಂಕುಶರಾಯನಿಗೆ ಬಳ್ಳಾರಿ ಸೀಮೆ ಬಂಕಾಪುರಗಳ ವಿಭಾಗದ ವ್ಯವಸ್ಥೆ ಕೊಟ್ಟಿದ್ದರೆ, ದೇವಪ್ಪನಾಯಕನಿಗೆ ಕುಂದರ್ಪಿಸೀಮೆಯನ್ನು, ನಿಚ್ಚಮದುವಣಿಗ ಲಿಂಗರಾಮಪ್ಪನಾಯಕನಿಗೆ ಅನಂತಪುರ, ಧರ್ಮಾವರ, ಹಿರಿಯ ಮಲ್ಲಪ್ಪನಾಯಕನಿಗೆ ಬಳ್ಳಾರಿ, ಕುರುಗೋಡುಗಳ ಅಧಿಕಾರ ವಹಿಸಿಕೊಟ್ಟಿದ್ದ. ಇವರಲ್ಲಿ ಹನುಮಪ್ಪನ ಮೊಮ್ಮಕ್ಕಳಲ್ಲಿ ಹಂಡೆ ಚಿಕ್ಕಸಾಹೇಬನಾಯಕನ ಮಗ ದ್ಯಾವಪ್ಪನಾಯಕ ಕುರುಗೋಡಿಗೆ ಠಾಣ್ಯಹಾಕಿ ಕುರುಗೋಡ ಕೋಟೆ ದೊಡ್ಡದು, ನಿಭಾಯಿಸಲಾರದೆಂದು ಬಗೆದು ಆ ದುರ್ಗದ ಪೂರ್ವಭಾಗಕ್ಕೆ ಯರ್‍ರದುರ್ಗದಗುಡ್ಡಕ್ಕೆ ಕಿಲ್ಲೆಕಟ್ಟಲು ಪ್ರಾರಂಭಿಸಿದನು. ದೇಸಾಯಿ ವೆಂಕಟಪ್ಪನೆಂಬುವನು ಯರ್‍ರದುರ್ಗದ ಮೇಲೆ ಹಂಡೆ ದ್ಯಾವಪ್ಪ ಕಟ್ಟಿಸುತ್ತಿದ್ದ ದುರ್ಗದ ಮೇಲೆ ಎರಡು ಬುರುಜು ಕಟ್ಟಿಸಿದ್ದನು. ದೇವಪ್ಪನ ಅಧಿಕಾರದಲ್ಲಿ ಯರ್‍ರದುರ್ಗದ ಕೋಟೆ ಪೂರ್ಣ ಕಟ್ಟಿಸಿ ಪೂರ್ವಭಾಗದಲ್ಲಿ ಕಿಲ್ಲೇದ ಒಳಗೆ ಬಾವಿ ಅರಮನೆ ಕಟ್ಟಿಸಿ ದೇಸಾಯಿ ನಾಡಗೀರು, ಕಾರಕೂನರು ಬಾರಾಬಳೂತಿ ಮುಂತಾದವರ ವಸತಿಗೆ ಮನೆಪಾಯ ಹಾಕಿಸಿಕೊಟ್ಟಿದ್ದನು.

ಹಂಡೆ ಪಾಳೆಯಗಾರರ ಕೈಫಿಯತ್ತಿನಲ್ಲಿ ಬೇರೆ ಬೇರೆ ಅಧಿಕಾರದವರಿಗೆ ಕೊಡುವ ತೆರಿಗೆಗಳು, ಹಬ್ಬಗಳಿಗೆ ಕೊಡಬೇಕಾದ ಚಂದಾಹಣ, ದಶಾಪರಾಧಗಳ ವಿಷಯ, ಅಪುತ್ರಿಕ ಧನದ ವಿಷಯ ಇತ್ಯಾದಿ ವಿಷಯಗಳಿಗೆ ಒಬ್ಬೊಬ್ಬ ವರ್ತಕಶ್ರೇಣಿಗಳಿಗೂ ಒಂದೊಂದು ಜಾತಿಗೂ ಬೇರೆ ಬೇರೆ ನಿಯಮಗಳನ್ನು ವಿಧಿಸಿದ್ದು ತಿಳಿದುಬರುತ್ತದೆ.

ಅನೇಕ ಪಾಳೆಯಗಾರರು ಕೂಡ ಮೇಲಿನ ಆಜ್ಞೆಗಳಂತಹ ಆಜ್ಞೆಗಳನ್ನು ಹೊರಡಿಸಿದ್ದಾರೆ. ಇವರಲ್ಲಿ ಅನೇಕರ ವಿಶೇಷಣಗಳನ್ನು ನೋಡಿದರೆ, ರಾಜಾಜ್ಞೆಯನ್ನು ತಪ್ಪಿನಡೆದವರಿಗೆ ವಿಧಿಸುತ್ತಿದ್ದ ಶಿಕ್ಷೆಗಳು ಸಾಕಷ್ಟು ಕ್ರೂರವಾಗಿಯೇ ಇರುತ್ತಿದ್ದವೆಂದು ಊಹಿಸಬಹುದು. ರಾಜರಾದವರಿಗೆ ವಿಧೇಯರಾಗಿ ಜೀವಿಸುವ, ರಾಜವಿರೋಧಿ ಚಟುವಟಿಕೆಗಳಿಗೆ ಕಠಿಣಶಿಕ್ಷೆ ವಿಧಿಸುವ ಕ್ರಿಯೆ ಅಂದಿತ್ತು. ಉದಾ : ಹಂಡೆ ದ್ಯಾವಪ್ಪನಾಯಕನ ಆಳ್ವಿಕೆಯಲ್ಲಿ ದೇಸಾಯಿ ವೆಂಕಪ್ಪನು ತನ್ನ ದೇಸಗತಿಯನ್ನು ಕಳೆದುಕೊಂಡ ಮೇಲೆ ಗುಡೆಕೋಟೆಯ ಸಂಸ್ಥಾನಿಕರ ಆಶ್ರಯ ಪಡೆದು ಅವರಿಂದ ಸೈನ್ಯ ತೆಗೆದುಕೊಂಡು ಬಂದು ಕುರುಗೋಡಿಗೆ ಮುತ್ತಿಗೆಹಾಕಿ ಒಂದು ವರ್ಷದವರೆಗೆ ಅಮಲು ಮಾಡಿದನು. ತದನಂತರದಲ್ಲಿ ದ್ಯಾವಪ್ಪ ಅವನ ಕೈಯಿಂದ ವಶಪಡಿಸಿಕೊಂಡ ಮೇಲೆ ಭಯಗೊಂಡ ದೇಸಾಯಿ ವೆಂಕಟಪ್ಪನಾಯಕನು ಕುರುಗೋಡಿನಿಂದ ವೀರಾಪುರಕ್ಕೆ ಹೋಗುವಾಗ ಮಾರ್ಗಮಧ್ಯದಲ್ಲಿ ದ್ಯಾವಪ್ಪನಾಯಕನು ಅವನನ್ನು ಹಿಡಿದು ಕಂಬಳಿಯಲ್ಲಿ ಮೊಟ್ಟೆ ಕಟ್ಟಿ ಆನೆಯ ಕಾಲಿನ ಕೆಳಗೆ ಹಾಕಿ ತುಳಿಸಲು ಆಜ್ಞೆಮಾಡಿದನು. ಆಗ ಸೈನಿಕರು ಅದೇ ಕ್ರಮ ಮುಂದುವರೆಸಲು ಆನೆ ನಾಲ್ಕು ಗಳಿಗೆಯ ವರೆಗೆ ಅವನ ಮೇಲೆ ಪ್ರಹಾರ ಮಾಡಲಿಲ್ಲ. ಸೇವಕರು ಬಂದು ಈ ಸುದ್ದಿಯನ್ನು ದ್ಯಾವಪ್ಪನಾಯಕನಿಗೆ ಅರುಹಲು ದೊರೆಯು ಅವನನ್ನು ಕ್ಷಮಿಸಿ ಅವನಿಂದ ಸಾವಿರ ವರಹ ದಂಡ ತೆಗೆದುಕೊಂಡನು. ಇಂಥ ಕಠಿಣಶಿಕ್ಷೆಗಳು ಅಂದು ಬಳಕೆಯಲ್ಲಿದ್ದವು. ಹೀಗೆ ವಿಭಿನ್ನ ರೀತಿಯ ಶಿಕ್ಷೆಗಳಿಂದ ತಪ್ಪಿತಸ್ಥರನ್ನು ಶಿಕ್ಷಿಸುವ ಪರಿಪಾಠವಿದ್ದುದರಿಂದ ರಾಜ್ಯದಲ್ಲಿ ಹೆಚ್ಚಿನ ತಪ್ಪುಗಳಾಗದೇ ಜನತೆ ಶಾಂತಿ ಸುವ್ಯವಸ್ಥೆಯಿಂದ ಬದುಕುವಂತಾಗಿತ್ತು.

## ಹಂಡೆ ಪಾಳೆಯಗಾರರ ಆಡಳಿತ

ಹಂಡೆ ಪಾಳೆಯಗಾರರ ಆಡಳಿತದ ಮೇಲೆ ಮೊಗಲರ ಮತ್ತು ಮರಾಠದೊರೆಗಳ ನೇರ ಪ್ರಭಾವ ಬಿದ್ದಿರುವುದನ್ನು ಮನಗಾಣಬೇಕು. ಮೊಗಲ ಆದಿಲಶಾಹಿ ಅಧಿಕಾರದಲ್ಲಿ ಹಂಡೆ ಪಾಳೆಯಗಾರರು ಆಳುತ್ತಿದ್ದರಿಂದ ಇವರದೇ ಆದ ಆಡಳಿತ ವ್ಯವಸ್ಥೆ ಅಂದಿರದೇ ಆದಿಲಶಾಹಿಯ ಆಡಳಿತವೇ ಹಂಡೆಯವರ ಆಡಳಿತ ವ್ಯವಸ್ಥೆಯಾಗಿತ್ತು. ಅಂದು ಅವರಲ್ಲಿ ಬಳಕೆಯಲ್ಲಿದ್ದ ಆಡಳಿತ ಆಡಳಿತಗಾರರಿಂದ ನೇಮಕಗೊಂಡು ಸುವ್ಯವಸ್ಥಿತವಾಗಿ ರಾಜ್ಯವಾಳಿ ಮಹತ್ವದ ಆಡಳಿತಗಾರರೆನಿಸಿಕೊಂಡಿರುವರು.

## ಹಂಡೆ ಪಾಳೆಯಗಾರರ ಆಡಳಿತದ ರೂಪರೇಷೆ

೧. ಆಡಳಿತಾಧಿಕಾರಿಗಳು

೨. ಸರದಾರರು, ಸರದೇಸಾಯಿಯರು, ದೇಸಾಯರು

೩. ಸರನಾಡಗೌಡರು, ನಾಡಗೌಡರು, ಗೌಡರು

೪. ಹುಂಡೇಕಾರ

೫. ನಾಡ ಕುಲಕರ್ಣಿಗಳು, ಕುಲಕರ್ಣಿಗಳು, ಶ್ಯಾನುಭೋಗರು

೬. ದಳವಾಯಿಗಳು ಅಥವಾ ನಾಯಕವಾಡಿಗಳು

ಎಂದು ವಿಂಗಡಿಸಿಕೊಂಡು ರಾಜ್ಯದ ಆಡಳಿತ ಕೈಕೊಳ್ಳಲಾಗಿದೆ. ಇವರ ಆಡಳಿತ ವಿಭಾಗಗಳು:

೧. ಪರಗಣಿ

೨. ಜುಮ್ಲಾಗ್ರಾಮ

೩. ಜಹಗೀರು ಗ್ರಾಮ

೪. ಗ್ರಾಮ.

**ಪರಗಣಿ :** ಹೀಗೆ ವಿಭಾಗಿಸಿಕೊಂಡ ಹಲವು ಗ್ರಾಮಗಳನ್ನು ಒಳಗೊಂಡ ಒಂದು ಘಟಕ ಪರಗಣಿ. ಪ್ರತಿಯೊಂದು ಪರಗಣಿಗಳಿಗೆ ತಮ್ಮ ಕೈಕೆಳಗೆ ಅಧಿಕಾರಿಗಳನ್ನು ನೇಮಿಸಿಕೊಳ್ಳುತ್ತಿದ್ದರು. ಪ್ರಾರಂಭದ ಕಾಲದಲ್ಲಿ ಹಂಡೆ ಮನೆತನದವರು ಬಳ್ಳಾರಿ ಪರಗಣಿ, ಕುರುಗೋಡ ಪರಗಣಿ, ತೆಕ್ಕಲುಕೋಟೆ ಪರಗಣಿ- ಈ ಮೂರಕ್ಕೆ ಒಡೆಯರಾಗಿದ್ದರು. ಬರಬರುತ್ತ ಇವರ ಅಧಿಕಾರವ್ಯಾಪ್ತಿಗೆ ಬಂಕಾಪುರ, ಸಿಂಧನೂರು, ಧರೋಜಿ ಸಮ್ಮತ್ತು, ಒಡ್ಡು ಸಮ್ಮತ್ತು, ಕಣಿಕಲ್ಲು ಸಮ್ಮತ್ತು, ಅನಂತಪುರ, ಧರ್ಮಾವರ, ನಂದ್ಯಾಲ, ಶಿರಿವಾರ, ಶಿರುಕುಪ್ಪೆ ಮುಂತಾದ ಅನೇಕ ಪರಗಣಿಗಳು ಒಳಪಟ್ಟಿದ್ದವು.

**ಜುಮ್ಲಾಗ್ರಾಮ :** ಪರಗಣಿಯ ವ್ಯಾಪ್ತಿಯಲ್ಲಿಯೇ ಬರುವ ಜುಮ್ಲಾಗ್ರಾಮಗಳು ಅಂದಾಜು ಹತ್ತು ಗ್ರಾಮಗಳನ್ನು ಒಳಗೊಂಡ ಪ್ರದೇಶಕ್ಕೆ ಈ ಹೆಸರಿತ್ತು. ಉದಾ : ಎತ್ತಿನ ಬೂದಿಹಾಳು, ಬುಡ್ಡನಾಯಕನಹಳ್ಳಿ, ಸಂಜೀವರಾಯನಕೋಟೆ, ಮಿಂಚೇರಿ, ಹುಲ್ಲಕುಂಟೆ, ಹೊನ್ನಹಳ್ಳಿ, ಚಿಕ್ಕನಾಯಕನಹಳ್ಳಿ, ಆಲದಹಳ್ಳಿ, ಬೆಳಗಲ್ಲು, ಮಣ್ಣೂರು ಮುಂತಾದ ೧೦ ಗ್ರಾಮಗಳನ್ನು ಜುಮ್ಲಾಗ್ರಾಮಗಳೆಂದು ಕರೆದಿರುವುದು. ಹಂಡೆ ಅರಸರೇ ಈ ಗ್ರಾಮಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು.

**ಜಹಗೀರು ಗ್ರಾಮ :** ಆಡಳಿತವರ್ಗದಲ್ಲಿ ಇರುವ ಪ್ರಮುಖ ಅಧಿಕಾರಿಗಳಾದ ದೇಸಾಯಿ, ಗೌಡ, ಶ್ಯಾನುಭೋಗ, ತಳವಾರ ಮುಂತಾದವರಿಗೆ ಖರ್ಚು ವೆಚ್ಚಕ್ಕಾಗಿ ಜಹಗೀರು ಗ್ರಾಮಗಳನ್ನು ನಿಗದಿಮಾಡಿದ್ದು ತಿಳಿದುಬರುತ್ತವೆ. ಈ ಗ್ರಾಮಗಳಿಂದ ಬರುವ ಕಂದಾಯವನ್ನು ಆಯಾ ಅಧಿಕಾರಿಗಳೇ ಅನುಭವಿಸುತ್ತಿದ್ದರು. ಉದಾ : ಬಾಲದ ಹನುಮಪ್ಪನಾಯಕನಿಗೆ ಕುರುಗೋಡು ಪರಗಣಿಯ ದೇಸಾಯಿ ದೇಶಕುಲಕರ್ಣಿಯನ್ನು ಮಾಡುವವರಿಗೆ ನೂರಕ್ಕೆ ಐದುಹೊನ್ನು ಹಣವನ್ನು ಎರಡು ಬಾಬಿಗೆ ಐದುವರಹ ಹಣವನ್ನು ಶಿವಾಯಿ ಎಂಬ ಜಹಗೀರು ಗ್ರಾಮವನ್ನು ಕೊಡಲಾಗಿತ್ತು. ದೇಸಾಯಿಕೆಯ ಖರ್ಚಿಗೆ ಬೈಲೂರು ಮತ್ತು ಬೈರದ್ಯಾವನಹಳ್ಳಿ ಎಂಬ ಎರಡು ಗ್ರಾಮಗಳನ್ನು

ಕೊಡಲಾಗಿತ್ತು. ಹೀಗೆ ಪಾಳೆಯಗಾರರ ಅಧಿಕಾರ ವ್ಯಾಪ್ತಿಯಲ್ಲಿ ಅನೇಕ ಜಹಗೀರುಗಳನ್ನು ಬಿಟ್ಟುಕೊಡಲಾಗಿತ್ತು.

**ಗ್ರಾಮ :** ಹಂಡೆ ಆಡಳಿತಗಾರರಲ್ಲಿ ಇದ್ದ ಮುಕ್ಕಾಲುಪಾಲು ಗ್ರಾಮಗಳೇ ಇದ್ದವು. ಇವು ಸುಸಜ್ಜಿತವಾದ ಕೋಟೆ ಕಿಲ್ಲೆಗಳನ್ನು ಹೊಂದಿರುತ್ತಿದ್ದವು. ಕೋಟೆಯ ಮೇಲೆ ಅರಸರು ಫಿರಂಗಿ ವ್ಯವಸ್ಥೆ ಮಾಡುತ್ತಿದ್ದರು. ಗ್ರಾಮಗಳಲ್ಲಿ ಕಳ್ಳತನ, ದರೋಡೆ ನಡೆಯದಂತೆ ತಳವಾರರು ಹಗಲುರಾತ್ರಿ ಕಾಯುತ್ತಿದ್ದರು. ಗೌಡನು ಚಿಕ್ಕಪುಟ್ಟ ಜಗಳಗಳನ್ನು ಬಗೆಹರಿಸಿ ಶಾಂತಿ ಸುವ್ಯವಸ್ಥೆ ಕಾಪಾಡುತ್ತಿದ್ದನು.

ಗ್ರಾಮವಾಸಿಗಳಾದ ರೈತರು ತಮ್ಮ ಭೂಮಿಯ ಗುಣಮಟ್ಟದ ಮೇಲಿಂದ ಭೂಕಂದಾಯವನ್ನು, ಬಣಜಿಗರು ತಮ್ಮ ವ್ಯಾಪಾರದ ಲಾಭದಲ್ಲಿ ಇಂತಿಷ್ಟು ಪಾಲು ತೆರಿಗೆಯನ್ನು ಕೊಡುತ್ತಿದ್ದರು. ಇವರಂತೆ ಇತರ ವೃತ್ತಿಸಂಘಗಳೆನಿಸಿದ ಕಮ್ಮಾರ, ಚಮ್ಮಾರ, ಬುಟ್ಟಿ ಹೆಣೆಯುವವರು, ಗಾಣಿಗರು, ಚಿಂಪಿಗರು ಮುಂತಾದವರು ನಿಗದಿ ಪಡಿಸಿದಂತೆ ತೆರಿಗೆ ಕೊಡುತ್ತಿದ್ದರು. ವೈರಿ ಅರಸರು ತಮ್ಮ ರಾಜ್ಯದ ಗ್ರಾಮಗಳ ಮೇಲೆ ಮುತ್ತಿಗೆ ಹಾಕಿದಾಗ ಶೌರ್ಯದಿಂದ ಹೋರಾಡಿ ಅವರನ್ನು ಹಿಮ್ಮೆಟ್ಟಿಸಿ ಜನತೆಯ ಮಾನ ಪ್ರಾಣ ಕಾಪಾಡಿಕೊಳ್ಳುತ್ತಿದ್ದರು.

## ಹಂಡೆ ಪಾಳೆಯಗಾರರ ನ್ಯಾಯಾಡಳಿತ

ಅಂದು ವಿಜಯನಗರ ಸಾಮ್ರಾಜ್ಯ ಅವನತಿಗೊಂಡು ಎಲ್ಲೆಲ್ಲೂ ಅಲ್ಲೋಲ ಕಲ್ಲೋಲವಾದ ಸಂದರ್ಭ. ಇಂಥ ಸಂದರ್ಭದಲ್ಲಿ ರಾಜ್ಯದ ಅಧಿಕಾರ ವಹಿಸಿಕೊಂಡವರಿಗೆ ಸದಾ ತಲೆಯ ಮೇಲೆ ಖಡ್ಗ ತೂಗುತ್ತಿರುತ್ತದೆ. ಸುತ್ತಲಿನ ವೈರಿಗಳು ಹೋರಾಡಿ ಸಮಯ ಕಾಯುತ್ತಿರುತ್ತಾರೆ. ಅದರಲ್ಲೂ ಜವಾಬ್ದಾರಿಯುತ ರಾಜನ ಕರ್ತವ್ಯಗಳಲ್ಲಿ ದುಷ್ಟನಿಗ್ರಹ, ಶಿಷ್ಟಪರಿಪಾಲನ ಮುಖ್ಯವಾಗಿರುತ್ತದೆ. ಇವೆರಡೂ ಸಮರ್ಪಕವಾಗಿ ನೆರವೇರಬೇಕಾದರೆ ರಾಜನಾದವನು ಸದಾ ಪೂರ್ವತಯಾರಿ, ಮುಂದಾಲೋಚನೆ ಶಾಸನ ಅಥವಾ ಆಜ್ಞೆಗಳನ್ನು ಹೊರಡಿಸುವ ಆವಶ್ಯಕತೆ ಇರುತ್ತದೆ. ಹಂಡೆ ಪಾಳೆಯಗಾರರು ಹೊರಡಿಸುತ್ತಿದ್ದ ತೀರ್ಪು ಆಜ್ಞೆಗಳು ನಮಗೆ ಶಾಸನ ಅಥವಾ ಕೈಫಿಯತ್ತುಗಳಿಂದ ತಿಳಿದುಬರುವುದಿಲ್ಲ. ಆದರೆ ಹಂಡೆ ಪಾಳೆಯಗಾರರ ಬದುಕಿನಲ್ಲಿ ಜರುಗುವ ಒಂದೊಂದೇ ಘಟನೆಗಳಿಂದ ನ್ಯಾಯಾಡಳಿತ ಅವರ ರಾಜ್ಯದಲ್ಲಿ ಎಷ್ಟು ಸಮರ್ಪಕವಾಗಿತ್ತು ಎಂಬುದರ ಬಗ್ಗೆ ವಿವರ ತಿಳಿದುಬರುತ್ತದೆ.

ಬಾಲದ ಹನುಮಪ್ಪನಾಯಕನ ಐವರು ಗಂಡುಮಕ್ಕಳಲ್ಲಿ ಅಂಕುಶರಾಯ ಧರ್ಮಿಷ್ಟನಾಗಿದ್ದನೆಂದು ಕುರುಗೋಡ ಕೈಫಿಯತ್ತು ತಿಳಿಸಿದೆ. ಈತ ಬಂಕಾಪುರ ಸೀಮೆಗೆ ಒಡೆಯನಾಗಿ ನಂದ್ಯಾಳ ಮತ್ತು ಸಿರಿವಾಳಗಳ ಆಡಳಿತ ನೋಡಿಕೊಳ್ಳುತ್ತಿದ್ದ. ಸಿದ್ದಪ್ಪನಾಯಕನೆಂಬುವನು ಆದಿಲಶಾಹನ ದಾಳಿಗೆ ಸಿಕ್ಕು ತನ್ನ ಪ್ರದೇಶ ಕಳೆದುಕೊಂಡು ಹಂದರಹಾಳಿನಲ್ಲಿ ವ್ಯವಸಾಯ ಮಾಡಿಕೊಂಡಿದ್ದ. ಈತನ ಮಗ ದೊಡ್ಡತಲೆ

ರಾಮಪ್ಪನಾಯಕ. ಈತ ಬಳ್ಳಾರಿ ಶಿರಿಗೆರೆ ಎಮ್ಮಿಗನೂರನ್ನು ಆಳುತ್ತಿದ್ದ. ನೀಲಮ್ಮ ಈತನಿಗೆ ಪಟ್ಟಗಟ್ಟಿದಾಗ ಹನುಮಪ್ಪನಾಯಕನಿಗೂ ಈತನಿಗೂ ಮನಸ್ತಾಪವಾಗಲು ಮೊಗಲರು ರಾಮಪ್ಪನಾಯಕನನ್ನು ಬಂಧಿಸಿದರು. ಇವನ ತರುವಾಯ ದೊಡ್ಡಪ್ಪನಾಯಕ ಪಟ್ಟಾಭಿಷಿಕ್ತನಾದ.

ಹನುಮಪ್ಪನಾಯಕನ ಹೆಂಡತಿ ಪದ್ಮಮ್ಮ ತನ್ನ ಗಂಡ ಸಾಕಿ ಬೆಳೆಸಿದ ದೊಡ್ಡಪ್ಪ ನಾಯಕನಿದ್ದರೂ ಆತನಿಗೆ ಪಟ್ಟಗಟ್ಟದೇ ಕೊಲೆಮಾಡಲು ಯೋಚಿಸುತ್ತಿರುವಾಗ ಈ ಸುದ್ದಿ ರಾಮಪ್ಪನ ಹೆಂಡತಿಗೆ ತಿಳಿಯಲು ಆಕೆ ಅವನನ್ನು ಒಂದು ಕೊಠಡಿಯಲ್ಲಿರಿಸಿ ಬೀಗ ಹಾಕಿಸುತ್ತಾಳೆ. ಅವನು ಮಲಗುವ ಮಂಚದ ಮೇಲೆ ಒಂದು ಲೋಡು ಉದ್ದಕ್ಕೆ ಹಾಕಿ, ಅದರ ಮೇಲೆ ಹೂವಿನ ಹಚ್ಚಡ ಹೊದಿಸುವ ಏರ್ಪಾಡು ಮಾಡಿದಳು. ಅಂದು ರಾತ್ರಿ ಪದ್ಮಮ್ಮಳ ಅಣ್ಣಂದಿರಾದ ರುದ್ರಪ್ಪ ಮತ್ತು ಚನ್ನಬಸಪ್ಪರು ಬಂದು ದೊಡ್ಡಪ್ಪನಾಯಕ ಮಲಗುವ ಮಂಚದ ಮೇಲೆ ದೊಡ್ಡಪ್ಪನೇ ಮಲಗಿದ್ದಾನೆಂದು ಅವನನ್ನು ಖಡ್ಗದಿಂದ ಕಡಿಯಲು ಅವನು ದೊಡ್ಡಪ್ಪನಾಗಿರದೆ ಹೂವಿನ ಹಚ್ಚಡದೊಳಗಿದ್ದ ದಿಂಬು ಚೂರು ಚೂರಾಗಿ ಕತ್ತರಿಸಿ ಹೋಯಿತು.

ಬಾಲದ ಹನುಮಪ್ಪನಾಯಕನ ಮೊಮ್ಮಗ ಮಲಕಪ್ಪನಾಯಕ. ವಿಜಯನಗರದ ರಾಮರಾಯ ತುರುಕರನ್ನು ಎದುರಿಸಲು ಅಸಮರ್ಥನಾಗಿ ಹೋಗಲು, ಈ ಮಲಕಪ್ಪ ಮುಸ್ಲಿಮರ ಆಶ್ರಯಪಡೆದು ಶಿಸ್ತಿನಿಂದ ದುಡಿದು ಮಂಚಿದೇಶದಲ್ಲಿಯ ಬುಕ್ಕಪಟ್ಟಣ ಮತ್ತು ಅನಂತಗ್ರಾಮಗಳನ್ನು ಕಾಣಿಕೆಯಾಗಿ ಪಡೆದಿದ್ದನಲ್ಲದೆ 'ಪಾದಶಹ ವಜೀರ್' ಎಂಬ ಬಿರುದು ಪಡೆದಿದ್ದ.

ಈ ವಂಶದ ಪ್ರಸನ್ನಪ್ಪ ೧೭೬೦ರಲ್ಲಿ ಪಟ್ಟಕ್ಕೆ ಬಂದ ಇದೇ ವೇಳೆ ಸಾಧಿಸಿ ವಸಂತಮ್ಮ ಮತ್ತು ಲಕ್ಷ್ಮಮ್ಮ ಎಂಬ ವೇಶ್ಯಾಂಗನೆಯರು ತಾಡಿಮರಿಯಿಂದ ಅನಂತಪುರಕ್ಕೆ ಬಂದರು. ಪ್ರಸನ್ನಪ್ಪ ವಸಂತಮ್ಮನಿಗೆ ಮೋಹಗೊಂಡು ಅವಳಿಗೊಂದು ಅರಮನೆ ಕಟ್ಟಿಸಿಕೊಟ್ಟು ಸುಖದಿಂದಿರಿಸಿದ. ಆದರೆ ದುರ್ಬುದ್ಧಿಯ ಲಕ್ಕಮ್ಮನ ಮಾತಿಗೆ ಕಟ್ಟುಬಿದ್ದ ವಸಂತಮ್ಮ ತನ್ನಲ್ಲಿ ತುಂಬು ವಿಶ್ವಾಸವಿರಿಸಿಕೊಂಡಿದ್ದ ಪ್ರಸನ್ನಪ್ಪನಿಗೆ ಮೋಸಮಾಡಿ ಓಡಿಹೋಗಲು ಪ್ರಯತ್ನಿಸಿದಳು. ತನ್ನ ಅಕ್ಕನಿಗೆ 'ಸ್ವಲ್ಪ ಸೈನ್ಯ ಸಹಾಯಕ್ಕೆ ತೆಗೆದುಕೊಂಡು ಅನಂತಪುರದ ಕೆರೆಯ ಬದಿಯ ದೇವರಕೊಂಡಕ್ಕೆ ಬಾ' ಎಂದು ತಿಳಿಸಿ, ಪ್ರಸನ್ನಪ್ಪನಿಗೆ 'ನನ್ನ ಅಕ್ಕ ವೆಂಕಟೇಶ್ವರನ ದರ್ಶನಕ್ಕೆ ದೇವರಕೊಂಡಕ್ಕೆ ಬಂದಿದ್ದು ಅವಳನ್ನು ನೋಡಿಕೊಂಡು ಬರುವೆ' ಎಂದು ತಿಳಿಸಲು ಪ್ರಸನ್ನಪ್ಪ ಅವಳೊಡನೆ ಹೊರಡಲು ಒಡಂಬಟ್ಟ. ಅವಳು ತುಸು ದೂರ ಹೋಗುವುದರೊಳಗೆ ಮನದಲ್ಲಿ ಏನೋ ಅನುಮಾನ ಹುಟ್ಟಿ ಅವಳನ್ನು ಹಿಂದಕ್ಕೆ ಕರೆಯಿಸಿ ಬೆಳಿಗ್ಗೆ ಹೋಗಲು ತಿಳಿಸಿದ. ಆದರೆ ಮರಳಿ ಬಂದ ವಸಂತಮ್ಮ ದೊರೆ ಮಲಗಿದ್ದುದನ್ನು ಕಂಡು ತನ್ನ ಕುತಂತ್ರ ಒಳಸಂಚು ರಾಜನಿಗೆ ತಿಳಿದಿದೆ ಎಂದು ಬಗೆದು ಮುಂದೆ ಎರಗಬಹುದಾದ ಗಂಡಾಂತರಕ್ಕೆ ಹೆದರಿ, ಅರ್ಧರಾತ್ರಿಯಲ್ಲಿ ಪ್ರಸನ್ನಪ್ಪ

ಸಂಪೂರ್ಣ ನಿದ್ರಾವಸ್ಥೆಯಲ್ಲಿರುವಾಗಲೇ ಅವನನ್ನು ಇರಿದು ಕೊಂದಳು. ಈ ಸುದ್ದಿ ಬುಕ್ಕಪಟ್ಟಣದಲ್ಲಿದ್ದ ಪ್ರಸನ್ನಪ್ಪನ ತಮ್ಮ ಪವಾಡಪ್ಪನಿಗೆ ತಲುಪಲು ಆತ ಅತ್ಯಂತ ದುಃಖಪೂರಿತನಾಗಿ ಅನಂತಪುರಕ್ಕೆ ಆಗಮಿಸಿದ. ಅಷ್ಟೇ ಅಲ್ಲ, ಸಹೋದರನ ಪರವಾಗಿ ರಾಜ್ಯದ ಆಡಳಿತದ ಜವಾಬ್ದಾರಿ ಹೊತ್ತನು.

೧೭೨೦ರ ವೇಳೆಗೆ ಅನಂತಪುರವನ್ನು ಕಡಪಾ ನವಾಬರು ತಮ್ಮ ಆಡಳಿತಕ್ಕೆ ತೆಗೆದುಕೊಂಡರು. ಪವಾಡಪ್ಪನ ಆಸ್ಥಾನದಲ್ಲಿ ರಾಮಜಿ ಎಂಬ ಅಧಿಕಾರಿ ನವಾಬನ ಪ್ರಭಾವಕ್ಕೆ ಒಳಗಾಗಿ ರಾಜ್ಯವನ್ನು ನವಾಬರಿಗೆ ವಹಿಸಿಕೊಡಲು ಯೋಚಿಸಿದ. ರಾಮಜೀ ಪ್ರೇರಣೆಯಂತೆ ನವಾಬ ಕೆಲ ಸೈನ್ಯ ಕಳಿಸಿದ. ಸೇನಾನಿಗಳು ಪವಾಡಪ್ಪನನ್ನು ಬಂಧಿಸಿದರು. ಮುಂದೆ ನವಾಬನ ಸೈನ್ಯಕ್ಕೂ ಪವಾಡಪ್ಪನ ಸೈನ್ಯಕ್ಕೂ ಹೋರಾಟವಾಗಿ ನವಾಬನ ಬಹುಸಂಖ್ಯೆಯ ಸೈನಿಕರು ಹತರಾದರು. ಪವಾಡಪ್ಪ ರಾಮಜಿಯ ಕುಕೃತ್ಯಕ್ಕೆ ಸಿಟ್ಟಿಗೆದ್ದು ರಾಮಜಿಯನ್ನು ಸ್ವಾಮಿದ್ರೋಹಿ ಎಂದು ಘೋಷಿಸಿದ. ಕೊನೆಗೆ ಆತನ ನಾಲಿಗೆಯನ್ನು ಕತ್ತರಿಸಬೇಕು ಎಂಬ ತೀರ್ಮಾನದಂತೆ ಕಾರ್ಯ ಜರುಗಿಸಿದ. ಇತ್ತ ಈ ಅಂಗಹೀನತೆಯಿಂದ ಜೀವನವೇ ವ್ಯರ್ಥವೆಂದು ಅರಿತ ರಾಮಜಿ ತನ್ನ ನಾಲಗೆಯನ್ನು ಬುಡಸಹಿತ ಕತ್ತರಿಸಿಕೊಂಡು ಅಸುನೀಗಿದ.

ಈ ಕ್ರೂರ ವರ್ತನೆಯಿಂದ ಮನನೊಂದ ಪವಾಡಪ್ಪ ಊಟ ನಿದ್ರೆಯನ್ನೇ ತೊರೆದ. ಪಾಪ ಪರಿಹಾರಾರ್ಥವಾಗಿ ಗೋಕರ್ಣ ಸಂದರ್ಶನ ಮಾಡಲು ಹೊರಟ. ಅನಂತಸಾಗರದ ತುಸು ದೂರದಲ್ಲಿ ಪೆದ್ದಂಪಳೆಯೆಂಬಲ್ಲಿ ತನ್ನ ಕುತ್ತಿಗೆಯನ್ನು ತಾನೇ ಹಿಸುಕಿಕೊಂಡು ಪ್ರಾಣತ್ಯಾಗ ಮಾಡಿದ. ೧೭೩೭ರಲ್ಲಿ ಮರಣ ಹೊಂದಿದ ಪವಾಡಪ್ಪನನ್ನು ಅನಂತರಪುರದ ಹೊಸ ಟ್ಯಾಂಕಿನ ಪಶ್ಚಿಮಕ್ಕಿರುವ ನಿಡುಮಾಮಿಡಿಸ್ವಾಮಿಯ ಮಠದಲ್ಲಿ ಅಂತ್ಯಕ್ರಿಯೆ ಜರುಗಿಸಿ ಸಮಾಧಿ ಮಾಡಲಾಯಿತು.

ಪವಾಡಪ್ಪನಾಯಕನ ಮಗ ಸಿದ್ದಪ್ಪನಾಯಕನಿಗೆ ೧೭೩೮ರಲ್ಲಿ ಪಟ್ಟಗಟ್ಟಲಾಯಿತು. ಈತ ತುಂಬ ದುರ್ಮಾರ್ಗಿಯಾಗಿದ್ದ. ಈತನ ಕಾಟ ತಡೆಯಲಾರದೆ, ಪ್ರಜೆಗಳು ಹೊಸೂರಿನಲ್ಲಿದ್ದ ರಾಮಪ್ಪನನ್ನು ಕರೆತಂದರು. ರಾಮಪ್ಪನ ಆಗಮನದ ಸುದ್ದಿ ಕೇಳಿ ಬೊಕ್ಕಸದ ಧನಕನಕವನ್ನೆಲ್ಲ ತೆಗೆದುಕೊಂಡು ಸಿದ್ದಪ್ಪ ಊರುಬಿಟ್ಟ. ರಾಮಪ್ಪ ಅನಂತಪುರಕ್ಕೆ ಬಂದು ತಾನೇ ಅಧಿಪತಿಯಾದ. ಈ ವೇಳೆಗೆ ರಾಮಪ್ಪ ರಾಜ್ಯಮದಾಂಧನಾದ. ತನ್ನ ಗುರುಗಳಿಗೆ ದುರ್ಭಾಷೆಯನ್ನಾಡಿ ಮನನೋಯಿಸಿದ ತುಸುವೇಳೆಯಲ್ಲಿ ಅವನ ಬಂಧುಗಳೇ ಅವನನ್ನು ಇರಿದು ಕೊಂದರು (೧೭೪೨).

ಆರ್ಕಾಡು ಕೈಫಿಯತ್ತಿನಲ್ಲಿ 'ವಿಜಯನಗರದ ವೆಂಕಟಪತಿರಾಯರ ಸೂಳೆ ದೊಡ್ಡ ಭೋಗಸಾನಿ ಚೇತಪಟ್ಟಿ, ಚೆಂಗಲ್ಪಟ್ಟ ಪಾಳೆಯಗಾರ ರಂಗಪತಿರಾಜನನ್ನು ಮೋಹಿಸಿ ತನ್ನ ಮೊಲೆ ಕೊಯ್ಸಿಕೊಂಡುದು ಇದೆ. ಚಕೋರಮಲ್ಲಿಭಟ್ಟನು ಮಗಳನ್ನು ಕೇಳಿದ ರಾಜ ಭಯಕ್ಕೆ ಅಂಜಿ ಕುಟುಂಬ ಸಹಿತ ಜಲಪ್ರವೇಶ ಮಾಡಿದುದು ಸೂಳೇಕೆರೆ ಕೈಫಿಯತ್ತಿನಲ್ಲಿದೆ.

ಈ ಕೈಫಿಯತ್ತು ಹೆಣ್ಣು ಗಂಡುಗಳ ಕಾಮವ್ಯಸನಕ್ಕೆ ಉದಾಹರಣೆಯಾಗಿದೆ. ಬಾಲದ ಹನುಮಪ್ಪನಾಯಕ ಆದಿಲಶಾಹನಿಗೆ 'ನಿನ್ನ ರಾಣಿಯನ್ನು ಕೊಟ್ಟರೆ ಇಂಥ ಮಕ್ಕಳನ್ನು ಹುಟ್ಟಿಸಿ ಕೊಡುತ್ತೇನೆ' ಎಂಬ ದಿಟ್ಟ ಉತ್ತರವಿತ್ತು ರಾಜ್ಯ ಸ್ಥಾಪಿಸಿದ್ದು, ಆ ವಂಶದ ನೀಲಮ್ಮನ ರುಂಡ ಹಾರಿಸಿದ್ದನ್ನು ಕುರುಗೋಡ ಕೈಫಿಯತ್ತು ತಿಳಿಸುತ್ತದೆ. ಹಂಡೆ ರಾಮಪ್ಪನನ್ನು ಹಜಾಮತಿ ಮಾಡಿಸಿಕೊಳ್ಳುವಾಗ ಇರಿದು ಕೊಂದುದನ್ನು ಬಳ್ಳಾರಿ ಕೈಫಿಯತ್ತು ವಿವರಿಸಿದೆ.

ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ತಿಮ್ಮರಾವುತ ಎಂಬ ಹಂಡೆ ಪಾಳೆಯಗಾರ ಗ್ರಾಮದ ಗೌಡಿಕೆಯನ್ನು ಕೈಕೊಂಡಿದ್ದನು. ಇವನ ಮಗಳು ಲಕ್ಷ್ಮಿ ಅಪರೂಪದ ಸುಂದರಿ. ಅವಳ ಮೇಲೆ ಮನಸ್ಸನ್ನಿಟ್ಟಿದ ಚಿತ್ರದುರ್ಗದ ಮೆದಕೇರಿನಾಯಕ ಹೆಣ್ಣುಕೇಳಲು ದಳವಾಯಿ ಉಡುವಳ್ಳಿಯ ಹೊಟ್ಟೆಗಿರಿನಾಯಕ ಮತ್ತು ಕಾಟಿನಾಯಕ ಎಂಬುವರನ್ನು ಕಳಿಸಿದ. ತಿಮ್ಮರಾವುತ ಇದಕ್ಕೆ ಬೇಸರಪಟ್ಟು ಹಂಡೆ ದನುಗರ ಜಾತಿಯಲ್ಲಿ ವಾಲ್ಮೀಕಿ ಜಾತಿಯವರು ಹೆಣ್ಣುಕೇಳಲಿಕ್ಕೆ ಹಕ್ಕು ಏನಿದೆ ಎಂದು ಪ್ರಶ್ನಿಸಿ ಕಡೆಗೆ ಹೆಣ್ಣುಕೇಳಲು ಬಂದವರಿಗೆ ಕಾಲಿಗೆ ಹಗ್ಗಕಟ್ಟಿ ಗ್ರಾಮದಿಂದ ಹೊರಕ್ಕೆ ಎಳೆಸಿ ಹಾಕಿಸಿದನು. ಅವರು ಹೋಗಿ ಮೆದಕೇರಿನಾಯಕನಲ್ಲಿ ಫಿರ್ಯಾದು ಸಲ್ಲಿಸಲು ಅವನು ೧೬೮ ಸೈನಿಕರನ್ನು ಕಳಿಸಿದನು. ಅವರು ನೇರವಾಗಿ ಕೆನ್ನಳ್ಳಿಗೆ ಬಂದವರೆ ಲೂಟಿಗೆ ತೊಡಗಿದರು. ಬಣವೆ ಬೇಲಿಗಳಿಗೆ ಬೆಂಕಿ ಹಚ್ಚಿದರು. ಕೊನೆಗೆ ತಿಮ್ಮರಾವುತನ ಮನೆಗೆ ಮುತ್ತಿಗೆ ಹಾಕಿ ಲಕ್ಷ್ಮೀಯನ್ನು ಸೆರೆಹಿಡಿದರು. ಆಗ ಕೆನ್ನಳ್ಳಿಯಲ್ಲಿದ್ದ ಹಿರಿಯ ರಾವುತರು ೫ ಜನ ಮತ್ತು ಅವರ ಮಕ್ಕಳು ೧೫ ಜನ ಕೂಡಿಕೊಂಡು ೧೬೮ ಜನ ಯೋಧರನ್ನು ಎದುರಿಸಿದರು. ಆಗ ನಡೆದ ಲಡಾಯಿಯಲ್ಲಿ ಮೆದಕೇರಿನಾಯಕನ ಕಡೆಯವರಲ್ಲಿ ೧೧೨ ತಲೆಗಳು ಬಿದ್ದವು. ರಾವುತರ ಕಡೆಗೆ ೯ ತಲೆಗಳು ನೆಲಕಚ್ಚಿದವು. ಕಡೆಗೆ ಅರಸನ (ಚಿತ್ರದುರ್ಗ) ಕಡೆಯ ರಾವುತರು ಹಿಮ್ಮೆಟ್ಟಿದರು. ಕೆನ್ನಳ್ಳಿಯ ರಾವುತರು ಸತ್ತ ತಮ್ಮ ೯ ಜನ ವೀರಯೋಧರ ಶವಗಳಿಗೆ ಕಿಚ್ಚುಹಾಕಿದಾಗ ಅದನ್ನು ಕಂಡು ದುಃಖ ತಾಳಿಕೊಳ್ಳಲಾರದ ಸೋದರಿ ಲಕ್ಷ್ಮೀ, 'ನನ್ನಿಂದಾಗಿ ನನ್ನ ಅಣ್ಣಂದಿರು ಪ್ರಾಣ ತೆತ್ತಾಗ ನನ್ನ ಪ್ರಾಣ ಇಟ್ಟುಕೊಂಡಾದರೂ ಏನು ಪ್ರಯೋಜನ' ಎಂದವಳೇ ಅದೇ ಕಿಚ್ಚಿಗೆ ತಾನೂ ಹಾರಿ ಪ್ರಾಣಾರ್ಪಣೆ ಮಾಡಿಕೊಂಡಳು. ಕೆನ್ನಳ್ಳಿಯ ರಾವುತರು ನಾಳೆ ತಮಗೆ ಪ್ರಾಣದ ಮೇಲೆ ಭಯವಿಲ್ಲದೆ ಹೋರಾಡಬೇಕಾದ ಸಂದರ್ಭವನ್ನು ನೆನೆದು, ತಮ್ಮ ದೈವ ರಂಗನಾಥ, ಭೈರವ ಮುಂತಾದ ದೇವರ ಪ್ರತಿಮೆಗಳನ್ನು ಕಿತ್ತು ಬಂಡಿಯಲ್ಲಿ ಹಾಕಿಕೊಂಡು ಇಕ್ಕೇರಿಸೀಮೆಗೆ ಹೋಗಿ ನೆಲೆಸಿದ್ದನ್ನು ಕೆನ್ನಳ್ಳಿಯ ಕೈಫಿಯತ್ತು ಹೇಳಿದೆ.

ಹೀಗೆ ಹಂಡೆ ಪಾಳೆಯಗಾರರು ಜಾತಿಪಾವಿತ್ರ್ಯತೆ, ಅದರ ರಕ್ಷಣೆಯ ಪ್ರಯತ್ನ, ಸ್ವಾಭಿಮಾನ, ನ್ಯಾಯನಿಷ್ಠುರತೆ, ಅನ್ಯಜಾತಿಯರಿಗೆ ಸಿಕ್ಕು ಕುಲಭ್ರಷ್ಟರಾಗಬಾರದೆನ್ನುವ

ಶೀಲಪ್ರಜ್ಞೆ, ಈ ಮಧ್ಯದಲ್ಲಿಯೂ ದೇವರು ಧರ್ಮಗಳನ್ನು ಕೈಬಿಡದೆ ಮೊರೆಹೊಕ್ಕವರನ್ನು ಸಂರಕ್ಷಿಸಿದ ಹೊಸಗ್ರಾಮಗಳ ಸ್ಥಾಪನೆ, ಜನಾಂಗದೊಳಗಿನ ಕಟ್ಟುಪಾಡುಗಳು, ಹಂಡೆ ಪಾಳೆಯಗಾರರ ಶೀಲಪ್ರಜ್ಞೆ ನ್ಯಾಯಾಡಳಿತದ ಬಗ್ಗೆ ಕ್ಷಕಿರಣ ಬೀರಿವೆ.

### ಆಕರಗ್ರಂಥಗಳು


೧. ಬಳ್ಳಾರಿಜಿಲ್ಲೆಯ ಶಾಸನ ಸಂಪುಟ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

೨. ಎಂ.ಎಂ.ಕುಲಬುರ್ಗಿ (ಸಂ), ಕರ್ನಾಟಕದ ಕೈಫಿಯತ್ತುಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೪

೩. ಎಚ್.ಎಸ್.ಗೋಪಾಲರಾವ್ (ಸಂ), ನಾಗಾಭಿನಂದನ (ಶ್ರೀ ಎಂ.ಜಿ.ನಾಗರಾಜ್ ಅವರ ಅಭಿನಂದನ ಗ್ರಂಥ), ಬೆಂಗಳೂರು

೪. ಶ್ರೀಶೈಲಪೀಠದರ್ಶನ, ೧೯೬೭, ಪು.೨೧೯

೬

# ಹರಪನಹಳ್ಳಿ ಪಾಳೆಯಗಾರರ ನ್ಯಾಯಾಡಳಿತ

ಕುಂ. ಬಾ. ಸದಾಶಿವಪ್ಪ

ಕ್ರಿಸ್ತಶಕ ೧೫೬೬ ರಿಂದ ೧೭೯೯ರ ವರೆಗೆ, ಅಂದರೆ ಸುಮಾರು ೨೩೩ ವರ್ಷಗಳ ಕಾಲ ರಾಜ್ಯ ಆಳಿದ ಹರಪನಹಳ್ಳಿ ಪಾಳೆಯಗಾರರಲ್ಲಿ ೧೫ ಜನ ಪುರುಷರು; ೧ ಸ್ತ್ರೀ- ಒಟ್ಟು ೧೬ ಜನ ನಾಯಕ - ನಾಗತಿಯರು. ಹರಿಯಮ್ಮಾಜಿ ಗಂಡ ಎರಡನೆಯ ಬಸವಂತನಾಯಕನ ಹೆಸರಿನಲ್ಲಿ ೫ ವರ್ಷಗಳ ಕಾಲ ರಾಜ್ಯ ಆಳಿದಳು. ಶಾಸನಗಳನ್ನು ತನ್ನ ಹೆಸರಿನಲ್ಲಿಯೆ ಬರೆಸಿದಳು. ಮೊದಲ ಅರಸ ದಾದಯ್ಯನಾಯಕ; ಕೊನೆಯ ಅರಸ ಎರಡನೆಯ ಸೋಮಶೇಖರನಾಯಕ. ಈ ಎಲ್ಲಾ ನಾಯಕರಲ್ಲಿ ಸರ್ವಶ್ರೇಷ್ಠ ಮೊದಲ ಸೋಮಶೇಖರನಾಯಕ. ಈ ಹದಿನಾರು ಪಾಳೆಯಗಾರ ಅರಸ - ಅರಸಿಯರು ಹೆಚ್ಚು ವಿದ್ಯಾವಂತರಾದವರಲ್ಲ. ಅಯ್ಯಗಳ ಶಾಲೆಗಳಲ್ಲಿ ಕನ್ನಡ ಓದು, ಬರಹ, ಲೆಕ್ಕಗಳನ್ನು ಕಲಿತವರು. ಯುದ್ಧವಿದ್ಯೆಗಳಲ್ಲಿ ಪಳಗಿದ್ದರು. ವ್ಯಾಯಾಮ, ಕುಸ್ತಿ, ಕಸರತ್ತುಗಳಿಂದ ದೇಹಸಂಪತ್ತು ಗಳಿಸಿದ್ದರು. ರಾಣಿಯರೂ ಖಡ್ಗವಿದ್ಯೆ ಪರಿಣತೆಯರಾಗಿದ್ದರು. ಇವರು ನೇಮಿಸಿಕೊಂಡ ದಿವಾನರು (ಮುಖ್ಯಮಂತ್ರಿಗಳು), ರಾಯಸದವರು, ಪುರೋಹಿತರು, ವೈದ್ಯರು ಹೆಚ್ಚಾಗಿ ಬ್ರಾಹ್ಮಣರು. ಇವರು ಶಾಸ್ತ್ರಪುರಾಣ, ಆಡಳಿತ, ಅರ್ಥಶಾಸ್ತ್ರ ಬಲ್ಲ ಪಂಡಿತರು ಹಾಗೂ ಕುಶಾಗ್ರಮತಿಗಳು. ರಾಜ್ಯದ ಆಡಳಿತದಲ್ಲಿ ಅರಸರಿಗೆ ಸೂಕ್ತ ಸಲಹೆ-ಮಾರ್ಗದರ್ಶನ ಮಾಡುತ್ತಿದ್ದರು. ಅರಸರು ಅವರ ಸಂಗಡ ಚರ್ಚಿಸಿ ಸಲಹೆಗಳನ್ನು ಸ್ವೀಕರಿಸಿ ಅನುಷ್ಠಾನಗೊಳಿಸುತ್ತಿದ್ದರು.

ಕ್ರಿ.ಶ.೧೬೯೦-೧೭೦೯ರಲ್ಲಿ ಅರಸನಾಗಿದ್ದ ಬಾಗಳಿ ಬಸಪ್ಪನಾಯಕ, ಕ್ರಿ.ಶ.೧೭೦೯-೧೭೨೧ರಲ್ಲಿದ್ದ ಅರಸ ಎರಡನೆಯ ಸೋಮಶೇಖರನಾಯಕ ಇಬ್ಬರೂ ಹಠಮಾರಿಗಳು. ಬಾಗಳಿ ಬಸಪ್ಪನಾಯಕ ದಿವಾನ ಹಂಪರಸಪ್ಪನ ಸಲಹೆ ಕೇಳದೆ, ಹೆಂಡತಿ ಮತ್ತು ಒಳ್ಳೇ ಸರದಾರರನ್ನು ಕರೆದುಕೊಂಡು ಹಗರಿಬೊಮ್ಮನಹಳ್ಳಿಗೆ ಹೋಗಿ ಟಿಪ್ಪುಸುಲ್ತಾನನ ಕೈ ಸೆರೆಯಾಗಿ ಕಬ್ಬಾಳದುರ್ಗದ ಸೆರೆಯಲ್ಲಿದ್ದು ಅಸುನೀಗಿದ. ಕೊನೆಯ ಸೋಮಶೇಖರ ನಾಯಕನು ದಿವಾನ ವಿರೂಪಾಕ್ಷಪ್ಪನ ಸಲಹೆ ಧಿಕ್ಕರಿಸಿ ಹರಿಹರಕ್ಕೆ ತೆರಳಿ ಆಂಗ್ಲರ

ಒಡಂಬಡಿಕೆಗೆ ಒಪ್ಪಿಗೆ ನೀಡದೆ ಆಂಗ್ಲರ ಕೈಸೆರೆ ಸಿಕ್ಕು, ಶ್ರೀರಂಗಪಟ್ಟಣ ಕಾರಗೃಹದಲ್ಲಿದ್ದು ಕ್ರಿ.ಶ.೧೮೦೫ರಲ್ಲಿ ಮೃತನಾದ.

ಹರಪನಹಳ್ಳಿ ರಾಜ್ಯದ ವಿಸ್ತೀರ್ಣ = ೩೬೪೦ ಚದರಮೈಲುಗಳು.

೧. ಪೂರ್ವ : ಹುಲಿಗಿ-ಹೊಸೂರು

೨. ಪಶ್ಚಿಮ : ಸೋಮಲಾಪುರ, ಹಿರೇಕುರುವತ್ತಿ, ಮೈಲಾರ

೩. ಉತ್ತರ : ಮೊದಲಗಟ್ಟಿ

೪. ದಕ್ಷಿಣ : ಮಾಗಾನಹಳ್ಳಿ.

ಕಂದಾಯದ ಪ್ರಮುಖ ಗ್ರಾಮಗಳು ಒಟ್ಟು ೪೬೦. ಪ್ರತಿ ಕಂದಾಯದ ಮುಖ್ಯ ಗ್ರಾಮಕ್ಕೆ ೫ ರಿಂದ ೭ ಚಿಕ್ಕ ಗ್ರಾಮಗಳು ಸೇರಿದ್ದವು. ಅವುಗಳೆಂದರೆ, ೧. ಗೊಲ್ಲರಹಟ್ಟಿ, ೨. ಲಂಬಾಣಿ ತಾಂಡ, ೩. ಕೊರಚರಹಟ್ಟಿಗಳು. ಇವುಗಳಿಗೆ ಮಜುರಾಗ್ರಾಮಗಳೆಂದೂ ಕರೆಯುತ್ತಿದ್ದರು.

## ನ್ಯಾಯಾಡಳಿತ ವ್ಯವಸ್ಥೆ

ಕಂದಾಯದ ಪ್ರಮುಖ ಗ್ರಾಮಕ್ಕೆ ಒಂದು ಪಂಚಾಯ್ತಿಕಟ್ಟೆ ಇದ್ದಿತು. ಪ್ರತಿ ಪಂಚಾಯ್ತಿಕಟ್ಟೆ ಸಮಿತಿಯಲ್ಲಿ ಕೆಳಗಿನಂತೆ ಅಧ್ಯಕ್ಷರು ಮತ್ತು ಸದಸ್ಯರಿದ್ದರು:

೧. ಗೌಡ-ಅಧ್ಯಕ್ಷ ೨. ಮಠದಸ್ವಾಮಿ ಇಲ್ಲವೇ ಗ್ರಾಮದೇವರ ಪೂಜಾರಿ ೩. ಶ್ಯಾನುಭೋಗ - ಕುಲಕರ್ಣಿ ೪. ಬಣಕಾರ ೫. ಶೆಟ್ಟಿ ೬. ಹುಂಡೇಕಾರ ೭. ತಳವಾರ - ಆರುಜನ ಸದಸ್ಯರು. ೫ ಅಥವಾ ೭ ಗ್ರಾಮಗಳಲ್ಲಿ ಉಂಟಾದ ಜಗಳಗಳು ಮುಖ್ಯ ಗ್ರಾಮದ ಕಟ್ಟೆಮನೆಯಲ್ಲಿಯೇ ಗ್ರಾಮದ ಮತ್ತು ಹಿರಿಯರ ಸಮ್ಮುಖದಲ್ಲಿ ಚರ್ಚಿಸಿ ತೀರ್ಮಾನ ಆಗುತ್ತಿದ್ದವು. ಕಟ್ಟೆಮನೆ ಗೌಡರು ಮತ್ತು ಸದಸ್ಯರು ಗ್ರಾಮದ ಒಂದು ಅರಳಿಕಟ್ಟೆ ಇಲ್ಲವೇ ದೇವರಗುಡಿಕಟ್ಟೆಯ ಮೇಲೆ ಕುಳಿತು ನ್ಯಾಯನಿರ್ಣಯ ಮಾಡುತ್ತಿದ್ದರು.

ಈ ಕಟ್ಟೆಮನೆಗಳ ಸಮಿತಿಯಲ್ಲಿ ತೀರ್ಮಾನ ಆಗದೇ ಉಳಿದ ಜಗಳಗಳು ಆಯಾ ಪ್ರದೇಶಕ್ಕೆ ಸಂಬಂಧಿಸಿದ ಸಾಮಂತ ಅರಸರ ಸಮ್ಮುಖಗಳಲ್ಲಿ ತೀರ್ಮಾನ ಆಗುತ್ತಿದ್ದುವು. ಅಲ್ಲಿಯೂ ತೀರ್ಮಾನ ಆಗದೇ ಉಳಿದ ವ್ಯಾಜ್ಯಗಳು ಹರಪನಹಳ್ಳಿ ಅರಸರ ಸಮಿತಿಯಲ್ಲಿ ತೀರ್ಮಾನ ಆಗುತ್ತಿದ್ದುವು. ಅರಸರ ಸಮಿತಿಗೆ ಒಂದು ಉದಾಹರಣೆ:

೧. ಅಧ್ಯಕ್ಷ : ಅರಸ ಸೋಮಶೇಖರನಾಯಕ - ೨

ಸದಸ್ಯರು : ೨. ಅಯ್ಯಪ್ಪನಾಯಕ ೩. ಶೂರ ಚಿಂತಾಮಣಿಯಪ್ಪ

೪. ಆಲೇಕಾರ ಹಂಪರಸಪ್ಪ ೫. ಬೊಕ್ಕಸದ ಭೀಮಯ್ಯ.

ತಪ್ಪು ಮಾಡಿದವರಿಗೆ ವಿಧಿಸುವ ದಂಡ-ಶಿಕ್ಷೆ ವಿಧಾನಗಳು:

೧. ಚಿಕ್ಕ ತಪ್ಪು ಮಾಡಿದವರಿಗೆ ದಂಡ ಹಣದರೂಪದಲ್ಲಿ.

೨. ದೊಡ್ಡ ಅಪರಾಧಿಗಳಿಗೆ ಶಿಕ್ಷೆ - ಒಂದು, ಎರಡು, ಮೂರುತಿಂಗಳು ಕಾಲ ಸೆರೆ.

ಗ್ರಾಮಕ್ಕೆ ಒಂದು ಚಾವಡಿ. ಅದರಲ್ಲಿ ಒಂದು ಕೋಣೆ. ಅಪರಾಧಿಗಳನ್ನು ಈ

ಕೋಣೆಯಲಿ ಒಂದೆರಡು ದಿನ ಇರಿಸುತ್ತಿದ್ದರು. ದೊಡ್ಡ ತಪ್ಪು ಮಾಡಿದ ಅಪರಾಧಿಗಳನ್ನು ರಾಜಧಾನಿಗೆ ಕರೆದೊಯ್ಯುತ್ತಿದ್ದರು.

ರಾಜಧಾನಿಯ ಕೋಟೆಯಲ್ಲಿ ಒಂದು ಬಯಲು ಕಾರಾಗೃಹವಿದ್ದಿತು. ಇದು ಈಗಿನಂತೆ ಸುಸಜ್ಜಿತವಿರಲಿಲ್ಲ. ಅಪರಾಧಿಗಳಿಗೆ ದೀರ್ಘಕಾಲದ ಶಿಕ್ಷೆ ಎಂದರೆ ಕೇವಲ ಎರಡು-ಮೂರು ತಿಂಗಳ ಶಿಕ್ಷೆ ವಿಧಿಸಿದ್ದು ಗೊತ್ತಾಗುವುದು. ಅರಮನೆ ಕಾವಲುಪಡೆ ಸಿದ್ಧಪಡಿಸಿದ ಆಹಾರವನ್ನು ಈ ಅಪರಾಧಿಗಳಿಗೆ ಹಂಚುತ್ತಿದ್ದರು.

೧. ಕಳ್ಳತನ ಮಾಡಿದ ಅಪರಾಧಿಗೆ ತಲೆಬೋಳಿಸಿ ಕತ್ತೆಮೇಲೆ ಕೂಡಿಸಿ ಗ್ರಾಮದಲ್ಲಿ ಮೆರವಣಿಗೆ ಮಾಡುತ್ತಿದ್ದರು.

೨. ಪರಸ್ತ್ರೀಯರ ಮೇಲೆ ಅತ್ಯಾಚಾರ ಎಸಗಲು ಹೋದ ಪುರುಷನನ್ನು ದೇವರಗುಡಿ ಕಂಬಕ್ಕೆ ಕಟ್ಟಿ ಎರಡುದಿನಗಳ ಕಾಲ ಊಟ-ನೀರು ಕೊಡದೇ ಬಿಡುವುದು.

೩. ದೇವರಕಾರ್ಯ, ಊರಿನ ಕೆಲಸಗಳಿಗೆ ವ್ಯತಿರಿಕ್ತ ನಡೆದುಕೊಂಡರೆ, ಅವನಿಗೆ ಎರಡು ಹೊನ್ನುದಂಡ ಇಲ್ಲವೆ ಅವನನ್ನು ಊರವರು ಮಾತನಾಡಿಸದೆ ಬಹಿಷ್ಕಾರ ಹಾಕುತ್ತಿದ್ದರು.

೪. ರಾಜಾಜ್ಞೆ ಮೀರಿ ನಡೆದವನಿಗೆ ಮರಣದಂಡನೆ.

೫. ಕೊಲೆಮಾಡಿದವನಿಗೂ ಮರಣದಂಡನೆ.

ಹರಪನಹಳ್ಳಿಯಿಂದ ಕೊಟ್ಟೂರಿಗೆ ಹೋಗುವ ರಸ್ತೆ ಎಡಭಾಗದ ಪ್ರದೇಶ ಈಗ ಕೃಷಿ ಉತ್ಪನ್ನ ಮಾರುಕಟ್ಟೆ. ಈ ಸ್ಥಳದಲ್ಲಿ ಹಿಂದೆ ಅರಸರ ಕಾಲದಲ್ಲಿ ಅಪರಾಧಿಗಳನ್ನು ಶೂಲಕ್ಕೆ ಏರಿಸುತ್ತಿದ್ದರು. ಅರಸರು ಕೊಲೆಗಡುಕರನ್ನು ಬಿಜಾಪುರ, ಬೈಲಹೊಂಗಲಗಳಿಂದ ಹರಪನಹಳ್ಳಿಗೆ ಕರೆಸುತ್ತಿದ್ದರು. ಅವರಿಗೆ ಮದ್ಯಪಾನ ಮಾಡಿಸಿ ಅವರಿಂದ ದೊಡ್ಡ ಅಪರಾಧಿಗಳನ್ನು ಕೊಲೆ ಮಾಡಿಸುತ್ತಿದ್ದರು.

I. ಅಪರಾಧ ಮಾಡಿದವನ ಕುತ್ತಿಗೆಯನ್ನು ಖಡ್ಗದಿಂದ ಕತ್ತರಿಸಿ ತಗ್ಗಿಗೆ ಎಸೆಯುತ್ತಿದ್ದರು. ಹರಪನಹಳ್ಳಿಯ ೪ ಹೊನ್ನುಗಳನ್ನು ಕಟುಕನಿಗೆ ಕೊಟ್ಟು ಕಳಿಸುತ್ತಿದ್ದರು.

II. ಎರಡನೆಯ ಬಗೆ : ಒಂದು ಕಂದಕದಲ್ಲಿ ಎರಡು ಉದ್ದವಿರುವ ಗೂಟಗಳನ್ನು ನೆಟ್ಟಿದ್ದರು. ಅವುಗಳಿಗೆ ಅಡ್ಡ ಒಂದು ತೊಲೆಯನ್ನು ಕಟ್ಟಿದ್ದರು. ಅಪರಾಧಿಯನ್ನು ಅದಕ್ಕೆ ತೂಗುಹಾಕಿ ಅವನ ಮುಖವನ್ನು ವಸ್ತ್ರದಿಂದ ಮುಚ್ಚಿ ದೇವರನ್ನು ಪ್ರಾರ್ಥಿಸಲು ಅವಕಾಶ ಕಲ್ಪಿಸುತ್ತಿದ್ದರು. ಅವನ ತೂಕಕ್ಕಿಂತ ಎರಡುಪಟ್ಟು ಹೆಚ್ಚು ತೂಕದ ಕಲ್ಲುಗಳನ್ನು ಎರಡೂ ಕಾಲುಗಳಿಗೆ ತೂಗು ಹಾಕುತ್ತಿದ್ದರು. ಅವನು ನಿಂತ ಆಧಾರ ತಪ್ಪಿಸುತ್ತಿದ್ದರು. ಆಗ ಅವನು ನೆಲಕ್ಕೆ ಬೀಳುತ್ತಿದ್ದನು. ಸತ್ತವನ ದೇಹವನ್ನು ಮಣ್ಣಿನಲ್ಲಿ ಹೂಳುತ್ತಿದ್ದರು. ನೇಣು ಗಂಬಕ್ಕೆ ಏರಿಸುವ ಸ್ಥಳದಲ್ಲಿ ಯಾರೂ ಸುಳಿಯುವಂತಿರಲಿಲ್ಲ. ಸೇನಾಪತಿ ಮತ್ತು ೫ ಜನ ಸೈನಿಕರು ಮಾತ್ರ ಅಲ್ಲಿರುತ್ತಿದ್ದರು.

ಕಟ್ಟೆಮನೆ ಸಮಿತಿಯವರು ಗ್ರಾಮದ ಪ್ರತಿಮನೆಯ ಒಬ್ಬ ಹಿರಿಯರನ್ನು ನ್ಯಾಯ ನಿರ್ಣಯಿಸಲು ಆಹ್ವಾನಿಸುತ್ತಿದ್ದರು. ಸೋಮವಾರ ಸಂಜೆ ಅಥವಾ ಹಬ್ಬಗಳಲ್ಲಿ ಒಂದು

ದಿನವನ್ನು ಗೊತ್ತುಪಡಿಸುತ್ತಿದ್ದರು. ಬಂದ ಹಿರಿಯರು ಪುರುಷ ಇಲ್ಲವೇ ಸ್ತ್ರೀಯರು ಇರಬಹುದು. ಎರಡೂ ಕಡೆಯವರು ರಾಜೀಸೂತ್ರಗಳಿಗೆ ಒಪ್ಪಿದಲ್ಲಿ ಅವರಿಗೆ ತೆಂಗಿನಕಾಯಿ, ಅದಿಕೆ, ಎಲೆ ವೀಳ್ಯಕೊಟ್ಟು ದೇವರಮುಂದೆ ಇನ್ನೆಂದೂ ಹೀಗೆ ತಪ್ಪು ಮಾಡುವುದಿಲ್ಲ ಎಂಬುದಾಗಿ ಪ್ರಮಾಣಮಾಡಿಸಿ ಕಳುಹಿಸುತ್ತಿದ್ದರು. ಈ ಅಡಿಕೆ, ಎಲೆ, ತೆಂಗಿನಕಾಯಿ ಕೊಂಡ ಖರ್ಚನ್ನು ದೇವರಗುಡಿಗೆ ಪೂಜಾಕಾರ್ಯಕ್ಕೆ ರೈತರಿಂದ ಸಂಗ್ರಹವಾಗಿದ್ದ ಹಣದಲ್ಲಿ ಭರಿಸುತ್ತಿದ್ದರು.

**ಗಸ್ತು ತಿರುಗುವ ಪದ್ಧತಿ**

ಪ್ರತಿ ಗ್ರಾಮದಲ್ಲಿ ತಳವಾರರು ಪಾಳೆಯದ ಪ್ರಕಾರ ರಾತ್ರಿ ಖಡ್ಗಹಿಡಿದು ಸುತ್ತುತ್ತಿದ್ದರು. ಯಾರಾದರೂ ಮಹಿಳೆಯರಿಗೆ, ಮಕ್ಕಳಿಗೆ, ದುರ್ಬಲರಿಗೆ ಹಿಂಸೆ ಕೊಟ್ಟರೆ, ಕಳ್ಳತನ ಮಾಡಿದರೆ ಅವರನ್ನು ಮರುದಿನ ಪಂಚಾಯತಿಕಟ್ಟೆ ಸಮಿತಿಗೆ ಹಾಜರು ಪಡಿಸುತ್ತಿದ್ದರು. ಇದಕ್ಕೆ ಗಸ್ತು ತಿರುಗುವ ಪದ್ಧತಿ ಎನ್ನುತ್ತಿದ್ದರು.

ಒಂದು ಗ್ರಾಮದಿಂದ ಮತ್ತೊಂದು ಗ್ರಾಮಕ್ಕೆ ಜನರು ಎತ್ತಿನಗಾಡಿಯಲ್ಲಿ ಕಾಲುನಡಿಗೆಯಲ್ಲಿ ಪ್ರಯಾಣ ಮಾಡುತ್ತಿದ್ದಾಗ, ಕಳ್ಳರ ಕಾಟ ಆಗಾಗ್ಗೆ ಸಂಭವಿಸುತ್ತಿದ್ದಿತು. ಅದು ಅರಸರ ಗಮನಕ್ಕೆ ಬಂದರೆ ಕಳ್ಳರು ಗುರುತಾದರೆ ಮಾತ್ರ ಅವರನ್ನು ಶಿಕ್ಷಿಸುತ್ತಿದ್ದರು. ಈ ಮರಣದಂಡನೆಗಳ ವ್ಯಾಜ್ಯಗಳು ಪೂರ್ಣ ಅರಸರ ನ್ಯಾಯಾಲಯದಲ್ಲಿ ತೀರ್ಮಾನ ಆಗುತ್ತಿದ್ದುವು.

೬. ಅರಸರು ಯುದ್ಧಕ್ಕೆ ಬರಲು ಆದೇಶ ಕಳಿಸಿದ್ದು ಅದನ್ನು ಪಾಲಿಸದೇ ಇದ್ದರೆ ಅವನಿಗೆ ಎರಡುತಿಂಗಳು ಕಾರಾಗೃಹ ವಿಧಿಸುತ್ತಿದ್ದರು.

ಭೂಮಿಯ ಅಳತೆ, ದಾರಿ, ಮನೆ ಜಾಗ, ಕಣದ ಜಾಗಗಳಿಗಾಗಿ ಜನರ ಮಧ್ಯೆ ಕಲಹ ಉಂಟಾದರೆ ಸುಬೇದಾರ ಎಂಬುವ ಅಧಿಕಾರಿ ಗ್ರಾಮದ ಶಾನುಭೋಗ ಅಥವಾ ಕುಲಕರ್ಣಿಗಳ ನೆರವಿನಿಂದ ಅಳತೆಮಾಡಿ ಪರಿಹಾರ ಒದಗಿಸುತ್ತಿದ್ದರು. ಇಲ್ಲಿಯೂ ಇತ್ಯರ್ಥವಾಗದ ಜಗಳಗಳನ್ನು ಅರಸ ಇಲ್ಲವೇ ಸಾಮಂತ ಅರಸರ ಸಮಿತಿಗಳಿಗೆ ಕಳಿಸುತ್ತಿದ್ದರು.

ಹರಪನಹಳ್ಳಿ ಪಾಳೆಯಗಾರ ನಾಯಕರ ಸಾಮಂತ ಅರಸರು :

೧. ತಂಬ್ರಹಳ್ಳಿ ಓಬಳನಾಯಕ
೨. ವೀರನದುರ್ಗದ ರಾಮಯ್ಯನಾಯಕ
೩. ಬಾಗಳಿ ರಂಗಾನಾಯಕ
೪. ಹೊಳಲು ಬಸವಾನಾಯಕ
೫. ಚಿಗಟೇರಿ ಶಿವಪ್ಪನಾಯಕ
೬. ಕುರೇದಗುಡ್ಡೆಕೋಟೆಯ ಭರಮನಗೌಡನಾಯಕ.

ಈ ಸಾಮಂತ ಅರಸರ ಆಳ್ವಿಕೆಯ ವ್ಯಾಪ್ತಿ ಪ್ರದೇಶಗಳಲ್ಲಿ ಪಂಚಾಯಿತಿಕಟ್ಟೆ ಸಮಿತಿಗಳು ಮತ್ತು ಅರಸರ ನ್ಯಾಯಸಮಿತಿಗಳಿದ್ದವು. ಇವರು ಹರಪನಹಳ್ಳಿ ಪಾಳೆಯಗಾರರ ರೀತಿಯಲ್ಲಿಯೇ ನ್ಯಾಯನಿರ್ಣಯಿಸಿ ದಂಡ, ಶಿಕ್ಷೆ ವಿಧಿಸುತ್ತಿದ್ದರು.

**ಸಂತೆಗಳು**

ರಾಜ್ಯದ ಕೆಲವು ಪ್ರಮುಖ ಗ್ರಾಮಗಳಲ್ಲಿ ವಾರಕ್ಕೆ (ಏಳುದಿನಕ್ಕೆ) ಒಂದುದಿನ ಸಂತೆ ನಡೆಯುತ್ತಿದ್ದವು. ಸಂತೆಗಳಲ್ಲಿ ಅರಬರು, ಪಿಂಡಾರಿಗಳು, ಗಂಟೆ ಚೌಡಿಯರು, ಪುಢಾರಿಗಳು ಅಂಗಡಿಯವರನ್ನು ಹೆದರಿಸಿ, ದವಸ, ಧಾನ್ಯ, ತಿಂಡಿ, ಅಡಿಕೆ, ಎಲೆ, ಕಿರಾಣಿ ಮತ್ತು ಹಣಗಳನ್ನು ಪಡೆಯುತ್ತಿದ್ದರು. ಅವರು ಕೊಡದೇ ಇದ್ದರೆ, ಅವರ ಅಂಗಡಿಗಳನ್ನು ಕೊಳ್ಳೇ ಹೊಡೆಯುತ್ತಿದ್ದರು; ಪದಾರ್ಥಗಳನ್ನು ದಾರಿಗೆ ಎಸೆಯುತ್ತಿದ್ದರು.

ಮೊದಲ ಸೋಮಶೇಖರನಾಯಕನ ಕಾಲದಲ್ಲಿ ಅಂದರೆ ಕ್ರಿ.ಶ.೧೭೪೨-೧೭೬೬ರಲ್ಲಿ ಒಬ್ಬ ದಳವಾಯಿ ಕುದುರೆ ಏರಿ ಸಂತೆ ಸುತ್ತುತ್ತಿದ್ದ. ಅಂಗಡಿಕಾರರಿಗೆ ಉಪದ್ರವ ಕೊಟ್ಟವರನ್ನು ಹಿಡಿದು ಚಾಟಿಏಟು ಹಾಕುತ್ತಿದ್ದ. ಸುಂಕದವರಿಂದ ಈ ದಳವಾಯಿಗೆ ಸಂತೆಗೆ ಇಷ್ಟು ಹೊನ್ನು (ಹರಪನಹಳ್ಳಿ ೧೦% ಆಣೆವರಿ) ಕೊಡುವ ಏರ್ಪಾಟು ಇದ್ದಿತು. ಆದರೆ ಎಷ್ಟು ಹೊನ್ನು ಎಂಬುದು ತಿಳಿದುಬಂದಿಲ್ಲ.

**ಘಟನೆ ೧**

ಕ್ರಿಸ್ತಶಕ ೧೭೧೭-೧೭೨೧ರ ಅವಧಿಯಲ್ಲಿ ರಾಣಿಯಾಗಿದ್ದ ಹರಿಯಮ್ಮಾಜಿಯ ಕಾಲದಲ್ಲಿ ಕುಂಚೂರುಗ್ರಾಮದ ದಳವಾಯಿ (ಸಾಮಂತ) ಬಸವ ಎಂಬುವವನು ಹರಪನಹಳ್ಳಿ ರಾಜ್ಯದ ಪಶ್ಚಿಮದ ಗಡಿಯನ್ನು ಹೊಳಲುಕೋಟೆಯಿಂದ ಒಂದು ತುಕ್ಕಡಿ ಸೇನೆಯ ನೆರವಿನಿಂದ ಕಾಯುತ್ತಿದ್ದನು. ಒಂದುಬಾರಿ ಹೊಳಲು ಬ್ರಾಹ್ಮಣರಿಗೂ ದಳವಾಯಿ ಬಸವನಿಗೂ ಜಗಳ ಉಂಟಾಗಿ ನಾಲ್ಕುಜನ ಬ್ರಾಹ್ಮಣರು ಹತರಾದರು. ಹೊಳಲಿನ ಬ್ರಾಹ್ಮಣರು ಹರಪನಹಳ್ಳಿಗೆ ಆಗಮಿಸಿ, ಬಸವನ ವಿರುದ್ಧ ನೇರವಾಗಿ ಅರಸಿಗೆ ದೂರು ಸಲ್ಲಿಸಿದರು. ಆಗ ಎರಡನೆಯ ಬಸವಂತನಾಯಕ ಅಕಾಲ ಮರಣಕ್ಕೆ ಈಡಾಗಿದ್ದನು. ಐದುವರ್ಷ ರಾಣಿಯೇ ರಾಜ್ಯವಾಳಿದಳು. ರಾಣಿಯು ಬಸವ ದಳವಾಯಿ ಹರಪನಹಳ್ಳಿಗೆ ಆಗಮಿಸಲು ಸೈನಿಕನ ಮೂಲಕ ಹೇಳಿಕಳಿಸಿದಳು. ರಾಣಿಯಾದರೂ ಸ್ತ್ರೀ; ಅವಳೇನು ಮಾಡಿಯಾಳು? ಎಂಬುವ ನಂಬಿಗೆ ಮತ್ತು ಅಹಂಕಾರದಿಂದ ಬಸವ ದಳವಾಯಿಯು ರಾಣಿಯ ಆಜ್ಞೆಯನ್ನು ತಿರಸ್ಕರಿಸಿ ಹರಪನಹಳ್ಳಿಗೆ ಬಂದು ಅವಳನ್ನು ಕಾಣಲಿಲ್ಲ. ರಾಣಿ ಹರಿಯಮ್ಮಾಜಿಯೇ ಕುದುರೆ ಏರಿ ಹೊಳಲುಕೋಟೆಗೆ ಧಾವಿಸಿ ದಳವಾಯಿ ಬಸವನ ಕೂಡ ಕತ್ತಿಕಾಳಗ ಮಾಡಿ ಅವನನ್ನು ಸಂಹರಿಸಿದಳು. ಮೃತದೇಹವನ್ನು ಕುಂಚೂರಿಗೆ ತರಿಸಿ ಕೋಟೆ ಹೊರಗೆ ಹೂಳಿಸಿ, ಅದಕ್ಕೆ ಕಟ್ಟೆ ರಚಿಸಿ ಅದರ ಮೇಲೆ ಬಸವಣ್ಣನ ಮೂರ್ತಿ ಸ್ಥಾಪಿಸಿ, ನಂತರದಲ್ಲಿ ಗುಡಿಯನ್ನೂ ಹೂದೋಟವನ್ನೂ ಮಾಡಿಸಿದಳು. ದಳವಾಯಿಗೆ ಮಕ್ಕಳಿರಲಿಲ್ಲ. ಓರ್ವ ಮಡದಿ ಇದ್ದಳು. ಅವಳ ಹೆಸರು

'ಗಂಗವ್ವ'. ಅವಳಿಗೆ ಒಂಭತ್ತು ಎಕರೆ ಹೊಲ, ಒಂದು ಎಕರೆ ತೋಟ ಕೊಟ್ಟಳು. ಗಂಗವ್ವ ಮೃತಳಾದ ಬಳಿಕ ಆ ಭೂಮಿ ಆ ದೇವಾಲಯಕ್ಕೆ ಸೇರಬೇಕೆಂದು ಕುಂಚೂರು ಪ್ರಮುಖರಿಗೆ ಆದೇಶವಿತ್ತಳು. ಈ ಗುಡಿಯನ್ನು ಈಗ ಕುಂಚೂರಲ್ಲಿ ನೋಡಬಹುದು.

**ಘಟನೆ ೨**

ಎರಡನೆಯ ಸೋಮಶೇಖರನಾಯಕ ಹಂಚಿನಾಳಮಠದವರಿಗೆ ಒಂದು ಕಣದ ಪಟ್ಟಿಯನ್ನು (ಭೂಮಿ) ಕೊಟ್ಟಿದ್ದ. ಅಕ್ಕಸಾಲೆಯವರು ರಾಣಿಗೆ ಬಂಗಾರದ ಒಡವೆಗಳನ್ನು ಮಾಡಿಕೊಟ್ಟರು. ಆಗ ಅರಸ ಮಠದವರಿಗೆ ಕೊಟ್ಟ ಭೂಮಿಯನ್ನು ವಾಪಾಸು ಪಡೆದು ಅಕ್ಕಸಾಲೆಯವರಿಗೆ ಕೊಟ್ಟನು. ಹಂಚಿನಾಳುಮಠದಸ್ವಾಮಿಯು ಒಂದುದಿನ ಬೆಳಿಗ್ಗೆ ಮುಳ್ಳುಆವಿಗೆ ಮೇಲೆ ನಿಂತು ಕೆಳಗಿನಂತೆ ಕೂಗಿ ಜಾಗಟೆ ಬಡಿದನು:

"ಹಂಚಿನಾಳರಿಗೆ ಕೊಟ್ಟ ಭೂಮಿಯನ್ನು ಪಾಂಚಾಳರಿಗೆ ಕೊಟ್ಟ
ಸೋಮಶೇಖರನ ರಾಜ್ಯ ಹಂಚಿ ಹರಿದು ಹಾಳಾಗಿ ಹೋಗಲಿ."

ಕೊನೆಯ ಅರಸ ದುಡುಕುತನ, ಸಿಡುಕುತನಗಳಿಂದ ಕೆಲವು ತಪ್ಪುತೀರ್ಮಾನಗಳನ್ನು ಕೈಕೊಳ್ಳುತ್ತಿದ್ದನು. ಅದಕ್ಕೆ ಪ್ರತಿಯಾಗಿ ಕಷ್ಟಗಳನ್ನು ಅನುಭವಿಸಿದನು.

ಹರಪನಹಳ್ಳಿ ನಾಯಕರು ತಪ್ಪುಮಾಡಿದವರು ತಪ್ಪು ಒಪ್ಪಿಕೊಂಡರೆ, ಶತ್ರುಗಳು ಕೊಡುವ ಶಿಕ್ಷೆ ಸಹಿಸದೆ ಓಡಿಬಂದು ಮರೆಹೊಕ್ಕರೆ ಅವರನ್ನು ರಕ್ಷಿಸುವ, ಅದಕ್ಕೆ ಉಂಟಾದ ಕಷ್ಟ-ಕಾರ್ಪಣ್ಯಗಳನ್ನು ಸಹಿಸುವ ಶಕ್ತಿ-ತಾಳ್ಮೆಗಳನ್ನು ಹೊಂದಿದ್ದ ದಯಾಶೀಲರೂ ಆಗಿದ್ದರು. ಇವರ ಶಾಸನಗಳಲ್ಲಿ, ಪತ್ರಗಳಲ್ಲಿ, 'ಭಾಷೆಗೆತಪ್ಪುವ ನಾಯಕರ ಗಂಡ, ಮರೆಹೊಕ್ಕರೆ ಕಾಯುವ, ಮಾರಾಂತರ ಗೆಲ್ವ, ಬಾಗುಳಿ ಸೋಮೇಶೇಖರನಾಯಕರ ಬಸವಪ್ಪನಾಯಕರು' ಎಂಬುದಾಗಿ ನಿರೂಪ ಬರೆಸಿರುವರು. ಅವುಗಳನ್ನು ಈಗಲೂ ಕಾಣಬಹುದು.

**ಆಧಾರ ಸೂಚಿ**

೧. ಹರಪನಹಳ್ಳಿ ಪಾಳೆಯಗಾರರ ಪುಸ್ತಕ ೨. ಪಾಳೆಯಗಾರರ ಪತ್ರಗಳು ೩. ಹೊರಡಿಸಿದ ಆದೇಶಗಳು ೪. ಶಾಸನಗಳು ೫. ವಯೋವೃದ್ಧರ ಹೇಳಿಕೆಗಳು ೬. ರಾಯಸದವರಲ್ಲಿ ದೊರೆತ ಕಡತಗಳು. ೭. ಗೌಡರ ಮನೆಯ ಪ್ರಾಚೀನ ದಾಖಲೆ.

೭

# ನಾಯಕನಹಟ್ಟಿ ಪಾಳೆಯಗಾರರ ನ್ಯಾಯಾಡಳಿತ

ಡಾ. ಮೀರಾಸಾಬಿಹಳ್ಳಿ ಶಿವಣ್ಣ

ನಾಯಕನಹಟ್ಟಿಯು ಚಿತ್ರದುರ್ಗ ಜಿಲ್ಲಾ ಕೇಂದ್ರದಿಂದ ಈಶಾನ್ಯಕ್ಕೆ ಸುಮಾರು ಇಪ್ಪತ್ತೈದು ಕಿ.ಮೀ.ಗಳ ಅಂತರದಲ್ಲಿದ್ದು, ಅವಧೂತ ತಿಪ್ಪೇಸ್ವಾಮಿಯ ಪುಣ್ಯಕ್ಷೇತ್ರವಾಗಿ ಪ್ರಸಿದ್ಧಿ ಪಡೆದಿದೆ. ಒಂದುಕಾಲಕ್ಕೆ ಅದು ಹಟ್ಟಿ ಪಾಳೆಯಪಟ್ಟಿನ ಮುಖ್ಯನೆಲೆಯೂ ಆಗಿತ್ತು. ಆದರೆ ಇದು ಆರಕ್ಕೇರದ ಮೂರಕ್ಕಿಳಿಯದ ಒಂದು ಸಣ್ಣ ಪಾಳೆಯಪಟ್ಟು. ಒಂದು ರೀತಿಯಲ್ಲಿ ಸ್ವತಂತ್ರ ಪಾಳೆಯಪಟ್ಟಿನಂತೆ ತೋರಿದರೂ, ಪರೋಕ್ಷವಾಗಿ ಚಿತ್ರದುರ್ಗ ಪಾಳೆಯಪಟ್ಟಿನ ನಿಯಂತ್ರಣದಲ್ಲೇ ಇತ್ತು. ಹೀಗಾಗಿ ನಾಯಕನಹಟ್ಟಿಗೆ ಎಂದೂ ಒಂದು ಸಂಸ್ಥಾನದ ಘನತೆ ಪ್ರಾಪ್ತವಾಗಲೇ ಇಲ್ಲ. ಆದರೆ ಬೇರೆಲ್ಲ ಪಾಳೆಯಪಟ್ಟುಗಳಿಗೆ ಇಲ್ಲದ ವಿಶೇಷತೆ ಇದಕ್ಕಿದೆ. ಏಕೆಂದರೆ ಪಶುಪಾಲಕ ಮೂಲದಿಂದ ಬಂದ ಅಪರೂಪದ ಪಾಳೆಯಪಟ್ಟು ಇದು.

ಹಟ್ಟಿ ಪಾಳೆಯಗಾರರ ಮೂಲಪುರುಷರು ಅಲೆಮಾರಿ ಪಶುಪಾಲಕ ಮ್ಯಾಸ'ನಾಯಕ' ಬುಡಕಟ್ಟಿನಿಂದ ಬಂದವರು. ಅವರು ಈ ಪ್ರಾಂತ್ಯಕ್ಕೆ ಹುಲ್ಲು-ನೀರು ಹುಡುಕುತ್ತಾ ತಮ್ಮ ಪಶುಗಳೊಂದಿಗೆ ಬಂದು ಇಲ್ಲೇ ನೆಲೆನಿಂತು, ಹಟ್ಟಿ ಹಾಕಿದ ಜಾಗವೇ 'ನಾಯಕನಹಟ್ಟಿ' ಯಾಗಿ, ಮ್ಯಾಸನಾಯಕ ಜನಾಂಗದವರಿಗೆ 'ಕಟ್ಟೆಮನೆ'ಯಾಗಿ ನಂತರ ಅದು ಆಡಳಿತಾತ್ಮಕ ವಾದ 'ಪಾಳೆಯ'ದ ಸ್ವರೂಪ ಪಡೆದಂತೆ ಕಾಣುತ್ತದೆ. ನಾಯಕನಹಟ್ಟಿ ನೆಲೆಯಿಂದಲೇ ಇವರ ಕೆಲವು ಸಹೋದರರು ತಮ್ಮ ಪಶುಗಳೊಂದಿಗೆ ಹೊರಟು ಕುಂದಿರ್ಪೆ, ನಿಡಗಲ್ಲು, ಶಂಕರಕಲ್ಲು, ರತ್ನಗಿರಿ ಮುಂತಾದ ಸ್ಥಳಗಳಿಗೆ ಹೋಗಿ ನೆಲೆನಿಂತು ಪಾಳೆಯಪಟ್ಟುಗಳನ್ನು ಸ್ಥಾಪಿಸಿಕೊಂಡರು. ಹೀಗಾಗಿ ಇದು ಮೂಲತಃ ಬುಡಕಟ್ಟು ಸ್ವರೂಪದ 'ಕಟ್ಟೆಮನೆ'ಯ ಅಂತಃಸತ್ವವನ್ನು ಗರ್ಭೀಕರಿಸಿಕೊಂಡ ಪಾಳೆಯಪಟ್ಟು ಆಗಿದೆ. ಸಹಜವಾಗಿ ಇವರ ನಿಯಂತ್ರಣ ಆ ಭಾಗದಲ್ಲಿ ನೆಲೆನಿಂತ ನಾಯಕ ಮಹಾಮಂಡಲಿಯ ವ್ಯಾಪ್ತಿಯನ್ನು ಪಡೆದಂತೆ ಕಾಣುತ್ತದೆ. ಮೇಲಾಗಿ ಹಟ್ಟಿ ಪಾಳೆಯಪಟ್ಟಿನ ಮೂಲಪುರುಷನಾದ ಕಾಟ ಮಲ್ಲನಾಯಕನ ಹೆಸರಿನಲ್ಲೇ 'ಮ್ಯಾಸಮಂಡಲಿ'ಯ ಪ್ರಮುಖ ಶಾಖೆಯಾದ 'ಮಲ್ಲನಾಯಕ

ನೋರು' ಹುಟ್ಟಿಕೊಂಡಂತೆ ಕಾಣುತ್ತದೆ. ನಾಯಕನಹಟ್ಟಿ ಸುತ್ತಿನ ಸಣ್ಣ-ಪುಟ್ಟ ಮೊರಡಿಗಳು, ಹಳ್ಳ-ಕಣಿವೆಗಳಲ್ಲಿ ತಮ್ಮ ಪಶುಸಂಪತ್ತಿನೊಂದಿಗೆ ಬೀಡುಬಿಟ್ಟ 'ಮ್ಯಾಸ'ರ ಮೇಲಿನ ಸಹಜ ನಿಯಂತ್ರಣವೇ ಕ್ರಮೇಣ ಅವರಿಗೆ 'ದೊರೆತನ'ವನ್ನು ತಂದಂತೆ ಕಾಣುತ್ತದೆ. ಹೀಗಾಗಿ ಈ ಪಾಳೆಯಪಟ್ಟು ತನ್ನ ಬುಡಕಟ್ಟು ಸ್ವರೂಪದಿಂದ ಮೇಲೇಳದೆ, ಶಿಷ್ಟತೆಯನ್ನು ಮೈಗೂಡಿಸಿಕೊಳ್ಳದೆ ಪರಿಶಿಷ್ಟವಾಗಿಯೇ ಉಳಿದದ್ದು. ಹೀಗಾಗಿ ಇದು ಶಿಷ್ಟ ಪಾಳೆಯಪಟ್ಟಿಗೆ ಸಹಜವಾದ ಸೈನ್ಯ ಮುಂತಾದ ಸವಲತ್ತುಗಳನ್ನು ಹೊಂದಲೇ ಇಲ್ಲವೆನಿಸುತ್ತದೆ. (ಆದರೆ ಇದೇ ಪಶುಪಾಲಕ ಮ್ಯಾಸ ಬುಡಕಟ್ಟುಮೂಲದಿಂದ ಬಂದ ಚಿತ್ರದುರ್ಗದ ಪಾಳೆಯಪಟ್ಟು, ಈಗಾಗಲೇ ಸ್ಥಾಪಿತವಾಗಿದ್ದ ಬಲಿಷ್ಟ ಶಿಷ್ಟ ವ್ಯವಸ್ಥೆಯೊಂದರ ಉಸ್ತುವಾರಿಯನ್ನು ಪಡೆಯುವುದರ ಮೂಲಕ ಅದು ಬೆಳೆದ ಬಗೆಯೇ ಬೇರೆಯಾಯಿತು). ಹೀಗಾಗಿ ಚಿತ್ರದುರ್ಗದವರು ಇವರ ಮೇಲೆ ದೌಲತ್ತು ಮಾಡಿದಾಗ ಸಹಿಸಿಕೊಂಡಿರಬೇಕಾಯಿತು. ಪ್ರತಿಭಟಿಸಲಾಗದ ಅಸಹಾಯಕತೆಯಿಂದ ಪಾಳೆಯಪಟ್ಟನ್ನೇ ಬಿಟ್ಟುಕೊಟ್ಟು ಆನೆಗೊಂದಿ ಯಲ್ಲಿಯ ತಮ್ಮ 'ಉಂಬಳಿ'ಯಲ್ಲೇ ಸುಖಪಡಲು ನಿರ್ಧರಿಸಬೇಕಾಯಿತು. ಬಹುಶಃ ಸೈನ್ಯಶಕ್ತಿಯ ಕೊರತೆಯ ಕಾರಣಕ್ಕಾಗೇ ಇವರು ಸುತ್ತಿನ ಯಾರ ಶತ್ರುತ್ವವನ್ನೂ ಕಟ್ಟಿ ಕೊಳ್ಳಲಿಲ್ಲ. ಯುದ್ಧಗಳನ್ನೂ ಮಾಡಲಿಲ್ಲ! ಹೀಗಾಗಿ ಇದ್ದುದರಲ್ಲೇ ತೃಪ್ತಿಪಡುವ ಬುಡಕಟ್ಟು ಗುಣ ಇವರದಾದ್ದರಿಂದ ಪಾಳೆಯಪಟ್ಟಿನ ವಿಸ್ತೀರ್ಣದಂತಹ ಮಹತ್ವಾಕಾಂಕ್ಷೆಯ ಕನಸೇ ಕಾಣಲಿಲ್ಲವೆನಿಸುತ್ತದೆ. ಅನಿವಾರ್ಯವಾದಾಗ ಚಿತ್ರದುರ್ಗದವರೊಂದಿಗೆ ವೈವಾಹಿಕ ಸಂಬಂಧದ ಮೂಲಕ ಪರಿಸ್ಥಿತಿಯನ್ನು ಸುಗಮಗೊಳಿಸಿಕೊಳ್ಳುವ ಪ್ರಯತ್ನಗಳನ್ನು ಮಾಡಿದುದನ್ನು ಇತಿಹಾಸ ಹೇಳುತ್ತದೆ. ಒಟ್ಟಾರೆ, ಸಂಕೀರ್ಣ ಪಾಳೆಯಗಾರಿಕೆ ವ್ಯವಸ್ಥೆ ಹೊಂದದ, ಒಂದು ರೀತಿಯ ಬುಡಕಟ್ಟಿನ 'ಕಟ್ಟೆಮನೆ'ಯ ವ್ಯವಹಾರವನ್ನು ಇವರ ನಡಾವಳಿಗಳಲ್ಲಿ ಕಾಣಬಹುದು.

ಈ ಹಿನ್ನೆಲೆಯಲ್ಲಿ ಹಟ್ಟಿ ಪಾಳೆಯಗಾರರ ಕಾಲದ ನ್ಯಾಯಾಡಳಿತ ವ್ಯವಸ್ಥೆಯನ್ನು ಪರಿಶೀಲಿಸಬಹುದು. ಇವರ ನ್ಯಾಯಪದ್ಧತಿಯನ್ನು ವಿವರಿಸುವ ಪಾಳೆಯಗಾರರ ಕಾಲದ ಲಿಖಿತ ದಾಖಲೆಗಳು ಯಾವುವೂ ದೊರೆಯುವುದೇ ಇಲ್ಲ. ನಾಯಕನಹಟ್ಟಿಯ ಬಗ್ಗೆ ದೊರೆಯುವ ಏಕೈಕ ದಾಖಲೆ 'ವಂಶಾವಳಿ'(ಕೆಲವರು ಇದನ್ನೇ ಬಖೈರು ಎಂದು ಕರೆದಿದ್ದರು)ಯಲ್ಲಿ, ಆನೆಗೊಂದಿ ಪಾಳೆಯಗಾರನ ಸೂಳೆಯನ್ನೇ ಹಾರಿಸಿದ ಹಟ್ಟಿಮೂಲದ ಘಟಿಂಗ ಚಿಕ್ಕಮಲ್ಲಪ್ಪನಾಯಕ 'ತಲೆಹೊಯ್ಸು'ಬಹುದೆಂದು ಹೆದರಿ ಪಲಾಯನ ಮಾಡುವ ಉಲ್ಲೇಖವೊಂದು ದೊರೆಯುತ್ತದೆ. ಪಾಳೆಯಗಾರರ ಕಾಲದಲ್ಲಿ 'ತಲೆಯೊಡೆಸುವ' ಪದ್ಧತಿ ಇದ್ದುದನ್ನು ಇದು ತಿಳಿಸುತ್ತದೆ. ಆದರೆ 'ಹಟ್ಟಿ ಕಟ್ಟೆಮನೆ'ಗೆ ಬಂದ ಕೆಲವು ವ್ಯಾಜ್ಯ ತೀರ್ಮಾನಗಳ ದಾಖಲೆಗಳು ದೊರೆಯುತ್ತವೆ (ಇದರಲ್ಲಿ ಬಹುಪಾಲು ದೇವರಿಗೆ ಸಂಬಂಧಿಸಿದ ಹಕ್ಕಿನ ತಕರಾರುಗಳೇ ಆಗಿವೆ). ಬುಡಕಟ್ಟಿನ ಕಟ್ಟೆಯಮನೆಗಳೇ ಅಂದಿನ ನ್ಯಾಯಾಲಯಗಳಾಗಿದ್ದವು. ಹಟ್ಟಿಯ ಪಾಳೆಯಪಟ್ಟೂ ಒಂದು ಬುಡಕಟ್ಟು ಕಟ್ಟೆಮನೆಯ

ಸತ್ವವನ್ನೇ ಮೈಗೂಡಿಸಿಕೊಂಡಿರುವುದರಿಂದ 'ಬುಡಕಟ್ಟು ನ್ಯಾಯಪದ್ಧತಿ'ಯೇ ಅಂದಿನ ಪಾಳೆಯಪಟ್ಟಿನ 'ನ್ಯಾಯಪದ್ಧತಿ ವ್ಯವಸ್ಥೆ'ಯೂ ಆಗಿತ್ತು ಎಂದು ಭಾವಿಸಬಹುದು.

ದೊರೆಯೊಂದಿಗೆ ಕಟ್ಟೆಮನೆಯ ಯಜಮಾನ, ನಾಯಕವಾಡಿಯ ಕುಲಸಾವಿರದ ಪ್ರತಿನಿಧಿಗಳು ಒಟ್ಟಾರೆ ಸೇರಿ ವಿಚಾರಣೆ ನಡೆಸಿ, ತೀರ್ಮಾನಕೊಡುವ ವ್ಯವಸ್ಥೆ ಇತ್ತು. ಇದಕ್ಕೆ ನ್ಯಾಯಬೇಡುವವರು ಬದ್ಧರಾಗಲೇಬೇಕಿತ್ತು; ಮೀರಿದರೆ ದುಡ್ಡಿನ ದಂಡ, ಕೆಲವು ಬಾರಿ ಜಾತಿಯಿಂದ ಬಹಿಷ್ಕಾರ ಹಾಕುತ್ತಿದ್ದರು. ಇನ್ನು ಕೆಲವುಬಾರಿ ತಪ್ಪಿತಸ್ಥರೆಂದು ತೀರ್ಮಾನಿಸಿದವರೊಂದಿಗೆ ಕುಲಸ್ಥರು ಯಾವರೀತಿಯಲ್ಲೂ ವ್ಯವಹರಿಸಬಾರದೆಂದು ನಿಷೇಧಿಸುತ್ತಿದ್ದರು, 'ನೀರು-ಬೆಂಕಿ'ಯ ನಿಷೇಧವನ್ನೂ ಹಾಕುತ್ತಿದ್ದರು. ಈ ದಂಡನೆಗೆ ಗುರಿಯಾದವರು ಸಾರ್ವಜನಿಕ ಅಥವಾ ಕುಲಸ್ಥರು ಬಳಸುವ ಬಾವಿಯಿಂದ ನೀರು ಸೇದುವಂತಿಲ್ಲ. ಬೆಂಕಿಕಡ್ಡಿ ಇಲ್ಲದ ಕಾಲದಲ್ಲಿ ಒಲೆಹೊತ್ತಿಸಲು ಬೇರೊಬ್ಬರ ಮನೆಯಿಂದ ಬೆಂಕಿಕೆಂಡವನ್ನು ತರಬೇಕಾಗಿತ್ತು, ಬಹಿಷ್ಕಾರಕ್ಕೆ ಒಳಗಾದವರಿಗೆ ಆ ಸೌಲಭ್ಯವೂ ದೊರೆಯುತ್ತಿರಲಿಲ್ಲ. ಜೊತೆಗೆ ಯಾರೂ ಮಾತನಾಡಿಸುತ್ತಿರಲಿಲ್ಲ. ಅವರು ಅನಿವಾರ್ಯವಾಗಿ ಊರು ತೊರೆದುಹೋಗಬೇಕಾಗಿತ್ತು. ಆಗ ಕುಲಾಚಾರದ ಕಟ್ಟುಗಳು ತುಂಬಾ ಬಿಗಿಯಾಗಿ ಇದ್ದುದರಿಂದ ಬೇರೆ ಊರಿನವರೂ ಅವರನ್ನು ಸೇರಿಸುತ್ತಿರಲಿಲ್ಲ. ಹೀಗೆ ಬಹಿಷ್ಕಾರಕ್ಕೆ ಒಳಗಾಗಿ ಕೆಟ್ಟವರೆಲ್ಲ ಒಂದೆಡೆ ಸೇರುತ್ತಿದ್ದರು, ಅದೇ 'ಕೆಟ್ಟವರಹಟ್ಟಿ (ಕೆಟ್ಟೋರಟ್ಟಿ), ಬಿಟ್ಟವರಹಟ್ಟಿ (ಬಿಟ್ಟೋರಟ್ಟಿ)'ಯಾಗುತ್ತಿತ್ತು. ಈಗಲೂ ಅಂತಹ ಅನೇಕ ಹಟ್ಟಿಗಳಿರು ವುದನ್ನು ಗುರುತಿಸಬಹುದು. (ಆದರೆ ಅವರನ್ನು ಹಿಂದಿನ ರೀತಿಯಲ್ಲಿ ತಿರಸ್ಕಾರವಾಗಿ ನೋಡುವ ದೃಷ್ಟಿ ಕಡಿಮೆಯಾಗಿದೆ. ಆದರೆ ಅಂತಹವರೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಲು ಹಿಂಜರಿಯುತ್ತಾರೆ). ಬಹಿಷ್ಕಾರಕ್ಕೆ ಗುರಿಯಾದವರನ್ನು 'ಶುದ್ಧಿ' ಮಾಡಿ ಮತ್ತೆ ಕುಲದೊಳಕ್ಕೆ ಸೇರಿಸಿಕೊಳ್ಳುವ ಪ್ರಕ್ರಿಯೆಯನ್ನು 'ಶುದ್ಧಪತ್ರ' ಮಾಡುವುದು ಎಂಬ ಹೆಸರಿನೊಂದಿಗೆ ಕರೆಯಲಾಗಿದೆ. ಅಂದರೆ ಗೋಗಂಜಿನ ಪ್ರೋಕ್ಷಣೆಯ ಮೂಲಕ ದೋಷ ಕಳೆದು, ದಂಡ ವಿಧಿಸುತ್ತಿದ್ದರು. ಆ ದಂಡವನ್ನು ತೆತ್ತಾಕ್ಷಣ ಬಹಿಷ್ಕಾರ ರದ್ದಾಗುತ್ತಿತ್ತು.

ಶಿಷ್ಟ ಪಾಳೆಯಪಟ್ಟುಗಳಲ್ಲಿ ಕಂಡುಬರುವ 'ಶೂಲದಶಿಕ್ಷೆ'ಯಂತಹ ಪ್ರಾಣ ತೆಗೆಯುವಂತಹ ಶಿಕ್ಷೆಗಳನ್ನು ಬುಡಕಟ್ಟು ನ್ಯಾಯಾಲಯಗಳಾದ ಕಟ್ಟೆಮನೆ ಸಂಸ್ಥಾನಗಳಲ್ಲಿ ವಿಧಿಸುತ್ತಿರಲಿಲ್ಲ. ಕೆಲವೊಮ್ಮೆ ಬಹಳ ಉಗ್ರಕ್ರಮ ಎಂದರೆ ಕೈಕತ್ತರಿಸುವ, ಕವಣೆ ಏಟುಕೊಡುವ, ಗಡೀಪಾರು ಮಾಡುವ ಶಿಕ್ಷೆಗಳನ್ನು ವಿಧಿಸುತ್ತಿದ್ದರೆಂದು 'ಹಟ್ಟಿ ಸುತ್ತಿನ ಹಿರಿಯರು' ಹೇಳುತ್ತಾರೆ. ಅಪರಾಧಿ ತನ್ನ ಪ್ರಾಮಾಣಿಕತೆಯನ್ನು ಸಾಬೀತುಪಡಿಸಲು 'ಹಾಲುಹಿಡಿದು ಪ್ರಮಾಣ' ಮಾಡಬೇಕಿತ್ತು. 'ಪ್ರಮಾಣ' ಮಾಡಲು ಹಿಂಜರಿದರೆ ಅಪರಾಧಿಯೆಂದು ತೀರ್ಮಾನಿಸುತ್ತಿದ್ದರು.

ಈ ಪಾಳೆಯಪಟ್ಟು ಕಟ್ಟೆಮನೆಗಳ ಮುಂದುವರೆದ ನ್ಯಾಯಪದ್ಧತಿಯೆಂಬಂತೆ ಆಯಾ ಪಾಳೆಯಪಟ್ಟಿನ ವಂಶಜರೇ (ಸಂಸ್ಥಾನಿಕರೇ) ಕೆಲವು ಕಟ್ಟುಕಟ್ಟಳೆಗಳನ್ನು ಹೇರುವುದರ

ಮೂಲಕ ಜನಾಂಗವನ್ನು ಸುಧಾರಿಸುವ ಪ್ರಯತ್ನ ಮಾಡಿರುವುದನ್ನು ರತ್ನಗಿರಿ ಸಂಸ್ಥಾನಕ್ಕೆ ಸೇರಿದ ಕೆಲವು ದಾಖಲೆಗಳು ಶೃತಪಡಿಸುವುದನ್ನು ಇಲ್ಲಿ ಪರಿಶೀಲಿಸುವುದು ಸೂಕ್ತ; ಮತ್ತು ಇದು ಹಳೆಯ ನ್ಯಾಯಪದ್ಧತಿಗೆ ಅಮೂಲ್ಯವಾದ ಪೂರಕ ಮಾಹಿತಿಯನ್ನು ಒದಗಿಸು ವುದರಿಂದ ಅವುಗಳಿಗೆ ತಮ್ಮದೇ ಆದ ಐತಿಹಾಸಿಕ ಮಹತ್ವ ಇದೆ.

ಕ್ರಿ.ಶ.೧೯೩೭ನೇ ಇಸ್ವಿ ಮಾರ್ಚಿ ೪ರಂದು ಶ್ರೀಮನ್ಮ ಮಹಾಮಂಡಲೇಶ್ವರ ಹರ್ತಿ ಸಮ್ಮೇಟ ಸರ್ಜ ಸಂಸ್ಥಾನ ಶಿರಾ ರತ್ನಗಿರಿ ರಾಜಾ ಸೀತಾರಾಮರಾಜ, ರಾಜಾ ಕೃಷ್ಣಪ್ಪ ರಾಜರವರು ಹೊರಡಿಸಿದ ಪ್ರಕಟಣೆಯಲ್ಲಿ ತಮ್ಮನ್ನು 'ಬೇಡರು' ಎಂಬ ಅಗೌರವಯುತವಾದ ನಿಕೃಷ್ಟ ಹೆಸರಿನಿಂದ ಕರೆದುಕೊಳ್ಳಕೂಡದು. 'ವಾಲ್ಮೀಕಿ'ಗಳೆಂದು ಹೇಳಿಕೊಳ್ಳಬೇಕೆಂದು ಒತ್ತಿ ಹೇಳುತ್ತಾ ತಿಳಿಸುವ ಇತರೆ ಮುಖ್ಯಾಂಶಗಳನ್ನು ಹೀಗೆ ಸಂಗ್ರಹಿಸಬಹುದು:

೧. ಪಾದರಕ್ಷೆ ಪ್ರಯೋಗಮಾಡಿದ್ದು ರುಜುವಾತಾದರೆ ಅಂಥವರಿಗೆ ೫ ರೂ.ಗಳು ದಂಡ ವಿಧಿಸಬೇಕೆಂದೂ, ಪಾದರಕ್ಷೆಯನ್ನು ಎತ್ತಿದವರಿಗೆ ೧೦.ರೂ ದಂಡ ವಿಧಿಸತಕ್ಕದ್ದೆಂದೂ ಮತ್ತು ಮತಪದ್ಧತಿಯ ಪ್ರಕಾರ ಪ್ರಾಯಶ್ಚಿತವಾಗತಕ್ಕದ್ದು.
೨. ಈ ಮತದಲ್ಲಿ ಬಸವಿಯರನ್ನು ಬಿಡಕೂಡದೆಂದು ಹಿಂದೆಯೇ ಸಂಸ್ಥಾನದ ಆಜ್ಞೆಯಾಗಿರು ತ್ತದೆ. ಇದಕ್ಕೆ ಮೀರಿ ಬಸವಿಯನ್ನು ಬಿಟ್ಟಿರುವುದಾಗಿ ತಿಳಿದುಬಂದರೆ ಬಳಕೆ, ಭೋಜನ ವಗೈರೆಗಳಿಗೆ ಕಟ್ಟುಮಾಡಿಕೊಂಡು ಮುಂದೆ ಸಂಸ್ಥಾನದಿಂದ ಅಪ್ಪಣೆ ಆದಂತೆ ನಡೆಯಬೇಕು.
೩. ಹಿಂದೆ ಇದ್ದ ಈ ಮತದ ಬಸವಿಯರನ್ನು ಯಾರೂ ರಖಾವು ಮಾಡಿಕೊಳ್ಳಬಾರದು. ರಖಾವು ಮಾಡಿಕೊಂಡಲ್ಲಿ ಬಳಕೆ ಭೋಜನಗಳನ್ನು ಮಾಡಕೂಡದು.
೪. ಗಂಡ ಸತ್ತವಳು ಹೆತ್ತರೆ ಸಂಸ್ಥಾನದ ತೀರ್ಮಾನದಂತೆ ನಡೆಯಬೇಕು.
೫. ಕನ್ಯೆಯರು ವಿವಾಹಕ್ಕಿಂತ ಮುಂಚೆಯೇ ಗರ್ಭಿಣಿಯಾದರೆ ಅಂಥವರನ್ನು ಮತದಲ್ಲಿ ಸೇರಿಸಕೂಡದು.
೬. ಪತಿಯುಳ್ಳ ಸ್ತ್ರೀಯು ಬೇರೆ ಮತದವರನ್ನಾಗಲಿ, ತನ್ನ ಮತದವರನ್ನಾಗಲಿ ರಖಾವು ಮಾಡಿ ಸಂಸಾರ ಮಾಡತಕ್ಕವರನ್ನು ಮತದಿಂದ ಹೊರಗೆ ಹಾಕಬೇಕು. ಮತ್ತು ಗಂಡನಿಗೂ ಇದೇ ಅನ್ವಯಿಸತಕ್ಕದ್ದು.
೭. ಚಿಕ್ಕ ವಯಸ್ಸಿನಲ್ಲಿ ಗಂಡಸತ್ತವಳು ವ್ಯಭಿಚಾರ ನಡೆಸುವುದಕ್ಕೆ ಬದಲಾಗಿ ತನ್ನ ಮತದವರಲ್ಲಿಯೂ ಮತ್ತು ತನ್ನ ಮತದವರನ್ನು ಅನುಸರಿಸಿ ಕೂಡಿಕೆ ಉಭಯತ್ರ ರಾಜಿ ಮಾಡಿಕೊಳ್ಳಬಹುದು. ಮತ್ತು ಮಕ್ಕಳು ಹೆತ್ತವರಿಗೆ ಕೂಡಿಕೆ ಬರಲಾಗದು. ಈ ಅಪರಾಧಕ್ಕೆ ಅರಮನೆಗೆ ೧೦ ರೂ.ಗಳು, ಕುಲಕ್ಕೆ ಊಟ, ತಾಂಬೂಲ ಕೊಡಬೇಕು.
೮. ಅನ್ಯಮತದವರನ್ನು ನಮ್ಮ ಕುಲದಲ್ಲಿಯೇ ಸೇರಿಸಿಕೊಳ್ಳಬಾರದು.

ಹಾಗೂ ಇದೇ ಸಂಸ್ಥಾನಕ್ಕೆ ಸೇರಿದ ರಾಜಗೋಪಾಲಸ್ವಾಮಿರಾಜ ಅವರ ೨೯-೮-೧೯೫೨ರಲ್ಲಿ ನಾಯಕವಾಡಿಯ ಮೇಲೆ ಈ ಕೆಳಕಂಡ ನಿಷೇಧಗಳನ್ನು ಹೇರುವ ಮಹಜರು ಪತ್ರ ಸ್ವಾರಸ್ಯಕರ ಮಾಹಿತಿಯನ್ನು ನೀಡುತ್ತದೆ:

"…..ಇನ್ನು ಅನೇಕರು ಮತ ಮರ್‍ಯೆದೆಯನ್ನು ದಿಕ್ಕರಿಸಿ ಮತವಿಚಾರಕ್ಕೆ ಅಪಮಾನಗೊಳಿಸುವ ಲೈಟುಹಿಡಿಯುವುದು ಮತ್ತು ಸತ್ತವರ ಗುಂಡಿಗಳನ್ನು ತೆಗೆಯುವುದು ಮತ್ತು ಊಟಮಾಡಿದವರ ಎಲೆಗಳನ್ನು ತೆಗೆಯುವುದು ಮತ್ತು ಪಂಜುಹಿಡಿಯುವುದು ಈರೀತಿ ಹೀನ ಕೆಲಸಗಳನ್ನು ಮಾಡುತ್ತಿರುವುದರಿಂದ ಪವಿತ್ರವಾದ ನಾಯಕಮತಕ್ಕೆ ಕೆಟ್ಟ ಹೆಸರು ಬರುತ್ತೆ…" ಎಂದು ಈ ಕೃತ್ಯಗಳನ್ನು ನಿಷೇಧಿಸುತ್ತಾ, ಉಲ್ಲಂಘಿಸಿದವರಿಗೆ ೫೦ ರೂಪಾಯಿ ದಂಡ ವಿಧಿಸುವುದಾಗಿ ಬೆಂಗಳೂರು ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ದೊಡ್ಡಹೆಜ್ಜಾಜಿ ಗ್ರಾಮದಲ್ಲಿ ಪ್ರಚುರಪಡಿಸಿದ ಗ್ರಾಮ ಮಹಜರುಪತ್ರ ಹೇಳುತ್ತವೆ.[೨]

ಈ ಎರಡು ಪ್ರಕಟಣೆಗಳು ಜನಾಂಗದ ಸಾಮಾಜಿಕ-ಆರ್ಥಿಕ ದುಸ್ಥಿತಿಯನ್ನು ಸಮರ್ಥವಾಗಿ ಬಿಂಬಿಸುತ್ತವೆ. ಈ ಪೀಡೆಗಳನ್ನು ತೊಲಗಿಸಲು ಸಂಸ್ಥಾನ ನ್ಯಾಯಾಲಯದ ಪಾತ್ರ ವಹಿಸಿರುವುದನ್ನು ಕಾಣಬಹುದು.

(ಈ ಲೇಖನ ಸಿದ್ಧಪಡಿಸುವಲ್ಲಿ ಮಾಹಿತಿ ನೀಡಿ ಸಹಕರಿಸಿದ ನೇರ್ಲಗುಂಟೆಗ್ರಾಮದ ನಿವೃತ್ತ ಟ್ರಾಫಿಕ್ ಇನ್‌ಸ್ಪೆಕ್ಟರ್ ಬಿ.ಬೋರನಾಯ್ಕ, ನಾಯಕನಹಟ್ಟಿ ಸಮೀಪದ ದೊರೆಗಳ ಹಟ್ಟಿಯ ಶಿವಪ್ಪನಾಯಕ, ಕೆಲವು ದಾಖಲೆಗಳನ್ನು ನೀಡಿದ ನಾಯಕನಹಟ್ಟಿ ದೊರೆ ಟಿ.ಬಸವರಾಜು ಅವರುಗಳನ್ನು ಕೃತಜ್ಞತೆಯಿಂದ ನೆನೆಯುತ್ತೇನೆ).

**ಟಿಪ್ಪಣಿಗಳು**

೧. ನಾಯಕನಹಟ್ಟಿಯಂತೆ ಕಟ್ಟೆಮನೆಯಾಗಿದ್ದ ಗೋನೂರಿನಲ್ಲಿ ಸತ್ಯದಕಟ್ಟೆ, ಪಾಪದಕಟ್ಟೆ ಎಂದು ಎದುರುಬದರಿನಲ್ಲಿ ಎರಡು ಕಟ್ಟೆಗಳಿದ್ದವು. ಈ ಕಟ್ಟೆಗಳ ಬಳಿಯೇ ನ್ಯಾಯತೀರ್ಮಾನಗಳು ಆಗುತ್ತಿದ್ದವು. ಪಾಪ ಮಾಡಿದವರನ್ನು ಪಾಪದಕಟ್ಟೆಯ ಬಳಿ ಕೂಡಿಸಿ ದಂಡಹಾಕುತ್ತಿದ್ದರಂತೆ. 'ಪ್ರಮಾಣ' ಮಾಡಿ ತನ್ನ ಸತ್ಯಸಂಧತೆಯನ್ನು ಸಾಬೀತು ಮಾಡುವವನು ಸತ್ಯದಕಟ್ಟೆಯ ಬಳಿ ಬರುತ್ತಿದ್ದನು. ಇಂದು ಸತ್ಯದಕಟ್ಟೆ ಮಾತ್ರ ಉಳಿದಿದೆ, ಪಾಪದಕಟ್ಟೆ ಹಾಳಾಗಿದೆ. ಆದರೆ ಈ ಕಟ್ಟೆಮನೆ ಇಂದು ಕ್ರಿಯಾಶೀಲವಾಗಿ ಉಳಿದಿಲ್ಲ.

೨. ಮಹಜರುಪತ್ರಕ್ಕೆ ಸಹಿಹಾಕಲು ಬರದವರು ತಮ್ಮ ಎಡಗೈ ಹೆಬ್ಬೆಟ್ಟನ್ನು ಸಹ ಬಳಸಿರುವುದಿಲ್ಲ! ಅವರು ಲೇಖನಿ ಕೈಯಲ್ಲಿ ಮುಟ್ಟಿದ್ದಕ್ಕೆ ಆ ಪತ್ರಬರೆದವನೇ - ಹೀಗೆ ಒಂದು ಗೆರೆ ಎಳೆದು ಅವನ ಹೆಸರಿಗೆ ರುಜು ಎಂದು ಬರೆದಿರುತ್ತಾನೆ. ಮತ್ತೊಬ್ಬ ಲೇಖನಿ ಮುಟ್ಟಿದ್ದಕ್ಕೆ '೨-' ಎಂದು ಬರೆಯುತ್ತಾನೆ. ಹೀಗೆ ಲೇಖನಿ ಮುಟ್ಟುವವರ ಸಂಖ್ಯೆಗೆ ಅನುಗುಣವಾಗಿ ಗೆರೆಗಳ ಸಂಖ್ಯೆ ಬೆಳೆಯುತ್ತಾ ಹೋಗುತ್ತದೆ. ಕೆಲವು ಬರಹಗಾರರು 'ಗೆರೆ'ಗೆ ಬದಲು 'ಗೀಟು' ಶಬ್ದವನ್ನು ಬಳಸಿದ್ದಾರೆ.

ಬಹುಶಃ ಹೆಬ್ಬೆಟ್ಟಿನ ಸಹಿ ಜಾರಿಗೆ ಬರುವುದಕ್ಕೂ ಮೊದಲು ಲೇಖನಿ ಮುಟ್ಟಿದ್ದಕ್ಕೆ ಗೆರೆಎಳೆಯುವ ಪದ್ಧತಿಯೇ ಇದ್ದಂತೆ ಕಂಡುಬರುತ್ತದೆ. ಹೆಬ್ಬೆಟ್ಟನ್ನು ಸಹಿಯಾಗಿ ಯಾವಾಗಿನಿಂದ ಮಾನ್ಯ ಮಾಡಲಾಯಿತು ಎಂಬುದು ತಿಳಿದುಬರುತ್ತಿಲ್ಲ. ಆದರೆ ಲೇಖನಿ ಮುಟ್ಟಿದ್ದಕ್ಕೆ ಗೆರೆಎಳೆಯುವ ಪದ್ಧತಿ ೭೦-೮೦ ವರ್ಷದ ಹಿಂದಿನ ದಾಖಲೆಗಳಲ್ಲಿ ನೋಡಬಹುದು. ಅಥವಾ ಇದೊಂದು ಬುಡಕಟ್ಟು ಪದ್ಧತಿಯೇ? ಈ ಬಗೆಗೆ ಕೂಲಂಕಷ ಅಧ್ಯಯನ ನಡೆಯಬೇಕಾಗಿದೆ.

೮

# ತರೀಕೆರೆ ನಾಯಕರ ನ್ಯಾಯಾಡಳಿತ

ಸಂತೇಬೆನ್ನೂರು ಸುಮತೀಂದ್ರ ನಾಡಿಗ್

ವಿಜಯನಗರ ಅರಸೊತ್ತಿಗೆಯ ಕೊನೆಗೆ ಅವರ ಅನೇಕ ಸಾಮಂತ ನಾಯಕರು ತಮ್ಮದೇ ಪಾಳೆಯಪಟ್ಟುಗಳನ್ನು ಸ್ಥಾಪಿಸಿ ಸ್ವತಂತ್ರ ಆಡಳಿತ ನಡೆಸಿದರೆಂಬುದು ಸರ್ವವಿದಿತ. ತರೀಕೆರೆ ಸಂಸ್ಥಾನ ಅಂತಹ ನಾಯಕ ರಾಜವಂಶಗಳಲ್ಲೊಂದು. ಈ ನಾಯಕರು ಆರಂಭದಲ್ಲಿ ಈಗಿನ ದಾವಣಗೆರೆ ಜಿಲ್ಲೆ, ಚನ್ನಗಿರಿ ತಾಲ್ಲೂಕಿನ ಬಸವಾಪಟ್ಟಣ; ಆ ನಂತರ ಅದೇ ತಾಲ್ಲೂಕಿನ ಸಂತೇಬೆನ್ನೂರು ಹಾಗೂ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆಗಳನ್ನು ರಾಜಧಾನಿಯಾಗಿ ಮಾಡಿಕೊಂಡು ಸುಮಾರು ಒಂದೂವರೆ ಶತಮಾನಕ್ಕೂ ಅಧಿಕ ಕಾಲ ಆಡಳಿತ ನಡೆಸಿದರು. ಈಗಿನ ದಾವಣಗೆರೆ, ಚಿತ್ರದುರ್ಗ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ತುಮಕೂರು ಮತ್ತು ಹಾವೇರಿಜಿಲ್ಲೆಗಳ ವ್ಯಾಪ್ತಿಯಲ್ಲಿ ಈ ವಂಶದ ಸುಮಾರು ೨೫ ಜನ ನಾಯಕರು ರಾಜ್ಯಭಾರ ನಡೆಸಿದರೆಂದು ಅವರು ಬರೆಯಿಸಿದ ಸುಮಾರು ೫೦ಕ್ಕೂ ಹೆಚ್ಚು ಶಾಸನಗಳಿಂದ, ಅವರ ವಂಶದ ಕೈಫಿಯತ್ತುಗಳಿಂದ ಹಾಗೂ ಅವರು ಕಟ್ಟಿಸಿದ ಕೆರೆ-ಕೊಳ-ದೇವಾಲಯ ಮುಂತಾದವುಗಳಿಂದ ತಿಳಿದುಬರುತ್ತದೆ.

ಬಿಜಾಪುರ ಆದಿಲ್‌ಷಾಹಿಯ ದಂಡನಾಯಕ ರಣದುಲ್ಲಾಖಾನ್ ಈ ನಾಯಕರನ್ನು ಸೋಲಿಸಿ, ತನ್ನ ಅಧೀನ ಮಾಡಿಕೊಂಡ ನಂತರ, ಈ ನಾಯಕರು ತಮ್ಮ ಅರಸೊತ್ತಿಗೆಯನ್ನು ಸಂತೇಬೆನ್ನೂರಿಂದ ತರೀಕೆರೆಗೆ ವರ್ಗಾಯಿಸಿಕೊಂಡರು. ಅವರು ತರೀಕೆರೆಯಲ್ಲಿ ರಾಜ್ಯಾವಾಳುತ್ತಿದ್ದಾಗ ಮತ್ತು ಅದಕ್ಕೂ ಮುನ್ನ ಬರೆಯಿಸಿದ ಎಲ್ಲಾ ಶಾಸನಗಳಲ್ಲೂ ಅವರು ತಮ್ಮನ್ನು ಸಂತೇಬೆನ್ನೂರು ಶ್ರೀ ರಾಮಚಂದ್ರಸ್ವಾಮಿಯ ಪಾದಪದ್ಮಾರಾಧಕರಾದ ಹನುಮಂತದೇವರ ನಿಜಭಕ್ತರಾದ ಪೂವ್ವಲಾನ್ವಯದ ನಾಯಕರೆಂದೇ ಕರೆದುಕೊಂಡಿದ್ದಾರೆ. ಈ ಕಾರಣಕ್ಕಾಗಿ ಅವರನ್ನು ಸಂತೇಬೆನ್ನೂರು ನಾಯಕರೆಂದೇ ಗುರುತಿಸಲಾಗಿದೆ. ಈ ವಂಶದವರು ತಮ್ಮ ಕಟ್ಟಕಡೆಯ ದಿನಗಳಲ್ಲಿ ತರೀಕೆರೆಯಲ್ಲಿ ಪಾಳೆಯಪಟ್ಟನ್ನು ಸ್ಥಾಪಿಸಿ ನೆಲೆನಿಂತಿದ್ದರಿಂದ ಈಚಿನ ದಿನಗಳಲ್ಲಿ ಇವರನ್ನು ತರೀಕೆರೆ ನಾಯಕರೆಂದೇ ಕರೆಯಲಾಗುತ್ತಿದೆ.

ಈ ನಾಯಕರು ತಮ್ಮನ್ನು ಪಾಳೆಯಗಾರರೆಂದು ತಾವು ಆಡಳಿತ ನಡೆಸುವ ಯಾವ ಸಂದರ್ಭದಲ್ಲೂ ಕರೆದುಕೊಂಡಿರುವುದಿಲ್ಲ. ಟಿಪ್ಪುಸುಲ್ತಾನನ ಆಡಳಿತ ಕಾಲದಲ್ಲಿ ಇಂತಹ ಚಿಕ್ಕಪುಟ್ಟ ನಾಯಕರು ತಮ್ಮ ಅಸ್ತಿತ್ವವನ್ನೇ ಕಳೆದುಕೊಂಡರು. ಆ ನಂತರ ಈ ಪ್ರಾಂತ್ಯದ ಆಡಳಿತವನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡ ಬ್ರಿಟಿಷರು ಇಂತಹ ನಾಯಕರಿಗೆ, ಅರಸರಿಗೆ ಪಾಳೆಯಗಾರರೆಂದು ಕರೆದು, ಇವರಿಗೆ ಮಾಸಾಶನ ನಿಗದಿಪಡಿಸಿ, ವಿಶ್ರಾಂತಿವೇತನ ನೀಡಿ ರಾಜ್ಯಾಡಳಿತವನ್ನು ಸಂಪೂರ್ಣ ತಮ್ಮ ಕೈವಶ ಮಾಡಿಕೊಂಡರು. ಅಲ್ಲಿಂದ ಈಚೆಗೆ ಇವರನ್ನು ಪಾಳೆಯಗಾರರೆಂದೇ ಕರೆಯಲಾಗುತ್ತಿದ್ದು, ತರೀಕೆರೆ ನಾಯಕರೂ ತಮ್ಮನ್ನು ತರೀಕೆರೆ ಪಾಳೆಯಗಾರರೆಂದೇ ಗುರುತಿಸಿಕೊಂಡು ಬಂದಿದ್ದಾರೆ.

ಈ ನಾಯಕರ ಇತಿಹಾಸವನ್ನು ಸಮಗ್ರವಾಗಿ ಅಭ್ಯಸಿಸಿದವರಿಗೆ ಇವರ ಕಾಲದ ನ್ಯಾಯಾಡಳಿತ ಬಹಳ ಉತ್ತಮವಾಗಿತ್ತೆಂದು ತಿಳಿದುಬರುತ್ತದೆ. ವಿಜಯನಗರ ಅರಸರ ಅಧೀನರಾಗಿದ್ದ ಈ ನಾಯಕರು ಹೆಚ್ಚು ಕಡಿಮೆ ವಿಜಯನಗರ ಅರಸರು ಹಾಕಿಕೊಟ್ಟ ನ್ಯಾಯನಿರ್ಣಯ ಪರಂಪರೆಯನ್ನೇ ತಮ್ಮ ಆಡಳಿತ ವ್ಯವಸ್ಥೆಯಲ್ಲಿ ಮುಂದುವರೆಸಿಕೊಂಡು ಬಂದಿರುವುದನ್ನು ಕಾಣಬಹುದು.

ಈ ನಾಯಕರು ಮೊದಲಿನಿಂದಲೂ ಯೋಧರಾಗಿದ್ದು, ವಿಜಯನಗರ ಕಾಲದಲ್ಲಿ ಇವರದು ಉತ್ತಮ ಬೇಡಪಡೆ ಎನಿಸಿದ್ದಿತು. ಇವರು ತಮ್ಮ ಆಡಳಿತಪದ್ಧತಿಯಲ್ಲಿ ಸೈನಿಕ ಶಿಸ್ತನ್ನು ಪಾಲಿಸಿಕೊಂಡು ಬಂದಿದ್ದರೆನ್ನಲಡ್ಡಿಯಿಲ್ಲ. ಬಾರಾಬಲೂತಿ ಪದ್ಧತಿಯಂತೆ ಆಡಳಿತ ನಡೆಸಿದ ಈ ನಾಯಕರು, ತಮ್ಮ ಆಡಳಿತ ನಿಯಂತ್ರಣಕ್ಕೋಸ್ಕರ ಉತ್ತಮ ಮಂತ್ರಿಮಂಡಳವನ್ನು ಹೊಂದಿದ್ದರು. ಹಾಗೂ ಮಂತ್ರಿಮಂಡಳದ ಸಲಹೆ, ಸೂಚನೆಯಂತೆ ಆಡಳಿತ ನಡೆಸುತ್ತಿದ್ದರು. ತಪ್ಪುಮಾಡಿದವರಿಗೆ, ರಾಜಾಜ್ಞೆ ಮೀರಿದವರಿಗೆ ಉಗ್ರಶಿಕ್ಷೆಯನ್ನು ಕೊಡುತ್ತಿದ್ದರು. ಕೊಲೆ, ಸುಲಿಗೆ, ದರೋಡೆ, ಅತ್ಯಾಚಾರಿಗಳಿಗೆ ದಂಡಹಾಕುವುದು, ಕೈಕಾಲು ಕತ್ತರಿಸುವುದು, ಗಲ್ಲಿಗೆ ಹಾಕಿಸುವುದು, ಚಾಟೀಏಟು ಇತ್ಯಾದಿ ಶಿಕ್ಷೆಗಳು ಜಾರಿಯಲ್ಲಿದ್ದುದರಿಂದ ಜನರು ಹೆದರಿಕೆ, ಭಯ, ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಪ್ರಜೆಗಳೂ ನಾಯಕರಿಗೆ ನಿಷ್ಠರಾಗಿ ನಡೆದುಕೊಳ್ಳುತ್ತಿದ್ದುದರಿಂದ ಅನೇಕ ಧರ್ಮಕಾರ್ಯ ಗಳನ್ನು ನಡೆಸಲು ಇವರಿಗೆ ಸಾಧ್ಯವಾಯಿತು. ಜನೋಪಕಾರಕ್ಕಾಗಿ ಅನೇಕ ಕೆರೆ, ಕೊಳ ಗಳನ್ನು ನಿರ್ಮಿಸಿದರು. ವಿವಿಧ ದೇವಾಲಯಗಳು ನಿರ್ಮಾಣಗೊಂಡವು. ಮಠ, ಮಂದಿರ ಗಳಿಗೆ ಸಾಕಷ್ಟು ಭೂದಾನ ಮಾಡಿದ ಕೀರ್ತಿ ಈ ನಾಯಕರದು. ಶ್ರೀರಾಮನ ಭಕ್ತರಾಗಿದ್ದ ಈ ನಾಯಕರು, ವಿಷ್ಣು ದೇಗುಲಗಳಲ್ಲದೆ ಶೈವದೇವಾಲಯಗಳ ನಿರ್ಮಾಣಕ್ಕೂ ಕಾರಣರಾದರು. ಅವುಗಳಿಗೂ ದತ್ತಿದಾನ ನೀಡಿ, ಎಲ್ಲ ಧರ್ಮಗಳ ಮಧ್ಯೆ ಮತ ಸಹಿಷ್ಣುತೆಗಳನ್ನು ಕಾಪಾಡಿಕೊಂಡು ಬಂದಿದ್ದಾರೆ.

ತರೀಕೆರೆ ನಾಯಕರು ಅನೇಕ ವೀರಶೈವಮಠಗಳಿಗೂ, ಬ್ರಾಹ್ಮಣಮಠಗಳಿಗೂ ದತ್ತಿ ದಾನ ನೀಡಿ, ಆ ಗುರುಪರಂಪರೆಯನ್ನು ಪೂಜ್ಯಭಾವನೆಗಳಿಂದ ನಡೆಸಿಕೊಳ್ಳುತ್ತಿದ್ದುದು

ತಿಳಿದುಬರುತ್ತದೆ. ಈ ನಾಯಕವಂಶದ ಸಲಹೆಯಂತೆ ಕೂಡ್ಲಿ-ಶೃಂಗೇರಿಮಠ ಅಸ್ತಿತ್ವಕ್ಕೆ ಬಂದುದೊಂದು ಪ್ರಮುಖ ಚಾರಿತ್ರಿಕ ಘಟನೆ. ಈ ರೀತಿ ಹೊಸಪೀಠದ ಪ್ರಾರಂಭಕ್ಕೆ ಪ್ರೇರಕರಾದ ಈ ನಾಯಕರು ಶೃಂಗೇರಿ ಮತ್ತು ಕೂಡ್ಲಿ-ಶೃಂಗೇರಿಪೀಠಗಳ ಮಧ್ಯೆ ಬರಬಹುದಾಗಿದ್ದ ಒಳಜಗಳ, ಪೈಪೋಟಿಯನ್ನು ತಂತ್ರದಿಂದ ಸಾಧಿಸಿ, ತಮ್ಮ ಆಡಳಿತದಲ್ಲಿ ಕೋಮುಸೌಹಾರ್ದತೆ ಕಾಪಾಡಿಕೊಂಡು ಬಂದಿದ್ದಾರೆ. ಶಿವಮೊಗ್ಗೆಯ ತಿರುಮಲದೀಕ್ಷಿತ ಎಂಬುವನಿಗೆ ಕೊಟ್ಟಿದ್ದ ಹರಕೇರಿ ಹೋಬಳಿ ಪಂಚಗ್ರಾಮ ದತ್ತಿಯನ್ನು ಆತನು ತನ್ನ ಗುರುಗಳ ವಿರುದ್ಧ ಸಮಕಕ್ಷಿಯಾಗಿ ನಡೆದುಕೊಂಡ ಪ್ರಯುಕ್ತ ದತ್ತಿ ದಾನ ವಾಪಸ್ಸು ಬಿಡಿಸಿ, ಮರಳಿ ಕೂಡ್ಲಿ-ಶೃಂಗೇರಿಮಠಕ್ಕೆ ವಾಪಸ್ಸು ಕೊಡಿಸಿರುವುದಾಗಿ ತಿಳಿದುಬರುತ್ತದೆ. ಅದೇರೀತಿ ದೇಮಪುರ ಅಗ್ರಹಾರ ದಾನವನ್ನು ತಮ್ಮಾಭಟ್ಟ ಎಂಬುವರು ತಮ್ಮಧೀನದಲ್ಲಿ ಸಮರ್ಪಕವಾಗಿ ನಡೆಸಿಕೊಂಡಿಲ್ಲವೆಂಬ ದೂರಿಗೆ, ಅದನ್ನು ಅವರಿಂದ ಪಡೆದು ಕೂಡ್ಲಿ ಶಂಕರಭಾರತೀಸ್ವಾಮಿಗಳಿಗೆ ಕೊಟ್ಟಿದ್ದಾಗಿ ತಿಳಿದುಬರುತ್ತದೆ. ಹೀಗೆ ಮಠಗಳ ವಿರುದ್ಧ ಶಿಷ್ಯರು ಸರಿದಾರಿಗೆ ಬರದಿದ್ದರೆ ತಕ್ಕ ಕ್ರಮ ಕೈಗೊಂಡಿದ್ದು ತರೀಕೆರೆ ನಾಯಕರ ಆಡಳಿತ ನೈಪುಣ್ಯತೆಯನ್ನು ತೋರಿಸುತ್ತದೆ.

## ಆಧಾರಗ್ರಂಥಗಳು


೧. ಎಪಿಗ್ರಾಫಿಯಾ ಕರ್ನಾಟಿಕಾ, ಬಿ.ಎಲ್.ರೈಸ್, ಸಂ.೬,೭,೧೦,೧೨

೨. ಮೈಸೂರು ಪುರಾತತ್ವ ಇಲಾಖೆ ವಾರ್ಷಿಕ ವರದಿಗಳು, ೧೯೧೮-೧೯೫೬

೩. ಶ್ರೀಮಜ್ಜಗದ್ಗುರು ಶ್ರೀ ಕೂಡ್ಲಿ-ಶೃಂಗೇರಿ ಸಂಸ್ಥಾನದ ಪ್ರಾಚೀನ ಶಾಸನಲೇಖನ ಸಂಗ್ರಹ ೧

೪. ಕರ್ನಾಟಕದ ಕೈಫಿಯತ್ತುಗಳು

೫. ಮಲೆಕರ್ನಾಟಕದ ಅರಸುಮನೆತನಗಳು

೬. ಕರ್ನಾಟಕದ ಗೆಜೆಟಿಯರುಗಳು

೭. ಇತಿಹಾಸ ದರ್ಶನ ಸಂಪುಟಗಳು

೯

# ಮತ್ತೋಡು ಪಾಳೆಯಗಾರರ ನ್ಯಾಯಾಡಳಿತ

**ಬಾಗೂರು ಆರ್. ನಾಗರಾಜಪ್ಪ**

ಇತಿಹಾಸಕಾಲದಲ್ಲಿ ಚಿತ್ರದುರ್ಗ ಜಿಲ್ಲಾ ಪ್ರದೇಶವನ್ನು ಆಳಿದ ಅನೇಕ ಪಾಳೆಯಪಟ್ಟುಗಳಲ್ಲಿ ಮತ್ತೋಡು ಪಾಳೆಯಪಟ್ಟಿನ ಇತಿಹಾಸ ವೈವಿಧ್ಯತೆಯಿಂದಲೂ ರೋಚಕತೆಯಿಂದಲೂ ಕೂಡಿದೆ. ಈ ಪಾಳೆಯಪಟ್ಟಿನ ಕಾಲಾವಧಿ ಕ್ರಿ.ಶ.೧೬೦೪ ರಿಂದ ೧೭೭೬ರ ವರೆಗೆ ಒಟ್ಟು ೧೭೨ ವರ್ಷಗಳು. ಈ ಪಾಳೆಯಗಾರರು ಶೂರರು, ನ್ಯಾಯನಿಷ್ಠರು, ಧರ್ಮಸಹಿಷ್ಣುಗಳು, ದಯೆಯುಳ್ಳವರು, ವಿದ್ಯಾಸಕ್ತರು ಹಾಗೂ ದೈವಭಕ್ತರಾಗಿದ್ದರು. ಇವುಗಳಿಗೆ ಸಾಕ್ಷಿಯಾಗಿರುವುವೆಂದರೆ ಅನೇಕ ಶಿಲೆ ಮತ್ತು ತಾಮ್ರಶಾಸನಗಳು, ಕೋಟೆ-ಕಂದಕ- ಗುಡಿ- ಗೋಪುರಗಳು, ಮಠ-ಮಹಾದ್ವಾರಗಳು, ಮಾಸ್ತಿಕಲ್ಲು-ವೀರಗಲ್ಲುಗಳು ಇತ್ಯಾದಿ. ಅಂದಿನ ಮತ್ತೋಡು ಮತ್ತು ಇಲ್ಲಿಯ ಪಾಳೆಯಗಾರರ ಬಗೆಗೆ ಪ್ರಚಲಿತದಲ್ಲಿರುವ ಜನಪದ ತ್ರಿಪದಿಗಳು, ಐತಿಹ್ಯಗಳು ಕುತೂಹಲ ಕೆರಳಿಸುತ್ತವೆ.

ರತ್ನಗೋಪುರಗಳಿಂದ ಕಂಗೊಳಿಸುತ್ತಿದ್ದಿತೆನ್ನಲಾದ ಮತ್ತೋಡಿನ ಅರಮನೆಯು ಈಗ ನಿಶ್ಶೇಷವಾಗಿದ್ದು, ದಶಕಗಳ ಹಿಂದೆ ಇದ್ದ ಮುರುಘಾಮಠದ ಅವಶೇಷಗಳೂ ದುರ್ಗದ ಮೂಲಮಠಕ್ಕೆ ಸ್ಥಳಾಂತರಗೊಂಡಿವೆ.

ಕ್ರಿ.ಶ.೧೭೧೧ರಲ್ಲಿ ದೊಡ್ಡ ಹಾಲಪ್ಪನಾಯಕನು ಮತ್ತೋಡನ್ನು ಮಹಾನಗರವನ್ನಾಗಿ ಮಾರ್ಪಡಿಸಿದ ಸಂಗತಿ ಐತಿಹಾಸಿಕ ದಾಖಲೆಗಳಿಂದ ತಿಳಿದುಬರುತ್ತದೆ. ಮತ್ತೋಡು ಪಾಳೆಯಗಾರರ ಇತಿಹಾಸದಲ್ಲಿ ಈ ನಾಯಕನ ಅವಧಿ 'ಸುವರ್ಣಕಾಲ' ಎನ್ನಬಹುದು. ರಾಜಬೀದಿಗಳು, ಅರಮನೆ, ಕೋಟೆ-ಕೊತ್ತಲ, ದೇವಾಲಯಗಳು ಮುಂತಾದವು ಈತನ ಕಾಲದಲ್ಲಿ ನಿರ್ಮಾಣವಾದವು. ಆಗಿನ ರಾಜವೈಭವ ಮತ್ತು ಈ ನಾಯಕನ ಧಾರ್ಮಿಕಾಸಕ್ತಿಗಳು ಜನಪದ ತ್ರಿಪದಿಗಳಲ್ಲಿ ವರ್ಣಿತವಾಗಿವೆ. ನ್ಯಾಯಾಡಳಿತಕ್ಕೆ ಸಂಬಂಧಪಟ್ಟ ಇಂತಹ ತ್ರಿಪದಿಗಳು ಹಾಗೂ ಐತಿಹ್ಯಗಳ ಸಂಗ್ರಹ ಮತ್ತು ಅಧ್ಯಯನ ಇನ್ನೂ ನಡೆಯಬೇಕಾಗಿದೆ.

ಮೇಲ್ಕಂಡ ಅವಧಿಯಲ್ಲಿ ಮತ್ತೋಡು ಮಹಾನಗರದಲ್ಲಿ ೨೦೦೦ದಷ್ಟು ಜನವಸತಿಗಳಿದ್ದವೆಂದು ಬುಕಾನನ್ ದಾಖಲಿಸಿದ್ದಾನೆ. ಇಲ್ಲಿನ ಅರಮನೆಯ ಉಪ್ಪರಿಗೆಗಳು

ಹೊಂಗಲಶಗಳಂತೆ ಹೊಳೆಯುತ್ತಿದ್ದು, ಅರಮನೆಯ ಗೋಡೆಗಳು ಚಿತ್ರಮಯವಾಗಿದ್ದವು. ನಗರಕ್ಕೆ ನಾಲ್ಕು ಮಹಾದ್ವಾರಗಳಿದ್ದು, ನಗರದಲ್ಲಿ ನಾಲ್ಕು ಬಜಾರಗಳು, ಉಗ್ರಾಣ, ಭಾಂಡಾಗಾರ, ಗಜಶಾಲೆ, ಆಶ್ವಶಾಲೆ, ಗರಡಿಮನೆ, ಸದರ ಚಾವಡಿ, ಸಚಿವಗೃಹಗಳು, ಬಾವಿಗಳು, ನಗರದ ಒಳಗೆ ಹೊರಗೆ ಅನೇಕ ಸಂಖ್ಯೆಯ ತಟಾಕಗಳು, ಈ ಪ್ರದೇಶದ ಸುತ್ತಾ ಏಳು ಹುಲ್ಲುಗಾವಲುಗಳು, ಅಸಂಖ್ಯಾತ ಕಾವಲುಬತೇರಿಗಳು ಇದ್ದವು. ಸಮೀಪ ದಲ್ಲಿ ವಿದ್ಯಾಕೇಂದ್ರವಾದ ಗಂಜಿಗೆರೆ ಅಗ್ರಹಾರವಿದ್ದಿತು. ಮತ್ತೋಡಿನಲ್ಲಿ ವಿವಿಧ ಬಣ್ಣಗಳ ಬಳೆಗಳು ತಯಾರಾಗುತ್ತಿದ್ದವು. ಮುತ್ತುರತ್ನದ ಅಂಗಡಿಗಳಿದ್ದವು. ಇಲ್ಲಿ ಅಸಂಖ್ಯಾತ ವ್ಯಾಪಾರಿಗಳು, ಬುದ್ಧಿವಂತರು (ಸುಶಿಕ್ಷಿತರು), ಪರಾಕ್ರಮಿಗಳು, ನ್ಯಾಯನಿಪುಣರು ಇದ್ದರೆನ್ನಲಾಗಿದೆ.

ಈ ಪಾಳೆಯಪಟ್ಟನ್ನು ಆಳಿದವರು ಚಿನ್ನದ ಗಿರಿಯಪ್ಪನಾಯಕ, ಹಾಲಪ್ಪನಾಯಕ, ದೊಡ್ಡಳನಾಯಕ, ಸಂಗಪ್ಪನಾಯಕ, ದೊಡ್ಡ ಹಾಲಪ್ಪನಾಯಕ, ಸಿದ್ದಪ್ಪನಾಯಕ ಮತ್ತು ಇವನ ಅಣ್ಣ ಹಾಲಪ್ಪನಾಯಕ- ಒಟ್ಟು ಆರು ತಲೆಮಾರು. ಮೊದಲಿಗೆ ಸಮೀಪದ ಲಕ್ಕವ್ವನಹಳ್ಳಿಯ ಈ ಪಾಳೆಯಪಟ್ಟು ಸ್ಥಾಪಿಸಲ್ಪಟ್ಟು ನಂತರ ಮತ್ತೋಡಿಗೆ ಸ್ಥಳಾಂತರಗೊಂಡಿತು. ಈ ಸಂಬಂಧದಲ್ಲಿ ಇಂದಿಗೂ ಲಕ್ಕವ್ವನಹಳ್ಳಿಯಲ್ಲಿ ಕೋಟೆ-ಹೆಬ್ಬಾಗಿಲು-ವೀರಗಲ್ಲುಗಳು ಬುರುಜು-ಬತೇರಿಗಳಲ್ಲಿ ಕಾಣಬಹುದು.

ಮೂಲತಃ ನಾಯಕ ಜನಾಂಗದವರಾದ ಈ ಪಾಳೆಯಗಾರರು ವೀರಶೈವರಾಗಿ ಮತಾಂತರಗೊಂಡರು. ಇಂದಿಗೂ ಇವರ ವಂಶಸ್ಥರು ವೀರಶೈವರಾಗಿಯೇ ಇರುವುದನ್ನು ಕಾಣಬಹುದು.

ಈ ಪಾಳೆಯಗಾರರ ನ್ಯಾಯಾಡಳಿತದ ಬಗೆಗೆ ತಿಳಿದುಕೊಳ್ಳಲು ನಾವು ನಿರೀಕ್ಷಿಸುವಷ್ಟು ಮೂಲಪುರಾವೆಗಳು ದೊರೆಯುವುದಿಲ್ಲ. ಲಭ್ಯವಿರುವ ಕೆಲವೇ ಆಧಾರಗಳಿಂದ ಹಾಗೂ ಕ್ಷೇತ್ರಕಾರ್ಯದಲ್ಲಿ ಸಂಗ್ರಹವಾದ ಮೌಖಿಕ ಸುಳಿವುಗಳಿಂದ ಈ ಕುರಿತು ಸ್ವಲ್ಪಮಟ್ಟಿಗೆ ವಿವೇಚಿಸಬಹುದಾಗಿದೆ. ಮತ್ತೋಡು ನಾಯಕರ ಆಡಳಿತವು ನ್ಯಾಯ-ನೀತಿ ಹಾಗೂ ಧರ್ಮಸಮ್ಮತವಾಗಿದ್ದಿತೆಂದು ಕೆಲವು ಶಾಸನಗಳು ಹೇಳುತ್ತವೆ. ಮತ್ತೋಡು, ಅರೆಹಳ್ಳಿ, ವೊಟ್ರಗೊಂಡನಹಳ್ಳಿ ಮುಂತಾದೆಡೆ ಈ ಪಾಳೆಯಗಾರರಿಗೆ ಸಂಬಂಧಿಸಿದಂತೆ ಶಿಲೆ ಮತ್ತು ಲೋಹಪಟ ಶಾಸನಗಳಿವೆ. ಅಲ್ಲದೆ, ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಯಳನಾಡು-ಭಟ್ಟರಹಳ್ಳಿ ಪ್ರದೇಶದಲ್ಲಿ ಪ್ರಚಲಿತವಿರುವ ಐತಿಹ್ಯವನ್ನು ಸಹಾ ಇಲ್ಲಿ ಪರಿಶೀಲಿಸಿದೆ. ಆದರೂ ಈ ಬಗೆಗೆ ಪುಷ್ಟಿದಾಯಕ ಪುರಾವೆಯನ್ನು ಇನ್ನಷ್ಟು ಶೋಧಿಸಬೇಕಾಗಿದೆ.

ಮತ್ತೋಡು ಪಾಳೆಯಗಾರರ ಕಾಲದ ನ್ಯಾಯಾಡಳಿತವನ್ನು ಈ ಕೆಳಕಂಡಂತೆ ವಿವಿಧ ವಿಷಯಗಳ ನಿರೂಪಣೆಯಲ್ಲಿ ವಿವೇಚಿಸಬಹುದಾಗಿದೆ:

### ೧. ಧಾರ್ಮಿಕ ನ್ಯಾಯಗಳು

ಈ ಲೇಖನದ ಕರ್ತೃ ಬೆಳಕಿಗೆ ತಂದಿರುವ ಶಾ. ಶ. ೧೬೫೧ರ ತಾಮ್ರಶಾಸನವೊಂದರಲ್ಲಿ ಮತ್ತೋಡು ಪಾಳೆಯಗಾರರಲ್ಲಿ ಪ್ರಮುಖನಾದ ಹಿರಿಯ ಹಾಲಪ್ಪನಾಯಕರು ಹೊರಡಿಸಿರುವ

ಆಜ್ಞಾಶಾಸನವಿಧಿಯು ಬಹುಮುಖ್ಯ ಧಾರ್ಮಿಕ ನ್ಯಾಯತೀರ್ಮಾನದ ದಾಖಲೆಯಾಗಿದೆ.[೧] ಈ ಶಾಸನದಲ್ಲಿ ಮತ್ತೋಡು ಸಂಸ್ಥಾನವು ಮಾರೀಕಣಿವೆಯಿಂದ ಹುಳಿಯಾರಿನವರೆಗೆ ವಿಸ್ತರಿಸಿದ್ದ ಬಗೆಗೆ ಪರೋಕ್ಷ ಸುಳಿವು ಸಿಗುತ್ತದೆ. ಈ ಸಂಸ್ಥಾನದಲ್ಲಿನ ಒಕ್ಕಲಿಗಗೌಡರು, ಕುರುಬಗೌಡರು ಮುಂತಾದ ಜಾತಿಗಳ ಮುಖಂಡರುಗಳಲ್ಲಿ ವಿವಿಧ ಗ್ರಾಮದೇವತೆಗಳ ಪೂಜಾಪಟ್ಟಾಧಿಕಾರದ ಬಗೆಗೆ ಇದ್ದ ಭಿನ್ನಾಭಿಪ್ರಾಯ, ಪೈಪೋಟಿ, ಒಳಜಗಳಗಳನ್ನು ತೊಡೆದುಹಾಕಲು ಹಿರಿಯ ಹಾಲಪ್ಪನಾಯಕನು ತನ್ನ ಪತ್ನಿಯ ಸೀಮಂತಕಾರ್ಯದ ಶುಭ ಸಂದರ್ಭದ ನೆಪದಲ್ಲಿ, ಈ ಕೆಳಕಂಡಂತೆ ವಿವಿಧ ಗ್ರಾಮದೇವತೆಗಳ ಪೂಜಾಪಟ್ಟಾಧಿಕಾರ ಗಳನ್ನು ಹಂಚಿಕೆಮಾಡಿ ನ್ಯಾಯಾರ್ಥ ಶಾಸನ ಪ್ರಕಟಿಸಿರುವನು:

| | |
|---|---|
| ೧. ಶ್ರೀ ಗುರುಪೀಠ ಸಿದ್ಧರಾಮೇಶ್ವರದೇವರ ಪೂಜಾಪಟ್ಟಾಧಿಕಾರ | ಮೋಕ್ಷಮತಗೌಡರಿಗೆ |
| ೨. ವಜ್ರಕ್ಷೇತ್ರದ ಪೂ\| ಪ\| | ಮೋಕ್ಷಮತಗೌಡರಿಗೆ |
| ೩. ಕಂಚೀಪುರದ ಶ್ರೀವರದರಾಜದೇವರ ಪೂ\| ಪ\| | ಬ್ಯಾಲದಕೆರೆ ಗೌಡರಿಗೆ |
| ೪. ಕಪ್ಪಗೆರೆ ಕರಿಯಮ್ಮದೇವರ ಪೂ\| ಪ\| | ಬ್ಯಾಲದಕೆರೆ ಗೌಡರಿಗೆ |
| ೫. ಕಣಿವೆಮಾರಮ್ಮನ ಪೂ\| ಪ\| | ಹುಳಿಯಾರು ಒಕ್ಕಲುಗೌಡರಿಗೆ |
| ೬. ಬೇವಿನಹಳ್ಳಿ ಕರಿಯಮ್ಮದೇವರ ಪೂ\| ಪ\| | ಜಲಧೇರು ಒಕ್ಕಲುಗೌಡರಿಗೆ |
| ೭. ಕಾರೇಹಳ್ಳಿ ಹನುಮಂತದೇವರ ಪೂ\| ಪ\| | ಹಾಲುಮತಗೌಡರಿಗೆ |
| ೮. ಮೆಣಸಿನೋಡು ಮಲ್ಲೇದೇವರ ಪೂ\| ಪ\| | ಹಾಗಲಕೆರೆ ನಾಮಧಾರಿ ಒಕ್ಕಲು ಗೌಡರಿಗೆ |
| ೯. ಮೆಣಸಿನೋಡು ನಿರುವುಗಲ್ಲು ಪೂ\| ಪ\| | ಅವರದೇ |
| ೧೦. ಮೆಣಸಿನೋಡು ಹರಿಹರದೇವರ ಪೂ\| ಪ\| | ಅವರದೇ |
| ೧೧. ಅಂತರಘಟ್ಟೆಮ್ಮ ದೇವರ ಪೂ\| ಪ\| | ಮೋಕ್ಷಮತ ಬೆಲ್ಲಿಗೌಡರಿಗೆ |
| ೧೨. ಬಂದಮ್ಮ ಬನಶಂಕರಿದೇವರ ಪೂ\| ಪ\| | ಅವರದೇ |
| ೧೩. ಶ್ರೀ ರೇವಣಸಿದ್ದೇಶ್ವರದೇವರ ಪೂ\| ಪ\| | ಹಾಲುಮತದ ಏಳುಬುಡ ದವರಿಗೆ |
| ಹಾಗೂ ಮತ್ತೋಡಿನ ಶ್ರೀ ಸಿದ್ಧರಾಮೇಶ್ವರ ದೇವರು, ಬೇವಿನಹಳ್ಳಿ ಕರಿಯಮ್ಮದೇವರು, ಕಂಚೀಪುರದ ವರದರಾಜದೇವರು ವಜ್ರದ ರಾಮದೇವರು ಮತ್ತು ಮತ್ತೋಡಿನ ಬಾಗೀಮರದಮ್ಮದೇವರು. | ಈ ಎಲ್ಲಾ ಉತ್ಸವಮೂರ್ತಿಗಳು ಪಾಳೆಯಗಾರರಿಗೆ ಅಗತ್ಯವಾದಾಗ ಲೆಲ್ಲ ಪೂಜಿಸಲು ಪಾಳೆಯಗಾರರ ನಿಯಂತ್ರಣದಲ್ಲಿರಬೇಕು. |

(ಇದೇ ಪಾಳೆಯಗಾರನು ಬೇವಿನಹಳ್ಳಿ ಕರಿಯಮ್ಮದೇವರಿಗೆ ಎಲ್ಲಾ ಜನರೂ ನಡೆದು ಕೊಂಡು ಕಾಣಿಕೆ ಅರ್ಪಿಸಬಹುದೆಂದು ಬೇರೊಂದು ಶಾಸನ ಹಾಕಿಸಿದ್ದಾನೆ.)

ಹೀಗೆ, ಒಂದು ಸಂಸ್ಥಾನ ವ್ಯಾಪ್ತಿಯ ಅಸಂಖ್ಯಾತ ಗ್ರಾಮದೇವತೆಗಳ ಪೂಜಾಧಿಕಾರಗಳ ತೀರ್ಮಾನವನ್ನು ಒಂದೇ ಶಾಸನದಲ್ಲಿ ಪ್ರಕಟಿಸಲ್ಪಟ್ಟಿರುವುದು ಗಮನಾರ್ಹ.

ಈ ಪಾಳೆಯಗಾರರು ವೀರಶೈವಮಠಗಳನ್ನು ಸ್ಥಾಪಿಸಿ ಗ್ರಾಮದತ್ತಿ ಮತ್ತು ಹೊಲದತ್ತಿ ನೀಡಿದುದು, ಕೆರೆಗಳ ದುರಸ್ತಿ, ಅಗ್ರಹಾರದ ಅಭಿವೃದ್ಧಿ ಹೀಗೆ ಜನೋಪಯೋಗಿ ಕ್ರಮಗಳನ್ನು ಜಾರಿಗೊಳಿಸಿದುದು, ಆ ಮೂಲಕ ಜನರ ಶಿಕ್ಷಣ, ಕಲೆ, ವ್ಯಾಪಾರ, ಕೃಷಿ ಮುಂತಾದವುಗಳಿಗೆ ಅವಕಾಶ ನೀಡಿದುದು ನ್ಯಾಯಯುತ ಆಡಳಿತದ ಲಕ್ಷಣಗಳೆಂದೇ ಪರಿಭಾವಿಸಬಹುದು. ತೆರಿಗೆ ವಿನಾಯ್ತಿ ಬಗೆಗೂ ಇದೇ ಮಾತು ಅನ್ವಯಿಸುವುದು.

**೨. ತೆರಿಗೆವಿನಾಯ್ತಿಯ ಔದಾರ್ಯ**

ಶಾ| ಶ| ೧೬೫೩ರಲ್ಲಿ ಮತ್ತೋಡಿನ ಕ್ಷೌರಿಕರು ತಾವು ಕಟ್ಟಬೇಕಾಗಿದ್ದ ೧೦೦೦ ವರಹ ವೃತ್ತಿತೆರಿಗೆ ಬಾಕಿಯನ್ನು ವಜಾಮಾಡಿ ಮುಂದೆಯೂ ತೆರಿಗೆ ವಿನಾಯ್ತಿ ನೀಡಬೇಕಾಗಿ ರಾಜನಲ್ಲಿ ಕೋರಿಕೆ ಮಂಡಿಸಿ, ನ್ಯಾಯತೀರ್ಮಾನಕ್ಕಾಗಿ ನಿರೀಕ್ಷಿಸಿದ್ದರು. ಅದೇ ವರ್ಷ ಚಿನ್ನದ ಗಿರಿಯಪ್ಪನಾಯಕನು ತನ್ನ ವಿವಾಹದ ಶುಭಸಂದರ್ಭದ ಸಂತೋಷದಲ್ಲಿ ಕ್ಷೌರಿಕರ ಮನವಿಯನ್ನು ಪರಿಗಣಿಸಿ ತೆರಿಗೆಮನ್ನಾ ಘೋಷಿಸಿ ಶಾಸನ ಹೊರಡಿಸಿದನು (ಈ ಶಾಸನವನ್ನು ಗುಂಡುಕಲ್ಲಿನ ಮೇಲೆ ಕೊರೆಯಿಸಲಾಗಿದ್ದು, ಇಂದಿಗೂ ನೋಡಬಹುದು).

ಶಾ|ಶ| ೧೬೬೮ರಲ್ಲಿ ಸಿದ್ಧರಾಮಪ್ಪನಾಯಕನು ತನ್ನ ಅರಮನೆಗೆ ಹಾಲು-ಬೆಣ್ಣೆ ಪೂರೈಕೆ ಮಾಡುತ್ತಿದ್ದ ಕಲ್ಲಯ್ಯ ಎಂಬುವವನಿಗೆ ದಾನವಾಗಿ ನೀಡಿದ ಅರಮನೆತೋಟದ ದಕ್ಷಿಣದ ಭೂಮಿಚೌಕಕ್ಕೆ 'ದಂಡಿನಪಟ್ಟೆಋಣ'ದಿಂದ ವಿನಾಯ್ತಿ ನೀಡಿರುವುದು ಸಹಾ ಶಾಸನರೂಪದಲ್ಲಿ ಪ್ರಕಟವಾಗಿದೆ. ಇವೆರಡೂ ತೆರಿಗೆವಿನಾಯ್ತಿಗಳು ನ್ಯಾಯತೀರ್ಮಾನದ ವ್ಯಾಪ್ತಿಗೆ ಒಳಪಟ್ಟಿವೆ.

**೩. ಭೂನ್ಯಾಯ ಇತ್ಯಾದಿ**

ಹೊಲ-ಗದ್ದೆಗಳ ದತ್ತಿಯನ್ನು ಹೊರತುಪಡಿಸಿದರೆ, ಈ ಪಾಳೆಯಗಾರರು ಭೂಮಿ ತಕರಾರುಗಳನ್ನು ಇತ್ಯರ್ಥಪಡಿಸಿದ್ದಿದೆ. ಈಗಿನ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಯಳನಾಡು ಗ್ರಾಮದ ಬಳಿಯ ಭಟ್ಟರಹಳ್ಳಿಯಲ್ಲಿ ಅಲ್ಲಿನ ಗೌಡರುಗಳ ಮಧ್ಯೆ ಉದ್ಭವಿಸಿದ್ದ ಈ ಆಸ್ತಿ ಜಗಳವನ್ನು ಮತ್ತೋಡು ಪಾಳೆಯಗಾರನು ವಿವೇಚನೆಯಿಂದ ಮಾಡಿದ ನ್ಯಾಯ ತೀರ್ಮಾನದ ಮೂಲಕ ಇತ್ಯರ್ಥಪಡಿಸಿದನೆಂಬ ಸಂಗತಿ ಆ ಪ್ರಾಂತ್ಯದಲ್ಲಿ ಇಂದಿಗೂ ಮನೆ ಮಾತಾಗಿದೆ. ಭಟ್ಟರಹಳ್ಳಿಯ ಊರುಗೌಡನಿಗೂ ಅಲ್ಲಿನ ಕೆರೆಗೌಡನಿಗೂ ಆ ಪ್ರದೇಶದ ಹೂವಿನಗದ್ದೆ ಮತ್ತು ಮಡಿಲಕ್ಕಿಗದ್ದೆಗಳ ಒಡೆತನದ ಬಗೆಗೆ ವ್ಯಾಜ್ಯವೇರ್ಪಟ್ಟಾಗ ಈ ಗೌಡರುಗಳು ನ್ಯಾಯಕೋರಿ ಮತ್ತೋಡು ಪಾಳೆಯಗಾರನಲ್ಲಿಗೆ ಬಂದರು. ಆಗ ಪಾಳೆಯಗಾರನು ಆ ಗದ್ದೆಗಳು ಊರಗೌಡನಿಗೆ ಸೇರಬಹುದಾಗಿದ್ದರೂ ಅವುಗಳನ್ನು ಊರಗೌಡನಿಂದ ಕೆರೆಗೌಡನಿಗೆ 'ಬಳುವಳಿ' ರೂಪದಲ್ಲಿ ಬಿಟ್ಟುಕೊಡುವಂತೆ ನ್ಯಾಯ ತೀರ್ಮಾನ ಮಾಡಿ ತಂಟೆಯನ್ನು ಇತ್ಯರ್ಥಪಡಿಸಿದನು. ಈ ಐತಿಹ್ಯವನ್ನು ಅಲ್ಲಗಳೆಯು

ವಂತಿಲ್ಲವಾದರೂ ಮುಂದೊಮ್ಮೆ ಈ ಬಗೆಗೆ ಲಿಖಿತ ಪುರಾವೆಯೇನಾದರೂ ದೊರೆತಲ್ಲಿ, ಈ ಸಂಗತಿಗೆ 'ಐತಿಹಾಸಿಕ ಮುದ್ರೆ' ಪ್ರಾಪ್ತವಾಗುವುದು.

ಈಗಿನ ಮತ್ತೋಡು ಗ್ರಾಮದ ಮಧ್ಯದಲ್ಲಿರುವ ಹೆಬ್ಬಾಗಿಲಿಗೆ ಅಳವಟ್ಟಿರುವ ಸದರ ಚಾವಡಿಯಲ್ಲಿ, ಆಗಿನ ಕಾಲದಲ್ಲಿ ಪಾಳೆಯಗಾರ ಅಥವಾ ಸಂಬಂಧಪಟ್ಟ ಸಚಿವ ಅರ್ಥಾತ್ ಅಧಿಕಾರಿಯು ವ್ಯಕ್ತಿ-ಕೋಮು-ಗುಂಪು-ಊರುಗಳ ಮಧ್ಯೆ ಉದ್ಭವಿಸುತ್ತಿದ್ದ ತಕರಾರುಗಳ ಬಗೆಗೆ ವಿಚಾರಣೆ ನಡೆಸಿ ಸೂಕ್ತವಾದ ನ್ಯಾಯತೀರ್ಮಾನಗಳನ್ನು ನೀಡುತ್ತಿದ್ದನೆನ್ನ ಲಾಗಿದೆ. ಅಪರಾಧಿಗಳಿಗೆ ಆಯಾ ಅಪರಾಧಗಳ ರೀತಿ ಹಾಗೂ ಪ್ರಮಾಣಕ್ಕನುಗುಣವಾಗಿ ದಂಡ ಅಥವಾ ಸೆರೆವಾಸ ಅಥವಾ ಬಹಿಷ್ಕಾರ ಹಾಕುವ ಶಿಕ್ಷೆ ವಿಧಿಸುತ್ತಿದ್ದರು. (ಈ ಬಗೆಗೆ ತಮ್ಮ ತಾತ ಮುತ್ತಾತಂದಿರು ಹೇಳುತ್ತಿದ್ದರೆಂದು ಮತ್ತೋಡಿನ ಇಂದಿನ ವಯೋವೃದ್ಧರು ಹೇಳುವುದುಂಟು).

ಸ್ವಾರಸ್ಯದ ಸಂಗತಿಯೆಂದರೆ, ಮತ್ತೋಡು ಪಾಳೆಯಗಾರರು ತಮ್ಮ ಶತ್ರುಗಳ ಶತ್ರುಗಳಿಗೆ ಆಶ್ರಯ ನೀಡುತ್ತಿದ್ದರೆಂಬುದು. ರಾಜತಾಂತ್ರಿಕದ ಈ ಸೂಕ್ಷ್ಮಾಂಶದ ಮೇಲೆ ಪ್ರೊ.ಲಕ್ಷ್ಮಣ್ ತೆಲಗಾವಿ ಅವರು ತಮ್ಮ ಸಂಶೋಧನಾತ್ಮಕ ಲೇಖನವೊಂದರಲ್ಲಿ ಬೆಳಕು ಚೆಲ್ಲಿದ್ದಾರೆ.[೨] ಚಿತ್ರದುರ್ಗ ಸಂಸ್ಥಾನದ ಚಳ್ಳಕೆರೆ ಕಡೆಯ ಕೃತಕ ಬಂಗಾರ ತಯಾರಕನೂ ಖೋಟಾನಾಣ್ಯ (ವರಹ) ಚಲಾವಣೆಕಾರನೂ ಆಗಿದ್ದ ಕಂಚಗಾರ ಕಾಳಶೆಟ್ಟಿ ಎಂಬುವವನು ತಲೆಮರೆಸಿಕೊಂಡು ಮತ್ತೋಡು ಸಂಸ್ಥಾನಕ್ಕೆ ಬಂದು ಆಶ್ರಯ ಪಡೆದಿದ್ದನೆಂಬ ಸಂಗತಿ ಸ್ವಾರಸ್ಯಕರವಾದುದು.

### ಪಾಳೆಯಗಾರನಿಗೇ ದೊರಕದಾದ 'ನ್ಯಾಯ'ವೆಂಬ ಮಾಯೆ

ಮತ್ತೋಡು ಪಾಳೆಯಗಾರರು ಧರ್ಮನಿಷ್ಠರು ಹಾಗೂ ನ್ಯಾಯಪರಿಪಾಲಕರಾಗಿದ್ದರೂ 'ಕಡೆಗಾಲಕ್ಕೆ ವಿಪರೀತ ಬುದ್ಧಿ' ಎಂಬಂತೆ, ಈ ಪಾಳೆಯಗಾರರ ಆಳ್ವಿಕೆಯ ಕಡೆಯ ಅವಧಿಯಲ್ಲಿ ಹಿರಿಯ ಹಾಲಪ್ಪನಾಯಕನ ನಂತರ ಸಂಪ್ರದಾಯದಂತೆ ಅವರ ಇಬ್ಬರು ಪುತ್ರರಲ್ಲಿ ಜ್ಯೇಷ್ಠಪುತ್ರನಿಗೆ ಪಟ್ಟ ದೊರಕಬೇಕಾಗಿದ್ದಿತು. ಆದರೆ, ಹಾಗಾಗದೆ ಮೊದಲನೆಯ ಮಗನಾದ ಹಾಲಪ್ಪನಾಯಕನಿಗೆ ಅಧಿಕಾರಪಟ್ಟ ದೊರಕುವ ಬದಲು, ಕಿರಿಯವನಾದ ಸಿದ್ದಪ್ಪನಾಯಕನಿಗೆ ಪಟ್ಟ ಲಭಿಸಿತು! ಈ ವಿಪರ್ಯಾಸದ ಘಟನೆಯು ಮತ್ತೋಡು ಪಾಳೆಯಗಾರರ ಇತಿಹಾಸದಲ್ಲಿ ಒಂದು ಕಪ್ಪುಚುಕ್ಕೆಯಾಯಿತು.

ತನಗೆ ಅಧಿಕಾರ ವಂಚನೆ ಉಂಟಾದುದರಿಂದ ಹಾಲಪ್ಪನಾಯಕನು ನ್ಯಾಯವನ್ನೊದಗಿಸುವಂತೆ ಚಿತ್ರದುರ್ಗ ಪಾಳೆಯಗಾರರಲ್ಲಿ ಶರಣಹೋಗಿ ನೆರವು ಕೋರಿದನು. ಆಗ ಚಿತ್ರದುರ್ಗದವರು ಸಿದ್ದಪ್ಪನಾಯಕನನ್ನು ಸಿಂಹಾಸನದಿಂದ ಕೆಳಗಿಳಿಸಿ ಹಾಲಪ್ಪನಾಯಕನಿಗೆ ಅಧಿಕಾರ ನೀಡಿದ್ದಲ್ಲದೆ, ಸಿದ್ದಪ್ಪನಾಯಕನನ್ನು ಚಿತ್ರದುರ್ಗದ ಸೆರೆಮನೆಗೆ ತಳ್ಳಿದರು. ಆದರೆ ಆಗಲೂ ಹಾಲಪ್ಪನಾಯಕನಿಗೆ ವಿಧಿಯು ವಂಚಿಸದೆ ಬಿಡಲಿಲ್ಲ. ದುರ್ಗದ

ಸೆರೆಮನೆಯಲ್ಲಿದ್ದ ಸಿದ್ದಪ್ಪನಾಯಕನನ್ನು ದುರ್ಗದ ಪಾಳೆಯಗಾರರ ಮಗಳು ಪ್ರೇಮಿಸಿದ್ದ ರಿಂದ ಅವರಿಗೆ ಲಗ್ನಮಾಡಿದ ದುರ್ಗದವರು ತಮ್ಮ ಅಳಿಯನನ್ನೇ ಪುನಃ ಮತ್ತೋಡಿನಲ್ಲಿ ಪಟ್ಟಕ್ಕೆ ತಂದು, ಹಾಲಪ್ಪನಾಯಕನನ್ನು ದುರ್ಗದ ಸೆರೆಮನೆಯಲ್ಲಿಟ್ಟರು! ಹೈದರಾಲಿಯು ದುರ್ಗದ ಮೇಲೆ ದಾಳಿಮಾಡಿದ ಸಂದರ್ಭದಲ್ಲಿ ಹಾಲಪ್ಪನಾಯಕನು ಸೆರೆವಾಸದಿಂದ ಹೊರಬಂದರೂ ಮತ್ತೋಡಿನ ಸಂಸ್ಥಾನದ ಅಧಿಕಾರಪಟ್ಟವು ಆತನಿಗೆ ಗಗನಕುಸುಮವೇ ಆಯಿತು!

**ಟಿಪ್ಪಣಿಗಳು**

೧. **'ಹೊಸದುರ್ಗದ ಸುತ್ತ'**, ೧೯೮೪, ಬಾಗೂರು ಆರ್. ನಾಗರಾಜಪ್ಪ

೨. ನೋಡಿ: **'ತರಳಬಾಳು'**, ೨೪-೪, ಮೇ-ಜುಲೈ, ೧೯೯೯

# ೧೦

## ಗುಡಗುಂಟಿ ಸಂಸ್ಥಾನಿಕರ ನ್ಯಾಯಾಡಳಿತ

**ಡಾ. ಅಮರೇಶ ಯತಗಲ್**

ಹೈದ್ರಾಬಾದ್ ಕರ್ನಾಟಕ ಪ್ರದೇಶವೆಂದು ಗುರುತಿಸಿಕೊಂಡ ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲೂಕಿನ ಗುಡಗುಂಟಿ ಸಂಸ್ಥಾನ ತನ್ನದೆ ಆದ ಚರಿತ್ರೆಯನ್ನು ಗರ್ಭೀಕರಿಸಿಕೊಂಡಿದೆ. ಕ್ರಿ.ಶ.೧೫೫೦ ರಿಂದ ಕ್ರಿ.ಶ.೧೯೪೮ ಸೆಪ್ಟೆಂಬರ್‌ವರೆಗೆ ಅಸ್ತಿತ್ವದಲ್ಲಿದ್ದ ಈ ಸಂಸ್ಥಾನ ಸುಮಾರು ೧೩ ಜನ ರಾಜರುಗಳ ಆಳ್ವಿಕೆಗೆ ಒಳಪಟ್ಟಿತ್ತು. ಈ ರಾಜರುಗಳು ಸ್ವತಂತ್ರವಾಗಿ ಆಳ್ವಿಕೆಯನ್ನು ನಡೆಸಿದ್ದಾರೆ. ಈ ಸಂಸ್ಥಾನದ ಸಂಪೂರ್ಣ ಅಧಿಕಾರ ರಾಜರದಾಗಿದ್ದಿತು. ಪ್ರಜೆಗಳನ್ನು ಸಮಾನದೃಷ್ಟಿಯಿಂದ ನೋಡಿಕೊಳ್ಳುವುದಲ್ಲದೆ, ಅವರ ಕ್ಷೇಮ ಸಮಾಚಾರಗಳಲ್ಲಿಯೂ ರಾಜನ ಪಾತ್ರವಿರುತ್ತಿತ್ತು. ಸಂಸ್ಥಾನ ಹಾಗೂ ಸಂಸ್ಥಾನದ ಅಧೀನದ ನಲವತ್ನಾಲ್ಕು ಹಳ್ಳಿಗಳ ಪ್ರಜೆಗಳು ಸುಖ, ಶಾಂತಿಯಿಂದ ಇರಲು ಈ ರಾಜರುಗಳು ತಮ್ಮದೇ ಆದ ಆಡಳಿತವನ್ನು ಜಾರಿಗೆ ತಂದಿದ್ದರು. ಇವರ ಆಡಳಿತದಲ್ಲಿ ನ್ಯಾಯಾಡಳಿತದ ಪದ್ಧತಿ ಬಹಳ ಮುಖ್ಯವಾದುದಾಗಿದೆ.

ಗುಡಗುಂಟಿ ಸಂಸ್ಥಾನದ ನ್ಯಾಯಾಡಳಿತ ಪದ್ಧತಿಯನ್ನು ಆಡಳಿತದ ಕಾಲಕ್ಕನುಗುಣವಾಗಿ ಎರಡು ಘಟ್ಟಗಳಲ್ಲಿ ಗುರುತಿಸಬಹುದಾಗಿದೆ : ಒಂದು, ಈ ಸಂಸ್ಥಾನದ ಸ್ಥಾಪನೆಯಿಂದ ಹೈದ್ರಾಬಾದ್ ನಿಜಾಮರ ಪ್ರಾರಂಭದ ಆಳ್ವಿಕೆ(ಕ್ರಿ.ಶ.೧೫೫೦-೧೮೫೮)ಯ ಕಾಲದವರೆಗಿನ ನ್ಯಾಯಾಡಳಿತ ಪದ್ಧತಿ; ಎರಡನೆಯದಾಗಿ, ಹೈದ್ರಾಬಾದ್ ನಿಜಾಮರ ಈ ಭಾಗದ ಪ್ರಾರಂಭದ ಆಳ್ವಿಕೆಯ ಕಾಲದಿಂದ (ಕ್ರಿ.ಶ.೧೮೫೮-೧೯೪೮) ಸಂಸ್ಥಾನಗಳು ಭಾರತದ ಒಕ್ಕೂಟದಲ್ಲಿ ವಿಲೀನವಾಗುವವರೆಗಿನ ನ್ಯಾಯಾಡಳಿತ ಪದ್ಧತಿ.

ಗುಡಗುಂಟಿ ಸಂಸ್ಥಾನದ ಸ್ಥಾಪನೆಯಿಂದ ಹೈದ್ರಾಬಾದ್ ನಿಜಾಮರ ಆಳ್ವಿಕೆಯ ಕಾಲದವರೆಗೆ ಇಲ್ಲಿ ನ್ಯಾಯನಿರ್ಣಯಕ್ಕಾಗಿ ಯಾವುದೇ ನ್ಯಾಯಾಲಯ(Court)ದ ವ್ಯವಸ್ಥೆ ಇದ್ದಿಲ್ಲ. ಕುಲಾಚಾರಿಕೆಯ ಪದ್ಧತಿಯ ಮೂಲಕ ನ್ಯಾಯವನ್ನು ನಿರ್ಣಯಿಸುತ್ತಿದ್ದರು. ಕುಲಾಚಾರಿಕೆಯ ಪದ್ಧತಿಯೆಂದರೆ, ತಮ್ಮ ಅಧೀನದ ಹಳ್ಳಿಗಳಲ್ಲಿಯ ಪ್ರತಿಯೊಂದು ಕುಲ ಅಥವಾ ಜಾತಿಗೆ ಸಂಬಂಧಿಸಿದ ಜನಾಂಗದ, ಆಚಾರ-ವಿಚಾರ, ರೂಢಿ-ಸಂಪ್ರದಾಯಗಳ

ಪದ್ಧತಿಗಳಿಗನುಸಾರವಾಗಿ, ಜಗಳಗಳಿಗೆ ತೀರ್ಪನ್ನು ನೀಡುವುದು. ಈ ಕುಲಾಚಾರ ಪದ್ಧತಿಗೆ ಒಳಪಡುತ್ತಿರುವ ಅಂದಿನ ಜಾತಿಗಳೆಂದರೆ, ಬೇಡರು, ಕುರುಬರು, ಗೊಲ್ಲರು, ಕಬ್ಬಲಿಗರು, ಹೊಲೆಯುರು, ಮಾದಿಗರು, ಕುಂಬಾರರು, ಕಂಬಾರರು, ಲಿಂಗಾಯತರು, ಪಾಂಚಾಳರು ಮುಂತಾದವರು. ಇವರುಗಳೆಲ್ಲಾ ತಮ್ಮ ತಮ್ಮ ಜಾತಿಗಳ ನ್ಯಾಯಗಳನ್ನು ಬಗೆಹರಿಸುವ ಪದ್ಧತಿ ಜಾರಿಯಲ್ಲಿತ್ತು.

ಅಂದು ಗುಡಗುಂಟಿ ಸಂಸ್ಥಾನ ನಲವತ್ನಾಲ್ಕು ಹಳ್ಳಿಗಳನ್ನೊಳಗೊಂಡ ಸಂಸ್ಥಾನವಾಗಿತ್ತು. ಅವುಗಳೆಂದರೆ ಅಮರೇಶ್ವರ, ಹೊನ್ನಳ್ಳಿ, ಯರಡೋಣಿ, ಕೋತಾ, ಕಡ್ಡೋಣಿ, ತವಗಾ, ಗುಡಗುಂಟಿ, ರೋಡಲಬಂಡಾ (ತವಗ), ಬಂಡೇಬಾವಿ, ಹೊಸಗುಡ್ಡ, ಪೈದೊಡ್ಡಿ, ಗದ್ದಗಿ, ಗೊಲಪಲ್ಲಿ, ರಾಯದುರ್ಗ, ಟಣಮನಕಲ್ಲು, ಪರಾಂಪುರ, ಅನ್ಸರಿ, ಚಿಕ್ಕನಗನೂರು, ಹಿರೇನಗನೂರು, ನಿಲೋಗಲ್, ವೀರಾಪೂರ, ಗೆಜ್ಜಲಗಟ್ಟಾ, ಹಿರೇಹೆಸರೂರು, ಚಿಕ್ಕ ಹೆಸರೂರು, ಸರ್ಜಾಪುರ, ಅಮರಾವತಿ, ಸೈದಾಪುರ (ಇದು ಇಂದಿನ ಮಾನವಿ ತಾಲೂಕಿನಲ್ಲಿದೆ), ಬಸ್ಸಾಪುರ, ಗೋನವಾರ, ಚಿಕ್ಕಲದೊಡ್ಡಿ, ಬೆಂಚಲದೊಡ್ಡಿ, ಚುಕನಟ್ಟಿ, ಮಲ್ಲಾಪುರ, ಯಲಗಟ್ಟಾ, ದೇವತಗಲ್, ಹೂವಿನಬಾವಿ, ಜಂಗರಳ್ಳಿಹಾಳ, ಚಿಕ್ಕಕಾರಲಕುಂಟಿ, ಮಾಚನೂರು, ಹಟ್ಟಿ, ಐದಬಾವಿ ಮತ್ತು ಹೊಸೂರು. ಈ ಹಳ್ಳಿಗಳನ್ನು ನೋಡಿಕೊಂಡು ಹೋಗಲು ಕೆಲವು ಜಮೀನ್ದಾರರನ್ನು ನೇಮಕ ಮಾಡಿದ್ದರು. ಈ ಜಮೀನ್ದಾರರಲ್ಲಿ ಗೆಜ್ಜಲಗಟ್ಟಾ, ಹಿರೇಹೆಸರೂರು, ಐದಬಾವಿ, ಕಡ್ಡೋಣಿಯವರುಗಳು ಪ್ರಮುಖರಾಗಿದ್ದರು. ಇವರುಗಳಿಗೆ ತಲಾ ಹನ್ನೊಂದು ಹಳ್ಳಿಗಳು ಬರುತ್ತಿದ್ದವು. ಇವರು ಈ ಹಳ್ಳಿಗಳ ಮೇಲುಸ್ತುವಾರಿಯನ್ನು ನೋಡಿಕೊಂಡು ಹೋಗುತ್ತಿದ್ದರು. ಇವರನ್ನು ದೇಸಾಯಿಗಳು, ಧಣಿಗಳು ಎಂದು ಕರೆಯುವ ವಾಡಿಕೆಯುಂಟು. ಈ ಜಮೀನ್ದಾರರು ಆಯಾ ಭಾಗದಲ್ಲಿಯ ನ್ಯಾಯಗಳನ್ನು ಬಾಯಿಮಾತಿನ ಮೂಲಕ ಬಗೆಹರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರು.

ಈ ಜಮೀನ್ದಾರರು ತಮ್ಮ ಅಧೀನದಲ್ಲಿಯ ಹಳ್ಳಿಗಳಲ್ಲಿಯ ಬೇಡರಜಾತಿಯ ಗುರಿಕಾರರನ್ನು ಹಾಗೂ ಅದೇ ಜಾತಿಯ ಕಟ್ಟಿಮನಿಯವರನ್ನು ತಮ್ಮ ತಮ್ಮ ಜಾತಿಗಳಲ್ಲಿಯ ನ್ಯಾಯಗಳನ್ನು ಬಗೆಹರಿಸಲು ನೇಮಿಸಿರುತ್ತಿದ್ದರು. ನ್ಯಾಯದ ಅಂತಿಮ ತೀರ್ಮಾನ ಆ ಭಾಗದ ಜಮೀನ್ದಾರನದಾಗಿರುತ್ತಿತ್ತು. ಆತನಲ್ಲಿ ನ್ಯಾಯ ಬಗೆಹರಿಯದ ಸಂದರ್ಭದಲ್ಲಿ ಆ ನ್ಯಾಯವು ಗುಡಗುಂಟಿ ಸಂಸ್ಥಾನದ ರಾಜನ ದರ್ಬಾರಕ್ಕೆ ಬರುತ್ತಿತ್ತು.

ರಾಜರ ದರ್ಬಾರದಿಂದ ನೇಮಿಸಲ್ಪಟ್ಟ, ಸನ್ನಡತೆ, ಪ್ರಾಮಾಣಿಕತೆ ಮತ್ತು ನಿಷ್ಪಕ್ಷಪಾತ ತನದ ದೃಷ್ಟಿಯುಳ್ಳ ಊರ ಪಂಚರು ಸೇರಿ ಬೇರೆ ಬೇರೆ ಜಮೀನ್ದಾರರ ಹಳ್ಳಿಗಳಿಂದ ಬಂದ ಜಗಳಗಳನ್ನು ಬಗೆಹರಿಸುತ್ತಿದ್ದರು. ಈ ಪಂಚರಲ್ಲಿ ಗುರಿಕಾರರು, ಕಟ್ಟಿಮನಿಯವರು, ಸುಬೇದಾರರು, ಹವಾಲ್ದಾರರು, ದೇಶಪಾಂಡೆಯವರು ಪ್ರಮುಖರಾಗಿದ್ದರು. ಈ ಪಂಚರು ಸೇರಿ ನ್ಯಾಯವನ್ನು ತೀರ್ಮಾನಿಸುವ ಕಟ್ಟೆಯನ್ನು ಗುಡಗುಂಟಿಗುಡ್ಡದ ಮೇಲಿನ ಹಳೆಯ

ದರ್ಬಾರದಲ್ಲಿ ಇಂದಿಗೂ ನೋಡಬಹುದಾಗಿದೆ. ನಂತರದಲ್ಲಿ ಈ ಪಂಚಾಯತಿಕಟ್ಟೆಯನ್ನು ಇಂದಿನ ಗುಡಗುಂಟಿಯ ಈಶ್ವರ ದೇವಸ್ಥಾನದ ಕಟ್ಟೆಯ ಮೇಲೆ, ಕೆಲವು ದಿನಗಳಾದ ನಂತರ ವೆಂಕಟರಮಣ ದೇವಸ್ಥಾನದ ಮುಂದಿನ ಕಟ್ಟೆಯ ಮೇಲೆ ನ್ಯಾಯನಿರ್ಣಯ ನಡೆಯುತ್ತಿದ್ದಿತು.

ಈ ಪಂಚಾಯತಿಕಟ್ಟೆಯ ಮೇಲೆ ವಿವಿಧ ಬಗೆಯ ನ್ಯಾಯಗಳನ್ನು ಬಗೆಹರಿಸುತ್ತಿದ್ದರು. ಅವುಗಳಲ್ಲಿ ಕುಲಕ್ಕೆ ಸಂಬಂಧಿಸಿದ ಜಗಳಗಳು, ಒಂದು ಕುಲ ಮತ್ತು ಇನ್ನೊಂದು ಕುಲದ ನಡುವೆ ಆದ ಜಗಳಗಳು, ಊರುಗಳಲ್ಲಿಯ ಸಣ್ಣಪುಟ್ಟ ತಂಟೆಗಳು, ಆಸ್ತಿಪಾಸ್ತಿಗೆ ಸಂಬಂಧಿಸಿದ ಜಗಳಗಳು, ಕೊಲೆ, ಸುಲಿಗೆ, ಕಳ್ಳತನಕ್ಕೆ ಸಂಬಂಧಿಸಿದ ಜಗಳಗಳ ನ್ಯಾಯ ತೀರ್ಮಾನ ನಡೆಯುತ್ತಿತ್ತು. ಇಲ್ಲಿ ವಾದಿ-ಪ್ರತಿವಾದಿಗಳನ್ನು ಕರೆಯಿಸುತ್ತಿದ್ದರು. ಅವರುಗಳಿಂದ ಅವರ ಜಗಳದ ವಿಷಯ ಮಂಡಿಸಲ್ಪಡುತ್ತಿತ್ತು. ನಂತರದಲ್ಲಿ ಪಂಚರು ನ್ಯಾಯ, ಅನ್ಯಾಯದ ಕುರಿತಾದ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು. ರಾಜನು ಅಧ್ಯಕ್ಷ ಸ್ಥಾನವನ್ನು ವಹಿಸಿಕೊಂಡಿರುತ್ತಿದ್ದನು. ರಾಜನ ತೀರ್ಪೆ ಅಂತಿಮ ತೀರ್ಪಾಗಿರುತ್ತಿತ್ತು. ತೀರ್ಪನ್ನು ಬರೆದುಕೊಡುತ್ತಿದ್ದರು. ಆ ಹುಕುಮಿಗೆ (Command) 'ತಾಕಿದ' ಎಂದು ಕರೆಯುತ್ತಿದ್ದರು. ಬರೆದ ತೀರ್ಪಿಗೆ ವಾದಿ, ಪ್ರತಿವಾದಿ, ರಾಜ ಹಾಗೂ ಪಂಚರ ಸಹಿಗಳಿರುತ್ತಿದ್ದವು. ತಪ್ಪು ಮಾಡಿದವರಿಗೆ ಕೆಲವು ಸಲ ಹಣದರೂಪದಲ್ಲಿ ದಂಡವನ್ನು ವಿಧಿಸುತ್ತಿದ್ದರು. ಈ ದಂಡರೂಪದ ಹಣ ಸಂಸ್ಥಾನಕ್ಕೆ ಸೇರುತ್ತಿದ್ದಿತು. ಅವರು ನೀಡಿದ ತೀರ್ಪನ್ನು ಪಾಲಿಸದಿದ್ದರೆ ಮುಂದೆ ಅವರನ್ನು ಅವರ ಜಾತಿಯಿಂದ ಬಹಿಷ್ಕರಿಸುತ್ತಿದ್ದರು.

ಈ ಸಂಸ್ಥಾನದ ಆ ಕಾಲದ ನ್ಯಾಯನಿರ್ಣಯ ಪದ್ಧತಿಯನ್ನು ಒಂದು ಡೊಳ್ಳಿನಹಾಡಿನ ನುಡಿ ಈರೀತಿ ಹೇಳುತ್ತದೆ:

ಗುಡಗುಂಟಿ ಸಂಸ್ಥಾನದೊಳಗೆ ಪಂಚರಿದ್ದರು
ಉತ್ತರ ಮುಂಜಾನೆದ್ದಾರೊ, ಜಾವ ಜಳಕ ಮಾಡ್ಯಾರೊ
ಜಗಳ ಮಾಡಿದವರ್ನ, ಪಂಚರಕಟ್ಟೆಗೆ ಕರಸ್ಯಾರೊ
ಜಗಳ ಮಾಡಿದವರು, ಪಂಚರಕಟ್ಟೆಗೆ ಬಂದಾರೊ
ಸಲಾಮು ಹೊಡೆದು ನಿಂತಾರೊ, ತಪ್ಪು ಒಪ್ಪಿಕೊಂಡಾರೊ
ಜಗಳ ಮಾಡೋದು ಬಿಟ್ಟಾರೊ, ಮನೆ ಬದುಕು ಮಾಡ್ಯಾರೊ.

ಹೀಗೆ ಈ ಪಂಚಾಯತಿ(ಪಂಚಕಟ್ಟೆ)ಗಳಲ್ಲಿ ಕುಲ, ಜಾತಿ ಹಾಗೂ ಹಿಂದೂ- ಮುಸ್ಲಿಂರೆನ್ನುವ ಭೇದ ಭಾವವಿಲ್ಲದೆ ನ್ಯಾಯನಿರ್ಣಯಿಸಲ್ಪಡುತ್ತಿತ್ತು. ಇಲ್ಲಿ ಯಾರಿಗೂ ಅನ್ಯಾಯವಾಗುತ್ತಿರಲಿಲ್ಲ. ಇಲ್ಲಿ ದೋಷಕ್ಕೆ ತಕ್ಕಂತೆ ದಂಡಿಸಬೇಕು, ದಂಡವು ದೋಷದ ಪ್ರಮಾಣಕ್ಕನುಸಾರವಾಗಿರಬೇಕು, ಅಪಚಾರ ಪ್ರಮಾಣಕ್ಕನುಗುಣವಾಗಿ ನಷ್ಟ ಭರ್ತಿ ಕೊಡಿಸಬೇಕು ಎಂಬ ತತ್ವವನ್ನು ಅನುಸರಿಸುತ್ತಿದ್ದರು. ಇದೊಂದು ನಿಷ್ಪಕ್ಷಪಾತ ಹಾಗೂ ಮಾದರಿರೂಪದ ನ್ಯಾಯಾಡಳಿತ ಪದ್ಧತಿಯಾಗಿತ್ತೆಂದು ಹೇಳಬಹುದಾಗಿದೆ.

ನಂತರ ಈ ಸಂಸ್ಥಾನದ ಇನ್ನೊಂದು ಬಗೆಯ ನ್ಯಾಯಾಡಳಿತ ಪದ್ಧತಿಯು ಹೈದ್ರಾಬಾದ್ ನಿಜಾಮರ ಆಗಮನದಿಂದ ಪ್ರಾರಂಭಗೊಂಡಿತು. ಕ್ರಿ.ಶ.೧೮೫೭ರ ಸಿಪಾಯಿದಂಗೆಯಲ್ಲಿ ನಿಜಾಮ ಅಪಜಲ ಉದ್ದೌಲ ಹಾಗೂ ಅವರ ಪ್ರಧಾನ ಮಂತ್ರಿ ಮೊದಲನೆಯ ಸಾಲಾರಜಂಗ ಬ್ರಿಟಿಷರಿಗೆ ಸಹಾಯ ಮಾಡಿದ್ದರಿಂದ ಕ್ರಿ.ಶ.೧೮೫೮ರಲ್ಲಿ ರಾಯಚೂರನ್ನು ಬ್ರಿಟಿಷರು ನಿಜಾಮರಿಗೆ ನೀಡಿದರು. ಅಂದಿನಿಂದ ರಾಯಚೂರು ಹೈದ್ರಾಬಾದ್ ಸಂಸ್ಥಾನದ ಭಾಗವಾಯಿತು. ಆಗ ರಾಯಚೂರು ವಿಭಾಗದ ಗುಡಗುಂಟಿ ಸಂಸ್ಥಾನವು ಸಹಿತ ಹೈದ್ರಾಬಾದ್ ನಿಜಾಮರ ಆಡಳಿತಕ್ಕೆ ಒಳಪಟ್ಟಿತು. ಈ ಸಂದರ್ಭದಲ್ಲಿ ಹೈದ್ರಾಬಾದ್ ನಿಜಾಮರ ಸೂಚನೆಯಂತೆ ಈ ಸಂಸ್ಥಾನದಲ್ಲಿ ಆಡಳಿತದ ಅನುಕೂಲಕ್ಕಾಗಿ ನಾಲ್ಕು ವಿಭಾಗಗಳನ್ನು ಮಾಡಲಾಯಿತು. ಅವುಗಳೆಂದರೆ,

೧. ಮೌಲ್ (Revenue)

೨. ಫೌಜದಾರಿ (Criminal)

೩. ದಿವಾನಿ (Civil)

೪. ಪೊಲೀಸ್ (Police).

ಈ ವಿಭಾಗಗಳಿಗೆ ಪ್ರತ್ಯೇಕವಾದ ಕೆಲಸಕಾರ್ಯಗಳಿರುತ್ತಿದ್ದವು. ಇವುಗಳು ವ್ಯವಸ್ಥಿತ ರೀತಿಯಲ್ಲಿ ತಮ್ಮ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದವು. ಇವುಗಳಲ್ಲಿ ಈ ಸಂಸ್ಥಾನದ ಪ್ರಮುಖವಾದ ವಿಭಾಗ ನ್ಯಾಯಾಲಯ (Court) ಆಗಿತ್ತು.

ಹೈದ್ರಾಬಾದ್ ನಿಜಾಮರ ಅಪ್ಪಣೆಯ ಮೇರೆಗೆ ಈ ಸಂಸ್ಥಾನದಲ್ಲಿ ಪ್ರಾರಂಭವಾದ ನ್ಯಾಯಾಲಯ ಇಂದಿನ ಅರಮನೆಯ ಪ್ರಮುಖ ಭಾಗದಲ್ಲಿದೆ. ಇದನ್ನು ಅದಾಲತ್ (Court) ಎಂದು ಕರೆಯುತ್ತಾರೆ. ಈ ನ್ಯಾಯಾಲಯದಲ್ಲಿ ಫೌಜದಾರಿ (Criminal) ಹಾಗೂ ದಿವಾನಿ(Civil)ಗಳಿಗೆ ಸಂಬಂಧಿಸಿದಂತೆ ಮೊಕದ್ದಮೆಗಳು (Case) ದಾಖಲಾಗಿ ನ್ಯಾಯ ತೀರ್ಮಾನವಾಗುತ್ತಿತ್ತು. ನ್ಯಾಯತೀರ್ಮಾನಗಳ ಹಾಗೂ ಆದೇಶಗಳ ಬರವಣಿಗೆಯ ಭಾಷೆ ಉರ್ದು ಆಗಿತ್ತು. ವಾದಿ ಮತ್ತು ಪ್ರತಿವಾದಿಗಳು ಕನ್ನಡದಲ್ಲಿ ಮಾತನಾಡಬಹುದಿತ್ತು. ಈ ಸಂಸ್ಥಾನದ ಹಳ್ಳಿಗಳಲ್ಲಿ ಯಾವುದೇ ಅಪರಾಧಗಳು ಜರುಗಿದ್ದರೆ ಸಂಸ್ಥಾನದ ಪೊಲೀಸ್ ಇಲಾಖೆಗೆ ಫಿರ್ಯಾದಿಯನ್ನು(Complaint) ಸಲ್ಲಿಸುತ್ತಿದ್ದರು. ಆಗ ಪೊಲೀಸ್ ಇಲಾಖೆ ಫಿರ್ಯಾದಿನ ಸಾರಾಂಶದ ಮೇಲೆ ಪ್ರಥಮ ವರ್ತಮಾನ ವರದಿ(First Information Report)ಯನ್ನು ನ್ಯಾಯಾಲಯಕ್ಕೆ ಸಲ್ಲಿಸುತ್ತಿದ್ದಿತು. ನಂತರದಲ್ಲಿ ನ್ಯಾಯಾಲಯದಲ್ಲಿ ವಾದಿ ಮತ್ತು ಪ್ರತಿವಾದಿಗಳ ಸಮ್ಮುಖದಲ್ಲಿ ಸಾಕ್ಷಿ ಸಮೇತ ಕೇಸು ನಡೆಯುತ್ತಿತ್ತು. ಇಲ್ಲಿಯ ನ್ಯಾಯಾಲಯದಲ್ಲಿ ಸೂಕ್ತವಾದ ತೀರ್ಪು ದೊರಕಲಿಲ್ಲವೆಂದು ಕಂಡುಬಂದರೆ ಹೈದ್ರಾಬಾದ್ ನ್ಯಾಯಾಲಯಕ್ಕೆ ಮೇಲ್ಮನವಿ (Appeal) ಸಲ್ಲಿಸಬಹುದಾಗಿತ್ತು.

ಫೌಜದಾರಿ (Criminal) ಮೊಕದ್ದಮೆಗಳಲ್ಲಿ ಆರೋಪಿಗಳು (Crimes) ಯಾವ ಯಾವ ತಪ್ಪು ಮಾಡುತ್ತಾನೆ, ಅದರ ಮೇಲೆ ಪ್ರಕರಣಗಳು ಹಾಕಲ್ಪಡುತ್ತಿದ್ದವು. ಇವು ಕ್ರಿಮಿನಲ್ ಸ್ವರೂಪವನ್ನು ಹೊಂದಿರುವಂತಹವುಗಳಾಗಿದ್ದವು. ಅಂದರೆ ಕೊಲೆ ಮಾಡಿದರೆ, ಕಳ್ಳತನ ಮಾಡಿದರೆ, ಮಾನಹಾನಿಯುಂಟು ಮಾಡಿದರೆ, ಸಾರ್ವಜನಿಕ ಶಾಂತಿಗೆ ಭಂಗತರುವ ಕೃತ್ಯವೆಸಗಿದರೆ, ಖೊಟ್ಟಿ ದಾಖಲೆಗಳನ್ನು ಸೃಷ್ಟಿಸಿದರೆ, ಚಲಾವಣೆಯ ನಾಣ್ಯಗಳಿಗೆ ಹಾನಿಯನ್ನುಂಟು ಮಾಡಿದರೆ (ಇದನ್ನು 'Currency Crimes' ಎನ್ನುತ್ತಾರೆ), ಅಂದರೆ ಎತ್ತಿನ ಕೋಡುಗಳಿಗೆ ನಾಣ್ಯಗಳನ್ನು ತೂಗುಹಾಕಿದರೆ, ನಾಣ್ಯಗಳಿಗೆ ರಂಧ್ರವನ್ನು ಕೊರೆದರೆ, ನಾಣ್ಯಗಳ ಮೂಲಸ್ವರೂಪವನ್ನು ಹಾಳುಮಾಡಿದರೆ, ವ್ಯಾಪಾರಿಗಳು ತೂಕದ ಅಳತೆಯಲ್ಲಿ ಸಾರ್ವಜನಿಕರಿಗೆ ಮೋಸಮಾಡಿದರೆ, ಹಿಂದೂಧರ್ಮಕ್ಕೆ ಅನ್ಯಾಯವಾಗುವ ಕೃತ್ಯವೆಸಗಿದರೆ, ಹೆಣ್ಣುಮಕ್ಕಳ ಮೇಲೆ ಅತ್ಯಾಚಾರವೆಸಗಿದರೆ ಹಾಗೂ ಅವರ ಮಾನಹಾನಿ ಮಾಡಿದರೆ, ನಿಂದನೆ ಮಾಡಿದರೆ, ಅನುಮತಿ ಇಲ್ಲದೆ ಇನ್ನೊಬ್ಬರ ಮನೆಗೆ ನುಗ್ಗಿ ದಾಂದಲೆ ಎಬ್ಬಿಸಿದರೆ, ಅನುಮತಿ ಇಲ್ಲದೆ ಇನ್ನೊಬ್ಬರ ಜಮೀನಿನಲ್ಲಿ ಹೋದರೆ, ಸುಳ್ಳುಚಾಡಿ ಹೇಳಿ ಜಗಳ ಹಚ್ಚಿದರೆ, ಸುಳ್ಳುಸಾಕ್ಷಿ ಹೇಳಿದರೆ, ಒಬ್ಬನನ್ನು ಅತಿಕ್ರಮಣ ಮಾಡಿ ಬಂಧನದಲ್ಲಿಟ್ಟರೆ, ಜೂಜು, ಜಾರತನ (ಸ್ತ್ರೀಸಂಗ್ರಹಣ, Adultery) ಮಾಡಿದರೆ, ಇನ್ನೂ ಮುಂತಾದ ಆರೋಪಗಳಿಗೆ ಸಂಬಂಧಿಸಿದಂತೆ ಮೊಕದ್ದಮೆಗಳು ಈ ನ್ಯಾಯಾಲಯದಲ್ಲಿ ಇತ್ಯರ್ಥವಾಗುತ್ತಿದ್ದವು. ಫೌಜದಾರಿ ಮೊಕದ್ದಮೆಗಳಲ್ಲಿ ತೀರ್ಪನ್ನು (Judgement) ನೀಡಲಾಗುತ್ತಿತ್ತು. ಅಂದರೆ ನ್ಯಾಯಾಲಯವು ಯಾವುದೇ ಫೌಜದಾರಿ ಮೊಕದ್ದಮೆಯಲ್ಲಿ ವಿವರಣೆಯ ನಂತರ ಆಪಾದಿತನನ್ನು ಬಿಡುಗಡೆ ಮಾಡುವುದು, ಇಲ್ಲವೆ ಶಿಕ್ಷೆಗೊಳಪಡಿಸುವ ಆಜ್ಞೆಯನ್ನು ಮಾಡುವುದಾಗಿತ್ತು. ಆ ಸಂದರ್ಭದಲ್ಲಿ, ಆ ಕಾಲದ ಫೌಜದಾರಿ ಪ್ರಕ್ರಿಯೆ ಸಂಹಿತೆ(Criminal Procedure Code)ಯನ್ನು ಬಳಸಲಾಗುತ್ತಿತ್ತು.

ಫೌಜದಾರಿ ಮೊಕದ್ದಮೆಗಳು ಅಂದರೆ ಫೌಜದಾರಿ ಸ್ವರೂಪವನ್ನು (Criminal Suit) ಹೊಂದಿರುವಂಥವುಗಳಾಗಿದ್ದವು. ಈ ನ್ಯಾಯಾಲಯದಲ್ಲಿ ಇಂತಹ ಕೆಲವು ಪ್ರಕರಣಗಳು ನಡೆದಿವೆ. ಶ್ರೀ ರಾಜಾ ಸೋಮಪ್ಪನಾಯಕರ ಕಾಲದಲ್ಲಿ ಮುಸ್ಲಿಂಧರ್ಮಕ್ಕೆ ಅನ್ಯಾಯವಾಗುವ ಘಟನೆಯೊಂದು ಜರುಗಿತಂತೆ. ಕೆಲವು ಹಿಂದೂಧರ್ಮದ ಕಿಡಿಗೇಡಿಗಳು ಮೊಹರಂ ಹಬ್ಬದಲ್ಲಿ ಮುಸ್ಲಿಂಬಂಧುಗಳಿಗೆ ಕಳಂಕವಾಗುವ ರೀತಿಯಲ್ಲಿ ಅವಮಾನ ಮಾಡಿದ್ದಕ್ಕಾಗಿ ಈ ನ್ಯಾಯಾಲಯಕ್ಕೆ ದೂರನ್ನು ಸಲ್ಲಿಸಲಾಯಿತು. ಆಗ ನ್ಯಾಯಾಲಯವು ಧರ್ಮಕ್ಕೆ ಅವಮಾನ ಮಾಡಿದವರಿಗೆ ನಾಲ್ಕುತಿಂಗಳುಗಳವರೆಗೆ ಶಿಕ್ಷೆಯನ್ನು ಹಾಗೂ ಹತ್ತು ರೂಪಾಯಿಗಳ ದಂಡವನ್ನು ವಿಧಿಸಿತ್ತಂತೆ.

ರಾಣಿ ಗೌರಮ್ಮಾಜಿಯವರ ಕಾಲದಲ್ಲಿ ಕೀಳುಜಾತಿಯ ಅಪ್ರಾಪ್ತ ವಯಸ್ಸಿನ ಹೆಣ್ಣುಮಗಳ ಮೇಲೆ ಉನ್ನತಜಾತಿಯ ಪುರುಷನೋರ್ವನು ಅತ್ಯಾಚಾರವೆಸಗಿದಾಗ ಆ ಪುರುಷನಿಗೆ ಕಠಿಣವಾದ ಶಿಕ್ಷೆಯನ್ನು ಗುಡಗುಂಟಿ ನ್ಯಾಯಾಲಯ ನೀಡಿದೆ. ಈ ರೀತಿ ಫೌಜದಾರಿ ಮೊಕದ್ದಮೆಗಳು ಇಲ್ಲಿ ಇತ್ಯರ್ಥವಾಗುತ್ತಿದ್ದವು.

ಈ ನ್ಯಾಯಾಲಯದ ದಿವಾನಿ (Civil) ವಿಭಾಗದಲ್ಲಿ ಹೊಲ, ಮನೆ ಆಸ್ತಿ ಹಾಗೂ ಹಕ್ಕುಗಳಿಗೆ ಸಂಬಂಧಿಸಿದಂತೆ ಮೊಕದ್ದಮೆಗಳು ಹೂಡಲ್ಪಡುತ್ತಿದ್ದವು. ಇಂಥ ಮೊಕದ್ದಮೆಯೊಂದು ಈ ಸಂಸ್ಥಾನದ ಕೊನೆಯ ರಾಜ, ರಾಜಾ ತಿಪ್ಪರಾಜಾ ಜಡಿಸೋಮಪ್ಪ ನಾಯಕ (ಕ್ರಿ.ಶ.೧೯೦೧ ರಿಂದ ೧೯೫೭-ಸರ್ಜಾ ಬಹದ್ದೂರ ವಾಲಿಯ ಸ್ಟೇಟ್ ಗುಡಗುಂಟಿ)ರ ಕಾಲದಲ್ಲಿ ನಡೆಯಿತು. ಅದೇನೆಂದರೆ, ಅಂದಿನ ಸಂಸ್ಥಾನಗಳ ಜಹಗೀರುದಾರರು ಅಥವಾ ದೇಶಪಾಂಡೆ ದೇಶಮುಖರು ತೀರಿಕೊಂಡಾಗ ಅವರ ಉತ್ತರಾಧಿಕಾರ ತೀರ್ಮಾನವಾಗಿ ಅವರವರ ಗ್ರಾಮಗಳ ಕಂದಾಯ(Revenue)ದ ಆಡಳಿತದ ಹಕ್ಕುಗಳನ್ನು ಮರಳಿ ನೀಡುವಾಗ ವಾರಸುದಾರರು, ಸಂಸ್ಥಾನದ ಖಜಾನೆಗೆ ತಾವು ತಮ್ಮ ಹಳ್ಳಿಗಳಿಂದ ಪಡೆಯುತ್ತಿದ್ದ ಒಂದು ವರ್ಷದ ಜಹಗೀರ ಆದಾಯವನ್ನು 'ನಜರಾಣಾ' ಅಂದರೆ ಕಾಣಿಕೆರೂಪದಲ್ಲಿ ಸಲ್ಲಿಸುವ ನಿಯಮವಿದ್ದಿತು. ಗುಡಗುಂಟಿ ಸಂಸ್ಥಾನದ ಕಡ್ಲೋಣಿ ಮತ್ತು ಅಮರಾವತಿ ಜಹಗೀರು ಗ್ರಾಮಗಳ ಜಹಗೀರುದಾರರಾದ ಶ್ರೀನಿವಾಸರಾಯ ದೇಶಪಾಂಡೆಯವರು ತೀರಿಕೊಂಡಾಗ, ಅವರ ಮಗನ ಹೆಸರಿನಲ್ಲಿ ಜಹಗೀರನ್ನು ಮಂಜೂರು ಮಾಡಲು ಒಂದು ವರ್ಷದ ಆದಾಯವನ್ನು (ಅಂದು ಆ ಆದಾಯ ಸುಮಾರು ಸಾವಿರದ ಐದುನೂರು ರೂಪಾಯಿಗಳು) ಒಂದೇ ಕಂತಿನಲ್ಲಿ ಕಟ್ಟಲು ಸಂಸ್ಥಾನದ ನಾಜಿಮ್ ಅಂದರೆ ಕಂದಾಯ ವಿಭಾಗದ ಮುಖ್ಯಸ್ಥ ಆದೇಶ ನೀಡಿದನು. ಆ ಸಂದರ್ಭದಲ್ಲಿ ಬರಗಾಲವಿದ್ದ ಕಾರಣ ಈ ಆದೇಶದಿಂದ ತೊಂದರೆಗೀಡಾದ ವಾರಸುದಾರರು ಇಲ್ಲಿಯ ದಿವಾನಿ ನ್ಯಾಯಾಲಯದ ಮೊರೆಹೋದರು. ನ್ಯಾಯಾಲಯ ಸಂಸ್ಥಾನದ ಆದಾಯದ ಹಿತದೃಷ್ಟಿಯಿಂದ ಸಂಸ್ಥಾನದ ಪರವಾಗಿ ನ್ಯಾಯ ನೀಡಿತು. ಇದರಿಂದ ಕಂಗಾಲಾದ ವಾರಸುದಾರರು ನ್ಯಾಯಕ್ಕಾಗಿ ಹೈದ್ರಾಬಾದಿನ ನ್ಯಾಯಾಲಯಕ್ಕೆ ಮೇಲ್ಮನವಿ (Appeal) ಸಲ್ಲಿಸಲು ಸಜ್ಜಾದರು.

ಆಗ ಗುಡಗುಂಟಿ ರಾಮಾಚಾರ್ಯರು (ಕ್ರಿ.ಶ.೧೮೯೪-೧೯೫೩) ಹೈದ್ರಾಬಾದ್‌ನಲ್ಲಿ ವಕೀಲರಾಗಿದ್ದರು. ಇವರು ಕೈಗೆತ್ತಿಕೊಳ್ಳುತ್ತಿದ್ದ ಪ್ರಕರಣಗಳು ಪ್ರತಿಪಾಲಿತರ ನ್ಯಾಯ ವಿಚಾರಣೆ(ಕೋರ್ಟ್ ಆಫ್ ವಾರ್ಡ್ಸ್)ಗಳಿಗೆ ಅಂದರೆ ಅಲ್ಪವಯಸ್ಕರ ಆಸ್ತಿಯ ನಿರ್ವಹಣೆಗೆ ಸಂಬಂಧಿಸಿದವುಗಳಾಗಿರುತ್ತಿದ್ದವು. ಇಲ್ಲಿಯ ಮೊಕದ್ದಮೆಗಳು ನವಾಬರ, ಜಹಗೀರುದಾರರ, ಇನಾಮುದಾರರ, ದೇಶಪಾಂಡೆ, ದೇಶಮುಖರುಗಳ ಆಸ್ತಿಗಳಿಗೆ ಸಂಬಂಧಿಸಿರುತ್ತಿದ್ದವು. ಇಲ್ಲಿ ವಾರಸುದಾರರು ಅಲ್ಪವಯಸ್ಕರಾಗಿದ್ದು, ಜಹಗೀರುಗಳ ಆಡಳಿತ ಆದಾಯದ ನಿರ್ವಹಣೆ ಹಾಗೂ ಉಸ್ತುವಾರಿಯ ಕುರಿತಾಗಿ ಕೋರ್ಟ್ ಆಫ್ ವಾರ್ಡ್ಸ್‌ನಲ್ಲಿ ಗುಡಗುಂಟಿ ರಾಮಾಚಾರ್ಯರು ವಾರಸುದಾರರ ಪರವಾಗಿ ಸಂಸ್ಥಾನದ ಹುಕುಮಿನ ವಿರುದ್ಧ ಮೇಲ್ಮನವಿ ಸಲ್ಲಿಸಿದಾಗ, ಮೇಲ್ಮನವಿ ತೀರ್ಮಾನವಾಗಿ ಒಂದು ವರ್ಷದ ಆದಾಯದ ಹಣವನ್ನು (ಏಕ್ ಸಾಲಾ ನಜರಾಣಾ) ಹನ್ನೊಂದು ವಾರ್ಷಿಕ ಕಂತುಗಳಲ್ಲಿ ಕಟ್ಟುವ

ಅವಕಾಶ ನೀಡುವಂತೆ ಆದೇಶವಾಯಿತು. ಆಗ ಗುಡಗುಂಟಿ ಸಂಸ್ಥಾನಿಕರು ಬಾಯಿ ಮುಚ್ಚಿಕೊಂಡು ಸುಮ್ಮನಾದರು.

ಗುಡಗುಂಟಿ ರಾಮಾಚಾರ್ಯರ ಪ್ರಭಾವದಿಂದ ಚಕಿತರಾದ ಗುಡಗುಂಟಿ ಸಂಸ್ಥಾನದ ರಾಜರಾದ ಶ್ರೀ ರಾಜಾ ತಿಪ್ಪರಾಜಾ ಜಡಿಸೋಮಪ್ಪನಾಯಕರು ತಮ್ಮ ಸಂಸ್ಥಾನದ ಅನೇಕ ವ್ಯವಹಾರ ಹಾಗೂ ವಿವಾದಗಳ ಸಂದರ್ಭದಲ್ಲಿ ಇವರಿಗೆ ಮೊರೆಹೋದರು. ಆಗಾಗ ರಾಮಾಚಾರ್ಯರು ಗುಡಗುಂಟಿ ಸಂಸ್ಥಾನಕ್ಕೆ ಬಂದು ಹೋಗುತ್ತಿದ್ದರು.

ಕೆಲವು ಸಲ ಈ ಸಂಸ್ಥಾನದಲ್ಲಿ ಜಹಗೀರುದಾರರು ಬೇಜವಾಬ್ದಾರಿಯಿಂದ, ಸ್ವೇಚ್ಛಾ ಚಾರಿಗಳಾಗಿ, ವಿಷಯಲೋಲುಪರಾಗಿ ಆದಾಯವನ್ನು ಸೂರೆಮಾಡುತ್ತಿದ್ದಾರೆಂಬ ದೂರು ಬಂದಾಗ ಅಥವಾ ಜಹಗೀರದ ಆಡಳಿತವು ಹದಗೆಟ್ಟಿದೆ ಎಂದು ತಿಳಿದುಬಂದಾಗ ಈ ಸಂಸ್ಥಾನಿಕರುಗಳು ಗುಡಗುಂಟಿ ರಾಮಾಚಾರ್ಯರ ಮೂಲಕ ಹೈದ್ರಾಬಾದಿನ ಕೋರ್ಟ್ ಆಫ್ ವಾರ್ಡ್ಸ್‌ಗೆ ಮೇಲ್ಮನವಿಗಳನ್ನು ಸಲ್ಲಿಸಿಕೊಂಡು ನ್ಯಾಯವನ್ನು ಪಡೆಯುತ್ತಿದ್ದರು.

ಗುಡಗುಂಟಿ ಸಂಸ್ಥಾನದ ನ್ಯಾಯಾಲಯದ ಸಿವಿಲ್ ವಿಭಾಗದಲ್ಲಿ ಫಸಲಿ ೧೩೪೪ (ಕ್ರಿ.ಶ.೧೯೩೪)ರಲ್ಲಿ ಒಂದು ಮೊಕದ್ದಮೆ ನಡೆಯಿತು. ಇಲ್ಲಿ ಗೆಜ್ಜಲಗಟ್ಟಾದ ಜಮೀನ್ದಾರ ರಾದ ಶ್ರೀ ವೆಂಕಟರಾವ್ ದೇಸಾಯಿಯವರು ಗುಡಗುಂಟಿ ಸಂಸ್ಥಾನದ ರಾಜಗುರುಗಳ ಮಠಕ್ಕೆ ನೀಡಬೇಕಾದ ರಾಜಗುರುಕಾಣಿಕೆಯನ್ನು ಅನೇಕ ವರ್ಷಗಳಿಂದ ನೀಡಿದ್ದಿಲ್ಲ. ಆಗ ರಾಜಗುರುಗಳಾದ ಶ್ರೀ ರುದ್ರಸ್ವಾಮಿ ರಾಜಗುರುಗಳವರು ಶ್ರೀ ಹಸನ್ ಇಜಾಮಿ ವಕೀಲರು ಗಲಗ್ ಇವರ ಮುಖಾಂತರ ಶ್ರೀ ಖೈರುದ್ದೀನ್ ಮುನ್ಸುಫ್ ಸಾಹೇಬರವರಿಗೆ ದೂರು ಸಲ್ಲಿಸಿದರು. ಆಗ ಸಿವಿಲ್ ನ್ಯಾಯಾಲಯ ಗೆಜ್ಜಲಗಟ್ಟಾದ ಜಮೀನುದಾರರಾದ ಶ್ರೀ ವೆಂಕಟರಾವ್ ದೇಸಾಯಿಯವರಿಗೆ ಒಂದು ವಾರದೊಳಗಾಗಿ ರಾಜಗುರುಮಠಕ್ಕೆ ಕಾಣಿಕೆಯನ್ನು ನೀಡದಿದ್ದರೆ ಅವರ ಜಮೀನ್ದಾರಿಕೆಯನ್ನು ರದ್ದುಗೊಳಿಸುವುದಾಗಿ ಆಜ್ಞೆ ಮಾಡಿತ್ತು.

ನಂತರದಲ್ಲಿ ಹಣಕ್ಕೆ ಸಂಬಂಧಿಸಿದಂತೆ ಇನ್ನೊಂದು ಮೊಕದ್ದಮೆ ಹೂಡಲ್ಪಟ್ಟಿತು. ಅದೇನೆಂದರೆ, ಶ್ರೀಮತಿ ರತ್ನಾಬಾಯಿ ಎಂಬ ಮಹಿಳೆಗೆ ಶ್ರೀ ಅಲಿಹುಸೇನ ತಂದೆ ಮಹ್ಮದ್ ಖಾಜಾಸಾಬ ಎಂಬುವರು ಒಂದುಸಾವಿರ ರೂಪಾಯಿಗಳನ್ನು ಆ ಮಹಿಳೆಯ ಮನೆಯ ಅಡಚಣೆಯ ಸಲುವಾಗಿ ನೀಡಿದ್ದರು. ಆದರೆ ರತ್ನಾಬಾಯಿ ಬಹಳ ದಿನಗಳಾದರೂ ಆ ಹಣವನ್ನು ಮರಳಿ ನೀಡಲಿಲ್ಲವಾದ್ದರಿಂದ ಶ್ರೀ ಅಲಿಹುಸೇನರವರು ನ್ಯಾಯಾಲಯದ ಮೊರೆಹೊಕ್ಕಾಗ ರತ್ನಾಬಾಯಿಯವರು ಹಣವನ್ನು ಮರಳಿ ಶ್ರೀ ಅಲಿಹುಸೇನರವರಿಗೆ ಮರಳಿಸದಿದ್ದರೆ ಶಿಕ್ಷೆಯನ್ನು ನೀಡುವುದಾಗಿ ಎಚ್ಚರಿಕೆಯ ಆದೇಶವನ್ನು ನೀಡಿತ್ತು. ಇಂಥ ಅನೇಕ ರೀತಿಯ ಮೊಕದ್ದಮೆಗಳು ಈ ವಿಭಾಗದಲ್ಲಿ ಇತ್ಯರ್ಥವಾಗಿವೆ. ಇಲ್ಲಿಯೂ ಆಗಿನ ದಿವಾನಿ ಪ್ರಕ್ರಿಯೆ ಸಂಹಿತೆ (Civil Procedure Code) ಪ್ರಕಾರ ನ್ಯಾಯ ನಿರ್ಣಯಿಸಲ್ಪಡು ತ್ತಿತ್ತು.

ಈ ರೀತಿ ಗುಡಗುಂಟಿ ಸಂಸ್ಥಾನದಲ್ಲಿ ಫೌಜದಾರಿ ಮತ್ತು ದಿವಾನಿ ಪ್ರಕರಣಗಳು ಇತ್ಯರ್ಥವಾಗುತ್ತಿದ್ದವು. ಈ ನ್ಯಾಯಾಲಯಕ್ಕೆ ಹತ್ತುತಿಂಗಳುಗಳ ಕಾಲ ಶಿಕ್ಷೆನೀಡುವ ಅಧಿಕಾರವಿತ್ತು ಹಾಗೂ ಇಪ್ಪತ್ತುಸಾವಿರ ರೂಪಾಯಿಗಳ ಮೌಲ್ಯದ ದಾವೆಯನ್ನು ಇಲ್ಲಿ ಹೂಡಬಹುದಾಗಿತ್ತು.

ಶಿಕ್ಷೆಗೊಳಗಾದ ವ್ಯಕ್ತಿಯನ್ನು ಜೈಲಿನಲ್ಲಿ ಬಂಧಿಸಿಡುತ್ತಿದ್ದರು. ಅಂದು ಜೈಲು ಸಹಾ ಇತ್ತು. ಅದು ಇಂದು ಪೊಲೀಸ್‌ಠಾಣೆಯಾಗಿ ಪರಿವರ್ತನೆಗೊಂಡಿದೆ. ಅಂದು ಮುನ್ಸಿಫ್ ನೀಡಿದ ತೀರ್ಮಾನ ಅಥವಾ ನಿರ್ಣಯ ರಾಜನ ಸಹಿಗಾಗಿ ಬರುತ್ತಿತ್ತು. ಆಗ ಆ ನಿರ್ಣಯ ರಾಜನಿಗೆ ಸಮಂಜಸವೆನಿಸದಿದ್ದರೆ, ಇಲ್ಲವೆ ನೀಡಿದ ಶಿಕ್ಷೆ ಮತ್ತು ದಂಡ ಕಡಿಮೆ ಅಥವಾ ಹೆಚ್ಚು ಎಂದು ಕಂಡುಬಂದಲ್ಲಿ ರಾಜ ಮತ್ತು ಮಂತ್ರಿಗಳು ಪುನಃ ಆ ಪ್ರಕರಣವನ್ನು ನ್ಯಾಯಾಲಯದಲ್ಲಿ ತೀರ್ಮಾನಿಸುವಂತೆ ವಿನಂತಿಸಿಕೊಳ್ಳುತ್ತಿದ್ದರು. ಸಂಬಂಧಿಸಿದ ಕಾಗದ ಪತ್ರಗಳನ್ನು, ಸಾಕ್ಷಿಗಳನ್ನು ಹಾಜರುಪಡಿಸಿ ನ್ಯಾಯತೀರ್ಮಾನವಾಗುವಂತೆ ನೋಡಿಕೊಳ್ಳುತ್ತಿದ್ದರು. ಕೆಲವು ಸಲ ಕಠಿಣವಾದ ಶಿಕ್ಷೆಯನ್ನು ನೀಡುವಾಗ ಅನುಕಂಪ ಆಧಾರಿತ ಮಾರ್ಗಗಳನ್ನು ಅನುಸರಿಸುತ್ತಿದ್ದರು.

ಈ ನ್ಯಾಯಾಲಯದ ಮುನ್ಸಿಫ್‌ರನ್ನು ನೇಮಿಸುವ ಅಧಿಕಾರ ಹೈದ್ರಾಬಾದ್ ನಿಜಾಮನಿಗೆ ಇತ್ತು. ಈ ಮುನ್ಸಿಫ್‌ರುಗಳ ಮುಖ್ಯ ಕರ್ತವ್ಯವೆಂದರೆ ತಮ್ಮ ಎದುರಿಗೆ ವಿಚಾರಣೆಗೆ ಬಂದ ವಿವಾದಗಳಿಗೆ ಸಂಬಂಧಿಸಿದಂತೆ ಪಕ್ಷಗಳ ಹಕ್ಕುಬಾಧ್ಯತೆಗಳನ್ನು ನಿರ್ಣಯಿಸಿ ಹುಕುಂನಾಮೆ ನೀಡುವುದಾಗಿತ್ತು. ಈ ಸಂಸ್ಥಾನದ ನ್ಯಾಯಾಲಯದಲ್ಲಿ ಮುನ್ಸಿಫ್‌ರುಗಳಾಗಿ ಕೆಲಸ ನಿರ್ವಹಿಸಿದವರಲ್ಲಿ,

೧. ಜನಾಬ್ ಶ್ರೀ ಸಯ್ಯದ್ ವಲಿಯುದ್ದೀನ್ ಹೈದ್ರಾಬಾದ್

೨. ಜನಾಬ್ ಶ್ರೀ ಸಯ್ಯದ್ ಖೈರುದ್ದೀನ್ ಹೈದ್ರಾಬಾದ್

೩. ಶ್ರೀ ಚುನ್ನಿಲಾಲ್ ಮಾರ್‍ವಾಡಿ ಗುಜರಾತ್

ಮುಂತಾದವರು ಪ್ರಮುಖರು. ಇವರಿಗೂ ಹಾಗೂ ಈ ನ್ಯಾಯಾಲಯದಲ್ಲಿ ಕೆಲಸ ನಿರ್ವಹಿಸುವ ಸಿಬ್ಬಂದಿಗೂ ಸಂಬಳವನ್ನು ಈ ಸಂಸ್ಥಾನದ ಕಂದಾಯ ವಿಭಾಗದಿಂದ ನೀಡುತ್ತಿದ್ದರು. ಸಂಬಳ ನೀಡುವವರಿಗೆ 'Peshkash' ಎಂದು ಕರೆಯುತ್ತಿದ್ದರು. ಮುನ್ಸಿಫ್‌ರು ಒಳ್ಳೆಯ ಪ್ರಾಮಾಣಿಕರು ಹಾಗೂ ಸತ್ಯಸಂಧತೆಯುಳ್ಳವರಾಗಿರಬೇಕಾಗಿರುತ್ತಿದ್ದಿತು. ಇವರು ನ್ಯಾಯಕ್ಕೆ ವಿರುದ್ಧವಾದ ತೀರ್ಪು ನೀಡಿದರೆ, ಇಲ್ಲವೇ ಜನರ ಹಿತರಕ್ಷಣೆಗೆ ಕುಂದುತರುವಂಥವರುಗಳಾಗಿದ್ದರೆ ಅಂಥವರನ್ನು ರಾಜರೇ ಸ್ವತಃ ಹೈದ್ರಾಬಾದ್ ನಿಜಾಮರಿಗೆ ದೂರನ್ನು ಸಲ್ಲಿಸಿ ಅವರನ್ನು ವರ್ಗಾಯಿಸುತ್ತಿದ್ದರು. ಇವರ ಅಧಿಕಾರಾವಧಿ ಮೂರು ವರ್ಷಗಳಾಗಿತ್ತು. ಇವರಿಗೆ ವಾಸಿಸಲು ಸಂಸ್ಥಾನಿಕರೇ ಒಂದು ವಿಶಾಲ ಮನೆಯನ್ನು ನೀಡಿದ್ದರು. ಇಂದು ಅದು ಸಾರ್ವಜನಿಕ ಹೋಟೆಲ್ ಆಗಿ ಪರಿವರ್ತಿತವಾಗಿದೆ.



ಗುಡಗುಂಟಿ ಸಂಸ್ಥಾನದ ಅರಮನೆ



ಗುಡಗುಂಟಿ ಗುಡ್ಡದ ಮೇಲಿನ ಹಳೇದರ್ಬಾರದಲ್ಲಿದ್ದ ಪಂಚರಕಟ್ಟೆ



ಪ್ರಾರಂಭದಲ್ಲಿ ನ್ಯಾಯತೀರ್ಮಾನವಾಗುತ್ತಿದ್ದ ಅದಾಲತ್‌ನ ಸಭಾಂಗಣ



ನಂತರದಲ್ಲಿ ಬದಲಾವಣೆಗೊಂಡ ಅದಾಲತ್‌ನ ಸಭಾಂಗಣ



ಅಂದು ಖೈದಿಗಳನ್ನು ಬಂಧಿಸಿಡಲಾಗುತ್ತಿದ್ದ ಜೈಲು
ಇಂದು ಸರ್ಕಾರಿ ಪೊಲೀಸ್ ಠಾಣೆ



ಅಂದಿನ ಮುನ್ಸಿಫರ್ ಮನೆ



ಗುಡಗುಂಟಿ ರಾಮಾಚಾರ್ಯರು



ಸಂಗಪ್ಪ ಪಟ್ಟಣಶೆಟ್ಟಿ, ವಕೀಲರು, ಗುಡಗುಂಟಿ



ಗುಡಗುಂಟಿ ಸಂಸ್ಥಾನದ ಕಂದಾಯ ವಿಭಾಗ

ಗುಡಗುಂಟಿ ನ್ಯಾಯಾಲಯದಲ್ಲಿ ನುರಿತ ವಕೀಲರಿದ್ದರು. ಅವರುಗಳೆಂದರೆ,

೧. ಶ್ರೀ ದಾದಾಜಿರಾವ್ ವಕೀಲರು, ಗುಡಗುಂಟಿ

೨. ಶ್ರೀ ಮಹ್ಮದ್ ಖಾಜಾಸಾಬ್ ವಕೀಲರು, ಗುಡಗುಂಟಿ

೩. ಶ್ರೀ ಹಸನ್ ಇಜಾಮಿ ವಕೀಲರು, ಗುಡಗುಂಟಿ

೪. ಶ್ರೀ ಶ್ರೀನಿವಾಸರಾವ್ ವಕೀಲರು, ಗುಡಗುಂಟಿ

೫. ಶ್ರೀ ಸಂಗಪ್ಪ ಪಟ್ಟಣಶೆಟ್ಟಿ ವಕೀಲರು, ಗುಡಗುಂಟಿ
೬. ಶ್ರೀ ಬಸವನಗೌಡ ವಕೀಲರು, ಲಿಂಗಸುಗೂರು
೭. ಶ್ರೀ ಕುಪ್ಪೇರಾವ್ ವಕೀಲರು, ಲಿಂಗಸುಗೂರು
೮. ಶ್ರೀ ಭೋಗೇಂದ್ರರಾವ್ ಮುತಾಲಿಕ್ ವಕೀಲರು, ಲಿಂಗಸುಗೂರು
೯. ಶ್ರೀ ವೆಂಕಟರಾವ್ ವಕೀಲರು, ಕಾಳಾಪುರ
೧೦. ಶ್ರೀ ಜೀವನರಾವ್ ವಕೀಲರು, ಲಿಂಗಸುಗೂರು
೧೧. ಶ್ರೀ ಅಮೀನ್‌ಖಾನ್ ವಕೀಲರು, ಗುಂತಗೋಳ.

ಇವರಲ್ಲಿ ಶ್ರೀ ಸಂಗಪ್ಪ ಪಟ್ಟಣಶೆಟ್ಟಿ (ಕ್ರಿ.ಶ.೧೮೯೬-೧೯೭೮) ವಕೀಲರು ಗುಡಗುಂಟಿ ಇವರು ಕಾನೂನಿನಲ್ಲಿ ಉತ್ತಮ ಪಾಂಡಿತ್ಯ ಪಡೆದುದಲ್ಲದೇ ಅಪಾರ ಜನಪ್ರಿಯತೆ ಗಳಿಸಿದ್ದರು. ತಮ್ಮ ಶಿಕ್ಷಣವನ್ನು ಹೈದ್ರಾಬಾದ್‌ನಲ್ಲಿ ಮುಗಿಸಿದ ಇವರು ಗುಡಗುಂಟಿ ರಾಮಾಚಾರ್ಯರ ನ್ಯಾಯಾಂಗದ ಗರಡಿಮನೆಯಲ್ಲಿ ಪಳಗಿದವರು.

ಗುಡಗುಂಟಿ ಸಂಸ್ಥಾನಿಕರ ನ್ಯಾಯಾಡಳಿತವು ಆಯಾ ಜನಾಂಗದ ತಮ್ಮ ಪೂರ್ವಜರು ಮಾಡಿದ ಕಟ್ಟಳೆ, ಆಚಾರ, ಪದ್ಧತಿ, ನಡಾವಳಿಗಳೊಂದಿಗೆ ಪ್ರಾರಂಭವಾಗಿದ್ದರೂ ಇಲ್ಲಿಯ ಪಂಚರು ಎಂದೂ ಅನ್ಯಾಯಗೈಯ್ಯುತ್ತಿದ್ದಿಲ್ಲ. ತದನಂತರದಲ್ಲಿ ಮೊಕದ್ದಮೆಗಳನ್ನು ಫೌಜದಾರಿ ಹಾಗೂ ದಿವಾನಿನ್ಯಾಯಗಳೆಂದು ವಿಭಾಗಿಸಿ ತೀರ್ಮಾನಿಸುವ ನ್ಯಾಯಾಲಯವನ್ನು ಸ್ಥಾಪಿಸಿ ಅದೊಂದು ಸ್ವತಂತ್ರ ಘಟಕವೆಂಬಂತೆ ಕಾರ್ಯನಿರ್ವಹಿಸಲು ಅನುವು ಮಾಡಿ ಕೊಟ್ಟರು. ಕಾನೂನಿನ ದೃಷ್ಟಿಯಲ್ಲಿ ಸರ್ವರೂ ಸಮಾನರೆಂಬ ತತ್ವವನ್ನು ಪಾಲಿಸಿದರು. ಸಂಸ್ಥಾನದಲ್ಲಿ ಶಾಂತಿ, ಸುವ್ಯವಸ್ಥೆಯನ್ನು ಕಾಪಾಡಿದರು. ನ್ಯಾಯವಿಚಾರಣೆಯಲ್ಲಿ ವಿಳಂಬಕ್ಕೆ ಅವಕಾಶ ನೀಡದೆ ಇಂದಿನ ನ್ಯಾಯಾಡಳಿತಕ್ಕೆ ಗುಡಗುಂಟಿ ಸಂಸ್ಥಾನಿಕರು ದಾರಿದೀಪವಾಗಿದ್ದಾರೆ ಎಂದರೆ ಅತಿಶಯೋಕ್ತಿಯೆನಿಸಲಾರದು.

## ಕ್ಷೇತ್ರಕಾರ್ಯದಲ್ಲಿ ಸಂದರ್ಶಿಸಿದ ವ್ಯಕ್ತಿಗಳು

೧. ಶ್ರೀ ಬಸವರಾಜಪ್ಪ ಜಾಗಟಕಲ್, ಗುರುಗುಂಟಾ, ವಿಶ್ರಾಂತ, ೭೦ ವರ್ಷ, ೦೧.೯.೨೦೦೨
೨. ಶ್ರೀ ವೆಂಕಟರಾವ್ ಮುಜುಮದಾರ್, ಗುರುಗುಂಟಾ, ಜನಪ್ರತಿನಿಧಿ, ೬೫ ವರ್ಷ, ೦೮.೦೯.೨೦೦೨
೩. ಶ್ರೀ ಉಮರ್‌ಬಿನ್ ಅಹ್ಮದ್, ಲಿಂಗಸುಗೂರು, ವಿಶ್ರಾಂತ ಶಿಕ್ಷಣಾಧಿಕಾರಿಗಳು, ೭೬ ವರ್ಷ, ೧೫.೦೯.೨೦೦೨
೪. ಶ್ರೀ ಸಯ್ಯದ್ ಫಜಲ್‌ಹುಸೇನ್ ಖಾಜಿ, ಗುರುಗುಂಟಾ, ವಿಶ್ರಾಂತ, ೮೨ ವರ್ಷ, ೦೬.೧೦.೨೦೦೨
೫. ಶ್ರೀ ದುರಗಪ್ಪ ವಾಲ್ಮೀಕಿ, ರಾಯದುರ್ಗ, ವ್ಯವಸಾಯ, ೬೫ ವರ್ಷ, ೦೬.೧೦.೨೦೦೨

## ಗ್ರಂಥಋಣ


೧. ಕಪಟರಾಳ ಕೃಷ್ಣರಾವ್, ೧೯೭೭, ಸುರಪುರ ಸಂಸ್ಥಾನ: ಇತಿಹಾಸ, ಮಂಜುನಾಥ ಪ್ರಕಾಶನ, ಬೆಂಗಳೂರು
೨. ಹರ್ತಿಕೋಟೆ ವೀರೇಂದ್ರಸಿಂಹ, ತೇಜಸ್ವಿ ಕಟ್ಟೀಮನಿ (ಸಂ), ೨೦೦೨, ಘಟ್ಟಿಹೊಸಹಳ್ಳಿ ಗಟ್ಟಿಗ (ಸ್ಮರಣಸಂಪುಟ), ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ
೩. K.Abhishankar (Ed), 1970, **Mysore State Gazetteer, Raichur District**, Bangalore

೧೧

# ಕನಕಗಿರಿ ಪಾಳೆಯಗಾರರ ನ್ಯಾಯಾಡಳಿತ

ಡಾ. ಎಂ. ಕೆ. ದುರುಗಪ್ಪ

ಕೊಪ್ಪಳ ಜಿಲ್ಲೆ, ಗಂಗಾವತಿ ತಾಲೂಕಿನ ಕನಕಗಿರಿ ಒಂದು ಚಾರಿತ್ರಿಕ ಸ್ಥಳ. ಮೌರ್ಯದೊರೆ ಅಶೋಕನ ದಕ್ಷಿಣಪ್ರಾಂತ್ಯವಾಗಿದ್ದ ಹಿಂದಿನ ಸುವರ್ಣಗಿರಿಯೇ ಇಂದಿನ ಕನಕಗಿರಿ. ಕ್ರಿ.ಶ.೧೫೩೬-೧೫೩೭ರಲ್ಲಿ ಪರಸಪ್ಪ ಉಡಿಚನಾಯಕ ಎಂಬುವನು ಇಲ್ಲಿ ಪಾಳೆಗಾರಿಕೆಯನ್ನು ಸ್ಥಾಪಿಸಿದ. ೧೯೪೮ರ ವರೆಗೆ ಒಟ್ಟು ಹನ್ನೆರಡು ಅರಸರು ಈ ಸಂಸ್ಥಾನವನ್ನು ಆಳಿದರು. ವಿಜಯನಗರ ಅರಸರ ಅತ್ಯಂತ ಆಪ್ತ ಮಾಂಡಲಿಕರಲ್ಲೊಬ್ಬ ರಾಗಿದ್ದ ಕನಕಗಿರಿ ನಾಯಕರು ವಿಜಯನಗರದ ಉತ್ತರ ಭಾಗದಲ್ಲಿ ಅದರ ರಕ್ಷಾಕೋಟೆಯಂತಿದ್ದರು. ವಿಜಯನಗರೋತ್ತರ ಕಾಲದ ಆದಿಲ್‌ಷಾಹಿಗಳ, ಹೈದರಾಲಿ, ಟಿಪ್ಪುಸುಲ್ತಾನ ಮತ್ತು ಮರಾಠರ ಅಧೀನಪ್ರಾಂತ್ಯವಾಗಿ ಮುಂದುವರೆದು ೧೮೫೯ರ ನಂತರ ಹೈದ್ರಾಬಾದಿನ ನಿಜಾಮನ ಹಿಡಿತಕ್ಕೆ ಒಳಪಟ್ಟಿತು. ನಂತರ ಈ ನಾಯಕರನ್ನು ದುರ್ಬಲಗೊಳಿಸುವುದಕ್ಕಾಗಿ ನಿಜಾಮನು ಈ ಸಂಸ್ಥಾನವನ್ನು ಕನಕಗಿರಿಯಿಂದ ಹುಲಿಹೈದರ್‌ಗೆ ವರ್ಗಾಯಿಸಿ, ಹದಿನಾರು ಹಳ್ಳಿಗಳ ಜಾಗೀರು ಹಾಕಿಕೊಟ್ಟನು. ಪೊಲೀಸ್ ಕಾರ್ಯಾಚರಣೆ ಮೂಲಕ ಹೈದ್ರಾಬಾದ್ ಸಂಸ್ಥಾನವನ್ನು ೧೯೪೮ರಲ್ಲಿ ಭಾರತದೊಳಗೆ ಸೇರಿಸಿಕೊಳ್ಳಲಾಯಿತು. ೧೯೫೬ರಲ್ಲಿ ಮೈಸೂರು ರಾಜ್ಯ ರಚನೆಯಾಯಿತು ಮತ್ತು ಜಾಗೀರುಗಳೆಲ್ಲಾ ರದ್ದಾದ್ದರಿಂದ ಈ ಸಂಸ್ಥಾನಿಕರು ತಮ್ಮ ಅಧಿಕಾರವನ್ನು ಕಳೆದುಕೊಂಡರು.

ವಿಜಯನಗರ ಸಾಮ್ರಾಜ್ಯ ಅನೇಕ ಸಂಸ್ಥಾನಗಳ ಅಮರನಾಯಕರಿಂದ ಕೂಡಿತ್ತು. ಅವರೆಲ್ಲಾ ವಿಜಯನಗರ ಅರಸರಿಗೆ ಋಣಿಗಳಾಗಿದ್ದರಲ್ಲದೆ ರಕ್ಷಕರೂ ಆಗಿದ್ದರು. ೧೫೬೫ರ ರಕ್ಕಸಗಿ-ತಂಗಡಿ ಕದನದಲ್ಲಿ ವಿಜಯನಗರ ಹೀನಾಯ ಸೋಲನ್ನು ಅನುಭವಿಸಿತು. ನಂತರ ಅಮರನಾಯಕರೆಲ್ಲ ಸ್ವಾತಂತ್ರ್ಯ ಘೋಷಿಸಿಕೊಂಡರು. ಕೆಲವರು ವಿಜಯನಗರದ ಅರಸರಿಗೆ ನಿಷ್ಠೆಯನ್ನು ಹೊಂದಿದ್ದರೂ, ಅಧಿಕಾರಕ್ಕಾಗಿ ನಡೆಯುತ್ತಿದ್ದ ನಿರಂತರ ಯುದ್ಧಗಳ ನಡುವೆ ಅದು ನೆಪಮಾತ್ರವಾಗಿ ಕಂಡುಬಂದಿತು. ವಿಜಯನಗರೋತ್ತರ ಕಾಲದಲ್ಲಿ ಕಂಡುಬರುವ ಅನೇಕ ಬೇಡನಾಯಕರ ಸಂಸ್ಥಾನಗಳಲ್ಲಿ ಕನಕಗಿರಿಯೂ

ಒಂದಾಗಿದೆ. ಈ ನಾಯಕರು ವಿಜಯನಗರ ಅರಸರ ಕಾಲದ ಸಂಸ್ಕೃತಿಯನ್ನು ಮುಂದುವರೆಸಿದರಲ್ಲದೆ, ಆಡಳಿತ ಅಥವಾ ಯಾವುದೇ ವಿಷಯದಲ್ಲಿ ವಿಜಯನಗರ ಅರಸರ ಅನುಕರಣೀಯರಾಗಿದ್ದರು. ಇದಕ್ಕೆ ಕನಕಗಿರಿಯಲ್ಲಿಗುವ ಸ್ಮಾರಕಗಳೇ ಸಾಕ್ಷಿಯಾಗಿ ನಿಂತಿವೆ.

ದುಷ್ಟನಿಗ್ರಹ ಹಾಗೂ ಶಿಷ್ಟಪರಿಪಾಲನೆ ವಿಜಯನಗರ ಅರಸರ ನ್ಯಾಯಾಡಳಿತದ ಮುಖ್ಯ ಗುರಿಯಾಗಿತ್ತು. ವಿಜಯನಗರೋತ್ತರಕಾಲೀನ ಸಂಸ್ಥಾನಿಕರೆಲ್ಲರೂ ಇದೇ ನೀತಿಯನ್ನು ಮುಂದುವರೆಸಿದರು. ಸಂಸ್ಥಾನದ ಕೇಂದ್ರಸ್ಥಳವೇ ಮುಖ್ಯ ನ್ಯಾಯಸ್ಥಳವಾಗಿತ್ತು. ಸಂಸ್ಥಾನದ ಒಡೆಯನೇ ಅಂತಿಮ ನ್ಯಾಯಾಧೀಶ. ಧರ್ಮಶಾಸ್ತ್ರ ಮತ್ತು ಸಾಮಾಜಿಕ ಕುಲಾಚಾರಗಳನ್ನು ಗಮನದಲ್ಲಿಟ್ಟುಕೊಂಡು ಅರಸನು ನ್ಯಾಯತೀರ್ಮಾನವನ್ನು ಮಾಡುತ್ತಿದ್ದನು. ಈ ಸಂದರ್ಭದಲ್ಲಿ ರಾಜನು ಪುರೋಹಿತರಿಂದ ಕೆಲವೊಂದು ಸಲಹೆಗಳನ್ನು ಪಡೆದುಕೊಳ್ಳುತ್ತಿದ್ದನು. ಕುಲಾಚಾರ ನ್ಯಾಯವಿಧಾನ ಪದ್ಧತಿಯು ಹೆಚ್ಚು ಜನಪ್ರಿಯವಾಗಿತ್ತು. ಸಂಚಾರಿ ನ್ಯಾಯದಾನ ಪದ್ಧತಿಯನ್ನು ಕನಕಗಿರಿ ದೊರೆಗಳು ಸಂದರ್ಭಾನುಸಾರ ಅನುಸರಿಸುತ್ತಿದ್ದರೆಂದು ಹೇಳಬಹುದು. ಇಂತಹ ಸಂದರ್ಭಗಳಲ್ಲಿ ಸಕಲ ವ್ಯವಸ್ಥೆಯನ್ನು ಕಟ್ಟೆಮನೆಯ ಮುಖ್ಯಾಧಿಕಾರಿಗಳು ಮಾಡಬೇಕಾಗಿತ್ತು. ಗುರಿಕಾರನು ರಾಜನ ಕಚೇರಿಯ ಮುಖ್ಯಸ್ಥನಾಗಿದ್ದನು. ಅಲ್ಲದೆ ಸಂಸ್ಥಾನದ ನ್ಯಾಯವ್ಯವಸ್ಥೆಯಲ್ಲಿ ಮುಖ್ಯಪಾತ್ರವನ್ನು ವಹಿಸಿದ್ದನು. ದೊರೆಯು ನ್ಯಾಯತೀರ್ಮಾನದಂತಹ ಕೆಲಸವನ್ನು ಈ ಗುರಿಕಾರನ ಮೂಲಕವೇ ನೆರವೇರಿಸುತ್ತಿದ್ದನು. ಗುರಿಕಾರನು ಸರದಾರರನ್ನು, ಕಟ್ಟೆಮನೆಯವರನ್ನು ಸೇರಿಸಿ ನ್ಯಾಯವಿಚಾರಣೆ ನಡೆಸಿ, ನಂತರ ತೀರ್ಪನ್ನು ನೀಡುತ್ತಿದ್ದನು. ಈ ತೀರ್ಪಿಗೆ ದೊರೆಯ ಅನುಮತಿ ದೊರೆತ ನಂತರ ಅದು ಜಾರಿಗೆ ಬರುತ್ತಿತ್ತು. ಸಾಮಾನ್ಯವಾಗಿ ಗುರಿಕಾರನ ತೀರ್ಮಾನವನ್ನು ದೊರೆಯು ಅಲ್ಲಗಳೆಯುತ್ತಿರಲಿಲ್ಲ. ಗುರಿಕಾರನು ನೀಡುವ ಬಹುತೇಕ ತೀರ್ಮಾನಗಳು ಕುಲಾಚಾರಕ್ಕೆ ಸಂಬಂಧಪಟ್ಟಿದ್ದರೂ ಕೆಲವೊಮ್ಮೆ ಸಣ್ಣಪುಟ್ಟ ಕುಲಾಚಾರೇತರ ವ್ಯಾಜ್ಯಗಳನ್ನು ತೀರ್ಮಾನಿಸುತ್ತಿದ್ದನು. ರಾಜನ ನ್ಯಾಯಾಂಗ ಕಾರ್ಯಭಾರವನ್ನು ಗುರಿಕಾರನು ಕಡಿಮೆ ಮಾಡಿದ್ದನು. ದೊರೆಯು ಕೆಲವು ಮುಖ್ಯ ವಿಷಯಗಳು ಅಂದರೆ ಕಳ್ಳತನ, ದರೋಡೆ, ಕೊಲೆ, ಸುಲಿಗೆ, ದೇಶದ್ರೋಹಿತನ ಮುಂತಾದವುಗಳನ್ನು ವಿಚಾರಣೆಗೊಳಪಡಿಸಿ ತೀರ್ಪುಗಳನ್ನು ನೀಡುತ್ತಿದ್ದನು. ದೊರೆಯು ಹಂತ ಹಂತವಾಗಿ ಗ್ರಾಮಮಟ್ಟದಿಂದಲೇ ತೀರ್ಮಾನಮಾಡುವ ವ್ಯವಸ್ಥೆಯನ್ನು ಮಾಡಿದ್ದನು. ಪಂಚಾಯ್ತಿಯವರು, ಜಾತಿಯ ಹಿರಿಯರು, ಕಟ್ಟೆಮನೆ ಅಧಿಕಾರಿಗಳು, ದೇವಾಲಯ ಅಧಿಕಾರಿಗಳು ಅವರವರ ಕ್ಷೇತ್ರಗಳಲ್ಲಿ ನ್ಯಾಯವಿಚಾರಣೆ ಮಾಡಲು ದೊರೆಯಿಂದ ಸಾಕಷ್ಟು ಅಧಿಕಾರವನ್ನು ಪಡೆದುಕೊಂಡಿದ್ದರು.

ರಾಜನಲ್ಲಿಗೆ ಬರುವ ವ್ಯಾಜ್ಯಗಳ ಸಂಖ್ಯೆ ಕಡಿಮೆಯಾಗಿತ್ತು. ರಾಜನು ನೀಡುವ ತೀರ್ಪುಗಳು ಬಹಳ ಮಹತ್ವ ಪಡೆದುಕೊಂಡಿದ್ದವು. ದೊರೆ ಮತ್ತು ಗುರು- ಈ ಎರಡು

ಸ್ಥಾನಗಳಲ್ಲಿದ್ದ ಕನಕಗಿರಿ ನಾಯಕರನ್ನು ಇಂದಿಗೂ ಜನರು ದೊರೆಗಳಿಗಿಂತ ಗುರುಗಳೆಂದು ಕರೆದು ಹೆಚ್ಚು ಗೌರವ ನೀಡುತ್ತಿದ್ದಾರೆ. ಅಲ್ಲದೆ ಇಂದಿಗೂ ಕೆಲವು ವಿಷಯಗಳಲ್ಲಿ ನ್ಯಾಯ ಕೋರಿ ಜನರು ದೊರೆಗಳಲ್ಲಿಗೆ ಬರುತ್ತಿರುವರು. ಕನಕಗಿರಿ ನಾಯಕರಿಗೆ ಬ್ರಾಹ್ಮಣರು ಗುರುಗಳಾದರೆ, ಇಡೀ ಬೇಡರ ಸಮೂಹಕ್ಕೆ ಈ ನಾಯಕರೇ ಗುರುಗಳು. ಕನಕಗಿರಿ ನಾಯಕರ ಧರ್ಮನಿಷ್ಠೆಯನ್ನು ಮೆಚ್ಚಿ ಚಿದಾನಂದ ಅವಧೂತರು 'ದೊರೆಸ್ಥಾನದ ಜೊತೆಗೆ ನೀವು ನಿಮ್ಮ ಜನಾಂಗಕ್ಕೆ ಗುರುಗಳಾಗಿಯೂ ಸೇವೆಮಾಡಿ' ಎಂದು ಹೇಳಿ ಆಶೀರ್ವದಿಸಿದರು ಎಂದು ತಿಳಿದುಬರುತ್ತದೆ. ಅಂದಿನಿಂದ ದೊರೆಸ್ಥಾನದ ಜೊತೆಗೆ ಗುರುಸ್ಥಾನವೂ ಕನಕಗಿರಿನಾಯಕರಿಗೆ ದೊರೆಯಿತು. ಯಾವ ಬೇಡನಾಯಕರೂ ಹೊಂದದಂತಹ ಸ್ಥಾನಮಾನ ಗಳನ್ನು ಕನಕಗಿರಿ ನಾಯಕರು ಹೊಂದಿದ್ದರು. ದೊರೆಯ ನ್ಯಾಯವಿಚಾರಣೆಗಳು ಆಸ್ಥಾನದ ಕೇಂದ್ರದಲ್ಲಿ ನಡೆಯುತ್ತಿದ್ದವು. ವಾದಿ-ಪ್ರತಿವಾದಿಗಳನ್ನು ಆಸ್ಥಾನದ ಕೋರ್ಟಿಗೆ ಕರೆಸಿಕೊಂಡು ವಿಚಾರಣೆ ನಡೆಸಿ ಅವರ ಸಮ್ಮುಖದಲ್ಲಿಯೇ ತೀರ್ಪುಗಳನ್ನು ನೀಡುತ್ತಿದ್ದರು. ರಾಜದರ್ಬಾರ್ (ಅರಮನೆ) ಪಕ್ಕದಲ್ಲಿಯೇ ಇಂತಹ ನ್ಯಾಯಾಲಯವನ್ನು ಸ್ಥಾಪಿಸಿಕೊಂಡಿದ್ದರು. ಈಗ ಹುಲಿಹೈದರ್ ರಾಜದರ್ಬಾರ್ ಎದುರುಭಾಗದಲ್ಲಿರುವ ಕಟ್ಟಡವನ್ನು (ಭಗ್ನಗೊಂಡಿದೆ) ಹಿಂದೆ ನ್ಯಾಯವಿಚಾರಣೆಗಾಗಿ ಬಳಸಲಾಗುತ್ತಿತ್ತು. ಆ ಕಟ್ಟಡವನ್ನು ಈಗ ತಹಶೀಲ್ ಅಥವಾ ಉಸಪಲಿ ಬಂಗಲಿ ಎಂದು ಕರೆಯುತ್ತಾರೆ. ಈ ಕಟ್ಟಡವು ದೊರೆಗಳು ನ್ಯಾಯ ವಿಚಾರಣೆ ಮಾಡುವಾಗ ಕುಳಿತುಕೊಳ್ಳುವ ಸ್ಥಳ, ಅಪರಾಧಿಗಳನ್ನು ಹಿಡಿದಿಡುವ ಕೋಣೆ, ನ್ಯಾಯವಿಚಾರಣೆಯನ್ನು ವೀಕ್ಷಿಸಲು ಬಂದ ರಾಣಿಯವರು ಕೂಡುವ ಮೇಲಂತಸ್ತಿನಲ್ಲಿರುವ ಸ್ಥಳ ಮುಂತಾದ ಇನ್ನೂ ಅನೇಕ ಹಂತಗಳನ್ನು ಒಳಗೊಂಡಿದೆ. ಗುರಿಕಾರನು ಸಂಸ್ಥಾನದ ಹೊರಭಾಗದಲ್ಲಿ ನ್ಯಾಯವಿಚಾರಣೆಯನ್ನು ನಡೆಸುತ್ತಿದ್ದನು. ಇವನ ನ್ಯಾಯಪದ್ಧತಿ ಸಂಚಾರಿ ನ್ಯಾಯಪದ್ಧತಿಯನ್ನು ಹೋಲುತ್ತಿತ್ತು. ಕಟ್ಟೆಮನೆ ಮತ್ತು ಗ್ರಾಮಮಟ್ಟದಲ್ಲಿ ಈ ಸಂಚಾರಿ ನ್ಯಾಯವಿಚಾರಣೆ ಹಾಗೂ ತೀರ್ಮಾನಗಳು ನಡೆಯುತ್ತಿದ್ದವು. ಅವುಗಳ ಮುಖ್ಯಸ್ಥರೇ ಈ ಜವಾಬ್ದಾರಿಯನ್ನು ನೆರವೇರಿಸುತ್ತಿದ್ದರು. ಕಂದಾಯ ಸಂಬಂಧದ ವ್ಯಾಜ್ಯಗಳನ್ನು ಬೀಘುದಕಟ್ಟೆಗಳಿರುವ ಕಡೆ ಬಗೆಹರಿಸಲಾಗುತ್ತಿತ್ತು. ಕಂದಾಯ ಸಂಗ್ರಹ ಹಾಗೂ ಭೂಮಿ ಸಂಬಂಧದ ಜಗಳಗಳನ್ನು ತೀರ್ಮಾನಿಸುವ ಸಲುವಾಗಿ ದೊಡ್ಡಹಳ್ಳಿಗಳಲ್ಲಿ ಈ ರೀತಿಯ ಬೀಘುದಕಟ್ಟೆಗಳನ್ನೆ ಸ್ಥಾಪಿಸಿದ್ದರೆಂದು ತಿಳಿದುಬರುತ್ತದೆ. ಸಂಸ್ಥಾನದೊಳಗೆ ಅಪರಾಧಿಗಳ ಅಥವಾ ತಪ್ಪುಮಾಡುವವರ ಸಂಖ್ಯೆಯನ್ನು ಆದಷ್ಟು ನಿಯಂತ್ರಿಸಲಾಗುತ್ತಿತ್ತು. ದೊರೆಯ ಕಾನೂನುಗಳಿಗಿಂತ ಆಯಾಯ ಜಾತಿಗಳ ಕಟ್ಟುಪಾಡುಗಳೇ ಜನರು ತಪ್ಪುಮಾಡ ದಂತೆ ನೋಡಿಕೊಳ್ಳುತ್ತಿದ್ದವು. ಕುಲಾಚಾರ ನಿಯಮಗಳು ರಾಜ್ಯದ ನಿಯಮಾವಳಿಗಳಿಗಿಂತ ಕಠಿಣವಾಗಿದ್ದವು. ಅವುಗಳನ್ನು ಮೀರಲು ಯಾರೂ ಸಾಮಾನ್ಯವಾಗಿ ಇಚ್ಛಿಸುತ್ತಿರಲಿಲ್ಲ. ವಿಚಾರಣೆಯ ಸಮಯದಲ್ಲಿ ಆಯಾಯ ಕುಲಾಚಾರದ ನಿಯಮಗಳನ್ನು ತಿಳಿದುಕೊಂಡು ಆ ಪ್ರಕಾರವೇ ತೀರ್ಪುಗಳನ್ನು ನೀಡಲಾಗುತ್ತಿತ್ತು.



ಕನಕಗಿರಿ ನಾಯಕರ ನ್ಯಾಯಾಲಯ(ತಹಶೀಲ್)ದ ಭಗ್ನಗೊಂಡ ಕಟ್ಟಡ, ಹುಲಿಹೈದರ್



ಕನಕಗಿರಿ ನಾಯಕರ ಈಗಿನ ರಾಜದರ್ಬಾರ್ ಹುಲಹೈದರ್

ಅಪರಾಧಕ್ಕನುಗುಣವಾದ ಶಿಕ್ಷೆಯನ್ನು ದೊರೆಯು ನೀಡುತ್ತಿದ್ದನು. ಅದನ್ನು ಯಾರೂ ಪ್ರಶ್ನಿಸುವಂತಿರಲಿಲ್ಲ ಮತ್ತು ಆ ತೀರ್ಪು ಅಂತಿಮವೂ ಆಗಿತ್ತು. ಅಪರಾಧಿಗಳನ್ನು ವಿಚಾರಣೆಗೊಳಪಡಿಸಿ, ಕೆಲವು ಹಿಂಸೆಗಳನ್ನು ನೀಡಲಾಗುವುದರ ಮೂಲಕ ಸತ್ಯವನ್ನು ಪರೀಕ್ಷಿಸುತ್ತಿದ್ದರು ಮತ್ತು ಕೆಲವು ಕಠಿಣಶಿಕ್ಷೆಗಳನ್ನು ನೀಡುತ್ತಿದ್ದರು. ಕಾದ ಕಬ್ಬಿಣವನ್ನು ಅಪರಾಧಿಯು ಹಿಡಿಯುವಂತೆ ಹೇಳುವುದು, ಕಾದ ಎಣ್ಣೆಯಲ್ಲಿ ಕೈಹಾಕುವಂತೆ ತಿಳಿಸುವುದು, ದೇವರಗುಡಿಯಲ್ಲಿರುವ ಗಂಟೆಯನ್ನು ಬಾರಿಸುವಂತೆ ತಿಳಿಸುವುದು

ಮುಂತಾದವುಗಳ ಮೂಲಕ ಸತ್ಯಶೋಧನೆ ನಡೆಯುತ್ತಿತ್ತು. ಅಪರಾಧಿಗಳಿಗೆ ನೀಡುವ ಶಿಕ್ಷೆಯಲ್ಲಿ ಮರಣದಂಡನೆ ಅಂತಿಮ ಶಿಕ್ಷೆಯಾಗಿತ್ತು. ಒಟ್ಟಿನಲ್ಲಿ ದೊರೆಗಳು ಶಿಕ್ಷೆಗಳು ಕಡಿಮೆಯಾಗುವಂತೆ ನೋಡಿಕೊಳ್ಳುತ್ತಿದ್ದರು. ಗುರಿಕಾರನು ಇಲ್ಲವೆ ಕಟ್ಟೆಮನೆಯವರು ನೀಡುವ ಶಿಕ್ಷೆಗಳಲ್ಲಿ ದೊಡ್ಡ ಶಿಕ್ಷೆಯೆಂದರೆ ಅಪರಾಧಿಯನ್ನು ಕುಲದಿಂದ ಹೊರಹಾಕುವುದು. ಜೊತೆಗೆ ತಲೆ ಬೋಳಿಸುವುದು, ಮೀಸೆ ತೆಗೆಯುವುದು, ಗಂಡಸರಿಗೆ ಬಳೆ ತೊಡಿಸುವುದು, ಸೀರೆಯುಡಿಸುವುದು, ಛೀಮಾರಿ ಹಾಕುವುದು, ಕತ್ತೆಯಮೇಲೆ ಕೂಡಿಸಿ ಮೆರವಣಿಗೆ ಮಾಡುವುದು ಮತ್ತು ತಪ್ಪುದಂಡವೆಂದು ಹಣವನ್ನು ವಸೂಲಿಮಾಡುವುದು, ದೈವಕ್ಕೆ ಊಟ ಹಾಕಿಸುವುದರ ಜೊತೆಗೆ ದಂಡವೆಂದು ಹಣಕೊಡುವುದು. ಇಂತಹ ಶಿಕ್ಷೆ, ದಂಡಗಳು ಸಾಮಾನ್ಯವಾಗಿದ್ದವು. ಕಟ್ಟೆಮನೆ ಮುಖ್ಯಸ್ಥನು ನೀಡುವ ಶಿಕ್ಷೆಯನ್ನಾಗಲಿ ಅಥವಾ ದಂಡವನ್ನಾಗಲಿ ವಿರೋಧಿಸುವಂತಿರಲಿಲ್ಲ. ಜನರಲ್ಲಿ ಅವರ ತೀರ್ಮಾನದ ಬಗ್ಗೆ ಗೌರವವಿತ್ತು. ಕಟ್ಟೆಮನೆ ಮುಖ್ಯಸ್ಥನು ಸಹಾ ನಿಷ್ಪಕ್ಷಪಾತವಾಗಿ ನ್ಯಾಯತೀರ್ಮಾನ ಮಾಡುತ್ತಿದ್ದನು.

'ಕಟ್ಟೆ', ಕಟ್ಟೆಮನೆ ಮತ್ತು ಗುಡಿಗಟ್ಟೆ ಎಂಬ ನ್ಯಾಯವಿಧಾನ ಪದ್ಧತಿಯನ್ನು ಕೆಳವರ್ಗಗಳಲ್ಲಿ ಕಾಣಬಹುದು. ಬೇಡ ಜನಾಂಗದಲ್ಲಿ ಈ ನ್ಯಾಯವಿಧಾನ ಪದ್ಧತಿ ಹಿಂದಿನಿಂದಲೂ ಮುಂದುವರೆದುಕೊಂಡು ಬಂದಿದ್ದು, ಈಗ ಕಣ್ಮರೆಯಾಗಿದೆ. ಗುರಿಕಾರನು ಈ ಕಟ್ಟೆಮನೆಯ ಪ್ರಮುಖರ ಮೂಲಕ ನ್ಯಾಯತೀರ್ಮಾನವನ್ನು ಮಾಡಿಸುತ್ತಿದ್ದನು. ಒಂದೊಂದು ಕಟ್ಟೆಮನೆ ಇಪ್ಪತ್ತು ಇಲ್ಲವೆ ಮೂವತ್ತು ಹಳ್ಳಿಗಳನ್ನು ಒಳಗೊಂಡಿರುತ್ತಿತ್ತು. ಕೆಲವೊಮ್ಮೆ ಊರಿಗೊಂದು ಕಟ್ಟೆಮನೆಯನ್ನು ನೇಮಕ ಮಾಡಿರುವುದನ್ನು ಕುಷ್ಟಗಿ, ಯಲಬುರ್ಗ, ಗಂಗಾವತಿ ಮತ್ತು ಇತರ ತಾಲೂಕುಗಳಲ್ಲಿ ನೋಡಬಹುದು. ಕುಷ್ಟಗಿ ತಾಲ್ಲೂಕು ನಿಲೋಗಲ್ ಬಸಾಪುರವು ಮೂವತ್ತು ಹಳ್ಳಿಗಳಿಗೆ ಕಟ್ಟೆಮನೆಯಾದರೆ, ಯಲಬುರ್ಗಾ ತಾಲೂಕು ಬಲ್ಲೋಟಗಿ ಬಸಾಪುರವು ಇಪ್ಪತ್ತೆಂಟು ಹಳ್ಳಿಗಳಿಗೆ ಕಟ್ಟೆಮನೆಯಾಗಿದೆ.

ಕುಷ್ಟಗಿ ತಾಲೂಕು ನಿಲೋಗಲ್ ಬಸಾಪುರ ಕಟ್ಟೆಮನೆಗೆ ಅಧಿಕಾರಿಗಳನ್ನು ನೇಮಕ ಮಾಡಿದ ಬಗ್ಗೆ ಒಂದು ನೆರಳಚ್ಚು ಕಾಗದಪತ್ರ ಹುಲಿಹೈದರ್ ಸಂಸ್ಥಾನಿಕರ ಮನೆಯಲ್ಲಿದೆ. ಈ ಪತ್ರವು ರಂಗನಾಥಪ್ಪನಾಯಕರು ಬಸಾಪುರ ಕಟ್ಟೆಮನೆಗೆ ಭೀಮನಗೌಡ ತಂದೆ ಕಲ್ಲನಗೌಡ, ಚನ್ನಬಸವನಗೌಡ, ಎಂಕನಗೌಡ ಬಿನ್ ಭರ್ಮನಗೌಡ ಮತ್ತು ಎಂಕನಗೌಡ ಎಂಬ ನಾಲ್ವರನ್ನು ನೇಮಕ ಮಾಡಿದ ಬಗ್ಗೆ ವಿವರವನ್ನು ಒಳಗೊಂಡಿದೆ; ಮತ್ತು ವಾಲ್ಮೀಕಿ ಸಮಾಜದಲ್ಲಿ ಅನಾಚಾರಗಳು ಸಂಭವಿಸದಂತೆ, ಶಿಷ್ಯರಲ್ಲಿ ಅಪಚಾರಗಳು ಕಾಣಿಸದಂತೆ ನೋಡಿಕೊಳ್ಳುವ ಮುಂತಾದ ಜವಾಬ್ದಾರಿಗಳನ್ನು ಅವರಿಗೆ ವಹಿಸಿ ಮತ್ತು ಮದುವೆ ಸಂದರ್ಭದಲ್ಲಿ ವಧು ಮತ್ತು ವರನ ಕಡೆಯವರಿಂದ ಇಂತಿಷ್ಟು ಹಣ ಸಂಗ್ರಹಿಸಿ ನಮಗೆ ಕಳುಹಿಸತಕ್ಕದ್ದು ಹಾಗೂ ವೀಳ್ಯವನ್ನು ನೀವೇ ಪಡೆಯುವುದು ಎಂಬ ಇತ್ಯಾದಿ ಮಾಹಿತಿಯನ್ನು ನೀಡುತ್ತದೆ. ೧೯೭೭ರಲ್ಲಿ ಗಂಗಾವತಿ ತಾಲ್ಲೂಕು ಮುನ್ಸಿಫರು ಕನಕಗಿರಿ

ಸಂಸ್ಥಾನದ ನೇರವಂಶಸ್ಥರು ಮತ್ತು ಅವರ ದಾಯಾದಿಗಳ ನಡುವಿನ ಗುರು ಮತ್ತು ದೊರೆ ಅಧಿಕಾರಸಂಬಂಧಿ ವ್ಯಾಜ್ಯವೊಂದರಲ್ಲಿ ನೀಡಿದ ತೀರ್ಪಿನಲ್ಲಿ (ಮೂಲದಾವೆ ನಂ.೬೫, ೧೯೭೭) ರಾಯಚೂರು, ಬಿಜಾಪುರ, ಧಾರವಾಡ, ಬೆಳಗಾವಿ, ಕಾರವಾರ ಮತ್ತು ಬಳ್ಳಾರಿ ಜಿಲ್ಲೆಗಳ ವಾಲ್ಮೀಕಿ ಸಮಾಜದ ಮೂಲಸ್ಥಾನ ಅಥವಾ ವಾಲ್ಮೀಕಿ ಸಮಾಜದ ಪೀಠಸ್ಥರಾಗಿರುತ್ತಾರೆ; ಹಾಗೂ ಕಟ್ಟೆಮನೆಯವರ ನೇಮಕ, ವರ್ಗಾಂತರ ಮತ್ತು ತೆಗೆದುಹಾಕುವಿಕೆಯ ಅಧಿಕಾರವನ್ನು ಈ ಸಂಸ್ಥಾನಿಕರಿಗೆ ನೀಡಲಾಗಿದೆ ಎಂದು ತಿಳಿಸಲಾಗಿದೆ.

ಕಟ್ಟೆಮನೆ ಮುಖ್ಯಸ್ಥರನ್ನು ಮತ್ತು ಅವರ ಸಹಾಯಕ ಕೊಂಡೀಕಾರನನ್ನು ದೊರೆಗಳು ನೇಮಿಸುತ್ತಿದ್ದರು. ಸ್ಥಿತಿವಂತ ಮತ್ತು ದೊರೆಗಳ ಮೇಲೆ ಗೌರವ ಹೊಂದಿದ ನಾಯಕರನ್ನು ಗಮನಿಸಿ ಈ ಸ್ಥಾನಕ್ಕೆ ನೇಮಿಸಲಾಗುತ್ತಿತ್ತು. ಕಟ್ಟೆಮನೆಯವರು ದೊರೆಗಳಿಗೆ ಅತ್ಯಂತ ಗೌರವದಿಂದ ನಡೆದುಕೊಳ್ಳಬೇಕಾಗಿತ್ತು. ಕಟ್ಟೆಮನೆಗೆ ದೊರೆಗಳು ಭೇಟಿನೀಡುವ ಸಂದರ್ಭದಲ್ಲಿ ಆ ಕಟ್ಟೆಮನೆ ಕೆಳಗೆ ಬರುವ ಗ್ರಾಮಗಳಿಗೆ ಕೊಂಡೀಕಾರನ ಮೂಲಕ ಈ ವಿಷಯವನ್ನು ಮೊದಲೇ ತಿಳಿಸುವ ಜವಾಬ್ದಾರಿ ಕಟ್ಟೆಮನೆಯ ಯಜಮಾನನದು. ಕುಲಾಚಾರಕ್ಕೆ ಅಪಚಾರವೇನಾದರೂ ಆದರೆ ಇಲ್ಲವೆ ಕಟ್ಟೆಮನೆ ಮತ್ತು ಗುರಿಕಾರನ ತೀರ್ಪುಗಳಿಗೇನಾದರೂ ವ್ಯತಿರಿಕ್ತವಾಗಿ ಯಾರಾದರೂ ನಡೆದುಕೊಂಡರೆ ಅಥವಾ ವಿಶೇಷ ದಿನಗಳಲ್ಲಿ ದೊರೆಗಳು ಕಟ್ಟೆಮನೆ ಸ್ಥಳಕ್ಕೆ ಭೇಟಿನೀಡುತ್ತಿದ್ದರು. ಕುಲಾಚಾರಕ್ಕೆ ಅಪಚಾರವಾದಾಗ, ಅಪಚಾರಕ್ಕೊಳಗಾದವನಿಗೆ ಹಾಗೂ ಅಪಚಾರ ಮಾಡಿದವನಿಗೆ ಇಬ್ಬರಿಗೂ ತೀರ್ಥಹಾಕುವ ಮೂಲಕ ಶುದ್ಧಿಮಾಡಿ ಕುಲದೊಳಗೆ ಹಾಕಿಕೊಳ್ಳುವ ಅಧಿಕಾರ ಗುರು ಮತ್ತು ದೊರೆಸ್ಥಾನದಲ್ಲಿದ್ದ ನಾಯಕರೇ ಹೊಂದಿದ್ದರು. ಅಶುದ್ಧವಾದವರು ಶುದ್ಧಿಕಾರ್ಯ ಆಗುವವರೆಗೂ ಯಾವುದೇ ಕುಲಾಚಾರದ ಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ. ಕೆಳಜಾತಿ ಹೆಣ್ಣನ್ನು ಮದುವೆಯಾದರೆ; ಇಲ್ಲವೆ ದೈಹಿಕ ಸಂಪರ್ಕ ಇಟ್ಟುಕೊಂಡಿದ್ದರೆ; ಕೆಳಜಾತಿಯವರ ಮನೆಯಲ್ಲಿ ಹೋದರೆ, ಇಲ್ಲವೆ ಊಟ ಮಾಡಿದರೆ; ಚಪ್ಪಲಿಯನ್ನು ಕೈಯಲ್ಲಿ ಹಿಡಿದರೆ, ಇಲ್ಲವೆ ಚಪ್ಪಲಿಯಿಂದ ಹೊಡೆಸಿಕೊಂಡರೆ ಮುಂತಾದವನ್ನು ಅಶುದ್ಧಿಯಾದವರು ಎಂದು ತೀರ್ಮಾನಿಸಲಾಗುತ್ತಿತ್ತು. ಕೆಳಜಾತಿಯಲ್ಲಿ ಈ ರೀತಿಯ ಕುಲಾಚಾರಿಕೆ ನಿರ್ಣಯಗಳು ಸಹಜವಾಗಿದ್ದವು. ತಪ್ಪುದಂಡವೆಂದು ಹಣವನ್ನು ಪಡೆಯುವ ಮತ್ತು ದೈವದ ಊಟವನ್ನು ಹಾಕಿಸುವ ಮೂಲಕ ಅಶುದ್ಧಿಮಾಡಿದವನು ಮತ್ತು ಅಶುದ್ಧಿಗೊಳಗಾದವನು ಇಬ್ಬರನ್ನೂ ಕುಲದೊಳಗೆ ಹಾಕಿಕೊಳ್ಳಲಾಗುತ್ತಿತ್ತು. ಒಂದುವೇಳೆ ಅಶುದ್ಧಿಗೊಳಗಾದವನು ಇಲ್ಲವೆ ಅಶುದ್ಧಿಮಾಡಿದವನು ಬೇರೆ ಜಾತಿಯವನಾಗಿದ್ದರೆ ಅವನು ಈ ಕುಲಾಚಾರದ ನಿಯಮಕ್ಕೆ ಒಳಪಡುತ್ತಿರಲಿಲ್ಲ. ಸಾಮಾಜಿಕ, ಧಾರ್ಮಿಕ, ಇತರೆ ಸಮಾರಂಭಗಳಲ್ಲಿ ಕಟ್ಟೆಮನೆಯ ಮುಖ್ಯಸ್ಥನು ಮುಖ್ಯಪಾತ್ರ ವಹಿಸುತ್ತಿದ್ದನು. ಜನರು ಅವನಿಗೆ ಮೊದಲ ಸ್ಥಾನಮಾನ ನೀಡುತ್ತಿದ್ದರು. ವೀಳ್ಯ, ಕಾಣಿಕೆ, ಗುರುಕಾಣಿಕೆ ಮುಂತಾದವುಗಳನ್ನು ನೀಡುತ್ತಿದ್ದರು. ಗುರುಕಾಣಿಕೆಯನ್ನು ಸಂಸ್ಥಾನಿಕರಿಗೆ ಕಳುಹಿಸಿ ತಮಗೆ ನೀಡಿದ ಗ್ರಾಮದ ವೀಳ್ಯ ಮತ್ತು ಕಾಣಿಕೆಯನ್ನು ಸ್ವೀಕರಿಸುತ್ತಿದ್ದರು. ಈ ಕಾಣಿಕೆ

ಹಣದಲ್ಲಿ ಕಟ್ಟೆಮನೆಗೆ ಗುರುಗಳು ಬಂದಾಗ ಖರ್ಚುಮಾಡಬೇಕಾಗಿತ್ತು. ಈಗ ಮದುವೆ ಸಮಯದಲ್ಲಿ ಹೆಣ್ಣಿಗೆ ಹನ್ನೊಂದು ರೂಪಾಯಿಗಳು ಮತ್ತು ಗಂಡಿಗೆ ಇಪ್ಪತ್ತೈದು ರೂಪಾಯಿಗಳನ್ನು ಸಂಸ್ಥಾನಿಕರಿಗೆ ಗುರು ಕಾಣಿಕೆಯೆಂದು ಕೊಡಬೇಕು. ಯಾವುದೇ ಶಿಕ್ಷೆನೀಡುವ ಸಂದರ್ಭದಲ್ಲಿ ವಿಧಿಸುವ ದಂಡ ರೂಪಾಯಿ ಒಂದುನೂರಾ ಒಂದು ದಾಟು ವಂತಿಲ್ಲ; ಮತ್ತು ಜೊತೆಗೆ ದೈವದೂಟ ಹಾಕಿಸಬೇಕು ಎಂಬ ಮಾಹಿತಿಯು ಹುಲಿಹೈದರ್ ನಲ್ಲಿರುವ ಕನಕಗಿರಿ ನಾಯಕರ ವಂಶಸ್ಥರಾದ ರಾಜಾ ಚಚ್ಚಪ್ಪನಾಯಕರಿಂದ ತಿಳಿದುಬರುತ್ತದೆ.

ಗ್ರಾಮದ ಯಜಮಾನನೇ ಆ ಗ್ರಾಮದ ನ್ಯಾಯತೀರ್ಮಾನ ಮಾಡುವ ಅಧಿಕಾರವನ್ನು ಹೊಂದಿದ್ದನು. ಗ್ರಾಮದ ಸಾಮಾನ್ಯ ವಿಷಯಗಳನ್ನು ವಿಚಾರಣೆಗೊಳಪಡಿಸಿ ನಂತರ ತೀರ್ಮಾನವನ್ನು ನೀಡುತ್ತಿದ್ದರು. ಕುಲಾಚಾರಿಕೆ ವಿಷಯಗಳಲ್ಲಿ ರಾಜನಾಗಲಿ ಅಥವಾ ಇತರರಾಗಲಿ ಹೆಚ್ಚಾಗಿ ತಲೆಹಾಕುತ್ತಿರಲಿಲ್ಲ. ಈ ವಿಷಯದಲ್ಲಿ ಕಟ್ಟೆಮನೆ ಮುಖ್ಯಸ್ಥನೇ ಸಂಪೂರ್ಣ ಜವಾಬ್ದಾರಿ ಹೊಂದಿದ್ದನು. ಕಟ್ಟೆಮನೆಯವರಿಗೆ ಸಣ್ಣಪುಟ್ಟ ವ್ಯಾಜ್ಯಗಳು ಹೋಗುತ್ತಿರಲಿಲ್ಲ; ಗ್ರಾಮಮಟ್ಟದಲ್ಲಿಯೆ ಅಂತಹವುಗಳನ್ನು ಬಗೆಹರಿಸಲಾಗುತ್ತಿತ್ತು. ಯಾವುದಾದರೊಂದು ವಿಷಯ ಕಟ್ಟೆಮನೆಯವರೆಗೆ ಹೋಗಿದೆ ಎಂದರೆ ಸುತ್ತಮುತ್ತ ಹಳ್ಳಿಗೆಲ್ಲಾ ಹೆಸರಾಗುತ್ತಿತ್ತು. ಗ್ರಾಮದಲ್ಲಿನ ತೀರ್ಪನ್ನು ದೈವದತೀರ್ಪು ಎಂದು ಕರೆಯ ಲಾಗುತ್ತಿತ್ತು. ಎಲ್ಲಾ ಕುಲದವರು ಒಪ್ಪಿ ಆ ಗ್ರಾಮಕ್ಕೆ ದೈವದವರೆಂದು ಐದು ಜನರನ್ನು ಆರಿಸುತ್ತಿದ್ದರು. ಅವರು ಆ ಊರಿಗೆ ಸಂಬಂಧಿಸಿದ ವಿಷಯಗಳ ಜೊತೆಗೆ ಕುಲಾಚಾರೇತರ ಕೆಲವು ವಿಷಯಗಳಲ್ಲಿ ತೀರ್ಪುನೀಡುತ್ತಿದ್ದರು.

ಕನಕಗಿರಿ ನಾಯಕರ ನ್ಯಾಯದಾನ ಪದ್ಧತಿಯನ್ನು ನೋಡಿದರೆ ಆದಷ್ಟು ಕೆಳಹಂತ ದಲ್ಲಿಯೇ ನ್ಯಾಯತೀರ್ಮಾನ ಮಾಡಿಸುವ ವ್ಯವಸ್ಥೆಯಿದ್ದಿತು; ಹಾಗೂ ಆಯಾಯ ಜಾತಿ ಗಳ ಮುಖ್ಯಸ್ಥರಿಗೇ ನ್ಯಾಯದಾನ ಅಧಿಕಾರವನ್ನು ನೀಡಿದ್ದರು ಎಂಬುದು ಗೊತ್ತಾಗು ತ್ತದೆ. ಹೀಗಾಗಿ ಅಪರಾಧಿಗಳ ಸಂಖ್ಯೆಯಾಗಲಿ, ರಾಜನಲ್ಲಿಗೆ ನ್ಯಾಯ ಬಯಸಿ ಬರುವವರ ಸಂಖ್ಯೆಯಾಗಲಿ ಕಡಿಮೆ ಇತ್ತೆಂದು ತಿಳಿದುಬರುತ್ತದೆ. ಅಲ್ಲದೆ ಧರ್ಮವನ್ನು ಮೀರಿ ಎಂದೂ ನ್ಯಾಯತೀರ್ಪು ನೀಡಿರಲಿಲ್ಲವೆಂದು ಅವರ ಒಟ್ಟು ಅಧ್ಯಯನದಿಂದ ತಿಳಿದುಬರುತ್ತದೆ.*

## ಗ್ರಂಥಋಣ


೧. ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನ ಇತಿಹಾಸ

೨. ಜಯತೀರ್ಥ ರಾಜಪುರೋಹಿತ್, ಕನಕಗಿರಿ

೩. ಶರಣಬಸಪ್ಪ ಕೋಲ್ಕಾರ, ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ಅಪ್ರಕಟಿತ ಎಂ.ಫಿಲ್. ಪ್ರಬಂಧ

೪. ಬಿ.ಷೇಕ್‌ಅಲಿ ಮತ್ತು ಕೆ.ಎಸ್.ಶಿವಣ್ಣ, ಕರ್ನಾಟಕ ಚರಿತ್ರೆ-ಸಂಪುಟ ೩

೫. ರಾಯಚೂರುಜಿಲ್ಲಾ ಗೆಝೆಟಿಯರ್



* ಈ ಲೇಖನಕ್ಕೆ ಮಾಹಿತಿ ನೀಡಿದ ಹುಲಿಹೈದರ್‌ನಲ್ಲಿರುವ ಕನಕಗಿರಿ ನಾಯಕರ ವಂಶಸ್ಥರಾದ ರಾಜಾ ಚಚ್ಚಪ್ಪನಾಯಕ, ಉಡಚೇಂದ್ರನಾಯಕ ಮತ್ತು ನವೀನಚಂದ್ರ ನಾಯಕರಿಗೆ ವಂದನೆಗಳು.

೧೨

# ಸುಗುಟೂರು ಅರಸರ ನ್ಯಾಯಾಡಳಿತ

**ಡಾ. ಪಿ. ವಿ. ಕೃಷ್ಣಮೂರ್ತಿ**

ಸುಗುಟೂರು ಅರಸರು ವಿಜಯನಗರ ಸಾಮ್ರಾಟರ ಅಮರನಾಯಕರಾಗಿದ್ದರು. ಅಮರನಾಯಕನೆನಿಸಿಕೊಂಡವನು ಸಾಮ್ರಾಟರಿಗೆ ಒಂದು ನಿಗದಿಯಾದ ಮೊತ್ತದ ಹಣವನ್ನು ವಾರ್ಷಿಕವಾಗಿ ಸಂದಾಯ ಮಾಡಬೇಕಾಗಿದ್ದಿತು. ಅದೂಅಲ್ಲದೆ ಸಾಮ್ರಾಜ್ಯದ ರಕ್ಷಣೆಗೆ ನಿಗದಿತ ಸಂಖ್ಯೆಯ ಸೈನಿಕರು, ಅಶ್ವಗಳು ಮತ್ತು ಆನೆಗಳನ್ನು ಒದಗಿಸಬೇಕಾಗಿದ್ದಿತು. ಹೀಗೆ ಅಧಿರಾಜನಿಗೆ ಜನ ಮತ್ತು ದ್ರವ್ಯವನ್ನು ಒದಗಿಸುವುದರ ಮೂಲಕ ಅಮರನಾಯಕ ತನ್ನ ಕರ್ತವ್ಯವನ್ನು ನಿರ್ವಹಿಸಬೇಕಾಗಿದ್ದಿತು. ರಾಜನ ಮತ್ತು ಅಮರನಾಯಕನ ಸಂಬಂಧವು ಊಳಿಗಮಾನ್ಯಪದ್ಧತಿಯಲ್ಲಿ ಪ್ರಭು ಮತ್ತು ಸಾಮಂತನ ಸಂಬಂಧವಾಗಿದ್ದಿತು. ನಾಯಕರು ಭಾಗಶಃ ಸ್ವತಂತ್ರದರ್ಜೆಯನ್ನು ಹೊಂದಿದ್ದರು. ಇವರು ಬೇರೆ ಬೇರೆ ಮಟ್ಟದ ಸ್ವಯಮಾಧಿಪತ್ಯವನ್ನು ಹೊಂದಿದ್ದರು. ಒಟ್ಟಾರೆ, ವಿದ್ವಾಂಸರು ಅಭಿಪ್ರಾಯಪಟ್ಟಿರುವಂತೆ, ವಿಜಯನಗರ ಸಾಮ್ರಾಜ್ಯವು ಪ್ರಾಚೀನ ಹಿಂದೂಮಾದರಿಯ ಊಳಿಗಮಾನ್ಯ ಸಂಯುಕ್ತ ರಾಷ್ಟ್ರವಾಗಿತ್ತು.

ಕ್ರಿ.ಶ.ಹದಿನೈದರಿಂದ ಹದಿನೆಂಟು-ಇಪ್ಪತ್ತನೆಯ ಶತಮಾನದ ಅವಧಿಯಲ್ಲಿ ಕೋಲಾರ, ಚಿತ್ತೂರು ಮತ್ತು ಬೆಂಗಳೂರು ಜಿಲ್ಲೆಗಳ ಹಲವು ಭಾಗಗಳಲ್ಲಿ ಸುಗುಟೂರು ಅರಸು ವಂಶೀಯರು ಆಳ್ವಿಕೆ ನಡೆಸಿದ್ದಾರೆ. ವಿಜಯನಗರ ಅರಸರ ಅವನತಿಯವರೆಗೂ ಅವರ ನಿಷ್ಠಾವಂತ ಅಮರನಾಯಕರಾಗಿ ಇವರು ಸೇವೆ ಸಲ್ಲಿಸಿದ್ದರು. ವಿಜಯನಗರ ಕಾಲದಲ್ಲಿ ಇವರು ಸಾಕಷ್ಟು ಸ್ವಾಯತ್ತತೆಯನ್ನು ಹೊಂದಿದ ಸ್ಥಳೀಯ ಅರಸರೇ ಆಗಿದ್ದರು. ಹಾಗಾಗಿ ಇವರು ತಮ್ಮ ಆಳ್ವಿಕೆಯ ಪ್ರದೇಶದ ಪ್ರಜೆಗಳಿಗೆ ಪ್ರತ್ಯಕ್ಷ ಅರಸರಾಗಿದ್ದರು. ಅಲ್ಲದೆ, ಇವರು ತಮ್ಮ ಬಹುಪಾಲು ಶಾಸನಗಳಲ್ಲಿ ತಮ್ಮ ಅಧಿರಾಜರನ್ನು ಪ್ರಸ್ತಾಪಿಸದೆ ತಾವೇ ನೇರವಾಗಿ ದಾನದತ್ತಿಗಳನ್ನು ನೀಡಿರುವುದು ಕಂಡುಬರುತ್ತದೆ. ಈ ಅಂಶವು ಅವರು ಪಡೆದುಕೊಂಡಿದ್ದ ಸ್ವಾಯತ್ತತೆಯನ್ನು ಬಿಂಬಿಸುತ್ತದೆ.

ನಮ್ಮ ದೇಶದಲ್ಲಿ ಬ್ರಿಟೀಶರ ಆಳ್ವಿಕೆ ಆರಂಭವಾಗುವುದಕ್ಕೆ ಮೊದಲು ನ್ಯಾಯ ವಿತರಣೆಗಾಗಿಯೇ ಪ್ರತ್ಯೇಕ ವ್ಯವಸ್ಥೆ ಇರಲಿಲ್ಲ. ಸಾಮಾನ್ಯ ಆಡಳಿತದ ಭಾಗವಾಗಿಯೇ ಅಂದಿನ ಗ್ರಾಮ, ಪಟ್ಟಣಗಳ ನ್ಯಾಯಾಡಳಿತವು ಪಾರಂಪರಿಕವಾಗಿ ನಡೆದುಬಂದ ರೀತಿಯಲ್ಲೇ ಮುಂದುವರೆದಿದ್ದಿತೆಂದರೆ ತಪ್ಪಾಗಲಾರದು.

ನ್ಯಾಯವು ತಮ್ಮ ಆಳ್ವಿಕೆಯ ಸಕ್ರಿಯ ತತ್ವವಾಗಿರಬೇಕೆಂದು ಪ್ರತಿಯೊಬ್ಬ ಅರಸನ ಆದರ್ಶವಾಗಿದ್ದಿತು. ಅಂತೆಯೇ ಪ್ರಜೆಗಳಾದರೂ ಅರಸನ ಪ್ರಭುತ್ವವನ್ನು ಒಪ್ಪಿಕೊಂಡಿದ್ದರು. ಪ್ರಜೆಗಳಿಗೆ ಅರಸನೇ ಪ್ರತ್ಯಕ್ಷದೈವವಾಗಿದ್ದನು. ಭಾರತೀಯ ಪರಂಪರೆಯಲ್ಲಿ ರಾಜನೆನಿಸಿ ಕೊಂಡವನು ಐದು ಬಗೆಯ ಪವಿತ್ರಕರ್ತವ್ಯಗಳನ್ನು ನಿರ್ವಹಿಸಬೇಕಾಗಿದ್ದಿತು. ಅವುಗಳೆಂದರೆ, ೧. ದುಷ್ಟಮರ್ದನ, ೨. ಶಿಷ್ಟಪರಿಪಾಲನ, ೩. ನ್ಯಾಯಮಾರ್ಗದಿಂದ ಭಂಡಾರವನ್ನು ಸಮೃದ್ಧಿಗೊಳಿಸುವುದು, ೪. ಪ್ರಜೆಗಳಿಗೆ ನಿಷ್ಪಕ್ಷಪಾತವಾದ ನ್ಯಾಯಪ್ರದಾನ ಮಾಡುವುದು ಹಾಗೂ ೫. ಶತ್ರುಗಳಿಂದ ರಾಜ್ಯವನ್ನು ರಕ್ಷಿಸುವುದು. ಇವುಗಳನ್ನು ಸ್ಥಳೀಯ ಪ್ರಭುಗಳೆನಿಸಿ ಕೊಂಡಿದ್ದ ಸುಗುಟೂರು ಅರಸರಂತಹವರು ಕೂಡ ತಮ್ಮ ಇತಿಮಿತಿಗಳಲ್ಲಿ ನಿರ್ವಹಿಸು ತ್ತಿದ್ದರೆಂದು ಭಾವಿಸಬಹುದು.

ಮೇಲೆಯೇ ಉಲ್ಲೇಖಿಸಿರುವಂತೆ, ಸುಗುಟೂರು ಅರಸರ ಕಾಲದ ನ್ಯಾಯಾಡಳಿತ ವಾದರೂ ಸನಾತನಕಾಲದಿಂದ ಬಂದಂತಹದೇ ಆಗಿದ್ದಿತು. ತಾವು ಪುರಾತನ ಸಂಪ್ರದಾಯ ಪಾಲಕರೆಂದು ಹೇಳಿಕೊಂಡಿರುವ ಅವರು, ಸಹಜವಾಗಿಯೇ ಪ್ರಾಚೀನ ಸ್ಮೃತಿಕಾರರಾದ ಮನು, ಯಾಜ್ಞವಲ್ಕ್ಯ, ಪರಾಶರ, ನಾರದ, ಬೃಹಸ್ಪತಿ, ಕಾತ್ಯಾಯನ, ಕೌಟಿಲ್ಯ ಮುಂತಾದ ವರು ಕ್ರೋಢೀಕರಿಸಿದ ನ್ಯಾಯಾಡಳಿತ ಕ್ರಮವನ್ನೇ ಅನುಸರಿಸುತ್ತಿದ್ದರು. ಅವುಗಳೆಂದರೆ, ೧. ಕುಲ (ಕುಟುಂಬ ಪರಿಷತ್ತುಗಳು), ೨. ಶ್ರೇಣಿ (ನಿಗಮ), ೩. ಗಣ (ಸಭಾ), ೪. ರಾಜನಿ ಯುಕ್ತ ನ್ಯಾಯಾಲಯ ಮತ್ತು ೫. ರಾಜನೇ ನ್ಯಾಯಾಧಿಕಾರಿಯಾಗಿ ಕಾರ್ಯನಿರ್ವಹಿಸುವುದು. ಈ ನ್ಯಾಯಾಡಳಿತ ಕ್ರಮಗಳು ಸುಗುಟೂರು ಅರಸರಂತಹ ತುಂಡರಸರಿಗೆ ಪೂರ್ಣವಾಗಿ ಅನ್ವಯವಾಗುವುದಿಲ್ಲವಾದರೂ ಇವುಗಳಲ್ಲಿನ ಬಹಳಷ್ಟು ಅವರ ಆಡಳಿತ ವ್ಯಾಪ್ತಿಗೆ ಒಳಪಡುತ್ತಿದ್ದವು ಎಂದರೆ ತಪ್ಪಾಗಲಾರದು. ಆದರೆ ಈ ಅಂಶಗಳಿಗೆ ಸಂಬಂಧಿಸಿದ ನೇರ ಮಾಹಿತಿ ಅವರ ಶಾಸನಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲವೆಂಬುದನ್ನು ಒಪ್ಪಿಕೊಳ್ಳಲೇ ಬೇಕು.

ಕರ್ನಾಟಕವನ್ನು ಒಳಗೊಂಡಂತೆ ಭಾರತದಲ್ಲಿ ಹಿಂದೆ ಗ್ರಾಮೀಣ ಭಾಗದಲ್ಲಿ ಪ್ರಚಲಿತ ವಾಗಿದ್ದ ಹಾಗೂ ಈಗಲೂ ಅಸ್ತಿತ್ವದಲ್ಲಿರುವ ನ್ಯಾಯದಾನ ಪದ್ಧತಿಗಳನ್ನು ಸ್ಥೂಲವಾಗಿ ಮೂರುಗುಂಪುಗಳಾಗಿ ವಿಂಗಡಿಸಬಹುದು: ೧. ದೇವರನ್ಯಾಯ, ೨. ಪಂಚಾಯ್ತಿ ನ್ಯಾಯ, ೩. ಸರಕಾರಿ ಪಂಚಾಯಿತಿನ್ಯಾಯ ಮತ್ತು ಕೋರ್ಟುಗಳು.

ಸುಗುಟೂರು ಅರಸರ ಆಳ್ವಿಕೆಯ ಕಾಲ ಮತ್ತು ಪ್ರದೇಶದಲ್ಲಿ ದೇವರನ್ಯಾಯ ಮತ್ತು ಪಂಚಾಯ್ತಿನ್ಯಾಯ ಎಂಬುವೇ ಹೆಚ್ಚು ಪ್ರಚಲಿತವಿದ್ದವೆನ್ನಬಹುದಾದರೂ ಇವುಗಳಿಗೆ

ಪೋಷಕವಾದ ಶಾಸನಾಧಾರಗಳು ಅಲಭ್ಯವಾಗಿವೆ. ಆದರೆ ಇಂದಿಗೂ ಈ ಪ್ರದೇಶದ ಜನಪದರಲ್ಲಿ ಚಾಲ್ತಿಯಲ್ಲಿರುವ ವಿಧಿ-ನಿಷೇಧ-ನಂಬಿಕೆಗಳು ಈ ನ್ಯಾಯದಾನ ಪದ್ಧತಿಗಳೇ ವ್ಯಾಪಕವಾಗಿ ಬಳಕೆಯಲ್ಲಿದ್ದುವೆಂಬುದನ್ನು ದೃಢೀಕರಿಸುತ್ತವೆ.

ಆರೋಪಿ ಮತ್ತು ಫಿರ್ಯಾದಿ ಇವರಿಬ್ಬರೂ ದೈವದ ಸಮಕ್ಷಮ ರಾಜಿಮಾಡಿಕೊಂಡು ಈ 'ರಾಜಿ' ನಿರ್ಣಯವು ದೈವದ ನಿರ್ಣಯ ಎಂಬಂತೆ ತಿಳಿಯುವುದು. ದಿವ್ಯಗಳು ಅಥವಾ ದೈವೀಪರೀಕ್ಷೆಗಳು 'ಸತ್ಯಮಾಡುವುದು' ಅಥವಾ 'ಆಣೆ -ಪ್ರಮಾಣ'ಗಳು ದೇವರನ್ಯಾಯದ ಸರಳ ಪ್ರಕಾರಗಳಾಗಿದ್ದವು. ದಿವ್ಯಗಳೆಂದರೆ ಅಪರಾಧಗಳನ್ನು ನಿರ್ಣಯಿಸಲು ನಿಶ್ಚಿತವಾದ ಮಾನುಷ ಸಾಕ್ಷಿ; ಆಧಾರಗಳು ಇಲ್ಲದಿರುವಾಗ ನಡೆಸುವ ಉಗ್ರಪರೀಕ್ಷೆಗಳು. ಇವು ದೈವವನ್ನು ಆಶ್ರಯಿಸಿ ನಿರ್ಣಯವಾಗುವುದರಿಂದ ಅವುಗಳನ್ನು 'ದಿವ್ಯ'ಗಳೆಂದು ಕರೆಯುತ್ತಿದ್ದರು. ಕುದಿಯುವ ಎಣ್ಣೆಯಲ್ಲಿ ಕೈಯಿಡುವುದು, ಕಾಯಿಸಿದ ಕಬ್ಬಿಣದ ಸಲಾಕೆಯನ್ನು ಹಿಡಿಸುವುದು, ಕೆಂಡ ತುಳಿಯುವುದು, ದೇವರಿಗೆ ಬರೀ ಕೈಯಲ್ಲಿ ಕರ್ಪೂರದಾರತಿ ಮಾಡಿಸುವುದು ಮುಂತಾದ ಕ್ರಿಯೆಗಳು ದಿವ್ಯದ ಪ್ರಕಾರಗಳಾಗಿದ್ದವು. ತಾವು ತಪ್ಪು ಅಥವಾ ಅನ್ಯಾಯ ಮಾಡಿಲ್ಲವೆಂಬ ದೃಢನಂಬಿಕೆಯಿದ್ದವರು ಮಾತ್ರ ದೈವೀಪರೀಕ್ಷೆಗಳಿಗೆ ಒಪ್ಪಿಕೊಳ್ಳುತ್ತಿದ್ದರು. ದೈವವನ್ನು ವಂಚಿಸುವವನಿಗೆ ಉಳಿಗಾಲವಿಲ್ಲ ಎಂಬ ಹೆದರಿಕೆಯೇ ದಿವ್ಯಗಳ ಹಿಂದೆ ಇರುವ ಶಕ್ತಿಯಾಗಿದ್ದಿತು. ದಿವ್ಯಗಳಲ್ಲಿ ಮಾನಾಪಮಾನದ ಭಯವಲ್ಲದೆ ಜೀವಭಯವೂ ಇರುತ್ತದೆ. ಅಪರಾಧ ಮಾಡಿ ಆಪಾದನೆಗೆ ಒಳಗಾದವರು ಈ ದಿವ್ಯಗಳನ್ನು ಎದುರಿಸುವ ಧೈರ್ಯ ಮಾಡಲಾರರು. ಅಂತಹವರು ತಮ್ಮ ತಪ್ಪನ್ನು ಮೊದಲೇ ಒಪ್ಪಿಕೊಂಡು ತಮ್ಮ ಸಮುದಾಯ ಅಥವಾ ಊರಿನ ಹಿರಿಯರು ಕೊಡುವ ಶಿಕ್ಷೆಯನ್ನು ಅನುಭವಿಸುತ್ತಿದ್ದರು. ನಿರಪರಾಧಿಗಳು ಮಾತ್ರ ದೈವೀಶಕ್ತಿಯನ್ನು ನಂಬಿ ದೇವರನ್ಯಾಯಕ್ಕೆ ಒಪ್ಪುವ ಸಾಹಸ ಮಾಡುತ್ತಿದ್ದರು. ಮುಖ್ಯವಾಗಿ ತಪ್ಪಿತಸ್ಥರನ್ನು ಹೆದರಿಸಿ ಸತ್ಯ ಹೊರಬರುವಂತೆ ಮಾಡುವ ಉಪಾಯಗಳೇ ದಿವ್ಯಗಳು; ಇದರ ಹೊರತು ಮತ್ತೇನೂ ಅಲ್ಲ. ನಂಬಲರ್ಹವಾದ ಸಾಕ್ಷಿ ಪುರಾವೆಗಳು ಇಲ್ಲದ ಎಡೆಯಲ್ಲಿ ಮಾತ್ರ ದಿವ್ಯಗಳನ್ನು ಬಳಸಬೇಕು. ಸಾಕ್ಷ್ಯಾಧಾರಗಳಿದ್ದೂ ದಿವ್ಯಗಳ ಸಹಾಯದಿಂದ ನ್ಯಾಯನಿರ್ಣಯವಾಗಲಿ ಎಂದು ಕೇಳುವವನನ್ನು ಅಪರಾಧಿಯೆಂದೇ ಪರಿಗಣಿಸಬೇಕು ಎಂಬ ಅಭಿಪ್ರಾಯ ಪ್ರಾಚೀನ ನ್ಯಾಯವೇತ್ತರದ್ದಾಗಿತ್ತು. ಏಕೆಂದರೆ ಮಾನವ ಸಾಕ್ಷ್ಯಾಧಾರಗಳು ಮುಖ್ಯವೇ ಹೊರತು ಇಂಥಾ ಪರೀಕ್ಷೆಗಳಲ್ಲ ಎಂಬ ಅಭಿಪ್ರಾಯವು ವ್ಯಾಪಕವಾಗಿದ್ದಿತು. ನ್ಯಾಯ ನಿರ್ಣಯಮಾಡುವವರಿಗೆ ಬೇರೆ ಯಾವ ಉಪಾಯಗಳೂ ಹೊಳೆಯದ ಸಂದರ್ಭದಲ್ಲಿ ಉಗ್ರ ಅಪರಾಧಗಳನ್ನು ನಿರ್ಣಯಿಸುವಾಗ ಮಾತ್ರ ದಿವ್ಯಗಳನ್ನು ಏರ್ಪಡಿಸುತ್ತಿದ್ದರು. ಚಿಕ್ಕಪುಟ್ಟ ಆಪಾದನೆಗಳನ್ನು ತೀರ್ಮಾನಿಸುವಾಗ ಶಪಥ ಅಥವಾ ಆಣೆ-ಪ್ರಮಾಣದಂಥ ಹಗುರ ವಿಧಾನಗಳನ್ನು ಬಳಸುತ್ತಿದ್ದರು. ಜನಪದರು ಸೂರ್ಯ, ಚಂದ್ರರ ಹೆಸರಿನಲ್ಲಿ ಮಾತ್ರವಲ್ಲ, ಕುಲದೇವರ ಆಣೆ, ಹಸುಗೂಸಿನ ಆಣೆ, ಗೋವಿನ ಆಣೆ, ಅರಳೀಮರದ

ಆಣೆ, ತಂದೆ ತಾಯಿಗಳ ಆಣೆ ಇಡುತ್ತಿದ್ದರು. ಈ ವಸ್ತುಗಳು, ವ್ಯಕ್ತಿಗಳು ದೇವರಿಗೆ ಸಮ ಎಂಬುದು ಜನರ ಭಾವನೆಯಾಗಿತ್ತು. ಒಂದುವೇಳೆ ಸುಳ್ಳುಆಣೆ ಮಾಡಿದರೆ ಆಣೆಯಿಟ್ಟವನಿಗೆ ದೇವರು ಮುನಿಯುತ್ತಾನೆ, ಕೂಸಿಗೆ ಕೇಡಾಗುತ್ತದೆ, ಗೋವಿನ ಶಾಪ ತಟ್ಟುತ್ತದೆ, ತಂದೆ-ತಾಯಿಗಳ ಆಯುಷ್ಯ ಕಡಿಮೆಯಾಗುತ್ತದೆ ಇತ್ಯಾದಿ ನಂಬಿಕೆಗಳಿದ್ದವು. ಈ ಹಿನ್ನೆಲೆಯಲ್ಲಿ, ಸುಗುಟೂರು ಅರಸರ ಶಾಸನಗಳಲ್ಲಿ ಕಂಡುಬರುವ 'ಸೂರ್ಯ ಚಂದ್ರ ಅಗ್ನಿಸಾಕ್ಷಿ', 'ಬಲಗೈ ಯಡಗೈಯವನ ಯಂಜಲಿಗೆ ಆಸೆ ಮಾಡಿದಹಾಗೆ', 'ತಂದೆ ತಾಯರ ಕೊಂದ ಪಾಪಕೆ ಹೋಹರು'; 'ಗಂಗೆಯ ತಡಿಯಲಿ ಕವಿಲೆಯ ಕೊಂದ ಪಾಪ ಶ್ರೀ ಶ್ರೀ'; 'ಕಾಶಿಲಿ ಕಪಿಲೆಯ ಕೊಂದವರು ತಾಯಿಗೆ ತಪ್ಪಿದ ಪಾಪಕೆ ಹೋಹರು'; 'ತಮ್ಮ ತಾಯಿ ತಂದೆಯನು ವಾರಣಾಸಿಯಲಿ ಕೊಂದ ಪಾಪದಲಿ ಹೋಹರು'; 'ದೇವಲೋಕ ಮರ್ತ್ಯಲೋಕಕೆ ಹೊರಗೂ'- ಎಂಬಿವೇ ಮುಂತಾದ ಶಾಪಾಶಯ ಭಾಗಗಳು ಸುಗುಟೂರು ಅರಸರ ಕಾಲದ ದೈವೀಪ್ರಜ್ಞೆಯ ಸೂಚನೆಗಳಾಗಿವೆ.

ಪ್ರಾಚೀನ 'ಕುಲ', 'ಶ್ರೇಣಿ', 'ಗಣ' ಎಂಬ ನ್ಯಾಯಪ್ರಕಾರಗಳಿಗೆ ಪರ್ಯಾಯವಾದದ್ದು ಪಂಚಾಯ್ತಿನ್ಯಾಯ. ಇದು ಪ್ರಧಾನವಾಗಿ ಸ್ಥಳೀಯ ನ್ಯಾಯದಾನ ಪದ್ಧತಿಯೆನಿಸಿ ಕೊಂಡಿದ್ದಿತು. ವ್ಯಕ್ತಿ-ವ್ಯಕ್ತಿಗಳ ನಡುವೆ ಅಥವಾ ಕುಟುಂಬ-ಕುಟುಂಬಗಳ ನಡುವೆ ವಾದ-ವಿವಾದಗಳು ಉಂಟಾದಾಗ ಊರಿನ ಹಿರಿಯರು, ಪಂಚಾಯ್ತಿದಾರರು, ಗೌಡ-ಪ್ರಜೆಗಳು, ಗ್ರಾಮಸಮಸ್ತರು, ಪಂಚರು ಎಂದು ಮುಂತಾಗಿ ಕರೆಯಿಸಿಕೊಳ್ಳುವ ಸಮುದಾಯದ ಜನರ ತೀರ್ಮಾನ ಸ್ವೀಕರಿಸುವುದು ಪಂಚಾಯ್ತಿನ್ಯಾಯದ ತಿರುಳು. ಇದರಲ್ಲಿ ವಾದಿ-ಪ್ರತಿವಾದಿಗಳು ಅವರ ಕಡೆಯ ಕೆಲವರು, ಊರವರೂ ಪಾಲ್ಗೊಳ್ಳುತ್ತಾರೆ. ಹೆಚ್ಚಾಗಿ ವಿವಾದ ನಡೆದ ಸ್ಥಳದಲ್ಲಿಯೇ ನ್ಯಾಯನಿರ್ಣಯ ಆಗುತ್ತದೆ. ಜಗಳಗಳನ್ನು ಅನೌಪಚಾರಿಕವಾಗಿ ಪರಿಹರಿಸು ವುದು ಸಾಮಾನ್ಯ. ಊರಿನ ಹಿರಿಯರು ನ್ಯಾಯನಿರ್ಣಯದಲ್ಲಿ ಪ್ರಮುಖ ಪಾತ್ರವಹಿಸುತ್ತಾರೆ. ತಪ್ಪು ಒಪ್ಪುಗಳನ್ನು ನಿರ್ಣಯಿಸಲು ಸಮುದಾಯಗಳಲ್ಲಿ ವಿಶಿಷ್ಟ ಪದ್ಧತಿಗಳಿರುತ್ತವೆ. ಆದರೆ ಅವು ಬರವಣಿಗೆಗೆ ಇಳಿದ ನಿಯಮಗಳಲ್ಲ; ಅಥವಾ ಕಟ್ಟುನಿಟ್ಟಾಗಿ ಸೂತ್ರೀಕರಣ ಗೊಂಡಿರುವುದಿಲ್ಲ. ಸಮುದಾಯಗಳು ಚಿಕ್ಕಗಾತ್ರವಿದ್ದು ಸಾಮಾನ್ಯವಾಗಿ ಜನರು ಒಬ್ಬರ ನ್ನೊಬ್ಬರು ಅರಿತಿರುವುದರಿಂದ ಹಾಗೂ ಊರಿನ ಹಿರಿಯರ ಮಾತನ್ನು ಒಪ್ಪಿಕೊಳ್ಳುವುದು ನೈತಿಕವಾಗಿ ಸರಿ ಮತ್ತು ವ್ಯಾವಹಾರಿಕವಾಗಿ ಅನಿವಾರ್ಯ ಎಂಬ ಭಾವನೆಯಿಂದ ಇಂತಹ ನ್ಯಾಯ ನಿರ್ಣಯಕ್ಕೆ ಬೆಲೆ ಬರುತ್ತದೆ. ಸಾಮಾನ್ಯವಾಗಿ ನ್ಯಾಯನಿರ್ಣಯ ಮಾಡುವವರಿಗೆ ವಾದಿ-ಪ್ರತಿವಾದಿಗಳಿಬ್ಬರ ಶಕ್ತಿ-ದೌರ್ಬಲ್ಯಗಳ ಪರಿಚಯವಿರುತ್ತದೆ. ಹೀಗಾಗಿ ಅವರು ತಪ್ಪುನಿರ್ಣಯ ಮಾಡುವ ಸಾಧ್ಯತೆಗಳು ಕಡಿಮೆಯಾಗುವುವು. ಹಾಗೆಯೇ ವಾದಿ-ಪ್ರತಿವಾದಿಗಳು ಸ್ಥಳೀಯ ಹಿರಿಯರನ್ನು ಸುಲಭವಾಗಿ ವಂಚಿಸಲಾರರು. ಅಂತೆಯೇ ಅವರ ತೀರ್ಮಾನವನ್ನು ಸುಲಭವಾಗಿ ತಿರಸ್ಕರಿಸಲಾರರು. ಆದುದರಿಂದಲೇ ಪಂಚಾಯ್ತಿ ನ್ಯಾಯನಿರ್ಣಯವನ್ನು ಸಮುದಾಯದ ಜನರು ಮಾತ್ರವಲ್ಲ, ಹೊರಗಿನ ವ್ಯಕ್ತಿ-ಶಕ್ತಿಗಳೂ

ಆಳುವ ಸರಕಾರಗಳೂ ಮನ್ನಿಸುತ್ತಿದ್ದವು. ವಾದಿ-ಪ್ರತಿವಾದಿಗಳಲ್ಲದೆ ಸ್ಥಳೀಯ ಹಿರಿಯರೂ ಸಮುದಾಯದ ಪ್ರತಿನಿಧಿಗಳೂ ಪಾಲ್ಗೊಳ್ಳು ವುದರಿಂದ ಇಂಥಾ ಪದ್ಧತಿಯನ್ನು ಸಹಭಾಗಿತ್ವದ ನ್ಯಾಯ (Participatory Justice) ಎಂದು ವರ್ಣಿಸಬಹುದು. ಎಲ್ಲಿಯವರೆಗೆ ಗ್ರಾಮವೊಂದು ಐಕ್ಯಮತದಿಂದ ಇರುವುದೋ ಅಲ್ಲಿಯವರೆಗೆ ವಾದಿ-ಪ್ರತಿವಾದಿಗಳಿಬ್ಬರೂ ತಮ್ಮ ಜಗಳಗಳನ್ನು ಸರ್ವೇ ಸಾಮಾನ್ಯವಾಗಿ ಹೊರಗಿನ ನ್ಯಾಯದಾನ ವ್ಯವಸ್ಥೆಗಳಿಗೆ ಕೊಂಡೊಯ್ಯುವುದಿಲ್ಲ.

ಗ್ರಾಮವೊಂದರ ಎಲ್ಲ ವ್ಯಾಜ್ಯಗಳೂ ಊರಿನ ಪಂಚಾಯ್ತಿಕಟ್ಟೆಗೇ ಹೋಗ ಬೇಕೆಂದಿಲ್ಲ. ಕೆಲವೊಂದು ಅಂದರೆ ಮನೆಯೊಳಗಿನ, ರಕ್ತಸಂಬಂಧಿಗಳ ನಡುವಿನ ಜಗಳ, ಮನೆತನದ ಆಸ್ತಿಪಾಸ್ತಿಗಳ ವಿಲೇವಾರಿ, ಹಿಸ್ಸೇ ಸಂಬಂಧಗಳ ಜಗಳ, ಅಣ್ಣ-ತಮ್ಮಂದಿರ ಜಗಳ, ಅತ್ತೆ-ಸೊಸೆಯರ ಮನಸ್ತಾಪ ಇಂತಹ ಬಹುತೇಕ ಸಂದರ್ಭಗಳಲ್ಲಿ ಊರು ಅಥವಾ ವಂಶದ ಹಿರಿಯರ ಸಮ್ಮುಖದಲ್ಲಿ ಪ್ರಕರಣಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ಬಹುತೇಕ ಸಂದರ್ಭಗಳಲ್ಲಿ ಎಲ್ಲರಿಗೂ ಒಪ್ಪಿತವಾದ ರೀತಿಯಲ್ಲಿ ಪ್ರಕರಣಗಳು ತೀರ್ಮಾನವಾಗುತ್ತಿದ್ದವು.

ಕೆಲವು ಪ್ರಕರಣಗಳು ಒಂದು ಕುಟುಂಬ ಅಥವಾ ವ್ಯಕ್ತಿ-ವ್ಯಕ್ತಿಗಳಿಗೆ ಸಂಬಂಧಪಟ್ಟಿರದೆ ಇಡೀ ಊರಿಗೇ ಸಂಬಂಧಿಸಿರುತ್ತದೆ. ದೇವಾಲಯ, ಜಾತ್ರೆ, ಊರಬ್ಬ, ಕೆರೆ ಕಾಲುವೆ ನೀರು ಹಂಚಿಕೆ, ದೇವರ ಮೆರವಣಿಗೆ ಮುಂತಾದವುಗಳಿಗೆ ಸಂಬಂಧಿಸಿದ ತಕರಾರುಗಳನ್ನು ಊರಿನ ಗೌಡ, ಪಟೇಲ, ಶ್ಯಾನುಭೋಗ ಮುಂತಾದವರು ಒಟ್ಟಿಗೆ ಸೇರಿ ದೀರ್ಘ ಚರ್ಚೆನಡೆಸಿ ತೀರ್ಮಾನ ಮಾಡುತ್ತಿದ್ದರು.

ಎರಡು ಅಥವಾ ಹೆಚ್ಚು ಊರುಗಳಿಗೆ ಸಂಬಂಧಿಸಿದ ಪ್ರಕರಣಗಳನ್ನು ದೊಡ್ಡ ಪಂಚಾಯ್ತಿ, ಏಳ್ಹಳ್ಳಿ ಪಂಚಾಯ್ತಿ, ಮಾಗಣೆ-ಪಟ್ಟಡಿ ಪಂಚಾಯ್ತಿ ಎಂದು ಮುಂತಾಗಿ ಕರೆಯಿಸಿಕೊಳ್ಳುವ ಪಂಚಾಯ್ತಿದಾರರನ್ನೊಳಗೊಂಡ ಸಭೆಯು ಪ್ರಕರಣಗಳನ್ನು ಬಗೆಹರಿಸುತ್ತಿದ್ದಿತು. ಸಭೆ ನಡೆಯುವ ಊರಿನಲ್ಲಿ ಪಂಚಾಯ್ತಿದಾರರಿಗೆ ಮತ್ತು ಇತರರಿಗೆ ಅದ್ದೂರಿ ಭೋಜನಕೂಟವು ಏರ್ಪಡುತ್ತಿದ್ದಿತು. ಇಂಥಾ ವ್ಯವಸ್ಥೆಯಿಂದ ಗ್ರಾಮಗಳ ನಡುವೆ ಸೌಹಾರ್ದ ಭಾವನೆ ಗಟ್ಟಿಯಾಗಿ ಉಳಿಯುತ್ತಿತ್ತು.

ಜನರ ಜಾತಿ-ನಡೆವಳಿಕೆಗಳಲ್ಲಿ ವ್ಯತ್ಯಯ ಉಂಟಾಗಿದೆ ಎಂದು ದೂರುಬಂದಾಗ ಸಂಬಂಧಪಟ್ಟ ಜಾತಿಯ ಎಲ್ಲ ಕುಟುಂಬಗಳ ಹಿರಿಯರು ಪಂಚಾಯ್ತಿ ಸೇರಿ ಜಾತಿಗೆ ಸಂಬಂಧಿಸಿದ ಹತ್ತು ಹಲವು ಬಗೆಯ ಪ್ರಕರಣಗಳಿಗೆ ನ್ಯಾಯದಾನದ ವ್ಯವಸ್ಥೆ ಮಾಡಿ ಕೊಳ್ಳುತ್ತಿದ್ದರು. ಆಯಾ ಜಾತಿಗಳಿಗೆ ಸಂಬಂಧಿಸಿದ ಹಾಗೆ ಅವುಗಳ ತೀರ್ಮಾನಕ್ಕಾಗಿ ಕಟ್ಟೆಮನೆಗಳು ಇರುತ್ತಿದ್ದವು.

ಅಪರಾಧಗಳಿಗೆ ವಿಧಿಸಿದ ದಂಡವು ಹಣ, ಧಾನ್ಯ, ಅನ್ನದಾನ ರೂಪದಲ್ಲಿಯಲ್ಲದೆ, ಬಹಿಷ್ಕಾರ ರೂಪದಲ್ಲೂ ಇರುತ್ತಿದ್ದಿತು. ಅಲ್ಲದೆ, ಆಣೆ-ಪ್ರಮಾಣ, ಕೆಂಡಮುಟ್ಟಿಸುವುದು,

ಕಾದ ಸರಳು ಮುಟ್ಟಿಸುವುದು, ನಾಲಿಗೆಗೆ ಸಣ್ಣ ಬರೆಹಾಕಿಸುವುದು ಮುಂತಾದ ಶಿಕ್ಷೆಗಳನ್ನು ವಿಧಿಸಲಾಗುತ್ತಿತ್ತು.

ಒಂದು ವೃತ್ತಿ ಅಥವಾ ವಾಣಿಜ್ಯ ಅಥವಾ ಕೌಶಲ್ಯವನ್ನು ಅನುಸರಿಸುತ್ತಿದ್ದ ಸ್ಥಳೀಯ ಕುಟುಂಬಗಳು ಒಟ್ಟಾಗಿ ಶ್ರೇಣಿಗಳನ್ನು ರೂಪಿಸಿಕೊಳ್ಳುತ್ತಿದ್ದವು. ಇಂಥಾ ಶ್ರೇಣಿಗಳ ನಡುವೆ ಉಂಟಾಗುವ ಭಿನ್ನಾಭಿಪ್ರಾಯಗಳನ್ನು ಪರಿಹರಿಸಿಕೊಳ್ಳಲು ಶ್ರೇಣಿಪಂಚಾಯ್ತಿಗಳು ಸ್ಥಾಪಿತವಾಗಿರುತ್ತಿದ್ದವು. ಇವು ಹೆಚ್ಚಾಗಿ ದೊಡ್ಡ ಗ್ರಾಮ ಮತ್ತು ಪಟ್ಟಣಗಳಲ್ಲಿದ್ದವು. ಇದಕ್ಕೂ ವಿಸ್ತಾರವಾದ ವ್ಯಾಪ್ತಿಯುಳ್ಳ ಕುಲ ಮತ್ತು ಶ್ರೇಣಿಗಳು ಕೊಟ್ಟ ತೀರ್ಪನ್ನು ಪುನರ್ ಪರಿಶೀಲಿಸುವ ಅಧಿಕಾರ ಹೊಂದಿದ್ದ ಊರಿನ ಪೌರಸಭೆಗಳು ಇದ್ದವು. ಗ್ರಾಮಸ್ಥರ ಪಂಚಾಯ್ತಿ ನಿರ್ಣಯವನ್ನು ಸರ್ವೇಸಾಮಾನ್ಯವಾಗಿ ಎಲ್ಲರೂ ಒಪ್ಪಿಕೊಳ್ಳುತ್ತಿದ್ದರು. ಆ ನಿರ್ಣಯದ ವಿರುದ್ಧವಾಗಿ ರಾಜನಿಗೆ ಅಥವಾ ರಾಜನಿಂದ ನೇಮಕಗೊಂಡ ನ್ಯಾಯಾಧೀಶನಿಗೆ ದೂರುಕೊಡುವ ಅವಕಾಶವಿತ್ತು.

ಧಾರ್ಮಿಕ ಗುರುಗಳೂ ಕೂಡ ಸಾಮಾಜಿಕ ಮತ್ತು ಧಾರ್ಮಿಕ ಸ್ವರೂಪದ ಕೆಲವೊಂದು ಪ್ರಕರಣಗಳನ್ನು ಇತ್ಯರ್ಥ ಮಾಡುತ್ತಿದ್ದರು. ಇದಕ್ಕೆ ಒಂದು ಸ್ಪಷ್ಟ ಉದಾಹರಣೆ: ಸುಗುಟೂರು ಅರಸ ಮುಮ್ಮಡಿ ಚಿಕ್ಕರಾಯ ತಮ್ಮೇಗೌಡ(೧೬೯೩-೧೭೦೫)ನ ಕಾಲದಲ್ಲಿ 'ಆನೇಕಲ್ಲಿನಲ್ಲಿ ನಗರ್ತರಪೇಟೆ ಮತ್ತು ದೇಶಪೇಟೆಗಳ ನಡುವೆ ನಂದಿಕೋಲು ಮತ್ತು ಕಾಳಿಕಾದೇವಿಯ ಮೆರವಣಿಗೆಯ ನಿಮಿತ್ತವಾಗಿ ಸಮಯಗಾರ ಮುತ್ತದಾಸರಿಯ ಮೂಲಕ ಕಲಹವಾಗಲು, ಆಗ ಹೊಸಕೋಟೆಸ್ಥಳದ ವೆಂಕಟಾಚಾರ್ಯರೆಂಬ ವೈಷ್ಣವಗುರುಗಳು ಆನೇಕಲ್ಲಿಗೆ ದಯಮಾಡಿಸಿ ಉಭಯಪೇಟೆ ಸೆಟ್ಟಿ ವರ್ತಕರು ಮುಂತಾದ ಪಣಕಟ್ಟು ಜನರನ್ನು ಕರೆಯಿಸಿಕೊಂಡು ಆ ಜನರಿಗೆ ಸಮ್ಮತಿ ಮಾಡಿ, ಪೂರ್ವಪ್ರಕಾರದಲ್ಲಿ ದೇಶಪೇಟೆಯಲ್ಲಿ ನಂದಿಕೋಲು ಮೆರವಣಿಗೆಯನ್ನು, ನಗರ್ತರಪೇಟೆಯಲ್ಲಿ ಕಾಳಿಕಾದೇವಿ ಮೆರವಣಿಗೆಯನ್ನು ಆಗ ಮಾಡಿಸಿ ಉಭಯ ಪೇಟೆಗಳನ್ನು ಕ್ಷೇಮದಲ್ಲಿರಿಸಿದರು. ಈ ಸ್ವಾರಸ್ಯಕರ ಸಂಗತಿ ತಿಳಿದುಬರುವುದು ಸುಗುಟೂರು ಅರಸರ ಹೊಸಕೋಟೆ ತಾಮ್ರ ಶಾಸನದಿಂದ.

'ಗಣ' ಎಂಬುದು ಸಭೆ-ಪಂಚಾಯ್ತಿಗಳಿಗೆ ಸಂಬಂಧಿಸಿದ್ದೆಂದು ಮೇಲೆಯೇ ಉಲ್ಲೇಖಿಸಲಾಗಿದೆ. ಬಹುಕಾಲದಿಂದ ಮುಂದುವರೆದುಕೊಂಡು ಬಂದ ಸ್ಥಾನಿಕಸಭೆಗಳು ಕೂಡ ಸಾಮಾಜಿಕ, ಆಡಳಿತೀಯ ಮತ್ತು ನ್ಯಾಯಿಕ ಸ್ಥಳೀಯ ವಿಷಯಗಳ ತೀರ್ಮಾನವನ್ನು ಮಾಡುತ್ತಿದ್ದವು. ಈ ನ್ಯಾಯವ್ಯವಸ್ಥೆಯನ್ನು ಅಧ್ಯಯನಮಾಡಿದ ಭಾರತದ ಕಾನೂನು ಆಯೋಗವು ಇವುಗಳ ಮಹತ್ವವನ್ನು ಹೀಗೆ ಎತ್ತಿಹೇಳಿದೆ:

"ಜನಪ್ರಿಯವಾದ ಗ್ರಾಮಸಭಾ ನ್ಯಾಯಾಲಯಗಳು ಬಹುಕಾಲ ಮುಂದುವರೆದು ಬಂದು ಭಾರತದಲ್ಲಿ ಬ್ರಿಟಿಷರ ಆಳ್ವಿಕೆಯ ಪ್ರಾರಂಭಕಾಲದಲ್ಲಿಯೂ ಅಸ್ತಿತ್ವದಲ್ಲಿದ್ದವು. ಅವುಗಳ ಪ್ರಾಚೀನತೆಯಿಂದಾಗಿ ಮತ್ತು ಅವುಗಳಿಗೆ ಪರ್ಯಾಯವಾಗಿ ಯಾವ ಸಮರ್ಥ

ನ್ಯಾಯಮಂಡಳಿಗಳೂ ಇಲ್ಲದಿರುವುದರಿಂದ ಅವು ಮುಂದುವರೆದುಕೊಂಡು ಬರಲು ಅನುಕೂಲವಾಗಿತ್ತು. ಆ ಕಾಲದ ಗ್ರಾಮಸಮಾಜದ ರಚನೆ ಮತ್ತು ನ್ಯಾಯಮಂಡಳಿಗಳು ನಿರ್ವಹಿಸುತ್ತಿದ್ದ ರಾಜಸ್ವರೂಪದ ಮುಖ್ಯ ಪ್ರಕಾರ್ಯದ ಸ್ವರೂಪದ ಮತ್ತು ನ್ಯಾಯ ಮಂಡಳಿಯ ಕಾರ್ಯದಲ್ಲಿ ಸ್ಥಳೀಯ ರಾಜರು ಹಸ್ತಕ್ಷೇಪ ಮಾಡದಿರುವುದು-ಈ ಕಾರಣಗಳಿಂದಾಗಿ ಅವು ಮುಂದುವರೆಯಲು ಸಾಧ್ಯವಾಯಿತು."

ಕ್ರಿಸ್ತಶಕ ೧೬೩೮ರ ಸುಮಾರಿಗೆ ಸುಗುಟೂರು ಅರಸರ ಪ್ರದೇಶವು ರಣದುಲ್ಲಾಖಾನನ ಆಕ್ರಮಣಕ್ಕೆ ಈಡಾಯಿತು. ಆ ನಂತರದಲ್ಲಿ ಟಿಪ್ಪು-ಹೈದರಾಲಿಯರ ಆಕ್ರಮಣಗಳು ನಡೆದು, ಕೊನೆಗೆ ಮೈಸೂರು ಅರಸರು ಮತ್ತು ಬ್ರಿಟಿಷರ ಕಂಪನಿಯ ಆಡಳಿತಕ್ಕೆ ಸುಗುಟೂರು ಅರಸರ ಪ್ರದೇಶಗಳು ಹರಿದು ಹಂಚಿಹೋದವು. ಮೈಸೂರು ಸಂಸ್ಥಾನದ ಆಡಳಿತಕ್ಕೆ ಒಳಪಟ್ಟ ಕೋಲಾರ, ಬೆಂಗಳೂರುಜಿಲ್ಲಾ ಪ್ರದೇಶಗಳಲ್ಲಿ ಅಮೀಲರು, ಪಟ್ಟಣ ಮುನ್ಸಿಫ್, ಮುಖ್ಯ ಸದರ್ ಮುನ್ಸಿಫ್ ಮತ್ತು ಯೂರೋಪಿಯನ್ ಸೂಪರಿಂಟೆಂಡೆಂಟ್‌ರ ನ್ಯಾಯಾಲಯಗಳು ತಲೆಯೆತ್ತಿದವು. ಆದರೂ ಇಲ್ಲಿ ಕೆಲವು ಪ್ರಕರಣಗಳಲ್ಲಿ ಪಂಚಾಯ್ತಿಯ ಸಹಾಯ ಪಡೆಯುವುದು ಕಡ್ಡಾಯವಾಗಿತ್ತು. ಬ್ರಿಟಿಷರ ಕಂಪನಿ ಸರ್ಕಾರದ ಆಡಳಿತಕ್ಕೆ ಒಳಪಟ್ಟ ಸುಗುಟೂರು ಅರಸರಿಗೆ ಸೇರಿದ್ದ ಚಿತ್ತೂರುಜಿಲ್ಲೆಯ ಪುಂಗನೂರು ಪ್ರದೇಶದಲ್ಲಿ ಕ್ರಿ.ಶ. ೧೭೯೯ ರಿಂದ ೧೮೬೧ರ ವರೆಗೆ ಪೊಲೀಸ್ ಕೊತ್ವಾಲನ ಅಧಿಕಾರವನ್ನು ರಾಜನಿಗೆ ನೀಡಲಾಗಿತ್ತು. ಕ್ರಿ.ಶ.೧೮೬೧ರ ಅನಂತರ ಕಾಯಂ ಜಮೀನ್‌ದಾರಿಕೆ ಜವಾಬ್ದಾರಿ ದೊರೆತು ಪ್ರತಿಯೊಂದು ಹಳ್ಳಿಯಲ್ಲೂ ಮುನ್ಸಿಫ್ ಅಥವಾ ಮಣೆಗಾರ (ಪಟೇಲ) ಎಂಬುವವರನ್ನು ನೇಮಿಸಲಾಯಿತು. ಮಣೆಗಾರನು ಗ್ರಾಮದ ನ್ಯಾಯಪತಿಯಾಗಿ ಪೊಲೀಸ್ ಮತ್ತು ಸರ್ಕಾರಕ್ಕೆ ಅಪರಾಧಗಳನ್ನು ಮತ್ತು ಅಪರಾಧಿಗಳನ್ನು ಪತ್ತೆಹಚ್ಚುವಲ್ಲಿ ನೆರವಾಗುತ್ತಿದ್ದನು. ಇದು ವಿಜಯನಗರ ಕಾಲದ ಗ್ರಾಮಮುಖಂಡ ಮತ್ತು ತಳಾರಿಯ ಪರಿಷ್ಕೃತ ಅಧಿಕಾರವಾಗಿದ್ದಿತೆನ್ನಬಹುದು. ಉಳಿದಂತೆ ಕಾರ್ನ್‌ವಾಲಿಸನ ಪದ್ಧತಿಯನ್ನು ಅನುಸರಿಸಲಾಗುತ್ತಿತ್ತು.

ಗ್ರಾಮಮಟ್ಟದ ಸ್ಥಳೀಯ ಕಮಿಷನರರ ನ್ಯಾಯಾಲಯ, ಜಿಲ್ಲಾ ದಿವಾನಿ ಅದಾಲತ್ತು, ಪ್ರಾಂತೀಯ ಮೇಲ್ಮನವಿ ನ್ಯಾಯಾಲಯ, ಸದರ್ ದಿವಾನಿ ಅದಾಲತ್ತು, ಅಂತಿಮವಾಗಿ ಕಲ್ಕತ್ತದಲ್ಲಿನ ಗೌರ್ನರ್ ಜನರಲ್ ಇನ್ ಕೌನ್ಸಿಲ್ ಎಂಬ ನ್ಯಾಯಪ್ರದಾನ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು. ಮುಂದೆ ಈ ಪ್ರದೇಶಗಳು ಬ್ರಿಟಿಷರ ನೇರ ಆಳ್ವಿಕೆಗೆ ಒಳಪಟ್ಟಾಗ ಕೋರ್ಟುಗಳು ಸ್ಥಾಪನೆ ಆದವು. ಅವುಗಳಿಂದ ಇಡೀ ದೇಶಕ್ಕೆ ಅನ್ವಯವಾಗುವ ನಿಯಮಗಳು ಬಳಕೆಗೆ ಬಂದವು. ನ್ಯಾಯಾಲಯದ ಕಣ್ಣಿನಲ್ಲಿ ಎಲ್ಲರೂ ಸಮಾನರು ಎಂಬ ತತ್ತ್ವ ಸ್ವೀಕೃತವಾಯಿತು. ಮುನ್ಸಿಫ್ ಕೋರ್ಟು ಎಂಬ ಕೆಳಗಿನ ನ್ಯಾಯಾಲಯದಿಂದ ಸರ್ವೋಚ್ಛ ನ್ಯಾಯಾಲಯದವರೆಗೆ ಇರುವ ಕೋರ್ಟುಗಳ ಜಾಲ ಸ್ಥಾಪಿತವಾಯಿತು. ಹಾಗಾಗಿ ಕಾಲಕ್ರಮೇಣ ಸ್ಥಳೀಯ ನ್ಯಾಯದಾನ ವ್ಯವಸ್ಥೆಗಳು ಬಲಗುಂದಿ ನಿಷ್ಕ್ರಿಯವಾದುವು.

ಹಳ್ಳಿಗರೂ, ಪಟ್ಟಣಿಗರೂ ತಮ್ಮ ದೂರುಗಳನ್ನು ಸ್ಥಳೀಯ ಸಮುದಾಯದೆದುರಿಗೆ ಒಯ್ಯುವ ಬದಲು ಬ್ರಿಟಿಷರು ಸ್ಥಾಪಿಸಿದ ಕೋರ್ಟುಗಳಿಗೆ ಒಯ್ಯಲು ಪ್ರಾರಂಭಿಸಿದರು.

ಕೇಂದ್ರ ಮತ್ತು ರಾಜ್ಯಮಟ್ಟದಲ್ಲಿ ಸಿದ್ಧಪಡಿಸಿದ ನ್ಯಾಯಸೂತ್ರಗಳನ್ನು ಇಂದಿನ ಕೋರ್ಟುಗಳು ಅನುಸರಿಸುತ್ತವೆ. ಈ ಸೂತ್ರಗಳು ಅವ್ಯೆಯಕ್ತಿಕವೂ ಸಂಕೀರ್ಣವೂ ಆಗಿರುವುದರಿಂದ ಅವುಗಳನ್ನು ಅರ್ಥೈಸಲು ನ್ಯಾಯವಾದಿಗಳ ಒಂದು ದೊಡ್ಡ ದಂಡೇ ಬೇಕಾಗುತ್ತಿದೆ. ನ್ಯಾಯವಾದಿಗಳು 'ನ್ಯಾಯವಂತನಿಗೆ ನ್ಯಾಯ, ಅನ್ಯಾಯ ಮಾಡಿದವನಿಗೆ ಶಿಕ್ಷೆ' ಎಂಬ ತತ್ವವನ್ನು ಒಪ್ಪದೆ ತಮ್ಮ ಕಕ್ಷಿದಾರರು ಗೆಲ್ಲಬೇಕು ಎಂಬ ವೃತ್ತಿ ನೀತಿಯೊಂದನ್ನು ಮಾತ್ರ ಪಾಲಿಸುವವರು. ಈಗ ಕೆಲವು ನಗರ-ಪಟ್ಟಣ ಪ್ರದೇಶಗಳಲ್ಲಿ ಅಸ್ತಿತ್ವದಲ್ಲಿರುವ 'ಲೋಕ ಅದಾಲತು'ಗಳನ್ನು ಗ್ರಾಮಾಂತರ ಪ್ರದೇಶಗಳಿಗೂ ಸೂಕ್ತ ಮಾರ್ಪಾಡುಗಳೊಂದಿಗೆ ವಿಸ್ತರಿಸಿ ಲಾಭ ಪಡೆಯಬಹುದೇನೋ.

### ಆಕರಗಳು


೧. ಕೃಷ್ಣಮೂರ್ತಿ ಪಿ.ವಿ., ೧೯೯೪, ಸುಗುಟೂರು ವೀರಶೈವ ಅರಸುಮನೆತನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೨. ನಾಗೇಶ್ ಎಚ್.ವಿ., ೧೯೯೪, ಗ್ರಾಮೀಣ ನ್ಯಾಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ವೆಂಕಟರತ್ನಂ ಎ.ವಿ., ೧೯೭೪, ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರಕಾರ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೩

# ಹಾಲೇರಿ ಅರಸರ ನ್ಯಾಯಾಡಳಿತ

**ಡಾ. ಎಂ. ಜಿ. ನಾಗರಾಜ್**

ಹಾಲೇರಿ ಅರಸರು ಕ್ರಿ.ಶ.ಸು.೧೫೮೬ ರಿಂದ ಕ್ರಿ.ಶ.೧೮೩೪ರ ವರೆಗೆ ಕೊಡಗನ್ನು ಆಳಿದ ದೊರೆಗಳು. ಇಕ್ಕೇರಿವಂಶದ ರಾಜಕುಮಾರ (ವೀರಒಡೆಯ) ವೀರರಾಜ ವಂಶೀಕರಿಂದಾದ ರಾಜಕೀಯ ವಂಚನೆಯಿಂದ ಸಿಡಿದುಬಂದ ಅವನು ಕೊಡಗಿನ ಹಾಲೇರಿಯಲ್ಲಿ ಬಂದು ವಂಶಸ್ಥಾಪನೆ ಮಾಡಿದ. ಅವನ ಕೊಡಗಿನ ವಂಶೀಕರಿಗೆ ಹಾಲೇರಿ ಅರಸರೆಂದು ಹೆಸರಾಯಿತು. ಸದ್ಯ ಆ ವಂಶದ ಆಡಳಿತದಲ್ಲಿ ನ್ಯಾಯವ್ಯವಸ್ಥೆಗೆ ಒಂದು ಮಾದರಿಯಾಗಿ ಅದರ ಪೂರ್ವವಂಶ ಸಂಬಂಧದ ಚಂಗಾಳ್ವರ ಕಾಲದ ನ್ಯಾಯವ್ಯವಸ್ಥೆಯ ಪರಂಪರೆ ಕೊಡಗಿನಲ್ಲಿದ್ದು, ಅದು ಶಾಸನಗಳಿಂದ ವಿದಿತವಾಗುತ್ತದೆ.

ದೂರು, ದುಮ್ಮಾನ, ಸಂಕಷ್ಟಗಳಿಗೆ ಪರಿಹಾರ ಒದಗಿಸುವ ತೀರ್ಮಾನವು ನ್ಯಾಯ ವ್ಯವಸ್ಥೆಯ ಒಂದು ಮುಖ. ಆಸ್ತಿ ಸಲ್ಲಬೇಕಾದ, ಸೇರಬೇಕಾದಾಗ ಅಥವಾ ಅನ್ಯಾಯ, ಶೋಷಣೆಗೊಳಗಾದ ವ್ಯಕ್ತಿಗೆ ನ್ಯಾಯ ದೊರಕಿಸಿಕೊಡುವುದು, ಅದರ ಪಾಲನೆ ಆಗದಿದ್ದಾಗ ಒದಗುವ ಶಿಕ್ಷೆಯೂ ಫಲವೂ ಫಲಶ್ರುತಿಯಾಗಿ ಉಕ್ತಮಾಡುವುದು ಶಾಸನಗಳಲ್ಲಿ ಕಾಣಬರುವ ಅಂಶ. ೧೩ನೇ ಶತಮಾನದ ಗಣಗೂರು ಶಾಸನದಲ್ಲಿ,[1] ಗುಂದನಾಡು ೭೦ರಲ್ಲಿದ್ದವರಲ್ಲಿ ವಂಶಿಕ ಹಕ್ಕು ಎಂದರೆ ಗಂಡುಸಂತಾನವಿಲ್ಲದಿದ್ದಾಗ ಹೆಣ್ಣುಮಗಳಿಗೆ ಹಾಗೂ ಅವರ ಹೆಣ್ಣುಮಕ್ಕಳಿಗೆ ಆಸ್ತಿ ಸಲ್ಲಬೇಕು. ಈ ಧರ್ಮಪಾಲನೆ ಆಗದಿದ್ದರೆ ಉಂಟಾಗುವ ಪಾಪಫಲಗಳು ಕುರಿತೂ ಹೇಳಿದೆ. ಇದೇ ಶತಮಾನದ ಚೌಡ್ಲುವಿನ ಶಾಸನದಲ್ಲಿ[2] 'ಪೂರ್ವ್ವದಲಿ ಹೆಣಿಂಗೆ ಸಲುವ ಸ್ವಾಸ್ತೆ ಮರಿಯಾದಿಯ ಕೊಟ್ಟ ಕ್ರಮವೆಂದರೆ ಹೆಣ್ಣಿಂಗೆ ಹೆಣ್ಣುಮಕ್ಕಳಿಂಗೆ ತೊತ್ತಿನ ಮಕ್ಕಳಿಂಗೆ ಸಲುವುದು ಚವುಡ (ಠಾವ್) ಮಾನೆಯೊಳು' ಎಂದಿರುವಲ್ಲಿ ವಂಶಪಾರಂಪರಿಕವಾಗಿ ಆಸ್ತಿಯ ಹಕ್ಕು ಕೇವಲ ಹೆಣ್ಣುಮಕ್ಕಳಿಗಲ್ಲ, ಅವರ ಹೆಣ್ಣುಮಕ್ಕಳಿಗೆ ಹಾಗೂ ಅವರ ತೊತ್ತಿನ ಹೆಣ್ಣುಮಕ್ಕಳಿಗೂ ಇದ್ದ ವಿಶಿಷ್ಟ ವ್ಯವಸ್ಥೆಯೂ ಕಾಣಬರುತ್ತದೆ. ಒಂದುರೀತಿ ಮಾತೃಪ್ರಧಾನ ವ್ಯವಸ್ಥೆಯ ಪ್ರಭಾವದ ಸೂಚನೆಯೂ ಇಲ್ಲಿ ಕಾಣುತ್ತದೆ. ಈ ಎರಡೂ ಸಂದರ್ಭಗಳೂ ಚಂಗಾಳ್ವರ

ಹರಿಹರದೇವನ ಕಾಲದ್ದೆನ್ನಬಹುದು. ಹೀಗೆ ಒಂದು ಅಚ್ಚುಕಟ್ಟು ಇದ್ದ ವ್ಯವಸ್ಥೆಯಲ್ಲಿ ಹಾಲೇರಿ ಅರಸುಪೂರ್ವ ಕ್ರಿ.ಶ.೧೫೬೩ ರಿಂದ ೧೫೮೬ರ ಸುಮಾರಿನವರೆಗೆ ಕೊಡಗಿನಲ್ಲಿದ್ದ ನಾಡಬಾಚೆಕಾರರು, ಅರೆಬಾಚೆಕಾರರು, ಬಾಳುಕಾರರು ಎಂಬ ಸ್ಥಳೀಯ ಸ್ವಘೋಷಿತ ಊರೊಡೆಯರು ಪರಸ್ಪರ ಕಲಹವಾಡುತ್ತಿದ್ದರು. ನಾಯಕರು ಬಂದಮೇಲೆ ಅಡಗಿದರು[1] ಎಂದಿರುವಲ್ಲಿ ಆ ಅವಧಿಯ ನ್ಯಾಯವ್ಯವಸ್ಥೆಯ ಚಿತ್ರವನ್ನು ಊಹಿಸಬಹುದು. ಫೆರಿಸ್ತನು ಉಕ್ತಮಾಡುವ ೧೬ನೇ ಶತಮಾನಾಂತ್ಯದ ನಾಯಕರ ಕಾಲದ ನ್ಯಾಯವ್ಯವಸ್ಥೆಯು ನಿಖರವಾಗಿ ತಿಳಿಯದು. ಆದರೆ ಹಾಲೇರಿ ಮೊದಲ ಅರಸ ವೀರರಾಜ ಒಡೆಯನ ಕಾಲದ ನ್ಯಾಯತೀರ್ಮಾನದ ಚಾವಡಿ (ರಾಜತೀರ್ಮಾನದ ಚಾವಡಿ) ರೂಪುಗೊಂಡ ಹಿನ್ನೆಲೆಯು ಇದರ ಚಿತ್ರವನ್ನು ಸ್ಥೂಲವಾಗಿ ನೀಡುತ್ತದೆ.

ಕೊಡವಭಾಷೆಯ 'ನಾಡ್‌ಕಟ್ಟ್‌ಪಾಟ್'ನಲ್ಲಿ ಹಾಲೇರಿಯ ಚಾವಡಿಯಲ್ಲಿ ನ್ಯಾಯ ಪಂಚಾಯಿತಿಗೆ ಸೇರುತ್ತಿದ್ದರು. ಹಗಲು-ರಾತ್ರಿ ಕುಳಿತರೂ ತೀರ್ಮಾನ ಆಗುತ್ತಿರಲಿಲ್ಲ ಎಂದಿದೆ. ಹಿರಿಯರ ಸ್ಮಾರಕ ಕಟ್ಟಡವಾದ 'ಕೈಮಡ' ಕಾನೂನಿಗೆ, ಅಂಬಲ ಪಂಚಾಯಿತಿಗೆ ಅರ್ಥಾತ್ ನ್ಯಾಯಾಡಳಿತಕ್ಕೆ ಎಂಬ ಗಾದೆ ಕೊಡಗಿನಲ್ಲಿದೆ. ಚಾವಡಿ, ಅಂಬಲ ಶಬ್ದಗಳು ನ್ಯಾಯತೀರ್ಮಾನದ ದೃಷ್ಟಿಯಿಂದ ಏಕಾರ್ಥ ಅನ್ವಯವಾಗಿವೆ. ಜಂಗಮವೇಷದಲ್ಲಿ ಹಾಲೇರಿನಾಡಿನಲ್ಲಿ ಬಂದುನಿಂತು ಮಕ್ಕಳಿಗೆ 'ಕೈಮಠ'ದಲ್ಲಿ ಪಾಠಹೇಳುತ್ತ ವೀರರಾಜ (ವೀರಒಡೆಯ) ಜನಪ್ರಿಯನಾಗಿದ್ದ. ಹಾಲೇರಿಯಲ್ಲಿ ನ್ಯಾಯತೀರ್ಮಾನದ ಬಗೆಯನ್ನು ಗಮನಿಸುತ್ತಿದ್ದ.

ಪಂಚಾಯಿತಿಕಟ್ಟೆಗಳಲ್ಲಿ ಬೆಳಗ್ಗೆ ೫ ಗಂಟೆಯಿಂದ ಸಂಜೆ ೫ ಗಂಟೆವರೆಗಷ್ಟೇ ಅಲ್ಲ, ವಾರಗಟ್ಟಲೆ ಪಂಚಾಯಿತಿ ನಡೆಯುತ್ತಿತ್ತು. ಆದರೂ ಅನೇಕ ವೇಳೆ ನಾಡವರಲ್ಲಿ ಸೂಕ್ತ ನ್ಯಾಯತೀರ್ಮಾನಕ್ಕೆ ಬರಲಾಗುತ್ತಿರಲಿಲ್ಲ. ಒಮ್ಮೆ ವೀರರಾಜ ಈ ಸಂದರ್ಭದಲ್ಲಿ ಭಾಗವಹಿಸಿ ಸೂಕ್ತ ತೀರ್ಮಾನ ನೀಡಿದ. ಅಂದಿನಿಂದ ನ್ಯಾಯತೀರ್ಮಾನಕ್ಕೆ ಪಂಚಾಯಿತಿ ಕಟ್ಟೆಯಲ್ಲಿ ಅವನನ್ನೇ ಕೂರಿಸಲಾರಂಭವಾಯಿತು. ಅವನ ತೀರ್ಮಾನಗಳ ಪ್ರಸಿದ್ಧಿ ನೆರೆ ನಾಡಿನವರಿಗೂ ಹರಡಿತು. ನೆರೆನಾಡವರೂ ತಮ್ಮ ಪಂಚಾಯಿತಿಕಟ್ಟೆಗಳಲ್ಲಿ ನ್ಯಾಯ ತೀರ್ಮಾನಕ್ಕೆ ಅವನನ್ನು ಕರೆದು ಕೂರಿಸಲಾರಂಭಿಸಿದರು. ಹಾಲೇರಿಯಲ್ಲಿದ್ದ ಇವನ ಚಾವಡಿಗೆ ಈ ಕಾರಣವೆ 'ಬೂದಿಸ್ವಾಮಿ ಚಾವಡಿ' ಎಂದು ಹೆಸರಾಯಿತು. ಅವನು ರಾಜಕುಮಾರನೆಂದು ತಿಳಿದುಬಂದಾಗ 'ಬೂದಿಸ್ವಾಮಿ ಚಾವಡಿ'ಯನ್ನು ತೀರ್ಮಾನಗಳು ಒದಗುತ್ತಿದ್ದ ನೆಲೆ ಆದಕಾರಣ 'ರಾಜತೀರ್ಮಾನದ ಚಾವಡಿ' ಎಂದು ಕರೆಯಲಾರಂಭಿಸಿದರು. ಈ ಚಾವಡಿಯು ಹಾಲೇರಿ ಭದ್ರಕಾಳೇಶ್ವರಿ ದೇಗುಲದ ಎದುರು ಎಡಬದಿಗೆ ಇದ್ದ ನ್ಯಾಯದಕಟ್ಟೆ ಆದ ಕಾರಣ 'ಪೊಂದೇವಡಿ ಪಟ್ಟೆ' ಎಂಬ ಹೆಸರನ್ನು ಪಡೆದು ಹಾಲೇರಿ ಅರಸರ ಕಾಲದ ಸರ್ವೋಚ್ಚ ನ್ಯಾಯಾಲಯದ ನೆಲೆ ಎಂದು ಪರಿಗಣಿತವಾಯಿತು. (ಈ ದೇಗುಲದ ಎಡಬದಿಗೆ ವೀರರಾಜ ಅರಮನೆ ಅಂದರೆ ದೊಡ್ಡಹಟ್ಟಿ ಕಟ್ಟಿದೆ). ಇಂದು

'ಚಾವಡಿ' ಇದ್ದ ನೆಲೆಯಲ್ಲಿ ಅರ್ಚಕರ (ಶಾಂತಿಕಾರ) ಮನೆ ಇದೆ. ಹಾಲೇರಿ ನಾಯಕನಾಗಿದ್ದ ಸೋಮಶೇಖರನಾಯಕ ಇದನ್ನೆಲ್ಲ ಕಂಡೇ ನಾಡಿನ ಹೊಣೆಯನ್ನು ವೀರರಾಜನಿಗೆ ವಹಿಸಿದ.

ಈ ರಾಜತೀರ್ಮಾನದ ಚಾವಡಿ ನ್ಯಾಯದಕಟ್ಟೆ ಆದಂತೆ, ಅಹವಾಲು ಸಲ್ಲಿಸುವ, ಬೇಡಿಕೆ ಪೂರೈಸಿಕೊಳ್ಳುವ ನೆಲೆಯೂ ಆಯಿತು. ನ್ಯಾಯವ್ಯವಸ್ಥೆಯಲ್ಲಿ ರಾಜತೀರ್ಮಾನವೇ ಅಂತಿಮ ಹೇಗೋ, ಹಾಗೆಯೇ ನಾಡುಗಳ ವ್ಯವಸ್ಥೆಯ ಸಂದರ್ಭದಲ್ಲಿ ಆಯಾ ನಾಡಿನ ತಕ್ಕ ಮುಖ್ಯಸ್ಥರೇ ಪಂಚಾಯಿತಿಯ ನೇತೃತ್ವದ ತೀರ್ಮಾನ ನೀಡುವ ಮುಖ್ಯಸ್ಥರಾಗುವ ಪದ್ಧತಿಗೆ ಈ ಹಾಲೇರಿಯ ಪದ್ಧತಿ ಹೊಸರೂಪಕ್ಕೆ ನಾಂದಿ ಆದಂತಿದೆ. ಅನಾವಶ್ಯಕ ಚರ್ಚೆಗಳಿಗೆ ಕಟ್ಟುಹಾಕಿ ಶೀಘ್ರ ನ್ಯಾಯವಿತರಣೆಗೆ ವೀರರಾಜ (ವೀರಒಡೆಯ) ವ್ಯವಸ್ಥೆ ಮಾಡಿದ. ಹೀಗಾಗಿ ನಾಡವರಲ್ಲಿ ಒಳಜಗಳಗಳ ಬದಲು ಸಹಕಾರ ಸೌಹಾರ್ದಗಳು ಬೆಳೆದುವು. ಒಳ ತುಮುಲಗಳಲ್ಲಿ ಕದಡಿಕೊಂಡ ಮನಸ್ಸುಗಳನ್ನು ಚೈತನ್ಯಮುಖಿ (ಸಬ್ಲಿಮೇಷನ್) ಪ್ರಕಟನೆಯಾಗಿಸಲು ಹಬ್ಬ ಮನರಂಜನೆಗಳಿಗೆ ವ್ಯವಸ್ಥಾಬದ್ಧ ಉತ್ತೇಜನ ನೀಡಿದ. ಹಾಲೇರಿಯ ಭದ್ರಕಾಳಿಹಬ್ಬದಲ್ಲಿ ಇಂದಿಗೂ ನಡೆಯುವ ಹಬ್ಬದಾಚರಣೆಗಳಲ್ಲಿ ಈ ಎಳೆಯನ್ನು ಗುರುತಿಸಬಹುದು. ಕೊಡಗಿನಲ್ಲಿ ಊರಂಬಲ, ನಾಡಂಬಲಗಳು ಸ್ಥಳೀಯ ನ್ಯಾಯದಕಟ್ಟೆಗಳಾಗಿ ಇಂದಿಗೂ ಉಳಿದಿವೆ. ಇದು ರಾಜರ ಕಾಲದ ವ್ಯವಸ್ಥೆಯ ಮುಂದುವರಿಕೆಯೇ ಆಗಿದೆ. ಚಂಗಾಳ್ವರ ಕಾಲದ ನ್ಯಾಯಾಡಳಿತ ವ್ಯವಸ್ಥೆಯು ಹಾಲೇರಿ ಅರಸರ ಕಾಲದಲ್ಲಿ ವಿಶೇಷ ರೂಪ ಪಡೆಯಿತೆನ್ನಬಹುದು. ಕೊಡಗನ್ನು ಆಳಿದ ಹಾಲೇರಿ ವಂಶದ ೧೪ ಅರಸರ ಕಾಲದಲ್ಲಿ ಈ ವ್ಯವಸ್ಥೆ ವಿಕಸಿಸುತ್ತ ಹೋಯಿತು. ವಂಶದ ೨ನೇ ರಾಜ ಅಪ್ಪಾಜಿರಾಜೇಂದ್ರ ಒಡೆಯನ ಕಾಲದಲ್ಲಿ ವೀರರಾಜನು ಹಾಕಿದ್ದ ತಳಹದಿಯ ಮೇಲೆ ನ್ಯಾಯಾಡಳಿತ ವ್ಯವಸ್ಥೆ ಮುಂದುವರಿಯಿತು. ೩ನೇ ದೊರೆ ಮುದ್ದುರಾಜನ ಕಾಲದಲ್ಲಿ ನಾಡುಗಳ ವಿಂಗಡನೆ ಆರಂಭವಾದ ಕಾರಣ ಅನುಗುಣ ತಕ್ಕಾಮೆ ಹಾಗೂ ಗೌಡಿಕೆ ವ್ಯವಸ್ಥೆ ಬೆಳೆದು ನಾಡುಗಳಲ್ಲಿ ಅವುಗಳು ಪ್ರತ್ಯೇಕವಾಗಿ ಬೆಳೆದುಬಂದುವು.

ತಕ್ಕಾಮೆ ಎನ್ನುವುದು ಊರು, ಗ್ರಾಮ, ನಾಡು, ಸೀಮೆ, ದೇಶ ಎನ್ನುವ ಪ್ರಾದೇಶಿಕ ನೆಲೆಗಳಲ್ಲಿನ ಎಲ್ಲ ವ್ಯವಹಾರಗಳ ಉಸ್ತುವಾರಿ ನೋಡಿಕೊಳ್ಳುವ ಪ್ರಭಾವಿ ಮುಖ್ಯಸ್ಥರ ನೇಮಕದ ವ್ಯವಸ್ಥೆ ಎನ್ನಬಹುದು. ಆಯಾ ಊರಿನ ಕುಟುಂಬಗಳ ಆಸ್ತಿ-ಪಾಸ್ತಿ, ಒಪ್ಪು-ನೆಪ್ಪು, ದೂರು-ದುಗುಡ, ದೇವರು-ದೇವಾಚಾರ, ಹಬ್ಬ-ಉತ್ಸವ, ಆಟ-ಪಾಟ, ನ್ಯಾಯ-ನೀತಿ-ಕಟ್ಟಳೆ ಇತ್ಯಾದಿಗಳ ಸಾಮಾಜಿಕ ಸಾಂಸ್ಕೃತಿಕ ನಿರ್ವಹಣೆಯ ಹೊಣೆ ಆಯಾ ತಕ್ಕರಿಗಿತ್ತು. ಅವುಗಳಲ್ಲಿ ಏರುಪೇರುಗಳಾಗಿ ಸಮಸ್ಯೆ ಉಂಟಾದಾಗ ಅನುಕ್ರಮಣಿಕೆಯಲ್ಲಿ ದೇಶತಕ್ಕರವರೆಗೆ ಸಾಗಿ ಪರಿಹಾರ ಪಡೆಯುವುದಿತ್ತು. ಇವೆಲ್ಲದರ ಬಗ್ಗೆ ಅಂತಿಮ ತೀರ್ಪು ಪರಿಹಾರ ಅಥವಾ ತೀರ್ಮಾನ ಊರ್ಜಿತಗೊಳಿಸುವಿಕೆ ರಾಜನಿಗೆ ಸಂಬಂಧಿಸಿತ್ತು. ಆದರೂ ವಿಕೇಂದ್ರೀಕರಣದ ಸ್ವರೂಪವು ಆ ವ್ಯವಸ್ಥೆಯಲ್ಲಿದೆ. ಅಂತಾಗಿ ಊರುತಕ್ಕ, ಗ್ರಾಮತಕ್ಕ,

ಸೀಮೆ ಯಾ ದೇಶತಕ್ಕರು ನ್ಯಾಯಾಡಳಿತದ ಒಂದು ಆಡಳಿತವರ್ಗದವರಾದರೆ, ಸಾಂಸ್ಕೃತಿಕ ನಿರ್ವಹಣೆಗಳಿಗೆ ದೇವತಕ್ಕ ಹಾಗೂ ಭಂಡಾರತಕ್ಕರ ವರ್ಗವಿತ್ತು. ದಲಿತವರ್ಗದ ದೇವಾರಾಧನೆಯ ಸಂದರ್ಭಗಳಿಗೆ ದಲಿತೇತರರೂ ಸೇರಿದಂತೆ ಬಟ್ಟತ್ತಕ್ಕರು ಇರುತ್ತಿದ್ದರು. ಇಂದಿಗೂ ಯವಕಪಾಡಿಯಲ್ಲಿ ದಲಿತರ ದೇವತೆ ಪನ್ನಂಗಾಲತಮ್ಮೆಯ ದೇವಾಚಾರ, ಕಟ್ಟು-ಕಟ್ಟಳೆ ನಿರ್ವಹಣೆಗೆ ಬಟ್ಟತ್ತಕ್ಕರಾಗಿ[೪] ಕೊಡವ ಜನಾಂಗದ ಕರ್ತಂಡ, ಅಂಜಪರವಂಡ, ಐರಿರ ಜನಾಂಗದವರು ಹಾಗೂ ಕೆಂಬಟ್ಟಿ ಕುಡಿಗಳಾದ ಉಮ್ಮಣಕುಟ್ಟಡ[೫] ಮುಂತಾದವರು ಇದ್ದಾರೆ.

ಚಂಗಾಳ್ವರ ಕಾಲದಲ್ಲಿ ಇಡೀ ಕೊಡಗು ಸಂಸ್ಥಾನವಾಗಿ ಅವರ ವಶದಲ್ಲಿರಲಿಲ್ಲವಾಗಿ ಇಷ್ಟೆಲ್ಲ ವೈವಿಧ್ಯದ ತಕ್ಕಾಮೆ ಇದ್ದ ಬಗ್ಗೆ ಸ್ಪಷ್ಟವಾಗಿ ತಿಳಿಯುವುದಿಲ್ಲ. ಹಾಲೇರಿ ಅರಸರ ಮುನ್ನ ೧೬ನೇ ಶತಮಾನದ ನಾಯಕರಲ್ಲಿ ದೇಶತಕ್ಕರು ಇದ್ದರು ಎಂದು ತಾವಳಗೇರಿ ಮೂರ್ನಾಡಿನ ಕೈಬಲಿರ ಬಿದ್ದಯ್ಯನಾಯಕನ ಇಂದಿನ ವಂಶೀಕರು ಬಾಯ್ದೆರೆಯಲ್ಲಿ ಹೇಳುತ್ತಾರೆ. ಬಾಡಗ ಗ್ರಾಮದಲ್ಲಿ ಬೊಳ್ಳೆರ, ಕುಟ್ಟದಲ್ಲಿ ಕಾಳಮಾಡ, ತೊಡನಾಡಿನಲ್ಲಿ ಕಳ್ಳಂಗಡ, ಬೆಳ್ಳೂರು ಗ್ರಾಮದಲ್ಲಿ ನೂರೇರ ಮನೆತನದವರನ್ನು ದೇಶತಕ್ಕರನ್ನಾಗಿ ಆ ನಾಯಕ ನೇಮಿಸಿದ್ದ ಎಂದೂ ಹೇಳುತ್ತಾರೆ.[೬] ಆದರೆ ಈ ದೇಶಗಳ ಪರಿಧಿ ಆ ಕಾಲಕ್ಕೆ ಗ್ರಾಮಸಮುದಾಯಕ್ಕೋ ಅಥವಾ ಇನ್ನೂ ಹೆಚ್ಚಿನ ವಿಸ್ತಾರಕ್ಕೋ ಅನ್ವಯ ಎಂಬುದು ಸ್ಪಷ್ಟವಿಲ್ಲ. ಅಲ್ಲದೆ ಸಂಸ್ಥಾನದ ಸ್ವರೂಪದಿಂದ ನಿರ್ಮಿತವಾಗುವ ವ್ಯಾಪಕತೆ, ಪದವಿ, ಅಧಿಕಾರ ಅವುಗಳಲ್ಲಿ ತೋರಿಬರುವುದಿಲ್ಲ. ಬಹುಶಃ ಕೂಗಿದ 'ಕೊಂಬು' ಕೇಳಿಸುವಷ್ಟು ದೂರದ ಪ್ರದೇಶ 'ಕೊಂಬು' ಎನ್ನುವ ವಿಭಾಗವನ್ನೆ ದೇಶತಕ್ಕಾಮೆಗೆ ಬಳಸಿಕೊಂಡಂತೆ ಕಾಣುತ್ತದೆ. ಹೀಗಾಗಿ ನ್ಯಾಯಪಂಚಾಯಿತಿ ಅಧಿಕಾರವು ಆ ಮಟ್ಟಿಗೆ ಸೀಮಿತವಿದ್ದಂತೆ ತೋರುತ್ತದೆ. ಅದೇ ಹಾಲೇರಿ ಅರಸರ ಕಾಲದ ತಕ್ಕಾಮೆಯನ್ನು 'ಪಟ್ಟೋಲೆಪಳಮೆ'ಯಲ್ಲಿರುವಂತೆ ಗಮನಿಸಿದರೆ[೭] ನಾಡು ತಕ್ಕಾಮೆಯೆ ವಿಶಾಲ ವ್ಯಾಪ್ತಿಯದಾಗಿ ಕಾಣುತ್ತದೆ. ಅಂದರೆ ೩ನೇ ದೊರೆ ಮುದ್ದುರಾಜ-ದೊಡ್ಡವೀರಪ್ಪ ಅವರ ಕಾಲದಲ್ಲಿ ಹಳೆಯ ನಾಡುಗಳ ಪುನರ್ ವಿಂಗಡಣೆಯ ಜೊತೆಗೆ ಹೊಸ ವಿಂಗಡಣೆಗಳ ಸೇರ್ಪಡೆ ಆಗಿ ನಾಡುಗಳ ಸಮರ್ಪಕ ಸಮಗ್ರ ವ್ಯವಸ್ಥೆ ಕಾಣಬರುತ್ತದೆ. ಇದು ನ್ಯಾಯಾಡಳಿತದ ಮೇಲೆ ಸಹಜ ಪ್ರಭಾವವನ್ನು ಬೀರಿತೆನ್ನಬೇಕು. ಜೊತೆಗೆ ಗೌಡಿಕೆಯೂ ಸಂವಾದಿ ವ್ಯವಸ್ಥೆಯಾಗಿ ಚಾಲ್ತಿಯಲ್ಲಿತ್ತು.

ಈ ಬಗೆಗೆ 'ದೇಶಕಟ್ಪಾಟ್'ನಲ್ಲಿ ಹಾಲೇರಿ ಅರಸರ ಕಾಲದಲ್ಲಿ ತಕ್ಕಾಮೆ-ನ್ಯಾಯಾಡಳಿತ ವ್ಯವಸ್ಥೆಯು ಸ್ವರೂಪಗೊಂಡ ಬಗ್ಗೆ ತಿಳಿಯುತ್ತದೆ:[೮]

| | |
|---|---|
| | **(ಕನ್ನಡ ಭಾವಾನುವಾದ)** |
| ನುಪ್ಪತ್ತಂಜಿ ನಾಡ್‌ಲ್ | ಮೂವತ್ತೈದು ನಾಡಿನಲ್ಲಿ |
| ಕೂಟಣನ್ಯಾಯ ತೇಪಕ್ | ನ್ಯಾಯನೀಡ್ವ ಸಭೆಯ ನೆಲೆಯು |

| | |
|---|---|
| ಎಚ್ಚೆಕುಳ್ಳ ಪಟ್ಯಾಪ? | ಎಷ್ಟು? ಎಲ್ಲಿ? 'ಪಟ್ಟಿ' ಎನಿಸಿತು! |
| ಚೆಂಡೋಲೆ ಕಡಿಯೋಂಡ | ಚಂಡೋಲೆ ಕಡಿಯತ್‌ನಾಡಿಗೆ |
| ಪೊಂಬಾವಲಿ ಪಟ್ಟೊಂದ್ | (ಸುತ್ತುಗುಡ್ಡ ಕಣಿವೆನಾಡಿಗೆ) |
| ಕುಯ್ಯಂಗೇರಿ ನಾಡೋಂಡ | ಚಿನ್ನದಂಥ ಬಾವಲಿಪಟ್ಟಿ ಒಂದು |
| ಕಟ್ಟುರ್‌ಪ್ ಕಾರುಂದ | ಕುಯ್ಯಂಗೇರಿನಾಡವರ್ಗೆ |
| ಕಾರುಂದತ್ ಪಟ್ಟೊಂದ್ | ಕಟ್ಟಿರುವೆಯಂಥ ಕಾರುಂದ |
| ಉದ್ದಕೊಡೆ ತಾವುಲ್ | (ಕರಿಗುಡ್ಡಕಣಿವೆ ಎನುವ ಕಾರುಂದ) |
| ಅಲ್ಲಿಂಜು ತಿರುವುಳ್ಳ | ಕಾರುಂದ(ಕಾರುಗುಂಡ)ಪಟ್ಟಿ ಇನ್ನೊಂದು |
| ಪಚ್ಚೆಕೊಡೆ ಪಾಂಡತ್ | ಉದ್ದಕೊಡೆ ಠಾವಿನಲ್ಲಿ |
| ಪಾಂಡತುಳ್ಳ ಪಟ್ಟೊಂದ್ | ಅಲ್ಲಿಗಿರುವ ತಿರುವಿನಲ್ಲಿ |
| ಈನಂಗುಂಡ್ ಪೋರಾಂದ್ | ಹಳಮೆ ಇರುವ ಪಚ್ಚೆಕೊಡೆ |
| ಪಾಂಬ್‌ಕಣ್ಣ್ ಪಾಲೇರಿ | ಠಾವಿನಲ್ಲಿ ಪಾಂಡತ್‌ಪಟ್ಟಿ ಇಡೆ |
| ಇಂದ್ ಬಾವೊಡೆವೋಂಡ | ಅಷ್ಟು ಆಗಿ ಸಾಲದೆಂದು |
| | ಇಷ್ಟೆ ಇರಲು ಸಾಲದೆಂದು |
| | ಹಾವಹೆಡೆಯ ಕಣ್ಣಮಣಿಯ |
| | ಕಾಂತಿಯಂಥ ಹಾಲೇರಿಯ |
| ಪೊಂದೇವಡಿಪಟ್ಟೊಂದ್ | ಪೊಂದೇವಡಿಪಟ್ಟಿ ಮುಖ್ಯವೆಂದು |
| ನುಪ್ಪತ್ತಂಜಿ ನಾಡ್‌ಕ್ | ಮುವತ್ತೈದುನಾಡಿಗೆ |
| ನಾಲ್‌ಪಟ್ಟೆಡಾಚಿಲ | ನಾಲ್ಕುಪಟ್ಟಿ ಆದುವು |
| ನುಪ್ಪತಂಜಿ ನಾಡ್‌ಲ್ | ಮುವತ್ತೈದುನಾಡಿನಲ್ಲಿ |
| ತಕ್ಕ ಪೋಯಳಪಕ್ | ತಕ್ಕ ಹೋಗಿ ಸಭೆಗೆ ಕೂರಲು |
| ನುಪ್ಪತಂಜಿ ಅಂಬಲ | (ತಕ್ಕ ಹೋಗಿ ಸಭೆಯ ನಡೆಸಲು) |
| | ಮುವತ್ತೈದು 'ಅಂಬಲ'ವಾದುವು. |

ಇಲ್ಲಿ ಮುಖ್ಯವಾಗಿ ಹಾಲೇರಿ ಅರಸರು ನ್ಯಾಯತೀರ್ಮಾನ ಕೊಡುವ ನ್ಯಾಯದೇವತೆಯ ನೆಲೆ ಪೊಂದೇವಡಿಹಟ್ಟಿ (ಹಾಲೇರಿಪಟ್ಟಿ). ಇದು ಅರಮನೆ ಮತ್ತು ದೇಗುಲಕ್ಕೆ ಹೊಂದಿಕೊಂಡಂತೆ ಇದ್ದುದರಿಂದ ಈ ಹೆಸರು ಮೊದಲಿಗೆ ಬಂದಿರುವಂತಿದೆ. ಮಡಿಕೇರಿಗೆ ರಾಜಧಾನಿ ಬದಲಾವಣೆಗೊಂಡಮೇಲೆ ಅಲ್ಲಿದ್ದ ವೀರಭದ್ರಗುಡಿ ಮತ್ತು ಅರಮನೆಗೆ ಹೊಂದಿಕೊಂಡ ಜಾಗಕ್ಕೆ ಈ ಹೆಸರು ಒದಗಿ ನ್ಯಾಯತೀರ್ಮಾನದ ಅಂತಿಮ ನೆಲೆ ಆಯಿತು.

ಇನ್ನು ಹಾಡಿನಿಂದ ಹೆಕ್ಕುವುದಾದರೆ, ನ್ಯಾಯವ್ಯವಸ್ಥೆಯ ಸಲುವಾಗಿ ಕಡಿಯತ್‌ನಾಡು-ನಾಲ್ಕುನಾಡಿಗೆ 'ಪೊಂಬಾವಲಿಪಟ್ಟಿ', ಕುಯ್ಯಂಗೇರಿ-ತಾವುನಾಡಿಗೆ 'ಕಾರುಂದಪಟ್ಟಿ'

(ಕಾರುಗುಂದ), ಬೇಂಗುನಾಡಿನ ಉದ್ದಕೊಡೆ ಎಂಬಲ್ಲಿ 'ಪಾಂಡತ್‌ಪಟ್ಟಿ' ಎಂದು ನಾಡುಗಳ ನ್ಯಾಯಕೇಂದ್ರವನ್ನು ರೂಪಿಸಲಾಯಿತು. ರಾಜತೀರ್ಮಾನದ ಚಾವಡಿ ಅಲ್ಲಿಯೇ ಇತ್ತಲ್ಲ! ಆ ಕಾಲದ ನ್ಯಾಯವ್ಯವಸ್ಥೆಗೆ ಅದೊಂದು ರೀತಿ ಸರ್ವೋಚ್ಚ ನ್ಯಾಯಾಲಯವೇ ಆಗಿದ್ದಿರಬೇಕು. ಇವುಗಳ ಜೊತೆಗೆ ಕಿಗ್ಗಟ್ಟುನಾಡಿನಲ್ಲಿ ಬೇರಳೆಪಟ್ಟಿ, ಪೆರುಮಾಳುಪಟ್ಟಿ ಹಾಗೂ ಕೋಪಟ್ಟಿ ಎಂಬ ನೆಲೆಗಳು ಇದ್ದು, ಹೆಸರಿನ ಸಾಮ್ಯವಾಗಿ ಗಮನಿಸಿದರೆ ಕಿರು ನ್ಯಾಯಕೇಂದ್ರಗಳ ನೆಲೆಗಳಾಗಿದ್ದಂತೆ ತೋರುತ್ತವೆ. 'ಪಟ್ಟಿ' ಎಂಬ ಶಬ್ದವು ಮುಂದೆ ನಾಡುಗಳ ಗಡಿಮಿತಿಯನ್ನು ಹೇಳುವ ಶಬ್ದವೂ ಆಯಿತು.

ಈ ನ್ಯಾಯಕೇಂದ್ರಗಳು ಊರಿನ ಅಂಬಲದಲ್ಲಿ ಸ್ಥಾಯಿತ್ವ ಪಡೆದಿದ್ದುವು. ಇಲ್ಲಿ ಪಂಚಾಯಿತಿದಾರರು ಪಂಚಾಯಿತಿಯನ್ನು ತಿಂಗಳಿಗೊಮ್ಮೆ ಕೂಡಿಸುತ್ತಿದ್ದರು. ಅದಕ್ಕಾಗಿ ೩೫ ಅಂಬಲಗಳು ರೂಪುಗೊಂಡುವು. ಈ ಪಂಚಾಯಿತಿ ಇಡೀ ದಿನವಿರುತ್ತಿತ್ತು. ಅದು ಕಾರಣ ಮಧ್ಯಾಹ್ನದ ಊಟಕ್ಕಾಗಿ ಅಲ್ಲಿನ ದೇಗುಲಕ್ಕೆ ಪ್ರತಿಯೊಬ್ಬರೂ ಒಂದು ಪಡಿ ಅಕ್ಕಿ, ಒಂದಚ್ಚು ಬೆಲ್ಲ ನೀಡುತ್ತಿದ್ದರು. ಹೀಗೆ ತಂದ ಅಕ್ಕಿಪಡಿಗೆ 'ಬೈವಾಡು' ಎನ್ನುತ್ತಿದ್ದರು. ಅದನ್ನು ಪಾಕಮಾಡಿ ದೇವರಿಗೆ ನಿವೇದಿಸಿ ನಂತರ ಸೇರಿದ್ದವರಿಗೆ ಊಟದ ವ್ಯವಸ್ಥೆ ಆಗುತ್ತಿತ್ತು. ಇಂದಿಗೂ ಆ ಹಳೆಯ ಪರಂಪರೆಯ ಪ್ರಭಾವವೆನಿಸಿ ಕೆಲವು ದೇವಸ್ಥಾನಗಳಲ್ಲಿ ಶುಕ್ರವಾರ 'ಬೆಳ್ಳೂಟ', ಶನಿವಾರ 'ಶನಿಯೂಟ', ಮಂಗಳವಾರ 'ಚೌಟು' ನಡೆಯುವುದು ಕಾಣಬರುತ್ತದೆ. ಗ್ರಾಮ ಅಥವಾ ನಾಡುಗಳಲ್ಲಿ ಕಟ್ಟಳೆಗೆ ತಪ್ಪಿನಡೆದಾಗ ತಪ್ಪಿತಸ್ಥರಿಗೆ 'ಪೊಳೆವಾಡು' ಎಂಬ ದಂಡವನ್ನು ವಿಧಿಸುತ್ತಿದ್ದರು. ಅದಕ್ಕೆ ತಪ್ಪಿದರೆ ಬಹಿಷ್ಕಾರ ವಿಧಿಸುತ್ತಿದ್ದರು.[೧೧] ಪಂಚಾಯಿತರಲ್ಲಿ ಪಕ್ಷಪಾತ ಬಾರದಂತೆ ಎಚ್ಚರ ತೆಗೆದುಕೊಳ್ಳಲು ಅವರಲ್ಲೊಬ್ಬರನ್ನು ಆಯ್ದು ಮುಖ್ಯನನ್ನಾಗಿರಿಸಿಕೊಳ್ಳಲ್ಪಟ್ಟವನೇ 'ತಕ್ಕ'ನೆನಿಸುತ್ತಿದ್ದ.[೧೨] ಅಂತಿಮವಾಗಿ ಇದೆಲ್ಲವನ್ನು ರಾಜನ ಗಮನಕ್ಕೆ ತರಲಾಗುತ್ತಿತ್ತು. ಒಂದುಕಾಲಕ್ಕೆ ಏಳು ರಾತ್ರಿ ಏಳು ಹಗಲು ಮಳೆ ಮಂಜು ಸೇರಿದಂತಿದ್ದರೂ ನ್ಯಾಯ ಮುಗಿಯದೆ ಏಳು ವಂತಿರಲಿಲ್ಲ.[೧೩] ಅಂದರೆ ಅದರಿಂದಾಗಿ ನ್ಯಾಯತೀರ್ಮಾನ ಸಮಗ್ರವಾಗಿರುತ್ತಿದ್ದು ನಿಖರವಾಗಿರುತ್ತಿತ್ತೆನಿಸುತ್ತದೆ.

ಈ ನ್ಯಾಯಕೇಂದ್ರಗಳಲ್ಲಿ ಕೆಲವೆಡೆ ಬೆಳಗ್ಗೆ ಅಥವಾ ಮಧ್ಯಾಹ್ನ ಅಥವಾ ರಾತ್ರಿಯ ಹೊತ್ತು ಸಭೆಯನ್ನು ಆರಂಭಮಾಡುತ್ತಿದ್ದರು. ಇದಕ್ಕೆ ಆ ನೆಲೆಗಳ ಪ್ರಾಕೃತಿಕ, ಭೌಗೋಳಿಕ ಪರಿಸರವೆ ಕಾರಣವೆಂದು ತೋರುತ್ತದೆ. ಇದಲ್ಲದೆ ನಿರ್ದಿಷ್ಟ ವಾರಗಳಲ್ಲಿ ಈ ಸಭೆ ಸೇರಲು ನಿಗದಿಯಾಗಿದ್ದಂತೆ ತೋರುತ್ತದೆ.

'ಪಟ್ಟೋಲೆಪಳಮೆ'ಯಲ್ಲಿ ಏಳುನಾಡುಗಳಿಗೆ ಎರಡು ಮನೆತನದವರಂತೆ, ಇಪ್ಪತ್ತೆಂಟು ನಾಡುಗಳವರಿಗೆ ಎಂಟು ಸೀಮೆತಕ್ಕರ ಸಂಖ್ಯೆಯ ಹೊಂದಾಣಿಕೆ ಕಾಣುತ್ತದೆ. ಉಳಿದ ಏಳು ನಾಡುಗಳು ಪೂರ್ಣ ಉತ್ತರಕೊಡಗಿನ ಭಾಗಗಳಲ್ಲಿದ್ದು, 'ಪಟ್ಟೋಲೆಪಳಮೆ' ಆ ಬಗ್ಗೆ ಏನನ್ನೂ ಹೇಳುವುದಿಲ್ಲ.

ಸಿರಿಬಾಯಿ ದೊಡ್ಡವೀರಪ್ಪನು (೧೬೮೭-೧೭೩೬) ತನ್ನ ಕಾಲದಲ್ಲಿ ೨೮ ನಾಡುಗಳಿಗೆ ಏಳು ನಾಡು ಸೇರಿಸಿ ೩೫ ನಾಡುಗಳನ್ನು ವ್ಯವಸ್ಥೆಗೊಳಿಸಿದ. ಆಗಲೂ ೮ ಜನ ಸೀಮೆತಕ್ಕರಿದ್ದು ಕೊಡಗಿನ ಆಚಾರ ವಿಚಾರ, ಜಾತಿಪದ್ಧತಿಗಳ ಮೇಲ್ವಿಚಾರಣೆ, ಸೀಮೆ ನ್ಯಾಯಾಧಿಕಾರವನ್ನು ನೀಡಲಾಗಿತ್ತು. ಆದರೆ ತೀರ ಉತ್ತರಕೊಡಗಿನಲ್ಲಿ ಹಾಗೂ ನಂಜರಾಯಪಟ್ಟಣ ಇತ್ಯಾದಿ ಕಡೆಗಳಲ್ಲಿ ಉಳಿದೆಡೆಗಿಂತ ಹೆಚ್ಚಾಗಿ ವೀರಶೈವ ಹಾಗೂ ಗೌಡ ಜನಾಂಗದವರಿದ್ದರು. ಆ ಭಾಗಗಳೆಲ್ಲ ಏಳುನಾಡಿಗೆ ಸೇರಿದ್ದವಾಗಿರಬೇಕು. ಆ ಪ್ರದೇಶದಲ್ಲಿ ಕಟ್ಟೆಮನೆಸ್ಥಾನ ಯಾ ಜಾತಿಗೌಡ ಯಾ ಊರಗೌಡ, ವಡೇಕಾರ ಮುಖ್ಯಸ್ಥರು, ದೇಶದ ಶೆಟ್ರು (ಯಜಮಾನರು), ಪಟೇಲರು ಇದ್ದುದು ಪರಂಪರಾಗತವಾಗಿ ಬಂದ ಕುಟುಂಬ ಚರಿತ್ರೆಯಿಂದ ತಿಳಿಯುತ್ತದೆ. ದೇಶದ ಭಾಗಗಳ ಎಲ್ಲ ಸಮಾಜದ ಸಾಂಸ್ಕೃತಿಕ ಉಸ್ತುವಾರಿಯನ್ನು ನೋಡಬೇಕಾದ ಹೊಣೆ 'ದೇಶತಕ್ಕ'ರದೆಂದರೂ, ಆ ಶಬ್ದವನ್ನು ಪರ್ಯಾಯವಾಗಿ ಸೀಮೆತಕ್ಕರಿಗೂ ಬಳಸಿರುವುದು ಕಾಣುತ್ತದೆ. ಹೀಗೆಯೆ ಹೆಸರೇ ಹೇಳುವಂತೆ ಕಟ್ಟೆಮನೆಸ್ಥಾನ, ಜಾತಿಗೌಡ, ವಡೇಕಾರರು, ಪಟೇಲರಿಗೂ ಹೊಣೆ ಇತ್ತು. ದಕ್ಷಿಣಕೊಡಗಿನಲ್ಲೂ 'ಕಟ್ಟೆಮನೆ' ಚಿಟ್ಟಪ್ಪನಾಯಕ ಹಾಗೂ ಗೌಡಜನಾಂಗದ ಪ್ರಭಾವಿತ ಸುಳುಗೋಡು (ಪಾಲ್ಪರೆ ಬಳಿ) ಇರುವಲ್ಲಿ, ಈ ಎಲ್ಲ ಪದನಾಮಗಳು ನ್ಯಾಯಾಡಳಿತ ವ್ಯವಸ್ಥೆಯಲ್ಲಿನ ಅಂಗವಾಗಿದ್ದುವೆನ್ನಬೇಕು. ಕೊಡಗಿನ ಎಲ್ಲ ಭಾಗಗಳಲ್ಲೂ ಇದು ಹರಡಿಕೊಂಡಿದ್ದಿರಬೇಕು. ಹೀಗಾಗಿ ಸಿರಿಬಾಯಿ ದೊಡ್ಡವೀರಪ್ಪನ ಕಾಲದಲ್ಲಿ ಈ ನ್ಯಾಯಾಡಳಿತ ವ್ಯವಸ್ಥೆ ಸಮಗ್ರವಾಗಿ ಕೊಡಗಿನಲ್ಲಿ ಚಾಲ್ತಿಗೊಂಡಿತು. ಇನ್ನು ಚಿಕ್ಕವೀರಪ್ಪಒಡೆಯ (೧೭೩೬-೧೭೬೬), ಮುದ್ದುರಾಜ ಮುದ್ದಯ್ಯರಾಜರು (೧೭೬೬-೧೭೭೦), ದೇವಪ್ಪರಾಜ (೧೭೭೦-೧೭೭೪), ೧ನೇ ಲಿಂಗರಾಜೇಂದ್ರ ಒಡೆಯನ ಕಾಲದಲ್ಲಿ (೧೭೭೪-೧೭೭೯) ಪೂರ್ವ ಅರಸರ ಕಾಲದ ನ್ಯಾಯಾಡಳಿತ ವ್ಯವಸ್ಥೆಯು ಯಾವ ಬದಲಾವಣೆ ಇಲ್ಲದೆ ಮುಂದುವರಿಯಿತು.

'ಜಾತಿಗೌಡಿಕೆ' ಬಗ್ಗೆ ಇಲ್ಲಿ ಪೂರ್ವನಿದರ್ಶನವಾಗಿ ಕ್ರಿ.ಶ.೧೩೫೫ರ ಕೊಡಗಿನ ಹುಲುಕೋಡು ಶಾಸನದಲ್ಲಿ ಬರುವ 'ಶ್ರೀ ಸಗವುಡಬೊವ ದೇಮ್ಮಯ್ಯಂ... ಮಂಗಳವು' ಎಂಬ ಶಬ್ದಸಂಯುಕ್ತವು ಗಮನ ಸೆಳೆಯುತ್ತದೆ.[೧೪] ಹಾಲೇರಿ ಅರಸರ ಕಾಲಕ್ಕೆ ವಿಕಸಿತಗೊಂಡ ಅರ್ಥಕ್ಕೆ ಅದು ನಾಂದಿಯಾಡಿ ಐತಿಹಾಸಿಕ ಪೋಷಣೆ ನೀಡುವಂತಿದೆ. ಕನ್ನಡ-ಕನ್ನಡ ನಿಘಂಟಿನಲ್ಲಿ (ಕಸಾಪ) 'ಬೋವ' ಎಂದರೆ ಪರಿಚಾರಕ, ಬೋವಗಾರಿಕೆ ಎಂದರೆ ಪರಿಚಾರಕರ ಮುಖಂಡ ಎಂಬರ್ಥವನ್ನು ನೀಡಲಾಗಿದೆ. ಅರ್ಥಾತ್ ಸೇವಾ ಕಾರ್ಯಗಳ ನಾಯಕತ್ವ ಎಂಬ ಅನ್ವಯವನ್ನು ಮಾಡಿಕೊಳ್ಳಲು ಅವಕಾಶವಿದೆ. ಇದರ ಸೂಕ್ಷ್ಮಾನ್ವಯವನ್ನು ಗವುಡಬೊವ> ಗೌಡಬೋವ (ಗೌಡಭೋಗ-ಶಾನುಭೋಗ ಎಂಬ ಶಬ್ದಕ್ಕೆ ಸಂವಾದಿಯಾಗಿ ಪರಿಗಣಿಸಲು 'ಸೇನಬೋವ' ಶಬ್ದಗಳು ಶಾಸನೋಕ್ತವಿರುವಲ್ಲಿ) ಎಂಬ ಶಬ್ದಕ್ಕೆ ಮಾಡಿದರೆ ಗೌಡಜಾತಿಯ ವ್ಯವಹಾರಗಳ ಮುಖ್ಯಸ್ಥನೆಂದು ಪರಿಗಣಿಸ

ಬಹುದೆನಿಸುತ್ತದೆ. ಮೇಲಿನ ಶಾಸನದಲ್ಲಿ ಬರುವ 'ಶ್ರೀ ಸಗವುಡಬೊವ' ಶಬ್ದವನ್ನು ಶ್ರೀ ಸಾಗೌಡಬೋವ, ಶ್ರೀ ಸಗೌಡಬೋವ, ಸಿರಿಸಗೌಡಬೋವ (>ಸಿರಹಗೌಡಬೋವ) ಎಂದೆಲ್ಲ ಪರಿಭಾವಿಸಬಹುದೆಂದು ತೋರುತ್ತದೆ. ರೈಸರ ಹಾಗೂ ಪರಿಷ್ಕೃತ ಶಾಸನ ಸಂಪುಟದಲ್ಲಿನ ಆಂಗ್ಲಾನುವಾದದಲ್ಲಿ Srisaguda(?)ಎಂದು ಪ್ರಶ್ನಾರ್ಥಕ ಚಿಹ್ನೆ ಇಟ್ಟು, 'ಬೊವ' ಎಂಬ ಅದಕ್ಕೆ ಅಂಟಿದ ಶಬ್ದವನ್ನು ಬಿಟ್ಟಿದ್ದೇಕೆ? ಎಂಬುದಕ್ಕೆ ಉತ್ತರವಿಲ್ಲದೆ ಮೇಲಿನ ವಿವೇಚನೆಗೆ ಅವಕಾಶವಾಗುತ್ತದೆ. 'ಶ್ರೀಸ' ಎಂದಷ್ಟೆ ತೆಗೆದುಕೊಂಡರೂ ಶ್ರೀಸ<ಸಿರಿಈಸ<ಸಿರೀಸ<ಸಿರಿಹ<ಸಿರಹ<(ಸಿರಿವುರ) ಎಂಬ ಬಾಯ್ದೆರೆ ಗ್ರಾಮನಾಮವೆ ಸಿದ್ಧಿಸುವಂತಾಗಿ[೧೫] ಆ ಗ್ರಾಮದ ಗೌಡಬೋವನಾಗಿ ದೇಮ್ಮಯ್ಯ ಇದ್ದ ಎಂಬುದಕ್ಕೆ ಅರ್ಥಸಾಮಂಜಸ್ಯವನ್ನು ಕಲ್ಪಿಸುತ್ತದೆ. ಹೀಗಾಗಿ, ಶ್ರೀಸಾಗೌಡ, ಶ್ರೀಸಗೌಡ ಎಂಬ ಶಬ್ದ ವ್ಯಕ್ತಿನಾಮವಾಚಿಯಾಗಿ ಸಾಮಂಜಸ್ಯ ನೀಡುವಂತೆ ತೋರುವುದಿಲ್ಲ. ಆ ನಿಟ್ಟಿನಿಂದ 'ಸಿರವುರದ ಗೌಡಬೋವ' (ಸೋಮವಾರಪೇಟೆ ತಾಲೂಕಿನಲ್ಲಿ ಸಿರಹ ಎಂಬ ಗ್ರಾಮ ಹುಲುಕೋಡಿಗೆ ಸುಮಾರು ೧೫ ಮೈಲಿ ಫಾಸಲೆಯೊಳಗೆ ಬರುವ ಊರು) 'ದೇಮ್ಮಯ್ಯ' ಆಗಿದ್ದಿರಬಹುದು. ಹಾಗೂ ಮೇಲಿನ ಶಬ್ದಗಳ ಮೂರು ಸಂದರ್ಭಗಳಲ್ಲಿಯೂ ಗೌಡಬೋವ (<ಬೊವ) ಸಾಮಾನ್ಯವಾಗಿ ಅಂಟಿಕೊಂಡಿರುವ ಶಬ್ದವಾಗಿದೆ. ಅಂದರೆ ಜಾತಿ ಗೌಡಿಕೆಪಟ್ಟವು ಕೊಡಗಿನಲ್ಲಿ ೧೧ನೇ ಶತಮಾನದಲ್ಲಿದ್ದಿತ್ತೆಂಬುದಕ್ಕೆ ಈ ವಿವೇಚನೆ ಇಂಬುಗೊಡುತ್ತದೆ. ಇದನ್ನೊಪ್ಪಿದರೆ, ಹಾಲೇರಿ ಅರಸರ ಕಾಲಕ್ಕೆ 'ಗೌಡಬೋವ' ವ್ಯವಸ್ಥೆ ಮುಂದುವರಿದರೂ ಗೌಡಜಾತಿ ನ್ಯಾಯವ್ಯವಹಾರಗಳಿಗೆ 'ತಕ್ಕ' ಎಂಬ ಕೊಡವಭಾಷಾ ಶಬ್ದಕ್ಕೆ ಉತ್ತರಕೊಡಗಿನ ಭಾಗಗಳಲ್ಲಿ ಸಂವಾದಿಯಾಗಿ 'ಜಾತಿಗೌಡಿಕೆ' ಎಂಬ ಶಬ್ದ ಬಳಕೆಗೊಂಡಿತ್ತೆಂದಾಗುತ್ತದೆ; ಹಾಗೂ ಈ ಹುಲುಕೋಡು ಶಾಸನದ ಈ ಶಬ್ದ ನೆನಪಿನಿಂದ ಜಾರಿದ್ದರೂ ವ್ಯವಸ್ಥೆಯ ಪೂರ್ವನಿದರ್ಶನದ ಸಾಕ್ಷಿಯಾಗುತ್ತದೆ; ನಿಘಂಟಿಗೆ ವಿಜಯನಗರ ಕಾಲದ ಒಂದು ಹೊಸ ಶಬ್ದವನ್ನು ಸೇರಿಸಿಕೊಡುವಂತಾಗುತ್ತದೆ.

ದೊಡ್ಡವೀರರಾಜೇಂದ್ರ ಒಡೆಯ(೧೭೮೮-೧೮೦೯)ನ ಕಾಲದಲ್ಲಿ, ಶಿಸ್ತು, ಹುಕುಂನಾಮೆಯನ್ನು ಗಮನಿಸಿ ನ್ಯಾಯಾಡಳಿತಸೂಚಿಯನ್ನು ಹೆಕ್ಕಬೇಕಾಗುತ್ತದೆ. ೨ನೇ ಲಿಂಗರಾಜೇಂದ್ರ ಒಡೆಯನ ಹುಕುಂನಾಮೆಯು ದೊಡ್ಡವೀರರಾಜೇಂದ್ರ ಒಡೆಯನ ಹುಕುಂನಾಮೆಯ ಮುಂದುವರಿದ ಭಾಗ ಅಥವಾ ಬೇರೆಯಾಗಿರುವ ಕಾರಣ, ಲಭ್ಯವಿರುವ ೨ನೇ ಲಿಂಗ ರಾಜೇಂದ್ರ ಒಡೆಯನ ಹುಕುಂನಾಮೆಯ ೨೦, ೨೫, ೫೧ನೇ ಆಣತಿಗಳಲ್ಲಿ ಕಾಣಬರುವ ನ್ಯಾಯವಿತರಣಾ ವ್ಯವಸ್ಥೆಯ ವಿಷಯಗಳನ್ನು ದೊಡ್ಡವೀರರಾಜೇಂದ್ರ ಒಡೆಯನ ಕಾಲದಲ್ಲೂ ಅನ್ವಯವಿತ್ತೆನ್ನಬಹುದು. ಹೀಗಾಗಿ ಉಭಯ ರಾಜಾನ್ವಯ ನ್ಯಾಯಾಡಳಿತ ವ್ಯವಸ್ಥೆ ಎಂದು ಪರಿಗಣಿಸಿ ಮುಂದಿನ ಸಾಲುಗಳನ್ನು ನೋಡಬಹುದು.

ನ್ಯಾಯ ತೀರಿಸುವ ಅಧಿಕಾರಿಗಳ ಪರಿಕ್ರಮವು ಹುಕುಂನಾಮೆಯ ರೀತ್ಯ ತಕ್ಕ, ಪಟೇಲ, ಸೀಮೆ ಅಮಿಲ, ಪಾರುಪತ್ಯಗಾರ ಮತ್ತು ದಿವಾನ- ಹೀಗೆ ಏರುಶ್ರೇಣಿಯಲ್ಲಿತ್ತು. ಇವರ

ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು ತೀರ್ಮಾನವಿರುತ್ತಿತ್ತು. ಇಷ್ಟರಲ್ಲೂ ಬಗೆ ಹರಿಯದಿದ್ದಾಗ ರಾಜತೀರ್ಮಾನ ಅಂತಿಮವಾಗುತ್ತಿತ್ತು.

ಗ್ರಾಮದ ರೈತರು ಸಿವಿಲ್ ವ್ಯವಹಾರ ಅಥವಾ ಸಾಮಾನ್ಯತಪ್ಪುಗಳ ಸಂಬಂಧದಲ್ಲಿ ದೂರುಕೊಟ್ಟರೆ ಸಂಬಂಧಿಸಿದವರನ್ನು ಸೌಜನ್ಯಯುತವಾಗಿ ಕರೆಸಬೇಕು; ಬಾಯ್ದೆರೆಯಲ್ಲಿ ಪರಸ್ಪರ ವಿಚಾರಣೆ ನಡೆಸಿ ತನ್ನ ಕೈಯಲ್ಲಿ ಆಗುವುದಾದರೆ ನ್ಯಾಯ ಬಗೆಹರಿಸಿ ಕಳುಹಿಸ ಬೇಕು; ತನ್ನಲ್ಲಿ ಆಗಲಿಲ್ಲ ಎಂದರೆ ಮೇಲಾಧಿಕಾರಿ ತಕ್ಕನಲ್ಲಿಗೆ ನ್ಯಾಯಕ್ಕೆ ಕಳುಹಿಸಬೇಕು; ಅಲ್ಲಿಯೂ ಆಗಲಿಲ್ಲ ಎಂದರೆ ನಾಡು ಪಾರುಪತ್ಯಗಾರನ ಬಳಿಗೆ ನ್ಯಾಯಕ್ಕೆ ಕಳುಹಿಸಬೇಕು; ನ್ಯಾಯವು ಅಲ್ಲಿಯೂ ತೀರ್ಮಾನಗೊಳ್ಳದಿದ್ದರೆ ದಿವಾನ್ ಕಚೇರಿಗೆ ಕಳುಹಿಸಬೇಕು. ಆದರೆ ಇದು ಸುಮ್ಮನೆ ಮೇಲಾಧಿಕಾರಿಗಳಿಗೆ ಕಡತ ಹೊತ್ತುಹಾಕುವ ರವಾನೆ ಕೆಲಸ ವಾಗಿರಲಿಲ್ಲ. ನ್ಯಾಯದ ಸಮಸ್ಯೆ ಇಂತಿದೆ; ಏಕೆ ತನ್ನ ಕೈಯಲ್ಲಿ ತೀರಿಸಲಾಗಿಲ್ಲ ಎಂದು ಹೇಳಿ ಕಳುಹಿಸಬೇಕು. ದಿವಾನ್ ಕಚೇರಿಯಲ್ಲಿ ನ್ಯಾಯಾನ್ಯಾಯವನ್ನು ಧರ್ಮಪ್ರಕಾರ ವಿಚಾರಮಾಡಿ ಪರಿಶೀಲಿಸಿ ತಪ್ಪಿತಸ್ಥನಿಗೆ ತಾಕೀತುಮಾಡಿ ಎಚ್ಚರ ಹೇಳಬೇಕು. ತೊಂದರೆ ಅನುಭವಿಸಿದ್ದವನಿಗೆ ಸಮಾಧಾನ ಹೇಳಿ ಮುಂದೆ ಅಂಥ ತೊಂದರೆ ಒದಗುವುದಿಲ್ಲ ಎಂದು ಖಾತ್ರಿಗೊಳಿಸಬೇಕು. ಹೀಗೂ ನ್ಯಾಯ ತೀರದಿದ್ದರೆ ಎಲ್ಲ ವಿವರಗಳನ್ನು ಪೂರ್ಣವಾಗಿ ಅರಮನೆಗೆ ತಿಳಿಸಿ ಅಲ್ಲಿಂದ ಬಂದ ಅಪ್ಪಣೆಯಂತೆ ನಡೆದುಕೊಳ್ಳಬೇಕಿತ್ತು. ಒಂದುವೇಳೆ ಪಂಚಾಯಿತಿದಾರರು ನ್ಯಾಯವನ್ನು ತೀರಿಸಬೇಕಾಯಿತು-ಆಗ ಸತ್ಯ, ಧರ್ಮ, ಸಮದೃಷ್ಟಿಯುಳ್ಳ ಜಾಣರಾದ ಉತ್ತಮರೆನಿಸುವ ನಾಲ್ಕು ಜನರನ್ನು ಕರೆಸಬೇಕು. ಇವರಲ್ಲಿ ಇಬ್ಬರನ್ನು ಫಿರ್ಯಾದಿಪರ, ಇನ್ನಿಬ್ಬರನ್ನು ಆರೋಪಿಯ ಪರ ಕೂಡಿಸಿ ಅವರವರ ಮಾತುಗಳನ್ನು ಚೆನ್ನಾಗಿ ಕೇಳಿ ಪರಿಶೀಲಿಸಬೇಕು. ನಂತರ ಈ ಜೋಡಿಗಳು ಪರಸ್ಪರ ವಾದಿಸಿ ಸತ್ಯಾಸತ್ಯಗಳನ್ನು ಚೆನ್ನಾಗಿ ಪರಿಶೀಲಿಸಿ ಧರ್ಮಾಧರ್ಮವಿಹಿತವಾಗಿ ನ್ಯಾಯ ನೀಡಬೇಕು. ಆಯಾ ಅಧಿಕಾರವರ್ಗದವರ ಮುಂದೆ ಈ ಪಂಚಾಯಿತಿದಾರರು ಫಿರ್ಯಾದಿದಾರ, ಆರೋಪಿಗಳನ್ನು ನಿಲ್ಲಿಸಿಕೊಂಡು ನ್ಯಾಯ ತೀರಿಸಿದ್ದು ಹೀಗೆ ಎಂದು ಹೇಳಬೇಕು.

ಈ ಪಂಚಾಯಿತಿದಾರರ ನ್ಯಾಯತೀರ್ಮಾನ ಒಪ್ಪಿತವೆಂದರೆ ಅದರಂತೆ ಒಪ್ಪಿ ನಡೆಯಬೇಕು. ಅದು ಒಪ್ಪಿತವಲ್ಲ ಎಂದರೆ ಕಾರಣವನ್ನು ಅನ್ಯಾಯಗೊಂಡವನಿಂದ ಮುಖತಃ ವಿಚಾರಿಸಬೇಕು. ಆಗಲೂ ಪಂಚಾಯಿತಿದಾರರ ತೀರ್ಮಾನ ಸರಿ ಎಂದು ಅಧಿಕಾರಿಗಳ ಮನಸ್ಸಿಗೆ ಕಂಡುಬಂದರೆ ಅದೇ ರೀತಿ ನ್ಯಾಯವನ್ನು ದೃಢೀಕರಿಸಬೇಕು. ಬದಲು ಪಂಚಾಯಿತಿದಾರರು ಸಮದರ್ಶಿಯಾಗಿ ತೀರ್ಪು ನೀಡಿಲ್ಲ ಎಂದು ಕಂಡುಬಂದರೆ ಆ ತೀರ್ಪು ಹಾಗೂ ಆಯಾ ಅಧಿಕಾರಿಗಳ ಮನಸ್ಸಿಗೆ ತಿಳಿದಂತೆ ವಿಷಯದ ವಿವರಗಳನ್ನು ದಿವಾನ್ ಕಚೇರಿಗೆ ಕಳುಹಿಸಬೇಕು. ಆ ನಂತರ ಅಲ್ಲಿಂದ ಬಂದ ಅಪ್ಪಣೆಯಂತೆ ನಡೆದುಕೊಳ್ಳಬೇಕು. ಹೀಗೆ ಪಾರುಪತ್ಯಗಾರ ಸ್ವತಹ ಅಥವಾ ಪಂಚಾಯಿತಿದಾರರ ಮೂಲಕ ನ್ಯಾಯತೀರ್ಮಾನಿಸುವ ಅವಕಾಶವಿತ್ತು.

ಕಳವು, ಹಣದ ದುರುಪಯೋಗ, ಪರಸ್ಪರ ಬೈದಾಟದಂಥ ಅಪರಾಧಗಳಿಗೆ ಶಿಕ್ಷೆಯ ಬಗ್ಗೆ ತಿಳಿಸಲಾಗಿದೆ. ಅರಮನೆ ಸೀಮೆಯಲ್ಲಿರುವವರು ಯಾರೇ ಬೈದಾಡಿದರೂ ಇಬ್ಬರನ್ನು ಕರೆಸಿ ವಿಚಾರಣೆ ನಡೆಸಬೇಕು. ಹೆಚ್ಚು ಬೈದವನಿಗೆ, ಕಡಿಮೆ ಬೈಸಿಕೊಂಡವನಿಂದ ಒಂದಕ್ಕೆರಡು ಬೈಗುಳ ಹಾಕಿಸಿ ಎಚ್ಚರಿಸಿ ಬಿಡುವುದು; ಹೊಡೆದಾಡಿದವರಿಗೂ ಇದೇ ರೀತಿ ಒಂದಕ್ಕೆ ಎರಡರಷ್ಟು ಹೊಡೆತ ಕೊಡಿಸಿ ಎಚ್ಚರಿಸಿ ಬಿಡುವುದು; ಕಳ್ಳತನ ಮಾಡಿದವರಲ್ಲಿ ಕದ್ದ ವಸ್ತುವಿನ ಒಂದೂವರೆಯಷ್ಟು ಮೌಲ್ಯವನ್ನು ವಸೂಲುಮಾಡುವುದು; ಅದರಲ್ಲಿ ಒಂದು ಪಾಲಿನ ಹಣ ಅಥವಾ ವಸ್ತು ವಾರಸುದಾರನಿಗೂ ಉಳಿದರ್ಧವು ಹಾಕಿದ ದಂಡವೆನಿಸಿ ಸರ್ಕಾರಕ್ಕೂ ಸಲ್ಲುವಂಥದ್ದು ಎಂದು ಹೇಳಿ ದಂಡಕೊಡಲು ತಪ್ಪಿದರೆ ಛಡಿಏಟು ಅಥವಾ ರಸ್ತೆ ಕೆಲಸಗಳನ್ನು ಮಾಡಿಸುವುದು ಎಂದೆಲ್ಲ ತಿಳಿಸಲಾಗಿದೆ.

ಊರಗೌಡನು ಸಾಮಾನ್ಯ ಅಪರಾಧಗಳ ಬಗ್ಗೆ ನ್ಯಾಯತೀರ್ಮಾನ ಮಾಡಬಹುದಿತ್ತು; ದೊಡ್ಡ ಅಪರಾಧ ಅಥವಾ ಹೀನಕೃತ್ಯಗಳ ಕುರಿತು ನ್ಯಾಯದ ಅಧಿಕಾರ ಅವನಿಗಿರಲಿಲ್ಲ. ಸಾಮಾನ್ಯ ಅಪರಾಧಿಯನ್ನು ಪಾರುಪತ್ಯೆಗಾರನ ಕಚೇರಿಗೆ ಒಯ್ಯಬೇಕಿತ್ತು. ಆ ಪಾರುಪತ್ಯೆಗಾರನು ಮೂರುದಿನಗಳ ಸಜೆ ಮಾತ್ರ ಕೊಡುವ ಅಧಿಕಾರ ಹೊಂದಿದ್ದ.

ಜಾತಿಸಂಬಂಧದ ವಿವಾದಗಳನ್ನು, ನಿರ್ದಿಷ್ಟಜಾತಿ ಆಚಾರ-ವಿಚಾರಗಳನ್ನು ನೋಡಿ ಕೊಳ್ಳುವ ಹೊಣೆದಾರನಾದ 'ಕುಲಾಚಾರ'ನು ತೀರ್ಮಾನಿಸುತ್ತಿದ್ದ. ೧೨ ಹಣ ಅಥವಾ ೩ ರೂ ೮ ಆಣೆ ದಂಡವನ್ನು ಅವನು ತಪ್ಪಿತಸ್ಥನಿಗೆ ಹಾಕುವ ಅಧಿಕಾರ ಹೊಂದಿದ್ದ.

ದೈಹಿಕಶಿಕ್ಷೆಯು ಕೇವಲ ಅಪರಾಧಿ ಅಥವಾ ತಪ್ಪಿತಸ್ಥ ಜನರಿಗಷ್ಟೆ ಸೀಮಿತವಾಗಿರಲಿಲ್ಲ. ಕೆಲವುವೇಳೆ ರಾಜದ್ರೋಹ ಅಥವಾ ರಾಜವಿರೋಧಿ ದಿವಾನರಿಗೂ ಈ ಶಿಕ್ಷೆಯಿಂದ ವಿನಾಯಿತಿ ಇರಲಿಲ್ಲ. ಅಂದರೆ ನ್ಯಾಯದ ಮುಂದೆ ಯಾರೂ ದೊಡ್ಡವರಲ್ಲ ಎಂಬ ಸಂಕೇತ ಇಲ್ಲಿದೆ. ಒಂದುರೀತಿಯಲ್ಲಿ ರಾಜನ ಆಡಳಿತದಡಿಯಲ್ಲೇ ವಿಕಸಿತವಾದ ಪ್ರಜಾಮುಖಿ ನ್ಯಾಯವ್ಯವಸ್ಥೆ ಇದಾಗಿತ್ತೆನ್ನಬಹುದು.

ಕ್ರಿಮಿನಲ್ ಸ್ವರೂಪದ ಕೊಲೆ, ಹಾದರ, ಪಿತೂರಿ, ಪಲಾಯನ ಇತ್ಯಾದಿ ಅಪರಾಧಗಳಿಗೆ ನೀಡುವ ಶಿಕ್ಷೆಗಳು ಕಠಿಣವಾಗಿದ್ದವು. ಕೊಲೆಯ ಅಪರಾಧಿಗೆ ನೇರವಾಗಿ ಶಿಕ್ಷೆ ವಿಧಿಸುತ್ತಿರಲಿಲ್ಲ. ನಾಡಿನ ಪಾರುಪತ್ಯೆಗಾರರು ಹಾಗೂ ಸುಬೇದಾರರು ಆರೋಪಿತ ಕೊಲೆಗಾರನನ್ನು ಬಂಧಿಸಿ ಮೊದಲು ವಿಚಾರಣೆಗೆ ಒಳಪಡಿಸಬೇಕಿತ್ತು. ರಾಜನು ಈ ಸಂದರ್ಭದಲ್ಲಿ ನಿಯುಕ್ತಿಗೊಳಿಸುತ್ತಿದ್ದ ನ್ಯಾಯಾಧಿಕಾರಿಗಳು ಬಂದಿಯನ್ನು ವಿಚಾರಣೆ ಮಾಡಿ ತಮ್ಮ ತೀರ್ಮಾನವನ್ನು ರಾಜನಿಗೆ ವರದಿಮಾಡಬೇಕಿತ್ತು. ಅಪರಾಧದ ಸಂದರ್ಭಕ್ಕನುಗುಣವಾಗಿ ಕೊಲೆಗಾರನಿಗೆ ಕ್ಷಮೆ, ದಂಡ, ತೀವ್ರಹೊಡೆತ, ಅಂಗ ಊನ ಅಥವಾ ಮರಣದಂಡನೆ ಇವುಗಳಲ್ಲಿ ಯಾವುದಾದರೊಂದು ರಾಜನ ಆಣತಿಗನುಗುಣವಾಗಿ ಒದಗುತ್ತಿತ್ತು; ಕುಡಿದ ಅಮಲಿನಲ್ಲಿಯೋ, ಬೇಟೆಯಾಡುತ್ತಿದ್ದ ಸಂದರ್ಭದಲ್ಲಿಯೋ, ದುಷ್ಟಪ್ರಾಣಿಗಳಿಂದ ಬೆಳೆಗಳನ್ನು ರಕ್ಷಿಸುವ ಸಂದರ್ಭದಲ್ಲಿಯೋ ಎಚ್ಚರಗೆಟ್ಟು ಮನುಷ್ಯನನ್ನು

ಕೊಲೆಮಾಡಿದರೆ ಅದನ್ನು ಬಹಳ ತೀವ್ರ ಅಪರಾಧವೆಂದು ಪರಿಗಣಿಸಿ ಅನುಗುಣ ಶಿಕ್ಷೆ ನೀಡಲಾಗುತ್ತಿತ್ತು; ಪಲಾಯನ ಹಾಗೂ ಸಿರೇಕಾರನ ವಿರುದ್ಧ ಕೊಲೆಯ ಸಂಚುಮಾಡಿದರೆ ಅತ್ಯಂತ ಹೀನ ಅಪರಾಧಕೃತ್ಯವೆಂದು ಭಾವಿಸಲಾಗುತ್ತಿತ್ತು. ಅಂಥವರು ಸಿಕ್ಕಿಹಾಕಿಕೊಂಡಾಗ ತೀವ್ರರೀತಿಯ ಕಠಿಣಶಿಕ್ಷೆಗೆ ಒಳಗಾಗುತ್ತಿದ್ದರು.[೧೭] ಅದೇ ಲಿಂಗರಾಜೇಂದ್ರಒಡೆಯನ ಕಾಲಕ್ಕೆ ಅದಕ್ಕೆ ವಿಧಿಸುತ್ತಿದ್ದ ಶಿಕ್ಷೆ ಎಂದರೆ ಆನೆಯಿಂದ ತುಳಿಸುವುದು, ವಡಿಕತ್ತಿಯಿಂದ ಅಂಗವಿಚ್ಛೇದನ, ಎತ್ತರದ ಬಂಡೆಯಿಂದ ತಳ್ಳುವುದು, ಮರಕ್ಕೆ ಕಟ್ಟಿ ಮೊಳೆ ಹೊಡೆಯುವುದು, ಬಾಣಗಳಿಂದ ಹೊಡೆದು ಸಾಯಿಸುವುದು ಇತ್ಯಾದಿಗಳು ಕೊಲ್ಲುವ ವಿಧಾನಗಳಾಗಿದ್ದವು.[೧೮] ರಾಜದ್ರೋಹಕ್ಕಂತೂ ಮರಣದಂಡನೆಯೇ ಶಿಕ್ಷೆ ಆಗಿತ್ತು.

ನ್ಯಾಯದ ಆಣತಿಗಳನ್ನು ರೂಪಿಸುವಾಗ ಧರ್ಮಶಾಸ್ತ್ರವನ್ನು ಗಮನಿಸಿರುವ ಬಗ್ಗೆ ಲಿಂಗರಾಜೇಂದ್ರಒಡೆಯನು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ. ರಾಜ ನೀಡಿರಬಹುದಾದ ಶಿಕ್ಷೆಗಳ ಸಂದರ್ಭಗಳಿಗೆ ಇತಿಮಿತಿ ಇರಬಹುದು. ಆದರೆ ಕೆಳಮಟ್ಟದ ಅಧಿಕಾರಿವರ್ಗದಿಂದ ಆರಂಭಿಸಿ ಸಚಿವರವರೆಗೆ ನ್ಯಾಯದ ಪರಿಶೀಲನೆ ನಡೆಸಿ ತೀರ್ಮಾನ ತೆಗೆದುಕೊಳ್ಳುವ ವ್ಯವಸ್ಥೆ ಇದೆಯಲ್ಲ ಅದು ಅಂದಿನ ಆಂಗ್ಲರ ಮಿಲಿಟರಿ ಕುತಂತ್ರ, ದೌರ್ಜನ್ಯಗಳಿಗಿಂತ ಎಷ್ಟೋ ಲೇಸೆನಿಸಿ ಆ ಕಾಲದ ಸಮುಚಿತ ವ್ಯವಸ್ಥೆ ಆಗಿತ್ತು ಎನಿಸುತ್ತದೆ.

ಇನ್ನು ದೊಡ್ಡವೀರರಾಜೇಂದ್ರ ಒಡೆಯನ ರಾಜಕೀಯ ಮುತ್ಸದ್ದಿತನವಷ್ಟೇ ಅಲ್ಲದೆ, ವ್ಯಾವಹಾರಿಕ ನ್ಯಾಯದಲ್ಲೂ ಅವನ ಸಾಮರ್ಥ್ಯವನ್ನು ರಾಜೇಂದ್ರನಾಮೆಯ ಪುಟಗಳಲ್ಲಿ ಕಾಣಬಹುದು.[೧೯] ಮಲೆಯಾಳದ ಪಾಲೆ ವೀರವರ್ಮರಾಜ(ಕೋಟೆರಾಜ)ನ ಹಿಂದಿನ ಹಿರಿಯ ವಂಶೀಕರು ಹಾಲೇರಿವಂಶದ ಸಿರಿಬಾಯಿ ದೊಡ್ಡವೀರಪ್ಪನಿಗೆ ಹಣದ ದಗಾ ಮಾಡಿದ್ದು ಹಾಗೂ ಈಗಿನ ವೀರವರ್ಮರಾಜ ವೈನಾಡಿನಲ್ಲಿ ಮಾಡಿದ ಮೋಸಕ್ಕೆ ಹೇಳುವ ಮಾತು: 'ನಿಮ್ಮ ಕಾರಣವರ ತಲೆ ಚಿನ್ನದ್ದಾದರೆ ನಮ್ಮ ಸಂಸ್ಥಾನದ ದೊರೆಮಕ್ಕಳ ತಲೆ ಮಣ್ಣಿನದಲ್ಲವಷ್ಟೆ... ಬೈನಾಡಲ್ಲು ಬಿದ್ದುಹೋದ ನಮ್ಮ ಸಂಸ್ಥಾನದ ದೊರೆಮಕ್ಕಳ ತಲೆ ಎರಡರಲ್ಲಿ ಒಂದು ತಲೆ ನಿಮ್ಮ ಕಾರಣವರ ತಲೆಗೆ ಸಮವಾಯಿತು. ಮತ್ತೊಂದು ತಲೆಗೆ ನಿಮ್ಮ ತಲೆ ಕೊಡಿ' ಕೋಟೆರಾಜ ಕೊಡಗಿನಲ್ಲಿ ಸೆರೆಸಿಕ್ಕಿದಾಗ ನಡೆದ ಘಟನೆ ಇದು. ಇಲ್ಲಿ ಒಡೆಯನ ಮುತ್ಸದ್ದಿ ನ್ಯಾಯವಂತಿಕೆಯ ಚಿತ್ರ ದೊರಕುತ್ತದೆ.

ನಮ್ಮಕ್‌ಹರಾಮ್ ಸ್ವಾಮಿದ್ರೋಹಿ ಜನರನ್ನು ಪತ್ತೆಹಚ್ಚಿ ಅರಮನೆಗೆ ಒಪ್ಪಿಸಿದಂಥ ಅಸಲಿ ಮಂದಯ್ಯ ಎಂಬುವನಿಗೆ ಉಂಬಳಿಭೂಮಿ ಕೊಟ್ಟ ಸಂಗತಿ (ಕ್ರಿ.ಶ.೧೮೦೩ರ ಅಪ್ರಕಟಿತ ನಿರೂಪ); ರೈತರಿಗೆ ಕಿರುಕುಳಕೊಟ್ಟು ಉತ್ತಾರದ ಭೂಮಿ ಮಾಡುವ ಆ ರೈತರಿಂದ ಒಂದಕ್ಕೆರಡು ವಸೂಲುಮಾಡಿ ನೆಪಹೇಳುತ್ತಿದ್ದ ಅಮರಸೂಳ್ಯದ ದೇಗುಲದ ಪೂಜಾರಿ ಸ್ಥಾನೀಕರು ರಸೀತಿ ಕೊಡದೆ ಹಣತಿಂದ ಸಂದರ್ಭದಲ್ಲಿ ವೀರರಾಜೇಂದ್ರಒಡೆಯನು ತಾಲೂಕು ಶೀಮೆ ಸುಬೇದಾರ, ಎರಡನೇ ಸುಬೇದಾರ, ಮೂರನೇ ಸುಬೇದಾರರಿಗೆ ಅಪ್ಪಣೆ ಮಾಡಿ, ಉತ್ತಾರದ ಭೂಮಿಯನ್ನು ಜಪ್ತಿಮಾಡಿ ಅರಮನೆ ತರಕ್ಕೆ ಸೇರಿಸಿಕೊಂಡು

ನ್ಯಾಯದ ಸಂದರ್ಭವನ್ನು ನಿದರ್ಶಿಸಿದ. ಅಪರಾಧಗಳಿಗೆ ಒದಗುವ ಗತಿಯ ಬಗ್ಗೆ ಅವನ ನಿರೂಪವೊಂದು ತಿಳಿಸುತ್ತದೆ. ಕ್ರಿ.ಶ.೧೮೦೦ರ ಅವನ ನಿರೂಪವೊಂದರಲ್ಲಿ ಅರಮನೆ ಪನ್ಯ ಜಮೀನಿನ ಕೆಂಬಟ್ಟಿ ಹೊಲೆಯರ ಕುಟುಂಬದ ಎಲ್ಲ ಸದಸ್ಯರ ವಿವರಗಳನ್ನು ಬೆಟ್ಟಿಯತ್ ಮೂರ್ನಾಡುವಿನ ಕುತ್ತನಾಡು ಗ್ರಾಮದ ಕಾಳಿಂಗಳ ಮನೆತನದ ರೈತನ ಅಹವಾಲಿಗನುಸಾರ ಕೊಟ್ಟು, ಆ ಆಳುಗಳ ವಂಶಪಾರಂಪರ್ಯ ರಕ್ಷಣೆಗೆ ನ್ಯಾಯಬದ್ಧ ಅನುವು ಮಾಡಿರುವುದೂ ಅಂದಿನ ಸಾಮಾಜಿಕನ್ಯಾಯದ ಎಚ್ಚರಿಕೆಯ ಕುರುಹಾಗಿದೆ.

೨ನೇ ಲಿಂಗರಾಜೇಂದ್ರಒಡೆಯನ ನಿರೂಪಗಳಲ್ಲಿಯೂ ವಿವಿಧ ಪ್ರಸಂಗಗಳು ಕಾಣಬಂದು ನ್ಯಾಯತೀರ್ಮಾನ ಕೊಟ್ಟ ಬಗೆಯೊಂದು ಗಮನಾರ್ಹವಾಗಿದೆ; ಮದುವೆ ಆದ ಹೆಂಗಸು ವ್ಯಭಿಚಾರ ಮಾಡಿದುದಕ್ಕೆ ಸಂಬಂಧಿಸಿ ಕೊಟ್ಟ ನಿರೂಪವದು:[೨೦] ನಾಲ್ಕುನಾಡು ಅರಮನೆ ತೈನಾತಿ ಮೊಣಯ್ಯ ಎಂಬುವನು ತನ್ನ ಹೆಂಡತಿಯೊಡನೆ ತುಳುವರ ತಿಂಮ್ಮ ಎಂಬುವನು ವ್ಯಭಿಚಾರ ನಡೆಸಿದ ಕಾರಣ, ಬಂಧಿಸಿಟ್ಟ ಬಗ್ಗೆ ರಾಜನಲ್ಲಿ ದೂರುಕೊಟ್ಟು ಆ ಹೆಣ್ಣು ತನಗೆ ಬೇಡ ಎಂದು ಬರೆದುಕೊಂಡ. ಆಗ ಒಡೆಯನು ಹಾಗೆ ಆ ಹೆಣ್ಣು 'ಯಿರುಳು ತಪ್ಪುವುದಕ್ಕೆ ಕಾರಣವೇನೆಂತ್ತಾ' ಕೇಳಿ ಏಳು ಕೊರಡು ಪೆಟ್ಟುಕೊಡು. ಇನ್ನುಮುಂದೆ ಹೀಗೆ ಮಾಡದಂತೆ ಎಚ್ಚರ ನೀಡು. ಹಾಗೂ ಆ ಹೆಣ್ಣು ನಿನಗೆ ಬೇಡವಾದರೆ ಅರಮನೆ ತರಕ್ಕೆ ದಾಖಲುಮಾಡು ಎಂದು ನ್ಯಾಯದ ನಿರೂಪ ಕೊಟ್ಟ. ಅಂದರೆ ಮೊಣ್ಣಯ್ಯನಲ್ಲಿಯೂ ತಪ್ಪಿದ್ದಿರಬಹುದು ಎಂಬ ಸೂಚನೆ ರಾಜ ನೀಡಿದ್ದಾನೆ. ಬಾಳುತಪ್ಪಿದ ಹೆಣ್ಣಿಗೆ ಅರಮನೆ ರಕ್ಷಣೆ ಕೊಡುತ್ತದೆ ಎಂಬ ಸೂಚನೆ ನೀಡಿದ್ದಾನೆ. ಹಾಗೂ ಸಂಸಾರ ಸಾಮರಸ್ಯ ಹೋದಮೇಲೆ ಬೇರೆಯಾಗಿರುವುದು ಲೇಸು ಎಂದೂ ನುಡಿದ್ದಾನೆ. ನ್ಯಾಯದಲ್ಲಿ ಪರ್ಯಾಯ ಸಲಹೆ ಹಾಗೂ ಹೆಣ್ಣಿಗೆ ರಕ್ಷಣೆ ಕೊಟ್ಟಿರುವ ಬಗೆ ಇಲ್ಲಿ ಗಮನಾರ್ಹವಾಗಿ ಕಾಣುತ್ತದೆ.

ಗೌಡ ಜನಾಂಗದ ಮದುವೆ ಕಟ್ಟಳೆಗೆ ಸಿಂಗೇರಿಮಠದ ಪಂಡಿತ ರಾಮಯ್ಯ ತಂಟೆ ಮಾಡಿ ತಡೆಮಾಡಿದ ಸಂದರ್ಭದಲ್ಲಿ ಆಗಿನ ಕೊಡಗು ಜಿಲ್ಲೆಗೆ ಸೇರಿದ್ದ ಪುತ್ತೂರು ಮಾಗಣೆಯ ಗ್ರಾಮದಗೌಡುಗಳಿಂದ ಕ್ರಿ.ಶ.೧೮೧೫ರಲ್ಲಿ ಒಡೆಯನಿಗೆ ದೂರು ಬಂತು. ಇದಕ್ಕೆ ಹಿಂದೆ ಮುದ್ದುಸ್ವಾಮಿಯವರು (ಕ್ರಿ.ಶ.೧೭೭೦) ಲಿಂಗರಾಜೇಂದ್ರಒಡೆಯ (೧ನೇ ಲಿಂ.ರಾ.ಒಡೆಯ: ಕ್ರಿ.ಶ.೧೭೮೯) ಕೊಟ್ಟಿದ್ದ ಕಟ್ಟಳೆ ಹಕ್ಕಿನ ನಿರೂಪವನ್ನು ಹಾಗೂ ನಗರ ಸಂಸ್ಥಾನದ ನಿರೂಪವನ್ನು ಗೌಡಜನಾಂಗದವರು ಮುಂದಿಟ್ಟರು. ಆಗ 'ನಿಮ್ಮ ಜಾತಿವಳಗೆ ಪ್ರಕು ಯಾವದು ನಡೆದು ಬರುತ್ತಿತ್ತು. ಆ ಮೇಲೆ ಈಗಲು ನಡೆದುಕೊಳ್ಳುವಲ್ಲಿ ಅಡ್ಡಿ ಹರಕತ್ ಬಾರದಂತೆ ಪ್ರಕು ನಗರ್ರ ಸಮಸ್ತನದ ನಿರೂಪ ಹಾಲೇರಿ ಸಮಸ್ತಾನದ ನಿರೂಪ ಪ್ರಕಾರ ನಡೆದುಕೊಳ್ಳುವಲ್ಲಿಯೆಂಬದಾದ ಅಪ್ಪಣೆ...ಪ್ರಕಾರ ನಡೆದುಕೊಳ್ಳುವ' ಬಗ್ಗೆ ಮರು ಅಪ್ಪಣೆ ನೀಡಿ ಜಾತಿನ್ಯಾಯದ ಹಕ್ಕನ್ನು ಮಾನಿಸಿದ ಒಡೆಯ.[೨೧]

ಚಿಕ್ಕವೀರರಾಜೇಂದ್ರ ಒಡೆಯನ ಕಾಲಕ್ಕೆ ಹಿಂದಿನ ಶಿಸ್ತು, ಹುಕುಂನಾಮೆಗಳು ದಟ್ಟವಾಗಿ ಅನುಸರಣೆಯಲ್ಲಿದ್ದುದರಿಂದ ನ್ಯಾಯಾಡಳಿತ ಪರಂಪರೆಯೂ ಮುಂದುವರಿಯಿತು. ಚಿತ್ರದುರ್ಗದ ಬೇಡರ ಸೈನ್ಯವು ಈ ರಾಜನ ಕಾಲದಲ್ಲಿ ಕೊಡಗಿನಲ್ಲಿ ಪೂರ್ಣ ಸಂಘಟಿತ ರೂಪದಲ್ಲಿದ್ದು, ರಾಜನಿಷ್ಠೆಯಲ್ಲಿತ್ತು. ಅಪ್ಪಂಗಳದ ಚನ್ನಬಸಪ್ಪನು, ಚಿಕ್ಕವೀರರಾಜೇಂದ್ರ ಒಡೆಯನ ವಿರುದ್ಧದ ಸಂಚಿಗೆ ಈ ಬೇಡರ ಸೈನ್ಯದ ನಾಯಕನಾದ ಚಿನ್ನಪ್ಪನಾಯಕನ ನೆರವು ಕೇಳಿದನಂತೆ. ರಾಜನ ಉಪ್ಪುತಿಂದು ರಾಜದ್ರೋಹ ಮಾಡಲಾರೆ ಎಂದ ಅವನ ರಾಜನಿಷ್ಠೆ, ರಾಜನ ಆಡಳಿತದ ಸುಮುಖ ಸ್ವರೂಪ ಹಾಗೂ ಕೊಡಗಿನವನೂ ಅಲ್ಲದ ಆ ನಾಯಕನ ನ್ಯಾಯದೃಷ್ಟಿ ಕಾಣಬರುವಲ್ಲಿ ಕೊಡಗಿನ ನ್ಯಾಯಾಡಳಿತದ ಪ್ರಭಾವವನ್ನು ಅದು ಸಂಕೇತಿಸುವಂತಿದೆ.

ಚಿಕ್ಕವೀರರಾಜೇಂದ್ರ ಒಡೆಯನು ಜನಗಳ ಹಿತವನ್ನು ಎಂದೂ ಕಡೆಗಣಿಸಲಿಲ್ಲ. ಅವನನ್ನು ಸಿಂಹಾಸನದಿಂದ ಇಳಿಸಲು ಅವನು ಕ್ರೂರಿಯೆಂಬ ಒಂದು ಉತ್ಪ್ರೇಕ್ಷಿತ ಭಾವನೆಯನ್ನು ಬ್ರಿಟಿಷರು ಉಂಟುಮಾಡಿದರು[೨೨] ಎಂಬುದನ್ನು ಕೆಲವು ಲೇಖಕರು ಗಮನಿಸಿದ್ದಾರೆ. ಕಾರ್ಪೆಂಟರ್, ಲಾರ್ಡ್ ಎಲೆನ್‌ಬರೊ ಅವರುಗಳ ವರದಿ, ರಾಜನ ಮೇಲೆ ಸಲ್ಲದ ಆರೋಪ ಹೊರಿಸಿ ನೀಡಿದ್ದ ವರದಿಯನ್ನು ಸಾಬೀತುಮಾಡಲು ರಾಜ ಕೇಳಿದಾಗ ವರದಿ ಸಲ್ಲಿಸಿದ್ದ ಗ್ರೀಮೆಯು, ರಾಜನ ಕ್ಷಮೆ ಬೇಡಿ ಪತ್ರಬರೆದಿರುವ ಸಂಗತಿಯೂ ಇದೆ.[೨೩] ಈ ಅಂಶಗಳು ರಾಜನ ಜನಪ್ರಿಯತೆಯನ್ನು, ನ್ಯಾಯನೈಷ್ಠುರ್ಯವನ್ನು ಸಹಿಸದ ಪ್ರಭಾವಿ ಜನರ ತಂಡವೂ ಇದ್ದು, ಆಂಗ್ಲ ಅಧಿಕಾರಿಗಳು ಅದನ್ನು ರಾಜನ ಪದಚ್ಯುತಿಗೆ ಕಾರಣವಾಗಿಸಿಕೊಂಡಂತೆ ತೋರುತ್ತದೆ. ಬಹುಶಃ ಗ್ರಾಮ, ನಾಡು, ಸೀಮೆಗಳ ಮಟ್ಟದಲ್ಲಿ ನ್ಯಾಯನೀಡಿಕೆಯಲ್ಲಿ ಅಸಮರ್ಪಕತೆ ಇದ್ದು, ಚಿಕ್ಕವೀರರಾಜೇಂದ್ರ ಒಡೆಯ ಜನಪರವಾಗಿ ಅಂತಿಮ ತೀರ್ಮಾನ ನೀಡಿ ಜನಪ್ರಿಯನಾಗಿದ್ದಂತೆ ತೋರುತ್ತದೆ.

ದೇವರಕಾಡುಗಳ ನಿರ್ವಹಣೆಯು ಅಲಿಖಿತ ಕಟ್ಟುಕಟ್ಟಲೆಗಳ ನ್ಯಾಯ-ನೀತಿಪ್ರಜ್ಞೆಯ ಸಾಮಾಜಿಕ ಹೊಣೆಯಾಗಿ ಕೊಡಗಿನಲ್ಲಿ ಇಂದಿಗೂ ಕಾಣಬರುತ್ತದೆ. ಹಾಲೇರಿ ಅರಸರ ಕಾಲದಲ್ಲಿ ಇದೊಂದು ದೈವಭೀರು ಪ್ರಜ್ಞೆಯಾಗಿತ್ತು. ಪರಿಸರ ಹಾಗೂ ಆರೋಗ್ಯ ಪೋಷಕ, ಸಾಂಸ್ಕೃತಿಕ ಕಟ್ಟಳೆಗಳ ನೆಲೆಯೂ ಆಗಿದ್ದ ದೇವರಕಾಡುಗಳ ಒತ್ತುವರಿ ಅಥವಾ ಕೆಡಿಸುವ ವ್ಯಕ್ತಿಗೆ ವಿಧಿಸುತ್ತಿದ್ದ ಶಿಕ್ಷೆ ಗರ್ವಾಲೆಯ ಪಂಚಾಯಿತಿಯ ಪರಂಪರಾಗತ ನ್ಯಾಯದ ಮುಖವನ್ನು ತೋರಿಸುತ್ತದೆ. ಗರ್ವಾಲೆಯಲ್ಲೂ ಅರಮನೆ ಇದ್ದು ಹಾಲೇರಿ ಅರಸುವಂಶಿಕ ವಿಭಾಗದ ಆಡಳಿತ ಇತ್ತು. ದೇವರಕಾಡಿನ ದೇವರಹಬ್ಬಗಳಲ್ಲಿ ನಾಡನ್ನು ಕೆಡಿಸಿದವರಿಗೆ ಶಿಕ್ಷೆವಿಧಿಸುವ ಪದ್ಧತಿಯು ಕಾಣಬರುತ್ತದೆ. ಹಾಲೇರಿ ಅರಸರ ಕಾಲದಿಂದಲೂ ಅದು ನಡೆದುಬಂದು ಚಾಲ್ತಿಯಲ್ಲಿದೆ. ಗರ್ವಾಲೆಯ ಮುಂದಿನ ಗ್ರಾಮವಾದ ಸೂರ್ಲಬಿನಾಡಿನ ಮುಟ್ಲುಗ್ರಾಮದ ಮಂಜುನಾಥನ ಹಬ್ಬದಲ್ಲಿ ಇಂಥ ಉದಾಹರಣೆ ಕಾಣಬರುತ್ತದೆ. ಹಬ್ಬದ ಕೊನೆಯಲ್ಲಿ ಕೋಲು, ಬೆತ್ತದಗುರಾಣಿ ಹಿಡಿದು ಆಡುವ

ಆಟದಲ್ಲಿ ತಪ್ಪೊಪ್ಪಡಕ (ನ್ಯಾಯ-ನೀತಿ ಪಾಲಿಸದವನಿಗೆ ಹಾಕುವ ದಂಡವನ್ನು ಒಪ್ಪಿಸುವುದು. ಅಂದರೆ ತಪ್ಪನ್ನು ಒಡೆಯುವುದು) ಕೇಳುವ ಪದ್ಧತಿ ಇದೆ. ನಾಡು, ಊರು ಹಾಳುಮಾಡುವಲ್ಲಿ ಊರಿನ ದೇವರಕಾಡನ್ನು ಹಾಳುಮಾಡಿದಂತೆಯೇ ಆಗುತ್ತದೆ. ಅದಕ್ಕಾಗಿ ದಂಡತೆರುವ ಪದ್ಧತಿ ಹೀಗಿದೆ: ಸುಮಾರು ೧೪ ನಾಡಿನವರಿಗೆ ಕೊಡುವ ಎಚ್ಚರ ಅದು. ನಾಡನ್ನು ಕೆಡಿಸಿದವರು ೪೦ ಹಣ, ೪೦ ಭಟ್ಟಿ ಅಕ್ಕಿ, ೪೦ ಪೊನ್ನು ತಪ್ಪೊಪ್ಪಡಕ ಕೊಡಬೇಕು. ಊರನ್ನು ಕೆಡಿಸಿದವರು ೩೦ ಭಟ್ಟಿ ಅಕ್ಕಿ, ೩೦ ಹೊನ್ನು ಕೊಡಬೇಕು ಎಂದು ತೀರ್ಮಾನವಿತ್ತು.[೨೪] ಹಾಲೇರಿ ಅರಸರ ಕಾಲದ ಈ ಬಗೆ ತೀರ್ಮಾನವನ್ನು ನಾಡವರು ನಡೆಸಿಕೊಂಡು ಬರುತ್ತಿದ್ದರು. ಊರಿನ ಹಿರಿಯರು (ಮುಟ್ಲುಗ್ರಾಮದ ಚಿಲ್ಲಜ್ಜಮ್ಮನ ಮನೆತನದ ಹಿರಿಯರು ಹೇಳಿದ್ದು) ಈ ಪದ್ಧತಿಯನ್ನು ಸ್ಮರಿಸಿ ಪಾಲನೆ ಮಾಡಿಕೊಂಡು ಬಂದಿರುವ ಬಗ್ಗೆ ಹೇಳುತ್ತಾರೆ. ಇದು ಪರಿಸರ ನಿರ್ವಹಣೆಯ ಪ್ರಜ್ಞೆಯೂ ಆಗಿದೆ.

ಕೊಡಗಿನ ಬದುಕು ಪ್ರಾಕೃತಿಕವಾಗಿಯೂ ಶಿಸ್ತಿನ ಬದುಕು. ಅಲ್ಲಿನ ಜನತೆ ಅದನ್ನು ಮೈಗೂಡಿಸಿಕೊಂಡಿದ್ದುದರಿಂದಲೇ ಹಾಲೇರಿ ವಂಶದ ಮೊದಲರಸನ ನ್ಯಾಯದ ಜಾಣ್ಮೆ, ಔಚಿತ್ಯ, ಸಮರ್ಪಕತೆಯನ್ನು ಮೆಚ್ಚಿಕೊಂಡು ತಮ್ಮೊಳಗಾಗಿಸಿಕೊಂಡರೆನಿಸುತ್ತದೆ. ಅದು ಹಾಲೇರಿಗೆ ಸೀಮಿತವಾಗದೆ ನೆರೆನಾಡುಗಳಿಗೆ ಪ್ರಸಿದ್ಧಿಗೊಂಡದ್ದು ಹಾಲೇರಿ ನ್ಯಾಯಾಡಳಿತ ವ್ಯವಸ್ಥೆಗೆ ನಾಂದಿ ಆದಂತಾಗಿತ್ತು. ಜನರೊಪ್ಪುವಂತೆ ನಿರ್ಣಯಕೌಶಲ್ಯವಿರುತ್ತಿದ್ದುದು ಗಮನಾರ್ಹ. ಈ ನ್ಯಾಯಾಡಳಿತ ವ್ಯವಸ್ಥೆ ವೈಜ್ಞಾನಿಕ ಮಜಲುಗಳನ್ನು ಸಮಗ್ರ ಕೊಡಗಿನಲ್ಲಿ ಶಿಸ್ತಾಗಿ ಪಡೆದದ್ದು ಮುದ್ದುರಾಜ ಹಾಗೂ ಸಿರಿಬಾಯಿ ದೊಡ್ಡವೀರಪ್ಪನ ಕಾಲದಲ್ಲಿ ಎನ್ನಬೇಕು. ಕೇವಲ ಸಿವಿಲ್, ಕ್ರಿಮಿನಲ್ ವ್ಯಾವಹಾರಿಕ ನ್ಯಾಯನಿರ್ಣಯವೆನಿಸದೆ, ಕುಟುಂಬ ಯಾ ಜನಾಂಗೀಯ ಜಾತಿಕಟ್ಟಳೆಗಳನ್ನು ಸಾಂಸ್ಕೃತಿಕ ಚೌಕಟ್ಟಿನಲ್ಲಿ ಪರಿಶೀಲಿಸಿ ನ್ಯಾಯಸಂಘರ್ಷಗಳ ಸಮಯದಲ್ಲಿ ತಕ್ಕ, ಜಾತಿಗೌಡ, ದೇಶದ ಶೆಟ್ಟಿ ಇತ್ಯಾದಿ ವರ್ಗ ಮುಖ್ಯಸ್ಥರ ಮೂಲಕ ನೀಡುತ್ತಿದ್ದ ಸಮುಚಿತ ನ್ಯಾಯನಿರ್ಣಯಗಳಿಗೆ ಅವಕಾಶ ಮಾಡಿದುದು ಈ ಅರಸುವಂಶದ ಸಾಧನೆ ಆಗಿದೆ. ದೊಡ್ಡವೀರರಾಜೇಂದ್ರ ಹಾಗೂ ೨ನೇ ಲಿಂಗರಾಜೇಂದ್ರ ಒಡೆಯನ ಕಾಲದಲ್ಲಿ ಹುಕುಂನಾಮೆಯ ಅಂಗವಾಗಿ ರಾಜಮಾನ್ಯ ಶಾಸ್ತ್ರೀಯ ಚೌಕಟ್ಟು ನ್ಯಾಯಾಡಳಿತ ವ್ಯವಸ್ಥೆಗೆ ಒದಗಿತು. ಇದರ ಕುರಿತು ಮುಂದಿನ ಆಂಗ್ಲ ಅಧಿಕಾರಿಗಳೂ ಮೆಚ್ಚುಗೆ ಸೂಚಿಸಿರುವುದು ಹಾಗೂ ಅನುಸರಿಸಿರುವುದು ಕಾಣಬರುತ್ತದೆ. ಮಾರ್ಕ್ಸ್ ಕಬ್ಬನ್ನನು ಕ್ರಿ.ಶ.೧೮೪೩ರಲ್ಲಿ ಬೆಟ್ಟಿಯತ್‌ನಾಡು ಮೂರ್ನಾಡಿನ ತೀತಾಮಾಡದ ಜೋಯಪ್ಪನಿಗೆ ನೀಡಿರುವ ನಿರೂಪದಲ್ಲಿ ಹಾಲೇರಿ ಅರಸರ ಪದ್ಧತಿಯನ್ನು ನೆನಸಿ ಹೇಳಿರುವುದು ಈ ಬಗೆಯ ಸಾಧಾರ ಊಹೆಗೆ ಅನುಕೂಲಿಸುತ್ತದೆ. ಒಟ್ಟಾರೆ, ಪ್ರಾದೇಶಿಕ ವೈವಿಧ್ಯದ ನ್ಯಾಯಾಡಳಿತ ವ್ಯವಸ್ಥೆಯ ಶಾಸ್ತ್ರೀಯರೂಪ ಹಾಲೇರಿ ಅರಸರಲ್ಲಿ ಕಾಣಬರುತ್ತದೆ; ಹಾಗೂ ಮುಂದಿನವರಿಗೆ ಮಾರ್ಗದರ್ಶಕವೂ ಆಗಿದೆ.

**ಟಿಪ್ಪಣಿಗಳು**

೧. ಎಪಿಗ್ರಾಫಿಯ **ಕರ್ನಾಟಿಕ,** ಸಂಪುಟ ೧ (ಹೊಸತು), ೧೯೭೨, ಮೈಸೂರು ವಿಶ್ವವಿದ್ಯಾನಿಲಯ, ಸೋಮವಾರಪೇಟೆ ತಾ. ೫೨ (ಗಣಗೂರು)

೨. ಅದೇ, ಸೋಮವಾರಪೇಟೆ ತಾ. ೬೧ (ಚೌಡ್ಲು)

೩. ನಡಿಕೇರಿಯಂಡ ಚಿಣ್ಣಪ್ಪ (ಸಂ), **ಪಟ್ಟೋಲೆ ಪಳಮೆ,** ೧೯೭೫, ಮೈಸೂರು ವಿಶ್ವವಿದ್ಯಾನಿಲಯ, ಪು.೨೩

೪. ನಾಗರಾಜ್ ಎಂ.ಜಿ., ೧೯೯೩, **ಕೆಂಬಟ್ಟಿ ಹೊಲೆಯರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾದೆಮಿ, ಪು.೨೨೯, ೨೬೯

೫. ಅದೇ

೬. ಕೈಬಲಿರ ಮನೆತನದ ಶ್ರಿ ಕೆ.ಕೆ.ಸುಬ್ಬಯ್ಯ, ಶಿಕ್ಷಕರು ಅವರಿಂದ ತಿಳಿದ ವಿಷಯ

೭. **ಪಟ್ಟೋಲೆ ಪಳಮೆ,** ಪು.೨೯-೩೨

೮. ಅದೇ, ಪು.೩೪

೯. 'ಉಕ್ಕಂಬ್ ಮಡಿಕೇರಿ' ಎಂಬ ಪಾಠಾಂತರವು ಇದ್ದು, ಬೆಟ್ಟದಕೋಡು ಬಾನಿಗೆ ಚಾಚಿದಂತಿರುವ ಮಡಿಕೇರಿ ಪ್ರದೇಶ ಎಂದರ್ಥ ನೀಡುತ್ತದೆ. ಮಡಿಕೇರಿಯು ಕ್ರಿ.ಶ.೧೬೮೧ರಲ್ಲಿ ರಾಜಧಾನಿ ಆದ ಮೇಲೆ ಮುಂದೆ ಜನಪದ ಹಾಡುಗಾರರು ಮಾಡಿಕೊಂಡ ಮಾರ್ಪಾಟು ಇದು ಎನಿಸುತ್ತದೆ. 'ಪಾಂಬ್‌ಕಣ್ಣ್ ಪಾಲೇರಿ' ಎಂದರೆ ಗುಡ್ಡಕಣಿವೆಗಳ ನಡುವಣ ಹಾವುಹರಿವ ಹಾದಿ ಮೈಯಂತಿರುವ ನೆಲೆಯಲ್ಲಿ ಎದ್ದುಕಾಣಿಸುವಂಥ ಹಾಲೇರಿ ಎಂಬರ್ಥ.

೧೦. 'ಅಂಬಲ' ಎಂದರೆ ದೇಗುಲ ಮೀಸಲು ಮೈದಾನ, ಗ್ರಾಮಸಭೆ ನಡೆವ ನೆಲೆ ಎಂದರ್ಥವಿದೆ. ಅದೊಂದು ನಾಲ್ದೆಸೆ ತೆರೆದ ಪಂಚಾಯಿತಿ ಮಂಟಪವೂ ಆಗಿದೆ.

೧೧. ಪೇರಿಯಂಡ ಚಂಗಪ್ಪ, ೧೯೬೧, **ಕೊಡವಡ ಅಂದೋಳತ್ ಪಾಟ್,** ಕೈಕಾಡು ಗ್ರಾಮ, ಪು.೧೫-೧೬

೧೨. ಅದೇ

೧೩. ರಾಜರ ಕಾಲದಿಂದ ದೇಶತಕ್ಕಾಮೆ ಹಾಗೂ ದಿವಾನ್‌ಗಿರಿ ಪಡೆದ ಮನೆತನದ ದಿ.ಪಾಂಡಿರ ಗಣಪತಿ ಅವರು ೨೫.೧೨.೧೯೮೩ರಲ್ಲಿ ಇದ್ದಾಗ ತಿಳಿಸಿದ ವಿಷಯ

೧೪. ಎ.ಕ., ಸಂಪುಟ ೧ (ಹೊಸತು), ೧೯೭೨, ಕೊಡಗು ಜಿಲ್ಲೆ, ಸೋಮವಾರಪೇಟೆ ತಾ. ೩೯ ಹುಲುಕೋಡು, ಮೈಸೂರು ವಿಶ್ವವಿದ್ಯಾನಿಲಯ

೧೫. **ಅದೇ,** ಸೋ.ಪೇ.ತಾ. ೯೨ (ಸಿರಹ), ಕ್ರಿ.ಶ.೧೧೭೫

೧೬. **The Hukumnama of Lingarajendra Wodeyar Raj of Coorg,** (Tr) A.J.Curgenven, 1911, Mercara, p.5, 14; Fiurin E.V.writes in his **'The Coorg Revenue Manual of 1899,**(Corrected up to Jan 1954), p.168, regarding Jamma tenure: I have had translated from the original translation of an extract from the 17th paragraph of **Hukumnama of Veerarajendra-** ಈ ಅಂಶವೆ ೨ನೇ ಲಿಂಗರಾಜೇಂದ್ರ ಒಡೆಯನ ಹುಕುಂನಾಮೆಯ ಆಕರಮೂಲವನ್ನು ಸ್ಪಷ್ಟಗೊಳಿಸುವಂತಿದೆ.

೧೭. G.Richter, 1870, **Gazetteer of Coorg,** Bangalore, p.384

೧೮. ಡಿ.ಎನ್.ಕೃಷ್ಣಯ್ಯ, ೧೯೭೪, **ಕೊಡಗಿನ ಇತಿಹಾಸ,** ಮೈಸೂರು ವಿಶ್ವವಿದ್ಯಾನಿಲಯ, ಪು.೪೦೦

೧೯. ಡಿ.ಎನ್.ಕೃಷ್ಣಯ್ಯ, ಎಂ.ಎಸ್.ಸುಬ್ಬರಾಯ (ಸಂ), ೧೯೫೫, **ರಾಜೇಂದ್ರನಾಮೆ,** ಮಡಿಕೇರಿ, ಪು.೩೫

೨೦. **ಕೊಡಗಿನ ಇತಿಹಾಸ,** ಪು.೪೧೨
೨೧. ಕೆ.ಎಸ್.ಕಾರ್ಯಪ್ಪ, ೧೯೭೦, **ಕೊಡಗು ರಾಜರ ಕಾಲದಲ್ಲಿ ಗೌಡರ ಕಟ್ಟುಕಟ್ಟಳೆಗಳ ತೀರ್ಮಾನ,** ಕೊಡಗು ಮತ್ತು ದಕ್ಷಿಣಕನ್ನಡ ಗೌಡ ಸಮಾಜದ ಸಂಸ್ಕೃತಿ (ಸ್ಮರಣಸಂಚಿಕೆ), ಬೆಂಗಳೂರು, ಪು.೩೨
೨೨. ಪಿ.ಎಸ್.ರಾಮಾನುಜಂ, ೧೯೭೫, **ಕೊಡವರು,** ಮೈಸೂರು ವಿಶ್ವವಿದ್ಯಾನಿಲಯ, ಪು.೧೯೦
೨೩. I.M.Muthanna, 1953, **A Tiny Model State of South India,** Polybetta, p.90-97
೨೪. 'ಕೊಡಗಿನ ದೇವರಕಾಡುಗಳ ಸಂರಕ್ಷಣೆಯಲ್ಲಿ ಸಂಘರ್ಷ ಮತ್ತು ಪರಿಹಾರದ ಸಾಂಘಿಕ ಪ್ರಯತ್ನಗಳು', ಎಂ.ಜಿ.ನಾಗರಾಜ್, ಎಂ.ಜಿ.ಪದ್ಮ, ಎಂ.ಜಿ.ಚಂದ್ರಕಾಂತ್, ಟಿ.ಎಸ್.ಪ್ರಕಾಶ್ ಅವರು ಅಹಮದಾಬಾದ್‌ನಲ್ಲಿ ಜನವರಿ ೧೧-೧೪, ೧೯೯೭ರಲ್ಲಿ ನಡೆದ ನೈಸರ್ಗಿಕ ಸಂಪನ್ಮೂಲಗಳ ನಿರ್ವಹಣೆ ಕುರಿತ ಅಂತಾರಾಷ್ಟ್ರೀಯ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧ, **ಹಿತ್ತಲಗಿಡ** (ಚಾತುರ್ಮಾಸಿಕ), ಸಂ.೧, ಸಂ.೨, ೧೯೯೭, ಪು.೧೩

೧೪

# ಸುರಪುರ ನಾಯಕರ ನ್ಯಾಯಾಡಳಿತ

**ಜೆ. ಆಗಸ್ಟಿನ್**

ಕೃಷ್ಣಾ-ಭೀಮಾನದಿಗಳ ಮಧ್ಯಭಾಗದ ಭೂಪ್ರದೇಶವು ಸಗರನಾಡು ಎಂದು ಇತಿಹಾಸ-ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ನಾಗರಾಜಕವಿಯ 'ಪುಣ್ಯಾಸ್ರವ' ಕಾವ್ಯದಲ್ಲಿ ಸಗರನಾಡಿನ ವರ್ಣನೆಯನ್ನು ನಾವು ಕಾಣಬಹುದು. ಈಗಿನ ಕಲಬುರಗಿ ಜಿಲ್ಲೆಯ ಸುರಪುರ, ಶಹಾಪುರ ಹಾಗೂ ಜೇವರ್ಗಿ ತಾಲೂಕುಗಳು ಈ ಸಗರನಾಡು ವ್ಯಾಪ್ತಿಗೆ ಬರುತ್ತವೆ. ಈ ಸಗರನಾಡಿನ ಭೂಪ್ರದೇಶವು ಸುರಪುರದ ಅರಸರ ಅಧೀನಕ್ಕೆ ಒಳಪಟ್ಟಿತ್ತು. ಬೇಡ ಜನಾಂಗದ- ಗೋಸಲವಂಶದ ಅರಸರು ಸುರಪುರ ಸಂಸ್ಥಾನದ ಸ್ಥಾಪಕರು. ಜಕ್ಕಪ್ಪದೇಸಾಯಿ ಈ ವಂಶದ ಮೂಲಪುರುಷ. ಈತನ ಮಗ ಗಡ್ಡಿಪಿಡ್ಡನಾಯಕ (೧೬೩೬-೧೬೬೬) ಸುರಪುರದ ಪ್ರಥಮ ಅರಸು. ಹೀಗೆ ೧೬೩೬ ರಿಂದ ೧೮೫೮ರ ವರೆಗೆ ಸುಮಾರು ಎರಡು ಶತಮಾನಗಳಿಗೂ ಮಿಕ್ಕಿ ಗೋಸಲವಂಶದ ನಾಯಕರು ಸುರಪುರ ಸಂಸ್ಥಾನವನ್ನು ಆಳಿದರು.

ಸುರಪುರದ ಅರಸರು ಅಸಮಾನ ಶೂರರು, ಮಹಾದಾನಿಗಳು, ಪಂಡಿತಗುಣಜನ ಪೋಷಕರು, ಕರುಣಾಳುಗಳು ಹಾಗೂ ನ್ಯಾಯಪ್ರಿಯರು. ಸುರಪುರದ ಇತಿಹಾಸ ಹಾಗೂ ಬೇಡ ಅರಸರ ಶೂರತನಗಳ ಬಗೆಗೆ ನಾನು ಹೇಳಬಯಸುವ ಒಂದು ಮಾತೆಂದರೆ, ಸುರಪುರದ ಇತಿಹಾಸ ಹಾಗೂ ಶೌರ್ಯಗಳ ವೃತ್ತಾಂತವು ಕೇವಲ ಸುರಪುರದ ಪಂಡಿತರ ಸಂಗ್ರಹ ಅಲ್ಲ; ಬದಲಾಗಿ ಅದು ಅವರ ಶತ್ರುಗಳೇ ಬರೆದ ಮೆಚ್ಚುಗೆಯ ನುಡಿಗಳು!

## ನ್ಯಾಯಾಂಗ ವ್ಯವಸ್ಥೆ

ಸುರಪುರ ಸಂಸ್ಥಾನದ ನ್ಯಾಯಾಂಗ ವ್ಯವಸ್ಥೆಯನ್ನು ಅವಲೋಕಿಸಿದರೆ, ಸುರಪುರದ ಅರಸರು ಎಂತಹ ಸುವ್ಯವಸ್ಥಿತ ಸಾಮರಸ್ಯಪೂರ್ಣ ಸಂಘಟನೆಯ ಪರಿಕಲ್ಪನೆಯನ್ನು ಹೊಂದಿದ್ದರೆಂಬುದು ಮನದಟ್ಟಾಗುತ್ತದೆ; ಹಾಗೂ ಆಶ್ಚರ್ಯ-ಅಭಿಮಾನಗಳು ಉಂಟಾಗುತ್ತವೆ. ಈ ವ್ಯವಸ್ಥೆಯ ಮುಂಚೂಣಿಯಲ್ಲಿದ್ದವನು ರಾಜ. ಗುರಿಕಾರ ಹಾಗೂ

ಕಟ್ಟಿಮನಿ- ಇವರು ಈ ವ್ಯವಸ್ಥೆಯ ಪ್ರಮುಖ ಕಾರ್ಯಕರ್ತರು. ಇಡೀ ವ್ಯವಸ್ಥೆಯಲ್ಲಿ ತುಂಬಾ ಪ್ರಮುಖ ಪಾತ್ರ ನಿರ್ವಹಿಸಿದ್ದವನು ಕಟ್ಟಿಮನಿ. ಈತ ಈ ವ್ಯವಸ್ಥೆಯ ತಳಪಾಯವಾಗಿದ್ದು, ಈ ವ್ಯವಸ್ಥೆಯ ಯಶಸ್ಸಿಗೆ ಮಹತ್ವದ ಯೋಗದಾನ ನೀಡಿದ್ದಾನೆ.

ಸುರಪುರ ಸಂಸ್ಥಾನದ ನ್ಯಾಯಾಂಗ ವ್ಯವಸ್ಥೆಯನ್ನು ಈ ಕೆಳಗಿನಂತೆ ರೇಖಿಸಬಹುದು:




ಇಲ್ಲಿ ರಾಜನು ಹೆಸರಿಗೆ ಮಾತ್ರ ವ್ಯವಸ್ಥೆಯ ಅಧ್ಯಕ್ಷ. ಆದರೆ ಕಟ್ಟಿಮನಿಯೇ ಇಲ್ಲಿ ಎಲ್ಲ. ಈ ಕಟ್ಟಿಮನಿಯು ಆಯಾ ಜಾತಿ-ಜನಾಂಗಗಳಿಂದ ಆಯ್ದ ವ್ಯಕ್ತಿ ಆಗಿರುತ್ತಾನೆ. ಈ ಕಟ್ಟಿಮನಿಗಳು ಬೇಡರ ಸರದಾರನಾದ ಗುರಿಕಾರನಿಗೆ ಅಧೀನರಾಗಿದ್ದರೆ, ಗುರಿಕಾರನು ರಾಜನಿಗೆ ಜವಾಬ್ದಾರನಾಗಿರುತ್ತಾನೆ. ಬೇಡ, ಕುರುಬ, ಕಬ್ಬಲಿಗ, ಹೊಲೆಯ, ಮಾದಿಗ ಹಾಗೂ ಇತರ ಜನಾಂಗಗಳಿಂದ ಈ ಕಟ್ಟಿಮನಿಗಳು ನೇಮಕಗೊಳ್ಳುತ್ತಿದ್ದರು. ಇವರು ತಮ್ಮ ತಮ್ಮ ಜನಾಂಗದವರ ನ್ಯಾಯ-ವ್ಯಾಜ್ಯದ ಸ್ಥಳಗಳಲ್ಲಿಯ ಚಾವಡಿಗಳಲ್ಲಿ ಸಾರ್ವಜನಿಕ ವಿಚಾರಣೆಯ ಮೂಲಕ ನಿರ್ವಹಿಸುತ್ತಿದ್ದರು.

ಲಿಂಗಾಯತರ ವ್ಯಾಜ್ಯಗಳನ್ನು ಸುರಪುರದ ಪಟ್ಟಣಶೆಟ್ಟಿ ನಿರ್ವಹಿಸುತ್ತಿದ್ದ. ಪಾಂಚಾಳ ಜನಾಂಗದ ಗೌಡನು ವಿಶ್ವಕರ್ಮ ಜನಾಂಗದ ನ್ಯಾಯಗಳನ್ನು ಬಗೆಹರಿಸುತ್ತಿದ್ದ. ಉಪ್ಪಾರ, ಗೊಲ್ಲ ಹಾಗೂ ವೇಶ್ಯಾಂಗನೆಯರ ವ್ಯಾಜ್ಯಗಳ ಅಧಿಕಾರವನ್ನು ರಾಜ ತನ್ನ ಗುರುಗಳಿಗೆ ನೀಡಿದ್ದ. ಬ್ರಾಹ್ಮಣರ ವ್ಯಾಜ್ಯಗಳನ್ನು ಬ್ರಹ್ಮಸಭೆಗಳ ಮೂಲಕ ಬಗೆಹರಿಸುತ್ತಿದ್ದರು. ಸ್ಥಳೀಯ ಪಂಡಿತರು ಈ ಸಭೆಯ ಸದಸ್ಯರಾಗಿರುತ್ತಿದ್ದರು. ರಾಜನು ಬ್ರಹ್ಮಸಭೆಯ ಅಧ್ಯಕ್ಷನಾಗಿರುತ್ತಿದ್ದ.

ಈ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ವಿಶಿಷ್ಟ ವ್ಯವಸ್ಥೆಯೊಂದು ಗೋಚರವಾಗುತ್ತದೆ. ಅದೇನೆಂದರೆ, ಕಟ್ಟಿಮನಿಗಳು ಆಯಾ ಜಾತಿಗಳಿಂದ ಬಂದಿದ್ದ ಕಾರಣ, ತಮ್ಮ ತಮ್ಮ ಜನಾಂಗದ ವಿಶಿಷ್ಟ ಆಚರಣೆ, ಪದ್ಧತಿ, ರೀತಿ-ರಿವಾಜುಗಳ ದಟ್ಟ ಪರಿಚಯ ಹೊಂದಿರುತ್ತಿದ್ದುದು ಸಹಜ. ನ್ಯಾಯದಾನದಲ್ಲಿ ಈ ಅಂಶ ಯಾವಾಗಲೂ

ಪರಿಣಾಮಕಾರಿ ಪಾತ್ರ ನಿರ್ವಹಿಸುತ್ತದೆ. ಹೀಗಾಗಿ ಜನಾಂಗಗಳಿಗೆ ನ್ಯಾಯನೀಡುವಾಗ ಸುರಪುರದ ಅರಸರು ಶಾಸ್ತ್ರಿ, ಪಂಡಿತ, ಶೆಟ್ಟಿ ಮುಂತಾದವರನ್ನು ಅವಲಂಬಿಸದೆ, ಆಯಾ ಜನಾಂಗಗ ಹಿರಿಯ ಅನುಭವಿಗಳನ್ನೇ (ಕಟ್ಟಿಮನಿಗಳನ್ನೇ) ಅವಲಂಬಿಸುತ್ತಿದ್ದರು. ಇದರಿಂದ ನ್ಯಾಯದಾನ ಪ್ರಕ್ರಿಯೆ ಸಹಜವಾಗಿ, ಲೋಪರಹಿತವಾಗಿ ಹಾಗೂ ಪರಿಣಾಮಕಾರಿಯಾಗಿ ನಡೆಯುತ್ತಿದ್ದಿತು. ಏಕೆಂದರೆ ಕೆಲವೊಂದು ಬಾರಿ ಪರಂಪರೆಯ ಅಜ್ಞಾನವು ಅವಾಂತರವನ್ನು ಸೃಷ್ಟಿಸುತ್ತದೆ.

ಈ ವ್ಯವಸ್ಥೆಯಲ್ಲಿ ಅಧಿಕಾರ, ಅಂತಸ್ತು, ಪಾಂಡಿತ್ಯ ಹಾಗೂ ಜಾತಿಶ್ರೇಷ್ಠತೆಯ ನಿಮಿತ್ತವಾಗಿ ಒಂದು ಜನಾಂಗದ ಮೇಲೆ ಇನ್ನೊಂದು ಜನಾಂಗಕ್ಕೆ ನ್ಯಾಯಮಾಡುವ ಅಧಿಕಾರ ನೀಡದೆ ಇರುವುದರಿಂದ, ಆಯಾ ಜಾತಿಗಳ ಸ್ವಾಭಿಮಾನ, ಆತ್ಮಗೌರವಗಳನ್ನು ರಾಜನು ಎತ್ತಿಹಿಡಿದು ಪೋಷಿಸುತ್ತಿದ್ದ. ಇದರಿಂದ ಹಿಂದುಳಿದ ಜನಾಂಗಗಳಲ್ಲಿ ಸ್ವಾಭಿಮಾನದ ಜೊತೆಗೆ ಸ್ವಸಾಮರ್ಥ್ಯ, ನೈಪುಣ್ಯ, ಕಾರ್ಯಕೌಶಲ್ಯ, ಜವಾಬ್ದಾರಿಪ್ರಜ್ಞೆ, ವಿಶ್ವಾಸಾರ್ಹತೆಗಳು ಬೆಳೆಯುತ್ತಿದ್ದವು. ಇಂತಹ ಅತಿಕ್ರಮಣರಹಿತ ಮುಕ್ತ ಸ್ವಾಯತ್ತ ವ್ಯವಸ್ಥೆಯಾಗಿ ಈ ಜನಾಂಗಗಳಿಗೆ ಇತರ ಜನಾಂಗಗಳ ಮಧ್ಯೆ ತಾರತಮ್ಯ ಭಾವನೆಗಳನ್ನು ನಿವಾರಿಸಿ ಸಮಾನತೆಯ ಭಾವನೆ ಮೂಡಿಸುತ್ತಿತ್ತು.

ಇಲ್ಲಿ ರಾಜನು ತನ್ನ ಗುರುಗಳಿಗೆ ನೀಡಿದ್ದುದು ಕೇವಲ ಗೊಲ್ಲ, ಉಪ್ಪಾರ ಹಾಗೂ ವೇಶ್ಯಾಂಗನೆಯರ ಮೇಲಿನ ನ್ಯಾಯದ ಅಧಿಕಾರವನ್ನು ಮಾತ್ರ. ವೇಶ್ಯಾಂಗನೆಯರದು ಸ್ತ್ರೀಪ್ರಧಾನ ವ್ಯವಸ್ಥೆ. ಅಲ್ಲದೆ, ಸುರಪುರದಲ್ಲಿ ವೇಶ್ಯಾಂಗನೆಯರು ಬಹಳ ಅದ್ದೂರಿ ಹಾಗೂ ಪ್ರತಿಷ್ಠಿತ ಜೀವನ ನಡೆಸುತ್ತಿದ್ದರು. ಆದ್ದರಿಂದ ಕಟ್ಟಿಮನಿಯವರಿಗೆ ಇಲ್ಲಿ ಅವಕಾಶ ಕೊಟ್ಟಿರಲಿಲ್ಲ. ಇಲ್ಲಿಯೂ ಸ್ತ್ರೀ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಶೋಷಣೆಗೆ ಅವಕಾಶವಾಗದಂತೆ ಬಹಳ ಸೂಕ್ಷ್ಮವಾಗಿ ಆಲೋಚಿಸಿದ್ದು ಕಂಡುಬರುತ್ತದೆ. ಈ ಕಾರಣಗಳಿಗಾಗಿ ಇಲ್ಲಿ ರಾಜನು ಇವರ ಮೇಲೆ ತನ್ನ ಗುರುವಿಗೆ ಅಧಿಕಾರ ನೀಡಿದ್ದು. ಉಳಿದಂತೆ, ಉಪ್ಪಾರ ಹಾಗೂ ಗೊಲ್ಲರಲ್ಲಿ ಕಟ್ಟಿಮನಿಯವರು ಯಥಾಪ್ರಕಾರ ಕೆಲಸ ಮಾಡುತ್ತಿದ್ದರು. ಆದರೆ ಇಲ್ಲಿ ಇವರ ಕುಲಾಚಾರಿಕೆಯಿಂದ ಬರುವ ಆದಾಯ ಗುರುವಿಗೆ ಸೇರುತ್ತಿತ್ತು.

### ವ್ಯಾಜ್ಯಗಳ ವರ್ಗೀಕರಣ, ವಿಚಾರಣೆ ಹಾಗೂ ಶುಲ್ಕಪದ್ಧತಿ

ಸುರಪುರದಲ್ಲಿ ನ್ಯಾಯನಿರ್ಣಯ ಪ್ರಕ್ರಿಯೆಯನ್ನು ಕುಲಾಚಾರಿಕೆ ಎಂದು ಕರೆದಿದ್ದಾರೆ. ಸುರಪುರದ ವ್ಯಾಜ್ಯಗಳನ್ನು ಮೂಲತಃ ನಾಲ್ಕು ವಿಭಾಗಗಳಾಗಿ ವರ್ಗೀಕರಿಸಬಹುದು: ೧. ಕುಲದ ಜಗಳಗಳು, ೨. ಸಣ್ಣಪುಟ್ಟ ಊರತಂಟೆಗಳು, ೩. ವತನಿ ಜಗಳಗಳು, ಹಾಗೂ ೪. ಕೊಲೆ ಮುಂತಾದ ಜಘನ್ಯ ಅಪರಾಧಗಳು. ಸಂಸ್ಥಾನದ ಇನಾಮಿ, ಜಾಗೀರ್ ಅಲ್ಲದೆ, ಬಾರಾಬಲ್ಲೊತೆದಾರ್ ಅಂದರೆ ೧೨ ಕುಲಕಸುಬಿನವರಾದ ನಾಪಿತ, ಬಡಿಗ, ಅಕ್ಕಸಾಲಿಗ,

ಕಂಬಾರ, ಕುಂಬಾರ, ಅಗಸ, ಹೊಲೆಯ, ಮಾದಿಗ, ಗೌಡ, ಕುಲಕರ್ಣಿ, ಜೋಯಿಸ, ಮಠಪತಿ- ಇವರ ಜಗಳಗಳನ್ನು ವತನಿತಂಟೆಗಳೆಂದು ವರ್ಗೀಕರಿಸಲಾಗಿದೆ. ವ್ಯಾಜ್ಯಗಳನ್ನು ಕುಲಾಚಾರಿಕೆಯ ಅಧಿಕಾರಿಗಳು ಆಯಾ ಊರುಗಳಲ್ಲೆ ಎಲ್ಲ ಜನರ ಮಧ್ಯೆ ಊರ ಚಾವಡಿಯಲ್ಲಿ ವಿಚಾರಣೆ ಮಾಡುತ್ತಿದ್ದರು. ವಿಚಾರಣೆಯು ಮೌಖಿಕವಾಗಿ ನಡೆಯುತ್ತಿದ್ದರೂ ನಿರ್ಣಯ ಮಾತ್ರ ಬರವಣಿಗೆಯಲ್ಲಿ ಕೊಡಲ್ಪಡುತ್ತಿತ್ತು. ಇದನ್ನು ತಾಕೀದಿ ಎನ್ನಲಾಗುತ್ತಿತ್ತು. ಇದನ್ನು ಯಾರೂ ಉಲ್ಲಂಘಿಸುತ್ತಿರಲಿಲ್ಲ. ಹಾಗೇನಾದರೂ ಆದರೆ ಅಂಥವರಿಗೆ ಬಹಿಷ್ಕಾರ ಹಾಕಲಾಗುತ್ತಿತ್ತು.

ಊರಿನ ಪ್ರತಿ ಜಾತಿಯವರೂ ಕುಲಚಾರಿಕೆಯ ಶುಲ್ಕವೆಂದು ಪ್ರತಿವರ್ಷ ಕುಲಕ್ಕೆ ೪ ಆಣೆಯಿಂದ ೧ ರೂ.ವರೆಗೆ ಕೊಡುತ್ತಿದ್ದರು. ವ್ಯಾಜ್ಯಗಳಲ್ಲಿ ಪಕ್ಷಗಾರರಾದವರಿಗೆ ದಂಡ ವಿಧಿಸಲಾಗುತ್ತಿತ್ತು. ಈ ದಂಡದ ಹಣದಲ್ಲಿ ಸ್ವಲ್ಪಭಾಗ ಕುಲಾಚಾರದ ಅಧಿಕಾರಿಗಳಿಗೆ ಹಾಗೂ ಸ್ವಲ್ಪಭಾಗ ರಾಜನಿಗೆ ಹೋಗುತ್ತಿತ್ತು.

### ವ್ಯಾಜ್ಯರಹಿತ ಸಮಾಜ

ಸಂಸ್ಥಾನದ ಅರಸರು ಸರ್ವಸಮಾನತೆಯಿಂದ ಕೂಡಿದ ವ್ಯಾಜ್ಯರಹಿತ ಸಮಾಜದ ಸಂಘಟನೆ ಮಾಡಿದ್ದರೆನ್ನಬಹುದು. ಏಕೆಂದರೆ ವ್ಯಕ್ತಿಯ ನೆಮ್ಮದಿಯ ಜೀವನಕ್ಕೆ ಬೇಕಾಗುವ ಎಲ್ಲ ವ್ಯವಸ್ಥೆಯನ್ನೂ ಸಂಸ್ಥಾನವು ಮಾಡಿತ್ತು. ಭೂರಹಿತ ಕುಟುಂಬವು ಒಂದಾದರೂ ಸುರಪುರದಲ್ಲಿರಲಿಲ್ಲ. ಪ್ರತಿ ಕುಟುಂಬದಲ್ಲಿ ಹುಟ್ಟಿದ ಪ್ರತಿ ಗಂಡುಸಂತಾನಕ್ಕೂ ಸಂಸ್ಥಾನದ ವತಿಯಿಂದ ಒಂದು ಹಿಂಡುವ ಆಕಳು ಹಾಗೂ ಒಂದು ತುಂಡುಭೂಮಿ ಕೊಡಲ್ಪಡುತ್ತಿತ್ತು. ಪ್ರತಿಯೋರ್ವ ವಯಸ್ಕ ಗಂಡಸೂ ಪ್ರಸಂಗಾನುಸಾರ ಯುದ್ಧಕ್ಕೆ ಹೋಗಬೇಕಾಗುತ್ತಿತ್ತು. ಯುದ್ಧದ ನಂತರ ಯೋಧನಿಗೆ ಹಣ ಹಾಗೂ ಭೂಮಿ ಇನಾಮಾಗಿ ಸಿಗುತ್ತಿತ್ತು. ಈ ಕಾರಣದಿಂದಲೇ ಬೇಡರನ್ನು ಯಾರಾದರೂ ಅವರ ಜಾತಿಯ ಬಗೆಗೆ ವಿಚಾರಿಸಿದರೆ, ನಾವು ನಾಯಕನ ಮಕ್ಕಳು ಅಥವಾ ದೊರೆಮಕ್ಕಳು ಎಂದು ಅಭಿಮಾನದಿಂದ ಇಂದಿಗೂ ಹೇಳುತ್ತಾರೆ.

ಈ ಬಗ್ಗೆ ಟೈಲರ್, "All the members of the clans had had lands for their original support, which had descended hereditarily. The minimum amount was one COOROO or 30 bighas, but some held as much as 300 bighas nominal" ಎಂದು ಹೇಳುತ್ತಾನೆ.

ಸುರಪುರ ಸಂಸ್ಥಾನದ ಅರಸರು ಸಾಮಾಜಿಕ ನ್ಯಾಯದ ಹರಿಕಾರರಾಗಿದ್ದರು. ಸಂಸ್ಥಾನದ ಎಲ್ಲ ಜಾತಿಸಮುದಾಯಗಳಲ್ಲೂ ಗೌಡಿಕೆಯ ಪದವಿ ಹೊಂದಿದ್ದ ಕುಟುಂಬಗಳು ಸಾಮಾನ್ಯವಾಗಿ ಈ ಪ್ರದೇಶದ ಉದ್ದಗಲಕ್ಕೂ ಸಿಗುತ್ತವೆ. ದಲಿತ ಜನಾಂಗವೂ ಇದಕ್ಕೆ ಹೊರತಾಗಿಲ್ಲ. ಶಹಾಪುರ ತಾಲೂಕಿನ ಉಮ್ಮರದೊಡ್ಡಿಯ ಗೌಡಿಕೆಯು ದಲಿತ

ಜನಾಂಗಕ್ಕೆ ಸೇರಿದೆ. ಕೊಟಗಾರ ಎಂಬ ಹೊಲೆಯ ಜನಾಂಗದವರು ಹಾಗೂ ಗಾರ್ದಿ ಎಂಬ ಮಾದಿಗರು ರಾಜನ ಅಂಗರಕ್ಷಕ ಪಡೆಯವರಾಗಿದ್ದು, ಅತ್ಯಂತ ಬಲಿಷ್ಠರೂ ಮಹಾಶೂರರೂ ಆಗಿದ್ದರು. ಇವರು ಕೇವಲ ರಾಜನ ಅಧಿಕಾರಕ್ಕೆ ಒಳಪಟ್ಟಿದ್ದರು. ಈ ಸಂಸ್ಥಾನದಲ್ಲಿ ದಲಿತರೂ ಸಾಕಷ್ಟು ಸಂಪತ್ತು ಹಾಗೂ ಸ್ಥಾನಮಾನ ಪಡೆದಿದ್ದರೆಂಬುದು ಸ್ಪಷ್ಟ.

ಸುರಪುರವು ಸುಸಂಘಟಿತವೂ ವ್ಯಾಜ್ಯರಹಿತವೂ ಆದ ಸಮಾಜವಾಗಿದ್ದಿತೆಂಬುದರಲ್ಲಿ ಯಾವುದೇ ಉತ್ಪ್ರೇಕ್ಷೆಯಿಲ್ಲ. ಏಕೆಂದರೆ ನಿಜಾಮನ ಅಧಿಕಾರಿಯಾಗಿ ೧೮೪೪ರ ಅವಧಿಯಲ್ಲಿದ್ದ ಕ॥ಮೆಡೋಸ್ ಟೈಲರ್‌ನು ಸುರಪುರದ ನ್ಯಾಯಾಂಗ ವ್ಯವಸ್ಥೆಯನ್ನು ಮನಸಾರೆ ಮೆಚ್ಚಿ ಹೊಗಳಿದ್ದಾನೆ. ಸುರಪುರದ ಪಂಚಾಯತಿಗಳಲ್ಲಿ ನಿರ್ಣಯಿತವಾದ ನ್ಯಾಯಗಳ ವಿರುದ್ಧ ತನಗೆ ಅತ್ಯಲ್ಪ ಮೇಲ್ಮನವಿಗಳು ಬಂದವೆಂದು ಹೇಳುತ್ತಾನೆ; ಈ ನ್ಯಾಯಪದ್ಧತಿಯನ್ನು ಸ್ವತಃ ಪಾಲಿಸಿದೆನೆಂದು ಹೇಳಿಕೊಳ್ಳುತ್ತಾನೆ. ಅಂದರೆ ಈ ನ್ಯಾಯಾಂಗ ವ್ಯವಸ್ಥೆಯೊಂದು ದೋಷರಹಿತ ಯಶಸ್ವೀ ಪದ್ಧತಿಯೆನ್ನುವುದರಲ್ಲಿ ಸಂದೇಹವೇ ಇಲ್ಲ. ಟೈಲರನ ಮಾತುಗಳನ್ನೆ ನೋಡುವುದಾದರೆ, "No law ever existed in Shorapur nor even a semblance of a court, civil or criminal. Ordinary suits were tried by Panchayaths limited to five members and there were but few appeals to me from their decisions... Their Bhats or Bards and their elders, had a knowledge of their laws and customs and always attended Panchayaths. I was very thankful that during my stay no blood has ever been shed nor a single shot fired in anger among them."

ಸುರಪುರದ ಸಾಮಾಜಿಕ ಹಾಗೂ ಜಾತಿವ್ಯವಸ್ಥೆಗಳು ಈರ್ಷ್ಯೆ, ಅಪರಾಧಗಳಿಗೆ ಪ್ರಚೋದನೆ ಕೊಡುವಂತಹವಾಗಿರಲಿಲ್ಲ. ಆದ್ದರಿಂದ ಕೊಲೆಯಂತಹ ಅಪರಾಧಗಳು ಘಟಿಸಲಿಲ್ಲ. ಪ್ರತಿಯೊಬ್ಬ ಬೇಡ, ಇತರ ಹಿಂದುಳಿದ ಹಾಗೂ ದಲಿತ ಜನಾಂಗಗಳವರ ಹತ್ತಿರ ಶಸ್ತ್ರಾಸ್ತ್ರಗಳಿರುವುದು ಸಾಮಾನ್ಯವಾಗಿತ್ತು. ಆದರೂ ಒಂದೇ ಒಂದು ಗುಂಡು ಯಾರಿಂದಲೂ ಆವೇಶದಲ್ಲಿಯೂ ಹಾರಲಿಲ್ಲ ಎಂದು ಟೈಲರ್ ಮೆಚ್ಚುಗೆ-ಸಮಾಧಾನಗಳನ್ನು ವ್ಯಕ್ತಪಡಿಸಿದ್ದಾನೆ. ಸುರಪುರ ಸಂಸ್ಥಾನದ ನ್ಯಾಯಾಂಗ ವ್ಯವಸ್ಥೆಗೆ ಇದಕ್ಕಿಂತಲೂ ಹೆಚ್ಚಿನ ಪ್ರಶಂಸೆ ಅನಗತ್ಯ. ಈ ಸಂಸ್ಥಾನದ ನ್ಯಾಯಾಂಗ ವ್ಯವಸ್ಥೆಯು ನಿಜಾರ್ಥದಲ್ಲಿ ಜನತಾ ನ್ಯಾಯಾಂಗ ವ್ಯವಸ್ಥೆ ಆಗಿತ್ತು.

ಕ॥ ಮೆಡೋಸ್ ಟೈಲರ್ ಸುರಪುರ ನಗರದ ಮಧ್ಯದಲ್ಲಿರುವ ಒಂದು ಬೇವಿನಮರದ ದೊಡ್ಡಕಟ್ಟೆಯ ಬಗೆಗೆ ಹೀಗೆ ಉಲ್ಲೇಖಿಸುತ್ತಾನೆ: "The elders of the clans sat every day on their platform under the great Neem tree in the town, and attended to all complaints." ಈ ಕಟ್ಟೆ ಹಾಗೂ ಬೃಹತ್ ಬೇವಿನಗಿಡ ಈಗಲೂ

ಇದೆ. ಇದನ್ನು 'ರಮಣಪ್ಪನಾಯಕನ ಕಟ್ಟೆ' ಎಂದು ಕರೆಯುತ್ತಾರೆ. ಇದು ನಗರದ ಮಧ್ಯೆ ಇದ್ದು, ರಾಜರ ನಿವಾಸವಾದ ದರಬಾರಕ್ಕೆ ಸಮೀಪವಿದೆ. ಟೈಲರ್ ಈ ನ್ಯಾಯಾಂಗ ವ್ಯವಸ್ಥೆಯ ಒಬ್ಬ ಅಧಿಕಾರಿಯಾಗಿ ಆರಿಸಲ್ಪಟ್ಟಿದ್ದನ್ನು ತುಂಬ ಅಭಿಮಾನದಿಂದ ಹೇಳಿಕೊಳ್ಳುತ್ತಾನೆ: "They were greatful to me for respecting their former privileges, and elected me Goorkar, or head executive over all the clans. They certainly never absurd their claims, and by working well as rural police saved me both labour and anxiety."

### ೪೦ ಹಾಗೂ ೫೦ರ ದಶಕಗಳಲ್ಲಿ ನ್ಯಾಯ

ಸಿಪಾಯಿದಂಗೆಯ ನಂತರ ಸರಕಾರಿ ನ್ಯಾಯಾಂಗವು ನಿಜಾಮನ ಪದ್ಧತಿಯಂತೆ ಜಾರಿಗೆ ಬಂದಿತಾದರೂ ಸುರಪುರದ ಕುಲಾಚಾರಿಕೆ ವ್ಯವಸ್ಥೆ ಧಕ್ಕೆ ಇಲ್ಲದೆ ನಡೆದಿತ್ತು. ಸುರಪುರದ ರಾಜ ಕ್ರಿಷ್ಣಪ್ಪನಾಯಕರು ೧೯೫೪ರಲ್ಲಿ ದೈವಾಧೀನರಾದರು. ಇವರನ್ನು ನಿಜಾಮ ಹಾನರರಿ ಮ್ಯಾಜಿಸ್ಟ್ರೇಟ್ ಎಂದು ಗೌರವಿಸಿದ್ದ. ಇವರು ಕಚೇರಿ ನಡೆಸುತ್ತಿದ್ದರು ಎಂದು ತಿಳಿದಿದ್ದೇನೆ.

ಇವರ ಕಾಲದಲ್ಲಿ ಕುಲಾಚಾರಿಕೆಯ ಅಧಿಕಾರವನ್ನು ತಮ್ಮ ಕಡೆಯಿಂದ, ಬೀಗರಾದ ಸುಂಡಿ ರಾಜಮನೆತನದ ರಾಜ ಶ್ರೀರಾಮನಾಯಕರಿಗೆ ನೀಡಿದ್ದರು. ಸುರಪುರದ ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್ ಕಟ್ಟಡದ ಪಕ್ಕದಲ್ಲಿ ಶ್ರೀರಾಮನಾಯಕರ ದೇವಡಿ ಇನ್ನೂ ಸುಸ್ಥಿತಿಯಲ್ಲಿದೆ.

### ಸುರಪುರದ ಜನಪದರಲ್ಲಿ ಪ್ರಚಲಿತದಲ್ಲಿರುವ ನ್ಯಾಯದ ನುಡಿಗಟ್ಟುಗಳು

೧. **ಕಟ್ಟೆಕಲ್ಲು ಕಟ್ಟೆಗೆ** : ಮುರಿದುಹೋದ ಕುಟುಂಬ ವ್ಯವಸ್ಥೆಯನ್ನು ನ್ಯಾಯಮಾಡಿ ಕೂಡಿಸಿದಾಗ ಹೇಳುವ ಮಾತು.

೨. **ಶಾಪುರನ್ಯಾಯ** : ಸಗರನಾಡಿನ ಮಧ್ಯಭಾಗದಲ್ಲಿರುವ ಊರು ಶಹಪುರ. ಯಾರೂ ಸೋಲದೆ ಯಾರೂ ಗೆಲ್ಲದೆ ರಾಜಿಯಾಗುವ ನ್ಯಾಯ ಶಾಹಪುರನ್ಯಾಯ ಎಂದು ಪ್ರಸಿದ್ಧ.

೩. **ಹಸಿಗ್ಯಾಡ್ಯಾಗ ಹಳ್ಳುಹೊಡೆದಂಗ** : ಖಡಾಮುಡಿ ಅಥವಾ ನಿಷ್ಠುರವಾಗಿ ಯಾರ ಪಕ್ಷವಹಿಸದೆ ಪರಿಣಾಮಕಾರಿಯಾಗಿ ಮಾತಾಡುವುದು.

೪. **ಸೂಗೂರಿಗೂ ನೆಂಟ ಬಾಗೂರಿಗೂ ನೆಂಟ** : ಯಾರಿಗೂ ಕೆಟ್ಟಾಗದೆ ಎರಡೂ ದಡದ ಮೇಲೆ ಕೈಇಟ್ಟವ.

೫. **ತೊಡೆ ಹೇಸಿಗೆ ಆಗಿಲ್ಲ** : ಒಂದು ಹೆಣ್ಣು ಇನ್ನೊಬ್ಬ ಗಂಡಿನ ಜೊತೆಗೆ ಹೋದಾಗ ಅವಿಬ್ಬರಲ್ಲಿ ಲೈಂಗಿಕ ಸಂಬಂಧ ಆಗಿಲ್ಲ ಎನ್ನುವ ಮಾತು; ಸಾರ್ವಜನಿಕರಲ್ಲಿ ಸೂಚ್ಯವಾಗಿ ಹೇಳುವ ಮಾತು.

೬. **ಆಳು ನೋಡಿ ಜೀತ ಬರಿ** : ದಂಡ ಮುಂತಾದ ಪ್ರಸಂಗಗಳಲ್ಲಿ ಅವನ ಆರ್ಥಿಕಸ್ಥಿತಿ ನೋಡಿ ಭಾರವಾಗದ ಹಾಗೆ ಮಾಡುವುದು.

ಇಪ್ಪತ್ತೊಂದನೇ ಶತಮಾನದ ಅಂತರಿಕ್ಷಯುಗದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿರುವ ನಾವು, ನ್ಯಾಯಾಂಗದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಅಳವಡಿಸುವ ನಿಟ್ಟಿನಲ್ಲಿ ಚಿಂತನೆ ನಡೆಸುತ್ತಿರುವ ಸಂದರ್ಭದಲ್ಲಿ, ಸುರಪುರ ಸಂಸ್ಥಾನದ ನ್ಯಾಯಾಂಗ ವ್ಯವಸ್ಥೆಯು ನಮಗೆ ದಾರಿದೀಪವಾಗಬಹುದು.

**ಆಕರಗಳು**

೧. ಕ|| ಮೆಡೋಸ್ ಟೈಲರ್, ಸ್ಟೋರಿ ಆಫ್ ಮೈ ಲೈಫ್
೨. ಕೃಷ್ಣ ಏ.ಸುರಪುರ (ಸಂ), ಸಗರನಾಡ ದರ್ಶನ
೩. ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನ ಇತಿಹಾಸ
೪. ಕೃಷ್ಣ ಏ.ಸುರಪುರ (ಸಂ) ತವನಿಧಿ (ಸುರಪುರದ ಪ್ರಥಮ ಸಾಹಿತ್ಯ ಸಮ್ಮೇಳನದ ಸ್ಮರಣಸಂಚಿಕೆ)

೧೫

# ನ್ಯಾಯಾಂಗ ವಿಚಾರಣೆಯಲ್ಲಿ ನಾಲ್ವಡಿ ವೆಂಕಟಪ್ಪನಾಯಕ

ಡಾ. ರಂಗರಾಜ ವನದುರ್ಗ

ಗಡ್ಡಿಪಿಡ್ಡನಾಯಕನ ಆಳ್ವಿಕೆಯಿಂದ ಆರಂಭಗೊಂಡ ವಾಗಿನಗೇರಿಕಿಲ್ಲೆಯ ಪಾಳೆಯಗಾರಿಕೆಯು ಸುರಪುರವನ್ನು ಸ್ವತಂತ್ರ ರಾಜಧಾನಿಯಾಗಿ ಹೊಂದುವ ಮೂಲಕ ಶ್ರೀಮಂತ ಸಂಸ್ಥಾನವೆಂದು ಕ್ರಿ.ಶ.೧೭೦೮ರಲ್ಲಿ ಸಾಬೀತುಪಡಿಸಿತು. ಸುಮಾರು ಎರಡುವರೆ ಶತಮಾನಗಳ ರೋಮಾಂಚಕಾರಿ ಇತಿಹಾಸ ಸುರಪುರ ಸಂಸ್ಥಾನದ ಪುಟಗಳಲ್ಲಿದೆ. ಇಲ್ಲಿ ಆಳಿದ ಹನ್ನೊಂದು ಜನ ಅಪ್ರತಿಮ ಅರಸರಲ್ಲಿ ನಾಲ್ವಡಿ ವೆಂಕಟಪ್ಪನಾಯಕನದು ವಿಶಿಷ್ಟ ವ್ಯಕ್ತಿತ್ವ.

೧೮೫೮ನೆಯ ಫೆಬ್ರವರಿ ೭ ಮತ್ತು ೮ರಂದು ಸುರಪುರದ ಮೇಲೆ ನಡೆದ ಬ್ರಿಟೀಷ್ ಪಡೆಯ ಭೀಕರ ದಾಳಿಯು ಸಂಸ್ಥಾನವನ್ನೇ ಪತನಗೊಳಿಸಿತು. ಪತನಗೊಂಡ ಸಂಸ್ಥಾನದ ಸಂಪೂರ್ಣ ಸಿಂಹಾವಲೋಕನ ಸಿಗುವುದು ಸದ್ಯ ಮಜುಮದಾರ ಲಿಂಗಪ್ಪನ 'ಹಕೀಕತ್ತು' ಮತ್ತು ರೆಸಿಡೆಂಟ್ ಡ್ಯಾವಿಡ್ಸನ್‌ನು ಭಾರತ ಸರ್ಕಾರಕ್ಕೆ ರವಾನಿಸಿದ ೧೮.೦೩.೧೮೫೮ರಂದಿನ 'ರಹಸ್ಯ ವರದಿ' ಹಾಗೂ ಮೆಡೋಸ್ ಟೇಲರನ 'ಆತ್ಮಕತೆ'ಗಳಲ್ಲಿ ಮಾತ್ರ.

ಜನವರಿ ೩೧, ೧೮೫೮ರ ವರೆಗೆ ಸಂಪೂರ್ಣ ಶಾಂತವಾಗಿದ್ದ ಸುರಪುರವು ಕ್ರೋಧ ತಾಳುತ್ತ ಹೊರಟಿತು. ಇದಕ್ಕೆ ಕಾರಣ, ಕ್ಯಾಪ್ಟನ್ ಕ್ಯಾಂಬೆಲ್ ಲಿಂಗಸೂಗೂರು ಕ್ಯಾಂಪಿಗೆ ತೆರಳಿದ್ದು, ತರುವಾಯ ಫೆಬ್ರವರಿ ೬ ರಂದು ವಿಂಢೆಮ್‌ನ ನೇತೃತ್ವದಲ್ಲಿ ಬ್ರಿಟೀಷ್ ಸೈನ್ಯ ಸುರಪುರದ ಸುತ್ತ ಬಂದಿಳಿದದ್ದು. ಮರುದಿನ ಎರಡು ಬಣಗಳಲ್ಲಿ ಆಕ್ರೋಶ ತಾಳಿದ್ದೇ ಕೋಟೆಯ ಮೇಲೆ ತೋಪುಗಳು ಏರಲು ಮೂಲ ಪ್ರೇರಣೆಯಾಯಿತು. ಮೇಜರ್ ಹ್ಯೂಗನು ಫೆಬ್ರವರಿ ೮ರಂದು ಕರ್ನೂಲ ಸೈನ್ಯದೊಂದಿಗೆ ಬಂದಿಳಿದು ನಿನ್ನೆಯಿಂದ ನಡೆದ ಗುಂಡಿನ ಚಕಮಕಿಯಲ್ಲಿ ಭಾಗಿಯಾದ. ಅಷ್ಟೇ ಅಲ್ಲ, ಬ್ರಿಟೀಷ್‌ಕೂಟದ ಮೂಲಕ ಸುರಪುರವನ್ನು ಸುತ್ತುವರೆದು ಏರಿಬರುತ್ತಿರುವ ಅರಬ್, ರೋಹಿಲೆಯರನ್ನು ತಳ್ಳಿದ.

ಕೊನೆಗೆ ಶಕ್ತಿಗುಂದಿದ ಸಂಸ್ಥಾನದ ಸೈನ್ಯವನ್ನು ಹಿಮ್ಮೆಟ್ಟಿಸಿದ ಬ್ರಿಟೀಷ್ ಪಡೆಯು ಫೆಬ್ರವರಿ ೯, ೧೮೫೮ರಂದು ಸುರಪುರವನ್ನು ಸಂಪೂರ್ಣವಾಗಿ ಆಕ್ರಮಿಸಿತು; ಪತನಗೊಂಡ ಸಂಸ್ಥಾನದ ಮೇಲೆ ಅಧಿಕಾರ ಸ್ಥಾಪಿಸಿತು.

ಬ್ರಿಟೀಷರ ವಿರುದ್ಧ ಬಂಡಾಯವೆದ್ದ ನಾಲ್ವಡಿ ವೆಂಕಟಪ್ಪನಾಯಕನನ್ನು ಫೆಬ್ರವರಿ ೧೨, ೧೮೫೮ರಂದು ರಾಜದ್ರೋಹದ ಆಪಾದನೆ ಮೇಲೆ ಹೈದ್ರಾಬಾದ್ ನಗರದಲ್ಲಿ ಬಂಧಿಸಲಾಯಿತು. ವನಪರ್ತಿಯ ರಾಜ ಮತ್ತು ನಿಜಾಮ ನಾಸಿರಜಂಗನ ಸಹಾಯದೊಂದಿಗೆ ಸುರಪುರದ ರಾಜನನ್ನು ಸಿಕಂದರಾಬಾದ್ ಕಾಂಟೋನ್ಮೆಂಟ್‌ನಲ್ಲಿ ಸೆರೆಹಿಡಿಯಲಾಯಿತು. ಕ್ಯಾಪ್ಟನ್ ಗ್ರೀಸ್ಲೇ, ಕ್ಯಾ.ಕ್ಯಾಂಬೆಲ್, ಮೇಡೋಸ್ ಟೇಲರ್, ಲೆಫ್ಟಿನೆಂಟ್ ಕರ್ನಲ್ ಟೇಲರ್, ಕ್ಯಾ.ವಿಂಢೆಮ್ ಮುಂತಾದವರು ಸುರಪುರದ ಬಂಧಿತ ರಾಜನ ಮೇಲೆ ಗುರುತರವಾದ ಆರೋಪಗಳನ್ನು ಹೊರಿಸಿದ್ದರು. ಅವೆಲ್ಲವುಗಳನ್ನು ಪಡೆದ ರೆಸಿಡೆಂಟ್ ಡ್ಯಾವಿಡ್ಸನ್‌ನು ಯುದ್ಧದಲ್ಲಿ ಆದ ನ್ಯೂಬೆರ್ರಿಯ ಸಾವು, ಗಾಯಗೊಂಡ ಸ್ಟೂಅರ್ಟನ ಪ್ರಕರಣವನ್ನೇ ಮುಖ್ಯವಾಗಿರಿಸಿಕೊಂಡು ವೆಂಕಟಪ್ಪನಾಯಕನ ಮೇಲೆ ನ್ಯಾಯಾಂಗ ವಿಚಾರಣೆ ನಡೆಸಲು ಭಾರತ ಸರಕಾರದ ಅನುಮತಿ ಪಡೆದನು.

ಹೈದ್ರಾಬಾದ್‌ನ ರೆಸಿಡೆಂಟ್‌ರಾಗಿದ್ದ ಲೆ.ಕ.ಡ್ಯಾವಿಡ್ಸನ್ ಮತ್ತು ಹಿಗ್‌ನೆಸ್‌ರ ನೇತೃತ್ವದಲ್ಲಿ ೨೮.೦೪.೧೮೫೮ರಂದು ನ್ಯಾಯಾಂಗ ವಿಚಾರಣಾ ಆಯೋಗ ಅಸ್ತಿತ್ವಕ್ಕೆ ಬಂದಿತು. ಸದರಿ ಆಯೋಗಕ್ಕೆ ಅಧ್ಯಕ್ಷರಾಗಿ ಹೈದ್ರಾಬಾದ್ ಸೈನ್ಯವಾಹಿನಿಯ ನಿರ್ವಾಹಕರಾದ ಬ್ರಿಗೆಡಿಯರ್ ವಿಲಿಯಂ ಹಿಲ್ ನೇಮಕಗೊಂಡರು. ಸದಸ್ಯರಾಗಿ ಸ್ಥಳೀಯ ೪ನೇ ಕಾಲ್ದಳದ ಅಧಿಕಾರಿಯಾಗಿದ್ದ ಕರ್ನಲ್ ಪ್ರೀಚರ್ಡ್ ಹಾಲ್, ೪೨ನೇ ಕಾಲ್ದಳದ ಅಧಿಕಾರಿಯಾಗಿದ್ದ ಲೆ.ಕ.ಮ್ಯಾಕಲಿಯಾಡ್, ಪ್ರಥಮ ಸೈನ್ಯದ ದಂಡನಾಯಕನಾಗಿದ್ದ ಲೆ.ಕ.ಅಲೆಕ್ಸಾಂಡರ್- ಇ- ಫ್ರೆಡ್ರಿಕ್, ಹೈದ್ರಾಬಾದ್ ರೆಸಿಡೆಂಟಿನ ಸೈನಿಕ ಕಾರ್ಯದರ್ಶಿಯಾದ ಸ್ಟೀಫನ್ ಚಾರ್ಲ್ಸ್ ಬ್ರಿಗ್ಸ್, ನ್ಯಾಯಾಧೀಶ, ನ್ಯಾಯವಾದಿ ಮತ್ತು ಹೈದ್ರಾಬಾದ್ ಪ್ರಾಂತ್ಯದ ನಿಯಮಾವಳಿ ನಿಯಮದ ನಿರ್ವಾಹಕರಾಗಿದ್ದ ಮೇಜರ್ ಚಾರ್ಲ್ಸ್ ಬರ್ಟನ್ ಮತ್ತು ಸ್ಥಳೀಯ ೪೨ನೇ ಪಡೆಯ ಮುಖ್ಯಸ್ಥ ಹಾಗೂ ನ್ಯಾಯಾಲಯದಲ್ಲಿನ ಸಂಭಾಷಣೆಯ ಅನುವಾದಕ (ದುಭಾಷಿ)ರಾಗಿದ್ದ ಹೆನ್ರೀ ಚಾರ್ಲ್ಸ್ ರೈಟರು ಆಯ್ಕೆಗೊಂಡರು.

ದಿನಾಂಕ ೨೮.೦೪.೧೮೫೮ರಂದು ಸಿಕಂದರಾಬಾದ್‌ನ ಪ್ರತ್ಯೇಕ ಸ್ಥಳದಲ್ಲಿ ರಚನೆಗೊಂಡ ನ್ಯಾಯಾಂಗ ವಿಚಾರಣಾ ಆಯೋಗವು ನ್ಯಾಯಾಲಯವಾಗಿ ಪರಿವರ್ತಿತಗೊಂಡಿತು. ಸುರಪುರದ ರಾಜನ ಮೇಲಿರುವ ಆಪಾದನೆಗಳನ್ನು ಪರಾಮರ್ಶಿಸಲು ಆಯೋಗದ ಅಧ್ಯಕ್ಷರು, ಸದಸ್ಯರು, ನ್ಯಾಯಾಧೀಶರು, ನ್ಯಾಯವಾದಿಗಳು ತನಿಖೆಗೆ ಆರಂಭಿಸಿದರು. ಮೊದಲು ಸುರಪುರದ ಅಸ್ತಿತ್ವ; ಆದಿಲ್‌ಷಾಹಿ, ಪೇಶ್ವೆ, ನಿಜಾಮರ ಸಂಬಂಧ, ಸಖ್ಯ ಮತ್ತು ಸಾಲಗಾರ ಸಂಸ್ಥಾನಕ್ಕೆ ಸಹಕರಿಸಲು ಬಂದ ಬ್ರಿಟೀಷ್ ಅಧಿಕಾರಿಗಳು- ಹೀಗೆ ಇತ್ಯಾದಿ ಪೂರ್ವದ ಅಂಶಗಳ ಮೇಲೆ ಸಂಕ್ಷಿಪ್ತ ವರದಿಯನ್ನು ಆಯೋಗ ಮಂಡಿಸಿತು.

ತರುವಾಯ ಬಂಧನಕ್ಕೊಳಗಾದ ನಾಲ್ವಡಿ ವೆಂಕಟಪ್ಪನಾಯಕನನ್ನು ಆಯೋಗದ ಮುಂದೆ ಹಾಜರುಪಡಿಸಿ ಹಲವಾರು ಪ್ರಶ್ನೆಗಳನ್ನು ಹಾಕಲಾಯಿತು. ಅದರಂತೆ ಕ್ಯಾ.ಕ್ಯಾಂಬೆಲ್‌ನಿಂದಲೂ ಕೋರ್ಟ್ ಸಮಜಾಯಿಸಿ ಉತ್ತರ ಕೇಳಿತು. ರಾಜನ ಪರವಾಗಿ ಸಾಕ್ಷಿ ನುಡಿಯಲೆಂದು ಮೆಡೋಸ್ ಟೇಲರ ಸುರಪುರದಿಂದ ಕಳಿಸಿಕೊಟ್ಟಿದ್ದ ನಂದರಾಜಪ್ಪ ರತ್ನಗಿರಿ, ಕೇಶವ ರಾವ್ ಆಲಂಪೂರ, ಲಿಂಗೋ ಭೀಮರಾವ್ ಮಜುಮದಾರ, ನಾನಾಸಾಹೇಬ್ ಗುರ್ಲಹೊಸೂರ್, ಮುದ್ದೂಭೀಮರಾವ್ ದಿವಾನ್, ವಾಗಿನಗೇರಿ ರಾಮಣ್ಣ, ವಿದ್ಯಾಗುರು ಭಾಸ್ಕರಯ್ಯ ಹಾಗೂ ಬಳವಂತರಾವ್ ಘೋರ್ಪಡೆ ಮುಂತಾದವರಿಂದ ಸಮಿತಿ ಸಾಕ್ಷಿ ಯನ್ನು ಪಡೆಯಿತು. ನಂತರ ಈ ಸಾಕ್ಷಿದಾರರಿಗೆಲ್ಲ ಚಂದ್ರಘಾಟದ ಬಾಪುಶೇಠನ ಬಂಗ್ಲೆ ಯಲ್ಲಿ ವಸತಿ ಸೌಕರ್ಯ ಒದಗಿಸಿತು.

ಮರುದಿನ ದಿನಾಂಕ ೨೯.೦೪.೧೮೫೮ರಂದು ಸರ್ವಸದಸ್ಯರೊಂದಿಗೆ ಸೇರಿದ ಆಯೋಗವು ದಿವಾನ ಭೀಮರಾಯನಿಂದ ಸಾಕ್ಷಿ ಬಯಸಿತು. ವಿಶೇಷವಾಗಿ ಸೈನಿಕರನ್ನು ನೇಮಿಸಿಕೊಳ್ಳಲು ರಾಜನು ನೀಡಿದ ಆದೇಶಪತ್ರಗಳ ಮೇಲೆ ಆಯೋಗ ಹಲವು ಪ್ರಶ್ನೆ ಎಸೆಯಿತು. ಮಜುಮದಾರ ಲಿಂಗಪ್ಪನು ಆ ಆದೇಶಪತ್ರಗಳನ್ನು ಬರೆದವನಾಗಿದ್ದರಿಂದ ಆತನಿಂದಲೂ ಸತ್ಯಸಂಗತಿ ತಿಳಿಸಲು ಕೋರ್ಟ್ ಕೇಳಿತು. ಇವರೀರ್ವರಿಂದ ರಾಜ ಆದೇಶಪತ್ರ ಹೊರಡಿಸಿದ್ದು ನಿಜವೆಂದು ಬೆಳಕಿಗೆಬಂದಿತು. ತರುವಾಯ ಜೈನಿಸಿಂಗ್ ಎಂಬ ಚಪ್ರಾಸಿಯಿಂದಲೂ ಆಯೋಗ ಹಲವು ಮಾಹಿತಿಯನ್ನು ಸಾಕ್ಷಿಮೂಲಕ ಸಂಗ್ರಹಿಸಿತು. ಸಂಸ್ಥಾನದ ಸೈನ್ಯಕ್ಕೆ ಮುಖಂಡನಾಗಿದ್ದ ಮತ್ತು ರಾಜನಿಗೆ ಆಪ್ತನೂ ಆಗಿದ್ದ ಬಲವಂತರಾವ್ ಘೋರ್ಪಡೆಯು ಸಾಕ್ಷಿನುಡಿಯುತ್ತ, "ಸಂಸ್ಥಾನವನ್ನು ಕಬಳಿಸಲು ಬ್ರಿಟೀಷ್ ಪಡೆ ಮುತ್ತಿಗೆ ಹಾಕಿತ್ತೆಂದು" ಆರೋಪಿಸಿದ. ಯುದ್ಧದಲ್ಲಿ ಪ್ರತ್ಯಕ್ಷದರ್ಶಿಯಾಗಿದ್ದ ಬ್ರಿಟೀಷ್ ಸೈನ್ಯದ ಜೊತೆಗಾರ ಮಂಕೋಜಿ ಮೋನಾಕ ಜಮಾದಾರ ಮತ್ತು ಮೈಸೂರಿನ ಲಷ್ಕರ್‌ದ ಲಕ್ಷ್ಮಣನಿಂದ ನ್ಯೂಬೆರ್ರಿಯ ಕೊಲೆ ಯಾರಿಂದ, ಹೇಗೆ ನಡೆಯಿತೆಂದು ಕೋರ್ಟ್ ದಾಖಲಿಸಿಕೊಂಡಿತು. ಇಲ್ಲಿಗೆ ಅಂದಿನ ವಿಚಾರಣೆ ಮುಗಿಸಿದ ವಿಚಾರಣಾ ಆಯೋಗವು ೪ನೇ ಮೇ ೧೮೫೮ಕ್ಕೆ(ಮಂಗಳವಾರ) ಮತ್ತೆ ಸಭೆಸೇರಲು ನಿರ್ಧರಿಸಿ ವಿಸರ್ಜನೆಗೊಂಡಿತು.

೪.೫.೧೮೫೮ರಂದು ಅದೇ ಕಾಂಟೋನ್ಮೆಂಟ್‌ನಲ್ಲಿ ಉಪಸ್ಥಿತಗೊಂಡ ಆಯೋಗವು ಇದುವರೆಗೆ ನೀಡಿದ ಸರ್ವಸಾಕ್ಷಿಗಳ ಸಮಗ್ರ ಹೇಳಿಕೆಗಳನ್ನೆಲ್ಲ ಸಂಗ್ರಹಿಸಿಕೊಂಡು ವೆಂಕಟಪ್ಪನಾಯಕನಿಂದ ಮತ್ತೆ ದೀರ್ಘ ವಿಚಾರಣೆ ಆರಂಭಿಸಿತು. ನೀಡಿದ ಆದೇಶಪತ್ರ, ಕ್ಯಾಂಬೆಲ್‌ನಿಗೆ ಹಾಕಿದ ಕೊಲೆ ಬೆದರಿಕೆ, ಸಂಸ್ಥಾನದ ಕೋಟೆಗಳಲ್ಲಿ ಸಂಗ್ರಹಿಸಿಟ್ಟುಕೊಂಡ ಯುದ್ಧಸಾಮಗ್ರಿ ಇತ್ಯಾದಿ ವಿಷಯ ಕುರಿತು ರಾಜನಿಂದ ಉತ್ತರ ನಿರೀಕ್ಷಿಸಿತು. ಅಲ್ಲದೆ ಇದುವರೆಗೆ ಸಂಸ್ಥಾನದಲ್ಲಿ ಜರುಗಿದ ಬ್ರಿಟೀಷ್‌ವಿರೋಧಿ ಪಿತೂರಿಗಳ ಬಗ್ಗೆ ತಮ್ಮ ಸಮ್ಮುಖದಲ್ಲೆ ರಾಜನಿಗೂ ಹಾಗೂ ದಿವಾನ ಭೀಮರಾಯನಿಗೂ ಮುಖಾಮುಖಿ ವಾದಕ್ಕೆ ಇಳಿಸಿತು. ಇದರಲ್ಲಿ ಅನೇಕ ಸಂಗತಿಗಳು ದೃಢಪಟ್ಟವು. ಕಾರಣ ಭೀಮರಾಯ ತನ್ನ

ಉಳಿವಿಗೆ ಸುಳ್ಳುಹೇಳಿಕೆ ನೀಡಿದ್ದು ಆಯೋಗಕ್ಕೆ ಅರ್ಥವಾಗಲಿಲ್ಲ. 'ಫೆಬ್ರವರಿ ೭ರಂದು ೬ ಗಂಟೆಗೆ ವಿಂಢೆಮ್‌ನ ಶಿಬಿರದ ಮೇಲೆ ರಾಜನ ಪಡೆ ದಾಳಿಮಾಡಿದ್ದು, ರೋಹಿಲೆ ಅರಬರನ್ನು ತಟಸ್ಥವಾಗಿರಿಸಲು ರಾಜ ಪ್ರಯತ್ನಿಸಿದ್ದು, ಕೊನೆಗೆ ರಾಜನ ಯತ್ನ ವಿಫಲ ಗೊಂಡದ್ದು, ತುಸುದೂಕ ಹುಸೇನ, ಲಚಮಣಸಿಂಗ್‌ರ ನೇತೃತ್ವದಲ್ಲಿ ಸುರಪುರದ ಸೈನ್ಯ ಮುನ್ನುಗಿದ್ದು, ಅದೇ ಸಂದರ್ಭದಲ್ಲಿ ಇಜ್ಜತಖಾನ್ ಮತ್ತು ರೋಹಿಲೆಯರು ನ್ಯೂಬೆರ್‍ರಿಯ ರುಂಡ ಚೆಂಡಾಡಿದ್ದು, ತರುವಾಯ ಇದರ ಪರಿಣಾಮ ಭಯಂಕರ ಸ್ವರೂಪ ತಾಳಿದಾಗ ಸುರಪುರದ ರಾಜ ಹೈದ್ರಾಬಾದ್ ನಿಜಾಮರಿಗೆ ಮತ್ತು ರೆಸಿಡೆಂಟರಿಗೆ ಕಂಡು ಯುದ್ಧ ನಿಲ್ಲಿಸುವ ಇಚ್ಛೆ ವ್ಯಕ್ತಪಡಿಸಿ ಫೆಬ್ರವರಿ ೮ರ ರಾತ್ರಿಯೇ ಹೈದ್ರಾಬಾದಕ್ಕೆ ಪ್ರಯಾಣ ಬೆಳೆಸಿದ್ದು' ಇವೆಲ್ಲ ಭೀಮರಾಯನು ನುಡಿದ ಸಾಕ್ಷಿಯಿಂದ ತಿಳಿದುಬಂದ ಬಹು ಪ್ರಮುಖ ಸಂಗತಿಗಳು.

ಸುರಪುರದ ಸಮಸ್ತ ಸಾಕ್ಷಿಗಳ ಹೇಳಿಕೆ ಪಡೆದುಕೊಂಡ ವಿಚಾರಣಾ ಆಯೋಗವು, ತನ್ನ ತನಿಖೆಗೆ ಅಂತಿಮರೂಪ ನೀಡಲು ಆರೋಪಿ ಸ್ಥಾನದಲ್ಲಿದ್ದ ತರುಣ ರಾಜ ವೆಂಕಟಪ್ಪ ನಾಯಕನಿಂದ ಮತ್ತೆ ಸಮಗ್ರ ಹೇಳಿಕೆ ಕೇಳಿ ಆದೇಶ ಹೊರಡಿಸಿತು. ಆಗ ರಾಜನಿಂದ ಬಂದ ಉತ್ತರವೇನೆಂದರೆ,

"೨೫೦೦ ಜನ ಆರಬ್ ರೋಹಿಲೆರನ್ನು ಸೈನಿಕರಾಗಿ ನೇಮಿಸಿಕೊಂಡಿಲ್ಲ. ಅವರು ಇದ್ದದ್ದು ಕೇವಲ ೨೦೦ ಜನ. ಕ್ಯಾಂಬೆಲ್‌ನು ನನ್ನ ಚಿಕ್ಕಪ್ಪನ ಮಗನನ್ನು ಸುರಪುರದ ಗಾದಿಗೇರಿಸುವ ತಂತ್ರ ಹೂಡಿದ್ದಾನೆಂದು ನನ್ನ ನಂಬಲರ್ಹ ಮೂಲಗಳು ತಿಳಿಸಿದವು. ಇದರಿಂದ ನಾನು ವಿಚಲಿತಗೊಂಡೆ; ವಿಪರೀತ ಗೊಂದಲದಲ್ಲಿ ಬಿದ್ದೆ. ಫೆಬ್ರವರಿ ೭ ಮತ್ತು ೮ರಂದು ಬ್ರಿಟೀಷ್ ಪಡೆಗಳು ನನ್ನ ಸುರಪುರವನ್ನು ಆಕ್ರಮಿಸಿದವು. ಯುದ್ಧ ನಿಲ್ಲುವ ಸೂಚನೆ ಕಾಣಲಿಲ್ಲ. ತೋಪಿನ, ಸಿಡಿಮದ್ದು ಸಪ್ಪಳ ಕೇಳಿಸುತ್ತಿತ್ತು. ನಾನು ಅರಮನೆ ಹಿಂಬಾಗಿಲಿನಿಂದ ಅದೇ ಮಧ್ಯರಾತ್ರಿಯಲ್ಲಿ ಸಿದ್ಧನತೋಟಕ್ಕೆ ಹೊರಬಿದ್ದೆ. ನಿನ್ನೆ ದಿನವೆ ನನ್ನ ಪರಿವಾರವನ್ನೆಲ್ಲ ಶಹಪುರಕ್ಕೆ ಕಳುಹಿಸಿದ್ದೆ. ಈಗ ನಾನೊಬ್ಬನೆ ಆಗಿದ್ದೆ. ನನ್ನೊಂದಿಗೆ ಇಬ್ಬರು ಸವಾರರು ಮಾತ್ರ ಇದ್ದರು.

"೨-೩ ತಿಂಗಳು ನನ್ನ ಸಲಹೆಗಾರರು ಪಠಾಣರಾಗಿದ್ದರು. ಮೀರಸಾಹೇಬ ನನ್ನ ಹಿತಚಿಂತಕ. ಆತನ ಮಾತು ನಂಬುತ್ತಿದ್ದೆ. ಪಿಡ್ಡನಾಯಕನ ಮಗನನ್ನೆ ಸಂಸ್ಥಾನದ ಗಾದಿಗೆ ಕೂಡಿಸುತ್ತಾರೆಂದು ದೃಢಪಡಿಸಿದರು; ನಂಬಿಬಿಟ್ಟೆ. ಕುತಂತ್ರಿಗಳ ಮೇಲೆ ದ್ವೇಷ ಉಕ್ಕಿತು. ಸೈನ್ಯ ಶೇಖರಣೆ ಅವಶ್ಯವೆಂದರು. ತುಸುದೂಕ, ಮೀರಸಾಹೇಬನ ಮೂಲಕ ಅರಬ, ರೋಹಿಲೆ ಜಮಾದಾರರಿಗೆ ೬ ತಿಂಗಳ ಮಟ್ಟಿಗೆ ೨೫೦೦ ಜನ ಸೈನಿಕರು ಬೇಕೆಂದು ಆದೇಶ ನೀಡಿದ್ದೆ. ಇದು ನಿಜ. ಇದು ನನ್ನ ಚಿಕ್ಕಪ್ಪನ ಮಗನನ್ನು ವಿರೋಧಿಸಿ ಸಂಘಟಿಸಿದ ಸೈನ್ಯವೇ ಹೊರತು ಬ್ರಿಟಿಷ್ ಸರಕಾರದ ವಿರುದ್ಧ ಖಂಡಿತಾ ಅಲ್ಲ.

"ಮಹಿಪಾಲಸಿಂಗ್ ಎಂಬಾತ ನನ್ನ ದಿವಾನ ಕೇಶವರಾಯರಿಗೆ ಪರಿಚಿತ. ಕೇಶವರಾಯ ಆತನಿಗೆ ಯಾವ ಆದೇಶ ಕೊಟ್ಟಿದ್ದಾನೊ ಗೊತ್ತಿಲ್ಲ. ನನಗೆ ಪರಿಚಿತ. ಸಂಸ್ಥಾನದೊಂದಿಗೆ ಮಾತ್ರ ಸಂಪರ್ಕವಿಟ್ಟುಕೊಂಡಿದ್ದೆ. ಅಕ್ಕಲಕೋಟ, ಜಮಖಂಡಿ ರಾಜರೊಂದಿಗೆ ಸ್ನೇಹವಿತ್ತು. ಇದನ್ನೇ ಬಂಡಾಯದ ಒಕ್ಕೂಟವೆಂದು ಆರೋಪಿಸುವುದು ಸರಿಯೇ? ನನ್ನ ಲೆಕ್ಕಪತ್ರದ ವ್ಯವಹಾರವನ್ನು ವೆಂಕಟರಾವ್, ಸುಬ್ಬರಾವ್, ಮಾಸುಮಸಾಬ, ಲಕ್ಷ್ಮೀಕಾಂತರಾವ್, ಲಕ್ಷ್ಮಣರಾವ್ ಇತರರು ನೋಡಿಕೊಳ್ಳುತ್ತಿದ್ದರು. ವೆಂಕಟರಾವ್, ವೆಂಕಟಪ್ಪ, ಹನುಮಂತ ರಾವ್ ಇವರೆಲ್ಲ ದಫ್ತರದಾರಿಗಳಾಗಿದ್ದರು. ಇವರಲ್ಲಿ ಯಾರೂ ಅನ್ಯ ಸಂಸ್ಥಾನದ ಬಂಡಾಯದೊಂದಿಗೆ ಬೆರೆತಿಲ್ಲ. ನನ್ನ ಮೇಲಿರುವ ಆರೋಪಗಳು ಸುಳ್ಳಿನಿಂದ ಕೂಡಿವೆ. ನಾನು ನೀಡಿರುವ ಮೇಲಿನ ಉತ್ತರ ಸತ್ಯವಾಗಿದೆಯೆಂದು ಮಾತ್ರ ಹೇಳಬಲ್ಲೆ."

ಇವಿಷ್ಟು ಅಲ್ಲದೆ ಇನ್ನೂ ಅನೇಕ ಸಂಗತಿಗಳನ್ನು ರಾಜ ವೆಂಕಟಪ್ಪನಾಯಕ ಕೋರ್ಟಿಗೆ ಸಲ್ಲಿಸಿದ ಮನವಿಯಲ್ಲಿ ಉಲ್ಲೇಖಿಸಿದ್ದಾನೆ. ಬಿಡುಗಡೆಗೊಳ್ಳಲು, ನಿರಪರಾಧಿಯಾಗಿ ಹೊರಬರಲು ರಾಜ ತುಂಬಾ ಪ್ರಯತ್ನಿಸಿದ್ದು ಕಂಡುಬರುತ್ತದೆ. ಮನವಿಯನ್ನು ಸ್ವೀಕರಿಸಿದ ಆಯೋಗವು ಇದುವರೆಗೆ ವಿಚಾರಣೆಯಲ್ಲಿ ಮಂಡಿಸಲಾದ ಮನವಿ, ಸಾಕ್ಷಿ, ಹೇಳಿಕೆ, ಉತ್ತರಗಳನ್ನು ಪರಿಶೀಲಿಸಿ, ೭.೫.೧೮೫೮ರಂದು ಐತಿಹಾಸಿಕ ತೀರ್ಪು ನೀಡುವುದಾಗಿ ಪ್ರಕಟಿಸಿತು.

೧೨.೨.೧೮೫೮ರಂದು ಬ್ರಿಟೀಷರ ಬಂಧನಕ್ಕೊಳಗಾದ ಸುರಪುರದ ರಾಜ ಇನ್ನೂ ಸಿಕಂದರಾಬಾದ ಕಾಂಟೋನ್ಮೆಂಟ್‌ನಲ್ಲೆ ಬಂಧಿಯಾಗಿದ್ದ. ಸುರಪುರದಿಂದ ಜೊತೆಯಲ್ಲಿ ಬಂದಿದ್ದ ಸವಾರ ಕೃಷ್ಣ ಮತ್ತು ರಾಮಪ್ಪರನ್ನು ಸಹಾ ರಾಜನ ಜೊತೆಯಲ್ಲಿಯೇ ಬಂಧಿಸಲಾಗಿತ್ತು. ರಾಜನ ಸೇವೆಗೆ ಅವರನ್ನು ಬಳಸಿಕೊಳ್ಳಲು ರೆಸಿಡೆಂಟ್ ಆದೇಶಿಸಿದ್ದ. ಆದರೆ ದಿವಾನ ಭೀಮರಾಯ ಅವರನ್ನು ತೆಗೆದು ಅವರ ಸ್ಥಾನದಲ್ಲಿ ಕನಕಗಿರಿ ಕನಕಪ್ಪನನ್ನು ನೇಮಿಸಿದ್ದು ಮಾತ್ರ ನಿಗೂಢ. ರಾಜನ ಪರವಾಗಿ ಸಾಕ್ಷಿನೀಡಲು ಬಂದಿದ್ದ ೮ ಜನ ಸಾಕ್ಷಿದಾರರು ಸುರಪುರಕ್ಕೆ ಮರಳಿದರು. ದೀರ್ಘ ಹೇಳಿಕೆ, ದಾಖಲೆಗಳ ಸಮಗ್ರ ತನಿಖೆ, ಸಾಕ್ಷಿ ಹೇಳಿಕೆಗಳ ಸಂಪೂರ್ಣ ಅಧ್ಯಯನದ ತರುವಾಯ ನ್ಯಾಯಾಂಗ ವಿಚಾರಣಾ ಆಯೋಗವು ಮೊದಲೇ ಪ್ರಕಟಿಸಿದಂತೆ ೭.೫.೧೮೫೮ರಂದು ತೀರ್ಪುನೀಡಲು ಸಭೆ ಸೇರಿತು. ಆಗ ನ್ಯಾಯಾಧೀಶರು,

"ಸುರಪುರದ ರಾಜ ನಾಲ್ವಡಿ ವೆಂಕಟಪ್ಪನಾಯಕನ ಮೇಲಿರುವ ಹಲವಾರು ಗುರುತರ ಆರೋಪಗಳನ್ನು ಕುರಿತು ನೀಡಿದ ಸಾಕ್ಷಿಗಳ ಪರ-ವಿರೋಧ ಹೇಳಿಕೆಗಳನ್ನು ಗಮನಿಸಿ, ರಾಜ ಮನಃಪೂರ್ವಕ ಗೊಂದಲ ಸೃಷ್ಟಿಸಿಲ್ಲ. ಆತನ ತೀರ್ಮಾನಗಳು ಆತನನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸುತ್ತಿವೆ. ಚಿಕ್ಕಂದಿನಿಂದಲೂ ರಾಜನನ್ನು ಬ್ರಿಟೀಷ್ ಸರಕಾರ ಬೆಳೆಸಿದೆ, ಪೋಷಿಸಿದೆ; ಮಾರ್ಗದರ್ಶನ ಮಾಡಿದೆ. ಇವೆಲ್ಲವು-ಕಂಡುಂಡು ಬೆಳೆದ ರಾಜ ಕೊನೆಗೆ ಬೆಳೆಸಿದ ಬ್ರಿಟೀಷರನ್ನು ವಿರೋಧಿಸಿದ್ದು ನೈತಿಕ ಅಪರಾಧ.



ನಾಲ್ವಡಿ ರಾಜಾ ವೆಂಕಟಪ್ಪನಾಯಕ



ಕ|| ಮೆಡೋಸ್ ಟೇಲರ್

"ಬ್ರಿಟೀಷ್ ಸರ್ಕಾರವು ಶೀಘ್ರವಾಗಿ ಸುರಪುರದ ಗಡಿಗೆ ತನ್ನ ಪಡೆಯನ್ನು ಕಳಿಸಿ ನಂಬಿದ ಜನರನ್ನು ಸಂರಕ್ಷಿಸಿಕೊಂಡದ್ದು ಸಮರ್ಥನೀಯವಾದದ್ದು. ಕ್ಯಾಂಬೆಲ್ ಮತ್ತು ಆತನ ಸಂಗಡಿಗರು ತನಿಖೆಗೆ ಬಂದವರೆ ಹೊರತು ಯುದ್ಧಕಲ್ಲವೆಂಬ ಅಂಶ ರುಜುವಾತಾಗಿದೆ. ಇಂಥ ಮುಗ್ಧರ ಮೇಲೆ ಸುರಪುರದ ಸೈನ್ಯ ದಾಳಿಮಾಡಿದ್ದು ಖಂಡನೀಯ. ಇವೆಲ್ಲ ಪೂರ್ವಯೋಜಿತವೆನ್ನಲು ಕ್ಯಾಂಬೆಲ್‌ನಿಗೆ ಜೀವಭಯ ಹಾಕಿದ್ದು, ಬಲವಂತರಾವ್ ಭೇಟಿಯಾಗಿದ್ದು, ಪಡೆಗಳು ಅನಿರೀಕ್ಷಿತ ದಾಳಿಗಿಳಿದದ್ದು, ಇನ್ನೂ ಅನೇಕ ಸಂಗತಿಗಳಿಗೆ ಜೀವಂತ ಸಾಕ್ಷಿಗಳಿವೆ. ಕ್ಯಾ.ನ್ಯೂಬೆರ್ರಿಯ ಭೀಕರ ಕಗ್ಗೊಲೆ ಘೋರ ಅನ್ಯಾಯ. ಇಂಥ ಸಂದರ್ಭಗಳಲ್ಲಿ ರಾಜ ನೇರವಾಗಿ ಪಾಲ್ಗೊಳ್ಳದೆ ಇರಬಹುದು. ಆದರೆ ರಾಜನ ಗಮನಕ್ಕೆ ಬರದೆ ಈ ಯಾವ ಕಾರ್ಯವೂ ನಡೆದಿಲ್ಲವೆನ್ನಲು ಆಧಾರಗಳಿವೆ. ನ್ಯೂಬೆರ್ರಿ ಕೊಲೆ ಉದ್ದೇಶಪೂರ್ವಕವಾಗಿಲ್ಲವೆಂದು ರಾಜ ಹೇಳಿರುವನೇನೋ ನಿಜ. ಆದರೆ ಸಮರ್ಥಿಸಿಕೊಳ್ಳಲು ಆತನಲ್ಲಿ ಸಾಕ್ಷಿಗಳಿಲ್ಲದಿರುವುದೇ ಆತ ಮಾಡಿದ್ದು ಅಪರಾಧವೆಂದು ಸಾಬೀತುಪಡಿಸಿವೆ. ಇವೆಲ್ಲ ರಾಜನನ್ನು ಆಪಾದಿತನ ಸ್ಥಾನದಲ್ಲಿ ಭದ್ರವಾಗಿ ನೆಲೆಯೂರಲು ಸಹಾಯಕವಾಗಿವೆ. ಆದುದರಿಂದ ಅನೇಕ ಆರೋಪಗಳಿಗೆ ಗುರಿಯಾಗಿರುವ ನಾಲ್ವಡಿ ವೆಂಕಟಪ್ಪನಾಯಕನಿಗೆ ಈ ನ್ಯಾಯಾಲಯವು ಮರಣದಂಡನೆ ಶಿಕ್ಷೆ ವಿಧಿಸಿದೆ" ಎಂದು ತೀರ್ಪಿತ್ತರು.

ವಿಚಾರಣಾ ಆಯೋಗದ ಅಧ್ಯಕ್ಷರಾದ ವಿಲಿಯಂ ಹಿಲ್ ಬ್ರಿಗೇಡಿಯರ್, ಅನುವಾದಕ ಎಸ್.ಸಿ.ರೈಟ್, ನ್ಯಾಯಾಲಯ ನಿಯಮಗಳ ಮುಖ್ಯಸ್ಥ ಚಾರ್ಲ್ಸ್ ಬರ್ಟನ್‌ರ ಸಹಿಯೊಂದಿಗೆ ಹೊರಬಿದ್ದ ಮೇಲಿನ ತೀರ್ಪು ಸುರಪುರದ ರಾಜನನ್ನು ಘೋರಶಿಕ್ಷೆಗೆ

ಗುರಿಪಡಿಸಿತು. ಸ್ವದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡುವ ವ್ಯಕ್ತಿಗಳು ನಮ್ಮ ದೃಷ್ಟಿಯಲ್ಲಿ ವೀರರು; ಆದರೆ ಅದೇ ವೀರರು ಬ್ರಿಟೀಷರ ದೃಷ್ಟಿಯಲ್ಲಿ ವೈರಿಗಳು. ಸುರಪುರದ ಶೂರ ರಾಜನಿಗೆ ರಾಜದ್ರೋಹದ ಪಟ್ಟಕಟ್ಟಿದ್ದು ಬ್ರಿಟೀಷರ ಕುತಂತ್ರ. ವೈರಿಗಳೇ ನ್ಯಾಯಾಧೀಶರಾದಾಗ ನ್ಯಾಯ ದೊರಕುವುದಾದರೂ ಹೇಗೆ? ತನ್ನ ತೀರ್ಪಿಗೆ ಪೂರಕವಾಗುವ ಸಾಕ್ಷಿಗಳನ್ನೇ ನಂಬಿ ನುಡಿದ ಇಲ್ಲಿಯ ತೀರ್ಪು ಏಕಪಕ್ಷೀಯ. ವಿಚಾರಣಾ ಆಯೋಗದಲ್ಲಿ ಎಲ್ಲರೂ ಬ್ರಿಟೀಷರೇ ಆಯ್ಕೆಗೊಂಡಾಗಲೇ ಸುರಪುರಕ್ಕೆ ಸತ್ಯ ಸಿಗದೆಂದು ನಿರ್ಧಾರಗೊಂಡಿತು. ೨೪ರ ಹರೆಯದ ತರುಣ ರಾಜನ ಶಕ್ತಿ, ಸಾಮರ್ಥ್ಯ ತುಂಬಾ ಸಮರ್ಥವಾಗಿತ್ತೆಂಬುದು ಮೇಲಿನ ವಿಚಾರಣೆಯ ಒಳಮರ್ಮ. ಕುಟುಂಬದ ಕಲಹಗಳಿಗೆ ಜೀವತುಂಬಿ ಸಂಸ್ಥಾನವನ್ನೇ ಕಬಳಿಸಿದ ಬ್ರಿಟೀಷರ ಕುತಂತ್ರ ಚಿಕ್ಕ ಮಗುವಿಗೂ ಅರ್ಥವಾಗುತ್ತದೆ. ಇವೆಲ್ಲವುಗಳನ್ನು ಎದುರಿಸಿ ನಿಂತ ತರುಣ ರಾಜನ ಧೈರ್ಯ ನಿಜವಾಗಲೂ ಅಮೋಘ.

**ಆಕರ ಸಾಮಗ್ರಿ**

೧. Halappa G.S. & Krishna Rao K.M.(Ed), **History of Freedom Movement in Karnataka**

೨. Kulkarni N.H., **The British Relationship with the Principality of Surapur** (Ph.D)

೩. Taylor, **Story of My Life**

೪. **Hyderabad Residency Correspondence**

೫. **Political Letter From the Court of Directors**

೬. **Foreign Secret Proceedings**

೭. **Foreign Secret Consultation**

೮. **Political Letter to the Court of Directors**

೯. ಕಪಟರಾಳ ಕೃಷ್ಣರಾವ್, ಸುರಪುರ ಸಂಸ್ಥಾನ ಇತಿಹಾಸ

೧೦. ರಂಗರಾಜ ವನದುರ್ಗ, ಸುರಪುರ ಸಂಸ್ಥಾನ : ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ

೧೬

# ಆನೆಗೊಂದಿ ಪಾಳೆಯಗಾರರ ನ್ಯಾಯಾಡಳಿತ

**ಡಾ. ಅಮರೇಶ ಯತಗಲ್**

ಆನೆಗೊಂದಿಯು ಕೊಪ್ಪಳಜಿಲ್ಲೆಯ ಗಂಗಾವತಿ ತಾಲ್ಲೂಕಿನಿಂದ ನೈರುತ್ಯಕ್ಕೆ ೧೨ ಕಿ.ಮೀ. ಅಂತರದಲ್ಲಿ ತುಂಗಭದ್ರಾನದಿಯ ಉತ್ತರದಂಡೆಯಲ್ಲಿದೆ. ಪೌರಾಣಿಕವಾಗಿ ಪಂಪಾಕ್ಷೇತ್ರ, ಭಾಸ್ಕರಕ್ಷೇತ್ರ, ಪಂಪಾತೀರ್ಥ, ವಿರೂಪಾಕ್ಷತೀರ್ಥ, ಕಿಷ್ಕಿಂದಾಕ್ಷೇತ್ರ ಮುಂತಾದ ಹೆಸರುಗಳಿಂದ ಕರೆಯಲ್ಪಡುವ ಈ ಪ್ರದೇಶವನ್ನು, ಶಾಸನಗಳು ಕುಂಜರಕೋಣ, ಹಸ್ತಿನಾವತಿಯೆಂದೂ ವಿಜಯನಗರದ ಅವನತಿಯಾದ ಮೇಲೆ ನರಪತಿಸಂಸ್ಥಾನವೆಂದೂ ಹೆಸರಿಸುತ್ತವೆ.

ಬೇಡಜನಾಂಗದ ಪಾಳೆಯಗಾರಿಕೆಯ ಮೂಲಸ್ಥಳವಾಗಿರುವ ಆನೆಗೊಂದಿಯನ್ನು ರತ್ನಗಿರಿ, ಹರತಿ, ತರೀಕೆರೆ, ಚಿತ್ರದುರ್ಗ ಮುಂತಾದ ಪಾಳೆಯಗಾರ ವಂಶಸ್ಥರು ತಮ್ಮ ಮೂಲಸ್ಥಳವೆಂದು ಹೇಳಿಕೊಂಡಿರುವುದುಂಟು. ವಿಜಯನಗರದ ಮೂಲಸ್ಥಳವಾಗಿದ್ದ ಆನೆಗೊಂದಿಯನ್ನು ವಿಜಯನಗರದ ಮಾತೃಸ್ಥಳವೆಂದು ಕರೆದಿದ್ದಾನೆ ನ್ಯೂನಿಜ್. ಆನೆಗೊಂದಿಯ ನಾಯಕ ಪಾಳೆಯಗಾರರ ಇತಿಹಾಸವನ್ನು ವಿಜಯನಗರಪೂರ್ವ, ವಿಜಯನಗರ ಅವಧಿ ಹಾಗೂ ವಿಜಯನಗರೋತ್ತರವೆಂದು ಮೂರುಭಾಗವಾಗಿ ವಿಭಾಗಿಸ ಬಹುದಾಗಿದೆ.[೧] ಆದರೆ ಇಲ್ಲಿಯವರೆಗೆ ಈ ಪಾಳೆಯಗಾರರ ರಾಜಕೀಯ ಇತಿಹಾಸವನ್ನು ವ್ಯವಸ್ಥಿತವಾಗಿ ರಚಿಸಲಾಗಿಲ್ಲ. ಇದಕ್ಕೆ ಕಾರಣ ಆಕರಗಳ ಕೊರತೆ. ಈ ಮನೆತನದ ವಂಶಸ್ಥರು ತಮ್ಮಲ್ಲಿರುವ ಕೆಲವು ಕಾಗದಪತ್ರಗಳನ್ನು ಒದಗಿಸದೆ, ಸಂಶೋಧಕರಿಗೆ ಸರಿಯಾಗಿ ಸ್ಪಂದಿಸದೇ ಇರುವುದೂ ಕಾರಣ.

ಆನೆಗೊಂದಿ ಪಾಳೆಯಗಾರರ ನ್ಯಾಯಾಡಳಿತದ ಕುರಿತಾಗಿಯೂ ಲಿಖಿತ ಆಕರಗಳ ಕೊರತೆ ಇದೆ. ಹೀಗಾಗಿ ಸ್ಥಳೀಯ ಹಾಗೂ ಆನೆಗೊಂದಿಯ ಸುತ್ತಲಿನ ಕೆಲವು ಹಳ್ಳಿಗಳ ವಕ್ತೃಗಳನ್ನು ಸಂದರ್ಶಿಸಿ, ಮಾಹಿತಿಯನ್ನು ಸಂಗ್ರಹಿಸಿ ಈ ಲೇಖನವನ್ನು ಸಿದ್ಧಪಡಿಸಲಾಗಿದೆ. ಈ ಮಾಹಿತಿಯೇ ಅಂತಿಮವಲ್ಲ. ಕೆಲವು ಲಿಖಿತ ದಾಖಲೆಗಳೇನಾದರೂ ಲಭ್ಯವಾದರೆ ಈ

ವಿಷಯಕ್ಕೆ ಇನ್ನಷ್ಟು ಪುಷ್ಟಿ ದೊರೆಯಬಹುದು. ಆ ನಿಟ್ಟಿನಲ್ಲಿ ಸಂಶೋಧಕರು ಪ್ರಯತ್ನಿಸಬೇಕಾಗಿದೆ.

ವಿಜಯನಗರಪೂರ್ವದಲ್ಲಿ ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಕುಮ್ಮಟದ ಅರಸರು ಮುಂತಾದವರು ಆನೆಗೊಂದಿಯ ಪ್ರದೇಶವನ್ನು ಆಳಿದ್ದಾರೆ. ಆನೆಗೊಂದಿಯ ನ್ಯಾಯಾಡಳಿತದ ಅವಧಿಯಲ್ಲಿ ಆನೆಗೊಂದಿಯ ಪಾಳೆಯಗಾರರು, ವಿಜಯನಗರದ ಅರಸರ ಆಡಳಿತಕ್ಕೆ ವಿಧೇಯರಾಗಿದ್ದುದರಿಂದ, ವಿಜಯನಗರ ನ್ಯಾಯತೀರ್ಮಾನದ ವಿಧಿ-ವಿಧಾನಗಳೇ ಇಲ್ಲಿ ಜಾರಿಯಲ್ಲಿದ್ದವು. ಆ ಸಂದರ್ಭದಲ್ಲಿ ಆನೆಗೊಂದಿಯೇ ಮುಖ್ಯ ನ್ಯಾಯತೀರ್ಮಾನದ ಸ್ಥಳವಾಗಿತ್ತು. ಅನೇಕ ಅಪರಾಧಿಗಳನ್ನು ಬಂಧಿಸಿ ಆನೆಗೊಂದಿಯ ಜೈಲಿನಲ್ಲಿಡುತ್ತಿದ್ದರು. ವಿಜಯನಗರದ ಸದಾಶಿವರಾಯನ ಅಧಿಕಾರಾವಧಿಯಲ್ಲಿ ಕೆಂಪೇಗೌಡನನ್ನು ವಿಜಯನಗರಕ್ಕೆ ಕರೆಯಿಸಿಕೊಂಡು ತನ್ನ ಕೃತ್ಯಗಳಿಗೆ ಕಾರಣ ನೀಡಬೇಕೆಂದು ಕೇಳಲಾಯಿತು. ಅಲ್ಲದೆ, ಅವನನ್ನು ಆನೆಗೊಂದಿಯಲ್ಲಿ ಐದುವರ್ಷಕಾಲ ಬಂಧನದಲ್ಲಿಡಲಾಗಿತ್ತು.[೨]

ವಿಜಯನಗರೋತ್ತರಕಾಲದಲ್ಲಿ ಆನೆಗೊಂದಿಯ ಪಾಳೆಯಗಾರರು ಸ್ವತಂತ್ರವಾಗಿ ಆಳ್ವಿಕೆಮಾಡಲು ಪ್ರಾರಂಭಿಸಿದರೂ ಅನೇಕ ಸಲ, ಬೇರೆ ಬೇರೆಯವರ ಆಡಳಿತದ ಅಧೀನದಲ್ಲಿ ಕಾಲಕಳೆಯಬೇಕಾಗಿತ್ತು. ಕ್ರಿ.ಶ.೧೭೪೯ರಲ್ಲಿ ಮರಾಠ ಪೇಶ್ವೆಗಳು, ಕ್ರಿ.ಶ.೧೭೭೪ರಲ್ಲಿ ಹೈದರಾಲಿ ಮತ್ತು ಕ್ರಿ.ಶ.೧೭೮೬ರಲ್ಲಿ ಟಿಪ್ಪುಸುಲ್ತಾನರ ವಶಕ್ಕೆ ಆನೆಗೊಂದಿ ಒಳಪಟ್ಟಿತ್ತು. ನಂತರದಲ್ಲಿ ಕ್ರಿ.ಶ.೧೭೯೦ರಲ್ಲಿ ಬ್ರಿಟಿಷರು ಮತ್ತು ಹೈದರಾಬಾದ್ ನಿಜಾಮರು ಮತ್ತು ಪೇಶ್ವೆಗಳ ನಡುವಿನ ಒಪ್ಪಂದದಂತೆ ಆನೆಗೊಂದಿ ಪ್ರತಿಷ್ಠಾಪಿಸಲ್ಪಟ್ಟಿತಾದರೂ ನಂತರದಲ್ಲಿ ಕೆಲವು ವರ್ಷಗಳ ಕಾಲ ಬ್ರಿಟಿಷರು, ಮತ್ತೆ ಕೆಲವು ವರ್ಷಗಳ ಕಾಲ ಹೈದರಾಬಾದ್ ನಿಜಾಮರ ಅಧೀನದಲ್ಲಿ ಆಡಳಿತ ನಿರ್ವಹಣೆ ಮಾಡಬೇಕಾಗಿತ್ತು. ಆ ನಂತರ ಹೈದರಾಬಾದ್ ನಿಜಾಮರು ಕೆಲವು ಹಳ್ಳಿಗಳನ್ನು ಆನೆಗೊಂದಿ ಪಾಳೆಯಗಾರರ ಅಧೀನಕ್ಕೆ ಬಿಟ್ಟರು. ಆ ಹಳ್ಳಿಗಳ ಮೇಲಿನ ಸಂಪೂರ್ಣ ಅಧಿಕಾರ ಇವರ ಮೇಲಿತ್ತು. ಆ ಸಂದರ್ಭದಲ್ಲಿ ನ್ಯಾಯತೀರ್ಮಾನದ ಅಧಿಕಾರವೂ ಇವರಿಗೇ ಇತ್ತು. ಇಡೀ ಸಂಸ್ಥಾನದ ಶಿಸ್ತನ್ನು ಕಾಪಾಡಿಕೊಂಡು ಹೋದರು. ಈ ವ್ಯವಸ್ಥೆಯನ್ನು ಆನೆಗೊಂದಿ ಶಿಸ್ತುವ್ಯವಸ್ಥೆ ಎಂದು ಕರೆಯುತ್ತಿದ್ದರು.[೩]

ಆನೆಗೊಂದಿ ಪ್ರದೇಶದಲ್ಲಿ ನಮಗೆ ಹೆಚ್ಚಾಗಿ ಕಬ್ಬೇರು(ಗಂಗಾಮತಸ್ಥರು), ಕುರುಬರು, ಬೇಡರು, ಮಾದಿಗರು, ವೀರಶೈವರು, ಕ್ಷತ್ರಿಯರು, ಬ್ರಾಹ್ಮಣರು ಹಾಗೂ ವೈಶ್ಯರು ಕಂಡು ಬರುತ್ತಾರೆ. ಇವರುಗಳೆಲ್ಲ ತಮ್ಮ ತಮ್ಮ ಜಾತಿಯ ಕಲಹಗಳನ್ನು ಆಯಾ ಕುಲಕ್ಕೆ ಸಂಬಂಧಿಸಿದ ವ್ಯಕ್ತಿಯಿಂದಲೇ ಬಗೆಹರಿಸಿಕೊಳ್ಳುತ್ತಿದ್ದರು. ನ್ಯಾಯವನ್ನು ಬಗೆಹರಿಸಲು ಪಂಚಾಯಿತಿ ಪದ್ಧತಿಯನ್ನು ಅನುಸರಿಸುತ್ತಿದ್ದರು. ಅಂದರೆ ಆಯಾ ಜಾತಿಯ ಮುಖಂಡರನ್ನು ಕರೆಯಿಸಿ, ಅವರಿಗೆ ತಿಳಿಹೇಳುತ್ತಿದ್ದರು. ಆ ಕಲಹ ಮತ್ತೆ ಮರುಕಳಿಸದಂತೆ

ಸೂಚನೆ ನೀಡುತ್ತಿದ್ದರು. ಒಂದುವೇಳೆ ಮತ್ತೆ ಆ ಕಲಹ ಮುಂದುವರೆದರೆ ಅಥವಾ ಮರುಕಳಿಸಿದರೆ ಸ್ಥಳೀಯ ಮುಖಂಡರಿಗೆ ಶಿಕ್ಷೆ ನೀಡುವ ಅಧಿಕಾರವಿರುತ್ತಿತ್ತು. ಸಲಹೆಗಳನ್ನು ಜಾತಿಯ ಪ್ರಮುಖರೆಲ್ಲ ಕಡ್ಡಾಯವಾಗಿ ಪಾಲಿಸಬೇಕಿತ್ತು. ನ್ಯಾಯ ಇತ್ಯರ್ಥಗೊಳಿಸಲು ಇಡೀ ರಾಜ್ಯದಾದ್ಯಂತ ಒಂದೇ ವಿಧಾನವನ್ನು ಅನುಸರಿಸುತ್ತಿದ್ದರು. ಆದರೆ ಶಿಕ್ಷೆಗಳು ಅಪರಾಧಕ್ಕನುಗುಣವಾಗಿದ್ದವು.

ಆನೆಗೊಂದಿ ಪಾಳೆಯಗಾರರ ಕಾಲದ ನ್ಯಾಯತೀರ್ಮಾನವು ಈ ಕೆಳಗಿನಂತೆ ಆರು ಹಂತಗಳಲ್ಲಿ ನಡೆಯುತ್ತಿತ್ತು:

ಅರಸ

ಪಂಚರು (ಐದು ಜನರು)

ಯಜಮಾನರು / ಹಿರಿಯರು (ಹತ್ತು ಜನರು)

ಒಟ್ಟು ದೈವದವರು

ತಳವಾರ

ಕುಟುಂಬ.[೪]

ಕುಟುಂಬ ಕುಟುಂಬಗಳ ಮಧ್ಯೆ, ಇಲ್ಲವೆ ಕುಟುಂಬದ ಸದಸ್ಯರುಗಳಲ್ಲಿ ಮನೆ, ಹೊಲ, ಬೆಳ್ಳಿ, ಬಂಗಾರ, ಆಸ್ತಿ-ಪಾಸ್ತಿಗಳಿಗೆ ಸಂಬಂಧಿಸಿದಂತೆ ಜಗಳವಾದರೆ ಕುಟುಂಬದ ಯಜಮಾನನೇ ಬಗೆಹರಿಸುತ್ತಿದ್ದ. ಆತನ ಸಮ್ಮುಖದಲ್ಲಿಯೇ ತೀರ್ಮಾನವಾದರೆ ಅಲ್ಲಿಗೇ ಮುಗಿಯುತ್ತಿತ್ತು. ಆ ಕುಟುಂಬದ ಸದಸ್ಯರು ಯಜಮಾನನ ನಿರ್ಣಯಕ್ಕೆ ಒಪ್ಪಬೇಕಾಗಿತ್ತು. ಕೆಲವು ಸಲ ಕುಟುಂಬದ ಯಜಮಾನ ಮತ್ತು ಕುಟುಂಬದ ಸದಸ್ಯರಿಗೂ ಜಗಳವಾದರೆ, ಈ ವಿಷಯ ತೀರ್ಮಾನಕ್ಕೆ ಬರದೆ ಹೋದರೆ ಊರಿನ ತಳವಾರನಿಗೆ ತಿಳಿಸಲಾಗುತ್ತಿತ್ತು. ಇಲ್ಲವೇ ಈ ತಳವಾರನೇ ವಿಷಯವನ್ನು ಪತ್ತೆಹಚ್ಚುತ್ತಿದ್ದ. ಆಗ ಊರಿನ ಒಟ್ಟು ದೈವದವರನ್ನು ಒಂದೆಡೆ ಸೇರಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದ. ರಾಜನಿಗೂ ಈ ವಿಷಯವನ್ನು ತಿಳಿಸಿರಲಾಗುತ್ತಿತ್ತು. ಆಗ ಒಟ್ಟು ದೈವದವರು ಒಂದು ನಿಗದಿತ ದಿನದಂದು ನಿಗದಿತ ಸ್ಥಳದಲ್ಲಿ ಸೇರುತ್ತಿದ್ದರು. ಅಂದು ಶ್ರೀರಂಗನಾಥದೇವಾಲಯದ ಕಟ್ಟೆಯ ಮೇಲೆ, ಇಲ್ಲವೆ ಗಗನಮಹಲ್‌ನ ಮುಂದಿನ ಕಟ್ಟೆಯ ಮೇಲೆ ನ್ಯಾಯದೈವದವರ ಸಮ್ಮುಖದಲ್ಲಿ ವಿಷಯ ಚರ್ಚಿಸಲ್ಪಡುತ್ತಿತ್ತು. ಒಟ್ಟು ದೈವದವರಲ್ಲಿ ಪ್ರತಿ ಜಾತಿಯ ಮುಖಂಡರುಗಳು ಸೇರಿರುತ್ತಿದ್ದರು. ಅರ್ಚಕರು ಅಂದಿನ ಅಧ್ಯಕ್ಷ/ಮುಖ್ಯಸ್ಥಾನವನ್ನು ವಹಿಸಿಕೊಂಡಿರುತ್ತಿದ್ದರು. ವಾದಿ ಮತ್ತು ಪ್ರತಿವಾದಿಯರು ತಮ್ಮ ವಾದಗಳನ್ನು ಮಂಡಿಸುತ್ತಿದ್ದರು.

ದೈವದಲ್ಲಿಯೂ ನ್ಯಾಯತೀರ್ಮಾನವಾಗದೇ ಹೋದರೆ, ಹತ್ತು ಜನ ಪ್ರಮುಖ ಯಜಮಾನರ ಒಂದು ಸಮಿತಿ ಇರುತ್ತಿತ್ತು. ಆ ಸಮಿತಿಯಲ್ಲಿ ಅದು ಚರ್ಚಿತವಾಗುತ್ತಿತ್ತು. ಅಲ್ಲಿಯೂ ಬಗೆಹರಿಯದೆ ಹೋದರೆ ಪಂಚರ ಕಟ್ಟೆಗೆ ಹೋಗುತ್ತಿತ್ತು. ಈ ಪಂಚರಲ್ಲಿ

ಅರ್ಚಕ, ಬೇಡಜಾತಿಯ ಒಬ್ಬ, ಮಂತ್ರಿಹುದ್ದೆಯ ಒಬ್ಬ, ಕ್ಷತ್ರಿಯ ಸಮಾಜದ ಒಬ್ಬ, ವೀರಶೈವ ಜಾತಿಯ ಒಬ್ಬ-ಹೀಗೆ ಐದುಜನರ ಸಮ್ಮುಖದಲ್ಲಿ ನ್ಯಾಯತೀರ್ಮಾನ ವಾಗುತ್ತಿತ್ತು. ಇಲ್ಲಿಯೂ ನ್ಯಾಯವು ನಿರ್ಣಯವಾಗದಿದ್ದರೆ, ನೇರವಾಗಿ ಆನೆಗೊಂದಿ ಅರಸನಿಗೆ ತಲುಪುತ್ತಿತ್ತು. ಅರಸನದೇ ಅಂತಿಮ ನಿರ್ಧಾರ. ಅರಸನು ಪ್ರಜೆಗಳ ಕಷ್ಟ-ಸುಖಗಳಲ್ಲಿ ಭಾಗಿಯಾಗಿರುತ್ತಿದ್ದ. ಪ್ರಜೆಗಳ ಕುರಿತಾಗಿ ಅಪಾರ ಕಾಳಜಿಯನ್ನು ಹೊಂದಿದ್ದ ಈತನ ಕುರಿತಾಗಿಯೂ ಪ್ರಜೆಗಳಿಗೆ ಅಷ್ಟೇ ಗೌರವ-ಭಯ-ಭಕ್ತಿ ಇತ್ತು. ಜನಪದನುಡಿ ಯೊಂದು ಪ್ರಜೆಗಳೊಂದಿಗಿನ ಇವರ ಸಂಬಂಧದ ಕುರಿತು ಈ ರೀತಿ ಹೇಳುತ್ತದೆ :

ಹಂಪಿಯ ಹೊಳಿ ಚಂದ, ಪಂಪನ ಗುಡಿ ಚಂದ
ಹೇಮಾದ್ರಿ ಚಂದ ಪರಿಸಿಗೆ | ಆನೆಗೊಂದಿ
ರಾಜರಿಗೆ ಚಂದ ಪ್ರಜೆಗಳು.[೬]

ಅರಸನು ನ್ಯಾಯತೀರ್ಮಾನದ ಸಂದರ್ಭದಲ್ಲಿ ಮಹಾಮಂತ್ರಿ, ಕರಣಿಕ, ಪಟೇಲ ಮುಂತಾದ ಅಧಿಕಾರಿಗಳೊಂದಿಗೆ ವಿಷಯವನ್ನು ಚರ್ಚಿಸುತ್ತಿದ್ದ. ಮಹಿಳೆಯರಿಗೆ ಪಂಚಾಯ್ತಿಕಟ್ಟೆಯ ಮೇಲೆ ಕುಳಿತು ನ್ಯಾಯತೀರ್ಪು ಕೊಡುವ ಅಧಿಕಾರವಿಲ್ಲದಿದ್ದರೂ ರಾಣಿ ಕುಪ್ಪಮ್ಮ ಅಧಿಕಾರಸ್ಥಳಾದಾಗ ಈ ಪಂಚರಲ್ಲಿ ಒಬ್ಬ ಮಹಿಳೆಯನ್ನು ಸದಸ್ಯಳನ್ನಾಗಿ ಮಾಡಿದ್ದಳು. ಇದರಿಂದ ಈ ರಾಣಿಯಲ್ಲಿದ್ದ ಸಮಾನತೆಯ ದೃಷ್ಟಿಕೋನವನ್ನು ಅರಿಯಬಹುದಲ್ಲದೆ, ಕೌಟುಂಬಿಕ ಸಮಸ್ಯೆಗಳು ಮಹಿಳೆಗೆ ಹೆಚ್ಚು ಅರ್ಥವಾಗಿರುತ್ತಿದ್ದವು ಎಂಬ ಅಂಶವನ್ನು ಮನಗಾಣಬಹುದು.

ಅರಸನು ನೇರವಾಗಿ ದೂರನ್ನು ಸ್ವೀಕರಿಸಿ, ನ್ಯಾಯದಾನ ಮಾಡುತ್ತಿದ್ದರೂ ಆ ಸಂದರ್ಭದಲ್ಲಿ ಸ್ವತಃ ಸಭೆನಡೆಸಿ, ತನಗೆ ಆತ್ಮೀಯರಾದವರ ಸಮ್ಮುಖದಲ್ಲಿ ಚರ್ಚೆಮಾಡಿ, ಅಂತಿಮದಲ್ಲಿ ವಾದಿ ಮತ್ತು ಪ್ರತಿವಾದಿಗಳೀರ್ವರನ್ನೂ ಕರೆಯಿಸಿ ಚರ್ಚಿಸಿ, ನಿಷ್ಪಕ್ಷಪಾತದಿಂದ ತೀರ್ಪನ್ನು ನೀಡುತ್ತಿದ್ದ. ಆಗ ಅಧಿಕಾರಿಗಳು, ಮಂತ್ರಿಗಳು ಹಾಗೂ ಸ್ಥಳೀಯ ಹಿರಿಯರ ಪಾತ್ರವು ಮುಖ್ಯವಾಗಿರುತ್ತಿತ್ತು. ಅರಸನಿಗೆ ಅಂತಿಮ ಅಧಿಕಾರವಿದ್ದರೂ ಮಂತ್ರಿಗಳು, ಆಡಳಿತಗಾರರ ಸಲಹೆಯನ್ನು ಪಡೆಯುತ್ತಿದ್ದ. ಧಾರ್ಮಿಕವ್ಯಾಜ್ಯಗಳನ್ನು ಅರ್ಚಕರ ಸಮ್ಮುಖದಲ್ಲಿ ಬಗೆಹರಿಸಲಾಗುತ್ತಿತ್ತು. ಅರ್ಚಕರು ಇಂಥ ವ್ಯಾಜ್ಯಗಳ ತೀರ್ಮಾನದಲ್ಲಿ ಅರಸನಿಗೆ ಸಲಹೆಗಳನ್ನು ನೀಡುತ್ತಿದ್ದರು.

ಆನೆಗೊಂದಿ ಅರಸರು ಕೆಲವು ಸಲ ಸಂಚಾರಿನ್ಯಾಯವನ್ನು ಬಗೆಹರಿಸುತ್ತಿದ್ದರು. ಕಮಲಾಪುರದ ಬೇಡರು ಇಂದಿಗೂ ಆನೆಗೊಂದಿ ರಾಜರಿಗೆ ಗೌರವ ನೀಡುತ್ತಾರೆ. ಯುಗಾದಿಯ ಸಂದರ್ಭದಲ್ಲಿ ರಾಜನನ್ನು ಊರಿಗೆ ಆಹ್ವಾನಿಸುವರು. ರಾಜ ಬಂದರೆ ಹಿರೇಕೇರಿಯಲ್ಲಿರುವ ಸಿಂಹಾಸನದ ಕಟ್ಟೆಯ ಮೇಲೆ ಕುಳಿತುಕೊಳ್ಳುವನು. ಇದು ರಾಜರು ನ್ಯಾಯತೀರ್ಮಾನ ಮಾಡುವ ಸ್ಥಳವಾಗಿತ್ತು.[೭] ಇಂದಿಗೂ ಕಮಲಾಪುರದ ಜನ ಆನೆಗೊಂದಿ ರಾಜರ ಕುರಿತಾಗಿ ಅಪಾರ ಗೌರವ ಹೊಂದಿರುವರಲ್ಲದೆ, ಅರಸನ ಮಾತನ್ನೇ ನಂಬುತ್ತಾರೆ.

ಆದರೆ ಅರಸನು ಬಗೆಹರಿಸುವ ನ್ಯಾಯಗಳ ಸಂಖ್ಯೆ ಬಹಳ ಕಡಿಮೆ. ಏಕೆಂದರೆ ಮೊದಲೇ ಪಂಚರು, ಇಲ್ಲವೇ ದೈವದವರು ನ್ಯಾಯವನ್ನು ಒಂದು ಇತ್ಯರ್ಥಕ್ಕೆ ತಂದು ಬಗೆಹರಿಸಿರುತ್ತಿದ್ದರು.

ರಾಜ್ಯದಲ್ಲಿ ರಾಜನ ಅಪ್ಪಣೆಯನ್ನು ಪಾಲಿಸದಿದ್ದರೆ; ಅಂತರ್‌ಜಾತಿ ವಿವಾಹ, ಸ್ತ್ರೀ-ಪುರುಷರ ಕೆಲವು ಸಮಸ್ಯೆಗಳು ರಾಜ್ಯದ ನೀತಿ-ನಿಯಮಗಳನ್ನು ಉಲ್ಲಂಘಿಸಿದರೆ; ಕಳ್ಳತನ ಮಾಡಿದರೆ; ಕೊಲೆ, ಸುಲಿಗೆ, ಹಾದರ, ಮೋಸ, ವಂಚನೆ ಇತ್ಯಾದಿಗಳನ್ನು ಎಸಗಿದರೆ ಅವರಿಗೆ ಬೇರೆ ಬೇರೆ ರೀತಿಯ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಅಂದರೆ ಅಪರಾಧಗಳಿಗೆ ಅನುಗುಣವಾಗಿ ದಂಡ ವಿಧಿಸಲಾಗುತ್ತಿತ್ತು. ಆರಾಧ್ಯದೇವತೆಗಳಾದ ಶ್ರೀರಂಗನಾಥ, ದುರ್ಗಾದೇವಿಯರ ಸಮ್ಮುಖದಲ್ಲಿ ವಾದಿ-ಪ್ರತಿವಾದಿಗಳಿಬ್ಬರೂ ಪ್ರಮಾಣವನ್ನು ಮಾಡಬೇಕಾಗುತ್ತಿತ್ತು. ಕೆಲವು ಸಲ ಸಮಾಜದಿಂದ ಬಹಿಷ್ಕಾರ ಹಾಕಲಾಗುತ್ತಿತ್ತು. ಆಸ್ತಿ ಮುಟ್ಟುಗೋಲು, ಹಣದ ರೂಪದಲ್ಲಿ ದಂಡ, ರಾಜದ್ರೋಹದ ಕೆಲಸ ಮಾಡಿದರೆ ಆನೆ ಕಾಲಿನಿಂದ ತುಳಿಸುವುದು, ತಲೆಬೋಳಿಸಿ ಕತ್ತೆಯಮೇಲೆ ಮೆರವಣಿಗೆ, ಕುಲದಿಂದ ಹೊರಹಾಕುವುದು, ದೈವಕ್ಕೆ ತಪ್ಪಿನ ಊಟ ಹಾಕುವುದು, ಆಕಸ್ಮಾತಾಗಿ ಕದ್ದವ್ಯಕ್ತಿ ಸಿಕ್ಕರೆ ಕದ್ದಿರುವ ವಸ್ತುವಿನ ಎರಡು ಪಟ್ಟನ್ನು ನೀಡುವುದು, ಅದರಲ್ಲಿ ಒಂದುವರೆಪಟ್ಟು ಆಸ್ತಿಯನ್ನು ವಾರಸುದಾರನಿಗೆ, ಉಳಿದ ಅರ್ಧಭಾಗವನ್ನು ಸರಕಾರದ ಖಜಾನೆಗೆ ನೀಡಬೇಕಾಗಿತ್ತು. ಕೆಲವು ಸಲ ಆತನ ಇಡೀ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುತ್ತಿತ್ತು. ಬಿರುಬಿಸಿಲಿನಲ್ಲಿ ನಿಲ್ಲಿಸಿ ಆತನಿಂದ ತಪ್ಪೊಪ್ಪಿಗೆಯನ್ನು ಪಡೆದುಕೊಳ್ಳಲಾಗುತ್ತಿತ್ತು. ಇಲ್ಲಿ ಸೆರೆಮನೆ ಇತ್ತು. ಹೀಗಾಗಿ ಕೆಲವು ಸಲ ಎರಡು ದಿನದಿಂದ ಹದಿನೈದು ದಿನಗಳವರೆಗೂ ಅಪರಾಧಿಯನ್ನು ಸೆರೆಯಲ್ಲಿಡುತ್ತಿದ್ದರು.

ಶ್ರೀರಂಗದೇವರಾಯಲು ಅರಸರು ಅಧಿಕಾರದಲ್ಲಿದ್ದಾಗ ಕಮಲಾಪುರದ ವ್ಯಕ್ತಿಯೊಬ್ಬ ಹರಿಗೋಲಿನಲ್ಲಿ ನದಿಯನ್ನು ದಾಟುವಾಗ ಅಂಬಿಗನ ಜೊತೆ ಹಣ ನೀಡುವುದಿಲ್ಲವೆಂದು ಜಗಳ ತೆಗೆದ. ಹರಿಗೋಲಿನಲ್ಲಿದ್ದ ಎಲ್ಲರೂ ತಿಳಿಸಿ ಹೇಳಿದರೂ ಕೇಳಲಿಲ್ಲ. ಕೊನೆಗೆ ಆತನನ್ನು ಹಿಡಿದು ತಂದು ಆನೆಗೊಂದಿ ಅರಸರ ಬಳಿ ನಿಲ್ಲಿಸಲಾಯಿತು. ಆತ ತನ್ನ ತಪ್ಪನ್ನು ಒಪ್ಪಿಕೊಳ್ಳಲಿಲ್ಲ. ಅರಸ ಆತನನ್ನು ಸುಮಾರು ಹನ್ನೆರಡು ದಿನಗಳವರೆಗೆ ಆನೆಗೊಂದಿಯ ಸೆರೆಯಲ್ಲಿಟ್ಟ. (ಸೆರೆಮನೆ ಗಗನಮಹಲ್‌ನ ಹಿಂದುಗಡೆ ಇತ್ತು ಎಂದು ಹೇಳುತ್ತಾರೆ. ಈಗ ಅದು ನಾಶವಾಗಿದೆ). ತನ್ನ ತಪ್ಪನ್ನು ಒಪ್ಪಿಕೊಂಡ ನಂತರ ಆ ಹಣದ ಎರಡುಪಟ್ಟನ್ನು ವಸೂಲಿಮಾಡಿ ಆತನನ್ನು ಬಿಡುಗಡೆಗೊಳಿಸಲಾಯಿತು. ಅಂದು ಆನೆಗೊಂದಿ ಅರಸರು ಆನೆಗೊಂದಿಯ ಅಂಬಿಗರಿಗೆ ಹರಿಗೋಲು ಹಾಕಲು ಅನುಮತಿ ನೀಡಿದ್ದರಲ್ಲದೆ, ಪ್ರತಿವರ್ಷ ರಾಜ್ಯದ ಖಜಾನೆಗೆ ಇಂತಿಷ್ಟು ಹಣವೆಂದು ನಿಗದಿ ಮಾಡಿದ್ದರು. ಆಗ ಗಂಗಾವತಿ, ಮಲ್ಲಾಪುರ, ಸಂಗಾಪುರದ ಜನರು ಹಂಪಿ, ಹೊಸಪೇಟೆ, ಕಮಲಾಪುರಗಳ ಹೊಲ-ಗದ್ದೆಗಳಿಗೆ ತೆರಳಬೇಕಾದರೆ ಅಂಬಿಗರ ಅವಶ್ಯಕತೆ ಇದ್ದೇ ಇತ್ತು. ಹೀಗಾಗಿ ಈ



ಗಗನಮಹಲ್, ಆನೆಗೊಂದಿ ಸಂಸ್ಥಾನ



ಆನೆಗೊಂದಿ ಪಾಳೆಯಗಾರರ ಕಾಲದ ಆಡಳಿತವರ್ಗ

ಭಾಗದ ಅಂಬಿಗರ ವೃತ್ತಿಗೆ ಅರಸರ ಪ್ರೋತ್ಸಾಹವಿದ್ದಿತು. ಇದಕ್ಕೆ ಸಾಕ್ಷಿಯಾಗಿ ಹುಚ್ಚಪ್ಪಯ್ಯಮಠದ ಹತ್ತಿರ ಹುಟ್ಟು (ಹರಗೋಲನ್ನು ನಡೆಸುವ ಸಾಧನ) ಹಿಡಿದ ಅಂಬಿಗರ ದಂಪತಿಗಳ ಶಿಲ್ಪ ನಮಗೆ ಈಗಲೂ ನೋಡಲು ಲಭ್ಯವಿದೆ. ಅಲ್ಲದೆ, ಹೊಳೆಯ ಹತ್ತಿರ ಅಂಬಿಗರಿಗೆ ರಾಜರು ದಾನಸೀಡಿದ ಹಾಗೂ ಇತರ ದಾನಶಾಸನಗಳೂ ಇವೆ.[೮]

ಆನೆಗೊಂದಿಯಲ್ಲಿ ಗೋಕುಲಾಷ್ಟಮಿಯ ಆಚರಣೆಯನ್ನು ವಿಜೃಂಭಣೆಯಿಂದ ಆಚರಿಸುತ್ತಿದ್ದರು. ಅರಮನೆಯ ಮುಂಭಾಗದಲ್ಲಿ ವಿವಿಧ ಆಟೋಟಗಳು, ಹುಟ್ಟು ಒಡೆಯುವ ಕಾರ್ಯಕ್ರಮ ಜರುಗುತ್ತಿದ್ದವಲ್ಲದೆ, ಎಂಟು ಅಡಿ ಎತ್ತರದ ಕಟ್ಟಿಗೆಗೆ ಬೇವಿನ ರಸ ಹಾಗೂ ಇತರ ಜಾರುವ ವಸ್ತುಗಳನ್ನು ಸವರಿ, ಬಿಸಿಲಿಗೆ ಒಣಗಿಸಿ, ಗೋಕುಲಾಷ್ಟಮಿಯ ದಿನ ಅದನ್ನು ವಿವಿಧ ರೀತಿಯಿಂದ ಅಲಂಕರಿಸಿ ಅರಮನೆಯ ಮುಂದೆ ನೆಡುತ್ತಿದ್ದರು. ಅದರ ಮೇಲ್ಭಾಗದಲ್ಲಿ ಬೆಳ್ಳಿಯ ನಾಣ್ಯಗಳನ್ನು ಜೋತುಬಿಟ್ಟಿರಲಾಗುತ್ತಿತ್ತು. ಕಂಬದ ಮೇಲಕ್ಕೆ ಏರಿ ಅದನ್ನು ಯಾರು ಪಡೆಯುವರೋ ಅವರಿಗೆ ಬಹುಮಾನ ವಿತರಿಸಲಾಗುತ್ತಿತ್ತು. ಒಂದುಸಲ ರಾಜಾ ತಿರುಮಲದೇವರಾಯ ಅಧಿಕಾರದಲ್ಲಿದ್ದಾಗ, ಬಹುಮಾನ ಪಡೆದ ವ್ಯಕ್ತಿಯ ಕುರಿತಾಗಿ ಕುರುಬಜಾತಿಯ ವ್ಯಕ್ತಿಯೊಬ್ಬ ಕುಡಿದು ಕೂಗಾಡಿದ್ದಕ್ಕಾಗಿ ಅರಸರು ಆತನನ್ನು ಎರಡು ದಿನ ತಲೆಯಮೇಲೆ ಕಲ್ಲುಹೊರಿಸಿ ನಿಲ್ಲಿಸಿದ್ದರು. ಅಲ್ಲದೆ, ಊರಿನ ಎಲ್ಲಾ ಪ್ರಮುಖರ ಸಮ್ಮುಖದಲ್ಲಿ ಇನ್ನೊಂದು ಸಲ ತಪ್ಪನ್ನು ಮಾಡುವುದಿಲ್ಲವೆಂದು ಕ್ಷಮೆಯಾಚಿಸಿದ ಮೇಲೆ ಶ್ರೀರಂಗನಾಥಸ್ವಾಮಿಯ ದೇವಾಲಯವನ್ನು ನೂರೊಂದುಬಾರಿ ಸುತ್ತುಹಾಕಿಸಿದ್ದರು.[೮]

ರಾಜದ್ರೋಹದ ಕೆಲಸ ಮಾಡುವವರಿಗೆ ಉಗ್ರವಾದ ಶಿಕ್ಷೆಯನ್ನು ನೀಡಲು ಹಿಂದೆ ಮುಂದೆ ನೋಡುತ್ತಿರಲಿಲ್ಲ. ಆನೆಗೊಂದಿಯ ಅರಸರಲ್ಲಿದ್ದ ಸಂಪತ್ತು ಅನ್ಯರ ದಾಳಿಯಿಂದ ಹಾಳಾಗಬಹುದೆಂಬ ಭಯದಿಂದ ಆಪತ್ತಿನ ನಿಧಿಯಾಗಿ ಕೋಟೆಯ ಒಂದು ಸ್ಥಳದಲ್ಲಿ





ಶ್ರೀರಂಗದೇವರಾಯಲು, ರಾಣಿಕುಪ್ಪಮ್ಮ, ಆನೆಗೊಂದಿ ಸಂಸ್ಥಾನ

ಚಿನ್ನ, ಬೆಳ್ಳಿ, ವಜ್ರ ಮುಂತಾದ ಅಮೂಲ್ಯವಸ್ತುಗಳನ್ನು ಇಡಲಾಗಿತ್ತು. ಈ ವಿಷಯ ಆನೆಗೊಂದಿಯ ಮಂತ್ರಿ ತಿಮ್ಮಣ್ಣನಿಗೆ ಗೊತ್ತಿತ್ತು. ಇದನ್ನು ಹೇಗಾದರೂ ಮಾಡಿ ಕದಿಯ ಬೇಕೆಂದು ಆತ ನಿರ್ಧರಿಸಿದ್ದ. ಈ ವಿಷಯ ಅರಿತ ಆನೆಗೊಂದಿಯ ಅರಸ ತಿಮ್ಮಣ್ಣನ ಎರಡೂ ಕಣ್ಣುಗಳನ್ನು ಕೀಳಿಸಿದ. ಹೀಗೆ ಅನುಮಾನಾಸ್ಪದ ವ್ಯಕ್ತಿಗಳಿಗೆ ಶಿಕ್ಷೆನೀಡುವಲ್ಲಿ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಅರಸರ ತೀರ್ಮಾನವೇ ಅಂತಿಮವಾಗಿರುತ್ತಿತ್ತು.[೯]

ಕ್ರಿಸ್ತಶಕ ೧೭೯೦ರಲ್ಲಿ ಆನೆಗೊಂದಿಯು ಬ್ರಿಟಿಷ್ ಮತ್ತು ಹೈದರಾಬಾದ್‌ನ ನಿಜಾಮರ ಆಡಳಿತಕ್ಕೆ ಒಳಪಟ್ಟಾಗ ಇಲ್ಲಿ ಒಂದು ಪ್ರತ್ಯೇಕ ನ್ಯಾಯಾಲಯದ ವ್ಯವಸ್ಥೆಯನ್ನು ಮಾಡಿದರು. ಆಗ ಪ್ರತ್ಯೇಕ ನ್ಯಾಯಾಲಯ, ಪ್ರತ್ಯೇಕ ಕಂದಾಯ ಮತ್ತು ಪ್ರತ್ಯೇಕ ಪೊಲೀಸ್ ಇಲಾಖೆಗಳನ್ನು ಪ್ರಾರಂಭಿಸಲಾಯಿತು. ಇಲ್ಲಿ ಬಂದೇಅಲಿಸಾಬ್ ಕೊಪ್ಪಳ, ಗೌಸ್ ಮೊನುದ್ದೀನ್ ಮುಂತಾದವರು ನ್ಯಾಯಾಧೀಶರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ಇವರಿಗೆ ನಾಜಿಮ್ ಎಂದು ಕರೆಯುತ್ತಿದ್ದರು. ಇವರುಗಳ ಮನೆ ಇಂದಿನ ಗಗನಮಹಲ್‌ನ ಮುಂದೆ ಇತ್ತು. ಅದನ್ನು ನಾಜಿಮ್‌ಸಾಬರ ಬಂಗಲೆ, ನಾಜಿಮ್ ದಿವಾನಿ ಅಥವಾ ದೇವಡಿ ಎಂದು ಕರೆಯುತ್ತಿದ್ದರು.[೧೦]

ರಾಜಾ ಕೃಷ್ಣದೇವರಾಯಲು ಅವರ ಅಧಿಕಾರಾವಧಿಯಲ್ಲಿ ರಾಜ್ಯದ ಆಗು-ಹೋಗುಗಳನ್ನು ಪರಿಶೀಲಿಸುವುದರೊಂದಿಗೆ ಶಾಂತಿ-ಸುವ್ಯವಸ್ಥೆಯನ್ನು ಕಾಪಾಡಲು ಆರು ಜನರ ಸಮಿತಿಯನ್ನು ಮಾಡಿದ್ದರು. ಆ ಸಮಿತಿಯಲ್ಲಿ ಇದ್ದವರೆಂದರೆ,

೧. ರಾಜಾ ಕೃಷ್ಣದೇವರಾಯಲು
೨. ರಾಜಾ ತಿರುಮಲದೇವರಾಯ
೩. ಬಂದೇಅಲಿ (ನಾಜಿಮ್)
೪. ಕುಮಾರಸ್ವಾಮಿ (ರಾಜಬಂಧು)
೫. ಎಂ.ತಿಮ್ಮಪ್ಪರಾಜು
೬. ಶ್ರೀನಿವಾಸಾಚಾರ್ಯರು.

ಹೈದರಾಬಾದ್ ನಿಜಾಮರು ಅಧಿಕಾರದಲ್ಲಿದ್ದಾಗ, ಇಲ್ಲಿಯ ಪ್ರಕರಣಗಳು ಉರ್ದುವಿನಲ್ಲಿ ಇತ್ಯರ್ಥಗೊಳ್ಳುತ್ತಿದ್ದವು. ಇವನ್ನು ಹಿಜಿಲಾಸ್ ಎಂದು ಕರೆಯುತ್ತಿದ್ದರು. ಭೂಮಿಗೆ ಸಂಬಂಧಿಸಿದ ವ್ಯಾಜ್ಯ(ಮಾಲ್‌ಗುಜಾರಿ)ಗಳು ಹಾಗೂ ಇಲ್ಲಿ ಬಗೆಹರಿಯದ ಕೆಲವು ಪ್ರಕರಣಗಳನ್ನು ಹೈದರಾಬಾದ್ ನ್ಯಾಯಾಲಯಕ್ಕೆ ಕಳುಹಿಸಲಾಗುತ್ತಿತ್ತು.[೧೧]

ಈ ಆನೆಗೊಂದಿಯಲ್ಲಿ ಕೋದಂಡರಾಮ ಎಂಬವನು ದಿವಾನನಾಗಿದ್ದ. ಒಮ್ಮೆ ಈತನ ಮನೆಗೆ ಕಟ್ಟಿಗೆಯವನು ಕಟ್ಟಿಗೆಹೊರೆಯನ್ನು ತಂದುಹಾಕಿದ. ಆದರೆ ಕೋದಂಡರಾಮ ದಿವಾನನ ಹೆಂಡತಿ ಕಟ್ಟಿಗೆಹೊರೆಗೆ ಪ್ರತಿಯಾಗಿ ಹಣವನ್ನು ನೀಡದೆ ಕಟ್ಟಿಗೆ ಹಾಕುವವನಿಗೆ ದರ್ಪದ ಮಾತುಗಳನ್ನಾಡಿ ಕಳುಹಿಸಿದ್ದಳು. ಕಟ್ಟಿಗೆಮಾರುವ ವ್ಯಕ್ತಿ ಗೊಣಗುತ್ತಾ ಹೋದ. ಏಕೆಂದರೆ ಆತನ ಕುಟುಂಬ ನಿರ್ವಹಣೆ ದಿನಾಲು ಕಟ್ಟಿಗೆ ಮಾರಿಬಂದ ಹಣದಿಂದ

ನಡೆಯುತ್ತಿತ್ತು. ಈ ವಿಷಯವು ಕೋದಂಡರಾಮ ದಿವಾನನಿಗೆ ತಲುಪಿತು. ಆಗ ತನ್ನ ಪತ್ನಿಗೆ ಶಿಕ್ಷೆಯಾಗಬೇಕೆಂದು ಆತ ಅರಸನನ್ನು ಕೋರಿದ. ಆಗ ಅರಸನು ಸಾಮಾನ್ಯಪ್ರಜೆಗಳಿಗೆ ನೀಡುವಂತೆ ಉಗ್ರವಾದ ಶಿಕ್ಷೆಯನ್ನು ನೀಡದೆ ಒಂಗು ದಮಡಿ ದಂಡ ಹಾಕಿದರು. ದಮಡಿ ಎನ್ನುವುದು ಒಂದು ನಾಣ್ಯದ ಹೆಸರು. ಇದು ನಿಜಾಮರ ಕಾಲದಲ್ಲಿತ್ತು. ೧೦೦ ದಮಡಿಗೆ ೧ ರೂಪಾಯಿ, ೧ ಆಣೆಗೆ ೪ ಬಟ್ಟು, ೧ ಬಟ್ಟಿಗೆ ೪ ದಮಡಿ.[೧೨]

ಆನೆಗೊಂದಿಯ ಅರಸ ಪೆದ್ದನರಸಿಂಹರಾಜುನ ಮರಣದ ನಂತರ ಆತನ ರಾಣಿ ನರಸಿಂಗಮ್ಮ ಕ್ರಿ.ಶ.೧೮೮೫ರಲ್ಲಿ ಆನೆಗೊಂದಿಯ ಪಟ್ಟಕ್ಕೆ ಬಂದಳು. ಆಕೆ ಕ್ರಿ.ಶ.೧೮೮೯ರಲ್ಲಿ ತೀರಿಕೊಂಡ ನಂತರ ಆಕೆಯ ಸಹೋದರಿ ಕುಪ್ಪಮ್ಮ ಪ್ರಭಾರಿರಾಣಿಯಾಗುತ್ತಾಳೆ. ತನ್ನ ಕಿರಿಯ ಸಹೋದರ ಪಂಪಾಪತಿಯನ್ನು ದತ್ತಕ ತೆಗೆದುಕೊಳ್ಳುತ್ತಾಳೆ. ಪಂಪಾಪತಿಗೆ ಶ್ರೀರಂಗದೇವರಾಯನೆಂದು ಪುನರ್‌ನಾಮಕರಣ ಮಾಡುತ್ತಾಳೆ. ಈತ ಚಿಕ್ಕವನಿದ್ದ ಕಾರಣ ಕುಪ್ಪಮ್ಮಳೇ ಅಧಿಕಾರ ನಡೆಸುತ್ತಾಳೆ. ಈಕೆಯ ಅಧಿಕಾರಾವಧಿಯಲ್ಲಿ ಅನೇಕ ನ್ಯಾಯಗಳು ಇತ್ಯರ್ಥಗೊಂಡಿವೆ. ಸಂಸ್ಥಾನದ ರೈತರು ಹಾಗೂ ಅಧಿಕಾರಿಗಳಿಗೆ ಭೂಮಿಗೆ ನೀರನ್ನು (ನೀರಾವರಿ) ಬಿಡುವುದರ ಕುರಿತಾಗಿ ಜಗಳವಾಯಿತು. ಆಗ ಕುಪ್ಪಮ್ಮರಾಣಿ ರೈತರ ಪರವಾಗಿ ನಿಂತು ಅವರ ಹೊಲಕ್ಕೆ ನೀರನ್ನುಣಿಸುವಲ್ಲಿ ಸಹಕಾರ ನೀಡಿದಳು. ಅಲ್ಲದೆ, ಈಕೆಯ ಅಧಿಕಾರಾವಧಿಯಲ್ಲಿ ಅನೇಕ ನ್ಯಾಯಾಂಗದ ಸುಧಾರಣೆಗಳಾದವು.[೧೩]

ಆನೆಗೊಂದಿಯು ಬೇಡರಿಗೆ ಮೂಲನೆಲೆಯಾಗಿರುವುದಲ್ಲದೆ, ಇಂದಿಗೂ ಬೇಡರು ರಾಜಕೀಯವಾಗಿ ಹಾಗೂ ಸಾಂಸ್ಕೃತಿಕವಾಗಿ ಆನೆಗೊಂದಿಯನ್ನೇ ಅವಲಂಬಿಸಿದ್ದಾರೆ. ಕಮಲಾಪುರದ ಬೇಡರು ಬೇಟೆಯ ಸಂದರ್ಭದಲ್ಲಿ ಆನೆಗೊಂದಿ ಅರಸರ ಅಪ್ಪಣೆಯನ್ನು ಕೇಳಿಯೇ ಬೇಟೆಯಾಡುವುದು ಇಂದಿಗೂ ಜಾರಿಯಲ್ಲಿದೆ. ಇಲ್ಲಿಯ ಅರಮನೆ ಮತ್ತು ಗುರುಮನೆಗಳು ಇವರಿಗೆ ನ್ಯಾಯಪಂಚಾಯ್ತಿಯ ಕೇಂದ್ರಗಳಾಗಿದ್ದು, ಇಲ್ಲಿ ಅನೇಕ ವ್ಯಾಜ್ಯಗಳು ಇತ್ಯರ್ಥಗೊಳ್ಳುತ್ತವೆ. ಜನರ ಸಮಸ್ಯೆಗಳಿಗೆ ಸ್ಪಂದಿಸುತ್ತಾರೆಂಬ ಭಾವನೆ ಜನರಲ್ಲಿ ಇದೆ. ಜನರ ವಿಶ್ವಾಸ ಹಾಗೂ ಪ್ರೀತಿಗಳಿಂದಾಗಿಯೂ ನ್ಯಾಯದಾನ ಜನಪರ ವಾಗಿರುತ್ತದೆ.

ಇಂದಿಗೂ ಈ ಮನೆತನದ ವಂಶಸ್ಥರಾದ ಅಚ್ಯುತದೇವರಾಯ (ಈಗ ಇವರು ದಿವಂಗತರಾಗಿದ್ದಾರೆ) ಮತ್ತು ರಾಮದೇವರಾಯರು (ಆನೆಗೊಂದಿಯಲ್ಲಿ ನೆಲೆಸಿದ್ದಾರೆ) ಆನೆಗೊಂದಿ ಹಾಗೂ ಸುತ್ತಮುತ್ತಲಿನ ಹಳ್ಳಿಗಳ ನ್ಯಾಯವನ್ನು ಬಗೆಹರಿಸುತ್ತಿದ್ದಾರೆ. ಇವರಲ್ಲಿಯ ಆಚರಣೆ, ನಂಬಿಕೆ, ಆದರ್ಶ ಮತ್ತು ಮೌಲ್ಯಗಳೇ ಇವರ ನ್ಯಾಯದಾನ ನೀತಿಯನ್ನು ರೂಪಿಸಿವೆಯೆಂದು ಹೇಳಬಹುದು. ಇಂದಿನ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಆರಕ್ಷಕಠಾಣೆಗಳು ಹಾಗೂ ನ್ಯಾಯಾಲಯಗಳು ವ್ಯಾಜ್ಯಗಳನ್ನು ಬಗೆಹರಿಸುವ ಕಾರ್ಯವನ್ನು ಮಾಡುತ್ತಿದ್ದರೂ ಆನೆಗೊಂದಿ ಅರಸರ ಸಮ್ಮುಖದಲ್ಲಿ ಸುತ್ತಮುತ್ತಲಿನ ಹಳ್ಳಿಯ ವ್ಯಾಜ್ಯಗಳು ಇಂದಿಗೂ ಬಗೆಹರಿಯುತ್ತಿರುತ್ತವೆ. ಇದಕ್ಕೆ ಇಲ್ಲಿಯ ಜನಸಾಮಾನ್ಯರು ಆನೆಗೊಂದಿ ಅರಸರ ಮೇಲಿಟ್ಟಿರುವ ಅಭಿಮಾನವೇ ಕಾರಣವೆನಿಸಿದೆ.

## ಟಿಪ್ಪಣಿಗಳು

೧. ಅಮರೇಶ ಯತಗಲ್, **ಕರ್ನಾಟಕ ನಾಯಕ ಅರಸು ಮನೆತನಗಳ ವಿಶಿಷ್ಟ ಸಾಂಸ್ಕೃತಿಕಾಚರಣೆಗಳು : ಚಾರಿತ್ರಿಕ ಅಧ್ಯಯನ**, ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾಪ್ರಬಂಧ, ೨೦೦೫, ಪು.೬೮

೨. ಕೆ.ಎಲ್.ರಾಜಶೇಖರ್, 'ವಿಜಯನಗರಕಾಲದ ಯಲಹಂಕನಾಡು', **ವಿಜಯನಗರ ಅಧ್ಯಯನ**, ಸಂಪುಟ-೧೦, ೨೦೦೬, ಪು.೨೭೨

೩. ಟಿ.ಜಿ.ಕೃಷ್ಣಮೂರ್ತಿಗೌಡ, ಆನೆಗೊಂದಿ, ಇವರ ಹೇಳಿಕೆಯಿಂದ.

೪. ಕೋದಂಡರಾಮಪ್ಪ, ಸಾ : ಹೊಸಪೇಟೆ, ಇವರ ಹೇಳಿಕೆಯಿಂದ.

೫. ನಾರಾಯಣ ಗಿರಿಯಪ್ಪ, **ಆನೆಗೊಂದಿ ಜನಪದ**, ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ, ೨೦೦೭, ಪು.೨೧

೬. ಎಂ.ಪಿ. ವೀಣಾ, **ಮನೆ, ಸಮಾಜ ಮತ್ತು ಸಂಸ್ಕೃತಿ**, ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ, ೨೦೦೦, ಪು.೨೬

೭. ನಾರಾಯಣ ಗಿರಿಯಪ್ಪ, **ಪೂರ್ವೋಕ್ತ**, ಪು.೧೧೯

೮. ಭೀಮಸೇನಾಚಾರ್ಯ ಪೊಲೀಸ್ ಪಾಟೀಲ್, ಸಾ : ಆನೆಗೊಂದಿ, ಇವರ ಹೇಳಿಕೆಯಿಂದ.

೯. ಬಿ. ಜಯರಾಮಾಚಾರ್ಯ ರಾಜಪುರೋಹಿತ, ಸಾ : ಗಂಗಾವತಿ, ಜಿ : ಕೊಪ್ಪಳ, ಇವರ ಹೇಳಿಕೆಯಿಂದ.

೧೦. ಅಚ್ಯುತದೇವರಾಯ, ಆನೆಗೊಂದಿ ಅರಸು ವಂಶಸ್ಥರು, ಸಾ : ಆನೆಗೊಂದಿ, ಇವರ ಹೇಳಿಕೆಯಿಂದ.

೧೧. ರಾಮರಾಯಲು, ಆನೆಗೊಂದಿ ಅರಸು ವಂಶಸ್ಥರು, ಸಾ : ಆನೆಗೊಂದಿ, ಇವರ ಹೇಳಿಕೆಯಿಂದ.

೧೨. ಅವರೇ

೧೩. ಹೆಚ್. ನರಸಿಂಹಪ್ಪ, ಸಾ : ತಿಮ್ಮಲಾಪುರ, ತಾ : ಗಂಗಾವತಿ, ಜಿ : ಕೊಪ್ಪಳ, ಇವರ ಹೇಳಿಕೆಯಿಂದ.

೧೭

# ದೇವದುರ್ಗ ಸಂಸ್ಥಾನಿಕರ ನ್ಯಾಯಾಡಳಿತ

ಡಾ. ಅಮರೇಶ ಯತಗಲ್

ರಾಯಚೂರು ಜಿಲ್ಲೆಯಿಂದ ಈಶಾನ್ಯದಿಕ್ಕಿಗೆ ಸುಮಾರು ೬೦ ಕಿ.ಮೀ. ಅಂತರದಲ್ಲಿರುವದು ದೇವದುರ್ಗ ತಾಲ್ಲೂಕು. ಇಲ್ಲಿ ಕ್ರಿ.ಶ. ೧೬೬೯ ರಿಂದ ೧೯೪೮ರ ವರೆಗೆ ಸುಮಾರು ಹತ್ತು ಜನ ನಾಯಕ ಅರಸರು ಆಳ್ವಿಕೆ ಮಾಡಿದ್ದಾರೆ. ಈ ಮನೆತನದ ಮೂಲಪುರುಷ ಸೋಮಜಂಪಲ ಭೂಮಿಪತಿ ರಂಗಪ್ಪನಾಯಕ. ಈತನು ಅರಕೇರಿ ಮತ್ತು ಚಂದನಕೇರಿಗಳನ್ನು ರಾಜಧಾನಿಗಳನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ಮಾಡಿದನು. ಈತನ ನಂತರ ವಾಸುದೇವನಾಯಕ ಅಧಿಕಾರಕ್ಕೆ ಬಂದನು. ಈತ ದೇವದುರ್ಗವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸಿದನು. ವಾಸುದೇವನಾಯಕನು ತನ್ನ ಅಧೀನದಲ್ಲಿದ್ದ ಏಳು ಪ್ರಮುಖ ಆಡಳಿತಕೇಂದ್ರಗಳಾದ ಅರಕೇರಿ, ಮುಂಡರಗಿ, ಜಾಲಹಳ್ಳಿ, ರಾಮದುರ್ಗ, ಕ್ಯಾದಿಗೇರಾ, ಗಲಗ ಹಾಗೂ ದೇವದುರ್ಗಗಳಿಗೆ ತನ್ನ ಏಳು ಜನ ಮಕ್ಕಳನ್ನು ನೇಮಿಸುತ್ತಾನೆ. ಸಣ್ಣ ಕಿಲಚನಾಯಕನನ್ನು ಅರಕೇರಿಗೆ, ವೆಂಕಟಪ್ಪನಾಯಕ ನನ್ನು ಮುಂಡರಗಿಗೆ, ವಾಸುದೇವನಾಯಕನನ್ನು ಜಾಲಹಳ್ಳಿಗೆ, ಕೃಷ್ಣಪ್ಪನಾಯಕನನ್ನು ರಾಮದುರ್ಗಕ್ಕೆ, ರಂಗಪ್ಪನಾಯಕನನ್ನು ಕ್ಯಾದಿಗೇರಿಗೆ, ತಿಮ್ಮಪ್ಪನಾಯಕನನ್ನು ಗಲಗಿಗೆ ಕಳುಹಿಸುತ್ತಾನೆ. ರಾಜಧಾನಿ ದೇವದುರ್ಗವನ್ನು ತನ್ನ ಅಧೀನದಲ್ಲಿಯೇ ಇಟ್ಟುಕೊಳ್ಳುತ್ತಾನೆ. ತನ್ನ ಹಿರಿಯ ಮಗ ಕಿಲಚನಾಯಕನು ತಂದೆಯೊಂದಿಗೆ ದೇವದುರ್ಗದಲ್ಲಿಯೇ ಇರುತ್ತಾನೆ.

ದೇವದುರ್ಗವನ್ನು ಆಳಿದ ಪ್ರಮುಖ ಅರಸರಲ್ಲಿ ರಂಗಪ್ಪನಾಯಕ, ವಾಸುದೇವನಾಯಕ ಕಿಲಚನಾಯಕ, ಇಮ್ಮಡಿರಂಗಪ್ಪನಾಯಕ, ಚಿಕ್ಕಕೇಶವನಾಯಕ, ಕೊಳ್ಳಿರಂಗಪ್ಪನಾಯಕ ಹಾಗೂ ಕೃಷ್ಣಪ್ಪನಾಯಕ ಪ್ರಮುಖರಾದವರಾಗಿದ್ದಾರೆ.

ದೇವದುರ್ಗದ ನಾಯಕ ಅರಸರು ಪ್ರಾರಂಭದಲ್ಲಿ ಸ್ವತಂತ್ರವಾಗಿ ಆಳ್ವಿಕೆಯನ್ನು ನಡೆಸಿದರು. ನಂತರ ಕ್ರಿ.ಶ. ೧೮೦೦ ರಿಂದ ಸುರಪುರ ನಾಯಕ ಅರಸರ ಅಧೀನದಲ್ಲಿದ್ದರು. ಸುರಪುರವು ಹೈದರಾಬಾದ್ ನಿಜಾಮರ ಅಧೀನಕ್ಕೊಳಪಟ್ಟಾಗ, ದೇವದುರ್ಗವೂ ಅವರ

ಆಡಳಿತದ ವ್ಯಾಪ್ತಿಗೊಳಪಟ್ಟಿತು. ಆಗ ಈ ಮನೆತನವನ್ನು ಸುರಪುರದ ನಾಯಕ ಅರಸರು ನೋಡಿಕೊಂಡು ಹೋಗುತ್ತಿದ್ದರು. ಸುರಪುರದ ಮುಮ್ಮಡಿ ಪಿಡ್ಡನಾಯಕ(ಕ್ರಿ.ಶ. ೧೮೦೨-೧೮೨೭)ನು ದೇವದುರ್ಗದ ಇಜೇರಿ ಕಿಲ್ಲೆಗಳನ್ನು ಕ್ರಿ.ಶ. ೧೮೧೧ರಲ್ಲಿ ಜೀರ್ಣೋದ್ಧಾರ ಮಾಡಿದನು. ನಂತರ ಕ್ರಿ.ಶ. ೧೮೫೩ ಮೇ ೨೧ರಂದು ಹೈದರಾಬಾದ್ ನಿಜಾಮನು ಬೀರಾರ್ ಒಪ್ಪಂದಕ್ಕೆ ಸಹಿಮಾಡಿದನು. ಆ ಪ್ರಕಾರ ಬೀರಾರ್ ಪ್ರಾಂತ್ಯವನ್ನು, ಉಸ್ಮಾನಾಬಾದ್ ಹಾಗೂ ರಾಯಚೂರು ಜಿಲ್ಲೆಗಳನ್ನು ಈಸ್ಟ್ ಇಂಡಿಯಾ ಕಂಪನಿಗೆ ಬಿಟ್ಟುಕೊಡಲಾಯಿತು. ಆಗಿನಿಂದ ಈ ಮನೆತನವು ಬ್ರಿಟಿಷರ ಅಧೀನಕ್ಕೆ ಒಳಪಟ್ಟಿತ್ತು. ಆಗ ಈ ಮನೆತನದ ನಾಯಕ ಅರಸರು ಬ್ರಿಟಿಷರ ಅಧೀನದಲ್ಲಿಯೇ ಮೌನವಾಗಿ ಕಾಲ ನೂಕಿದರು. ಇವರ ಉಪಜೀವನಕ್ಕಾಗಿ ಬ್ರಿಟಿಷರು ಕೆಲವು ಭೂಮಿಗಳನ್ನು ನೀಡಿದ್ದರು. ನಂತರ ೧೯೪೭ ಆಗಸ್ಟ್ ೧೫ರಂದು ದೇಶ ಸ್ವತಂತ್ರವಾದಾಗ ರಾಯಚೂರು ಭಾಗ ಸ್ವತಂತ್ರವಾಗಲಿಲ್ಲ. ಮತ್ತೆ ದೇವದುರ್ಗ ಪುನಃ ೧೯೪೮ ಸೆಪ್ಟೆಂಬರ್ ೧೭ರ ವರೆಗೆ ಹೈದರಾಬಾದ್ ನಿಜಾಮನ ಆಡಳಿತಕ್ಕೆ ಒಳಪಟ್ಟಿತು.

ಈ ಸಂಸ್ಥಾನದ ನಾಯಕ ಅರಸರು ತಮ್ಮದೇ ಆದ ಆಡಳಿತ ವ್ಯವಸ್ಥೆಯನ್ನು ಹೊಂದಿದ್ದರು. ಇಡೀ ಆಡಳಿತ ವ್ಯವಸ್ಥೆಯ ಮುಖ್ಯಸ್ಥ ಅರಸನಾಗಿದ್ದನು. ಹೀಗಾಗಿ ಸಂಪೂರ್ಣ ಅಧಿಕಾರ ಅರಸನದೇ ಆಗಿತ್ತು. ಆಡಳಿತ ವ್ಯವಸ್ಥೆಯಲ್ಲಿ ಪ್ರಜೆಗಳು ಸುಖ, ಶಾಂತಿ, ನೆಮ್ಮದಿಯಿಂದ ಬಾಳಲು ವಿವಿಧ ರೀತಿಯ ಆಡಳಿತಪದ್ಧತಿಗಳನ್ನು ಜಾರಿಗೆ ತಂದಿದ್ದರು. ಅವುಗಳಲ್ಲಿ ನ್ಯಾಯಾಡಳಿತ ಪದ್ಧತಿಯೂ ಒಂದಾಗಿತ್ತು. ಇವರ ನ್ಯಾಯಾಡಳಿತ ಪದ್ಧತಿಯ ಕುರಿತಾಗಿ ದೇವದುರ್ಗನಾಯಕ ಅರಸರ ವಶದಲ್ಲಿರುವ ಕೆಲವು ಕಾಗದ-ಪತ್ರಗಳು, ಆ ವಂಶಸ್ಥರ ಹೇಳಿಕೆಗಳು ಹಾಗೂ ಈ ಮನೆತನದ ಅಧೀನದ ಗ್ರಾಮಗಳಲ್ಲಿಯ ಕೆಲವು ಹಿರಿಯ ವಕ್ತೃಗಳ ಹೇಳಿಕೆಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಈ ಮನೆತನದ ನ್ಯಾಯಾಡಳಿತವನ್ನು ಎರಡು ಹಂತಗಳಲ್ಲಿ ಗುರುತಿಸಬಹುದಾಗಿದೆ: ಒಂದು, ಈ ಮನೆತನದ ಸ್ಥಾಪನೆಯಿಂದ ಹೈದರಾಬಾದ್ ನಿಜಾಮರ ಪ್ರಾರಂಭದ ಆಳ್ವಿಕೆ (ಕ್ರಿ.ಶ.೧೬೭೯ ರಿಂದ ೧೮೫೩)ಯವರೆಗೆ; ಎರಡನೆಯದಾಗಿ, ಇಂಗ್ಲೀಷರ ಆಡಳಿತಾವಧಿ (ಕ್ರಿ.ಶ.೧೮೫೩ ರಿಂದ ಕ್ರಿ.ಶ.೧೯೪೭)ಯವರೆಗೆ.

ಪ್ರಾರಂಭದಲ್ಲಿ ಇಲ್ಲಿ ಯಾವುದೇ ಪ್ರತ್ಯೇಕವಾದ ನ್ಯಾಯಾಲಯ(Court)ದ ವ್ಯವಸ್ಥೆ ಇರಲಿಲ್ಲ. ನ್ಯಾಯನಿರ್ಣಯಿಸಲು ಕುಲಾಚಾರಪದ್ಧತಿಯನ್ನು ಅನುಸರಿಸಲಾಗುತ್ತಿತ್ತು. ಆಯಾ ಕುಲದವರು, ತಮ್ಮ ಆಚಾರ-ವಿಚಾರ, ರೂಢಿ-ಸಂಪ್ರದಾಯಗಳಿಗನುಗುಣವಾಗಿ ನ್ಯಾಯಗಳನ್ನು ಬಗೆಹರಿಸುತ್ತಿದ್ದರು. ಇವರ ಆಡಳಿತದ ಅಧೀನದಲ್ಲಿ ಸುಮಾರು ೬೦ ಹಳ್ಳಿಗಳು ಬರುತ್ತಿದ್ದವು. ಅವುಗಳೆಂದರೆ ಲಿಂಗದಳ್ಳಿ, ಚಿಂಚೋಡಿ, ಬುಂಕಲದೊಡ್ಡಿ, ಜಾಲಹಳ್ಳಿ, ಬೊಮನಹಳ್ಳಿ, ಸೋಮನಮರಡಿ, ಹೊಸೂರು ಸಿದ್ಧಪುರ, ಪಲಕನಮರಡಿ, ವಂದಲಿ, ಮದರಕಲ್, ಆಕಳಕುಂಪಿ, ಗಲಗ, ಮುಂಡರಗಿ, ಕರಡಿಗುಡ್ಡ, ಹೇರೂಂಡಿ,

ಕರಿಗುಡ್ಡ, ಅಂಜಳ, ಗೋಪಾಲಪುರ, ಜೋಳದ ಹೆಡಗಿ, ಕೋಣಚಪ್ಪಳಿ, ಬೇಡರ ಗಣೇಕಲ್, ಅರಕೇರಾ, ನಾಗೋಲಿ, ಆಲ್ಕೋಡಾ, ಕ್ಯಾದಿಗೇರಾ, ಶ್ಯಾವಂತಗಲ್, ಕೊಪ್ಪರ, ಗುಂಡಗುರ್ತಿ, ಜೇರಬಂಡಿ, ಮಸರಕಲ್, ಶಿವಂಗಿ, ಬುದ್ದಿನ್ನಿ, ಜಾಗಟಕಲ್, ಕರ್ಕಿಹಳ್ಳಿ, ಯಾಟಗಲ್, ಇಟಗಿ, ಬೂದಿನಹಾಳ, ಸುಂಕೇಶ್ವರಹಾಳ, ಅಮರಾಪುರ, ಗಬ್ಬೂರು, ಮಲದಕಲ್, ಗಣೇಕಲ್, ಖಾನಾಪುರ, ಹೆಗಡದಿನ್ನಿ, ಹಂಚಿನಾಳ, ಹಿರೇರಾಯಕುಂಪಿ, ಶಾವಂತಗೇರಾ, ಕಾಕರಗಲ್, ಹಿರೇಬೂದೂರು, ಚಿಕ್ಕಬೂದೂರು, ಹೇರೂರು, ಮುಷ್ಟೂರು, ಯರಮಸಾಳ, ಅರಿಶಿಣಗಿ, ರಾಯದುರ್ಗ, ಬೊಮ್ಮನಗುಂಡ, ಹೇಮನೂರು ಭೋಗಿ ರಾಮನಗುಂಡ ಮತ್ತು ಚಂದನಕೇರಿ.

ಈ ಎಲ್ಲಾ ಹಳ್ಳಿಗಳಲ್ಲಿ ಆಯಾ ಜಾತಿಯ ಮುಖಂಡರಾದ ಬೇಡರು, ಕುರುಬರು, ಮಾದಿಗರು, ಹೊಲೆಯರು, ಕಂಬಾರರು, ಕುಂಬಾರರು, ಕಬ್ಬಲಿಗರು ಮುಂತಾದವರು ತಮ್ಮ ತಮ್ಮ ಜಾತಿಯ ಜಗಳಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು. ಬ್ರಾಹ್ಮಣರು ತಮ್ಮದೇ ಆದ ಪ್ರತ್ಯೇಕ ನ್ಯಾಯನಿರ್ಣಯ ವ್ಯವಸ್ಥೆಯನ್ನು ಹೊಂದಿದ್ದರು. ತಮ್ಮಲ್ಲಿಯ ಜಗಳಗಳನ್ನು ಅವರೇ ಬಗೆಹರಿಸಿಕೊಳ್ಳುತ್ತಿದ್ದರು. ಮುಸ್ಲಿಂ ಜನಾಂಗದಲ್ಲಿ ಖಾಜಿಗಳೆಂಬ ಧರ್ಮಗುರುಗಳಿರುತ್ತಿದ್ದರು. ಅವರೇ ಆ ಜನಾಂಗದ ಜಗಳಗಳನ್ನು ಬಗೆಹರಿಸುತ್ತಿದ್ದರು. ಇವರ ಅಧೀನದ ಮೇಲಿನ ಎಲ್ಲಾ ಹಳ್ಳಿಗಳಲ್ಲಿ ಜಮೀನ್ದಾರರು ಅಧಿಕಾರ ಮಾಡುತ್ತಿದ್ದರು. ಅಲ್ಲದೇ ಈ ಅರಸು ಮನೆತನದ ಪ್ರಮುಖ ಆಡಳಿತದ ಶಾಖೆಗಳಾದ ಗಲಗ, ಕ್ಯಾದಿಗೇರಾ, ಮುಂಡರಗಿ, ಜಾಲಹಳ್ಳಿ ಹಾಗೂ ಅರಕೇರಾಗಳಲ್ಲಿ ಈ ಮನೆತನದ ವಂಶಜರುಗಳು ಆಳ್ವಿಕೆ ಮಾಡುತ್ತಿದ್ದರು. ಇವರ ಅಧೀನದಲ್ಲಿಯೂ ಜಮೀನ್ದಾರರಿದ್ದರು. ಇವರುಗಳು ತಮ್ಮ ಅಧೀನದ ಹಳ್ಳಿಗಳಲ್ಲಿಯ ಸಾಮಾನ್ಯ ನ್ಯಾಯಗಳನ್ನು ಬಗೆಹರಿಸಲು ಗುರಿಕಾರರನ್ನು ಮತ್ತು ಕಟ್ಟೆಮನಿಯವರನ್ನು ನೇಮಿಸುತ್ತಿದ್ದರು. ಇವರು ಮದುವೆಗೆ ಸಂಬಂಧಿಸಿದ ಜಗಳಗಳು, ಅನೈತಿಕ ವ್ಯವಹಾರಗಳಿಗೆ ಸಂಬಂಧಿಸಿದ ಜಗಳಗಳು, ಆಸ್ತಿಪಾಸ್ತಿಗಳಿಗೆ ಸಂಬಂಧಿಸಿದ ಜಗಳಗಳು, ಜಾತಿನಿಯಮಗಳ ಉಲ್ಲಂಘನೆ ಮುಂತಾದವುಗಳನ್ನು ವಿಚಾರಣೆ ಗೊಳಪಡಿಸುತ್ತಿದ್ದರು. ತೀರ್ಪನ್ನು ನೀಡುವ ಅಧಿಕಾರ ಇವರಿಗೆ ಇದ್ದುದರಿಂದ ಸೂಕ್ತವಾದ ತೀರ್ಪನ್ನು ಕೊಡುತ್ತಿದ್ದರು.

ಈ ಹಂತದ ನ್ಯಾಯಕ್ಕೆ ಅಂತಿಮ ತೀರ್ಪನ್ನು ಕೊಡುವುದು ಆಯಾ ಭಾಗದ ಜಮೀನ್ದಾರರದ್ದಾಗಿರುತ್ತಿತ್ತು. ಒಂದುವೇಳೆ ಅಲ್ಲಿ ನ್ಯಾಯವು ತೀರ್ಮಾನಗೊಳ್ಳದಿದ್ದಲ್ಲಿ ದೇವದುರ್ಗ ಅರಸರ ಆಡಳಿತದ ಶಾಖೆಗಳಾದ ಗಲಗ, ಮುಂಡರಗಿ, ಅರಕೇರಾ, ರಾಮದುರ್ಗ, ಕ್ಯಾದಿಗೇರಾ, ಜಾಲಹಳ್ಳಿಗಳಿಗೆ ಬರುತ್ತಿತ್ತು. ಅಲ್ಲಿ ದೇವದುರ್ಗ ನಾಯಕ ಅರಸರ ಸಂಬಂಧಿಗಳೇ ಆಡಳಿತ ನಿರ್ವಹಿಸುತ್ತಿದ್ದರು. ಅವರಿಗೆ ಪ್ರಜೆಗಳು 'ಧಣಿ'ಗಳೆಂದು ಕರೆಯುತ್ತಿದ್ದರು. ಇವರ ಸಮ್ಮುಖದಲ್ಲಿ ನ್ಯಾಯತೀರ್ಮಾನವಾಗುತ್ತಿತ್ತು. ಒಂದುವೇಳೆ ಅಲ್ಲಿ ನ್ಯಾಯತೀರ್ಮಾನವಾಗದಿದ್ದರೆ ದೇವದುರ್ಗ ಅರಸರ ದರ್ಬಾರಿಗೆ ಬರುತ್ತಿತ್ತು.

ಆಗ ದರ್ಬಾರದಲ್ಲಿ ಪಂಚರ ಸಮಿತಿ ಇರುತ್ತಿತ್ತು. ಇವರ ಸದಸ್ಯರನ್ನು ಆಯಾ ಜನಾಂಗದವರು ಆಯ್ಕೆಮಾಡುತ್ತಿದ್ದರು. ಆಯ್ಕೆಯಾಗುವವರೆಗೆ ಕೆಲವೊಂದು ಅರ್ಹತೆಗಳಿರಬೇಕಾಗಿತ್ತು. ವಯಸ್ಸಿನಲ್ಲಿ ಹಿರಿಯರಾಗಿದ್ದು, ಅನುಭವಸ್ಥರಾಗಿರಬೇಕು. ಸಮಾಜದಲ್ಲಿ ಸತ್ಯ, ನಿಷ್ಠೆ, ಪ್ರಾಮಾಣಿಕರೆಂದು ಗುರುತಿಸಿಕೊಂಡಿರಬೇಕು. ನಿಷ್ಪಕ್ಷಪಾತವಾದ ದೃಷ್ಟಿಕೋನವನ್ನು ಹೊಂದಿದವರಾಗಿರಬೇಕಾಗಿತ್ತು.

ಈ ಪಂಚರ ಸಮಿತಿಯಲ್ಲಿ ಪುರೋಹಿತ ಮನೆತನದ ಒಬ್ಬರು, ಹವಾಲ್ದಾರ ಮನೆತನದ ಒಬ್ಬರು, ದೇಶಪಾಂಡೆ ಮನೆತನದ ಒಬ್ಬರು, ಗುರಿಕಾರ ಮನೆತನದ ಒಬ್ಬರು, ಸುಬೇದಾರ ಮನೆತನದ ಒಬ್ಬರು- ಹೀಗೆ ಐದು ಜನರು ಇರುತ್ತಿದ್ದರು. ಇವರೆಲ್ಲರೂ ಸೇರಿ ಪಂಚರಕಟ್ಟೆ ಎಂಬ ನ್ಯಾಯತೀರ್ಮಾನದ ಕಟ್ಟೆಯ ಮೇಲೆ ಕುಳಿತು ನ್ಯಾಯ ಬಗೆಹರಿಸುತ್ತಿದ್ದರು. ಈ ಪಂಚರ ಸಮಿತಿಯ ಮೇಲಿನ ಅಧಿಕಾರ ಹಾಗೂ ಈ ಮೊದಲು ಪಂಚರನ್ನು ಆಯಾ ಜನಾಂಗದವರು ಆಯ್ಕೆಮಾಡಿದ್ದರೂ ಸಹಿತ ಅವರನ್ನು ಆ ಸಮಿತಿಯಿಂದ ರದ್ದುಗೊಳಿಸುವ ಅಥವಾ ಅವರನ್ನು ಅಂತಿಮವಾಗಿ ನೇಮಿಸುವ ಅಧಿಕಾರ ಅರಸನದಾಗಿರುತ್ತಿತ್ತು. ಅರಸನೇ ಆ ಇಡೀ ನ್ಯಾಯಾಂಗ ವ್ಯವಸ್ಥೆಯ ಮುಖ್ಯಸ್ಥನಾಗಿರುತ್ತಿದ್ದನು. ದುಷ್ಟರನ್ನು ನಿಗ್ರಹಿಸುವುದು, ಶಿಷ್ಟರನ್ನು ಪರಿಪಾಲಿಸುವುದು ತನ್ನ ಆದ್ಯ ಕರ್ತವ್ಯವೆಂದು ಅರಿತಿದ್ದನು. ಆದರೆ ಈ ಪಂಚರು ಪ್ರತಿಯೊಂದು ಆಪಾದನೆಯನ್ನು ಆಮೂಲಾಗ್ರವಾಗಿ ಸಾಕ್ಷ್ಯಾಧಾರ ಸಹಿತ ವಿಚಾರಣೆಮಾಡಿ ತಪ್ಪಿತಸ್ಥನಿಗೆ ಶಿಕ್ಷೆಯನ್ನು ನೀಡುವಂತೆ ಅರಸನನ್ನು ಕೋರುತ್ತಿದ್ದರು. ಅರಸ ಅದನ್ನು ಒಪ್ಪಿ ರುಜುಹಾಕಬೇಕಾಗಿತ್ತು. ಇಲ್ಲವೆ ಇನ್ನೂ ಕೆಲವು ಸಲ ಪಂಚರೊಂದಿಗೆ ಮತ್ತೊಮ್ಮೆ ಚರ್ಚಿಸಿ ಅಂತಿಮ ತೀರ್ಮಾನಕ್ಕೆ ಬರುತ್ತಿದ್ದನು. ಅಪರಾಧಿಯ ಶಿಕ್ಷೆಯನ್ನು ಹೆಚ್ಚಿಸುವ ಇಲ್ಲವೇ ಕಡಿಮೆ ಮಾಡುವ ಅಧಿಕಾರ ಅರಸನದಾಗಿತ್ತು.

ಪಂಚಾಯತಿಕಟ್ಟೆಯಲ್ಲಿ ವಿವಿಧ ಬಗೆಯ ನ್ಯಾಯಗಳನ್ನು ನಿರ್ಣಯಿಸಲಾಗುತ್ತಿತ್ತು. ಕೊಲೆ, ಸುಲಿಗೆ, ಕಳ್ಳತನ ಮತ್ತು ಆಸ್ತಿ ಜಗಳಗಳು ಮುಂತಾದವುಗಳನ್ನು ಬಗೆಹರಿಸಲಾಗುತ್ತಿತ್ತು. ವಾದಿ ಮತ್ತು ಪ್ರತಿವಾದಿಯನ್ನು ಒಂದೆಡೆ ಸೇರಿಸುವುದರ ಜೊತೆಗೆ, ಅವರ ತಂಟೆ ತಕರಾರಿನ ಕುರಿತಾಗಿ ವಿಷಯವನ್ನು ವಿವರಿಸುತ್ತಿದ್ದರು. ಆ ನಂತರದಲ್ಲಿ ಅಪರಾಧವನ್ನು ಹೊರಗೆಡುವಲು ಈ ಪಂಚರು ವಿವಿಧ ಬಗೆಯ ಮಾರ್ಗಗಳನ್ನು ಅನುಸರಿಸುತ್ತಿದ್ದರು. ಅವುಗಳನ್ನು ಆಪಾದಿತ ವ್ಯಕ್ತಿ ಕಡ್ಡಾಯವಾಗಿ ಅನುಸರಿಸಲೇಬೇಕಾಗಿತ್ತು.

ಊರು ಇಲ್ಲವೇ ಅವರವರ ಮನೆದೇವರ ಹೆಸರಿನಲ್ಲಿ ಪ್ರಮಾಣಮಾಡುವುದು, ದೇವರ ಮುಂದಿನ ದೀಪವನ್ನು ಒಬ್ಬನು ಹಚ್ಚಿದರೆ ಇನ್ನೊಬ್ಬ ಆರಿಸುವುದು, ಇಲ್ಲವೇ ದೇವರ ದೀಪವನ್ನು ತಲೆಯ ಮೇಲಿಟ್ಟುಕೊಂಡು ಪ್ರಮಾಣಮಾಡುವುದು ಜಾರಿಯಲ್ಲಿದ್ದಿತು. ಒಂದುವೇಳೆ ಅವರಿಗೆ ಮಕ್ಕಳಾಗಿದ್ದರೆ, ಆ ಮಕ್ಕಳ ತಲೆಮೇಲೆ ಕೈಯಿಟ್ಟು ಪ್ರಮಾಣ ಮಾಡಬೇಕಿತ್ತು. ಆ ಮಗುವನ್ನು ಅಡ್ಡಹಾಕಿ ನಾನು ತಪ್ಪುಮಾಡಿಲ್ಲವೆಂದು ಆ ಮಗುವನ್ನು

ದಾಟುವುದು, ಕಾಳನ್ನು ಮಂತ್ರಿಸಿ ತಿನ್ನಲು ಕೊಡುವುದು, ಇಕ್ಕಳದಿಂದ ಕೈ ಹಿಚುಕುವುದು ಮುಂತಾದ ವಿಧಾನಗಳನ್ನು ಅನುಸರಿಸುವುದರ ಮೂಲಕ ಅಪರಾಧವನ್ನು ಪತ್ತೆಹಚ್ಚಲಾಗುತ್ತಿತ್ತು. ಕೆಲವು ಸಲ ಈ ವಿಧಾನಗಳನ್ನು ಅನುಸರಿಸುವ ಮೊದಲೇ ಹೆದರಿಕೆಯಿಂದ ಅಪರಾಧಿಗಳು ತಮ್ಮ ತಪ್ಪನ್ನು ಒಪ್ಪಿಕೊಂಡುಬಿಡುತ್ತಿದ್ದರು. ಅಂಥವರಿಗೆ ಶಿಕ್ಷೆಯಲ್ಲಿ ವಿನಾಯಿತಿ ಇರುತ್ತಿತ್ತು.

ಅಪರಾಧಗಳು ಸಾಬೀತಾದಾಗ ತಪ್ಪುಮಾಡಿದವನಿಗೆ ಹಣದರೂಪದ ದಂಡವನ್ನು ಹಾಕುತ್ತಿದ್ದರು. ಕೆಲವು ಸಲ ಎರಡು ಮೂರು ದಿನಗಳ ಕಾಲ ಬಂಧನದಲ್ಲಿಡುತ್ತಿದ್ದರು. ಕೊಲೆಯಂತಹ ದೊಡ್ಡ ಅಪರಾಧ ಮಾಡಿದ್ದರೆ ಎರಡು ಮೂರು ತಿಂಗಳುಗಳ ಕಾಲ ಬಂಧಿಯಾಗಿಡುತ್ತಿದ್ದರು. ಆತ ಒಂದಕ್ಕಿಂತ ಹೆಚ್ಚು ಜನರನ್ನು ಕೊಲೆಮಾಡಿದ್ದರೆ, ಆತನಿಗೆ ಐದು ತಿಂಗಳಿನಿಂದ ಒಂದು ವರ್ಷದವರೆಗೂ ಶಿಕ್ಷೆಯನ್ನು ನೀಡಲಾಗುತ್ತಿತ್ತು. ಬಂಧೀಖಾನೆಯು ದೇವದುರ್ಗದಲ್ಲಿತ್ತು. ಉಳಿದ ಆಡಳಿತ ವಿಭಾಗಗಳಾದ ಜಾಲಹಳ್ಳಿ, ಗಲಗ, ರಾಮದುರ್ಗ, ಮುಂಡರಗಿ, ಅರಕೇರಾ, ಕ್ಯಾದಿಗೇರಾಗಳಲ್ಲಿ ಅಪರಾಧಿಗಳನ್ನು ದೇವದುರ್ಗಕ್ಕೆ ಕರೆತಂದು ಬಂಧೀಖಾನೆಯಲ್ಲಿ ಇಡುತ್ತಿದ್ದರು. ಕೆಲವು ಸಲ ಕಳ್ಳತನ, ಅತ್ಯಾಚಾರಗಳನ್ನು ಎಸಗಿದ ಅಪರಾಧಿಗಳ ತಲೆಬೋಳಿಸಿ ಕತ್ತೆಯ ಮೇಲೆ ಕೂಡಿಸಿ ಗ್ರಾಮದ ತುಂಬೆಲ್ಲಾ ಮೆರವಣಿಗೆ ಮಾಡುತ್ತಿದ್ದರು. ಇಲ್ಲವೇ ಮೂಗುಕೊಯ್ಯುತ್ತಿದ್ದರು.

ಅಪರಾಧವನ್ನು ಪತ್ತೆಹಚ್ಚುವ ಸಂದರ್ಭದಲ್ಲಿ ತಪ್ಪನ್ನು ಒಪ್ಪಿಕೊಂಡ ಅಪರಾಧಿಗೆ ಶಿಕ್ಷೆನೀಡುವಲ್ಲಿ ವಿನಾಯಿತಿ ಇರುತ್ತಿತ್ತು. ಸಮಾಜಬಾಹಿರ ಇಲ್ಲವೆ ಸಮಾಜಕ್ಕೆ ದ್ರೋಹ ವೆಸಗುವಂತಹ ಕೆಲಸಗಳನ್ನು ಮಾಡಿದ್ದರೆ, ಅವರನ್ನು ಸಮಾಜದಿಂದ ಬಹಿಷ್ಕಾರ ಹಾಕುತ್ತಿದ್ದರು. ಇಂಥವರ ಕುಟುಂಬವನ್ನು ಸಮಾಜದವರ್‍ಯಾರೂ ಮಾತನಾಡಿಸುವಂತಿರಲಿಲ್ಲ. ನಾಮಕರಣ, ವಿವಾಹ, ಅಂತ್ಯಸಂಸ್ಕಾರದಂತಹ ಕೌಟುಂಬಿಕ ಕಾರ್ಯಕ್ರಮಗಳಲ್ಲಿ ಸಮಾಜದವರಾರೂ ಭಾಗವಹಿಸುವಂತಿರಲಿಲ್ಲ ಮತ್ತು ಈ ಶಿಕ್ಷೆಗೊಳಗಾದವರೂ ತಮ್ಮ ಸಂಬಂಧಿಗಳ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತಿರಲಿಲ್ಲ. ಈ ಶಿಕ್ಷೆಯು ಕಠಿಣ ಸ್ವರೂಪದ್ದಾಗಿರುತ್ತಿದುದರಿಂದ ಇದನ್ನು ನೀಡುವಾಗ ಪೂರ್ವಾಪರ ಯೋಚಿಸಿ ಅನಿವಾರ್ಯ ಸಂದರ್ಭದಲ್ಲಿ ನೀಡಲಾಗುತ್ತಿತ್ತು. ಕೆಲವೊಮ್ಮೆ ಸಮಾಜಬಾಹಿರ ವ್ಯಕ್ತಿ ಅಥವಾ ಕುಟುಂಬ ತಾವು ಮಾಡಿದ ತಪ್ಪಿನ ಅರಿವಾಗಿ, ಮುಂದೆ ಎಂದಿಗೂ ಇಂತಹ ತಪ್ಪನ್ನು ಮಾಡುವುದಿಲ್ಲವೆಂದು ಪಂಚರ ಸಮ್ಮುಖದಲ್ಲಿ ಕ್ಷಮೆಯನ್ನು ಕೋರಿದರೆ, ಆಗ ಪಂಚರು ಅವರನ್ನು ದೇವರಮುಂದೆ ಪ್ರಮಾಣಮಾಡಿಸಿ, ಸಮಾಜಕ್ಕೆ ಸೇರಿಸಿಕೊಳ್ಳುತ್ತಿದ್ದರು. ಆಕಸ್ಮಾತ್ ಮತ್ತೆ ಇಂತಹ ತಪ್ಪು ಮರುಕಳಿಸಿದರೆ, ಅವರನ್ನು ರಾಜ್ಯದಿಂದಲೇ ಬಹಿಷ್ಕರಿಸುತ್ತಿದ್ದರು. ಕೆಲವು ಸಣ್ಣಪುಟ್ಟ ತಪ್ಪುಗಳನ್ನು ಎಸಗಿದ್ದರೆ, ಇದರಿಂದ ಸಮಾಜದ ಶಾಂತಿ ಕದಡಿದ್ದರೆ, ಅವರಿಗೆ ಹಣದರೂಪದಲ್ಲಿ ದಂಡ ಹಾಕಲಾಗುತ್ತಿತ್ತು. ಈ ದಂಡ ರೂಪದ ಹಣವು ದೇವದುರ್ಗ ಅರಸರ ಖಜಾನೆಗೆ ಹೋಗುತ್ತಿತ್ತು.

ಹೀಗೆ ದೇವದುರ್ಗ ನಾಯಕ ಅರಸರ ನ್ಯಾಯಾಡಳಿತವು ತನ್ನದೇ ಆದ ಸ್ಥಳೀಯ ರೂಢಿ-ಸಂಪ್ರದಾಯಗಳನ್ನು ಒಳಗೊಂಡಿತ್ತು. ನಂತರದ ಬ್ರಿಟಿಷರ ಅಧೀನದ ಸಂದರ್ಭದಲ್ಲಿ ನ್ಯಾಯವನ್ನು ಬಗೆಹರಿಸಿಕೊಳ್ಳಲು, ದೇವದುರ್ಗದ ಅರಸರಿಗೆ ಸಂಪೂರ್ಣ ಅಧಿಕಾರವನ್ನು ನೀಡಿದ್ದರು. ಆದರೆ ಬ್ರಿಟಿಷ್ ಸರ್ಕಾರದ ವಿರೋಧಿಗಳಾಗಿ, ಅವರ ವಿರುದ್ಧ ಚಟುವಟಿಕೆಯಲ್ಲಿ ನಿರತರಾದ ವ್ಯಕ್ತಿಗಳಿಗೆ ರಾಯಚೂರಿನ ಕೋರ್ಟಿನಲ್ಲಿ ಶಿಕ್ಷೆಯನ್ನು ವಿಧಿಸುತ್ತಿದ್ದರು. ಇದರ ಕುರಿತಾಗಿ ನಿಖರವಾದ ಯಾವುದೇ ಆಧಾರಗಳು ಸದ್ಯಕ್ಕೆ ಲಭ್ಯವಿಲ್ಲ. ಈ ವಿಷಯದ ಕುರಿತಾದ ಸಮಗ್ರ ಸಂಶೋಧನೆಯ ಅಗತ್ಯವಿದೆ.

### ಕ್ಷೇತ್ರಕಾರ್ಯದಲ್ಲಿ ಸಂದರ್ಶಿಸಲಾದ ವ್ಯಕ್ತಿಗಳು

೧. ರಾಮನಗೌಡ ಪಾಟೀಲ, ನವಿಲಗುಡ್ಡ, ದೇವದುರ್ಗ ತಾಲ್ಲೂಕು, ವಿಶ್ರಾಂತ ಮುಖ್ಯೋಪಾಧ್ಯಾಯರು, ವಯಸ್ಸು ೭೬

೨. ರಾಜಾ ಕಿಲಚನಾಯಕ, ದೇವದುರ್ಗದ ಅರಸು ವಂಶಸ್ಥರು, ದೇವದುರ್ಗ, ವಯಸ್ಸು ೭೫

೩. ರಾಜಾ ವೆಂಕಟಪ್ಪನಾಯಕ, ದೇವದುರ್ಗ ಅರಸು ವಂಶಸ್ಥರು, ದೇವದುರ್ಗ, ವಯಸ್ಸು ೬೨

೪. ವಿ.ಎಂ.ಮೇಟಿ, ನ್ಯಾಯವಾದಿಗಳು, ದೇವದುರ್ಗ, ವಯಸ್ಸು ೫೦

೫. ದೇವದುರ್ಗ ಅರಸು ವಂಶಸ್ಥರಲ್ಲಿರುವ ಕೆಲವು ಕಾಗದಪತ್ರಗಳು

೧೮

# ಯಲಹಂಕಪ್ರಭುಗಳ ನ್ಯಾಯಾಡಳಿತ

**ಕೆ. ಎಲ್. ರಾಜಶೇಖರ್**

*ರಾಜ್ಞಃ ಸ್ವಧರ್ಮಃ ಸ್ವರ್ಗಾಯ ಪ್ರಜಾಃ ಧರ್ಮೇಣ ರಕ್ಷಿತುಃ |*
*ಅರಕ್ಷಿತುರ್ವಾಕ್ಷೇಪುರ್ವಾ ಮಿಥ್ಯಾ ದಂಡ ಮತೋನ್ಯಥಾ |*

"ಕ್ಷಾತ್ರಬದುಕಿನ ಆಯುಧಜೀವನವು, ಧರ್ಮದ ನೆಲೆಗಟ್ಟಿನ ಮೇಲೆ ಪಾಲನೆಗೈಯುತ್ತಾ ರಾಜಧರ್ಮವನ್ನು ಸ್ಥಾಪಿಸುವುದು ಸ್ವರ್ಗದ ಪರಿಕಲ್ಪನೆ. ಅದನ್ನು ಮೀರಿದ, ಅಕ್ಷಾತ್ರಬದುಕನ್ನು ಪೋಷಿಸಿದ, ಮಿಥ್ಯವಾದ ನ್ಯಾಯದಂಡವನ್ನು ಹೇರುವ ರಾಜನಿಗೆ ನರಕವು ತಪ್ಪದು." ಕೌಟಿಲ್ಯನ ಈ ವಾಕ್ಯಗಳು ಸಾರ್ವಕಾಲಿಕವಾದ ಸತ್ಯವನ್ನು ಅರುಹುತ್ತಿರುವಂತೆ ಅನಿಸಿದರೂ ಪುನರ್‌ಪರಿಶೀಲಿಸುವ ಅಗತ್ಯವಿದೆ. ಈ ಮಾತುಗಳು ಒಂದೆಡೆ ಸರಿಯೆನಿಸಿದರೂ ಪುರೋಹಿತಶಾಹಿ ನೆಲೆಯಲ್ಲಿ ರಚಿತವಾದ ವ್ಯಾಖ್ಯಾನಗಳೆನಿಸುತ್ತವೆ. ಚರಿತ್ರಾರಂಭಕಾಲದಿಂದ ವಸಾಹತುಕಾಲದವರೆಗೆ ಇವೇ ವಾಕ್ಯಗಳೇ ಹಿಂದೂಸಾಮ್ರಾಜ್ಯಶಾಹಿಯ ವಿವಿಧ ಅರಸುಮನೆತನಗಳ ಧ್ಯೇಯವಾಗಿ ಪರಿಣಮಿಸಿರುವ ಸಾಧ್ಯತೆಗಳಿವೆ.

ಕರ್ನಾಟಕದ ಚರಿತ್ರೆಯ ಸಂದರ್ಭದಲ್ಲೂ ಕೌಟಿಲ್ಯನ ಈ ಮಾತುಗಳು ಅನ್ವಯಗೊಂಡಿರುವುದನ್ನು ಕಾಣುತ್ತೇವೆ. ಮೇಲ್ನೋಟಕ್ಕೆ ಶುದ್ಧಜ್ಞಾನದ ಧಾರ್ಮಿಕ ತಳಹದಿಯ ಮೇಲಿನ ರಾಜನೀತಿಯಾಗಿ ಕಂಡರೂ, ಅಧೀನರಾದ ಪ್ರಜೆಗಳನ್ನು ಹತೋಟಿಯಲ್ಲಿಡುವ ಸಾಧನವಾಗಿ ರಚಿತವಾದ ಮಾತುಗಳೆನ್ನಬೇಕು. ಇವು ಕೇಂದ್ರೀಕೃತ ವ್ಯವಸ್ಥೆಯ ಬೃಹತ್ ಸಾಮ್ರಾಜ್ಯದಾದಿಯಾಗಿ ವಿಕೇಂದ್ರೀಕೃತ ಕಿರುಸಂಸ್ಥಾನಗಳವರೆಗೆ ವ್ಯಾಖ್ಯಾನಗೊಂಡಿರುವುದನ್ನು ಗುರುತಿಸಬಹುದು. ಇದರಿಂದ ಊಳಿಗಮಾನ್ಯ ಸಂಸ್ಕೃತಿಯ ವಿಜಯನಗರ ಸಾಮ್ರಾಟರಾಗಲಿ, ಅವರ ಅಧೀನ ಸಂಸ್ಕೃತಿಯ ಅಮರನಾಯಕರಾಗಲಿ ಹೊರತಾಗಿರಲಿಲ್ಲವೆನ್ನಬೇಕು. ಅಂತಹ ಅಮರನಾಯಕರಲ್ಲಿ ಯಲಹಂಕಪ್ರಭುಗಳು ಸಹಾ ಇದ್ದು, ಬಹುತೇಕ ವಿಜಯನಗರದರಸರ ನ್ಯಾಯಪದ್ಧತಿಯನ್ನು ಅಳವಡಿಸಿಕೊಂಡ ಸಾಮಂತ ಮನೆತನವಾಗಿ ಅವರನ್ನು ಗುರುತಿಸಬಹುದು.

ಯಲಹಂಕಪ್ರಭುಗಳ ನ್ಯಾಯಾಡಳಿತವನ್ನು ಧಾರ್ಮಿಕ ನೆಲೆಗಟ್ಟಿನ ಮೇಲೆ ನಿರ್ಣಯಿಸಬೇಕಾಗುತ್ತದೆ. ಅಂದರೆ ಧರ್ಮ ಮತ್ತು ನ್ಯಾಯ ಎಂಬುವು ಒಂದೇ ನಾಣ್ಯದ ಎರಡುಮುಖಗಳಿದ್ದಂತೆ. ಇಲ್ಲಿ ಧರ್ಮ ಬಿಟ್ಟು ನ್ಯಾಯವಿಲ್ಲ; ನ್ಯಾಯದ ತೀರ್ಪಿನೊಳಗೆ ಧಾರ್ಮಿಕ ಮನೋಗತ ಸೇರಿಕೊಂಡಿದೆ. ಇಲ್ಲಿ ಅಪರಾಧದ ತೀವ್ರತೆಗನುಗುಣವಾಗಿ ನ್ಯಾಯದ ತೀರ್ಮಾನಗಳು ಅಭಿವ್ಯಕ್ತಗೊಳ್ಳುತ್ತಿದ್ದವು. ಅದು 'ಗ್ರಾಮಸಭೆ' ಇರಲಿ, ಪ್ರಭುಗಳ 'ನಾಡಗೌಡಿಕೆ' ಇರಲಿ ಕಾರ್ಯವ್ಯಾಪ್ತಿಯು ತನ್ನ ಸಾಮರ್ಥ್ಯಾನುಸಾರ ನಡೆಯುತ್ತಿತ್ತು.

## ಗ್ರಾಮನ್ಯಾಯ

ಯಲಹಂಕಪ್ರಭುಗಳ ಆಡಳಿತಮೂಲವನ್ನು ಗ್ರಾಮದ ನೆಲೆಯಲ್ಲೇ ಗುರುತಿಸಬೇಕು. ಪ್ರತಿಯೊಂದು ಗ್ರಾಮವೂ ಪ್ರಾದೇಶಿಕ ಎಲ್ಲೆ ಹೊಂದಿತ್ತು. ಅದು ಚಿಕ್ಕಗ್ರಾಮವಿರಲಿ, ದೊಡ್ಡಗ್ರಾಮವಿರಲಿ; ಅದರ ಭೌಗೋಳಿಕವ್ಯಾಪ್ತಿಗೆ ಅನುಗುಣವಾಗಿ ಸಭೆಯು ಜರುಗುತ್ತಿತ್ತು. ೨೦ ರಿಂದ ೨೫ ಒಕ್ಕಲು ಕುಟುಂಬದ ಸಣ್ಣ ಗ್ರಾಮದಿಂದ ೧೦೦ ರಿಂದ ೧೨೦ ಒಕ್ಕಲು ಕುಟುಂಬದ ವಿಸ್ತಾರದ ಗ್ರಾಮದವರೆಗೆ ಪ್ರತ್ಯೇಕವಾದ ಗ್ರಾಮಸಭೆ ಅಥವಾ ಗ್ರಾಮ ಪಂಚಾಯತಿ ಇರುತಿತ್ತು. ಇವುಗಳು ಸ್ವಯಂಪೂರ್ಣವಾದ ಘಟಕಗಳಾಗಿದ್ದು, ದೈನಂದಿನ ಎಲ್ಲಾ ವ್ಯವಹಾರಗಳು ಇವುಗಳ ಮೂಲಕ ನಡೆಯುತ್ತಿದ್ದವು. ಇದಕ್ಕೆ ಮುಖ್ಯಸ್ಥನಾಗಿ 'ಗ್ರಾಮಗೌಡ'ನು ನೇಮಕಗೊಂಡಿರುತ್ತಿದ್ದನು.

ಈತನು ಗ್ರಾಮಸ್ಥರು ಮತ್ತು ನಾಡಪ್ರಭುಗಳ ನಡುವಣ ಕೊಂಡಿಯಾಗಿ ಕಾರ್ಯನಿರ್ವಹಿಸ ಬೇಕಾಗಿತ್ತು. ಕೆಲವೊಮ್ಮೆ ಅಧಿಕಾರಿಶಾಹಿಯ ಅಕ್ರಮ, ಅನ್ಯಾಯ, ದಬ್ಬಾಳಿಕೆಗಳನ್ನು ತಡೆಗಟ್ಟುವ; ಗ್ರಾಮಸ್ಥರ ಕಷ್ಟ-ಸುಖಗಳಿಗೆ ಸ್ಪಂದಿಸುವ ದ್ವಿಗುಣ ಸ್ವಭಾವವನ್ನು ಗ್ರಾಮಗೌಡನು ಹೊಂದಿರುತ್ತಿದ್ದನು. ಮುಖ್ಯವಾಗಿ ಗ್ರಾಮವ್ಯಾಪ್ತಿಯಲ್ಲಿ ಬರುವ ಸಾಗುವಳಿ ಭೂಮಿಗೆ ಕಂದಾಯ ವಿಧಿಸುವುದು, ವಿವಿಧ ವೃತ್ತಿಗಳಿಗನುಗುಣವಾಗಿ ಬರುವ ಆದಾಯಕ್ಕೆ ತಕ್ಕ ತೆರಿಗೆಯನ್ನು ವಿಧಿಸುವುದು, ಸಂಗ್ರಹಗೊಂಡ ದ್ರವ್ಯವನ್ನು ಕೇಂದ್ರದ ಖಜಾನೆಗೆ ಕಳುಹಿಸುವುದು ಈತನ ದೈನಂದಿನ ಕಾರ್ಯವಾಗಿರುತ್ತಿತ್ತು. ಇಲ್ಲಿ ವಿಧಿಸುವ ತೆರಿಗೆ ನ್ಯಾಯಸಮ್ಮತವಾಗಿರುವುದೇ ಎಂಬುದು ಗ್ರಾಮಗೌಡನ ಪರಿವ್ಯಾಪ್ತಿಗೆ ಒಳಪಡುತ್ತಿತ್ತು. ಅದೇರೀತಿ ಸೈನ್ಯವ್ಯವಸ್ಥೆಯನ್ನು ಸಜ್ಜುಗೊಳಿಸುವ ಸಂದರ್ಭದಲ್ಲಿ ಕುಟುಂಬಕ್ಕೊಬ್ಬ ಸದಸ್ಯರಂತೆ ಆಯ್ಕೆಯ ವಿಧಾನವನ್ನು ಅನುಸರಿಸುವ ಪದ್ಧತಿಯನ್ನು ಇಲ್ಲಿ ಕಾಣಬಹುದು. ಅಲ್ಲದೆ, ಗ್ರಾಮಸಭೆಯ ನ್ಯಾಯಾಲಯದಲ್ಲಿ ವ್ಯಕ್ತಿಗತ ಇಲ್ಲವೆ, ಸಮೂಹ ವ್ಯಾಜ್ಯಗಳಿರಲಿ ತನ್ನ ಗ್ರಾಮನ್ಯಾಯಕ್ಕನುಗುಣವಾಗಿ ಕ್ರಮವಹಿಸುವುದು ಈತನ ಕರ್ತವ್ಯವಾಗಿರುತ್ತಿತ್ತು. ಇದನ್ನು 'ಗೌಡಗೊಡಗೆ', 'ಗೌಡಿಕೆ ಕೊಡುಗೆ' ಎಂದು ಕರೆಯು ತ್ತಿದ್ದು, ಜನೋಪಯೋಗಿ ಕಾರ್ಯದಲ್ಲಿ ತೊಡಗುವ, ಸ್ಥಳೀಯರ ನೋವುಗಳಿಗೆ ಸ್ಪಂದಿಸುವ, ರಕ್ಷಿಸುವ ಸಾಮರ್ಥ್ಯ ವುಳ್ಳವನಿಗೆ ಈ 'ಗೌಡಿಕೆ' ಪದವಿ ದಕ್ಕುತ್ತಿತ್ತು ಎನ್ನಬೇಕು.

ಗ್ರಾಮ ಗೌಡಿಕೆಯಲ್ಲದೆ, 'ಸ್ಥಳದ ಗೌಡಿಕೆ'ಯೂ ಜಾರಿಯಲ್ಲಿತ್ತು. ಒಂದು ಗ್ರಾಮಕ್ಕಿಂತ ಹೆಚ್ಚಿನ ಗ್ರಾಮಗಳು ಇದರ ಪರಿಧಿಗೆ ಒಳಪಡುತ್ತಿದ್ದವು. ಕೆಲವೆಡೆ ಇದನ್ನು 'ಮಂದೆಗೌಡಿಕೆ' ಎಂದು ಕರೆಯಲಾಗುತ್ತಿದ್ದು, ಗ್ರಾಮನ್ಯಾಯಸಭೆಯಲ್ಲಿ ಇತ್ಯರ್ಥವಾಗದ ವ್ಯಾಜ್ಯಗಳನ್ನು ಇಲ್ಲಿಗೆ ಸ್ಥಳಾಂತರಿಸಲಾಗುತ್ತಿತ್ತು. ಇಲ್ಲಿಯೂ ತೀರ್ಮಾನವಾಗದ ಸಂದರ್ಭದಲ್ಲಿ 'ನಾಡಸಭೆ'ಗೆ ಒಯ್ಯಲಾಗುತ್ತಿತ್ತು.

### ನಾಡಸಭೆ

ಗ್ರಾಮಸಭೆ ಮತ್ತು ಗ್ರಾಮಗೌಡಿಕೆಗಳಲ್ಲಿ ಇತ್ಯರ್ಥವಾಗದ ಫಿರ್ಯಾದುಗಳನ್ನು ನಾಡಸಭೆಗೆ ಸ್ಥಳಾಂತರಿಸಲಾಗುತ್ತಿತ್ತು. ಇಲ್ಲಿಯ ಮುಖ್ಯಸ್ಥನಾಗಿ 'ನಾಡಗೌಡ' ಅಥವಾ 'ನಾಡಪ್ರಭು' ಇರುತ್ತಿದ್ದನು. ಇಂದಿನ ಹೋಬಳಿವ್ಯಾಪ್ತಿಯ ಭೌಗೋಳಿಕ ಎಲ್ಲೆಗಳನ್ನು ಹೊಂದಿರುವ ಈ ನಾಡುಪ್ರದೇಶವು ಪ್ರಮುಖ ಆಡಳಿತ ಘಟಕವಾಗಿತ್ತು. ತನ್ನ ವ್ಯಾಪ್ತಿ ಪ್ರದೇಶದ ಗ್ರಾಮಗಳಲ್ಲಿ ಶಾಂತಿ ಸುವ್ಯವಸ್ಥೆಯನ್ನು ಕಾಯ್ದುಕೊಳ್ಳುವ ಮತ್ತು ರಾಜ್ಯದ ಬೊಕ್ಕಸಕ್ಕೆ ಸಂಪನ್ಮೂಲಗಳನ್ನು ಕ್ರೋಢೀಕರಿಸುವ, ಸೈನ್ಯವ್ಯವಸ್ಥೆಗೆ ಯೋಧರನ್ನು ಜಮಾಮಾಡುವ ಗುರುತರವಾದ ಜವಾಬ್ದಾರಿ ಕೆಲಸದಲ್ಲಿ ನಾಡಗೌಡರು ಪ್ರಮುಖವಾಗಿ ಕಾರ್ಯನಿರ್ವಹಿಸುತ್ತಿದ್ದರು. ಜೊತೆಗೆ ವಿವಿಧ ಗ್ರಾಮಗಳ ನಡುವೆ ಹುಟ್ಟಿಕೊಳ್ಳುವ ಸಂಘರ್ಷ, ವೈಮನಸ್ಸುಗಳು, ಕೃಷಿ-ವ್ಯಾಜ್ಯ, ದಾಳಿ-ದಂಗೆಗಳಂಥ ಆಕ್ರಮಣದ ಸಂದರ್ಭಗಳಲ್ಲಿ ಈ ನಾಡಗೌಡರು ನೆರವಿಗೆ ಬರುವುದಲ್ಲದೆ, ನ್ಯಾಯತೀರ್ಮಾನದಲ್ಲಿ ಪ್ರಮುಖಪಾತ್ರ ವಹಿಸುತ್ತಿದ್ದರು. ಜನರಿಗೆ ರಕ್ಷಣೆ ನೀಡುವುದಲ್ಲದೆ ಜನಸಮುದಾಯಗಳ ನಡುವೆ ಶಾಂತಿಭಂಗವಾಗದಂತೆ ಎಚ್ಚರವಹಿಸುವ ಹೊಣೆಗಾರಿಕೆಯನ್ನು ನಾಡಗೌಡರಿಗೆ ವಹಿಸಲಾಗಿತ್ತು. ಈ ಕಾರ್ಯದಲ್ಲಿ ಯಲಹಂಕಪ್ರಭುಗಳು ಬಹು ಯಶಸ್ವಿಯಾಗಿ ಹಾಗೂ ಸಮರ್ಥವಾಗಿ ಆಡಳಿತ ನಿರ್ವಹಿಸಿರುವುದು ಸಮಕಾಲೀನ ಶಾಸನಗಳಿಂದ ತಿಳಿದುಬರುತ್ತದೆ. ಅಲ್ಲದೆ, ತಮಗೆ ದತ್ತವಾದ ಅಧಿಕಾರದ ಹಿನ್ನೆಲೆಯಲ್ಲಿ ಕೋಟೆಕಟ್ಟುವುದು, ಸೈನ್ಯವ್ಯವಸ್ಥೆ ಬಲಪಡಿಸುವುದು, ಧಾರ್ಮಿಕಸ್ಥಳಗಳ ಉಸ್ತುವಾರಿ, ದಾನದತ್ತಿಗಳನ್ನು ನೀಡುವುದು, ತೆರಿಗೆ ಸ್ಥಾಪನೆ-ಮನ್ನಾ, ಗ್ರಾಮನಿರ್ಮಾಣ, ಕೆರೆನಿರ್ಮಾಣ ಮುಂತಾದ ಜನೋಪಯೋಗಿ ಕಾರ್ಯಗಳಲ್ಲಿ ತೊಡಗುವುದರೊಂದಿಗೆ, ತಮ್ಮ ಭೂಪ್ರದೇಶದ ವ್ಯಾಪ್ತಿಯಲ್ಲಿ ಸಮರ್ಥ ನ್ಯಾಯಾಧಿಕಾರಿಗಳಾಗಿ ಯಲಹಂಕಪ್ರಭುಗಳು ತಮ್ಮನ್ನು ಗುರುತಿಸಿಕೊಂಡಿದ್ದಾರೆ. ಬೆಂಗಳೂರು, ಮಾಗಡಿ ಹಾಗೂ ತುಮಕೂರುಗಳಲ್ಲಿ ದೊರೆತಿರುವ ಕ್ರಿ.ಶ. ೧೪೮೬ ಮತ್ತು ೧೫೦೫ರ ಶಾಸನಗಳು ಈ ಮೇಲಿನ ಮಾತುಗಳನ್ನು ಪುಷ್ಟೀಕರಿಸುತ್ತವೆ.

### ಚಾವಡಿ

ನ್ಯಾಯತೀರ್ಮಾನದ ಕೇಂದ್ರಸ್ಥಾನವಾಗಿ ಚಾವಡಿಯ ಪರಿಕಲ್ಪನೆಯಿದೆ. ವಿಜಯನಗರೋತ್ತರ ಅಮರನಾಯಕರ ವ್ಯವಸ್ಥೆಯಲ್ಲಿ ಪ್ರಮುಖವಾಗಿ ಇದನ್ನು ಗುರುತಿಸಬಹುದು. ಅದರಲ್ಲೂ ಯಲಹಂಕಪ್ರಭುಗಳ ಕಾಲಾವಧಿಯಲ್ಲಿ ಚಾವಡಿಯ ಪರಿಕಲ್ಪನೆಯನ್ನು

ಸ್ಪಷ್ಟವಾಗಿ ನೀಡಲಾಗಿದೆ. ಇಮ್ಮಡಿ ಕೆಂಪೇಗೌಡನು ತನ್ನ ಅವಧಿಯಲ್ಲಿ ಬೆಂಗಳೂರು ಕೋಟೆಯೊಳಗಿನ ತನ್ನ ಅರಮನೆಯ ಒಡ್ಡೋಲಗದಲ್ಲಿ ಚಾವಡಿಯೊಂದನ್ನು ವಿಸ್ತಾರವಾಗಿ ಕಟ್ಟಿಸಿದನು. ನಡುವೆ ಆಸನವೊಂದನ್ನು ಇರಿಸಿ ಅದರಲ್ಲಿ ಕೂರುತ್ತಿದ್ದನು. ಆಡಳಿತಾಂಗದ ಎಲ್ಲಾ ಚಟುವಟಿಕೆಗಳು ಒಡ್ಡೋಲಗದಲ್ಲೇ ನಡೆಯುತ್ತಿದ್ದವು. ಈ ದರ್ಬಾರು ವಾರಕ್ಕೊಮ್ಮೆ ಇಲ್ಲವೇ ಕೆಲ ತುರ್ತುಸಂದರ್ಭದಲ್ಲಿ ವಾರದಲ್ಲಿ ೨-೩ ಬಾರಿ ನಡೆಯುತ್ತಿತ್ತೆನ್ನ ಲಾಗಿದೆ. ಅಧಿಕಾರಿಗಳು, ವಿದ್ವಾಂಸರು, ನಾಡಗೌಡರು ಇನ್ನಿತರ ಪ್ರಮುಖರು ಇಲ್ಲಿ ಸೇರುತ್ತಿದ್ದರು. ಅವರವರ ಕಾರ್ಯಭಾರದ ವರದಿಯನ್ನು ಇಲ್ಲಿ ಒಪ್ಪಿಸಬೇಕಾಗಿತ್ತು.ಆ ವರದಿಯ ಸಮರ್ಪಕತೆ ಹಾಗೂ ಕುಂದುಕೊರತೆಗಳ ಅನ್ವಯ ನ್ಯಾಯತೀರ್ಮಾನಗಳು ಜರುಗುತ್ತಿದ್ದವು. ನ್ಯಾಯತೀರ್ಮಾನಗಳಲ್ಲಿ ನಾಡಗೌಡರಿಗೆ ಚಾವಡಿಯ ಬುದ್ಧಿವಂತರು ಮತ್ತು ಪಂಡಿತರು ಸಹಾಯಕರಾಗಿರುತ್ತಿದ್ದರು. ಜಾತಿಸಂಘರ್ಷ, ಕೌಟುಂಬಿಕ ಕಲಹಗಳ ಜೊತೆಗೆ ಎಲ್ಲಾ ಸ್ಥಳೀಯ ವಿವಾದಗಳನ್ನು ಚಾವಡಿ ಬಗೆಹರಿಸುತ್ತಿತ್ತು. ಗ್ರಾಮಸಭೆಯಲ್ಲಿ ದೊರಕದ ನ್ಯಾಯ, ಮೇಲ್ಮನವಿಗಳಿಗೆ ಚಾವಡಿಯಲ್ಲಿ ಉತ್ತರ ದೊರಕುತ್ತಿತ್ತು.

ಅರಮನೆಯ ಮುಂಭಾಗದಲ್ಲಿ ಸಾಮಾನ್ಯವಾಗಿ ಐದು ಚಾವಡಿಗಳಿರುತ್ತಿದ್ದವು ಎನ್ನಲಾಗಿದೆ. ಅವುಗಳನ್ನು ಅಟ್ಟವಣೆ, ಬೊಕ್ಕಸ, ಠಾಣ್ಯ, ಗೋವು, ಸುಂಕದಚಾವಡಿಗಳೆಂದು ಕರೆಯಲಾಗುತ್ತಿತ್ತು. ಪ್ರತಿಯೊಂದು ಚಾವಡಿಗೂ ಒಬ್ಬ ಅಧಿಕಾರಿ ಹಾಗೂ ಅಧೀನ ಸಿಬ್ಬಂದಿವರ್ಗವು ಕೆಲಸದಲ್ಲಿ ತೊಡಗಿರುತ್ತಿದ್ದರು. ಫಿರ್ಯಾದಿಗಳಿಗೆ ಸಂಬಂಧಿಸಿದಂತೆ ಠಾಣ್ಯ ಚಾವಡಿಯಲ್ಲಿ ದೂರುಗಳು ದಾಖಲಾಗುತ್ತಿದ್ದವು. ದಾಖಲಾದ ದೂರಗಳನ್ವಯ ಪರಿಹಾರಸೂತ್ರಗಳನ್ನು ಕಂಡುಕೊಂಡು ಶಿಕ್ಷೆ ಇಲ್ಲವೆ ನ್ಯಾಯದ ತೀರ್ಮಾನಗಳು ವ್ಯಕ್ತಗೊಳ್ಳುತ್ತಿದ್ದವು. ನೆಲಮಂಗಲದ ಶಾಸನವೊಂದು ೩೩ ಚಾವಡಿಗಳ ಪ್ರಸ್ತಾಪವನ್ನು ಮಾಡುತ್ತದೆ. ಆದರೆ ಪ್ರತಿ ಚಾವಡಿಯ ಕಾರ್ಯವಿಧಾನದ ಬಗ್ಗೆ ಮಾಹಿತಿ ನೀಡಿಲ್ಲದಿರುವುದು ಮಾಹಿತಿದೃಷ್ಟಿಯಿಂದ ಬಹುದೊಡ್ಡ ಕೊರತೆಯಾಗಿದೆ. ಪ್ರತಿಯೊಂದು ಚಾವಡಿಯ ಕಾರ್ಯೋದ್ದೇಶದ ಬಗ್ಗೆ ವಿವರಗಳು ಲಭ್ಯವಾಗಿದ್ದರೆ ಚಾವಡಿಗಳ ಸಮರ್ಪಕ ಅಧ್ಯಯನಕ್ಕೆ ಅನುಕೂಲವಾಗುತ್ತಿತ್ತು.

ಯಲಹಂಕಪ್ರಭುಗಳ ಕಾಲಾವಧಿಯಲ್ಲಿ ಜಾತಿಸಂಬಂಧಿ, ಕೃಷಿಸಂಬಂಧಿ ವಾಜ್ಯಗಳು-ನಿರ್ಣಯಗಳು ಹೆಚ್ಚಾಗಿ ಕಂಡುಬರುತ್ತವೆ. ಒಂದು ಕುಲದವರು ಮತ್ತೊಂದು ಕುಲದವರನ್ನು ತೊಂದರೆಗೀಡುಮಾಡಬಾರದು; ಆಯಾ ಕುಲದವರ ಸಂಪ್ರದಾಯ ಕಟ್ಟಳೆಗಳನ್ನು ತಪ್ಪಿ ನಡೆಯಬಾರದೆಂಬ ಆಜ್ಞೆಯನ್ನು ಪಾಲಿಸುವಂತೆ ತಾಕೀತು ಮಾಡಲಾಗಿತ್ತು. ಜಾತಿನಿಂದನೆ ಇಲ್ಲವೆ ಅನಿರೀಕ್ಷಿತ ತಂಟೆ ತಕರಾರುಗಳು ಉದ್ಭವಗೊಂಡಲ್ಲಿ; ಆಯಾ ಕುಲದ ಮುಖಂಡ ರನ್ನು ಚಾವಡಿಗೆ ಕರೆಸಿ ಪ್ರಭುಗಳ ಸಮ್ಮುಖದಲ್ಲೇ ಅವರ ವಾದ-ಪ್ರತಿವಾದಗಳನ್ನು ಕೇಳಿ ನಿರ್ಣಯಗಳನ್ನು ನೀಡುವ ಪ್ರತೀತಿ ಇತ್ತು. ನಿರ್ಣಯನೀಡುವ ಮುನ್ನ ಚಾವಡಿಯಲ್ಲಿ ಉಪಸ್ಥಿತ ಮುಖಂಡರು, ಕರಣೀಕರು ಮುಂತಾದ ಹಿರಿಯ ಆಡಳಿತ ವರ್ಗದೊಂದಿಗೆ

ಸಮಾಲೋಚಿಸಿ, ಎರಡೂ ಕುಲದವರಿಗೆ ಸಮ್ಮತವಾಗುವ ನಿಟ್ಟಿನಲ್ಲಿ ತೀರ್ಪನ್ನು ನೀಡುವ ಸಮಚಿತ್ತ ಮನಸ್ಸು ಪ್ರಭುವಾದವನಿಗೆ ಇರುತ್ತಿತ್ತು. ಇಲ್ಲಿ ರಾಜನ ಮಾತು ಕೊನೆಯದಾದರೂ ಪ್ರಜಾಭಿಪ್ರಾಯದ ನೆಲೆಗಟ್ಟಿನ ಮೇಲೆ ರಚಿತವಾದ ನ್ಯಾಯಶಾಸನವಾಗಿದ್ದರಿಂದ ಪ್ರತಿರೋಧ ವಿಲ್ಲದೆ ಪಾಲಿಸುವ ಜವಾಬ್ದಾರಿ ಪ್ರಜೆಗಳದ್ದಾಗಿತ್ತು. ಇದು ಕೇವಲ ಕುಲದ ಪ್ರಶ್ನೆಯಾಗಿರದೆ, ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ವಿಷಯಗಳಲ್ಲೂ ಇಂಥ ನ್ಯಾಯನಿರ್ಣಯಗಳನ್ನು ಕಾಣಬಹುದಾಗಿದೆ.

ಇಮ್ಮಡಿ ಕೆಂಪೇಗೌಡನ ಕಾಲದ ಒಂದು ದೃಷ್ಟಾಂತವನ್ನು ಪ್ರಸ್ತಾಪಿಸುವುದಾದರೆ, ದ್ಯಾವರು ಸಂಪ್ರದಾಯದ ಕನ್ಯೆಯರಲ್ಲಿ ಕುಲಪರಂಪರೆಯಾಗಿ ಬಂದ ಕಿರಿವಯಸ್ಸಿನ ಹೆಣ್ಣುಮಕ್ಕಳು ಹರಕೆಯ ವಿಧಿಯಲ್ಲಿ ತಮ್ಮ ಕಿರುಬೆರಳನ್ನು ಕತ್ತರಿಸಿಕೊಳ್ಳುವ ಪದ್ಧತಿ ಇತ್ತು. ಇಂಥ ದೇಹದಂಡನೆಯ ಹಿಂಸಾತ್ಮಕ ಹಾಗೂ ಅಮಾನವೀಯ ಪದ್ಧತಿಯನ್ನು ಕೆಂಪೇಗೌಡನು ನಿಷೇಧಮಾಡುವಂತೆ ಆಜ್ಞೆಮಾಡಿದನು. ಪರಂಪರೆಯಾಗಿ ಆಚರಣೆಗೊಳ್ಳು ತ್ತಿದ್ದ ಪದ್ಧತಿಯನ್ನು ನಿಲ್ಲಿಸಿ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸುಧಾರಣೆಗಳನ್ನು ತರುವುದೆಂದರೆ ಪ್ರವಾಹದ ಎದುರು ಈಸಿದಂತೆಯೇ ಸರಿ. ಅದರಲ್ಲೂ ರೂಢಿಗತವಾದ ಆಚರಣೆಗಳನ್ನು ಮನುಷ್ಯರ ಮನಸ್ಸಿನಿಂದ ದೂರಗೊಳಿಸುವುದು ಅಷ್ಟು ಸುಲಭದ ಮಾತಲ್ಲ. ಇಮ್ಮಡಿ ಕೆಂಪೇಗೌಡನು ಅಂಥ ನಿರ್ಣಯವನ್ನು ಕೈಗೊಂಡು ಕಾನೂನುರೀತ್ಯ ಸುಧಾರಣೆ ತಂದುದ್ದಕ್ಕೆ ಪ್ರಸ್ತುತ ಪ್ರಕರಣವೇ ಸಾಕ್ಷಿ.

ಮತ್ತೊಂದು ಪ್ರಕರಣವು ಜಾತಿಸಂಘರ್ಷಕ್ಕೆ ಜೀವಂತ ಉದಾಹರಣೆಯೆನ್ನಬೇಕು. ಸಂಪ್ರದಾಯ-ಆಚರಣೆಗಳನ್ನು ದಾಖಲಿಸುವ ನಿಟ್ಟಿನಲ್ಲಿ ಈ ಶಾಸನೋಕ್ತ ಪ್ರಸಂಗ ಪ್ರಮುಖಸ್ಥಾನ ಪಡೆದಿದೆ. ಕನಕಪುರ ತಾಲೂಕಿನ ಭೂತನಹಳ್ಳಿಯಲ್ಲಿ ದೊರೆತ ತಾಮ್ರ ಶಾಸನವೊಂದು ಬಿ.ಎಲ್. ರೈಸ್ ಸಂಪಾದಿತ ಎಪಿಗ್ರಾಫಿಯಾ ಕರ್ನಾಟಿಕ ಸಂಪುಟ ೯ರಲ್ಲಿ ಪ್ರಕಟವಾಗಿದೆ. ಕ್ರಿ.ಶ. ೧೭೦೦ರ ಅವಧಿಯ ಈ ಶಾಸನದಲ್ಲಿ ಭೂತನಹಳ್ಳಿಯ ಚೆನ್ನಿಗರಾಯ ದೇವಸ್ಥಾನದ ಮುಂಭಾಗದಲ್ಲಿ ಕ್ಷೌರಿಕರು ತಮ್ಮ ವಾಲಗಕ್ಕೆ ಮಲ್ಲಿಗೆಹೂವನ್ನು ಸಿಂಗರಿಸಿಕೊಂಡು ಹಾಗೂ ಕೊರಳಿಗೆ ಹಾರವಾಗಿ ಹಾಕಿಕೊಂಡು ವಾದ್ಯ ನುಡಿಸುತ್ತಿರುತ್ತಾರೆ. ಆ ಸ್ಥಳಕ್ಕೆ ಆಗಮಿಸಿದ ಮಡಿವಾಳ ಚೆನ್ನಶೆಟ್ಟಿ ಎಂಬುವನು ವಾಲಗಕ್ಕೆ ಮಲ್ಲಿಗೆಹೂವನ್ನು ಮುಡಿಸಿರುವುದು, ಕುತ್ತಿಗೆಗೆ ಸುತ್ತಿಕೊಂಡಿರುವುದು ತಪ್ಪೆಂದು ಆಕ್ಷೇಪಿಸಿ ಸಿಂಗರಿಸಿದ್ದ ಹೂವನ್ನು ಕಿತ್ತುಹಾಕಲು ಯತ್ನಿಸುತ್ತಾನೆ. ಅದಕ್ಕೆ ಪ್ರತಿರೋಧ ಒಡ್ಡಿದ ಕ್ಷೌರಿಕರು ಮಲ್ಲಿಗೆಹೂವು ನಾವು ಮುಡಿಯಬಾರದೆಂಬುದಕ್ಕೆ ಕಾನೂನು ಎಲ್ಲಿದೆ, ದೇಶ-ನಾಡಿನವರ ಬಳಿ ಕೇಳೋಣವೆಂದು ನಾಡಸಭೆಗೆ ತೆರಳುತ್ತಾರೆ. ಅಲ್ಲಿ ಎರಡೂ ಕುಲದ ಗೌರವಾನ್ವಿತ ಮುಖಂಡರು, ವ್ಯಾಪಾರಿಗಳು, ನಾಡಸಭೆ ಅಧಿಕಾರಿಗಳು, ಸಭೆಸೇರಿ ಘಟನೆಯ ಬಗ್ಗೆ ವಾದ-ಪ್ರತಿವಾದಗಳನ್ನು ಆಲಿಸುತ್ತಾರೆ. ಬದ್ಧತೆಯ ವಾದ ಮಂಡಿಸಿದ ಅಗಸರ ಚೆನ್ನಶೆಟ್ಟಿಯು "ಮಲ್ಲಿಗೆಹೂ ನಮ್ಮ ತಾಯಿಗೆ ಸಲ್ಲುವಂತಹದು, ಅದನ್ನು ಹಜಾಮರು ಮುಡಿಯಕೂಡದು,

ಇದು ನಮ್ಮ ಸಂಪ್ರದಾಯಕ್ಕೆ ವ್ಯತಿರಿಕ್ತವಾದುದೆಂದು" ಪ್ರತಿಪಾದಿಸುತ್ತಾನೆ. ಇದಕ್ಕೆ ಪ್ರತಿಯಾಗಿ ನ್ಯಾಯನಿರ್ಣಾಯಕರು ಕ್ಷೌರಿಕರಲ್ಲಿ ವಿವರಣೆ ಕೇಳಿದಾಗ, ಪ್ರತಿವಾದಿಯಾದ ರಾಂಪುರಿಯ ವೆಂಕಟಾಚಲುವನೆಂಬುವನು "ಮಲ್ಲಿಗೆಹೂ ನಮಗೆ ಸಲ್ಲುತ್ತದೆ, ಅದರ ಸಂಬಂಧ ಕಂಚಿಯ ಕಡತಗಳಲ್ಲಿ ದಾಖಲೆಗಳಿವೆ"ಯೆಂದು ತನ್ನ ಕುಲದವರ ಪರವಾಗಿ ವಾದವನ್ನು ಎತ್ತಿಹಿಡಿಯುತ್ತಾನೆ. ಎರಡೂ ವಾದಗಳನ್ನು ಆಲಿಸಿದ ದೇಶ-ನಾಡಿನವರು ತೀರ್ಪನ್ನು ನೀಡುವಲ್ಲಿ ವಿಫಲರಾಗುತ್ತಾರೆ. ಅಂತಿಮವಾಗಿ ತೀರ್ಮಾನವನ್ನು ಕಂಚಿಯ ಮೇಲ್ಮನವಿಗೆ ಸಲ್ಲಿಸುತ್ತಾರೆ. ಆದರೆ ಕಂಚಿಗೆ ತೆರಳುವ ಮುನ್ನ ಎರಡೂ ಕುಲದವರು ಒಪ್ಪಂದವೊಂದಕ್ಕೆ ಬದ್ಧರಾಗುತ್ತಾರೆ.

ಒಪ್ಪಂದದ ಪ್ರಕಾರ, ಕಂಚಿಯಲ್ಲಿನ ತೀರ್ಪು ಆಗಸರ ಪರವಾಗಿದ್ದರೆ, ಕ್ಷೌರಿಕರು ದೇಶ-ನಾಡಿನವರಿಗೂ ಕುಲಕ್ಕೂ ತಪ್ಪುದಂಡವನ್ನು ಕಟ್ಟಬೇಕು; ಹಜಾಮರ ಪರವಾಗಿದ್ದರೆ ಮಡಿವಾಳರು ದೇಶ-ನಾಡಿನವರಿಗೂ ಕುಲಕ್ಕೂ ತಪ್ಪು ದಂಡವನ್ನು ಕಟ್ಟಬೇಕೆಂದು ಮುಚ್ಚಳಿಕೆಪತ್ರವನ್ನು ಬರೆದು ಎರಡೂ ಕುಲದ ಮುಖಂಡರ ಸಮ್ಮುಖದಲ್ಲಿ ಸಹಿ ಮಾಡುತ್ತಾರೆ. ನಂತರ ಎರಡೂ ಕುಲದ ಹಿರಿಯರೊಂದಿಗೆ ಫಿರ್ಯಾದು ಕಂಚಿಗೆ ತೆರಳುತ್ತದೆ. ಕಂಚಿಯಲ್ಲಿ ಕಂಚಿಗ್ರಾಮದ ಅಧಿಪತಿಗಳು, ಕರುಣಿಕರು, ದೇಸದವರು, ನಾಡಿನವರು, ಸುಭಾಕ್ಷತದವರು, ಮೈಸೂರು ಮಹಾಶಾಸ್ತ್ರಿಗಳು, ವರದಯ್ಯಂಗಾರು, ರಾಮಾಂಜಯ್ಯನವರು, ಕೊಂಡಪಾದಾನಿಗಳು ಮುಂತಾದ ಪ್ರಮುಖರ ಸಮಕ್ಷಮದಲ್ಲಿ ಪ್ರಕರಣವನ್ನು ವಿವರಿಸಲಾಗುತ್ತದೆ. ಘಟನೆಯನ್ನು ಆಲಿಸಿದ ಪ್ರಮುಖರು, ತೀರ್ಪನ್ನು ನೀಡಲು ನಿಸಿಕಾಂಬದ ದೇವಸ್ಥಾನದಲ್ಲಿರುವ ಶಾಸನದ ಪ್ರತಿಯನ್ನು ತೆಗೆಯಿಸಿ ತೀರ್ಪನ್ನು ನೀಡಬೇಕಾಗುತ್ತದೆ ಎಂದು ವಿವರಿಸುತ್ತಾರೆ. ಆಗ ಅದರಂತೆ ಆಗಲೆಂಬು ಸರ್ವರೂ ಒಪ್ಪಿಕೊಂಡಾಗ, ಕಂಚಿಗ್ರಾಮದ ಅಧಿಪತಿಗಳು ಶಾಸನದ ಪ್ರತಿಯನ್ನು ತೆಗೆಯಲು ನಲವತ್ತುರೂಪಾಯಿಗಳು ಖರ್ಚು ಆಗುವುದೆಂದು, ಆ ವೆಚ್ಚವನ್ನು ಭರಿಸಿದ್ದಲ್ಲಿ ಮಾತ್ರ ಶಾಸನಪ್ರತಿಯನ್ನು ತೆಗೆಯಲಾಗುವುದೆನ್ನುತ್ತಾರೆ. ಆಗ ಎರಡೂ ಕುಲದವರು ತಲಾ ಇಪ್ಪತ್ತುರೂಪಾಯಿಯಂತೆ ಒಟ್ಟು ನಲವತ್ತುರೂಪಾಯಿಗಳನ್ನು ಕಂಚಿಯ ಗ್ರಾಮಾಧಿಪತಿಗಳಿಗೆ ನೀಡುತ್ತಾರೆ. ನಂತರ ಶಾಸನದ ಪ್ರತಿಯನ್ನು ತೆಗೆದು ಓದಲಾಗಿ, ಹಜಾಮರಿಗೆ "ಕೆಂಪಿನ ಗಣಗಲಹೂವು, ಕೆಂಪಿನ ಹೊಡಪು, ಸಾನೆ ಕಟ್ಕಡೆ ಬಾಗಲು" ಸಲ್ಲುತ್ತದೆಂದು, ಮಡಿವಾಳರಿಗೆ "ಮಲ್ಲಿಗೆಹೂ, ಬಿಳಿಗಣಗಲ ಹೂವು, ಬಿಳಿಛತ್ರಿ, ಬಿಳಿಹೊಡಪು, ಮಲ್ಲಿಗೆ ಮಹಾದೇವಿಗೆ" ಸಲ್ಲುವುದೆಂದು ದಾಖಲಾಗಿರುತ್ತದೆ. ಇದನ್ನು ಭೇದಮಾಡಿದರೆ ಕುಲಕ್ಕೆ ಹೊರಗೆಂದು ತಿಳಿಸಿರುತ್ತದೆ. ಕೊನೆಯಲ್ಲಿ ಕಲ್ಯಾಣದ ಬಸಪ್ಪನು ಈ ಶಾಸನ ನಿಯಮವನ್ನು ಬರೆದವನೆಂದು ದಾಖಲಿಸಿರುತ್ತದೆ.

ತೀರ್ಪಿನ ಹಿನ್ನೆಲೆಯಲ್ಲಿ, ಕ್ಷೌರಿಕರು ತಮ್ಮ ವಿರುದ್ಧ ಮಂಡಿತವಾದ ನ್ಯಾಯಕ್ಕೆ ಬದ್ಧರಾಗಿ ದೇಶ-ನಾಡಿನವರಿಗೆ ಹಾಗೂ ಕುಲಕ್ಕೆ ದಂಡಕಟ್ಟುತ್ತಾರೆ. ಇನ್ನುಮುಂದೆ

ಮಲ್ಲಿಗೆಹೂವನ್ನು ಮುಡಿಯುವುದಿಲ್ಲವೆಂದು ಕಂಚಿಯಲ್ಲಿ ಮುಚ್ಚಳಿಕೆಯನ್ನು ಬರೆದುಕೊಡುತ್ತಾರೆ. ಇಡೀ ಪ್ರಕರಣವನ್ನು ವಿವರಿಸಿದ ಹಾಗೂ ತೀರ್ಪಿನ ಆದೇಶವನ್ನು ದಾಖಲಿಸಿದ ಶಾಸನವೊಂದು ಸಿದ್ಧವಾಗುತ್ತದೆ. ನಂತರ ಅದರ ಪ್ರತಿಯನ್ನು ಎರಡೂ ಕುಲದ ಮುಖಂಡರಿಗೂ ನೀಡಲಾಗುತ್ತದೆ. ಸಾರ್ವಜನಿಕ ತಿಳಿವಳಿಕೆಗಾಗಿ ದೊಡ್ಡಪೇಟೆಯ ಮುಖ್ಯಸ್ಥರ ಬಳಿಯಲ್ಲೂ ನಕಲುಪ್ರತಿಯನ್ನು ಇರಿಸಲಾಗುತ್ತದೆ. ತೀರ್ಮಾನವು ಯಲಹಂಕವೂ ಸೇರಿದಂತೆ ಸೀಗಲ್‌ನಾಡಿನ ಸುತ್ತಮುತ್ತಲಿನ ಪ್ರದೇಶಗಳಿಗೂ ಅನ್ವಯವಾಗುವುದೆಂದು ತಿಳಿಸಲಾಗುತ್ತದೆ. ಯಲಹಂಕನಾಡು ವ್ಯಾಪ್ತಿಯಲ್ಲಿ ಜರುಗಿದ ಈ ಘಟನೆ ನ್ಯಾಯತೀರ್ಮಾನದ ದೃಷ್ಟಿಯಿಂದ ಚಾರಿತ್ರಿಕವಾದ ಸ್ಥಾನವನ್ನು ಪಡೆದಿದೆ ಎನ್ನಬೇಕು.

### ಶಾಸನಗಳು ವಿಧಿಸಿದ ಎಚ್ಚರಿಕೆ

ಯಲಹಂಕಪ್ರಭುಗಳ ಕಾಲಾವಧಿಯ ಶಾಸನಗಳು ಸಂಖ್ಯೆಯ ದೃಷ್ಟಿಯಿಂದ ಅಲ್ಪವೆನಿಸಿದರೂ ವಿಷಯದ ದೃಷ್ಟಿಯಿಂದ ಮಹತ್ವದ ಸ್ಥಾನ ಪಡೆದಿವೆ. ಸುಮಾರು ೨೩೦ ವರ್ಷಗಳ ಆಡಳಿತಾವಧಿಯಲ್ಲಿ ಲಭ್ಯವಾಗಿರುವ ಶಾಸನಗಳ ಸಂಖ್ಯೆ ತುಂಬಾ ವಿರಳ. ಇದುವರೆಗೆ ಉಪಲಬ್ಧವಿರುವ ಶಾಸನಗಳ ಸಂಖ್ಯೆ ನಲವತ್ತು ಮೀರಿಲ್ಲವೆಂದೇ ಹೇಳಬೇಕು. ಮೇಲ್ನೋಟಕ್ಕೆ ಅಧಿಕಾರಿಶಾಹಿಯ ನೆಲೆಯ ಪ್ರಭುತ್ವದ ಸಂಕೇತವಾಗಿರುವ ಶಾಸನಪಾಠಗಳು ಬಹುತೇಕ ಧಾರ್ಮಿಕ ಸಂಗತಿಗಳನ್ನೇ ತಿಳಿಸುತ್ತವೆ. ಸಾಮಾಜಿಕ ಕಳಕಳಿಯ ದೃಷ್ಟಾಂತಗಳು ಕಾಣಿಸಿಕೊಂಡರೂ, ರಾಜಧರ್ಮದ ಪ್ರತಿಪಾದನೆಯನ್ನೇ ಅಭಿವ್ಯಕ್ತಿಸುತ್ತವೆ. ಕೆಲವೊಂದು ಶಾಸನಗಳಲ್ಲಿ ನಿರೂಪಿತವಾಗಿರುವ ಸಂಗತಿಗಳತ್ತ ಸೂಕ್ಷ್ಮವಾಗಿ ಗಮನಹರಿಸಿದರೆ ನ್ಯಾಯಾಧಿಕರಣದ ಪ್ರತಿಪಾದನೆ ಗೋಚರವಾಗುತ್ತದೆ. ಅಂದರೆ ತಮ್ಮ ಸುಪರ್ದಿನಲ್ಲಿ ರಚಿತಗೊಂಡಿರುವ ಶಾಸನಗಳಲ್ಲಿ, ತಾವು ನೀಡಿರುವ ದಾನ-ಧರ್ಮ-ದತ್ತಿಗಳಿಗೆ ಪ್ರತಿಯಾಗಿ ಸಲ್ಲಬೇಕಾದ ಮನ್ನಣೆ-ಪುರಸ್ಕಾರಗಳು ನ್ಯಾಯಯುತವಾಗಿ ದೊರಕಬೇಕೆಂಬ ಪರೋಕ್ಷ ಹಂಬಲವನ್ನು ವ್ಯಕ್ತಪಡಿಸಿದ್ದಾರೆ. ಇವುಗಳನ್ನು ಶಾಸನಗಳು ವಿಧಿಸಿದ ಎಚ್ಚರಿಕೆಯಾಗಿ ನೋಡಬಹುದಾಗಿದೆ.

ಯಲಹಂಕಪ್ರಭುಗಳ ಶಾಸನಗಳು ಹೆಚ್ಚಿನವು ದಾನಶಾಸನಗಳು. ದಾನಾನಂತರ ಅದರ ಪ್ರಯೋಜನದ ಫಲವಾಗಿ ಫಲಶೃತಿಶ್ಲೋಕಗಳನ್ನು ದಾಖಲಿಸಿದ್ದಾರೆ. ಉದಾಹರಣೆಗೆ :

೧. ಸ್ವದತ್ತಾಂ ಪರದತ್ತಾಂ ವಾಯೋ ಹರೇತಿ ವಸುಂಧರಾಂ |
ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ ||
ನ ವಿಷಂ ವಿಷಮಿತ್ಯಾಹುರ್ಬ್ರಹ್ಮಸ್ವಂ ವಿಷಮುಚ್ಯತೇ |
ವಿಷಮೇಕಾಕಿನಂ ಹಂತಿ ಬ್ರಹ್ಮಸ್ವಂ ಪುತ್ರಪೌತ್ರಕಂ ||
ಸ್ವದತ್ತಾ ದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ |
ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ||

೨. ದಾನ ಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನುಪಾಲನಂ |
ದಾನಾತ್ ಸ್ವರ್ಗಮವಾಪ್ನೋತಿ ಪಾಲನಾದಚ್ಯುತಂ ಪದಂ ||

೩. ಸ್ವದತ್ತಾ ಪುತ್ರಿಕಾ ಧಾತ್ರೀ ಪಿತೃದತ್ತಾ ಸಹೋದರೀ |
ಪರದತ್ತಾ ಸ್ವಮಾತಾ ಚ ಅನ್ಯಭೂಮಿಂ ಪರಿತ್ಯಜೇತ್ ||
ಏಕೈವ ಭಗನೀ ಲೋಕೇ ಸರ್ವೇಷಾಮೇವ ಭೂಭುಜಾಂ |
ನ ಭೋಜ್ಯಾನ ಕರಗ್ರಾಹ್ಯಾ ವಿಪ್ರದತ್ತಾ ವಸುಂಧರಾ ||

೪. ಗಣ್ಯಂತೇ ಪಾಂಸವೋ ಭೂಮಿಃ ಗಣ್ಯಂತೇ ವರ್ಷ ಬಿಂದವಃ |
ನಗಣ್ಯಂತೇ ವಿಧಾತ್ರಾಪಿ ವಿಪ್ರದತ್ತಾ ವಸುಂಧರಾ ||
ಅಶ್ವಮೇಧ ಸಹಸ್ರಾಣಿ ವಾಜಪೇಯ ಶತಾನಿ ಚ |
ಕೃತ್ವಾ ಯತ್ಫಲಮಾಪ್ನೋತಿ ಭೂಮಿದಾನಾತ್ತದಶ್ನುತೇ ||

ಎಂಬ ಫಲಶ್ರುತಿಶ್ಲೋಕಗಳನ್ನು ಗಮನಿಸಿದಾಗ, ರಾಜಧರ್ಮದ ಕಾನೂನಿನಡಿಯಲ್ಲಿ ತಮಗೆ ದತ್ತವಾದ ಅಧಿಕಾರದ ಉಳಿಯುವಿಕೆ ಹಾಗೂ ಲಭ್ಯವಾಗಬೇಕಾದ ಸ್ಥಾನ-ಮಾನ, ಪುಣ್ಯ-ಪಾಪಗಳ ಬಗೆಗೆ ಕಾಳಜಿ ವಹಿಸಿರುವುದನ್ನು ಕಾಣಬಹುದು.

ಅದೇರೀತಿ, ತಾವು ನೀಡಿದ ದಾನ-ಧರ್ಮ ಇತ್ಯಾದಿ ಸಮಾಜೋದ್ಧಾರಕ ಕಾರ್ಯಗಳು ಆ ಸೂರ್ಯ-ಚಂದ್ರರ ಸಾಕ್ಷಿಯಾಗಿ ಕೊನೆಯವರೆಗೂ ಉಳಿಯಬೇಕೆಂಬ ಅಭೀಪ್ಸೆಯಿಂದ ಶಾಸನಗಳ ಕೊನೆಯಲ್ಲಿ ಶಾಪವಾಕ್ಯವಾಗಿ ದಾಖಲಿಸಿದ್ದಾರೆ. ಉದಾಹರಣೆಗೆ :

೧. ಯಿಾ ಅಗ್ರಹಾರಕ್ಕೆ ಅನ್ಯಾಯವ ನೆನದವನು
ಗಂಗೆಯ ತಡಿಯ ಕವಿಲೆಯನು ಕೊಂದವನು

೨. ಯಿಾ ಧರ್ಮಕ್ಕೆ ದೊರೆಗಳೇ ಆಗಲಿ ಉದ್ಯೋಗಸ್ತರೇ ಆಗಲಿ
ದ್ರೋಹಬುಧಿ ಯಣಿಶಿದರಾದರೆ ಅವರು ತ್ರಿಮೂರ್ತಿಗಳಿಗು ಹೊರಗು
ಯಿಹಪರಕ್ಕೆ ಸಲ್ಲದವರು

೩. ಇದನ್ನು ಅಪಹರಿಸಿದವನಿಗೆ ದೇವಲೋಕ ಮರ್ತ್ಯಲೋಕ ಹೊರಗು

೪. ಕಾಶಿಯಲ್ಲಿ ಗೋವು ಕೊಂದಂತೆ; ಮೆಕ್ಕಾದಲ್ಲಿ ಹಂದಿ ತಿಂದಂತೆ

ಎಂಬಿತ್ಯಾದಿ ವಾಕ್ಯಗಳು ಕೊಡುಗೈ ದಾನವನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಉಳಿಸಲೋಸುಗ ರಚಿತವಾಗಿವೆ ಎನಿಸುತ್ತದೆ. ಆದರೆ ಇದರಲ್ಲಿ ಸ್ವಹಿತಾಸಕ್ತಿಯೂ ದಾನದ ಹಿಂದಿನ ಉದ್ದೇಶವಾಗಿದೆ ಎಂಬುದನ್ನು ಮರೆಮಾಚುವಂತಹದಲ್ಲ. ಇಲ್ಲಿ ಪ್ರಜಾಹಿತಾಸಕ್ತಿಯ ಜೊತೆಗೆ ಪ್ರಭುತ್ವದ ದಾಖಲೀಕರಣವೂ ಒಟ್ಟಿಗೆ ಆಗಿರುವುದನ್ನು ಗಮನಿಸಬೇಕಾಗಿದೆ.

ಪ್ರಭುತ್ವದ ದಾಖಲೀಕರಣವು ಕೇವಲ ತಮ್ಮ ಮತ್ತು ತಮ್ಮ ಆಧಿಪತ್ಯದ ಜನಸಮುದಾಯಕ್ಕೆ ಸೀಮಿತವಾಗಿರದೆ, ತಮ್ಮನ್ನು ನಿಯಂತ್ರಿಸುವ ಕೇಂದ್ರಾಡಳಿತದ ದೊರೆಗಳೊಂದಿಗೆ ಸಮೀಕರಿಸಿಕೊಂಡಿದ್ದಾರೆ. ಆ ಮೂಲಕ ಒಂದು ಪಾರಂಪರಿಕ ಕೊಂಡಿಯನ್ನು ರಚಿಸಿಕೊಂಡಿರುವುದನ್ನು ಶಾಸನಗಳಲ್ಲಿ ಕಾಣಬಹುದು. ಕ್ರಿ.ಶ. ೧೬೭೦ರ ಮಾಗಡಿಯ

ಶಾಸನವೊಂದರಲ್ಲಿ "ಶ್ರೀ ಮದ್ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಶ್ರೀರಂಗದೇವ ಮಹಾರಾಯರ್ಯೆಯನವರು ಘನಗಿರಿಯಲು ರತ್ನಸಿಹ್ಮಾಸನಾರೂಢರಾಗಿ ಪ್ರಥಿವೀಸ್ತಿರಸಾಮ್ರಾಜ್ಯಂಗ್ಯೆಯುತ್ತಿರಲು ನಿಂಮ್ಮ ಪ್ರಿಯಭಕ್ತನಾದ ಸದಾಶಿವಗೋತ್ರದ ಯಲಹಂಕನಾಡ ಪ್ರಭುಗಳಾದ ಕೆಂಪನಂಜೇಗೌಡ ಪೌತ್ರರಾದ ಹಿರಿಯ ಕೆಂಪೇಗೌಡರ ಪುತ್ರರಾದ ಯಿಂಮಡಿ ಕೆಂಪೇಗೌಡರು ಬಿನ್ನಹಂ ಮಾಡಿ ಬರಸಿಕೊಟ್ಟ ತಾಂಬ್ರಶಾಸನದ ಕ್ರಮವೆಂದರೆ...." ಮುಂದೆ ದಾನದ ವಿವರಗಳು ಸಾಗುತ್ತವೆ. ಹೀಗೆ ವಿಜಯನಗರ ಸಾಮ್ರಾಜ್ಯದೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುವ ಪ್ರಕ್ರಿಯೆಗೆ ಒಳಗಾಗುತ್ತಾರೆ. ಅದು ಸಹಾ ಲಿಖಿತವಾದ ಅನುಶಾಸನದ ಮೂಲಕ. ಸಾರ್ವಭೌಮತ್ವಕ್ಕೆ ವಿಧೇಯರಾಗಿರುವ ಇಂಥ ಹಲವಾರು ಶಾಸನಗಳು ಇವರ ಅವಧಿಯಲ್ಲಿ ಕಾಣಬಹುದು. ಇದು ಕೇವಲ ಯಲಹಂಕಪ್ರಭುಗಳಿಗೆ ಮಾತ್ರ ಸೀಮಿತವಾಗಿಲ್ಲ. ವಿಜಯನಗರ ಕಾಲದ ಬಹುತೇಕ ಪಾಳೆಯಗಾರರು ತಮ್ಮನ್ನು ತಾವು ಕೇಂದ್ರಾಡಳಿತ ವ್ಯವಸ್ಥೆಯೊಂದಿಗೆ ಗುರುತಿಸಿಕೊಳ್ಳುವ ಹಾಗೂ ಪ್ರತ್ಯೇಕತೆಯನ್ನು ತೋರಿಸಿಕೊಳ್ಳುವ ಇರಾದೆಗೆ ಒಳಗಾಗಿರುವುದನ್ನು ಕಾಣಬಹುದು.

ಇವಿಷ್ಟು ಶಾಸನಗಳಲ್ಲಿ ದಾಖಲೆಗೊಂಡ ಮಾಹಿತಿಗಳಾದರೆ, ಸಾಹಿತ್ಯಕೃತಿಗಳು ಸಹಾ ನ್ಯಾಯಪದ್ಧತಿ ಬಗೆಗೆ ಬೆಳಕನ್ನು ಚೆಲುತ್ತವೆ. ನೇರವಾಗಿ ಯಲಹಂಕಪ್ರಭುಗಳಿಗೆ ಸಂಬಂಧಿಸದಿದ್ದರೂ ವಿಜಯನಗರದ ಸಮಕಾಲೀನ ಸಾಹಿತ್ಯಿಕ ಕೃತಿಗಳು ಜನತಾ ನ್ಯಾಯಾಲಯಗಳ ಬಗೆಗೆ ಹೆಸರಿಸುತ್ತವೆ :

೧. ಕೃಷಿಸಂಬಂಧಿ ವ್ಯಾಜ್ಯಗಳಿಗೆ 'ಗ್ರಾಮವೃದ್ಧರ ಸಭೆ'

೨. ದೇವಾಲಯ, ಬ್ರಾಹ್ಮಣರು, ಬೈರಾಗಿಗಳ ದಾನ ಇತ್ಯಾದಿ ವ್ಯಾಜ್ಯಗಳಿಗೆ ಸಂಬಂಧಿಸಿದಂತೆ 'ಧರ್ಮಸ್ಥರ ಸಭೆ'

೩. ವೃತ್ತಿಪರ ವಿವಾದಗಳನ್ನು ಪರಿಹರಿಸಲು 'ಪುಗ'

೪. ಕರಕುಶಲ ಇತ್ಯಾದಿ ವಿವಿಧ ವೃತ್ತಿಪರರಿಗಾಗಿ 'ಶ್ರೇಣಿ'; ಹಾಗೂ

೫. ಜಾತಿಸಂಘರ್ಷ, ಕೌಟುಂಬಿಕ ವಿವಾದಗಳನ್ನು ತೀರ್ಮಾನಿಸಲು 'ಕುಲ'.

ಇನ್ನಿತರ ನ್ಯಾಯಸಭೆಗಳು ಚಾಲ್ತಿಯಲ್ಲಿದುದರ ಬಗೆಗೆ ಮಾಹಿತಿಗಳಿವೆ. ಯಾಜ್ಞವಲ್ಕ್ಯಸ್ಮೃತಿಯಿಂದ ರೂಪಿತಗೊಂಡ ಈ ನ್ಯಾಯಪದ್ಧತಿಗಳು ಯಲಹಂಕನಾಡಿಗೆ ಅನ್ವಯವಾಗದಿದ್ದರೂ ಇದರ ಪ್ರಭಾವವನ್ನು ಅವರ ನ್ಯಾಯಾಧಿಕರಣದಲ್ಲಿ ಕಾಣಬಹುದು. ಅಲ್ಲದೆ, ವಿಸ್ತಾರಗೊಂಡ ವಿಜಯನಗರ ಸಾಮ್ರಾಜ್ಯದಲ್ಲಿ ಸಾರ್ವತ್ರಿಕವಾಗಿ ಪ್ರಚುರದಲ್ಲಿತ್ತೆನ್ನಲು ಸಾಕಷ್ಟು ಪುರಾವೆಗಳಿವೆ. ಇವಲ್ಲದೆ, ಊರಮುಂದಿನ ಗುಡಿಗಳೂ ಗ್ರಾಮದ ನ್ಯಾಯಾಲಯಗಳಾಗಿ, ಆಣೆ-ಪ್ರಮಾಣ ಮಾಡುವ ಕೇಂದ್ರಗಳಾಗಿ, ಸ್ಥಳೀಯಮಟ್ಟದ ಜನತಾ ನ್ಯಾಯಾಲಯಗಳಾಗಿ ಮಾರ್ಪಾಡುಗೊಂಡಿರುವುದುಂಟು.

ಕ್ರಿ.ಶ. ೧೬೩೩ರ ಬೆಂಗಳೂರು ಶಾಸನವೊಂದು ಇಮ್ಮಡಿ ಕೆಂಪೇಗೌಡನು ಕಟ್ಟಿಸಿದ 'ಧರ್ಮಶಾಲೆ'ಯ ಉಲ್ಲೇಖವನ್ನು ಮಾಡುತ್ತದೆ. ಅದನ್ನು ಗಮನಿಸಿದರೆ, ಧಾರ್ಮಿಕ

ವಿಚಾರಗಳಲ್ಲದೆ ನ್ಯಾಯದ ಶಿಕ್ಷಣವನ್ನು ನೀಡುವಲ್ಲಿ ಧರ್ಮಶಾಲೆಯು ಮುಖ್ಯಪಾತ್ರ ವಹಿಸಿರಬೇಕೆನಿಸುತ್ತದೆ. ಅದೇರೀತಿ 'ಕೆಂಪೇಗೌಡನ ಹಜಾರ'ದ ಉಲ್ಲೇಖವು ಸಹಾ ರಾಜಕೀಯ ಹಾಗೂ ಕಾನೂನಿಗೆ ಸಂಬಂಧಿಸಿದ ಚರ್ಚೆಗಳಿಗೆ ಅವಕಾಶ ನೀಡುವ ವೇದಿಕೆಯಾಗಿರಬೇಕು. ಒಟ್ಟಿನಲ್ಲಿ, ಧಾರ್ಮಿಕಶ್ರದ್ಧೆ ಹಿನ್ನೆಲೆಯ ನ್ಯಾಯಾಡಳಿತವನ್ನು ಯಲಹಂಕಪ್ರಭುಗಳು ತಮ್ಮ ಆಡಳಿತಾವಧಿಯಲ್ಲಿ ಅನುಸರಿಸಿದರೆಂದು ಹೇಳಬಹುದು.

**ಆಕರಗಳು**


೧. ಬಿ.ಎಲ್. ರೈಸ್ (ಸಂ.), ೧೯೦೬, **ಎಪಿಗ್ರಾಫಿಯಾ ಕರ್ನಾಟಿಕ**, ಸಂಪುಟ ೯, ಬೆಂಗಳೂರು

೨. **ಎಪಿಗ್ರಾಫಿಯಾ ಕರ್ನಾಟಿಕ**, ಸಂಪುಟ ೯ರ ಸಪ್ಲಿಮೆಂಟ್, ಮೈಸೂರು

೩. ಕರ್ಲಮಂಗಲಂ ಶ್ರೀಕಂಠಯ್ಯ (ಸಂ.), ೧೯೬೧, **ಸದ್ಗುರು ನಂಜೇಶ್ವರನ ಗೌಡಕುಲವಿಭೂಷಣ ಕೆಂಪೇಗೌಡನ ಜಯಪ್ರಶಸ್ತಿ**, ಮಾಗಡಿ

೪. ಎಂ.ವಿ. ಕೃಷ್ಣರಾವ್, ೧೯೬೪, **ಬೆಂಗಳೂರು ಕೆಂಪೇಗೌಡ**, ಬೆಂಗಳೂರು ನಗರ ಕಾರ್ಪೊರೇಷನ್ ಪ್ರಕಟಣೆ, ಬೆಂಗಳೂರು

೫. ಎ.ವಿ. ವೆಂಕಟರತ್ನಂ, ೧೯೭೪, **ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೬. ಕಂಠೀರಾವ್, ೧೯೭೮, **ಭಾರತೀಯ ನ್ಯಾಯಪದ್ಧತಿ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೭. ಬ.ನ. ಸುಂದರರಾವ್, ೧೯೮೫, **ಬೆಂಗಳೂರಿನ ಇತಿಹಾಸ**, ವಸಂತಸಾಹಿತ್ಯ ಗ್ರಂಥಮಾಲಾ, ಬೆಂಗಳೂರು

೮. ಸೂರ್ಯನಾಥ ಯು. ಕಾಮತ್ (ಸಂ.), ೧೯೯೦, **ಕರ್ನಾಟಕ ಗ್ಯಾಸೆಟಿಯರ್-ಬೆಂಗಳೂರು ಜಿಲ್ಲೆ**, ಕರ್ನಾಟಕ ಸರ್ಕಾರ, ಬೆಂಗಳೂರು

೯. ರಾಮೇಗೌಡ (ಪ್ರ.ಸಂ.), ೧೯೯೪, **ಯಲಹಂಕಪ್ರಭುಗಳು : ಒಂದು ಅಧ್ಯಯನ**, ಮಂಡ್ಯಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಂಡ್ಯ

೧೦. ಎಂ.ಎಚ್. ಕೃಷ್ಣಯ್ಯ, ದೇವರಕೊಂಡಾರೆಡ್ಡಿ (ಸಂ.), ೧೯೯೬, **ಬೆಂಗಳೂರು ಕೆಂಪೇಗೌಡ ವಂಶಸ್ಥರು**, ಜನತಾ ಶಿಕ್ಷಣ ಸಂಸ್ಥೆ, ಬೆಂಗಳೂರು

೧೧. ಕೆ.ಎಸ್. ಶಿವಣ್ಣ (ಸಂ.), ೧೯೯೮, **ಕರ್ನಾಟಕ ಚರಿತ್ರೆ**, ಸಂಪುಟ ೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೨. ಮುನಿರಾಜಪ್ಪ, ೨೦೦೫, **ಮಾಗಡಿಸೀಮೆ : ಇತಿಹಾಸ-ಸಂಸ್ಕೃತಿ**, ಸ್ಫೂರ್ತಿ ಪ್ರಕಾಶನ, ಹೊಸಪಾಳ್ಯ-ಮಾಗಡಿ

೧೩. **ಕೌಟಲೀಯ ಅರ್ಥಶಾಸ್ತ್ರ**, ೨೦೦೫, ಕನ್ನಡಾನುವಾದ : ಶ್ರೀ ಕೂಡಲೀ ಶೃಂಗೇರಿ ಜಗದ್ಗುರು ಶ್ರೀ ಸಚ್ಚಿದಾನಂದ ಶಂಕರಭಾರತೀಸ್ವಾಮಿಗಳು, ಅಂಕಿತ ಪುಸ್ತಕ, ಬೆಂಗಳೂರು

೧೪. ಕೆ.ಎಲ್. ರಾಜಶೇಖರ್, ೨೦೦೫, *ವಿಜಯನಗರ ಕಾಲದ ಯಲಹಂಕನಾಡು*, ವಿಜಯನಗರ ಅಧ್ಯಯನ, ಸಂಪುಟ ೧೦, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೧೫. ಡಿ. ಲಿಂಗಯ್ಯ, ೨೦೦೬, **ಯಲಹಂಕ ನಾಡಪ್ರಭುಗಳು : ಜಾನಪದ ಸಂಪುಟ**, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೧೬. Gururaja Rao B., 1920, **Ancient Hindu Judicature**, Ganesh & Co., Madras

೧೭. Kane P.V., 1930, **History of Dharmasastra** (Ancient and Medieval Religious and Civil Law), Government Oriental Series, Poona

೧೮. Varada Chariar K.T., 1946, **The Hindu Judicial Systems**, Government Press, Lucknow

೧೯. Sharma S.D., 1988, **Administration of Justice in Ancient India**, Harman Publishing House, New Delhi

೧೯

# ಉತ್ತರಕರ್ನಾಟಕ ದೇಸಗತಿ ಮನೆತನಗಳ ನ್ಯಾಯಾಡಳಿತ

**ಡಾ. ಸಂಗಪ್ಪ ಚ. ಕಲ್ಯಾಣಿ**

ಯಾವುದೇ ಒಂದು ಸಾಮ್ರಾಜ್ಯದ, ಸಂಸ್ಥಾನದ ಅಳಿವು ಉಳಿವು ಅಲ್ಲಿನ ಆಡಳಿತಗಾರರ ಮೇಲೆಯೇ ಅವಲಂಬಿಸಿದ್ದಿತು. ಬಹುದೊಡ್ಡ ಜವಾಬ್ದಾರಿ ಹೊತ್ತ ಸ್ಥಾನೀಕ ಒಡೆಯರಾದ ಇಂಥವರ ಬಗ್ಗೆ ಅಧ್ಯಯನಗಳು ಸರಿಯಾಗಿ ನಡೆದಿಲ್ಲ. ಉತ್ತರ ಕರ್ನಾಟಕದಲ್ಲಿ ದೇಸಗತಿಯವರೆಂದೇ ಕರೆಸಿಕೊಳ್ಳುವ ಮನೆತನಗಳವರು ಅರಸರ ಸಾಮಂತರಾಗಿ, ಮಾಂಡಲೀಕರಾಗಿ ಆದಿಲ್‌ಷಾಹಿಯಿಂದ ಅಧಿಕಾರ ದಕ್ಕಿಸಿಕೊಂಡು ಜನಸಮುದಾಯದಲ್ಲಿ ನೇರ ಸಂಪರ್ಕವುಳ್ಳವರಾಗಿದ್ದಾರೆ. ಆರೋಗ್ಯಪೂರ್ಣ ಅಧಿಕಾರದೊಂದಿಗೆ ಪ್ರಜಾಪಾಲಕರಾಗಿ, ಜನಾನುರಾಗಿಗಳಾಗಿ ಒಟ್ಟು ಜನಜೀವನದ ಆಗುಹೋಗುಗಳಲ್ಲಿ ಗಣನೀಯ ಪಾತ್ರವನ್ನು ವಹಿಸಿದ್ದು ಮಹತ್ವಪೂರ್ಣವಾಗಿದೆ. ಇಂಥ ದೇಸಗತಿ ಮನೆತನಗಳವರ ಆಳ್ವಿಕೆಯಲ್ಲಿ ಅನುಸರಣೆಯಲ್ಲಿದ್ದ ನ್ಯಾಯಾಡಳಿತವನ್ನು ಸಮಗ್ರವಾಗಿ ಅಲ್ಲದಿದ್ದರೂ ಸಾಧ್ಯವಾದಷ್ಟು ಮಟ್ಟಿಗೆ ಇಲ್ಲಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

**ಆಕರಗಳು**

ದೇಸಗತಿ ಮನೆತನಗಳ ನ್ಯಾಯಾಧಿಕರಣವನ್ನು ಲಭ್ಯವಿರುವ ಆಕರಸಾಮಗ್ರಿಗಳ ಹಿನ್ನೆಲೆಯಲ್ಲಿ ತಕ್ಕಮಟ್ಟಿಗಾದರೂ ಪುನಾರಚಿಸಬಹುದು. ಇಂಥ ಸಣ್ಣಪುಟ್ಟ ಮನೆತನಗಳು ಪ್ರಜಾಹಿತಕ್ಕೆ ನೀಡಿದ ಕಾಣಿಕೆ ಅವಿಸ್ಮರಣೀಯವಾದುದೆನ್ನಲಡ್ಡಿಯಿಲ್ಲ. ಆದಿಲ್‌ಷಾಹಿಗಳು ನೀಡಿದ ಪರ್ಶಿಯನ್ ಸನದುಗಳು; ಪುಣೆಯ ಭಾರತ ಇತಿಹಾಸ ಮಂಡಳವು ಮರಾಠಿಗೆ ತರ್ಜುಮೆ ಮಾಡಿದ ಸನದುಪತ್ರಗಳು- ಇವು ಈ ಅಧ್ಯಯನದ ಮಟ್ಟಿಗೆ ಪ್ರಮುಖ ಆಕರಗಳು. ಇವು ವಿವರಣಾತ್ಮಕವಾಗಿಲ್ಲದಿದ್ದರೂ ವಿಷಯವನ್ನು ನೇರವಾಗಿ ಪ್ರಸ್ತಾಪಿಸುತ್ತವೆ ಹಾಗೂ ಚುಟುಕಾದ ಆಶಯದೊಂದಿಗೆ ಮುಕ್ತಾಯಗೊಳ್ಳುತ್ತವೆ. ಬಹಳಷ್ಟು ಸನದುಗಳು ಆಡಳಿತಾತ್ಮಕ ಅಂಶಗಳನ್ನು, ಅಂದರೆ ಸೈನ್ಯ, ಕಂದಾಯ, ವ್ಯಾಜ್ಯ (ನ್ಯಾಯಾಧಿಕರಣ), ಛತ್ರಿ-ಛಾಮರ, ದಾನ ಇತ್ಯಾದಿ ಕುರಿತು ಉಲ್ಲೇಖಿಸುತ್ತವೆ. ಪ್ರಸ್ತುತ ದೇಸಗತಿ

ಮನೆತನಗಳ ನ್ಯಾಯಾಡಳಿತವನ್ನು ಈ ಆಕರಗಳು ಪ್ರಸ್ತಾಪಿಸುವ ಚಿಕ್ಕಪುಟ್ಟ ಅಂಶಗಳೊಂದಿಗೆ ಇಲ್ಲಿ ಕಟ್ಟಿಕೊಡಲಾಗಿದೆ. ಕೆಲವು ಅಂಶಗಳು ವಿಷಯಕ್ಕೆ ನೇರವಾಗಿ ಸಂಬಂಧಿಸಿರದಿದ್ದರೂ ಅವುಗಳನ್ನು ನಿರ್ದಿಷ್ಟಪಡಿಸುವುದರೊಂದಿಗೆ ನ್ಯಾಯಾಧಿಕರಣ ಕುರಿತು ಚರ್ಚೆಮಾಡಲಾಗಿದೆ.

**ವ್ಯಾಪ್ತಿ**

ಉತ್ತರಕರ್ನಾಟಕದ ಬಿಜಾಪುರ, ಧಾರವಾಡ, ಕಾರವಾರ ಹಾಗೂ ಬೆಳಗಾವಿ ಜಿಲ್ಲೆಗಳು ಈ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿವೆ. ಈ ಭಾಗದಲ್ಲಿಯೇ ದೇಸಗತಿ ಮನೆತನಗಳು ಹುಟ್ಟಿಕೊಂಡುದು; ಹಾಗೂ ಬಹುದೊಡ್ಡ ವಾರಸುದಾರರಾಗಿ ಜನಮನದಲ್ಲಿ ಚಿರಸ್ಥಾಯಿಯಾಗಿ ಉಳಿದುಕೊಂಡಿರುವುದು. ಈ ಮನೆತನಗಳು ಆದಿಲ್‌ಷಾಹಿಗಳ ಕಾಲದಿಂದ ಸ್ವಾತಂತ್ರ್ಯೋತ್ತರ ಕಾಲದವರೆಗೆ ನಡೆಸಿಕೊಂಡು ಬಂದಿರುವ ಆಡಳಿತದ ಒಂದು ಭಾಗವಾಗಿ ನ್ಯಾಯಾಧಿಕರಣವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**ಹಿನ್ನೆಲೆ**

ಮುಸ್ಲಿಂ ಅರಸರು ವಿಜಯಿಗಳಾಗಿ ದಕ್ಷಿಣಭಾರತದಲ್ಲಿ ನೆಲೆಯೂರಿ, ಸ್ಥಳೀಯ ಹಿಂದೂ ಸಾಮಂತರನ್ನು ಬಳಸಿಕೊಂಡು ಆಳ್ವಿಕೆ ನಡೆಸಿದರು. ಆ ನಂತರ ಬಂದವರು ಹದಿನೇಳನೇ ಶತಮಾನದ ಮಧ್ಯಭಾಗದಲ್ಲಿ ಅಲ್ಲಲ್ಲಿ ರಾಜಕೀಯ ಶಕ್ತಿಗಳಾಗಿ ಪುನರ್ ಸಂಘಟಿತರಾದರು. ಮರಾಠರ ಏಳಿಗೆಯ ಕಾರಣವಾಗಿ ಅವರ ರಾಜಕೀಯ ಸಂಘಟನೆಯು ಶಕ್ತಿಯುತ ಸಾಮ್ರಾಜ್ಯವಾಗಿ ರೂಪುಗೊಂಡಿತು. ಈ ಬೆಳವಣಿಗೆಗೆ ಕಾರಣವೆಂದರೆ, ಆದಿಲ್‌ಷಾಹಿಗಳ ಅವಧಿಯಲ್ಲಿ ಅವರ ಪರವಾಗಿದ್ದ ದೇಸಗತಿಗಳು ಆ ನಂತರ ಶಿವಾಜಿಯ ಅಗಾಧ ಮಿಲಿಟರಿ ಶಕ್ತಿಗೆ ಮಣಿದು ಅದರಲ್ಲಿ ಬೆರೆತುಹೋದವು.

**ದೇಸಗತಿ ಮತ್ತು ಪರಗಣ**

ದೇಸಗತಿಯೆಂದರೆ ಸ್ಥಳೀಯ ಹಿಂದೂಗಳಿಗೆ ವಂಶಪಾರಂಪರ್ಯವಾಗಿ ಬಂದ ಅಧಿಕಾರ. ಅದನ್ನು ದೇಶಕ್>ದೇಸಕ್ ಎಂದು ಕರೆಯುತ್ತಿದ್ದರು. ಪರಂಪರಾಗತವಾಗಿ ಬಂದ ಅಧಿಕಾರಿಗಳಲ್ಲಿ ದೇಸಾಯಿ ಅಥವಾ ದೇಸಮುಖ್ ಹಾಗೂ ನಾಡಗೌಡರು ಬರುತ್ತಾರೆ. ಅವರು ೧೦ ರಿಂದ ೨೦೦ ಹಳ್ಳಿಗಳನ್ನೊಳಗೊಂಡ ಪರಗಣದ ಮುಖ್ಯಸ್ಥರು. ಹಾಗೆಯೇ, ದೇಶಕುಲಕರ್ಣಿ - ದೇಶಪಾಂಡೆ, ಪಾಟೀಲ ಎನ್ನುವವರೂ ಕಂಡುಬರುತ್ತಾರೆ. ಇವರೆಲ್ಲರೂ ಆಡಳಿತಾತ್ಮಕ ಸಿಬ್ಬಂದಿಯವರು. ಇವರೆಲ್ಲರನ್ನೂ ಸುಲ್ತಾನನ ಅಧಿಕಾರಿಗಳು ಅಥವಾ ಅಧಿಕಾರಿವರ್ಗವೆಂದು ಗುರುತಿಸಲಾಗಿದೆ. ದೇಸಾಯಿಗಳನ್ನು ಸ್ಥಳೀಯ ಸರಕಾರದ ಒಡೆಯರೆಂದೂ ಕರೆಯಲಾಗಿದೆ. ಇವರಿಗೆ ಜಹಗೀರು, ಇನಾಮುಗಳನ್ನು ಕೊಡಲಾಗುತ್ತಿತ್ತು. ವಹಿಸಲಾದ ಕೆಲಸವನ್ನು ಸರಿಯಾಗಿ ಮಾಡುವಂತೆ, ಆಡಳಿತದ ಮೇಲ್ವಿಚಾರಣೆ ನೋಡಿಕೊಳ್ಳುವಂತೆ ಆದೇಶಿಸಲಾಗಿತ್ತು.

ಇವರ ಆಳ್ವಿಕೆಯ ಪ್ರದೇಶವನ್ನು ಪರಗಣ ಎನ್ನಲಾಗುತ್ತಿತ್ತು. ಪರಗಣವೆಂದರೆ ಹಳ್ಳಿಗಳ ಗುಂಪು ಅಥವಾ ತಾಲ್ಲೂಕು. ಪ್ರತಿಯೊಂದು ಪರಗಣವೂ ೩೦ ರಿಂದ ೧೩೦

ಗ್ರಾಮಗಳನ್ನು ತನ್ನ ವ್ಯಾಪ್ತಿಯಲ್ಲಿ ಹೊಂದಿದ್ದಿತು. ಇದನ್ನು ಜಿಲ್ಲೆಯೆಂತಲೂ ಪರಿಗಣಿಸಲಾಗಿದೆ. ಪರಗಣವೇ ಆಡಳಿತ ಸಮುದಾಯದ ಕೇಂದ್ರವಾಗಿತ್ತು. ಇದರ ಆಡಳಿತ ನೋಡಿಕೊಳ್ಳುತ್ತಿದ್ದವನೇ ದೇಸಾಯಿ. ಪರಗಣ ಕ್ಷೇತ್ರದಲ್ಲೆ ದೇಸಾಯಿ ವಾಸಿಸುತ್ತಿದ್ದ. ಅದೇ ಅವನ ಮುಖ್ಯ ಸ್ಥಳವಾಗಿತ್ತು. ಈತ ತನ್ನ ಹತೋಟಿಯಲ್ಲಿದ್ದ ಪ್ರದೇಶವನ್ನು ಅಥವಾ ಜಿಲ್ಲೆಯನ್ನು ಅನೇಕ ಉಪವಿಭಾಗಗಳಾಗಿ ಮಾಡಿಕೊಂಡು ಆಡಳಿತ ನಡೆಸುತ್ತಿದ್ದ. ಅವು ಈ ಕೆಳಗಿನಂತೆ ಹಂಚಿಕೆಯಾಗಿದ್ದವು:

ಪರಗಣ

| ತರಾಫ್(ಹೋಬಳಿ) | ಸಮ್ಮತ ಪರಗಣ | ಕಸಬೆ(ಮೌಜೆ) | ದೆಯ(ಗ್ರಾಮ) |
|---|---|---|---|
| ೧೦ ರಿಂದ ೪೦ ಗ್ರಾಮಗಳು | ೪೦ ರಿಂದ ೧೦೦ ಗ್ರಾಮಗಳು | ೨೦ ಗ್ರಾಮಗಳು | ೧೦ ರಿಂದ ೨೦ ಮನೆಗಳ ಒಂದು ಗುಂಪು |

'ನಾಯಕ'ಪಟ್ಟ ಧರಿಸಿದ ದೇಸಾಯರು ಸಮಾಜದ ಸಂವಹನಕಾರರಾಗಿ, ಪ್ರಜಾಪಾಲಕರಾಗಿ, ದಂಡಿನ ನಾಯಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಕ್ರಮೇಣ ರಾಜಕೀಯ ಸ್ಥಿತ್ಯಂತರದ ಕಾರಣವಾಗಿ, ವಿಕೇಂದ್ರೀಕರಣದಂಥ ನೀತಿಯಿಂದ ಬಹುಸಂಖ್ಯಾತರು ಹುಟ್ಟಿಕೊಂಡರು. ಅದು ಅನಿವಾರ್ಯವಾಗಿತ್ತು. ಅದು ಅಷ್ಟಕ್ಕೇ ನಿಲ್ಲದೆ ಬ್ರಿಟಿಷರ ಅವಧಿಯಲ್ಲೂ ವರ್ಧಿಸುತ್ತಾ ನಡೆಯಿತು. ಪರಗಣಗಳು ಹೆಚ್ಚಾಗಿದ್ದು, ಅವುಗಳ ಸಂಪೂರ್ಣ ಹೊಣೆ ದೇಸಗತಿಗಿರುತ್ತಿತ್ತು.

ಪರಗಣದಲ್ಲಿ ದೇಸಾಯಿಯ ಹಕ್ಕುಬಾಧ್ಯತೆಗಳು ಅವರ ಕುಟುಂಬಸದಸ್ಯರಲ್ಲಿ ಹಂಚಿಹೋದುದರಿಂದಲೇ ಇಂಥಾ ಸಣ್ಣ ವಿಭಜನೆಗಳು ಹುಟ್ಟಿಕೊಂಡವು; ಅಥವಾ ಭಾಗಶಃ ದೇಸಾಯಿಹಕ್ಕನ್ನು ವರ್ಗಾವಣೆ ಮಾಡಿದ್ದರಿಂದ ಹಾಗೂ ಕೆಲವು ಸಂದರ್ಭಗಳಲ್ಲಿ ಹೊಸ ವಿಭಜನೆ ಮಾಡಿದ್ದರಿಂದಲೂ ಈ ಪರಂಪರೆ ಮುಂದುವರೆಯಿತು. ಇಂಥ ಚಿಕ್ಕಪುಟ್ಟ ವಿಭಜನೆಗಳಲ್ಲಿ ಒಂದು ಅಥವಾ ಅನೇಕ ದೇಸಾಯಿ ಮನೆತನಗಳನ್ನು ಕಾಣುತ್ತೇವೆ. ಮಾಮಲಾ ಮತ್ತು ಕಲಾಬ, ಕರಿಯಾತ (ಸಮ್ಮತ) ಹಾಗೂ ಕುಟುಂಬಿಟ್ಟಿ ಅಣುಗ/ಅಣುಗಿ ಜೀವಿತ ಆಡಳಿತದಲ್ಲಿ ಇವುಗಳ ಪಾತ್ರ ಕಾಣಬರುತ್ತದೆ. ವಾಸ್ತವದಲ್ಲಿ ಇವೆಲ್ಲವೂ ಒಂದೊಂದು ಅನುಕೂಲತೆಗಾಗಿ ವ್ಯವಸ್ಥಿತವಾಗಿ ಹುಟ್ಟಿಕೊಂಡವೆನ್ನಬೇಕು. ಪರಗಣ, ಕರಿಯಾತ(ಸಮ್ಮತ)ಗಳು ಸ್ಥಳೀಯ ಆಡಳಿತ ವ್ಯವಸ್ಥೆಗಾಗಿಯೇ ಇದ್ದು, ಅವುಗಳಲ್ಲಿ ಉಂಟಾದ ಆಮೂಲಾಗ್ರ ಬದಲಾವಣೆಗಳಲ್ಲಿ ನ್ಯಾಯಾಧಿಕರಣವು ವಿಶೇಷವಾಗಿದ್ದುದು ಸ್ಪಷ್ಟವಾಗಿ ತಿಳಿದುಬರುತ್ತದೆ.

### ದೇಸಾಯಿ/ಪಾಳೆಯಗಾರ

ದಕ್ಷಿಣಕರ್ನಾಟಕದಲ್ಲಿ ಸ್ಥಳೀಯ ಆಡಳಿತಗಾರರನ್ನು ಪಾಳೆಯಗಾರರೆಂದು ಕರೆದಿದ್ದರೆ; ಉತ್ತರಕರ್ನಾಟಕದಲ್ಲಿ ಅವರನ್ನು ದೇಸಿಕರೆಂದೂ ನಾಯಕರೆಂದೂ ಮಹಾರಾಷ್ಟ್ರದ ಕಡೆಗೆ

ಚೌಧರಿ, ಪಟೇಲು ಎಂದೂ ಕರೆಯುವುದು ರೂಢಿಯಲ್ಲಿದೆ. ಈ ದೇಸಾಯಿಗಳು ಪಾಳೆಯಗಾರರಂತೆಯೇ ತಮ್ಮ ಕ್ಷೇತ್ರವನ್ನು ಆಳುತ್ತಿದ್ದರು. ಸ್ವತಂತ್ರ ಆಡಳಿತಗಾರರಂತೆಯೇ ವರ್ತಿಸುತ್ತಿದ್ದರು. ಬಹುವಿಸ್ತಾರದ ಭೂಮಿ ಮತ್ತಿತರ ಆಸ್ತಿ-ಪಾಸ್ತಿಗಳನ್ನು ಹೊಂದಿದ್ದು, ಆ ಸ್ಥಳದ ಶಾಶ್ವತ ನಿವಾಸಿಗಳಾಗಿದ್ದರು. ಶ್ರೀಮಂತ ಭೂಮಾಲೀಕರಾಗಿದ್ದುದರಿಂದ ತಮ್ಮ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಸಣ್ಣಪುಟ್ಟ ರೈತರ ಮುಖಂಡರಾಗಿರುತ್ತಿದ್ದರು. ಶಾಂತಿ, ಸಂಯಮಗಳನ್ನು ನಿಯಂತ್ರಿಸುವುದರ ಜೊತೆಗೆ ಯುದ್ಧಸಮಯದಲ್ಲಿ ಸ್ವತಃ ತಮ್ಮ ದಂಡನ್ನು ಪ್ರತಿನಿಧಿಸುತ್ತಿದ್ದರು.[೧] ಆದರೆ ಪಾಳೆಯಗಾರರಂತೆ ನಿರಂತರವಾಗಿ ಹೋರಾಡದೇ ಅರಸನಿಂದ ಕರೆ ಬಂದಾಗ ಮಾತ್ರ ಯುದ್ಧದಲ್ಲಿ ಭಾಗವಹಿಸುತ್ತಿದ್ದರು. ಅದೇ ವೇಳೆಗೆ ವಿಶೇಷ ಹಕ್ಕುಗಳೊಡನೆ ಇನಾಮುಗಳನ್ನೂ ಪಡೆದುಕೊಳ್ಳುತ್ತಿದ್ದರು.

ದೇಸಾಯಿಗಳಿಗೆ ರಾಜಕೀಯ ಸಾಮರ್ಥ್ಯವಿರಲಿಲ್ಲ ಮತ್ತು ಯಾವುದೇ ಒಬ್ಬ ರಾಜನಿಗೆ ವಿಧೇಯರಾಗಿರಲಿಲ್ಲ. ಕಾಲಕ್ರಮಿಸಿದಂತೆ, ಅಧಿಕಾರ ವಿಕೇಂದ್ರೀಕರಣದಂಥ ಬದಲಾವಣೆಯಿಂದ ಇವರು ವಿಧೇಯರಾಗಿ ವರ್ತಿಸುತ್ತಿದ್ದುದು ಕಂಡುಬರುತ್ತದೆ. ಇವರ ಮುಖ್ಯ ಕರ್ತವ್ಯಗಳಲ್ಲಿ ಕಂದಾಯ ವಸೂಲಿ, ಸ್ಥಾನಿಕ ಸಮಸ್ಯೆಗಳನ್ನು ಬಗೆಹರಿಸುವುದು ಇನ್ನಿತರ ಅಂಶಗಳಿದ್ದವು.

ದೇಸಾಯಿಗಳ ರಾಜಕೀಯ ಶಕ್ತಿಯು ವಿಕೇಂದ್ರೀಕರಣಗೊಂಡದ್ದು ಮಧ್ಯಕಾಲೀನ ರಾಜಕೀಯದ ಗುಣವಿಶೇಷವೇ ಆಗಿದೆ. ಅಂದಿನಿಂದ ಇಂದಿನವರೆಗೂ ಉಳಿದುಕೊಂಡು ಬಂದ ಈ ದೇಸಗತಿ ಮನೆತನಗಳವರು ತಮ್ಮ ಹಕ್ಕು, ಕರ್ತವ್ಯಗಳನ್ನು ಕಳೆದುಕೊಂಡಿದ್ದರೂ ಸ್ಥಾನಿಕವಾಗಿ ದೇಸಾಯಿ, ದೇಸಮುಖ, ಶ್ರೀಮಂತ ಎಂಬ ಹೆಗ್ಗಳಿಕೆಗೆ ಇಂದಿಗೂ ಪಾತ್ರರಾಗಿದ್ದಾರೆ; ಜನಪ್ರತಿನಿಧಿಗಳಾಗಿ ಜನಾನುರಾಗಿಗಳಾಗಿದ್ದಾರೆ.

**ಸ್ಥಳೀಯ ಸರ್ಕಾರ**

ಪ್ರತಿಯೊಂದು ದೇಸಗತಿಗೂ ಒಂದು ನಿರ್ದಿಷ್ಟ ಎಲ್ಲೆಯುಂಟು. ಆ ಎಲ್ಲೆಯೊಳಗಿನ ಪ್ರದೇಶವು ಆ ದೇಸಗತಿಗೆ ಮಾತ್ರ ಸೇರಿದ್ದು, ಅಲ್ಲಿ ವಾಸಮಾಡುವ ಜನರು ಅದಕ್ಕಷ್ಟೆ ಸಂಬಂಧಪಟ್ಟ ಪ್ರಜೆಗಳಾಗಿರುತ್ತಾರೆ. ಪ್ರಜೆಗಳ ಬದುಕು ಚೆನ್ನಾಗಿರಬೇಕೆಂದರೆ, ಶಿಸ್ತು ಪಾಲನೆಯೊಡನೆ ಶಾಂತಿ-ಸಂಯಮಗಳನ್ನು ರಕ್ಷಿಸಬೇಕಾಗುತ್ತದೆ. ಆದ್ದರಿಂದ ಸಂಘಟನೆ ಯೊಂದನ್ನು ರಚಿಸಿ, ಅಧಿಕಾರವನ್ನು ವಿಕೇಂದ್ರೀಕರಿಸಿ ಆಡಳಿತವನ್ನು ನೋಡಿಕೊಳ್ಳಬೇಕಾಗಿತ್ತು. ಆಯಾಭಾಗದ ಸಮಗ್ರ ಅಭಿವೃದ್ಧಿಗೆ ಆಡಳಿತದ ಹಕ್ಕು ನೀಡಿ, ಜನರನ್ನು ಸಂಘಟಿಸಿ ಅವರ ಯೋಗಕ್ಷೇಮವನ್ನು ನೋಡಿಕೊಳ್ಳಬೇಕಾಗಿತ್ತು. ಇಂಥ ಒಂದು ವ್ಯವಸ್ಥಿತ ರಾಜಕೀಯ ಸಂಘಟನೆಯು ಆದಿಲ್‌ಷಾಹಿಗಳ ಕಾಲದಲ್ಲಿ ರಚನೆಗೊಂಡು ಬ್ರಿಟಿಷ್ ಆಡಳಿತದ ಅಂತ್ಯದವರೆಗೆ ಮುಂದುವರೆದುಕೊಂಡು ಬಂದಿತು. ಕೆಲವು ಸ್ಥಾನಿಕ ಅಧಿಕಾರಿಗಳ ಹುದ್ದೆಗಳು ಸೃಷ್ಟಿಗೊಂಡವು. ವ್ಯವಸ್ಥಿತ ನ್ಯಾಯಾಧಿಕರಣ, ರಕ್ಷಣೆಯ ಜವಾಬ್ದಾರಿ ಮುಂತಾದವುಗಳ ನಿರ್ವಹಣೆಗಾಗಿ ಪೊಲೀಸ್ ಪಾಟೀಲ ಹುದ್ದೆ ಸೃಷ್ಟಿಗೊಂಡುದು. ವಿಶೇಷವಾಗಿ ಕಂಡುಬರುತ್ತದೆ.

ದೇಸಗತಿಯ ವ್ಯಾಪ್ತಿಯಲ್ಲಿ ಜಾತೀಯತೆಯ ಪೈಪೋಟಿ ಇರಲಿಲ್ಲವೆನ್ನಬಹುದು. ಎಲ್ಲರೂ ಸಮಾನರೆಂಬಂತೆ ಕಂಡುಬರುತ್ತಿದ್ದರು. ದೇಸಗತಿಯ ದರ್ಪದಡಿಯಲ್ಲಿ ಏನೇ ಸಮಸ್ಯೆ ಮೊಳಕೆ ಒಡೆಯುತ್ತಿದ್ದರೂ ಅದು ಆರಂಭದಲ್ಲಿಯೇ ಕಮರಿ ಹೋಗುತ್ತಿತ್ತು. ಇದರಿಂದ ಯಾರಿಗೇ ಆದರೂ ಪ್ರತಿಭಟಿಸಲು ಸಹಾ ಅವಕಾಶವಿರುತ್ತಿರಲಿಲ್ಲ. ಪಕ್ಷಪಾತ ಮಾಡದೆ ಎಲ್ಲರನ್ನೂ ನಿಷ್ಪಕ್ಷಪಾತತನದಿಂದ ಹಾಗೂ ಸಮಭಾವದಿಂದ ನೋಡಿಕೊಳ್ಳ ಬೇಕೆಂಬುದು ದೇಸಾಯಿಗಳ ಆಡಳಿತದ ಅಂತರ್‌ವ್ಯವಸ್ಥೆಯಲ್ಲಿ ಅಡಗಿದ್ದಿತೆಂದು ಊಹಿಸಬಹುದು. ಒಟ್ಟಿನಲ್ಲಿ, ಸ್ಥಳೀಯ ಸರಕಾರವೆಂಬ ಈ ಆಡಳಿತವು ಸಮ್ಮತ ಗ್ರಾಮಗಳ ಆಂತರಿಕ ವ್ಯವಸ್ಥೆಯಲ್ಲಿ ಯಾವುದೇ ಧರ್ಮ, ಜಾತಿಗಳನ್ನು ಮಾನ್ಯಮಾಡದೆ ಸಮಭಾವದಿಂದ ನೋಡಿಕೊಂಡದ್ದು ಗಮನಕ್ಕೆ ಬರುತ್ತದೆ.

ಅವರ ಸರ್ವಾಧಿಕಾರತ್ವದಲ್ಲಿ ಜನರ ಜೀವನವು ಬೆಸದುಕೊಂಡಿತ್ತು. ಪಾತ್ರೆಗೆ ಬಂದ ಕಿಲುಬಿನಂತೆ ಇತ್ತಾದರೂ ಕಹಿ ಅನುಭವದ ಛಾಯೆ ಕರಾಳರಾತ್ರಿಯೆನಿಸಿತ್ತು. ಕೆಲವು ಸಲ ಜನಜೀವನದ ಮೇಲೆ ಕತ್ತಿ ತೂಗಾಡುತ್ತಿತ್ತು. ದರ್ಪದ ವ್ಯವಸ್ಥೆಯಲ್ಲಿ ನ್ಯಾಯೋಚಿತ ನಿರ್ಣಯ ದೊರೆತಿದ್ದರೂ ಕಷ್ಟ-ಕಾರ್ಪಣ್ಯ ಬರುತ್ತಲೇ ಇದ್ದವು. ಅಂಥವುಗಳ ನಿವಾರಣೆಗೆ ದೇಸಾಯಿರಲ್ಲಿ ತಲೆ ತಗ್ಗಿಸಿದಾಗಲೇ ಬದುಕು ಆಗುತ್ತಿತ್ತು. ದೇಸಗತಿಯ ವ್ಯಾಪ್ತಿಯಲ್ಲಿ ಜನಜೀವನದ ಸ್ಥಿತಿ ಹೀಗೆ ಕಾಣಬರುತ್ತಿತ್ತು.

ಇಂಥ ಒಂದು ಘಟನೆ ತೇರದಾಳ ದೇಸಗತಿಯಲ್ಲಿ ಕಾಣಸಿಗುತ್ತದೆ. ಒಂದು, ದೇಸಾಯಿಯ ದುರ್ನಡತೆ; ಎರಡನೆಯದು, ಅವರ ಬಾಹುಬಂದರ ವಿಪರೀತ ಕಿರಿಕಿರಿ. ಇವೆಲ್ಲದರ ಖಟ್ಲೆಯ ಮನವಿಯನ್ನು ಸ್ವೀಕರಿಸಿ ಪುನಃ ಸ್ಥಳೀಯ ಮುಖಂಡರಿಗೆ (ಉಂಬಳಿ ಹಿಡುವಳಿದಾರರಿಗೆ ಅಥವಾ ಆ ಪ್ರದೇಶದ ದೇಸಾಯಿಗೆ) ಕಳುಹಿಸಿ ಆ ಖಟ್ಲೆಯನ್ನು ತಕರಾರುದಾರರ ನೆರೆಹೊರೆಯವರ ಸಾಕ್ಷಿಗಳ ಆಧಾರದ ಮೇಲೆ ಪರಿಹರಿಸಬೇಕೆಂದು ಆದೇಶಿಸಿದ್ದು, ಈ ಸನದುಪತ್ರಗಳ ಪತ್ರವ್ಯವಹಾರದಲ್ಲಿದೆ. ಹಾಗೆಯೇ, ದೇಸಾಯಿಯು ತನ್ನ ನಿರಂಕುಶ ನಿರ್ಣಯದಿಂದ ಬಗೆಹರಿಸಬೇಕೆಂಬ ಆದೇಶವಿದ್ದುದು ಅವುಗಳಲ್ಲಿ ವ್ಯಕ್ತಪಟ್ಟಿದೆ.

**ನ್ಯಾಯಾಧಿಕರಣಕ್ಕೆ ಸಂಬಂಧಿಸಿದ ದಾಖಲೆಗಳು**

೧. ದಿವಾಣಿ ಕಾಯಿದೆ ಫೈಲುಗಳು
೨. ಫೌಜುದಾರಿ ಕಾಯಿದೆ ಫೈಲುಗಳು
೩. ಮುಲಕಿ ಕಾಯಿದೆ ಫೈಲುಗಳು
೪. ಇತರೆ ಫೈಲುಗಳು.[೨]

ಮೊದಲನೇ ದಿವಾಣಿ ಕಾಯಿ[illegible]ಲ್ಲಿ ದೇಸಗತಿಗೆ ಸಂಬಂಧಿಸಿದ ವಿಶೇಷವಾದ ಪ್ರಕರಣಗಳಿವೆ. ಅವುಗಳೆಂದ[illegible]. ಆ. ಕರಾರುಪತ್ರ, ಇ. ಹಿಸ್ಸೆ (ವಾಟನಿ), ಈ. ಹಕ್ಕುಬಿಟ್ಟ ಪತ್ರ, ಉ. [illegible]ತ್ರ, ಊ. ಇತರೆ.



ಕೆರಕಲಮಟ್ಟಿ ನಾಡಗೌಡರ ನ್ಯಾಯದಕಟ್ಟೆ, ಕೆರೂರ ಪರಗಣ, ಬಾಗಲಕೋಟೆ ಜಿಲ್ಲೆ



ಸೊನ್ನದ ದೇಸಾಯರ ನ್ಯಾಯದಕಟ್ಟೆ, ಬೀಳಗಿ ಪರಗಣ, ಬಾಗಲಕೋಟೆ ಜಿಲ್ಲೆ

ಫೌಜುದಾರಿ ಕಾಯಿದೆ ಫೈಲುಗಳಲ್ಲಿ ಕೂಡ ವ್ಯವಸ್ಥಿತವಾದ ಪ್ರಕರಣಗಳಿದ್ದು ಅವು ಇಂತಿವೆ: ಅ. ಅಪರಾಧಗಳ ಮಾಹಿತಿ, ಆ. ಆಯುಧಗಳು, ಇ. ಮೈಲಿ ತೆಗೆಯುವುದು, ಈ. ಊರಿಂದ ಬಂದವರ ಹೋದವರ ಮಾಹಿತಿ, ಉ. ಶಿಕ್ಷೆ, ಅಪರಾಧ, ಗುನ್ನೆಗಾರರ ಮಾಹಿತಿ, ಊ. ಕೊಂಡವಾಡೆ, ಎ. ತೂಕ, ಅಳತೆ, ಏ. ಇತರೆ. ಹೀಗೆ ಬೇರೆ ಬೇರೆ ಫೈಲುಗಳ ದೊಡ್ಡ ಭಂಡಾರವೇ ಅಲ್ಲಿದೆ.

## ನ್ಯಾಯಾಧಿಕರಣ ಹಾಗೂ ಪ್ರಮುಖ ಕರ್ತವ್ಯಗಳು

ಇಂದಿನ ನ್ಯಾಯಾಧಿಕರಣದಂತೆಯೇ ಅಂದು ಸಹಾ ವ್ಯವಸ್ಥಿತವಾದ ಕೆಲವು ಪದ್ಧತಿಗಳನ್ನು ಅನುಸರಿಸಿ ನ್ಯಾಯನಿರ್ಣಯ ಕೈಗೊಳ್ಳುತ್ತಿದ್ದರು. ಪಂಚಾಯಿತಿ ಮುಂದೆ ತನಿಖೆ ನಡೆದು ಯೋಗ್ಯನಿರ್ಣಯ ಕೊಡುತ್ತಿದ್ದರು. ಅಂಥವುಗಳಿಗೆ ಸಂಬಂಧಿಸಿದ ಕೆಲವು ಮಹತ್ವದ ದಾಖಲೆಗಳನ್ನು ಇಲ್ಲಿ ನೀಡಬಹುದು:

೧. ವಂಶಪಾರಂಪರ್ಯವಾಗಿ ಬಂದ ಕಛೇರಿ, ಆಸ್ತಿಹಕ್ಕುಗಳ ಬಗ್ಗೆ ವ್ಯಾಜ್ಯವನ್ನು ನಿರ್ಣಯಿಸುವುದು.

೨. ವ್ಯಾಜ್ಯದ ಕಕ್ಷಿದಾರರು (ವಾದಿ-ಪ್ರತಿವಾದಿಗಳು) ತಮ್ಮ ಖಟ್ಲೆಯನ್ನು ಸ್ಥಳೀಯ ನೌಕರಿಶಾಹಿ ಅಥವಾ ಉಂಬಳಿ ಹಿಡುವಳಿದಾರರು ಅಥವಾ ಆ ಪ್ರದೇಶದ ದೇಸಾಯಿಗಳ ಮುಂದೆ ಹೇಳಬಹುದು; ಅಥವಾ ನೇರವಾಗಿ 'ಕೇಂದ್ರದಲ್ಲಿರುವ ರಾಜನಿಗೆ ಹೇಳಬಹುದು.'[೩] ಇಂಥ ಹಲವಾರು ಪ್ರಕರಣಗಳನ್ನು ದೇಸಗತಿಯವರು ಅರಸರ ಆಜ್ಞಾನುಸಾರ ತಮ್ಮ ಸೇವಾಸಿಬ್ಬಂದಿಯಿಂದ ತನಿಖೆ ನಡೆಸುತ್ತಿದ್ದರು. ನೆರೆ ಹೊರೆಯವರ ಸಾಕ್ಷಿ ಆಧಾರದ ಮೇಲೆ ನಿರ್ಣಯ ಕೊಡುವಾಗ, ವಾದಿ-ಪ್ರತಿವಾದಿಗಳ ನ್ನೊಳಗೊಂಡ ಸಭೆಯನ್ನು (ಮಜಲೀಜ) ಕರೆದು ಕೊನೆಗೆ ನಿರ್ಣಯ ನೀಡುತ್ತಿದ್ದರು.

ತಂಟೆಕೋರ ಗ್ರಾಮದ ಜನರು, ದೇಸಾಯಿಗಳು ಮತ್ತು ವಂಶಪಾರಂಪರ್ಯವಾಗಿ ಬಂದ ಅಧಿಕಾರಿಗಳು, ಸೇತಸನದಿಗಳು, ಸೇವಕರು ಮತ್ತು ರೈತರ ಸಾಕ್ಷಿಗಳನ್ನು ಪ್ರತ್ಯೇಕವಾಗಿ ಕರೆದು, ಪ್ರತಿಯೊಬ್ಬರಿಂದಲೂ ಸಾಕ್ಷಿಯನ್ನು ಪಡೆದುಕೊಳ್ಳುತ್ತಿದ್ದರು. ಪಂಚಾಯಿತಿ ಮುಂದೆ ಒಪ್ಪಿಸಿದಂಥ ಸಾಕ್ಷಿಗಳ ಆಧಾರದ ಮೇಲೆ ಖಟ್ಲೆಗಳನ್ನು ನಿರ್ಧರಿಸಿ, ಠರಾವು(ಮಜಲೀಜ ಠರಾವು)ಗಳನ್ನು ಓದಿ, ದೇವರ ಪ್ರಮಾಣ ಮಾಡಿಸಿ ಅವುಗಳ ಬಗ್ಗೆ ನ್ಯಾಯತೀರ್ಮಾನವನ್ನು ನೀಡುತ್ತಿದ್ದರು. ಒಂದುವೇಳೆ ಖಟ್ಲೆಗಳು ಗ್ರಾಮೀಣಹಂತದಲ್ಲಿ ಅಂದರೆ ಗೌಡ, ನಾಡಗೌಡರ ಹಂತದಲ್ಲಿ ನಿರ್ಧಾರಮಾಡಲು ಸಾಧ್ಯವಾಗದಿದ್ದಲ್ಲಿ, ಅದನ್ನು ದೈವಿಸತ್ವ (ದಿವ್ಯ) ಪರೀಕ್ಷೆಗೆ ಒಪ್ಪಿಸಿ ನಿರ್ಧಾರ ಮಾಡುತ್ತಿದ್ದರು.

## ನ್ಯಾಯಾಧಿಕರಣದ ವಿಶೇಷತೆಗಳು

ದೇಸಗತಿಯ ವ್ಯಾಪ್ತಿಯಲ್ಲಿ ದೇಸಾಯಿಗೆ ಸಂಪೂರ್ಣ ನ್ಯಾಯನಿರ್ಣಯ ಅಧಿಕಾರ ವಿದ್ದಿತು. ಆದಿಲ್‌ಷಾಹಿಗಳ ಕಾಲದಲ್ಲಿ ಇವರಿಗೆ ವಿಶೇಷ ಅಧಿಕಾರಕೊಡಲಾಗಿದ್ದಿತು. ಆದರೂ ಕೆಲವು ಪ್ರಮುಖ ಅಧಿಕಾರಗಳು ಕಡಿತವಾಗಿದ್ದವು. ದೇಸಾಯಿಯು ಸ್ವತಂತ್ರ ನಾಗಿದ್ದರೂ ಅರಸನ ಸಾಮಂತನಾಗಿರಬೇಕಾಗಿತ್ತೆಂಬುದು ಕೆಲವು ದಾಖಲೆಗಳಿಂದ ತಿಳಿದುಬರುತ್ತದೆ.[೪] ಅವುಗಳೆಂದರೆ,

೧. ಕೇಂದ್ರ ಸರಕಾರದಿಂದ ಯಾವುದೇ ಆದೇಶವಿಲ್ಲದೆ ದೇಸಾಯಿಯು ತನ್ನ ಪ್ರದೇಶದಲ್ಲಿನ ದಂಗೆಯನ್ನು ಹತ್ತಿಕ್ಕುವ ಮತ್ತು ವ್ಯಾಜ್ಯಗಳನ್ನು ಬಗೆಹರಿಸುವ ಅಧಿಕಾರ ಹೊಂದಿದ್ದನು.

೨. ಪ್ರಜೆಗಳಿಗೆ ಕಿರುಕುಳ ನೀಡಿ ಓಡಿಹೋದವರನ್ನು ಕರೆತಂದು, ಅವರಿಗೆ ಕಿರುಕುಳ

ನೀಡದಂತೆ ಒಪ್ಪಿಗೆಪತ್ರವನ್ನು ಕೇಂದ್ರ ಸರಕಾರಕ್ಕೆ ಒಪ್ಪಿಸಬೇಕು.

೩. ವ್ಯಾಜ್ಯಗಳನ್ನು ಬಗೆಹರಿಸದೇ ಕರ್ತವ್ಯಲೋಪವೆಸಗಿದ್ದಾನೆಂದು ಸರಕಾರಕ್ಕೆ ಮಾಹಿತಿ ಸಿಕ್ಕಲ್ಲಿ, ಅಥವಾ ದಂಗೆನಿರತ ಪಟೇಲರನ್ನು ಮತ್ತು ಇನ್ನುಳಿದ ಸ್ಥಾನಿಕ ಒಡೆಯರನ್ನು ಹತ್ತಿಕ್ಕುವಂತೆ ಸರಕಾರದಿಂದ ಅಲ್ಲಿರುವ ಪ್ರಮುಖ ದೇಸಾಯಿಗೆ ಆದೇಶವಿರುವುದು. (ತೇರದಾಳ ನಾಡಗೌಡರಿಗೆ ಪತ್ರಿಸಿದ ಲೇಖನಗಳಿಂದ ಇದು ತಿಳಿದುಬರುತ್ತದೆ.)

೪. ದೇಸಾಯಿಯು ನೀಡುವ ಶಿಕ್ಷೆ ಸಾಮಾನ್ಯವಾಗಿತ್ತು. ಆದರೆ ಮರಣದಂಡನೆ ನೀಡುವ ಅಧಿಕಾರವಿರಲಿಲ್ಲ. ಒಂದುವೇಳೆ ಮರಣದಂಡನೆ ಶಿಕ್ಷೆ ವಿಧಿಸಿದರೆ, ದೇಸಾಯಿಯೇ ಸರಕಾರದ ಅನುಮತಿ ಮೀರಿ ನಡೆದಿದ್ದರಿಂದ, ಇಡೀ ದೇಸಗತಿ ಖಾಲಸಾತ ಆಗಿರುವುದು ಕೂಡ ಇದರಿಂದ ತಿಳಿದುಬರುತ್ತದೆ.

ಇವೆಲ್ಲ ಅಂಶಗಳನ್ನು ಗಮನಿಸಿದಾಗ, ಸ್ಥಾನಿಕ ಒಡೆತನದ ಅಧಿಕಾರವು ವೈಯಕ್ತಿಕವಾಗಿರಲಿಲ್ಲವೆಂಬುದು ಸ್ಪಷ್ಟಪಡುತ್ತದೆ. ನಿಯಮಪಾಲನೆಯನ್ನು ಬಿಗಿಗೊಳಿಸಿ, ಅದನ್ನು ನಿಯಂತ್ರಣದಲ್ಲಿರಿಸಿ ಶಾಂತಿ-ಸಂಯಮ ಕಾಪಾಡುವುದು ಇದರ ಉದ್ದೇಶವಾಗಿದ್ದಿತು. ವೈಯಕ್ತಿಕ ನ್ಯಾಯಾಧಿಕರಣವನ್ನು ಸರಕಾರದ ಗಮನಕ್ಕೆ ತಂದು ಬಗೆಹರಿಸಿದುದು ಸ್ಪಷ್ಟವಾಗುತ್ತದೆ. ಸ್ಥಾನಿಕವ್ಯಾಜ್ಯಗಳನ್ನು ಕೂಡ ಪಂಚಾಯಿತದಾರರ ಮುಖಾಂತರ ದೇಸಗತಿಯವರ ಮಧ್ಯಸ್ಥಿಕೆಯಲ್ಲಿ ಬಗೆಹರಿಸಬೇಕೆಂಬುದು ಇದರಿಂದ ತಿಳಿದುಬರುತ್ತದೆ. ಯಾವುದೇ ಕಾಯಿದೆ ಕಾನೂನುಗಳು ಸರಕಾರದಿಂದಲೇ ಪಾಸಾಗುವುದೆಂಬ ಸ್ಪಷ್ಟ ಚಿತ್ರಣ ಈ ಪತ್ರಗಳಲ್ಲಿ ಉಲ್ಲೇಖಿಸಿರುವುದು ಕಂಡುಬರುತ್ತದೆ. ಒಟ್ಟಾರೆ, ಏನೇ ಶಿಕ್ಷೆಗಳು ಆದರೂ ದೇಸಾಯಿಯ ವೈಯಕ್ತಿಕ ತೀರ್ಪಿನಿಂದ ಜರುಗುತ್ತಿರಲಿಲ್ಲವೆಂಬುದು ಇದರಿಂದ ಮನವರಿಕೆಯಾಗುತ್ತದೆ.

## ದೇಸಾಯಿಯವರ ಅನುಕಂಪ

ದೇಸಗತಿಯವರ ನ್ಯಾಯಾಡಳಿತದ ವ್ಯಾಪ್ತಿಯಲ್ಲಿ, ರಕ್ಷಣೆಯಂಥ ಅನೇಕ ಜವಾಬ್ದಾರಿಯುತ ಕೆಲಸಗಳು ಇರುತ್ತಿದ್ದವು. ದೇಸಗತಿಯವರದೇ ಒಂದು ಸಂವಿಧಾನ, ಆನೆ ನಡೆದದ್ದೆ ಹಾದಿ ಎಂಬಂತೆ! ಏಕಚಕ್ರಾಧಿಪತ್ಯ ಹೊಂದಿದ ಸಂವಿಧಾನದಾಗಿದ್ದಿತು ಅದು. ಸರ್ವಜನರೂ ಅನುಸರಿಸಬೇಕಾದ ಮೂಲಭೂತ ಕಾನೂನುಗಳು ಅಲಿಖಿತವಾಗಿದ್ದವು. ಅವನ್ನು ಸಮೂಹ ಸಮ್ಮತವೆಂದೇ ಭಾವಿಸಿದ್ದರು. ಎಲ್ಲರೂ 'ರಾಜಾ ಪ್ರತ್ಯಕ್ಷದೇವತಾ' ಎಂಬಂತೆ ಅರಿತು ನಡೆದುಕೊಳ್ಳುತ್ತಿದ್ದರು.

ಊರಲ್ಲಿ ಕಳ್ಳಕಾರರ ಹಾವಳಿ ತಲೆದೋರಿದಾಗ ಅದನ್ನು ನಿಯಂತ್ರಿಸುವುದು, ಅದಕ್ಕಾಗಿ ಗಸ್ತಿ ವ್ಯವಸ್ಥೆ ಮಾಡುವುದು, ಆರಕ್ಷಣೆಯ ಸಹಾಯ ದೊರಕಿಸುವುದು- ಇಂಥಾ ಕಾರ್ಯಗಳನ್ನು ತಳವಾರರಿಂದ ನೆರವೇರಿಸುತ್ತಿದ್ದರು. ಇಂಥ ವ್ಯವಸ್ಥೆಯು ಪ್ರತಿ ಗೌಡಕಿಯ ಅಧಿಕಾರವ್ಯಾಪ್ತಿಯಲ್ಲಿರುತ್ತಿತ್ತು. ಹಾಗೆಯೇ, ಗ್ರಾಮನ್ಯಾಯದಾನ ವ್ಯವಸ್ಥೆಯಲ್ಲಿ ಆಯಾ ಜಾತಿ-ಪಂಗಡಗಳ ಗುರು ಹಿರಿಯರು ಪಂಚಾಯಿತಿಯಲ್ಲಿ ಪ್ರಮುಖ ಪಾತ್ರವಹಿಸು

ತ್ತಿದ್ದರು. ಅದಕ್ಕೆ ದೇಸಾಯಿಯ ಅಥವಾ ಗ್ರಾಮೀಣ ಗೌಡನ ಮಾರ್ಗದರ್ಶನ ಯಾವತ್ತೂ ಇರುತ್ತಿತ್ತು. ಆ ನಂತರದಲ್ಲಿ ಇದು ಪೊಲೀಸ್ ಪಾಟೀಲ, ಮುಲ್ಕಿ ಪಾಟೀಲರಲ್ಲಿ ಹಂಚಿ ಹೋಯಿತು. ಇತ್ತೀಚಿನವರೆಗೂ ಗ್ರಾಮನ್ಯಾಯದಾನ ಪದ್ಧತಿಯು ಉತ್ತಮವಾಗಿತ್ತೆಂದು ತಿಳಿದುಬರುತ್ತದೆ.

ದೇಸಾಯಿಯು ತಪ್ಪಿತಸ್ಥರಿಗೆ ಶಿಕ್ಷೆ ವಿಧಿಸುತ್ತಿದ್ದ. ಅದು ಚಿತ್ರಹಿಂಸೆಯೂ ಆಗಿರಬಹುದು. ಅಂಥ ಸಮಯದಲ್ಲಿ ನೋವುಂಡವರಿಗೆ ಅರಿಷಿಣ, ಎಣ್ಣೆ ಕೊಟ್ಟು ಆರೈಕೆ ಮಾಡಿಸುತ್ತಿದ್ದರು. ಮನೆಯ ಯಜಮಾನನೇ ತಪ್ಪಿತಸ್ಥನಾಗಿದ್ದಲ್ಲಿ, ಪ್ರತಿದಿನ ಅಂದರೆ ಅವನ ಆರೋಗ್ಯ ಸುಧಾರಿಸುವವರೆಗೆ ೪ ಸೇರು ಜೋಳ, ಜೋಳದ ನುಚ್ಚು, ಎಣ್ಣೆ, ಜೀರಿಗೆ, ಸಾಸಿವೆಗಳನ್ನು ಸೆರಗಿನಲ್ಲೆ ಕಟ್ಟಿಕೊಂಡು ಹೋಗುವ ಪರಂಪರೆ ಹಾಕಿಕೊಟ್ಟಿದ್ದರು. ಇದು ದೇಸಾಯಿಗಳ ನೈತಿಕ ಹೊಣೆಗಾರಿಕೆಯೂ ಆಗಿತ್ತೆಂದು ತಿಳಿದುಬರುತ್ತದೆ. ದೇಸಾಯಿಯು ಕೊಡುವ ಶಿಕ್ಷೆಗಳು ಕ್ರಮೇಣ ಕಡಿಮೆ ಆಗಿದ್ದರಿಂದ, ೧೮೭೪ರ ವತನ ಕಾಯಿದೆಯಿಂದ ವ್ಯಾಪಕವಾದ ನಿಯಮಗಳು ರಚಿಸಲ್ಪಟ್ಟು, ಅವನ ಅಧಿಕಾರದ ಮೇಲೆ ಮಿತಿ ಹೇರಲ್ಪಟ್ಟಿತು.

"ಒಂದು ಊರಿನ ಒಂದು ಪರಗಣ ದೊರೆಯೆನಿಸಿದ್ದ ದೇಸಾಯಿಯು, ಆಧುನಿಕ ಗ್ರಾಮ ಪಂಚಾಯಿತಿ ಅಸ್ತಿತ್ವಕ್ಕೆ ಬಂದ ಮೇಲೆ ತನ್ನ ಹಳೆಯ ಅಧಿಕಾರ ಮತ್ತು ಕರ್ತವ್ಯಗಳಿಂದ ದೂರಗೊಳಿಸಲ್ಪಟ್ಟನು."[೫] ಹೀಗೆ ಗ್ರಾಮದ ಅಥವಾ ಸ್ಥಾನಿಕಹಕ್ಕುಗಳು ಹಂಚಲ್ಪಟ್ಟಿದ್ದರೂ ಅವರಿಗೆ ಸಿಗುವ ಉಲುಪಿ, ಜಾಜ(ಬಾಬು)ಗಳು ಈಗಲೂ ಸಲ್ಲುತ್ತಿವೆ. ಈ ಹಿನ್ನೆಲೆಯಲ್ಲಿ, ಒಂದು ಗ್ರಾಮದ ಸಮಗ್ರ ನಿರ್ವಹಣೆಯು ಅಲ್ಲಿನ ಗೌಡರು, ದೇಸಾಯರು, ನಾಡಗೌಡರ ಮುಖಾಂತರ ಸಾಗಿಬಂದಿರುತ್ತದೆ. ಗ್ರಾಮಪಂಚಾಯಿತಿಗಳು ಪ್ರಜಾಪ್ರಭುತ್ವದ ಪದ್ಧತಿಯಿಂದ ನಡೆಯುತ್ತಿದ್ದರೂ ಅವುಗಳಲ್ಲಿ ಸ್ಥಾನಿಕ ನಾಯಕ, ದೊರೆಗಳದೇ ಮೇಲುಗೈ ಇರುವುದನ್ನು ಇಂದಿನ ಗ್ರಾಮೀಣ ಕರ್ನಾಟಕದ ಎಲ್ಲೆಡೆಯಲ್ಲೂ ಕಾಣಬಹುದು.

ಆದಿಲ್‌ಷಾಹಿಗಳ ಕಾಲದಿಂದ ಸ್ವಾತಂತ್ರ್ಯಾನಂತರದವರೆಗೂ ದೇಸಾಯಿಯು "ಗ್ರಾಮ ಜೀವನದ ಕೇಂದ್ರವ್ಯಕ್ತಿಯಾಗಿ ಅಧಿಷ್ಠಿತನಾಗಿದ್ದಾನೆ. ಗ್ರಾಮದ ಮೇಟಿ ಎನಿಸಿದ್ದಾನೆ. ಕರ್ನಾಟಕದ ಗ್ರಾಮಜೀವನದ ಇಂದಿನ ಸ್ವರೂಪಕ್ಕೆ ಇವನ ವ್ಯಕ್ತಿಮತ್ತೆಯೆ ಪ್ರಧಾನ ಕಾರಣ. ಆದುದರಿಂದ ದೇಸಾಯಿ, ಗೌಡ, ನಾಡಗೌಡರು ಬರಿ ಒಬ್ಬ ಅಧಿಕಾರಿ ಮಾತ್ರ ಎಂದು ಹೇಳದೆ, ಸರ್ವಂಕಷ ಪ್ರಭಾವ ಹೊಂದಿದ ಶಕ್ತಿ"[೬] ಎಂದು ಹೇಳಿದರೆ ತಪ್ಪಲ್ಲ.

**ಟಿಪ್ಪಣಿಗಳು**

೧. ಪರ್ಶಿಯನ್ ಸನದು, ಬಾದಾಮಿ ತಾಲೂಕಿನ ಜಾಲಿಹಾಳ ದೇಸಗತಿ, (ಕನ್ನಡಕ್ಕೆ : ಅಬ್ದುಲ್ ಗನಿ ಇಮಾರತವಾಲೆ), ಬಿಜಾಪುರ

೨. ದೇಸಗತಿಯವರ ಕಡತಗಳು (ಖಾರನೀಸ್)

೩. ಮರಾಠೀ ದಾಖಲೆ (ಕನ್ನಡಕ್ಕೆ : ಲಕ್ಷ್ಮಪ್ಪ ಡಂಗಿ), ಮುಧೋಳ

೪. ದೇಸಗತಿಯವರ ಕಡತಗಳು (ಖಾರನೀಸ್)
೫. ನೇಗಿನಹಾಳರ ಪ್ರಬಂಧಗಳು, ಪು.೧೦೩
೬. ಅದೇ, ಪು.೧೦೫

## ಗ್ರಂಥಋಣ


೧. ಎಂ.ಬಿ. ನೇಗಿನಹಾಳ, ೧೯೯೯, ನೇಗಿನಹಾಳರ ಪ್ರಬಂಧಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

೨. ಎಸ್.ಸಿ.ಕಲ್ಯಾಣಿ, ೨೦೦೬, ಬಾಗಲಕೋಟ ಜಿಲ್ಲೆಯ ದೇಸಗತಿ, ಅಪ್ರಕಟಿತ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೩. ಬಾಳಣ್ಣ ಸೀಗಿಹಳ್ಳಿ, ೧೯೯೯, ಬೆಳಗಾವಿ ಜಿಲ್ಲೆಯ ವೀರಶೈವ ದೇಸಗತಿಗಳು, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ-ಡಂಬಳ

೪. ಭಾರತೀಯ ಇತಿಹಾಸ ಸಂಶೋಧನ ಮಂಡಳ, ಪುಣೆ ಇವರು ಮರಾಠಿಗೆ ತರ್ಜುಮೆ ಮಾಡಿದ ಪರ್ಶಿಯನ್ ದಾಖಲೆಗಳು

೫. ದೇಸಾಯಿ ಮನೆತನಗಳ ಪರ್ಶಿಯನ್, ಮೋಡಿ ದಾಖಲೆಗಳು (ಕನ್ನಡಕ್ಕೆ : ಅಬ್ದುಲ್ ಗನಿ ಇಮಾರತವಾಲೆ, ಬಿಜಾಪುರ; ಹಾಗೂ ೯೦ರ ಪ್ರಾಯದ ಲಕ್ಷ್ಮಪ್ಪ ಡಂಗಿ, ಮುಧೋಳ)

೨೦

# ಚಿತ್ರದುರ್ಗ ಪ್ರದೇಶದ ನಾಯಕ ಪಾಳೆಯಗಾರರ ಶಾಸನಗಳಲ್ಲಿ ಕಂಡುಬರುವ ನ್ಯಾಯತೀರ್ಮಾನ ಸಂದರ್ಭಗಳು

ಡಾ. ಬಿ. ರಾಜಶೇಖರಪ್ಪ

ಚಿತ್ರದುರ್ಗ ಪ್ರದೇಶದಲ್ಲಿ ಆಗಿಹೋದ ಪಾಳೆಯಪಟ್ಟುಗಳಲ್ಲಿ ಚಿತ್ರದುರ್ಗವು ಪ್ರಮುಖ ಪಾಳೆಯಪಟ್ಟಾದರೆ, ಹರತಿ(ಹರ್ತಿಕೋಟೆ), ಹಟ್ಟಿ(ನಾಯಕನಹಟ್ಟಿ), ಮತ್ತೋಡು, ಹಿರಿಯೂರು, ಬಾಣರಾವಿ (ಬಾಂಡ್ರಾವಿ), ಬೂದಿಹಾಳು (ಶ್ರೀರಾಂಪುರ) ಮುಂತಾದವು ಚಿಕ್ಕ ಪಾಳೆಯಪಟ್ಟುಗಳಾಗಿವೆ. ಈ ಪಾಳೆಯಗಾರರಲ್ಲಿ ಬೂದಿಹಾಳಿನವರು ಗೊಲ್ಲ ಮೂಲದವರಾದರೆ, ಉಳಿದವರು ಬೇಡ ಅಥವಾ ನಾಯಕಮೂಲದವರಾಗಿದ್ದಾರೆ. ಈ ನಾಯಕ ಪಾಳೆಯಗಾರರಲ್ಲಿ, ಚಿತ್ರದುರ್ಗದವರು ಮಧ್ಯಾಂತರಕಾಲದಲ್ಲಿ ವೀರಶೈವ ಮತಾವಲಂಬಿಗಳಾದರೂ ಸ್ವಲ್ಪಕಾಲದಲ್ಲೆ ಅದನ್ನು ತೊರೆದು ತಮ್ಮ ಮೂಲಜಾತಿಗೇ ಹಿಂತಿರುಗಿದರು. ಆದರೆ ಮತ್ತೋಡಿನವರು ಚಿತ್ರದುರ್ಗದವರ ಹಾಗೆಯೇ ಮಧ್ಯಾಂತರ ಕಾಲದಲ್ಲಿ ವೀರಶೈವಮತಸ್ಥರಾದರೂ ಅದನ್ನು ತೊರೆಯದೆ ಅದರಲ್ಲೇ ಉಳಿದುಕೊಂಡು ಬಂದರು. ಪ್ರಸ್ತುತದಲ್ಲಿ ಈ ನಾಯಕ ಪಾಳೆಯಗಾರರ ನ್ಯಾಯವ್ಯವಸ್ಥೆ ಹೇಗಿತ್ತೆಂಬುದನ್ನೂ ಅದರಲ್ಲೂ ಅದು ಅವರ ಶಾಸನಗಳಲ್ಲಿ ಹೇಗೆ ವ್ಯಕ್ತಗೊಂಡಿದೆಯೆಂಬುದನ್ನೂ ಪರಿಶೀಲಿಸುವುದು ಒಂದು ಕುತೂಹಲದ ಸಂಗತಿ. ಆದರೆ ಅದನ್ನು ತಿಳಿಯಲು ಲಭ್ಯವಿರುವ ಶಾಸನಗಳ ಸಂಖ್ಯೆ ಮಾತ್ರ ಅತ್ಯಲ್ಪ ಪ್ರಮಾಣದ್ದು.

ಸದ್ಯಕ್ಕೆ ಚಿತ್ರದುರ್ಗ ಪಾಳೆಯಗಾರರ (ಅವರ ಆಳ್ವಿಕೆ ಕೊನೆಗಂಡ ಕಾಲಕ್ಕೆ ಸಮೀಪದ್ದೂ ಒಂದು ಸೇರಿ) ಆರು ಶಾಸನಗಳು, ಬಾಣರಾವಿ ಪಾಳೆಯಗಾರರ ಒಂದು ಶಾಸನ, ಇಷ್ಟು ಬಿಟ್ಟರೆ ಉಳಿದವರ ಆ ಬಗೆಯ ಶಾಸನಗಳು ಲಭ್ಯವಿಲ್ಲ. ಮೇಲೆ ಹೇಳಿದ ಎಲ್ಲ ಪಾಳೆಯಗಾರರಲ್ಲಿ ಕೆಲವರು ಸಾಕಷ್ಟು ದೀರ್ಘಕಾಲ ಆಳ್ವಿಕೆ ನಡೆಸಿದವರಿದ್ದರೆ, ಇನ್ನು ಕೆಲವರು ಕೆಲಕಾಲ ಮಾತ್ರ ಆಳ್ವಿಕೆ ನಡೆಸಿದವರಿದ್ದಾರೆ; ಮತ್ತೆ ಕೆಲವರ ಆಳ್ವಿಕೆ, ಇತಿಹಾಸ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಅಂತೂ ಇವರೆಲ್ಲರೂ ಮೊದಲಿಗೆ ವಿಜಯನಗರದ

ಅಧೀನರಾಗಿ ಬಂದವರಾದ ಕಾರಣ, ಬಹುತೇಕ ಆ ಪ್ರಭುತ್ವದ ನ್ಯಾಯಪದ್ಧತಿಯನ್ನೇ ಅನುಸರಿಸಿರಬಹುದು. ಒಟ್ಟಿನಲ್ಲಿ, ಈಗ ಲಭ್ಯವಿರುವ ಚಿತ್ರದುರ್ಗ ಹಾಗೂ ಬಾಣರಾವಿ ಪಾಳೆಯಗಾರರ ಶಾಸನಗಳಲ್ಲಿ ದೂರು ವ್ಯಾಜ್ಯಗಳನ್ನು ಕುರಿತ ನ್ಯಾಯವಿಚಾರಣೆ ಹಾಗೂ ತೀರ್ಮಾನ ಹೇಗೆ ನಡೆಯುತ್ತಿತ್ತೆಂಬುದರ ಒಂದು ಚಿತ್ರವನ್ನು ಕಂಡುಕೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ.

### ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ

ಮೇಲೆ ಸೂಚಿಸಿದಂತೆ, ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಪಾಳೆಯಪಟ್ಟುಗಳಲ್ಲಿ ಚಿತ್ರದುರ್ಗ ಪ್ರಮುಖವಾದದ್ದು. ಆ ಸಾಮ್ರಾಜ್ಯ ಇರುವ ಕಾಲ ದಲ್ಲಿ ಈ ಪಾಳೆಯಪಟ್ಟಿನ 'ನಾಯಕತನ'ವನ್ನೂ ಅದರ ಅನಂತರದಲ್ಲಿ 'ಅರಸುತನ'ವನ್ನೂ ನಿರ್ವಹಿಸಿದವರು 'ಕಾಮಗೇತಿ' ಎಂಬ ಹೆಸರಿನ ವಂಶದ ನಾಯಕರು. ಅವರು 'ಚಿತ್ರದುರ್ಗ ಪಾಳೆಯಗಾರರು', 'ಚಿತ್ರದುರ್ಗದ ನಾಯಕದೊರೆಗಳು' ಎಂದು ಮುಂತಾಗಿ ಪ್ರಸಿದ್ಧರಾಗಿದ್ದಾರೆ. ಇವರು ಕ್ರಿ.ಶ.ಸುಮಾರು ೧೫೫೮ ರಿಂದ ೧೭೭೯ರ ವರೆಗೆ ೨೩೧ ವರ್ಷಗಳ ಸುದೀರ್ಘ ಕಾಲ ಆಳ್ವಿಕೆ ನಡೆಸಿದ್ದಾರೆ. ಇವರು ವಿಜಯನಗರ ಪ್ರಭುತ್ವ ಕಾರ್‍ಯ್ವಿಮಾದರಿಯನ್ನು ಅನುಸರಿಸಿ ತಮಗೆ ಸೂಕ್ತ ಕಂಡ ಕೆಲವು ಮಾರ್ಪಾಟುಗಳೊಂದಿಗೆ ಜಾರಿಯಲ್ಲಿ ತಂದಿರುವ ಸಾಧ್ಯತೆ ಇದೆ. ಆ ಬಗ್ಗೆ ಪೂರ್ಣಪ್ರಮಾಣದ ಚಿತ್ರ ಸಿಕ್ಕುವುದು ಕಷ್ಟವಾದರೂ ಈವರೆಗೆ ಸಿಕ್ಕಿರುವ ಅಲ್ಪಪ್ರಮಾಣದ ಆಧಾರಗಳಿಂದ ಒಂದು ಸ್ಥೂಲಚಿತ್ರವನ್ನು ಕಂಡುಕೊಳ್ಳಬೇಕಾಗಿದೆ.

ಈ ಹಿಂದೆ ೧೯೭೭ರಲ್ಲಿ ಪ್ರಕಟವಾದ 'ಚಂದ್ರವಳ್ಳಿ' ಎಂಬ ಪುಸ್ತಕದಲ್ಲಿ, ಶ್ರೀ ಚನ್ನಪ್ಪ ಎರೇಸೀಮೆ ಅವರ 'ಚಿತ್ರದುರ್ಗ ಪಾಳೆಯಗಾರರ ಕಾಲದಲ್ಲಿ ವ್ಯಾಜ್ಯತೀರ್ಮಾನ' ಎಂಬ ಲೇಖನದಲ್ಲಿ, ಹಳೆಯ ಹಸ್ತಪ್ರತಿಯೊಂದರಲ್ಲಿ ಬಂದಿರುವ ಕೆಲವು ನಿದರ್ಶನಗಳಿಂದ, ಆ ಕಾಲದ ವ್ಯಾಜ್ಯಗಳ ವೈವಿಧ್ಯ ಮತ್ತು ಅವು ತೀರ್ಮಾನಗೊಳ್ಳುತ್ತಿದ್ದ ರೀತಿ ಇವುಗಳ ಬಗ್ಗೆ ತಕ್ಕಮಟ್ಟಿನ ಚಿತ್ರ ಸಿಕ್ಕುತ್ತದೆ. ಆ ತರುವಾಯ 'ಸತ್ಯಶುದ್ಧಕಾಯಕ'ದಲ್ಲಿ[೨] ಪ್ರಕಟವಾಗಿರುವ ಡಾ.ಕೆಳದಿ ವೆಂಕಟೇಶಜೋಯಿಸ್ ಅವರು ಸಂಪಾದಿಸಿರುವ 'ಮದಕರಿನಾಯಕನ ಕಾಲದ ಆಯಗಾರರ ನಿರ್ಣಯಗ್ರಂಥ' ಎಂಬುದರಿಂದ ಕೂಡಾ ನ್ಯಾಯತೀರ್ಮಾನ ಸಂದರ್ಭಗಳ ಚಿತ್ರ ದೊರೆಯುತ್ತದೆ. ಇವಲ್ಲದೆ ಹಿಂದೆ ಬಿ.ಎಲ್.ರೈಸ್ ಪ್ರಕಟಿಸಿರುವ ಎರಡು ಶಾಸನಗಳು, ಡಾ.ಎಂ.ಶೇಷಾದ್ರಿ ಅವರು ಪ್ರಕಟಿಸಿರುವ ಒಂದು ಶಾಸನ, ನನ್ನ ಕ್ಷೇತ್ರ ಕಾರ್ಯದಲ್ಲಿ ದೊರೆತ ಎರಡು ಶಾಸನಗಳು ಹಾಗೂ ನಾನೂ ಮತ್ತು ಪ್ರೊ.ಲಕ್ಷ್ಮಣ್ ತೆಲಗಾವಿ ಅವರೂ ಬೇರೆ ಬೇರೆಯಾಗಿ ಪ್ರಕಟಿಸಿರುವ ಒಂದು ತಾಮ್ರಶಾಸನದ ನಕಲು, ಇವುಗಳಿಂದ ನ್ಯಾಯತೀರ್ಮಾನಗಳ ಹೆಚ್ಚಿನ ಚಿತ್ರ ಸಿಕ್ಕುತ್ತದೆ.

ಗ್ರಾಮದ ಗೌಡಿಕೆ, ಶಾನುಭೋಗಿಕೆ, ಕಮ್ಮಾರಿಕೆ, ದೇವರ ಪೂಜಾರಿಕೆ, ಗ್ರಾಮದ ಸ್ವಾಸ್ತಿ- ಇಂಥ ಯಾವುದಾದರೂ ಹಕ್ಕಿನ ಸಲುವಾಗಿ ಇಬ್ಬರ ಅಥವಾ ಎರಡು ಪಕ್ಷ

(ಗುಂಪು)ಗಳ, ಇಲ್ಲವೆ ಹಲವರ ಮಧ್ಯೆ ವಿವಾದ ಇಲ್ಲವೆ ವ್ಯಾಜ್ಯ ತಲೆದೋರಿದಾಗ, ಅವರು ನ್ಯಾಯತೀರ್ಮಾನಕ್ಕಾಗಿ ಅದನ್ನು ನಿರ್ವಹಿಸಲು ಅಧಿಕಾರ ಹೊಂದಿದ ('ಸಮಿತಿ'ಯ)ವರ ಮುಂದೆ ತರುತ್ತಿದ್ದರು. ತಮ್ಮ ವ್ಯಾಜ್ಯವನ್ನೂ ಹಕ್ಕನ್ನೂ ವಿಶದವಾಗಿ ಎರಡು ಕಡೆಯವರೂ ಬಿನ್ನಹ ಮಾಡಿಕೊಳ್ಳುತ್ತಿದ್ದರು. ವ್ಯಾಜ್ಯಗಳ ವಿಚಾರಣೆ ಮಾಡಿ ತೀರ್ಪುನೀಡುವ ಕೆಲಸವನ್ನು ಆ ಸಮಿತಿ ನಿರ್ವಹಿಸುತ್ತಿತ್ತು. ಸ್ಥಳೀಯರಾದ ಗೌಡ, ಶಾನುಭೋಗ, ಬಡಗಿ, ಕಮ್ಮಾರ, ತಳವಾರ, ಜೋಯಿಸ, ಕುಂಬಾರ, ಕೆಲಸಿ, ಅಗಸ, ಅಕ್ಕಸಾಲಿ, ಬಾರಿಕ (ಅಥವಾ ನೀರಗಂಟಿ), ಬೇಗಾರ - ಈ ಹನ್ನೆರಡು ಜನ ಆಯಗಾರರು ಅಥವಾ ಕೈವಾಡದವರ ಸಮ್ಮುಖದಲ್ಲಿ ಹಾಗೂ ವ್ಯಾಜ್ಯದವರ ಜಾತಿಯ ಮುಖಂಡರು ಮತ್ತು ಸುತ್ತಲ ಗ್ರಾಮದ ಗಣ್ಯರ ಮುಂದೆ, ಯಾವುದಾದರೂ ಚಾವಡಿಯಂಥ ಸರ್ಕಾರಿ ಕಾರ್ಯಸ್ಥಳದಲ್ಲಿ ವಿಚಾರಣೆ ನಡೆಯುತ್ತಿತ್ತು. ನ್ಯಾಯವಿಚಾರಣೆ ನಡೆಯುವ ಕಾಲಕ್ಕೆ ವಾದಿ-ಪ್ರತಿವಾದಿಯರು ತಮ್ಮ ತಮ್ಮ ನಿಲುವನ್ನು ಸಮರ್ಥಿಸಲು ಹೇಳಿಕೆಗಳನ್ನು ನೀಡಲು ಅವಕಾಶವಿರುತ್ತಿತ್ತು. ಅಂಥ ಹೇಳಿಕೆಗಳು ಅಗತ್ಯಾನುಸಾರ ಲಿಖಿತವಾಗಿಯೂ ದಾಖಲಿಸಲ್ಪಡುತ್ತಿದ್ದವು. ಉಭಯರ ಹೇಳಿಕೆಗಳ ಸತ್ಯಾಸತ್ಯತೆಯನ್ನು ಒರೆಗೆ ಹಚ್ಚಲು, ಸಂಬಂಧಿಸಿದವರ ಹಕ್ಕಿನ ಸೂಚನೆ ಇರುವ ಹಳೆಯ ಕಡತ, ಜಯರೇಖೆ, ಇಲ್ಲವೆ ಚಿನ್ನದಮನೆಯವರ ಕಡತ ಇಂಥವನ್ನು ತರಿಸಿ, ಎಲ್ಲರ ಸಮ್ಮುಖದಲ್ಲಿ ಓದಲಾಗುತ್ತಿತ್ತು. ಪ್ರಾಚೀನಕಾಲದ ಸ್ಮೃತಿ(ಧರ್ಮಶಾಸ್ತ್ರ)ಗಳಲ್ಲಿ ಒಂದಾದ ಯಾಜ್ಞವಲ್ಕ್ಯಸ್ಮೃತಿಯ ಮೇಲೆ ವಿಜ್ಞಾನೇಶ್ವರ ಎಂಬುವನು ಬರೆದ 'ಮಿತಾಕ್ಷರ' ಎಂಬ ವ್ಯಾಖ್ಯಾನಗ್ರಂಥದಲ್ಲಿ (ಇದನ್ನೇ ತಪ್ಪಾಗಿ ವಿಘ್ನೇಶ್ವರಶಾಸ್ತ್ರ ಎಂದು ಕರೆದಿರುವಂತಿದೆ) ಇಂಥಿಂಥ ವ್ಯಾಜ್ಯಕ್ಕೆ ಏನೇನು ನ್ಯಾಯಕ್ರಮವನ್ನು ಹೇಳಿದೆ ಎಂಬುದನ್ನೂ ಪರಿಶೀಲಿಸಲಾಗುತ್ತಿತ್ತು. ಕೆಲವೊಮ್ಮೆ ಅಂತಹ ನ್ಯಾಯಕ್ರಮದ ಸೂಚನೆ ಅಥವಾ ಸ್ಪಷ್ಟ ಆಧಾರಗಳು ಸಾಕ್ಷಿಗಳು ಇಲ್ಲದಿದ್ದಾಗ 'ದೈವಾಚಾರ' ಅಥವಾ 'ದಿವ್ಯ'ದಂತಹ ಕ್ರಮಗಳನ್ನು ಅನಿವಾರ್ಯವಾಗಿ ವಿಧಿಸಲಾಗುತ್ತಿತ್ತು. ದಿವ್ಯದ ಮೂಲಕ ಸಮರ್ಥನೆ ಮಾಡುವುದನ್ನು 'ಸತ್ಯ ಮಾಡುವುದು' ಎಂಬ ಮಾತಿನಿಂದಲೂ ಸೂಚಿಸಲಾಗುತ್ತಿತ್ತು.

ವಾದಿ-ಪ್ರತಿವಾದಿಗಳಲ್ಲಿ ತಮ್ಮನ್ನು(ತಮ್ಮ ಹಕ್ಕನ್ನು ಅಥವಾ ನಿಲುವನ್ನು) ಸಮರ್ಥಿಸಿಕೊಳ್ಳುವಲ್ಲಿ ವಿಫಲರಾದವರು ಅಥವಾ ವ್ಯಾಜ್ಯದಲ್ಲಿ ಸೋತವರು ಅರಮನೆಗೆ ಅಥವಾ ದಿವಾಣಕ್ಕೆ ಅಥವಾ ಬೊಕ್ಕಸಕ್ಕೆ ನಿಗದಿಪಡಿಸಿದ ಅಪರಾಧ(ಅಂದರೆ ತಪ್ಪುದಂಡ)ವನ್ನು ಕೊಡಬೇಕಾಗುತ್ತಿತ್ತು. ಸಾಮಾನ್ಯವಾದ ಅಪರಾಧದ ಪ್ರಮಾಣ ೬-೧೨ ವರಹದಿಂದ ಅದರ ದ್ವಿಗುಣ ತ್ರಿಗುಣ ಹೀಗೆ ಗುಣಕಗಳ ಮೇಲೆ ಹೆಚ್ಚುತ್ತಾ ಹೋಗುತ್ತಿತ್ತು. ವಾದಿ-ಪ್ರತಿವಾದಿಗಳಿಬ್ಬರೂ ತಮ್ಮನ್ನು ಸಮರ್ಥಿಸಿಕೊಳ್ಳುವಲ್ಲಿ ವಿಫಲರಾದರೆ ಅಪರಾಧದ ಮೊತ್ತವನ್ನು ಇಬ್ಬರಿಗೂ ವಿಧಿಸಲಾಗುತ್ತಿತ್ತು. ಅಪರಾಧವಷ್ಟೇ ಅಲ್ಲದೆ, ಪದಚ್ಯುತಿ, ಹಕ್ಕುಚ್ಯುತಿ, ಗಡೀಪಾರು -ಹೀಗೆ ಇವೇ ಮುಂತಾದ ಕಠಿಣಕ್ರಮಗಳನ್ನೂ ಜರುಗಿಸಲಾಗುತ್ತಿತ್ತು.

ಆಯಗಾರರ ಅಭಿಪ್ರಾಯದಲ್ಲಿ ಒಮ್ಮತವಿಲ್ಲದಿದ್ದಾಗ, ಸ್ಥಳೀಯ ಮಟ್ಟದ ಸಮಿತಿಯಿಂದ ತೀರ್ಮಾನಿಸಲಾಗದ ತೀರಾ ತೊಡಕಿನ ಕೆಲವು ವ್ಯಾಜ್ಯಗಳನ್ನು ನೇರವಾಗಿ ದೊರೆಯ ಮುಂದೆಯೋ ಮಠಾಧೀಶರ ಮುಂದೆಯೋ ಒಯ್ಯುತ್ತಿದ್ದಂತೆ ತಿಳಿಯುತ್ತದೆ. ಅಂಥವರ ವಿಚಾರಣೆಯನ್ನು ದೊರೆ ಆದೇಶಿಸಿದ ದಳವಾಯಿಗಳು, ಪಾರುಪತ್ಯಗಾರರು, ಬೊಕ್ಕಸದವರು ಇವರೇ ಮುಂತಾದ ಸರ್ಕಾರದ ಅಧಿಕಾರವರ್ಗದವರ ಸಮ್ಮುಖದಲ್ಲಲ್ಲದೆ, ಆಯಗಾರರಲ್ಲಿ ಕೆಲವರ ಮುಂದೆ, ನೋಡಲು ಬರುವ ಗ್ರಾಮಸ್ಥರ ಮುಂದೆ ನಡೆಸಲಾಗುತ್ತಿತ್ತು. ನ್ಯಾಯತೀರ್ಮಾನ ಸಂದರ್ಭದಲ್ಲಿ ಪ್ರಾಯಃ ನ್ಯಾಯಮೂರ್ತಿಯಾಗಿ ಪರಿಗಣಿತನಾಗಿದ್ದ ದೊರೆಯನ್ನು 'ಕರ್ತಾರಯ್ಯನವರು' ಎಂದೂ ಕೆಲವೊಮ್ಮೆ 'ಧಣೇರು' ಎಂದೂ ಉಭಯ ಪಕ್ಷದವರನ್ನು 'ಇಕ್ಕರ್ತರು' ಎಂದೂ ಕರೆಯಲಾಗುತ್ತಿತ್ತು. ಬ್ರಾಹ್ಮಣ, ವೀರಶೈವ ಇಂಥ ಮಠಾಧೀಶರ ಸಮ್ಮುಖದಲ್ಲಿ ಅನೇಕ ವ್ಯಾಜ್ಯಗಳ ವಿಚಾರಣೆಯಾಗುತ್ತಿತ್ತು. ಉದಾಹರಣೆಗೆ ಬ್ರಾಹ್ಮಣ ಮಠಾಧೀಶರಾದ ಕೂಡಲೀ ಶೃಂಗೇರಿಸ್ವಾಮಿಗಳು, ವೀರಶೈವ ಮಠಾಧೀಶರಾದ ಚಿತ್ರದುರ್ಗದ ಮುರುಘರಾಜೇಂದ್ರಸ್ವಾಮಿಗಳು, ಗೋಸೀಕೆರೆಯ ಸಾರ್ವಾಡೇಶ್ವರ ಸ್ವಾಮಿಗಳು ಇಂಥವರ ಸಮ್ಮುಖದಲ್ಲಲ್ಲದೆ ಕೆಲವು ನಿರ್ದಿಷ್ಟ ಮತದವರಿಗೆ ಸಂಬಂಧಿಸಿದ, 'ಕಟ್ಟೆಮನೆ'/'ಗುಡಿಕಟ್ಟು'ಗಳಲ್ಲಿಯೂ 'ಅರಮನೆ'ಗಳೆಂದೇ ಕರೆಯಲಾಗುತ್ತಿದ್ದ ಪಾಳೆಯಗಾರರ ವಂಶದವರ ನಿವಾಸಗಳಲ್ಲೂ ಅನೇಕ ವ್ಯಾಜ್ಯಗಳ ವಿಚಾರಣೆ ನಡೆಯುತ್ತಿತ್ತು.

ಇಷ್ಟು ಹಿನ್ನೆಲೆಯೊಂದಿಗೆ ಕೆಲವು ಶಾಸನಗಳಲ್ಲಿ ಕಾಣಸಿಗುವ ನ್ಯಾಯತೀರ್ಮಾನಗಳ ಸಂದರ್ಭಗಳನ್ನು ಇಲ್ಲಿ ನೋಡಬಹುದು:

**ದೇವಸ್ಥಾನದ ಆಸ್ತಿ ಮಾರಿದ್ದ ಪ್ರಕರಣ :** ಶಾಸನತಜ್ಞ ಬಿ.ಎಲ್.ರೈಸ್ ಅವರು ಪ್ರಕಟಿಸಿರುವ ಚಿತ್ರದುರ್ಗ ತಾಲ್ಲೂಕಿನ ಹುಲ್ಲೂರುಗ್ರಾಮದ ಒಂದು ಶಿಲಾಶಾಸನ[೩] ಚಿತ್ರದುರ್ಗದ ಇಮ್ಮಡಿ ಮದಕೇರಿನಾಯಕನ ಕಾಲಕ್ಕೆ ಸೇರಿದ್ದಿದ್ದು, ಒಂದು ವಿಶಿಷ್ಟ ಪ್ರಕರಣವನ್ನು ನಮ್ಮ ಮುಂದೆ ತೆರೆದಿಡುತ್ತದೆ. ಅಲ್ಲಲ್ಲಿ ಅಕ್ಷರಗಳು ಮುಕ್ಕಾಗಿರುವಂತೆ ಪಾಠಕೊಟ್ಟು ಇದನ್ನು ಪ್ರಕಟಿಸಿದ ರೈಸ್ ಅವರು, ಇದು ಕ್ರಿ.ಶ.೧೬೭೮ರಲ್ಲಿ, ಇಮ್ಮಡಿ ಮದಕೇರಿನಾಯಕನು ಹುಲ್ಲೂರಿನ ವೀರಭದ್ರದೇವರ ಅರ್ಚಕನಿಂದ ದಂಡವಾಗಿ ೨೪ ಹಣವನ್ನು ತೆಗೆದುಕೊಂಡು, ಆ ಮೊತ್ತವನ್ನು ಆ ದೇವರ ಉತ್ಸವದಲ್ಲಿ ನೈವೇದ್ಯ ಅರ್ಪಿಸಲಿಕ್ಕಾಗಿ ನೀಡಿದ್ದಾಗಿಯೂ, ಈ ಬಗ್ಗೆ ನ್ಯಾಯಕ್ರಮ ಜರುಗಿಸಲು ದಳವಾಯಿ ಮಲ್ಲಪ್ಪನಿಗೆ ಅಪ್ಪಣೆ ಕೊಟ್ಟಿರುವುದಾಗಿಯೂ ಈ ಶಾಸನದ ತಾತ್ಪರ್ಯವನ್ನು ಕೊಟ್ಟಿರುತ್ತಾರೆ.

ಆದರೆ ಈ ಶಾಸನವನ್ನು ನಾನು ಖುದ್ದಾಗಿ ಮರುಪರಿಶೀಲಿಸಿದಾಗ, ರೈಸರು ಪ್ರಕಟಿಸಿದ್ದಂತೆ ಶಾಸನಪಾಠ ಎಲ್ಲೂ ತ್ರುಟಿತವಾಗಿರದೆ, ಪೂರ್ತಿಯಾಗಿದ್ದದ್ದು ಕಾಣಿಸಿತು. ಅದರ ಓದಿಕೆಯಲ್ಲೂ ವಿಷಯದಲ್ಲೂ ತೇದಿ ಕೆಲವು ವ್ಯಕ್ತಿಗಳ ಹೆಸರು ಮುಂತಾದ ವಿವರದಲ್ಲೂ ರೈಸ್ ಕೊಟ್ಟಿದ್ದ ಪಾಠಕ್ಕೂ ವಾಸ್ತವವಾಗಿ ಅಲ್ಲಿರುವ ಪಾಠಕ್ಕೂ ವ್ಯತ್ಯಾಸ ಇದ್ದುದೂ

ಕಂಡುಬಂದಿತು.[೪] ನನ್ನ ಮರು ಓದಿಕೆಯಿಂದ ಹೊಸದಾಗಿ ತಿಳಿದುಬಂದ ಅದರ ವಿವರ ಈ ಮುಂದಿನಂತಿದೆ:

ಹುಲ್ಲೂರು ಗ್ರಾಮದ ವೀರಭದ್ರದೇವರ ತಮ್ಮಡಿ(=ಅರ್ಚಕ) ಆಗಿದ್ದ ಉದ್ದಂಡ ಎಂಬುವನು ತನಗೆ ಗತಿಯಿಲ್ಲದಂತಾದುದಕ್ಕೆ, ದೇವರಿಗೆ ಸೇರಿದ ಹೊಲಮನೆಗದ್ದೆಗಳನ್ನು ಮಣಿಹದ ಮಲ್ಲಪ್ಪ ಎಂಬುವನಿಗೆ ಗ. ೨೬ ವರಹಕ್ಕೆ ಮಾರಿದ್ದನು. ಈ ತಪ್ಪು ನಡೆವಳಿಕೆ ದೊರೆ ಇಮ್ಮಡಿ ಮದಕೇರಿನಾಯಕನಿಗೆ ತಿಳಿದುಬಂದು, ಅವನಿಂದ ಗ.೨೪ ಹಣವನ್ನು ಅಪರಾಧವಾಗಿ ತೆಗೆದುಕೊಂಡು ಸೂಕ್ತ ಕ್ರಮ ಜರುಗಿಸಿ ಈ ಬಗ್ಗೆ ಶಾಸನ ಹಾಕಿಸುವುದಕ್ಕೆ ದಳವಾಯಿ ಗಿರಿಯಪ್ಪ ಎಂಬುವನಿಗೆ ಅಪ್ಪಣೆ ಮಾಡಿದನು. ಅದರಂತೆ ಈ ಶಾಸನ ಹಾಕಿಸಲಾಗಿ, ಇದಕ್ಕೆ ಆ ಗ್ರಾಮದ ಗೌಡ, ಶಾನುಭೋಗ, ಬಡಗಿ, ಕಮ್ಮಾರ, ಅಕ್ಕಸಾಲಿ, ಗಣಾಚಾರಿ, ತಮ್ಮಡಿ, ಪೂಜಾರಿ, ದುರ್ಗದ (ಬಹುಶಃ ಸಂಪಿಗೆ-)ಸಿದ್ದಯ್ಯದೇವರ ಪೂಜಾರಿ, ತಳವಾರ ಇವರೇ ಮುಂತಾದವರು ಒಪ್ಪಿತ ಹಾಕಿರುತ್ತಾರೆ.

ಶಾಸನದ ಪುನರ್‌ಪರಿಶೀಲನೆಯಿಂದ, ತಮ್ಮಡಿಯ ಹೆಸರು ಉದ್ದಂಡ ಎಂದಿದ್ದುದೂ ಅವನು ಮಾಡಿದ ಅಕ್ರಮ ನಿರ್ದಿಷ್ಟವಾಗಿ ಏನೆಂಬುದೂ, ಆ ಅಕ್ರಮ ಎಸಗಲು ಕಾರಣ ಏನಿತ್ತೆಂಬುದೂ, ಅವನು ಮಾರಿದ ದೇವರ ಆಸ್ತಿಪಾಸ್ತಿಗಳು ಯಾವುವೆಂಬುದೂ ಅವನ್ನು ಕ್ರಯಕ್ಕೆ ತೆಗೆದುಕೊಂಡವನ ಪೂರ್ಣ ಹೆಸರು, ಈ ಅಕ್ರಮಕ್ಕೆ ದೊರೆ ತೆಗೆದುಕೊಂಡ ಕ್ರಮ, ಇವೆಲ್ಲ ಸ್ಪಷ್ಟವಾಗಲು ಸಾಧ್ಯವಾಯಿತು.

ದೇವರ ಆಸ್ತಿಯನ್ನು ತನ್ನ ಸ್ವಂತದ್ದೆಂಬಂತೆ ಮಾರಿಕೊಳ್ಳುವುದೂ ದೇವರ ಆಸ್ತಿ (ಸರ್ವೇ ಸಾಧಾರಣವಾಗಿ ಎಲ್ಲರಿಗೂ ತಿಳಿದಿರುವುದರಿಂದ) ತಿಳಿದೂ ತಿಳಿದೂ ಕ್ರಯಕ್ಕೆ ತೆಗೆದುಕೊಳ್ಳುವುದೂ ಎರಡೂ ಗುರುತರವಾದ ಅಕ್ರಮಗಳೇ. ಹಾಗಾಗಿ ಅಂಥದ್ದಕ್ಕೆ ಶಿಕ್ಷೆ ಅಥವಾ ದಂಡದ ಪ್ರಮಾಣ ಹೆಚ್ಚಿನದೇ ಇರಬೇಕಾಗುತ್ತದೆ. ಆದರೆ ಇಲ್ಲಿ ಅಂಥ ಅಕ್ರಮ ಎಸಗಿದ ತಮ್ಮಡಿ ಉದ್ದಂಡನಿಗೆ ಗ.೨೪ ಹಣ, ಅಂದರೆ ಕನಿಷ್ಠ ಪ್ರಮಾಣದ ದಂಡ(೬x೨ = ೧೨ ಹಣ)ದ ಎರಡರಷ್ಟನ್ನು ಮಾತ್ರ ವಿಧಿಸಲಾಗಿದೆ. ಇದನ್ನು ನೋಡಿದರೆ, ಅವನು ಕಠೋರ ಬಡತನದ ಕಾರಣದಿಂದ ಆ ಅಕ್ರಮ ಎಸಗಿರುವುದನ್ನು ಮಾನವೀಯವಾಗಿಯೇ ಮನಸ್ಸಿಗೆ ತಂದುಕೊಂಡು, ಪ್ರಕರಣವನ್ನು ಸಾಕಷ್ಟು ಉದಾರವಾಗಿಯೇ ಪರಿಗಣಿಸಿ ಈ ದಂಡಹಾಕಿರುವಂತೆ ಕಾಣುತ್ತದೆ. ಕಡುಬಡವನೆಂದು ದಂಡಹಾಕದೆ ಬಿಟ್ಟರೆ, ದೇವರ ಆಸ್ತಿಯನ್ನು ಒಂದಲ್ಲ ಒಂದು ನೆಪದಿಂದ ಮಾರಿಕೊಳ್ಳುವವರಿಗೆ ದಾರಿ ತೆರೆದಂತಾಗುತ್ತದೆ. ಅಂಥದ್ದಕ್ಕೆ ಸೂಕ್ತ ಕಡಿವಾಣ ಹಾಕಲು ಕನಿಷ್ಠ ದಂಡವಾದರೂ ಇರಬೇಕೆಂದು ಆ ದಂಡ ವಿಧಿಸಿದಂತಿದೆ. ಅಷ್ಟಾದರೂ ದಂಡ ಕೊಡಲು ಅವನಿಗೆ ಶಕ್ತಿ ಇತ್ತೋ ಹೇಗೋ, ಅಂತೂ ದಂಡವನ್ನು ಮಾಫಿಮಾಡದೆ ಕಡ್ಡಾಯವಾಗಿ ವಿಧಿಸಲಾಗಿದೆ.

ಮಾರಲಾಗಿದ್ದ ದೇವರ ಆಸ್ತಿ-ಪಾಸ್ತಿಯನ್ನು ಕೊಂಡವನ ಮೇಲೂ ಏನಾದರೂ ಕ್ರಮ ತೆಗೆದುಕೊಳ್ಳಲಾಯಿತೇ ಎಂಬ ಬಗ್ಗೆ ಶಾಸನದಲ್ಲಿ ಯಾವ ವಿವರವೂ ಇಲ್ಲವಾದರೂ

ಬಹುತೇಕ ಆ ಆಸ್ತಿಯ ಕ್ರಮವನ್ನು ಅನೂರ್ಜಿತಗೊಳಿಸಿ, ಮರಳಿ ದೇವರಿಗೆ ಬಿಟ್ಟು ಕೊಟ್ಟಿರಬಹುದು; ಹಾಗೆಯೇ ಕೊಂಡವನ ಮೇಲೂ ಸೂಕ್ತ ಕ್ರಮವನ್ನು ಜರುಗಿಸಿರಬಹುದು; ಉದ್ದಂಡನ ಪೂಜಾರಿಕೆಯ ಹಕ್ಕನ್ನು ರದ್ದುಪಡಿಸಿ, ಅದನ್ನು ಬೇರೊಬ್ಬರಿಗೆ ಕೊಟ್ಟಿರಲೂ ಬಹುದು. ಅಕ್ರಮವೆಸಗಿದವರಿಗೆ ಸರ್ಕಾರ ಸೂಕ್ತ ಕ್ರಮ ತೆಗೆದುಕೊಳ್ಳದೆ ಬಿಡುವುದಿಲ್ಲ ಎಂಬ ಬಗ್ಗೆ ಸಾರ್ವಜನಿಕರಿಗೆ ತಿಳಿವಳಿಕೆ ಕೊಡುವುದಕ್ಕಷ್ಟೆ ಚಿಕ್ಕಪಾಠದ ಈ ಶಾಸನ ಹಾಕಿಸಿದಂತಿದೆ.

## ಗೌಡಿಕೆಹಕ್ಕಿಗೆ ದಿವ್ಯದ ಪರೀಕ್ಷೆ

ಚಿತ್ರದುರ್ಗವನ್ನು ಬರಮಣ್ಣನಾಯಕನು (೧೬೮೯-೧೭೨೧) ಆಳುತ್ತಿದ್ದ ಕಾಲದಲ್ಲಿ ನಡೆದ ಸ್ಥಳದ ಗೌಡಿಕೆಯ ವ್ಯಾಜ್ಯ ಮತ್ತು ಅದರ ತೀರ್ಮಾನ ಕುರಿತು ಕ್ರಿ.ಶ.೧೭೦೬ರ ತಾಮ್ರಶಾಸನದ ನಕಲು ಎಂದು ಹೇಳಲಾದ ಕಾಗದದ ದಾಖಲೆಯೊಂದು ತಿಳಿಸುತ್ತದೆ. ೨೦೦೩ರಲ್ಲಿ[೫] ಇದರ ಪಾಠಕೊಟ್ಟು ಸಮಗ್ರ ವಿವೇಚನೆ ಮಾಡಿದ ಲೇಖನವೊಂದನ್ನು ನಾನು ಪ್ರಕಟಿಸಿದ್ದೇನೆ. ೨೦೦೫ರಲ್ಲಿ ಅದೇ ದಾಖಲೆಯ ಪಾಠಕೊಟ್ಟು ಸಮಗ್ರ ವಿವೇಚನೆ ಮಾಡಿದ ಲೇಖನವೊಂದನ್ನು ಪ್ರೊ.ಲಕ್ಷ್ಮಣ್ ತೆಲಗಾವಿ ಅವರೂ ಪ್ರಕಟಿಸಿದ್ದಾರೆ.[೬] ನಮ್ಮಿಬ್ಬರ ಓದಿಕೆಯಲ್ಲಿ ಅಲ್ಲಲ್ಲಿ ಕೆಲವು ವ್ಯತ್ಯಾಸಗಳಿರುವಂತೆ, ಅದರ ವಿವೇಚನೆಯಲ್ಲೂ ಕೆಲವು ಅಂಶಗಳನ್ನು ಕುರಿತು ವ್ಯತ್ಯಾಸಗಳಿವೆ.

ಕಾಗುಣಿತ ಹಾಗೂ ವಾಕ್ಯರಚನೆ ಅಲ್ಲಲ್ಲಿ ಸಮರ್ಪಕವಿಲ್ಲದಿದ್ದರೂ ಅದರ ಒಟ್ಟಾರೆ ಅಭಿಪ್ರಾಯವನ್ನು ಈ ಮುಂದಿನಂತೆ ಗ್ರಹಿಸಬಹುದಾಗಿದೆ: ಚಿತ್ರದುರ್ಗ ಸಂಸ್ಥಾನದ ಬೇತೂರು ಹೋಬಳಿಗೆ ಸೇರಿದ ದಾವಣಗೆರೆ ಗ್ರಾಮದ (ಈಗ ಇದು ಒಂದು ಜಿಲ್ಲಾ ಕೇಂದ್ರ), ಗೌಡಿಕೆ ಮೂಲತಃ ಕುರುಬ ಜನಾಂಗದವರಿಗೆ ಸೇರಿತ್ತು. ಆದರೆ ಮಧ್ಯದಲ್ಲಿ ಸಾದ ಜನಾಂಗದ ಮುದಿಯಣ್ಣ ಎಂಬುವನು ಒಂದು ವಿಷಮ ಸಂದರ್ಭದ ದುರ್ಲಾಭ ಪಡೆದು ಗೌಡಿಕೆ ತನ್ನದೆಂಬಂತೆ ವರ್ತಿಸತೊಡಗಿದನು. ಬೀರದೇವರ ಪೂಜಾರಿವಂಶಕ್ಕೆ ಸೇರಿದ ಕುರುಬರ ನಾಗಯ್ಯ ಗೌಡಿಕೆಯ ನಿಜವಾದ ಹಕ್ಕುದಾರ ತಾನು ಎಂದು ಹೇಳಿದಾಗ ಗೊಲ್ಲರ ಗಿಡ್ಡಯ್ಯ ಎಂಬುವನು ಅದನ್ನು ಬೆಂಬಲಿಸಿದನು. ಹೀಗೆ ಎರಡೂ ಪಕ್ಷದವರು ಗೌಡಿಕೆ ನಮ್ಮದು-ತಮ್ಮದು ಎಂದು ಹೇಳುತ್ತಾ, ಗ್ರಾಮದ ಹಂತದಲ್ಲಿ ಈ ವ್ಯಾಜ್ಯತೀರ್ಮಾನ ಆಗದೆ, ಬರಮಣ್ಣನಾಯಕ ದೊರೆಯ ಸಮ್ಮುಖಕ್ಕೆ ಬಂದಿತು.

ಆಗ ದೊರೆಯು ಪ್ರಧಾನಿ, ದಳವಾಯಿಗಳು, ರಾಜಬಂಧುಗಳು, ಅಧಿಕಾರಿಗಳು, ಗಣ್ಯರು, ಅರಮನೆಯ ಸಿಬ್ಬಂದಿಯವರು, ಪರಊರುಗಳ ಗೌಡರು -ಇವರೆಲ್ಲರ ಸಮ್ಮುಖದಲ್ಲಿ, ಎರಡೂ ಪಕ್ಷದವರಿಗೂ 'ನಿಮ್ಮ ಪೂರ್ವೋತ್ತರ ಹೇಳಿ' ಎಂದು ಅಪ್ಪಣೆ ಮಾಡಿದನು. ಆಗ ಸಾದರ ಮುದಿಯಣ್ಣನು "ಚಿತ್ರದುರ್ಗದ ಅರಸುಗಳ ಮೂರು ತಲೆಮಾರಿನ ಹಿಂದಿನಿಂದ ದಾವಣಗೆರೆಗ್ರಾಮದ ಗೌಡಿಕೆ ನಮ್ಮದೇ, ಇದಕ್ಕೆ ಆಯಗಾರರನ್ನು ಬೇಕಾದರೆ ಕೇಳಬಹುದು" ಎಂದನು. ಆಗ ಅಲ್ಲಿಗೆ ಬಂದಿದ್ದ ತಳವಾರ, ಕಮ್ಮಾರ,

ಬಡಗಿ, ಅಕ್ಕಸಾಲೆ, ಕೆಲಸಿ ಮುಂತಾದವರು "ಸಾದರ ಮುದಿಯಣ್ಣನೇ ಗೌಡ. ಅವನ ವಂಶದವರದೇ ಗೌಡಿಕೆ. ಗೌಡಿಕೆ ಕುರುಬರದಾಗಿತ್ತು ಎಂಬುದನ್ನು ನಾವು ಅರಿಯೆವು" ಎಂದರು. ಆಗ ಆಯಗಾರರಲ್ಲಿ ಒಬ್ಬನಾಗಿದ್ದ ಬೇಗಾರ ಏನೂ ಹೇಳದಿದ್ದನ್ನು ನೋಡಿ ದೊರೆ ಪ್ರಶ್ನಿಸಿದಾಗ ಅವನು "ಸ್ವಾಮಿ, ಹನುಮಪ್ಪನಾಯಕನು ಈ ಭಾಗದಲ್ಲಿ ದಾಳಿ ಮಾಡಿದಾಗ, ದಾಳಿಯಲ್ಲಿ ನಲುಗಿದ ದಾವಣಗೆರೆಯನ್ನು ಸಾದರ ಮುದಿಯಣ್ಣ ತನ್ನ ಗೌಡಿಕೆಯ ಗ್ರಾಮ ಎಂದು ಹೇಳಿಕೊಳ್ಳತೊಡಗಿದ. ಈ ಸೀಮೆಯ ನಾಡಿಗರು ಮುಂತಾದವರನ್ನು ಮುದಿಯಣ್ಣ ಸಾಕ್ಷಿಯಾಗಿ ಕರೆಸಿ, ಗೌಡಿಕೆ ತಮ್ಮದೆಂದು ಹೇಳಿದ (ನಾಗಯ್ಯನ ತಂದೆ) ಕುರುಬರ ಕರಿಯಣ್ಣನನ್ನು ಗ್ರಾಮದಿಂದ ಓಡಿಸಿದನು. ಹೀಗೆಂದು ನಮ್ಮ ಹಿರಿಯರು ಹೇಳುತ್ತಾರೆ" ಎಂದನು. (ಇಲ್ಲಿ ಹೇಳೀರುವ ಹನುಮಪ್ಪನಾಯಕ ತರೀಕೆರೆ ಅಥವಾ ಸಂತೇಬೆನ್ನೂರಿನ ದೊರೆ ಇದ್ದಿರಬೇಕು.)

ಇದರಿಂದ ಆಯಗಾರರಲ್ಲೇ ಇತ್ತಂಡದ ಅಭಿಪ್ರಾಯವಾದಂತಾಗಿ ವ್ಯಾಜ್ಯತೀರ್ಮಾನ ಕಷ್ಟಕರವಾಯಿತು. ಆಗ ಸಮಸ್ತ ದೈವದವರು "ಈ ವ್ಯಾಜ್ಯ ದೈವಾಚಾರದ ಮೂಲಕ ತೀರ್ಮಾನವಾಗಲಿ; ಅಂದರೆ ಕೆಂಪಗೆ ಕಾದ ಉಕ್ಕಿನಗಟ್ಟಿಯನ್ನು ಕೈಯಲ್ಲಿ ಹಿಡಿದು ಸತ್ಯ ಮಾಡಿ ಗೌಡಿಕೆಯನ್ನು ಗೆದ್ದುಕೊಳ್ಳಲಿ" ಎಂದು ಸೂಚಿಸಿದರು. ಆಗ ಕುರುಬರ ನಾಗಯ್ಯ ಮತ್ತು ಅವನನ್ನು ಬೆಂಬಲಿಸಿದ ಗೊಲ್ಲರ ಸಿದ್ದಯ್ಯ "ಈ ಪರೀಕ್ಷೆಗೆ ನಮ್ಮ ಒಪ್ಪಿಗೆ ಇದೆ" ಎಂದು ಹೇಳಿ, 'ಗೊತ್ತಿಗೆ ನಿಂತು', ತಮ್ಮ ಹೇಳಿಕೆಯನ್ನು ಬರೆದುಕೊಟ್ಟರು. ಆಗ ಸಾದರ ಮುದಿಯಣ್ಣ "ನಾಗಯ್ಯ ಗೆದ್ದರೆ ನಾನು ಗ್ರಾಮ ಬಿಟ್ಟುಕೊಡುತ್ತೇನೆ. ಜೊತೆಗೆ ಅದಕ್ಕೆ ಅಪರಾಧವನ್ನೂ ಕೊಡುತ್ತೇನೆ" ಎಂದು ತಾನೂ ಬರೆದುಕೊಟ್ಟನು. ಆಗ ದೊರೆ ಅಲ್ಲಿದ್ದ ಎಲ್ಲರ ಸಮ್ಮುಖದಲ್ಲಿ "ಹಾಗಾದರೆ, ಪೇಟೆ ಹನುಮಂತರಾಯ ದೇವಸ್ಥಾನದ ಮುಂದೆ ಸತ್ಯತೀರ್ಮಾನ ಮಾಡಿಕೊಳ್ಳಿ" ಎಂದು ಅಪ್ಪಣೆ ಮಾಡಿದನು. (ಈ ದೇವಸ್ಥಾನ ದುರ್ಗದ್ದೆ, ದಾವಣಗೆರೆಯದೆ ಎಂಬ ಬಗ್ಗೆ ಭಿನ್ನಾಭಿಪ್ರಾಯವಿದೆ).

ಅದರಂತೆ ಹನುಮಂತರಾಯ ದೇವಸ್ಥಾನದ ಮುಂದೆ ಸಮಸ್ತರ ಸಮ್ಮುಖದಲ್ಲಿ, ಉಕ್ಕಿನ ಗಟ್ಟಿಯನ್ನು ಕೆಂಪಗೆ ಕಾಯಿಸಲು ಹೇಳಿ ನಾಗಯ್ಯನಿಗೆ ನೀರೆರೆದು ಮಡಿಹೊದಿಕೆ ಹೊದಿಸಿ, ದೇವರೆದುರಿಗೆ ನಿಂತಿದ್ದ ಅವನ ಕೈಯಲ್ಲಿ ಅರಳಿಎಲೆ ಇಟ್ಟು, ಅಂಗನೂಲು ಸುತ್ತಿ, ದೇವರ ಪ್ರಸಾದ ಇರಿಸಿ, ಕೆಂಪಗೆ ಕಾದ ಉಕ್ಕಿನಗಟ್ಟಿಯನ್ನು ಕೈಯಲ್ಲಿ ಹಾಕಲಾಯಿತು. ಅವನು ಏಳುಮಂಡಲ ದಾಟಿ ಕೈಯಲ್ಲಿದ್ದ ಕಾದಗಟ್ಟಿಯಿಂದಲೇ ದೇವರಿಗೆ ಆರತಿ ಎತ್ತಿ, ಗಟ್ಟಿಯನ್ನು ಕೆಳಗೆ ಹಾಕಿದಾಗ, ಅವನ ಕೈಯೊಳಗಿನ ಅರಳಿಎಲೆ ಅಂಗನೂಲು ಸುಡದೆ ಹಾಗೆ ಇದ್ದುವು. ಆಗ ನೆರೆದಿದ್ದ ಎಲ್ಲರೂ "ನಾಗಯ್ಯ ಗೆದ್ದ" ಎಂದು ಘೋಷಣೆ ಮಾಡಿದರು. ದಾವಣಗೆರೆ ಗ್ರಾಮದ ಗೌಡಿಕೆ ಅವನದೇ ಎಂದು ತಾಮ್ರಶಾಸನವನ್ನು ಬರೆಸಿಕೊಡಲಾಯಿತು.

ಸಾಕ್ಷಿಗಳು ಪರಸ್ಪರ ವಿರುದ್ಧ ಹೇಳಿಕೆ ನೀಡಿ, ತೀರ್ಮಾನ ಸಾಧ್ಯವಾಗದೆ ಇದ್ದಾಗ ದೈವಪರೀಕ್ಷೆಯ ಮೂಲಕ ಅರ್ಥಾತ್ ದಿವ್ಯದ ಮೂಲಕ ಅದನ್ನು ಮಾಡಲಾಗುತ್ತಿತ್ತು

ಎಂಬುದಕ್ಕೆ ಈ ಮೇಲಿನ ತಾಮ್ರಶಾಸನ(ದ ನಕಲು) ಸಾಕ್ಷಿಯಾಗಿದೆ. ಭಾರತದಲ್ಲಿ ಪ್ರಾಚೀನಕಾಲದಿಂದಲೂ ಚಾಲ್ತಿಯಲ್ಲಿದ್ದ 'ದಿವ್ಯ' ಅಥವಾ 'ದೈವಾಚಾರ' ಪರೀಕ್ಷೆಯ ಮೂಲಕ ನ್ಯಾಯತೀರ್ಮಾನ ಮಾಡುತ್ತಿದ್ದ ಪದ್ಧತಿ ಚಿತ್ರದುರ್ಗದ ಪಾಳೆಯಗಾರರ ಕಾಲ ದಲ್ಲೂ ಮುಂದುವರಿದುಕೊಂಡು ಬಂದಿತ್ತು ಎಂಬುದಕ್ಕೆ ಈ ಪ್ರಕರಣ ಒಂದು ಉತ್ತಮ ನಿದರ್ಶನವಾಗಿದೆ.

'ದೈವಾಚಾರ' ಅಥವಾ 'ದಿವ್ಯ'ದಂಥ ಕಠಿಣಪರೀಕ್ಷೆಯ ಬಗ್ಗೆ ಇಲ್ಲಿ ಎರಡು ಮಾತನ್ನು ಹೇಳಬೇಕು. "ದಿವ್ಯದ ಎಲ್ಲ ಸಂದರ್ಭಗಳಲ್ಲೂ ನ್ಯಾಯ, ಋಜುತ್ವಗಳನ್ನುಳ್ಳವರೇ ಗೆದ್ದಿರಬಹುದೆ? ದೋಷಿಗಳಿಗಷ್ಟೇ ಶಿಕ್ಷೆ ಆಗಿರಬಹುದೆ? ದಿವ್ಯಗಳನ್ನು ಹಿಡಿದು ಗೆದ್ದರೆಂದು ಶಾಸನಗಳು ಹೇಳುವುದಾದರೂ ಆ ಸಂಗತಿಗಳೆಲ್ಲ ನಿಜವಾಗಿ ಘಟಿಸಿದುವೇ? ಇಂಥ ಸಂದೇಹಗಳು ಮನಸ್ಸನ್ನು ಕಾಡುತ್ತವೆ. ದಿವ್ಯದಿಂದ ತಪ್ಪಿತಸ್ಥರ ಮೇಲೆ ಮಾನಸಿಕವಾಗಿ ಒತ್ತಡ/ಬೆದರಿಕೆ ಉಂಟಾಗಿ ಅವರ ಮಾನಸಿಕ ಬಲ ಸ್ಥೈರ್ಯ ಕುಗ್ಗುತ್ತಿದ್ದವೆಂದೂ ತಪ್ಪಿಲ್ಲದವರಿಗೆ ಬಲ ಸ್ಥೈರ್ಯಗಳು ಇರುತ್ತಿದ್ದವೆಂದೂ ಅದರಿಂದಾಗಿಯೇ ತಪ್ಪಿತಸ್ಥ ವ್ಯಕ್ತಿ ಕ್ರಮೇಣ ಅಧೀರನಾಗಿ ದಿವ್ಯದ ಸಂದರ್ಭ ಬರುವ ವೇಳೆಯೊಳಗೇ ಬಹುಶಃ ತಪ್ಪನ್ನು ಒಪ್ಪಿಕೊಳ್ಳುತ್ತಿದ್ದಿರಬೇಕು; ಹಾಗೆಯೇ ತಪ್ಪಿಲ್ಲದ ವ್ಯಕ್ತಿ ಸತ್ಯ ತನ್ನನ್ನು ಕಾಯುತ್ತದೆ ಎಂಬ ದೃಢತೆಯಿಂದ ದಿವ್ಯಕ್ಕೆ ಸಿದ್ಧನಾಗುತ್ತಿದ್ದಿರಬೇಕು ಎಂದೂ ಅಂದುಕೊಳ್ಳಬಹುದು. ಹೀಗಾಗಿ 'ದಿವ್ಯದ ಕಲ್ಪನೆಯ ಹಿಂದೆ ಒಂದು ಮನಶ್ಶಾಸ್ತ್ರೀಯವಾದ ತತ್ತ್ವವಿದೆ' ಎಂಬ ಮಾತನ್ನು ಒಪ್ಪಿಕೊಳ್ಳಬಹುದು. ಈ ಮೇಲಿನ ಪ್ರಕರಣದಲ್ಲೂ ಹೀಗೆ ಆಗಿದ್ದಿರಬಹುದು.

**ಕಸಿದುಕೊಂಡ ಗೌಡಿಕೆಯನ್ನು ಮರಳಿಸಿದ್ದು**

ಹಳ್ಳಿಯ ಗೌಡಿಕೆ ಹಿಂದೊಂದು ಕಾಲಕ್ಕೆ ಒಂದು ಪ್ರತಿಷ್ಠೆಯ ಸ್ಥಾನವಾಗಿತ್ತು. ಅದರ ಸಲುವಾಗಿ ಘರ್ಷಣೆ-ಪೈಪೋಟಿಗಳು ನಡೆಯುತ್ತಿದ್ದುದು ಸಾಮಾನ್ಯವಾಗಿತ್ತು. ಹಿಂದಿನ ಪ್ರಕರಣದಲ್ಲಿ ಇದನ್ನು ನೋಡಿದ್ದೇವೆ. ಗೌಡಿಕೆಯ ಹಕ್ಕಿನ ಬಗೆಗಿನ ಇನ್ನೊಂದು ಪ್ರಕರಣ ಇಲ್ಲಿದೆ. ಇದು ಕೂಡಾ ಅದೇ ಬರಮಣ್ಣನಾಯಕ ದೊರೆಯ ಕಾಲದಲ್ಲಿ ವಿಚಾರಣೆಯಾಗಿ ಇತ್ಯರ್ಥವಾದದ್ದು. ಒಂದು ಊರಿನ ಗೌಡ ಇನ್ನೊಂದು ಊರಿನ ಗೌಡಿಕೆಯ ಹಕ್ಕು ತನ್ನದೇ ಎಂದಾಗ ಅಥವಾ ಅದನ್ನು ಬಲಾತ್ಕಾರದಿಂದ ತನ್ನ ಕೈವಶ ಮಾಡಿಕೊಂಡಾಗ, ಅಂಥ ವಿಷಯದಲ್ಲಿ ನ್ಯಾಯಪಾಲನೆಯ ಕ್ರಮ ಹೇಗೆ ಜರುಗುತ್ತಿತ್ತು ಎಂಬುದನ್ನು ಈ ಪ್ರಕರಣ ತೋರಿಸುತ್ತದೆ. ಹೊಳಲ್ಕೆರೆ ತಾಲ್ಲೂಕಿನ ಮತಿಗಟ್ಟ ಗ್ರಾಮದಲ್ಲಿ ನನಗೆ ದೊರೆತ ಕ್ರಿ.ಶ.೧೭೭೩ ಮತ್ತು ೧೭೧೪ರ ಎರಡು ತಾಮ್ರಶಾಸನಗಳು ಆ ಪ್ರಕರಣವನ್ನು ನಮ್ಮ ಮುಂದೆ ತೆರೆದಿಡುತ್ತವೆ.

ಈ ಮತಿಗಟ್ಟ ಗ್ರಾಮಕ್ಕೆ ಸಮೀಪದಲ್ಲಿರುವ ಸಂಗೇನಹಳ್ಳಿಯ ಗೌಡ ಲೆಂಕಪ್ಪ ಎಂಬಾತ ಮತಿಗಟ್ಟ ಗ್ರಾಮದ ಸಾದರ ಗೌಡರಿಂದ ಅವರ ಗೌಡಿಕೆಯನ್ನು ದೌರ್ಜನ್ಯದಿಂದ ಕಸಿದುಕೊಂಡ. ಅವನು ಹೀಗೆ ಮಾಡಲು ಅರಮನೆಯ ಅಧಿಕಾರಿಗಳಲ್ಲೊಬ್ಬನಾಗಿದ್ದ

ಪಾರುಪತ್ಯಗಾರ ಸಿರಿಯಪ್ಪ ಎಂಬುವನ ಕುಮ್ಮಕ್ಕೂ ಕಾರಣವಾಗಿತ್ತು. ಗೌಡಿಕೆಯನ್ನು ಕಸಿದುಕೊಂಡ ಈ ಪ್ರಕರಣ ಜರುಗಿದ ಕಾಲದಲ್ಲಿ ದುರ್ಗದಲ್ಲಿ ದೊರೆ ಯಾರೂ ಇಲ್ಲದೆ, ದಳವಾಯಿಗಳದೇ ಆಡಳಿತ ನಡೆಯುತ್ತಿತ್ತು. ಅಂದರೆ ಇದು ಆದದ್ದು ಬರಮಣ್ಣನಾಯಕ ಪಟ್ಟಕ್ಕೆ ಬರುವ (ಕ್ರಿ.ಶ.೧೬೮೯ಕ್ಕೆ) ಮುಂಚೆ. ಆಮೇಲೆ ಸಾಕಷ್ಟು ಕಾಲ ಹೊಸ ಗೌಡನ ಗೌಡಿಕೆ ನಡೆದಿರಬೇಕು. ಆಗ ಹೊಸ ಗೌಡ ಆ ಗ್ರಾಮದ ಗೌಡಿಕೆ ತಮ್ಮದೇ ಎಂಬಂತೆ ಜಯರೇಖೆಯನ್ನೂ ಬರೆಸಿಕೊಂಡಿರಬಹುದು.

ಗೌಡಿಕೆಯನ್ನು ಕಳೆದುಕೊಂಡಿದ್ದವರು ಅಸಹಾಯಕರಾಗಿ ಪರಿತಪಿಸುತ್ತಿದ್ದಿರಬೇಕು. ಬರಮಣ್ಣನಾಯಕ ಪಟ್ಟಕ್ಕೆ ಬಂದ ಎಷ್ಟೋ ವರ್ಷಗಳ ಮೇಲೆ, ಈ ಪ್ರಕರಣ ದೊರೆಯ ಗಮನಕ್ಕೆ ಹೋಗೋ ಬಂದು, ಆ ಅನ್ಯಾಯವನ್ನು ಸರಿಪಡಿಸಲು ಅವನು ಕ್ರಮ ಕೈಕೊಂಡ ಪರಿಣಾಮವಾಗಿ ಆ ಪ್ರಕರಣ ಇತ್ಯರ್ಥಗೊಂಡಂತೆ ಕಾಣುತ್ತದೆ. ಆ ಮಧ್ಯದಲ್ಲಿ ಯಾರು ಯಾರು ಏನೇನು ಮಾಡಿದರು, ಏನೇನೆಲ್ಲ ಆಯಿತು ಎಂಬ ಬಗ್ಗೆ ತಿಳಿಯದು. ಲೆಂಕೆಪ್ಪ ಮತ್ತು ಅವನ ಸೋದರವರ್ಗದವರು ಮತಿಗಟ್ಟದ ಗೌಡಿಕೆಯನ್ನು ತಾವು ದಳವಾಯಿಗಳ ಕಾಲದಲ್ಲಿ ದುಡುಕಿನಿಂದ ತೆಗೆದುಕೊಂಡೆವೆಂದೂ, ಆ ಗೌಡಿಕೆ ತಮಗೆ ಸೇರಿದ್ದಲ್ಲವೆಂದೂ, ಮುಂದೆ ತಾವಾಗಲಿ ತಮ್ಮ ಸಂತತಿಯವರಾಗಲಿ ಆ ಗೌಡಿಕೆ ತಮ್ಮದೆಂದು ಜಯರೇಖೆಯನ್ನು ತಂದು ತಕರಾರು ಮಾಡಿದರೆ ದಿವಾಣಕ್ಕೆ ೧೨೦೦ ವರಹ ಅಪರಾಧ ಕಟ್ಟಿಕೊಡುವುದಲ್ಲದೆ, ದಿವಾಣದವರು ಕೈಕೊಳ್ಳುವ ಯಾವುದೇ ಕ್ರಮಕ್ಕೂ ತಾವು ಬದ್ಧರಿರುವುದಾಗಿಯೂ, ಅನೇಕ ದಳವಾಯಿಗಳು, ಪಾರುಪತ್ಯಗಾರರು, ನಾನಾ ಊರುಗಳ ಗೌಡರು ಇನ್ನೂ ಮುಂತಾದ ಅನೇಕ ಸಾಕ್ಷಿಗಳ ಮುಂದೆ ತಪ್ಪೊಪ್ಪಿಕೊಂಡು ಕ್ರಿ.ಶ.೧೭೧೩ರ ಮಾರ್ಚ್ ೧೬ ರಂದು ಒಂದು ಮುಚ್ಚಳಿಕೆಯನ್ನು ಲಿಖಿತವಾಗಿ ಕೊಟ್ಟರು. ಇದು ಮೊದಲ ತಾಮ್ರಶಾಸನ.

ಆ ತರುವಾಯ ಕ್ರಿ.ಶ.೧೭೧೪ರ ಡಿಸೆಂಬರ್ ೨ರಂದು, ಇಂಥದೇ ಮತ್ತೊಂದು ಮುಚ್ಚಳಿಕೆಯನ್ನು ಇತರ ಕೆಲವರು ಪ್ರಮುಖರು ಮತ್ತಿತರ ಸಾಕ್ಷಿಗಳ ಮುಂದೆ ಲಿಖಿತವಾಗಿ ಕೊಟ್ಟರು. ಇದು ಎರಡನೆಯ ತಾಮ್ರಶಾಸನ. ಹಳೆಯ ಗೌಡರ ಗೌಡಿಕೆಯ ಹಕ್ಕಿನ ರಕ್ಷಣೆಗೆ ಮೊದಲನೆಯ ಮುಚ್ಚಳಿಕೆಯೇ ಸಾಕಾಗಿತ್ತಾದರೂ ಎರಡನೆಯದನ್ನು ಅವರು ಏಕೆ ಬರೆದುಕೊಟ್ಟರು? ಅಥವಾ ಅವರಿಂದ ಏಕೆ ಬರೆಸಿಕೊಂಡರು? ಎಂದು ಪ್ರಶ್ನೆ ಬರುವುದು ಸಹಜ. ಅದಕ್ಕೆ ಒಂದು ವಿಶೇಷ ಕಾರಣವೇ ಇದೆ. ಮೊದಲನೆಯ ಪತ್ರ ಬರೆದುಕೊಟ್ಟ ಕಾಲಕ್ಕೆ ಅದರಲ್ಲಿ ಪಾರುಪತ್ಯಗಾರ ಸಿರಿಯಪ್ಪನ ಕುಮ್ಮಕ್ಕಿನ ಅಂಶ ಸೇರಿರಲಿಲ್ಲ. ಆ ವಿಚಾರ ಮೊದಲ ಪತ್ರದ ಕಾಲಕ್ಕೆ ಪ್ರಾಯಶಃ ಬೆಳಕಿಗೆ ಬಂದಿರದಿದ್ದುದೆ ಅದಕ್ಕೆ ಕಾರಣವಿರಬೇಕು. ಹೀಗಾಗಿ ಮತಿಗಟ್ಟದ ಹಳೆಯಗೌಡರಿಗೆ ಅದು ಆತಂಕಕ್ಕೆ ಕಾರಣವಾಯಿತೆಂದು ಕಾಣುತ್ತದೆ. ಸಿರಿಯಪ್ಪನಂಥ ಅಧಿಕಾರಸ್ಥರಿಂದ ಅಥವಾ ಅವರ ಕಡೆಯವರಿಂದ ಮುಂದೆ ತಮ್ಮ ಗೌಡಿಕೆಗೆ ಅಥವಾ ತಮಗೆ ಏನಾದರೂ ಅಪಾಯ ಉಂಟಾದೀತೆಂದು ಹೆದರಿ, ಅದರಿಂದ ಸುಭದ್ರತೆ ಪಡೆಯಲು ಆ ಅಂಶವನ್ನು ನಮೂದಿಸಿ

ಇನ್ನೊಂದು ಪತ್ರ ಬರೆದುಕೊಡುವಂತೆ ದೊರೆಗಳಲ್ಲಿ ನಿವೇದನೆ ಮಾಡಿಕೊಂಡು ಒತ್ತಾಯ ತಂದಂತೆ ಕಾಣುತ್ತದೆ. ಅದರಿಂದ ಲೆಂಕೆಪ್ಪ ಸಹೋದರರು ಎರಡನೆಯ ಮುಚ್ಚಳಿಕೆಯನ್ನು ಲಿಖಿತವಾಗಿ ಕೊಟ್ಟಿರಬೇಕು.

ಅಕ್ರಮ ಪ್ರಕರಣಗಳಲ್ಲಿ ಸಾಮಾನ್ಯವಾಗಿ ವಿಧಿಸಲಾಗುತ್ತಿದ್ದ ಕನಿಷ್ಠ ಪ್ರಮಾಣದ ಅಪರಾಧ ೧೨ ವರಹದ ಶತಗುಣ ಪ್ರಮಾಣದಷ್ಟು ಅಂದರೆ ೧೨೦೦ ವರಹವನ್ನು ಇಲ್ಲಿ ವಿಧಿಸಿರುವುದು ಗಮನಾರ್ಹ.

ಇಲ್ಲಿ ಮತ್ತೊಂದು ವಿಚಾರವನ್ನೂ ಹೇಳಬೇಕು : 'ಕರ್ತಾರಯ್ಯನವರಿಗೆ' ಅಂದರೆ ದೊರೆಗಳಿಗೆ ಸಂಬೋಧಿಸಿ ಬರೆದುಕೊಟ್ಟಿರುವ ಈ ಮುಚ್ಚಳಿಕೆಗಳ ನಿರೂಪಣ ಕ್ರಮ ಆಧುನಿಕ ಕಾಲದಲ್ಲಿ ಮುಂದುವರಿದಿರುವುದನ್ನು ಗಮನಿಸಬಹುದು. ಲೆಂಕೆಪ್ಪನಷ್ಟೇ ಅಲ್ಲದೆ ಅವನ ಸಹೋದರರೆಲ್ಲರೂ ಸೇರಿ ಬರೆದುಕೊಟ್ಟಿರುವುದು ಅಥವಾ ಬರೆದುಕೊಡುವಂತೆ ನಿರ್ಬಂಧಿಸಿರುವುದು; ಗೌಡಿಕೆಯ ಹಕ್ಕನ್ನು ತಮ್ಮ ಮಕ್ಕಳಲ್ಲದೆ ಮುಂದಿನ ಅವರ ಸಂತತಿಯವರು ಯಾರಾದರೂ ತಮ್ಮದೆಂದು ತಕರಾರು ಮಾಡಿದರೆ, ಜಯರೇಖೆ (ಹಕ್ಕುಪತ್ರ) ತಂದರೆ, ಅದನ್ನು ಮಾನ್ಯಮಾಡದಂತೆ ಬಂದೋಬಸ್ತು ಮಾಡಿರುವುದು; ಇದಲ್ಲದೆ, ಅನೇಕ ಅಧಿಕಾರಿಗಳು, ೧೨ ಜನ ಕೈವಾಡದವರು ಇತ್ಯಾದಿಯರ ಸಾಕ್ಷಿಗಳ ಒಪ್ಪಿತ ಹಾಕಿಸಿ ಆ ಮುಚ್ಚಳಿಕೆಗಳನ್ನು ಅಧಿಕೃತಗೊಳಿಸಿರುವುದು - ಈ ಎಲ್ಲ ಅಂಶಗಳು ಇಂದೂ - ಆಧುನಿಕ ಕಾಲದಲ್ಲೂ - ನಾವು ಅನುಸರಿಸುತ್ತಿರುವ ಮುಚ್ಚಳಿಕೆಪತ್ರಗಳ ರೀತಿಯೇ ಆಗಿದೆ. ಈಗಿನ ಕಾಲದ ನಿರೂಪಣೆ ಹೊಸದೇನಲ್ಲ, ಹಿಂದಿನ ಪಾಳೆಯಗಾರರ ಕಾಲದ ಮಾರ್ಗವನ್ನೇ ಅನುಸರಿಸಿ ಬಂದದ್ದು ಎಂಬುದು ಇವುಗಳ ಒಕ್ಕಣೆಯಿಂದ ಸ್ಪಷ್ಟವಾಗಿದೆ.

ಒಟ್ಟಿನಲ್ಲಿ, ಈ ಮೇಲಿನ ಪ್ರಕರಣ ಚಿತ್ರದುರ್ಗ ಪಾಳೆಯಗಾರರ ನ್ಯಾಯಪ್ರಕ್ರಿಯೆಯ ವಿಶಿಷ್ಟ ಸಂದರ್ಭವನ್ನು ಮನದಟ್ಟು ಮಾಡುತ್ತದೆ.

### ಗ್ರಾಮದಾನದ ಮರುಸ್ಥಿರೀಕರಣ

ಒಂದು ಭೂಮಿಯ ಅಥವಾ ಗ್ರಾಮದ ಸ್ವಾಸ್ತಿ, ಆ ಸ್ವಾಸ್ತಿ ಪಡೆದ ವ್ಯಕ್ತಿ ಮೃತನಾಗಿ ಅವನ ಸಂತತಿಯವರು ಇದ್ದಾಗ, ಯಾವುದೋ ಒಂದು ತಕರಾರು ಇಲ್ಲವೆ ಆ ಸ್ವಾಸ್ತಿಯ ಹಕ್ಕಿನ ಅನುಭವದ ನ್ಯಾಯಿಕ ಪ್ರಶ್ನೆ ಬಂದಾಗ, ದೊರೆಗಳೇ ಅಂಥ ಸ್ವಾಸ್ತಿಗಳನ್ನು ಪುನರ್ನವೀಕರಣ ಮಾಡಿ ಆಜ್ಞೆಗಳನ್ನು ಹೊರಡಿಸುತ್ತಿದ್ದಂತೆ ಮತ್ತು ಆ ಹಕ್ಕನ್ನು ಸ್ಥಿರೀಕರಿಸಿ ಲಿಖಿತಪತ್ರ ನೀಡುತ್ತಿದ್ದಂತೆ ಕಾಣುತ್ತದೆ. ಅಂದರೆ ಒಂದು ಸ್ವಾಸ್ತಿಯ ಮೇಲೆ ಆಯಾ ವಾರಸುದಾರರಿಗೆ ಇರುತ್ತಿದ್ದ ಹಕ್ಕನ್ನು ಅಂದಿನ ನ್ಯಾಯವ್ಯವಸ್ಥೆ ಸಂರಕ್ಷಿಸುತ್ತಿದ್ದ ಕ್ರಮವನ್ನು ಅದು ತೋರಿಸುತ್ತದೆ. ಇದಕ್ಕೆ ಅಪರೂಪದ ನಿದರ್ಶನವೊಂದು ಇಲ್ಲಿದೆ:

ಚಿತ್ರದುರ್ಗದ ಸಂಪಿಗೆ ಸಿದ್ಧೇಶ್ವರ, ಹಿಡಿಂಬೇಶ್ವರ, ಏಕನಾಥಮ್ಮ, ಉಚ್ಚಂಗೆಮ್ಮ ದೇವರುಗಳಿಗೆ 'ಪಾದಪಾಲಿಸುತ್ತಿದ್ದ' ಮೇಲುದುರ್ಗದ ಹಿರೇಮಠದ ಓಂಕಾರಿದೇವರ

ಮೊಮ್ಮಗ ಪಟ್ಟದದೇವರಿಗೆ ರಾಜಾ ಮೆದಕೇರಿನಾಯಕರು ತಮ್ಮ ರಾಜ್ಯದ ಚಿತ್ರಹಳ್ಳಿ ಸೀಮೆಗೆ ಸೇರಿದ ಬಸಾಪುರದ ಗ್ರಾಮವನ್ನು, ಹಿಂದೆ ಬರಮಣ್ಣನಾಯಕರು ಉಚ್ಚಂಗಿದೇವರ ಪ್ರತಿಷ್ಠೆಮಾಡಿದ ಕಾಲದಲ್ಲಿ ಕೊಟ್ಟದ್ದನ್ನು, ಈಗ ದಾನಪೂರ್ವಕವಾಗಿ ಲಿಂಗಮುದ್ರೆ ಸ್ಥಾಪನೆ ಮಾಡಿಸಿ ಕೊಟ್ಟಿರುವುದಾಗಿಯೂ, ಇದನ್ನು ನಿಮ್ಮ ಪುತ್ರ ಪೌತ್ರ ಪಾರಂಪರ್ಯವಾಗಿ ಅನುಭವಿಸಿಕೊಂಡಿರಬಹುದಾಗಿಯೂ ಪುರವರ್ಗದಾನದ ಒಂದು ತಾಮ್ರಶಾಸನವನ್ನು ಬರೆಸಿಕೊಟ್ಟಿರುತ್ತಾರೆ. ಇದರ ಕಾಲ ಕ್ರಿ.ಶ.೧೭೫೭.[2]

ಈ ಮೇಲಿನ ವಿವರದಿಂದ, ಚಿತ್ರದುರ್ಗದ ದೊರೆ ಬರಮಣ್ಣನಾಯಕನು ಬಹು ಹಿಂದೆಯೇ, ಬಹುಶಃ ಹಿರೇಮಠದ ಓಂಕಾರಿದೇವರು ಇರುವಾಗಲೇ ಬಸಾಪುರ ಎಂಬ ಗ್ರಾಮವನ್ನು ಅವರಿಗೆ ದಾನವಾಗಿ ನೀಡಿದ್ದು, ಆಗ ಆ ದಾನಗ್ರಾಮಕ್ಕೆ ಲಿಂಗಮುದ್ರೆಯ ಕಲ್ಲುಗಳನ್ನು ಸ್ಥಾಪಿಸಲು ಮತ್ತು ಅವರಿಗೆ ಈ ಗ್ರಾಮ ಕೊಟ್ಟದ್ದರ ಹಕ್ಕಿನಪತ್ರ ಅಥವಾ ದಾನಶಾಸನ ನೀಡಲು, ಏನು ಕಾರಣಕ್ಕೋ ಆಗಲಿಲ್ಲವೆಂದೂ ಅಥವಾ ಹಾಗೆ ಕೊಟ್ಟದ್ದು ಕಳೆದುಹೋಗಿರಬೇಕೆಂದೂ ಕಾಣುತ್ತದೆ. ಹಿಂದಿನ ಕಾಲದ ಎಷ್ಟೋ ಹಕ್ಕುನೀಡಿಕೆಗಳು ಕೇವಲ ವಾಗ್ದಾನದಲ್ಲೇ ಅರ್ಥಾತ್ ನಾಲಗೆಯ ಮಾತಿನಲ್ಲೇ- ಕೊಟ್ಟಂತೆ, ತೆಗೆದುಕೊಂಡಂತೆ- ನಡೆದುಕೊಂಡು ಬರುತ್ತಿದ್ದವಷ್ಟೆ. ಹಾಗೇ ಎಷ್ಟೋಕಾಲ ಈ ದಾನವೂ ಬಹುಶಃ ನಡೆದುಕೊಂಡು ಬಂದಿರಬೇಕು. ಆ ಪ್ರಕಾರ, ಬರಮಣ್ಣನಾಯಕನಾದ ಮೇಲೆ ಅವನ ಮಗ ಹಿರೇಮೆದಕೇರಿನಾಯಕನ ಕಾಲದಲ್ಲಿ, ಅನಂತರ ಅವನ ಮಗ ೨ನೇ ಕಸ್ತೂರಿ ರಂಗಪ್ಪನಾಯಕನ ಕಾಲದಲ್ಲಿ, ಈ ಗ್ರಾಮದ ಅನುಭವ ಯಾವ ತಕರಾರೂ ಇಲ್ಲದೆ, ಓಂಕಾರಿದೇವರು ಮತ್ತು ಅವರ ಮಗನ ಹಕ್ಕು ಅಪ್ರಶ್ನಿತವಾಗಿ ಮುಂದುವರಿದುಕೊಂಡು ಬಂದು, ಕೊನೆಯ ಮೆದಕೇರಿನಾಯಕನ ಕಾಲದಲ್ಲಿ ಈ ಬಗ್ಗೆ ಯಾವುದೋ ಒಂದು ವಿವಾದ ಪ್ರಾರಂಭವಾಗಿರಬೇಕು. ಬಹುಶಃ ಓಂಕಾರಿದೇವರ ನೇರ ಸಂತತಿಯವರಲ್ಲದೆ, ಅವರ ಸೋದರ ಅಥವಾ ದಾಯಾದಿ ಸಂತತಿಯವರೋ ಅಥವಾ ಅವರ ಮೊಮ್ಮಗ ಪಟ್ಟದದೇವರ ದಾಯಾದಿಗಳೋ ಇದರಲ್ಲಿ ತಮ್ಮ ಹಕ್ಕೂ ಇದೆ ಎಂದು ಸಾಧಿಸಲು ತೊಡಗಿದ್ದಿರಬಹುದು. ಇಲ್ಲದಿದ್ದರೆ ರಾಜಾ ಮೆದಕೇರಿನಾಯಕನು ಹಿಂದೆಯೇ ಆದ ದಾನದ ವಿವರ ನಮೂದಿಸಿ ಈ ದಾನಶಾಸನವನ್ನು ಬರೆಸಿಕೊಡಲು ಮತ್ತು ಈ ಗ್ರಾಮ ಪಟ್ಟದದೇವರ ವಂಶಕ್ಕೆ ಸೇರಿದ್ದು ಎಂದು ಅದರಲ್ಲಿ ತಿಳಿಸಲು, ಈ ಮೇಲೆ ಊಹಿಸಿರುವುದನ್ನು ಬಿಟ್ಟು ಬೇರೆ ಕಾರಣವೇನೂ ಇರುವಂತೆ ತೋರುವುದಿಲ್ಲ.

### ಪೂಜೆಕಾಣಿಕೆ ಹಕ್ಕಿನ ಇತ್ಯರ್ಥ

ಚಿತ್ರದುರ್ಗದಲ್ಲಿ ಪಾಳೆಯಗಾರರ ಆಳ್ವಿಕೆ ಕ್ರಿ.ಶ.೧೭೭೯ರಲ್ಲಿ ಕೊನೆಗೊಂಡ ಸ್ವಲ್ಪ ಕಾಲಾನಂತರದಲ್ಲಿ, ಹಾಕಿಸಲಾದ ಒಂದು ತಾಮ್ರಶಾಸನ[3] ಒಂದು ಆಶ್ರಮದ ದೇವರುಗಳಿಗೆ ಮಾಡಲಾದ ದತ್ತಿವ್ಯವಸ್ಥೆಯನ್ನು ಹೇಳುವುದರೊಂದಿಗೆ ಅವುಗಳ ಉಸ್ತುವಾರಿಗೆ ಸಂಬಂಧಿಸಿದ

ವ್ಯಾಜ್ಯವೊಂದನ್ನು ಬಗೆಹರಿಸಿ ಕಟ್ಟುಪಾಡು ಮಾಡಿದ್ದನ್ನು ಸೂಚ್ಯವಾಗಿ ಹೇಳುವಂತಿದೆ. ಇದರ ಕಾಲ ಕ್ರಿ.ಶ.೧೭೮೧ ಎಂದು ಅದನ್ನು ಪ್ರಕಟಿಸಿದ ಬಿ.ಎಲ್.ರೈಸ್ ಅವರು ಸಂದೇಹಾತ್ಮಕವಾಗಿ ಸೂಚಿಸಿದ್ದಾರೆ. ಆದರೆ ನಾನು ಇದನ್ನು ಪರಿಶೀಲಿಸಿದಾಗ ಇದು ಕ್ರಿ.ಶ.೧೭೮೨ಕ್ಕೆ ಸೇರಿದ್ದೆಂಬಂತೆ ಕಂಡುಬಂದಿದೆ. ಮೊದಲೇ ಹೇಳಿದ ಹಾಗೆ, ಇದು ಚಿತ್ರದುರ್ಗ ಪಾಳೆಯಗಾರರ ಕಾಲದ್ದಲ್ಲವಾದರೂ ಅವರ ಆಳ್ವಿಕೆ (ಕ್ರಿ.ಶ.೧೭೭೯ಕ್ಕೆ) ಕೊನೆಗೊಂಡ ಅನಂತರದ ಹತ್ತಿರದ ಕಾಲದ್ದಾದ್ದರಿಂದ, ಅವರ ಕಾಲದ ನ್ಯಾಯಪದ್ಧತಿಯ ಮುಂದುವರಿಕೆ ಮತ್ತು ಪ್ರಭಾವ ಆಗಲೂ ಇದ್ದದ್ದನ್ನು ಇದು ಸೂಚಿಸುವಂತಿದೆ.

ಕನ್ನಡಲಿಪಿ ಹಾಗೂ ತೆಲುಗುಭಾಷೆಯಲ್ಲಿರುವ ಈ ತಾಮ್ರಶಾಸನ ಚಿತ್ರಕಲ್ಲುದುರ್ಗದ (೧೦೨ ಗೋತ್ರದ) ಹಲವಾರು ಶೆಟ್ಟರುಗಳು ಶಿವರಾತ್ರಿಯ ದಿನದಂದು, ಚಿಂತಾಮಣಿ ಆಶ್ರಮದ ಯೋಗನಂಜುಂಡೇಶ್ವರ ಮುಖ್ಯಪ್ರಾಣದೇವರುಗಳ ಸೇವೆಗೆ ದತ್ತಿವ್ಯವಸ್ಥೆ ಮಾಡಿದ್ದನ್ನು ಹೇಳುತ್ತದೆ. ಈ ಯೋಗನಂಜುಂಡೇಶ್ವರ ಮತ್ತು ಮುಖ್ಯಪ್ರಾಣದೇವರು ಮತ್ತು ಅವುಗಳಿದ್ದ ಅಥವಾ ಅವುಗಳಿಗೆ ಸಂಬಂಧಿಸಿದ ಚಿಂತಾಮಣಿ ಆಶ್ರಮ ಯಾವುವು ಎಂದು ಈಗ ಸ್ಪಷ್ಟವಿಲ್ಲ. ಈಗ ಪುರುಷೋತ್ತಮಗಲ್ಲಿ(ಅದರ ಸರಿಯಾದ ಹೆಸರು ಪುರುಷೋತ್ತಮ ಪಂತರ ಗಲ್ಲಿ)ಯಲ್ಲಿರುವ ಸುಬ್ರಹ್ಮಣ್ಯೇಶ್ವರ ದೇವಾಲಯದ ಲಿಂಗ ಮತ್ತು ಈ ದೇವಾಲಯದ ಎದುರಿಗಿರುವ ಆಂಜನೇಯ, ಈ ಶಾಸನ ಹೇಳುವ ಯೋಗ ನಂಜುಂಡೇಶ್ವರ ಮತ್ತು ಮುಖ್ಯಪ್ರಾಣದೇವರುಗಳಿರಬಹುದೇ ಎಂದು ಸಂದೇಹ. ಅದೇನೆ ಇದ್ದರೂ ಈ ದೇವರುಗಳಿಗಾಗಿ ನಿಗದಿಮಾಡಿದ ದತ್ತಿ ಇತ್ಯಾದಿ ವ್ಯವಸ್ಥೆ ಹೀಗಿದೆ : ವೈಶ್ಯರು ವರ್ಷಾಶನವಾಗಿ ಮನೆಗೆ ಒಂದು ಹಣ, ಮದುವೆಗೆ ಒಂದು ಹಣ, ಶೋಭನಕ್ಕೆ ಎರಡು ಹಣ, ನಾಮಕರಣಕ್ಕೆ ಒಂದು ಹಣ, ಪ್ರತಿ ಸೋಮವಾರ ಒಂದು ಪಕ್ಕಾ ಸೇರು ಅಕ್ಕಿ ಒಂದು ಕಲಶ, ಜನಾರ್ಧನದೇವರಿಗೆ ಎರಡು ಎಡೆ, ಪ್ರತಿದಿನ ಮಧ್ಯಾಹ್ನ ದಾಸೋಹ - ಹೀಗೆ ತಪ್ಪದೆ ನಡೆದುಕೊಂಡುಬರಬೇಕು. (ಇಲ್ಲಿ ಹೇಳಿದ ಜನಾರ್ಧನದೇವರು, ಈಗ ಚಿಕ್ಕಪೇಟೆ ಯಲ್ಲಿರುವ ವೈಶ್ಯರ ಆರಾಧ್ಯದೇವತೆ ಕನ್ನಿಕಾಪರಮೇಶ್ವರಿಯ ದೇವಾಲಯದ ಒಳಗಿರುವ ಅದೇ ಹೆಸರಿನ ದೇವರು ಇದ್ದಿರಬಹುದೆ?).

ಇದರ ಜೊತೆಗೆ ಕಟ್ಟುಪಾಡಾದ ಮತ್ತೊಂದು ಅಂಶವೆಂದರೆ, ಯೋಗನಂಜುಂಡೇಶ್ವರ ಸ್ವಾಮಿಯ ಪೂಜೆ ತಾವರೆಕೆರೆ ಪುಟ್ಟಯ್ಯನವರದು; ಮುಖ್ಯಪ್ರಾಣದೇವರ ಪೂಜೆ ನಂದವಾರಂ ನಾರಾಯಣಾಚಾರ್ಯರದು. ಇವರಿಬ್ಬರೂ ದೇವರಿಗೆ ಕಾಣಿಕೆಯಾಗಿ ಬಂದದ್ದನ್ನು ಸಮಭಾಗ ಮಾಡಿ ತೆಗೆದುಕೊಂಡು ದೇವರ ಉಸ್ತುವಾರಿ ನೋಡಿಕೊಳ್ಳತಕ್ಕದ್ದು; ಆದರೆ ಅಕ್ಕಿಯ ಕಲಶ ಮಾತ್ರ ತಾವರೆಕೆರೆ ಪುಟ್ಟಯ್ಯನವರೊಬ್ಬರಿಗೇ ಸೇರಿದ್ದು; ಅದರಲ್ಲಿ ನಾರಾಯಣಾಚಾರ್ಯರಿಗೇನೂ 'ಕೆಲಸವಿಲ್ಲ' (ಅಂದರೆ ಸೇರತಕ್ಕದ್ದು ಏನೂ ಇಲ್ಲ). ಈ ಷರತ್ತುಗಳೊಂದಿಗೆ ಮತ್ತು ಒಂದೆರಡು ಶಾಪಾಶಯಗಳೊಂದಿಗೆ ಶಾಸನ ಮುಕ್ತಾಯ ಗೊಂಡಿದೆ. ಈ ಷರತ್ತುಗಳನ್ನು ಅಥವಾ ಕಟ್ಟುಪಾಡುಗಳನ್ನು ನೋಡಿದರೆ, ಪುಟ್ಟಯ್ಯನವರಿಗೂ

ಮತ್ತು ನಾರಾಯಣಾಚಾರ್ಯರಿಗೂ ದೇವರುಗಳ ಪೂಜಾ ಹಕ್ಕಿನ ಬಗ್ಗೆ ಮತ್ತು ಕಾಣಿಕೆಯಾಗಿ ಬರುತ್ತಿದ್ದ ಅಕ್ಕಿಯ ಹಕ್ಕಿನ ಬಗ್ಗೆ ಹಾಗೂ ಇತರ ಕಾಣಿಕೆಗಳ ಬಗ್ಗೆ ವ್ಯಾಜ್ಯ ಉದ್ಭವಿಸಿ, ಅದರಿಂದಾಗಿಯೆ, ಸಮಸ್ತ ವೈಶ್ಯಕುಲದವರು (೧೦೨ ಗೋತ್ರದವರೂ) ಸೇರಿ ಚರ್ಚಿಸಿ ನಿಯಮಗಳನ್ನು ಮಾಡಿರುವಂತೆ ಭಾಸವಾಗುತ್ತದೆ. ವೈಶ್ಯರಿಗೆ ಸೇರಿದ ದೇವಸ್ಥಾನದ ವ್ಯಾಜ್ಯವಾದ್ದರಿಂದ ಸಮಸ್ತ ವೈಶ್ಯಮುಖಂಡರೂ ಅಥವಾ ಮಂಡಲಿಯವರೂ ಸೇರಿ, ಆ ಬಗ್ಗೆ ಉಭಯರ ಹೇಳಿಕೆಗಳನ್ನೂ ಪಡೆದು, ಹಕ್ಕಿನ ಪಾಲನ್ನು ನಿರ್ದಿಷ್ಟಗೊಳಿಸಿದ ಷರತ್ತುಗಳೊಂದಿಗೆ ವ್ಯಾಜ್ಯತೀರ್ಮಾನ ಮಾಡಿರುವಂತೆ ಶಾಸನ ಸೂಚಿಸುವಂತಿದೆ.

ಬ್ರಾಹ್ಮಣರಿಗೆ ಸಂಬಂಧಿಸಿದ ವ್ಯಾಜ್ಯಗಳನ್ನು ಬ್ರಾಹ್ಮಣ ಮಂಡಲಿಯವರು, ಅವರಿಂದಾಗದಿದ್ದರೆ ಬ್ರಾಹ್ಮಣ ಮಠಾಧೀಶರು ತೀರ್ಮಾನ ಮಾಡುತ್ತಿದ್ದಂತೆ, ವೈಶ್ಯ ಸಮುದಾಯದವರು ಕೂಡಾ ಅವರಿಗೆ ಸಂಬಂಧಿಸಿದ ವ್ಯಾಜ್ಯಗಳನ್ನು ಅವರೇ ತೀರ್ಮಾನ ಮಾಡುತ್ತಿದ್ದರೆಂದು ಭಾವಿಸಲು ಈ ತಾಮ್ರಶಾಸನ ಸೂಚಿಸುತ್ತದೆ ಎನ್ನಬಹುದು.

ಈ ಶಾಸನ ಮತ್ತು ಹಿಂದಿನ ಶಾಸನಗಳಲ್ಲಿ ಹಕ್ಕಿನವ್ಯಾಜ್ಯ ಉದ್ಭವಿಸಿಯೇ ಆ ಕಟ್ಟುಪಾಡುಗಳೆಲ್ಲ ಆದಂತೆ ನೇರವಾದ ಸೂಚನೆ ಇರುವುದಿಲ್ಲವಾದರೂ, ಅಂಥ ಸಂದರ್ಭದ ಹಿನ್ನೆಲೆ ಇಲ್ಲದೆ ಆ ಎಲ್ಲ ಕಟ್ಟುಪಾಡುಗಳನ್ನು ಮಾಡಿರಲಾರರೆಂದೇ ಮನಸ್ಸಿಗೆ ಬರುತ್ತದೆ. ಬಹುಶಃ ವ್ಯಾಜ್ಯ ನಮೂದಾದರೆ ಆ ವ್ಯಾಜ್ಯದಾರರ ಮರ್ಯಾದೆಗೆ ಕುಂದುಂಟಾಗಬಹುದೆಂದು, ರಿಯಾಯಿತಿ ತೋರಿ ಆ ಅಂಶವನ್ನು ಸೂಚ್ಯಗೊಳಿಸಿರಬೇಕು ಎನ್ನಿಸುತ್ತದೆ.

**ಬಾಣರಾವಿ ಪಾಳೆಯಗಾರರ ಕಾಲದಲ್ಲಿ ನಿರಪರಾಧಿಗಳಿಗೆ ವಿಧಿಸಿದ್ದ ದಂಡ ಪರಿಹಾರ**

ಪಾಳೆಯಗಾರರ ನ್ಯಾಯಪದ್ಧತಿಯ ಮೇಲೆ ಬೆಳಕು ಚೆಲ್ಲುವ ಒಂದು ಸ್ವಾರಸ್ಯಕರ ಪ್ರಕರಣವನ್ನು ಬಾಣರಾವಿ ಪಾಳೆಯಗಾರರ ಕ್ರಿ.ಶ.೧೬೬೫ರ ಒಂದು ತಾಮ್ರಶಾಸನ ದಾಖಲಿಸಿದೆ. ಸದ್ಯಕ್ಕೆ ಈ ಪಾಳೆಯಗಾರರ ವಿವರ ಹೆಚ್ಚು ತಿಳಿಯದು. ಶ್ರೀ ಮನ್ಮಹಾನಾಯಕಾಚಾರ್ಯ, ಇಮ್ಮಡಿ ಗಡಿಯಂಕ ಭೀಮ ಮುಂತಾದ ಬಿರುದನ್ನು ಹೊಂದಿದ್ದ, ಶೊಂಡೂರು (ಈಗಿನ ಸೊಂಡೂರು ಅಥವಾ ಸಂಡೂರು), ಗುಡೇಕೋಟೆ, ಬಾಣರಾವಿ (ಈಗಿನ ಬಾಂಡ್ರಾವಿ) ಇವುಗಳನ್ನು ಆಳುತ್ತಿದ್ದ ಬೋದಿನಾಯಕ ಮತ್ತು ಅವನ ಪತ್ನಿ ಬೊಮ್ಮವ್ವನಾಗತಿ ಇವರು, ಹರಗುರು ಭಕ್ತಿ ಆಚಾರ ಕ್ರಿಯಾಧರ್ಮಸ್ವರೂಪಿಗಳಾದ 'ನಾಲ್ಕುಮಠದ ಹಿರಿಯರು', ಪೂಜಾರಿ, ಪಟ್ಟಣಶೆಟ್ಟಿ, ಪಾರುಪತ್ಯಗಾರ, ಸ್ಥಳದ ಗೌಡ, ಶಾನುಭೋಗ ಮುಂತಾದ ೧೨ ಮಂದಿ ಆಯಗಾರರು; ನಾಯಕರು, ದಳವಾಯಿಗಳು, ಗುರಿಕಾರರು, ಎಕ್ಕಟಿಗರು ಸ್ಥಳ-ಪರಸ್ಥಳದ ಶೆಟ್ಟಿ, ಸವುದ್ರಿ(<ಚೌಧರಿ?) ಮುಂತಾದ ಸಮಸ್ತ ದೈವ ಬಾರಬಲ್ಲಿದರು (ಬಾರಾಬಲೂತಿ ಅವರು) ಇವರ ಸಮಕ್ಷಮದಲ್ಲಿ, ಅಕ್ಕಸಾಲಿಕೆ ಸ್ವಾಸ್ತಿವಾನನೂ ಪೊತ್ತದಾರನೂ ಆದ ಸತ್ಯಪ್ಪ ಎಂಬುವನು, ಕೆಂಬಾವಿ ಈರಪ್ಪ ಅಪ್ಪಣ್ಣ ಎಂಬುವರಿಗೆ ಬಾಣರಾವಿ ಸೀಮೆಯಲ್ಲಿ ತನಗೆ ಸೇರಿದ ಮೂವತ್ತುಮೂರು ಹಳ್ಳಿಯ ಅಕ್ಕಸಾಲಿಕೆ ಪೊತ್ತದಾರಿಕೆ ಸ್ವಾಸ್ತಿಯನ್ನು ಕೊಟ್ಟದ್ದವನ್ನು ಈ ಶಾಸನ ಹೇಳುತ್ತದೆ.

(ಈ ಶಾಸನವನ್ನು ಬಿ.ಎಲ್.ರೈಸ್ ಅವರು ಮೊಳಕಾಲ್ಮೂರು ತಾಲ್ಲೂಕಿನ ೨೫ನೆಯ ಕ್ರಮಸಂಖ್ಯೆಯ ಶಾಸನವಾಗಿ ಪ್ರಕಟಿಸಿದ್ದಾರೆ). ಈ ಶಾಸನ ಬರೆಸಿಕೊಟ್ಟದ್ದರ ನ್ಯಾಯಿಕ ಹಿನ್ನೆಲೆ ಈ ಮುಂದಿನಂತಿದೆ:

ಸತ್ಯಪ್ಪನು ದೊರೆಗಳ ರಸ್ತಿನ ಹಣವನ್ನು ಎತ್ತಿ ವಿಟ್ಲಾಪುರ ಎಂಬ ಊರಿಗೆ ಬಂದಾಗ, ಅಲ್ಲಿ ಅವನದೇ ಆದ ಯಾವ ಮನೆಯೂ ಇರಲಿಲ್ಲವಾದ್ದರಿಂದ, ಕೆಂಬಾವಿ ಎಂಬ (ಮನೆತನದ)ವರ ಮನೆಗೆ ಬಂದು, ರಸ್ತಿನ ಪೊತ್ತದ ಚೀಲವನ್ನು ಗಂಟುಕಟ್ಟಿ ಆ ಮನೆಯವರಲ್ಲಿ ರಕ್ಷಣೆಗೆ ಇಟ್ಟು ಅಲ್ಲೇ ತಂಗಿದನು. ರಾತ್ರಿ ಆ ಮನೆಗೆ ಕಳ್ಳರು 'ಇಳೇಬಿದ್ದು' ಆ ಚೀಲವನ್ನು ಕದ್ದುಕೊಂಡು ಹೋದರು. ಆಗ ಸತ್ಯಪ್ಪನು ರಾಜರಲ್ಲಿ ಹೋಗಿ ಈ ಸಂಗತಿಯನ್ನು ಅವರ ಗಮನಕ್ಕೆ ತಂದು, "ಕೆಂಬಾವಿಯವರ ಮನೆಯಲ್ಲಿ ತಂಗಿದಾಗ ಅವರ ಮನೆಯಲ್ಲಿ ಹಣವನ್ನು ಇಟ್ಟಿದ್ದೆ. ಅವರನ್ನು ಕೇಳಿದರೆ 'ಅದು ಕಳ್ಳತನದಲ್ಲಿ ಹೋಯಿತು' ಎಂದು ಹೇಳುತ್ತಿದ್ದಾರೆ. ಅವರನ್ನು ಕರೆಸಿ ತಾವೇ ವಿಚಾರಿಸಬೇಕು" ಎಂದು ಕೇಳಿಕೊಂಡನು.

ಆಗ ದೊರೆಗಳು ತಮ್ಮ ಹುಜೂರಿಗೆ ಅವರ ಸಂಬಂಧಿಕರು, ಪಾರುಪತ್ಯಗಾರರು, ಕಸಬೆಯ ಗೌಡ, ಗ್ರಾಮಾನುಗ್ರಾಮಗಳ ಗೌಡರು, ಶಾನುಭೋಗರು, ನಾಡಿಗರು, ೧೨ ಮಂದಿ ಆಯಗಾರರು, ನಾಡ ಕುಲಕರ್ಣಿ, ನಾಯಕರು, ದಳವಾಯಿ, ಪಟ್ಟಣಶೆಟ್ಟಿ, ಸವುದ್ರಿ, ಮಠಮಹತ್ತು ಮುಂತಾದ ಸಮಸ್ತರು ದೈವದವರು ಮುಂತಾದವರನ್ನು ಕರೆಸಿ, ಅವರ ಸಮಕ್ಷಮದಲ್ಲಿ, ಅಕ್ಕಸಾಲಿಗರ ಆ ಕೆಂಬಾವಿ ಮನೆತನದ ಈರಪ್ಪ ಅಪ್ಪಣ್ಣನವರನ್ನು ಹಿಡಿತರಿಸಿ ವಿಚಾರಿಸಲಾಗಿ, ಅವರು "ಅರಮನೆಯ ರಸ್ತಿನ ಹಣವನ್ನು ಕಳ್ಳರು ಇಳೇಬಿದ್ದು ಕದ್ದುಕೊಂಡು ಹೋದರು" ಎಂದು ಹೇಳಿದರು. ಆ ಮಾತಿಗೆ ದೊರೆಗಳು ಸಿಟ್ಟಾಗಿ "ನಿಮ್ಮ ಮನೆಯೊಳಗೆ ಇಟ್ಟ ದಿವಾಣದ ರಸ್ತು ಹೋದದ್ದು ತಪ್ಪು. ಅದಕ್ಕೆ ನೀವು ದಂಡ ತೆರಲೇಬೇಕು" ಎಂದು ಅವರಿಂದ ೧೨೦ ವರಹ ದಂಡ ತೆಗೆದುಕೊಂಡರು.

ಇದಾದ ಮೇಲೆ ದೊರೆಗಳು ನಡೆದದ್ದೆಲ್ಲವನ್ನೂ ತಮ್ಮ 'ಚಿತ್ತಾಂತಃಕರಣಕ್ಕೆ ತಂದು ಕೊಂಡು', ಸಂಬಂಧಿಕರು, ಪಾರುಪತ್ಯಗಾರರು, ಗೌಡರು, ಶಾನುಭೋಗರು ಮುಂತಾದ ಸಮಸ್ತರನ್ನೂ ಕೂಡಿಸಿ "ನಾವು ಎರಡು ಕಣ್ಣು ಕಾಣದೆ ಬಡವರಿಂದ ದಂಡ ತೆಗೆದು ಕೊಂಡು ಬಿಟ್ಟೆವು" ಎಂದು ಅವರಿಗೆ ಅನ್ನಿಸಿದ್ದನ್ನು ತಿಳಿಸಿ, ಒಳಸೂಕ್ಷ್ಮದಲ್ಲಿ ಊರ ತಳವಾರ ಸೋಮಿನಾಯಕ, ನಾಡತಳವಾರ ಜಾಬಿನಾಯಕ (ಇವರಿಬ್ಬರೂ ದೇಶಕ್ಕೇ ಕಾವಲಿನವರಾದ ಕಾರಣ) ಇವರನ್ನು ಕರೆಸಿಕೊಂಡು, (ಈ ಬಗ್ಗೆ ತಿಳಿಸಿ) "ನೀವು ಈ ಕಳವಿನ ಬಗ್ಗೆ ಶೋಧಿಸಿ, ಹೇಗಾದರೂ ಮಾಡಿ ಕಳ್ಳರನ್ನು ಹಿಡಿಯಬೇಕು" ಎಂದು ತಕಿದಿ (ತಾಕೀತು, ಅಪ್ಪಣೆ) ಮಾಡಿದರು. ಇದಾದ ಆರು ತಿಂಗಳಿಗೆ ಆ ಕಳ್ಳತನ ಸಮಗ್ರವಾಗಿ ಪತ್ತೆ ಆಯಿತು. ಆ ಇಬ್ಬರು ತಳವಾರರೂ ಆ ಕಳ್ಳತನವನ್ನು ಭೇದಿಸಿ ನಿಜಾಂಶ ನಿಷ್ಪತ್ತಿಮಾಡಿ(ಹೊರಪಡಿಸಿ)ದಾಗ, ಅದರ ಆರೋಪವನ್ನು ಸತ್ಯಪ್ಪನ ಮೇಲೆ ಹೊರಿಸಿ

ಅವನನ್ನು ದೊರೆಗಳ ಮುಂದೆ ತಂದು ನಿಲ್ಲಿಸಿದರು. ಅವರು ಅವನನ್ನು ಪ್ರಶ್ನಿಸಿದಾಗ, ಸತ್ಯಾಂಶ ಎಲ್ಲರಿಗೂ ಪ್ರಕಟವಾಯಿತು.

ರಾಜೇಶ್ರೀ ಧಣಿ(ದೊರೆ)ಗಳಿಗೆ ಸಲ್ಲಬೇಕಾಗಿದ್ದ ರಸ್ತಿನ ಹಣವನ್ನು ಕದ್ದುಕೊಂಡು ಹೋದವನು ಬೇರಾರೂ ಆಗಿರದೇ ಸತ್ಯಪ್ಪನ ಮಗನೇ ಆಗಿದ್ದನು. ಅವನು ತನ್ನ ಸೂಳೆಗೆ ಒಡವೆ ಮಾಡಿಸಿಕೊಟ್ಟ ಐಬು ಸಿಕ್ಕಿ, ಈ ಕಳವು ಪತ್ತೆಯಾಗಿತ್ತು. ಹೀಗಾಗಿ ಕಳ್ಳತನ ಮಾಡಿದವನ ತಂದೆಯಾದ ಸತ್ಯಪ್ಪನ ಮೇಲೆ ಆರೋಪ ಬಂದಿತು. 'ನಾವು ಧರ್ಮವನ್ನು ಕಾಣದೆ ನಿರ್ದೋಷಿಗಳಾದ ಬಡವರಿಂದ ದಂಡ ತೆಗೆದುಕೊಳ್ಳುವಂತಾಯಿತು' ಎಂದೂ 'ಆ ರೊಕ್ಕವನ್ನು ಸತ್ಯಪ್ಪನಿಂದ ವಸೂಲು ಮಾಡಿ' ಎಂದೂ ಗೌಡರು ಶಾನುಭೋಗರು, ೩೩ ಹಳ್ಳಿ ಸ್ವಾಸ್ತಿವಾನರು, ಸಮಸ್ತ ದೈವದವರು 'ಧರ್ಮ' ಹೇಳಿದರು. ಆಗ ದೊರೆಗಳು ಸತ್ಯಪ್ಪನನ್ನು ಈ ಬಗ್ಗೆ ಕೇಳಿದಾಗ, ಅವನು "ಸ್ವಾಮಿ (ಈಗ ಇರುವ ಅಕ್ಕಸಾಲಿಕೆ ಪೊತ್ತದಾರಿಕೆ ಬಿಟ್ಟರೆ ಬೇರೆ) ನನಗೇನೂ ಆಧಾರವಿಲ್ಲ. ಬಾಣರಾವಿ ಸೀಮೆಯ ೩೩ ಹಳ್ಳಿಗಳ ಅಕ್ಕಸಾಲಿಕೆ ಪೊತ್ತದಾರಿಕೆಯ ಸ್ವಾಸ್ತಿಯೊಳಗೆ ಅರ್ಧಪಾಲು ಸ್ವಾಸ್ತಿಯನ್ನು ಕೊಡುತ್ತೇನೆ" ಎಂದನು. ಅದರಂತೆ ದೊರೆಗಳು ಗೌಡರು ಶಾನಭೋಗರು, ೧೨ ಮಂದಿ ಆಯಗಾರರು, ಸಮಸ್ತ ದೈವದವರು ಸಮ್ಮತಿಸಲಾಗಿ ಸತ್ಯಪ್ಪನು (ತಾನು ಹೇಳಿದಂತೆ), ಕೆಂಬಾವಿ ಈರಣ್ಣ ಅಪ್ಪಣ್ಣನವರಿಗೆ ಅಕ್ಕಸಾಲಿಕೆ ಪೊತ್ತದಾರಿಕೆಯ ಸ್ವಾಸ್ತಿಯನ್ನು ಕೊಟ್ಟನು. ಬಾಣರಾವಿ ಕಸಬೆಯಲ್ಲಿರುವ ಗ್ರಾಮಾನುಗ್ರಾಮಗಳ ಆಯ, ಬೆಳಸಿ, ಮೆದೆ, ಹೊರೆ, ಸೊಪ್ಪೆ, ಅಳತೆ ಕಾಳು, ಹಳ್ಳಿಗಳೊಳಗೆ ಇದ್ದಂಥ ಮಾನ್ಯಗಳು, ಆವಿನಮಡುವಿನ ಕೆರೆಯ ಹಿಂದಿನ ಮಾನ್ಯದ ಗದ್ದೆ, ಇಷ್ಟು ಸ್ವಾಸ್ತಿಯನ್ನೂ 'ಸರ್ವದೈವ ಸನ್ಮತದಿಂದ' ಸತ್ಯಪ್ಪನು ನೀಡಿದನು. ಈ ಹಕ್ಕನ್ನು ಆಚಂದ್ರಾರ್ಕವಾಗಿ ಅನುಭವಿಸಿಕೊಂಡು ಅಣ್ಣತಮ್ಮಗಳ ಹಾಗೆ ಊಟಮಾಡಿಕೊಂಡು ಹೋಗತಕ್ಕದ್ದು; ಅವರ ವಂಶ ನಿಂತರೆ ಇವರು, ಇವರ ವಂಶ ನಿಂತರೆ ಅವರು ಊಟಮಾಡಿಕೊಂಡು ಹೋಗತಕ್ಕದ್ದು- ಹೀಗೆಂದು (ಸತ್ಯಪ್ಪನಿಂದ) ಪತ್ರವನ್ನು ಬರೆಸಿಕೊಡಲಾಯಿತು. ಸತ್ಯಪ್ಪ ಈ ಪತ್ರ ಹಣ ಇತ್ಯಾದಿ ಕೊಟ್ಟದ್ದು ಕೆಂಬಾವಿ ಈರಪ್ಪ ಅಪ್ಪಣ್ಣನವರಿಗೆ ಮಾತ್ರವೇ ಹೊರತು ಅವರ ವಂಶದ ಅಣ್ಣತಮ್ಮರುಗಳಿಗೆ ಅಲ್ಲ. ಅಂದರೆ ಆ ಅಣ್ಣತಮ್ಮಂದಿರಿಗೆ ಸ್ವಾಸ್ತಿ ಮತ್ತಿತರ ಯಾವುದೇ ಹಕ್ಕು ಇರುವುದಿಲ್ಲ.

ಇದಕ್ಕೆ ಸಾಕ್ಷಿಗಳಾಗಿದ್ದವರು : ಬಾಣರಾವಿ ಕಸಬೆಯ ಪಾರುಪತ್ಯಗಾರ, ಶಾನುಭೋಗ, ಗೌಡ ಮುಂತಾದವರು ಮತ್ತು ಕಸಬೆ ೩೩ ಹಳ್ಳಿಯ ಬಡಗಿ, ಕಮ್ಮಾರ, ನಾಡತಳವಾರ, ಜಾಬಿನಾಯಕ, ಊರ ತಳವಾರ ಸೋಮಿನಾಯಕ; ಮಲ್ಲಪುರ, ತಿಮ್ಮಲಪುರ, ರಾಜಪುರ, ಆವಿನಮಡು, ವಿಟಲಾಪುರ, ಹಿರೇ ಆರೆ, ತುಮ್ಮಟ್ಟೆ, ಯರಚಿನ್ನಯ್ಯನಹಳ್ಳಿ, ಬಸವನಟ್ಟಿ, ಮುದುಕುಲಪೆಂಟೆ, ಬೋಯಗೋಟೆದುರ್ಗ, ಮೊತಲಕುಂಟೆ, ಮೇಗಳಕಣಿಮೆ, ಕೆಳಗಳ ಕಣಿಮೆ, ಬೊಮ್ಮಲಗುಂಡು, ಲಿಂಗಯ್ಯನಹಳ್ಳಿ, ತೊನಸಿಗೆ, ಕಮ್ಮತಹರವು, ಜಲಿಪೇಟೆ, ದೇವರಹಳ್ಳಿ, ದೇವರಮನೆ ಇತ್ಯಾದಿ ಇನ್ನೂ ಕೆಲವು ಊರುಗಳ ಊರತಳವಾರರು, ನಾಡ

ತಳವಾರರು, ಗಾಣಿಗ, ಬಾರಿಕ, ಕೆಲಸಿ, ಕುಂಬಾರ, ಮಟಪತಿ, ಅಗಸ, ಬಡಗಿ, ಕಮ್ಮಾರ, ಇವರಲ್ಲದೆ ರಾಜರಾಜೇಶ್ರೀ ಮರುಳೆ ಅರಸುಗಳು ಇವರೆಲ್ಲರೂ ದಯಪಾಲಿಸಿದಂತಹ ಸ್ವಾಸ್ತಿ ಇದು. ಇದನ್ನು ಆಚಂದ್ರಾರ್ಕವಾಗಿ ಅನುಭವಿಸಿಕೊಂಡು ಬರುವುದು. ಇದು ಕಸಬೆ ಬಾಣರಾವಿ ಸೀಮೆಯ ೩೩ ಹಳ್ಳಿಯ ಗೌಡ ಶಾನುಭೋಗ ಆದಿ ೧೨ ಮಂದಿ ಆಯಗಾರರು (ಬಾರಾಬಲ್ಲಿದರು), ಸಮಸ್ತದೈವದವರು, ಸರ್ವರ ಸನ್ಮತದಿಂದ ಬಾಣರಾವಿ ಸೀಮೆ ಶಾನುಭೋಗ ಲಕ್ಷ್ಮೀಪತಿಯ ಸ್ವಹಸ್ತದ ಬರಹ. ಇದಕ್ಕೆ ಸತ್ಯಪ್ಪನ ಒಪ್ಪಿತ, ಚಲವಾದಿ ಗಿರಿಯಪ್ಪ, ಮಾದಿಗರ ಸಾಕ್ಷಿಗಳು -ಹೀಗೆ ಈ ಶಾಸನ ಮುಕ್ತಾಯವಾಗುತ್ತದೆ.

ಈ ಮೇಲಿನ ಶಾಸನದ ಘಟನಾವಳಿ ಚಿಕ್ಕ ಚಿಕ್ಕ ಪಾಳೆಯಪಟ್ಟುಗಳ ದೊರೆಗಳು ಸಹ, ನ್ಯಾಯನೀತಿಯ ಬಗ್ಗೆ ಎಷ್ಟು ಗಂಭೀರವಾಗಿ ಮತ್ತು ಮಾನವೀಯವಾಗಿ ಕ್ರಮ ಕೈಕೊಳ್ಳುತ್ತಿದ್ದರು, ಅವರು ನ್ಯಾಯತೀರ್ಮಾನ ಮಾಡುವಾಗ ಪ್ರಜಾಪ್ರಮುಖರೆಲ್ಲರ ಅಭಿಪ್ರಾಯಕ್ಕೆ ಎಂಥ ಸ್ಥಾನ ಕೊಟ್ಟಿದ್ದರು, ಆರೋಪಿತರು ಸಹ ತಮಗೆ ವಿಧಿಸುವ ಶಿಕ್ಷೆ ಅಥವಾ ತಮ್ಮ ಮೇಲೆ ತೆಗೆದುಕೊಳ್ಳಬಹುದಾದ ಕ್ರಮದ ಬಗ್ಗೆ ತಾವೇ ಸ್ವಇಚ್ಛೆಯಿಂದ ಹೇಗೆ ತಮ್ಮ ಅಭಿಪ್ರಾಯ ನೀಡುತ್ತಿದ್ದರು, ಅವರ ಅಭಿಪ್ರಾಯಕ್ಕೆ 'ನ್ಯಾಯಸಭೆ'ಯ ಸರ್ವಸದಸ್ಯರು ಹಾಗೂ ದೊರೆಗಳು ಹೇಗೆ ಅವಕಾಶ ನೀಡಿದ್ದರು, ಕಳ್ಳತನದ ಪತ್ತೆ ತರದೂರಿಗೆ ಊರತಳವಾರ ನಾಡತಳವಾರರನ್ನು ಜಂಟಿ ಕಾರ್ಯಾಚರಣೆಯಲ್ಲಿ ಹೇಗೆ ತೊಡಗಿಸಲಾಗುತ್ತಿತ್ತು, ಆಳ್ವಿಕೆ ದೊರೆಗಳದೇ ಇದ್ದರೂ ಅದು ಎಷ್ಟು ಪ್ರಜಾಸತ್ತಾತ್ಮಕ ದೃಷ್ಟಿಯಿಂದ ನಡೆಯುತ್ತಿತ್ತು, ಇವೇ ಮುಂತಾದ ಅನೇಕ ಸೂಕ್ಷ್ಮಗಳನ್ನು ಹೇಳುವಂತಿದೆ.

ಪಾಳೆಯಗಾರ ದೊರೆಗಳ ಕಾಲದಲ್ಲಿ ನ್ಯಾಯತೀರ್ಮಾನ ಹೇಗೆ ನಡೆಯುತ್ತಿತ್ತು ಎಂಬುದರ ಕೆಲವು ನಿದರ್ಶನಗಳನ್ನು ಈ ಮೇಲಿನಂತೆ ಕೆಲವು ಶಾಸನಗಳು ನಮಗೆ ನೀಡುತ್ತವೆ. ಮೇಲೆ ಪ್ರಸ್ತಾಪಿಸಿದ ಪಂಡಿತ ಚನ್ನಪ್ಪ ಎರೆಸೀಮೆ ಅವರು ಹಾಗೂ ಡಾ.ಕೆಳದಿ ವೆಂಕಟೇಶಜೋಯಿಸರು ಪ್ರಕಟಿಸಿರುವ ದಾಖಲೆಗಳಲ್ಲಿ ಬಂದಿರುವ ಪ್ರಸಂಗಗಳಿಗೆ ಪೂರಕವಾದುವಾದರೂ ಅವುಗಳಿಗೆ ವಿಭಿನ್ನವೂ ಸಂಕೀರ್ಣವೂ ಆದ ಹಲವು ಅಂಶಗಳ ಪ್ರಸಂಗಗಳನ್ನು ಶಾಸನಗಳು ಸಾದರಪಡಿಸುತ್ತವೆ. ನ್ಯಾಯಕೋರಿ ಬಂದ ವ್ಯಾಜ್ಯ, ಅನ್ಯಾಯ ಸರಿಪಡಿಸಲು ಬಂದ ದೂರು ಇಂಥವುಗಳ ಬಗ್ಗೆ ಸಾಕಷ್ಟು ವಿಶದವಾದ ಹಾಗೂ ನಿಷ್ಪಕ್ಷಪಾತವಾದ ಪರಿಶೀಲನೆ ನಡೆಸಿ ಆಗ ತೀರ್ಪು ನೀಡಲಾಗುತ್ತಿತ್ತು ಎಂಬುದನ್ನು ಎಲ್ಲ ಪ್ರಸಂಗಗಳೂ ಸಾರುತ್ತವೆ. ವಾದಿ-ಪ್ರತಿವಾದಿಯರಿಬ್ಬರಿಗೂ ಹಿಂದೆಯೇ ಹೇಳಿದಂತೆ ತಂತಮ್ಮ ಹೇಳಿಕೆ ನೀಡಲು ಮತ್ತು ಅವರ ಸಾಕ್ಷಿಗಳ ಹೇಳಿಕೆಗಳಿಗೂ ಸಾಕಷ್ಟು ಅವಕಾಶ ನೀಡಿಯೇ ನ್ಯಾಯತೀರ್ಮಾನಕ್ಕೆ ಮುಂದುವರಿಯಲಾಗುತ್ತಿತ್ತು. ಸಾಕ್ಷಿಗಳ ಹೇಳಿಕೆಗಳು ಇತ್ತಂಡವಾದಾಗ ಅನಿವಾರ್ಯವಾಗಿ ದೈವಚಾರ(ದಿವ್ಯ)ದ ಮೂಲಕ ಅಥವಾ ಸತ್ಯಮಾಡಿಸುವುದರ ಮೂಲಕ ತೀರ್ಮಾನ ಮಾಡಬೇಕಾದ ಉತ್ಕಟ ಸಂದರ್ಭಗಳೂ ಕೂಡಾ ಬರುತ್ತಿದ್ದವು. ನ್ಯಾಯತೀರ್ಮಾನ ಕೆಳಹಂತದಲ್ಲಿ ಅಥವಾ ಸ್ಥಳೀಯ ಹಂತದಲ್ಲಿ

ಸಾಧ್ಯವಾಗದೆ ಹೋದಾಗ, ಇಲ್ಲವೆ ೧೨ ಜನ ಕೈವಾಡದವರಲ್ಲೇ ಯಾರಾದರೊಬ್ಬರು ವಾದಿ ಅಥವಾ ಪ್ರತಿವಾದಿಯಾಗಿ ನಿಲ್ಲುವ ಸಂದರ್ಭ ಬಂದು ನ್ಯಾಯತೀರ್ಮಾನ ಕೆಳ ಅಥವಾ ಸ್ಥಳೀಯ ಹಂತ ಮೀರಿದ್ದು ಎನಿಸಿದಾಗ, ಅತ್ಯುನ್ನತ ನ್ಯಾಯಾಧಿಕಾರಿಯಾದ ದೊರೆಯಲ್ಲಿಗೆ ಹೋಗಬೇಕಾದ ಅನಿವಾರ್ಯ ಸ್ಥಿತಿ ಉಂಟಾಗುತ್ತಿತ್ತು. ಅಲ್ಲಿ ಕೂಡಾ ತೀರ್ಮಾನ ಕ್ಲಿಷ್ಟವೆನಿಸಿದಾಗ, ದೈವಾಚಾರ(ಅಥವಾ ದಿವ್ಯ)ದ ತೀರ್ಮಾನಕ್ಕೆ ಮುಂದಾಗ ಬೇಕಾಗುತ್ತಿತ್ತು. ಹಕ್ಕಿಗೆ ಚ್ಯುತಿ ಅಥವಾ ಅನ್ಯಾಯ ಒದಗಿದೆಯೆಂದು ಖಚಿತವಾದಾಗ ಪ್ರಭುತ್ವ ಕಠಿಣಕ್ರಮಗಳನ್ನು ಕೈಕೊಳ್ಳಬೇಕಾಗಿ ಬರುತ್ತಿತ್ತು.

ಒಟ್ಟಿನಲ್ಲಿ, ಪಾಳೆಯಗಾರ ದೊರೆಗಳ ಕಾಲದ ನ್ಯಾಯವ್ಯವಸ್ಥೆ ತುಂಬ ಪಾರದರ್ಶಕವೂ, ಪ್ರಾಮಾಣಿಕವೂ ಆಗಿತ್ತಲ್ಲದೆ ಮಾನವೀಯವೂ ಸಹ ಆಗಿತ್ತೆಂಬುದನ್ನು ಮೇಲಿನ ನಿದರ್ಶನಗಳು ತೋರಿಸುತ್ತವೆ. ಯಾವ ಅಕ್ರಮಕ್ಕೆ ಏನು ಶಿಕ್ಷೆ ಅಥವಾ ದಂಡ ಎಂಬ ಬಗ್ಗೆ ಹಾಗೂ ಯಾವ ಅನ್ಯಾಯಕ್ಕೆ ಏನು ಪರಿಹಾರ ಎಂಬ ಬಗ್ಗೆ ನಿರ್ದಿಷ್ಟವಾದ ಲಿಖಿತ ಸಂಹಿತೆಯೇನಾದರೂ ಅವರ ಕಾಲದಲ್ಲಿತ್ತೆ ಎಂಬ ಬಗ್ಗೆ ಸದ್ಯಕ್ಕೆ ಏನೂ ತಿಳಿಯದು. ಹಿಂದೆಯೇ ಹೇಳಿದಂತೆ, ಬಹುಶಃ ವಿಜ್ಞಾನೇಶ್ವರನ ಗ್ರಂಥವನ್ನೇ ಆಧಾರವಾಗಿ ಇಟ್ಟು ಕೊಂಡಿರುತ್ತಿದ್ದರೆಂದು ಭಾವಿಸಲು ಅವಕಾಶವಿದೆ. ಅದರ ನೇರ ಬಳಕೆ ಏನಿದ್ದರೂ ರಾಜಾಸ್ಥಾನದಂತಹ ಉನ್ನತ ನೆಲೆಯಲ್ಲಿ ಸಾಧ್ಯವಿರಬಹುದಾದರೂ ಸಾಮಾನ್ಯವಾದ ಗ್ರಾಮೀಣರಲ್ಲಿ ವಿಜ್ಞಾನೇಶ್ವರನ ಗ್ರಂಥವಿರಲಿ ಅವನ ಹೆಸರು ತಿಳಿದಿತ್ತೆಂದು ಭಾವಿಸುವುದು ಕೂಡಾ ಕಷ್ಟವೇ. ಇಷ್ಟಾಗಿಯೂ ಆ ಗ್ರಂಥದಲ್ಲಿ ಹೇಳಿರುವ ಎಷ್ಟೋ ಅಂಶಗಳು ನಮ್ಮ ಗ್ರಾಮೀಣ ಜನರ ಸಾಮಾಜಿಕ ಬದುಕಿನಲ್ಲಿ ತಲೆಮಾರಿನಿಂದ ತಲೆಮಾರಿಗೆ ಅನುಸರಣೆ ಯಾಗುತ್ತಾ, ಕಾಲಕ್ಕೆ ತಕ್ಕಂತೆ ಅಷ್ಟಿಷ್ಟು ಬದಲಾವಣೆಯಾಗುತ್ತಾ ಬಂದಿರಬೇಕು. ಈ ಬಗೆಗಿನ ಪರಿಶೀಲನೆ ಬಹುಶಃ ಮತ್ತೊಂದು ಅಧ್ಯಯನಕ್ಕೆ ವಸ್ತುವಾಗಬಲ್ಲುದು ಎಂದು ತೋರುತ್ತದೆ.

**ಟಿಪ್ಪಣಿಗಳು**

೧. ಚಂದ್ರವಳ್ಳಿ, ಪು.೧೪-೧೯, ಭಾಗ ೨

೨. ಸಂಪುಟ ೭, ಸಂಚಿಕೆ ೩-೪, ಮಾರ್ಚ್-ಆಗಸ್ಟ್ ೧೯೯೭, ಪು.೯೭-೧೧೪

೩. ಎ.ಕ., ಸಂಪುಟ ೧೧, ಹುಲ್ಲೂರು ೨೨, ಚಿತ್ರದುರ್ಗ ತಾಲ್ಲೂಕು

೪. ನೋಡಿ, 'ಹುಲ್ಲೂರು ವೀರಭದ್ರ ದೇವಾಲಯದ ಶಾಸನ - ಒಂದು ಮರುಪರಿಶೀಲನೆ', ಇತಿಹಾಸ ದರ್ಶನ, ಸಂಪುಟ ೨೦, ೨೦೦೫, ಪು.೪೨೬-೪೩೦

೫. ಹಾಲತೊರೆ, ಪು. ೨೮೨-೨೯೦

೬. ಶಾಸನ ಅಧ್ಯಯನ, ೨-೨, ೨೦೦೫, ಪು.೩೩-೪೬

೭. ಮೈಸೂರು ಆರ್ಕಿಯಾಲಾಜಿಕಲ್ ರಿಪೋರ್ಟ್, ೧೯೪೭-೧೯೫೬, ಶಾಸನ ಸಂಖ್ಯೆ ೧, ಬೆಂಗಳೂರು ಜಿಲ್ಲೆ, ಪು.೬೪-೬೬

೮. ಎ.ಕ., ಸಂಪುಟ ೧೧, ಚಿತ್ರದುರ್ಗ ೨೧

## ಪರಾಮರ್ಶನ ಸಾಮಗ್ರಿ


೧. ಬಿ.ಎಲ್.ರೈಸ್, ೧೯೦೩, **ಎಪಿಗ್ರಾಫಿಯ ಕರ್ನಾಟಿಕ,** ಸಂಪುಟ ೧೧, (ಚಿತ್ರದುರ್ಗ ಜಿಲ್ಲೆಯ ಶಾಸನಗಳು), ಬೆಂಗಳೂರು

೨. ಎಂ.ವಿ.ಶ್ರೀನಿವಾಸ್, ಲಕ್ಷ್ಮಣ್ ತೆಲಗಾವಿ (ಸಂ.), ೧೯೭೬, **ಚಂದ್ರವಳ್ಳಿ,** ಚಿತ್ರದುರ್ಗ

೩. ಬಿ.ರಾಜಶೇಖರಪ್ಪ, ೨೦೦೧, **ದುರ್ಗಶೋಧನ,** ಬೆಂಗಳೂರು,

--- ೨೦೦೧, **ಇತಿಹಾಸ ಕಥನ,** ಬೆಂಗಳೂರು

--- **ಸತ್ಯಶುದ್ಧಕಾಯಕ** (ಸಂಪಾದನೆ), ಸಂಪುಟ ೭, ಸಂಚಿಕೆ ೩-೪, ೧೯೯೭

೪. ಎಂ. ಕರಿಯಪ್ಪ (ಸಂ.), ೨೦೦೩, **ಹಾಲತೊರೆ,** ದಾವಣಗೆರೆ

೫. ಎಂ.ಜಿ.ನಾಗರಾಜ್ , ಪಿ.ವಿ.ಕೃಷ್ಣಮೂರ್ತಿ (ಸಂ.), **ಇತಿಹಾಸ ದರ್ಶನ,** ಸಂಪುಟ ೨೦, ೨೦೦೫, ಬೆಂಗಳೂರು

೬. ಎಂ. ಚಿದಾನಂದಮೂರ್ತಿ, ೧೯೭೯ (ದ್ವಿ.ಮು.), **ಕನ್ನಡಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಮೈಸೂರು

೭. ಆರ್.ಗೋಪಾಲ್ (ಸಂ.), ೨೦೦೫, **ಚಿತ್ರದುರ್ಗಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ,** ಹೊಸಪೇಟೆ

೮. ಎಚ್.ವಿ.ನಾಗೇಶ್, ೧೯೯೪, **ಗ್ರಾಮೀಣ ನ್ಯಾಯ,** ಹಂಪಿ

೯. ವಿವಿಧ ಲೇಖಕರು, ೧೯೯೩, **ಕನ್ನಡಸಾಹಿತ್ಯದಲ್ಲಿ ಹಿಂಸೆಯ ಸ್ವರೂಪ,** ಬೆಂಗಳೂರು

೧೦. H.T.Deshpande, 1979, The Chitradurga State, (Ph.D. Thesis-Unpublished), Poona

೨೧

# ಮದ್ದಿಹಳ್ಳಿ ಮಾದಿಗತನದ ಕಾಣಾಚಿವ್ಯಾಜ್ಯ ಕುರಿತ ಜೋಡಿ ತಾಮ್ರಪತ್ರಗಳು

ಪ್ರೊ. ಲಕ್ಷ್ಮಣ್ ತೆಲಗಾವಿ

ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕಿನ ಮದ್ದಿಹಳ್ಳಿ ಮಾದಿಗತನದ ಕಾಣಾಚಿವ್ಯಾಜ್ಯ ಕುರಿತಂಥವು ಈ ಜೋಡಿ ತಾಮ್ರಪತ್ರಗಳು.* ಇವನ್ನು 'ಸೋತಪತ್ರಗಳು' ಅಥವಾ 'ಸೋತವರು ಬರೆದುಕೊಟ್ಟ ಪತ್ರಗಳು' ಎಂತಲೂ ಕರೆಯಲಾಗಿದೆ. ಪರಿಶಿಷ್ಟಜಾತಿಗೆ ಸೇರಿದ ಮಾದಿಗ ಸಮುದಾಯದವರಿಗೆ ಈ ತಾಮ್ರಪತ್ರಗಳು ಸಂಬಂಧಿಸಿವೆ. ಪತ್ರಗಳನ್ನು ಲೋಹಪಟದ ಮೇಲೆ ಕಂಡರಿಸಲಾಗಿರುವುದರಿಂದ ಇವು ತಾಮ್ರಪತ್ರವೆನಿಸಿವೆ. ವಾಸ್ತವದಲ್ಲಿ, ವ್ಯಾಜ್ಯದಲ್ಲಿ ಸೋತವರು ಗೆದ್ದವರಿಗೆ ಹಾಗೂ ಮದ್ದಿಹಳ್ಳಿಯ ಸಮಸ್ತರಿಗೆ ಬರೆದು ಕೊಟ್ಟಿರುವ ದಾಖಲೆಗಳಿವು.

## ತಾಮ್ರಪತ್ರಗಳ ತಾಂತ್ರಿಕ ವಿವರ

ಲೋಹದ ಕೊಂಡಿಗಳಿಂದ ಪರಸ್ಪರ ಬಂಧಿಸಲ್ಪಟ್ಟಿರುವ ಈ ಜೋಡಿಪತ್ರಗಳು, ಪುಸ್ತಕದಂತೆ ಅಡ್ಡಲಾಗಿ ತೆರೆಯುವ ರೀತಿಯಲ್ಲಿ ರೂಪುಗೊಂಡಿವೆ. ಪತ್ರಗಳನ್ನು ಮಡಿಚಿದರೆ ಅವುಗಳನ್ನು ಮತ್ತೆ ಬೇರೆಯವರು ತೆರೆಯಲಾಗದಂತೆ ಮಾಡಲು, ಪಟಗಳು ಎಡ ಮತ್ತು ಬಲಬದಿಗಳಲ್ಲಿ ಪ್ರತ್ಯೇಕ ಕೊಂಡಿಗಳನ್ನು ಸೂಕ್ಷ್ಮ ಮೊಳೆಗಳಿಂದ ನಾಜೂಕಾಗಿ ಅಚ್ಚೊತ್ತಲಾಗಿದೆ (Rivet). ಪ್ರತಿಯೊಂದು ಪಟದ ಎರಡು ಬದಿಯಲ್ಲಿಯೂ ಬರಹವಿದ್ದು, ಈ ಎರಡು ಪಟಗಳಲ್ಲೂ ಯಾವ ಅಕ್ಷರವೂ ಮುಕ್ಕಾಗದಿರುವುದು ಸಮಾಧಾನಕರ ಸಂಗತಿ.

---

* ಚಳ್ಳಕೆರೆ ತಾಲ್ಲೂಕು ಕಾಮಸಮುದ್ರದ ಗೊಲ್ಲರ ಗೌಡಜ್ಜನವರ ವಶದಲ್ಲಿದ್ದ ಈ ತಾಮ್ರಪತ್ರಗಳು, ಚಳ್ಳಕೆರೆಯಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಡಾ. ಮೀರಾಸಾಬಿಹಳ್ಳಿ ಶಿವಣ್ಣನವರ ಮೂಲಕ ನನ್ನ ಕೈ ಸೇರಿದವು. ಅಲ್ಲಿಯವರೇ ಆದ ಹಾಗೂ ಚಿತ್ರದುರ್ಗ ನಾಯಕ ಮನೆತನಕ್ಕೆ ಸೇರಿದ ಪಿ.ಆರ್. ವೀರಭದ್ರನಾಯಕರು ಈ ಸಂಬಂಧದಲ್ಲಿ ನೆರವಾದರು. ಈ ಈರ್ವರು ಗೆಳೆಯರಿಗೆ ನನ್ನ ವಂದನೆಗಳು ಸಲ್ಲುತ್ತವೆ.

ಈ ಎರಡು ಪಟಗಳ ದಪ್ಪ ೨ ಮಿ.ಮೀ.; ಎರಡೂ ಸಮತಟ್ಟಾಗಿವೆ. ಇವುಗಳ ಉದ್ದ ೮ ಅಂಗುಲ; ಅಗಲ ೫.೨ ಅಂಗುಲ. ದುಂಡಾದ ಸುಂದರ ಕನ್ನಡಲಿಪಿಯಲ್ಲಿ ಪಾಠಗಳನ್ನು ಕೆತ್ತಲಾಗಿದೆ. ಆದರೆ ದಾನಶಾಸನಗಳಲ್ಲಿರುವಂತೆ ಈ 'ದಾಖಲುಪಟ'ಗಳ ಮೇಲ್ತುದಿಯಲ್ಲಿ ಯಾವುದೇ ದೈವಪ್ರತೀಕದ ಚಿಹ್ನೆಯನ್ನು ಮೂಡಿಸಲಾಗಿಲ್ಲ; ಯಾವುದೇ ಇಷ್ಟದೈವ ಅಥವಾ ಗುರುವಿನ ಸ್ಮರಣೆಯೂ ಇಲ್ಲ; ಹಾಗೂ ಕನಿಷ್ಠ ಒಂದು ಮಂಗಲಚಿಹ್ನೆಯೂ ಇಲ್ಲ. ಹಾಗೆಯೇ, ಪಾಠಗಳ ಅಂತ್ಯದಲ್ಲಿ ಯಾರ ಅಂಕಿತವಾಗಲೀ ಅಧಿಕಾರಸೂಚಕ ಮುದ್ರೆಯಾಗಲೀ ಇಲ್ಲ. ಕೇವಲ ಸಂಬಂಧಿಸಿದ ವಿಷಯವನ್ನು, ಅಂದರೆ ವ್ಯಾಜ್ಯತೀರ್ಮಾನದ ವಿವರವನ್ನು ನೇರವಾಗಿ ದಾಖಲಿಸಲಾಗಿದೆ ಅಷ್ಟೆ. ಪಾಠಗಳ ಕಡೆಯ ಸಾಲುಗಳಲ್ಲಿ ಪಟಗಳನ್ನು ಬರೆದವನ ಹೆಸರಿನ ಪ್ರಸ್ತಾಪದೊಡನೆ ಮುಕ್ತಾಯಗೊಳಿಸಲಾಗಿದೆ.

### ತಾಮ್ರಪತ್ರಗಳ ತೇದಿ

ಈ ಜೋಡಿ ತಾಮ್ರಪತ್ರಗಳು ಪರಸ್ಪರ ಒಂದುದಿನದ ವ್ಯತ್ಯಾಸದೊಡನೆ ಕಾಲಮಾನವನ್ನು ದಾಖಲಿಸಿಕೊಂಡಿವೆ. ವಿಷಾದದ ಸಂಗತಿಯೆಂದರೆ, ಈ ಪತ್ರಗಳಲ್ಲಿ ಉಲ್ಲೇಖಿಸಿರುವ ತೇದಿಗಳು ನಿರ್ದಿಷ್ಟವಾದುವಲ್ಲ. 'ಶಾಲಿವಾಹನ ಶಕ ಯುವನಾಮ ಸಂವತ್ಸರದ ೧೭೧೬ನೇ ವರ್ಷ ಶ್ರಾವಣ ಶುದ್ಧ ೧' ಎಂಬುದು ೧ನೇ ಪತ್ರದಲ್ಲಿರುವ ತೇದಿಯಾದರೆ, 'ಶಾಲಿವಾಹನ ಶಕ ಯುವನಾಮ ಸಂವತ್ಸರದ ೧೭೧೬ನೇ ವರ್ಷ ಶ್ರಾವಣ ಶುದ್ಧ ೨' ಎಂಬುದು ೨ನೇ ಪತ್ರದಲ್ಲಿರುವ ತೇದಿ. ಇದರೊಡನೆ 'ಚಂದ ೩ನೇ ಜಿಲಹೆಜ ಗುರುವಾರ' ಎಂಬ ಪತ್ಯೇಕ ಉಲ್ಲೇಖವೂ ೨ನೇ ಪತ್ರದಲ್ಲಿದೆ.

ಮೇಲಿನ ಕಾಲಮಾನಗಳ ಪ್ರಕಾರ, ಈ ಎರಡು ಪತ್ರಗಳೂ ಯುವನಾಮ ಸಂವತ್ಸರಕ್ಕೆ ಹೊಂದದೆ, ಆನಂದನಾಮ ಸಂವತ್ಸರಕ್ಕೆ ಸರಿಹೊಂದುತ್ತವೆ. ಅಂದರೆ, ೧ನೇ ಪತ್ರವು ಕ್ರಿ.ಶ. ೧೭೯೪ಳ ಆಗಸ್ಟ್ ೧ ಶುಕ್ರವಾರಕ್ಕೂ, ೨ನೇ ಪತ್ರವು ಅದೇ ತಿಂಗಳು ೨ ಶನಿವಾರಕ್ಕೂ ಸರಿಹೊಂದುತ್ತವೆ. ಈ ಕಾಲಮಾನಗಳ ವ್ಯತ್ಯಾಸದಿಂದಾಗಿ, ಈ ತಾಮ್ರಪತ್ರಗಳ ವಿಶ್ವಸನೀಯತೆ ಬಗೆಗೆ ಸಂದೇಹ ಮೂಡುತ್ತದೆ. ಅಲ್ಲದೆ, ೨ನೇ ಪತ್ರದಲ್ಲಿ ಮಧ್ಯೆ ಮಧ್ಯೆ ಉಲ್ಲೇಖಿಸಲ್ಪಟ್ಟಿರುವ 'ಜಯಾ ಸಂವತ್ಸರ ಪುಷ್ಯ ಶುದ್ಧ ೧'; 'ನಿಜ ಆಷಾಢ ಶುದ್ಧ ೧೦ ಗುರುವಾರ' ಹಾಗೂ 'ಶ್ರಾವಣ ಶುದ್ಧ ಬಿದಿಗೆ ಗುರುವಾರ' ಎಂಬ ತೇದಿಗಳೂ ಪರಸ್ಪರ ಹೊಂದದೆ ಗೊಂದಲವನ್ನುಂಟು ಮಾಡುತ್ತವೆ. ಇಷ್ಟಾದರೂ ತಾಮ್ರಪತ್ರಗಳ ಸ್ವರೂಪ, ಲಿಪಿಶೈಲಿ, ವಸ್ತು ನಿರೂಪಣೆ ಹಾಗೂ ಅದರ ಖಚಿತತೆ ಮುಂತಾದ ವಿವರವನ್ನು ಗಮನಿಸಿದರೆ, ತಪ್ಪು ಕಾಲಮಾನವಿದ್ದರೂ ಇವು ನಂಬಲರ್ಹ ಪತ್ರಗಳೆಂಬ ಭಾವನೆ ಮೂಡುತ್ತದೆ.

### ತಾಮ್ರಪತ್ರಗಳ ಸಾರಾಂಶ

ಮೇಲೆಯೇ ಪ್ರಸ್ತಾಪಿಸಿದಂತೆ, ಮಾದಿಗ ಸಮುದಾಯಕ್ಕೆ ಸೇರಿದ ಎರಡು ಪಕ್ಷಗಳ ನಡುವಣ ಪಾರಂಪರಿಕ ವೃತ್ತಿಯ ಮೇಲಿನ ಹಕ್ಕುಸಾಧನೆಯ ವ್ಯಾಜ್ಯಕ್ಕೆ ಸಂಬಂಧಿಸಿದವು ಈ ಪತ್ರಗಳು. ಇವುಗಳ ಸಾರಾಂಶ ಈ ಕೆಳಗಿನಂತಿದೆ :

೧ನೇ ಪತ್ರ -

ದೊಡ್ಡೇರಿಯ ಮಾದಿಗರ ಹೊಟ್ಟೆರಂಗನಿಗೆ ಹರತಿಸೀಮೆ ಮಲ್ಲಪ್ಪನಹಳ್ಳಿಯ ಮಾದಿಗರ ಚಿಕ್ಕ, ಮಧುರೆಗಿರಿಯ ತಿಮ್ಮ, ಬೆಳಗೆರೆಯ ಚೆನ್ನ, ಕೊಡಿ, ದಾಸ - ಒಟ್ಟು ಐದು ಜನರು ಬರೆದುಕೊಟ್ಟ 'ಸೋತಪತ್ರ'. ಇವರ ಕ್ರಮವೇನೆಂದರೆ, "ಮಾದಿಹಳ್ಳಿ ಮಾದಿಗತನದ ಕಾಣಾಚಿ ನಮ್ಮದು ಎನ್ನುವ ಹಾಗೆ ನಾವು ದೊಡ್ಡೇರಿಯ ಗೌಡರ ಮಲ್ಲಣ್ಣನ ಮೊಮ್ಮಕ್ಕಳಿಂದ ಹೇಳಿಸುತ್ತೇವೆ" ಎಂದು ಈ ಐವರು ಹೇಳುತ್ತಾರೆ. ಇವರ ಮಾತಿಗೆ ಸಾಕ್ಷಿಯಾದವರು ಈ ಮುಂದಿನ ಸಮಸ್ತರು : ಬೆಳಗೆರೆಯ ಮುದ್ದರಂಗ, ಬಡಾ (ದೊಡ್ಡ) ಸೋಮ(ಯ್ಯ), ನಲ್ಲೂರಹಳ್ಳಿ ತಮ್ಮಿ, ಕೋನಿಗರಹಳ್ಳಿ ಹೀರೇಬಾಲಯ್ಯ, ಚಿಕ್ಕಬಾಲಯ್ಯ, ಕಾಪರಹಳ್ಳಿ ಕರೇಕಾಟ, ಯೆಲಗಟ್ಟ ಶಾನಯ್ಯ, ಮರಿಕುಂಟೆ ಚೆನ್ನವೀರಯ್ಯ, ಜಾಜೂರ ಬಸವಣ್ಣಗೌಡ, ಕಾಮಸಮುದ್ರದ ಶಿವಣ್ಣಗೌಡ, ಕಸವಿಗೊಂಡನಹಳ್ಳಿ ಹಂಪಣ್ಣಗೌಡ, ನಾಗಗೊಂಡನಹಳ್ಳಿ ಗಿಡ್ಡೇಗೌಡ (ಗಿಡ್ಡಚನ್ನಯ್ಯ), ಯಾದಲಗಟ್ಟ(ಕಟ್ಟೆ) ಚಿಕ್ಕಚೆನ್ನಣ್ಣ(ಯ್ಯ), ವಿ(ಯಿ)ಡಪನಕುಂಟೆ, ಹಾ(ಹ)ರತ್ಯಪ್ಪ, ಹೊಸಹಳ್ಳಿ ಹಗರೇಗೌಡ, ಕಾಲುವೇಹಳ್ಳಿ ಚೆನ್ನಪ್ಪ ಮತ್ತು ರಡ್ಡಿಹಳ್ಳಿಯ ನಾಗಿರೆಡ್ಡಿ.

ಈ ಮೇಲಿನ ಸಮಸ್ತರು ದೊಡ್ಡೇರಿಯ ಗೌಡ ಕೆಂಚಬಸವಯ್ಯ(ಕೆಂಚಣ್ಣಗೌಡ)ನನ್ನು ಕರೆಯಿಸಿ, "ಮಲ್ಲಪ್ಪನಹಳ್ಳಿ ಚಿಕ್ಕನು ಮಾದಿಹಳ್ಳಿ ಮಾದಿಗತನದ ಕಾಣಾಚಿಯು ತನ್ನದು ಎಂಬುದನ್ನು ನಿನ್ನಿಂದ ಹೇಳಿಸುತ್ತೇನೆ ಎಂದು ಹೇಳುತ್ತಾನೆ. ನೀನು ದೇವರ ಮುಂದೆ ಧರ್ಮಾಧರ್ಮಕ್ಕೆ ಅನುಸಾರವಾಗಿ ಇರುವಂತೆಯೇ ಹೇಳಿ ಈವತ್ತು ಒಂದು ದಿವಸ ಜಯಿಸಿ ಹೋಗು" ಎಂದು ಅಪೇಕ್ಷಿಸುತ್ತಾರೆ. ಇದಕ್ಕೆ ಕೆಂಚಣ್ಣಗೌಡನು, "ಮಾದಿಹಳ್ಳಿ ಮಾದಿಗತನದ ಕಾಣಾಚಿಯು ಹೊಟ್ಟೆರಂಗನದೇ ಸರಿ. ಮಲ್ಲಪ್ಪನಹಳ್ಳಿ ಚಿಕ್ಕನಿಗೆ ಇದು ಸಂಬಂಧಿಸಿಲ್ಲ" ಎಂದು ನುಡಿಯುತ್ತಾನೆ. ಈ ಮಾತನ್ನು ಕೇಳಿದ ಸಮಸ್ತರು 'ಜಯ-ಅಪಜಯ ಕಟ್ಟಲು' ದೊಡ್ಡೇರಿಯ ವೀರಭದ್ರದೇವರಗುಡಿಯ ಎದುರಿನಲ್ಲಿ ಈ ವ್ಯಾಜ್ಯವನ್ನು ತೀರ್ಮಾನಿಸಲು ನಿರ್ಧರಿಸುತ್ತಾರೆ. ಈ ಸಂದರ್ಭದಲ್ಲಿ ಕೆಂಚಣ್ಣಗೌಡನು ಅಲ್ಲಿ ಸೇರಿದ ಎಲ್ಲರ ಎದುರಿನಲ್ಲಿ, ವೀರಭದ್ರದೇವರಗುಡಿಯ ಮುಂದೆ ನಿಂತು ತನ್ನ ಮಕ್ಕಳು-ಮರಿಗಳನ್ನು ಸಾಕ್ಷಿಯಾಗಿಸಿ, ಮೇಲಿನ ಸತ್ಯ ಸಂಗತಿಯನ್ನು ನುಡಿಯುತ್ತಾನೆ.

ವ್ಯಾಜ್ಯಗಾರರಾದ ಮೇಲಿನ ಐದುಮಂದಿಯೂ ಈ ಹೇಳಿಕೆಯನ್ನು ಒಪ್ಪಿಕೊಳ್ಳು ವುದರೊಡನೆ, "ಮಾದಿಹಳ್ಳಿ ಮಾದಿಗತನ ಹೊಟ್ಟೆರಂಗನದೇ ಸರಿ. ನಮಗೆ ಸಂಬಂಧಿಸಿ ದುದಲ್ಲ. ನಾವು ಹಿಡಿದಿದ್ದಕ್ಕೆ ದಂಡವನ್ನು ಕೊಟ್ಟು ಹೋಗುತ್ತಿದ್ದೇವೆ. ಇನ್ನು ಮುಂದೆ ನಮ್ಮ ಪುತ್ರ, ಪೌತ್ರ ಯಾರಿಗೂ ಇದು ಸಂಬಂಧಿಸಿದುದಲ್ಲ" ಎಂದು ಈ 'ಸೋತಪತ್ರ'ವನ್ನು ಬರೆದುಕೊಡುತ್ತಾರೆ. ಇದಕ್ಕೆ ಸಾಕ್ಷಿಗಳಾಗಿದ್ದವರೆಂದರೆ, ದೊಡ್ಡೇರಿಯ ಗೌಡ ಕೆಂಚಣ್ಣಗೌಡ, ಕೊಡಿ, ವೀರ, ಶಾನುಭೋಗ ತಮ್ಮಣ್ಣ, ತಳವಾರ ಅರಿಕಿ, ಕಮ್ಮಾರ ಹನುಮಯ್ಯ, ಬಡಗಿ ಮೂಕ, ಕೆಲಸಿ ದಾಗಿ, ಅಕ್ಕಸಾಲೆ ಮರಿಯಾ, ಕುಂಬಾರ ಅಜಾ, ಅಗಸರ ವಗಮಲ್ಲ,

ಜೋಯಿಸ ನರಸಿಂಹಭಟ್ಟ, ಶೇಷಭಟ್ಟ, ಮಠದ ಬಾಲಸಿದ್ದಯ್ಯ, ರಾಣೆದ ಸರನಾಯಕ, ಶೇರ್‌ಖಾನ್ ಹಾಗೂ ಮಕುದುಮ್‌ಖಾನ್.

ವ್ಯಾಜ್ಯದಲ್ಲಿ ಸೋತುಹೋದ ಮಲ್ಲಪ್ಪನಹಳ್ಳಿ ಚಿಕ್ಕನ ಸಮ್ಮತಿಯಿಂದ ದುಭಾಷಿ ಲಿಂಗಪ್ಪನು ತನ್ನ ಸ್ವಹಸ್ತದಿಂದ ಈ ಸೋತಪತ್ರವನ್ನು ಬರೆಯುತ್ತಾನೆ.

**೨ನೇ ಪತ್ರ -**

ದೊಡ್ಡೇರಿ ಠಾಣ್ಯದಲ್ಲಿರುವ ಮಹದಾಜಿ ರಘುನಾಥಪಂಡಿತರ ಒಡಹುಟ್ಟಿದ ಶಂಕರಾಜಿ ಪಂಡಿತರ ತಾರ್ಕಣೆಯಲ್ಲಿ (ದೃಢೀಕರಣದಲ್ಲಿ) ಹರತಿಸೀಮೆ ಮಲ್ಲಪ್ಪನಹಳ್ಳಿಯ ಮಾದಿಗರ ಚಿಕ್ಕ, ಮಧುರೆಗಿರಿಯ ತಿಮ್ಮ, ಬೆಳಗೆರೆಯ ಚನ್ನ, ಕೊಡಿ, ದಾಸ - ಒಟ್ಟು ಐದು ಜನರು ಬರೆದುಕೊಟ್ಟ 'ಸೋಲುಪತ್ರ'. ಇದರ ಕ್ರಮವೇನೆಂದರೆ, ಮಾದಿಗತನದ ಕಾಣಾಚಿ ಮಾತಿಗೆ ಹೊಟ್ಟೆರಂಗನಿಗೂ ಈ ಐದು ಜನರಿಗೂ ವ್ಯವಹಾರ ಬೀಳಲಾಗಿ, ಹಿಂದೆ ಇದ್ದ ಎಡಗೈ ದಾಸನು ನಿಡುಗಲ್ಲುದುರ್ಗದ ಪೂಜಾರಿ ತಿಮ್ಮನಿಗೆ ಓಲೆ ಬರೆದುಕೊಟ್ಟಿದ್ದ. ಮದ್ದಿಹಳ್ಳಿ ಮಾದಿಗತನದ ಕಾಣಾಚಿ ತಮ್ಮದು; ದೊಡ್ಡೇರಿಯ ಗೌಡ ಮಲ್ಲಣ್ಣನ ಮೊಮ್ಮಕ್ಕಳಿಂದ ಇದನ್ನು ಹೇಳಿಸುತ್ತೇನೆಂದು ಓಲೆಯಲ್ಲಿ ಸೂಚಿಸಿದ್ದ. ಇದಕ್ಕೆ ಸಾಕ್ಷಿಯಾದ ಸಮಸ್ತರೆಂದರೆ, ಬೆಳಗೆರೆಯ ಮುದ್ದರಂಗ, ನಲ್ಲೂರಹಳ್ಳಿಯ ತಮ್ಮಿ, ಕೋನಿಗರಹಳ್ಳಿ ಹಿರೇಬಾಲಯ್ಯ ಮತ್ತು ಚಿಕ್ಕಬಾಲಯ್ಯ, ಕಾಪರಹಳ್ಳಿ ಕರೇಕಾಟಯ್ಯ, ಯೆಲಗಟ್ಟ ಶಾನಯ್ಯ, ಬೆಳಗೆರೆ ಬಡಾ (ದೊಡ್ಡ) ಸೋಮಯ್ಯ, ಮರಿಕುಂಟೆ ಚೆನ್ನವೀರಯ್ಯ, ಜಾಜೂರ ಬಸವಣ್ಣಗೌಡ, ಕಾಮಸಮುದ್ರದ ಶಿವಣ್ಣಗೌಡ, ಕಸವಿಗೊಂಡನಹಳ್ಳಿ ಹಂಪಣ್ಣ, ನಾಗಗೊಂಡನಹಳ್ಳಿ ಗಿಡ್ಡಚನ್ನಯ್ಯ (ಗಿಡ್ಡೇಗೌಡ), ಯಾದಲಗಟ್ಟ ಚಿಕ್ಕ ಚನ್ನಯ್ಯ(ಣ್ಣ) ಮತ್ತು ಹಾರತ್ಯಪ್ಪ ಹಾಗೂ ಹೊಸಹಳ್ಳಿ ಹಗರೇಗೌಡ.

ಗೌಡರ ಮಲ್ಲಣ್ಣನ ಮೊಮ್ಮಗ ಕೆಂಚಣ್ಣಗೌಡನು ಈ ಮೇಲಿನ ಸಮಸ್ತರ ಮುಂದೆ ಮತ್ತು ದೊಡ್ಡೇರಿ ವೀರಭದ್ರಗುಡಿಯ ಎದುರಿನಲ್ಲಿ, "ಪೂರ್ವದಿಂದಲೂ ಮದ್ದಿಹಳ್ಳಿ ಮಾದಿಗತನದ ಕಾಣಾಚಿ ಹೊಟ್ಟೆರಂಗನದೇ ಹೌದು" ಎಂದು ಪ್ರಮಾಣ ನುಡಿಯುತ್ತಾನೆ. ಆಗ ಸಮಸ್ತರು, "ಈ ಮಾತಿಗೆ ಈವತ್ತು ಒಂದು ದಿವಸ ಇದ್ದು ಜಯಿಸಬೇಕು" ಎಂದು ಆತನಿಗೆ ಸೂಚಿಸುತ್ತಾರೆ. ಈ ಮಾತಿನಂತೆ, ಕೆಂಚಣ್ಣಗೌಡನು ತನ್ನ ಮಕ್ಕಳು-ಮರಿ, ದನ-ಕರು ಸಹಿತ ಸಾಕ್ಷಿಯಾಗಿಸಿ, "ಮದ್ದಿಹಳ್ಳಿ ಮಾದಿಗತನ ಹೊಟ್ಟೆರಂಗನದೆ ಹೌದು" ಎಂದು ಪ್ರಮಾಣೀಕರಿಸುತ್ತಾನೆ. ಈ ಹೇಳಿಕೆಗೆ ಮೇಲಿನ ಐದುಮಂದಿಯೂ "ಹೊಟ್ಟೆರಂಗನಿಗೆ ಜಯವಾಯಿತು. ನಮಗೆ ಸೋಲುಂಟಾಯಿತು. ಇದಕ್ಕೆ ಮುಲುಕಲೋಟಿ ಸಿಡಿದಲೆ ವೀರಯ್ಯ, ಕಾಪರಹಳ್ಳಿ ಕರೇಕಾಟ(ಯ್ಯ), ಬಡಾ(ದೊಡ್ಡ)ಕಾಟನ ಮಗ ಚಿಕ್ಕಕಾಟ, ಗಂಜಿಕುಂಟೆ ನೀಲಯ್ಯ, ನಹುಚ (?), ಕಾಲುವೇಹಳ್ಳಿ ಚೆನ್ನಪ್ಪ - ಈ ಸಮಸ್ತರು ಸಾಕ್ಷಿಗಳು. ಈ ಸಮಸ್ತರ ಮುಂದೆ ಇದು ನಾವು ಐದು ಜನರು (ಬರೆದು)ಕೊಟ್ಟ ಸೋತಪತ್ರ. ಇನ್ನು ಮುಂದಿನ ನಮ್ಮ ಪೀಳಿಗೆಯವರಿಗೆ ಇದು ಸಂಬಂಧಿಸಿರುವುದಿಲ್ಲ.

ಮತ್ತೆ ನಾವೇನಾದರೂ ಇದನ್ನು ಕೇಳಿದರೆ ದಿವಾಣಕ್ಕೆ ೧೨೦ ಗದ್ಯಾಣ/ಹಣ ದಂಡ ಕೊಡುತ್ತೇವೆ" ಎಂದು ಹೇಳಿ ಸೋತಪತ್ರವನ್ನು ಬರೆದು ಕೊಡುತ್ತಾರೆ.

ಈ ಐದು ಜನರ ಸಮ್ಮತಿಯಿಂದ ದೊಡ್ಡೇರಿಯ ದುಭಾಷಿ ಲಿಂಗಪ್ಪನು ಈ ಸೋತಪತ್ರವನ್ನು ಬರೆಯುತ್ತಾನೆ.

## ತಾಮ್ರಪತ್ರಗಳ ವಿಮರ್ಶೆ

ಈ ಜೋಡಿ ತಾಮ್ರಪತ್ರಗಳ ಲಿಪಿ, ಭಾಷೆ, ಕೆಲವು ವಿಶಿಷ್ಟ ಶಬ್ದಗಳು; ಹಾಗೂ ಇವುಗಳಲ್ಲಿ ಉಲ್ಲೇಖಗೊಂಡಿರುವ ವ್ಯಕ್ತಿ, ಊರು ಇತ್ಯಾದಿ ವಿವರಗಳು ಪರಿಶೀಲನಾರ್ಹವಾದವು. ಮೇಲೆಯೇ ಹೇಳಿದಂತೆ, ಮುದ್ದಾದ ಕನ್ನಡಲಿಪಿಯಲ್ಲಿ ಎಲ್ಲಿಯೂ ಮುಕ್ಕಾಗದಂತೆ ಪಾಠಗಳನ್ನು ಕೆತ್ತಲಾಗಿದೆ. ಇಲ್ಲಿಯದು ಮಧ್ಯಕಾಲೀನ ಕನ್ನಡ ಲಿಪಿಶೈಲಿ. ಆದರೆ ಪಾಠಗಳಲ್ಲಿರುವ ವಾಕ್ಯಗಳು ಸಹಜಕ್ರಮದಲ್ಲಿರದೆ ಗೊಂದಲವನ್ನುಂಟು ಮಾಡುತ್ತವೆ. ಕಾಗುಣಿತದೋಷಗಳು ವಿಪರೀತ. ಬಹುಶಃ ಮೊದಲಿಗೆ ಕಾಗದದ ಮೇಲೆ ಬರೆಯಲಾಗಿದ್ದ ವೃತ್ತಾಂತವನ್ನು ತಾಮ್ರಪಟಗಳ ಮೇಲೆ ಕಂಡರಿಸುವಾಗ, ಮೂಲ ಬರಹದಲ್ಲಿಯ ಭಾಷಾದೋಷಗಳು ಇಲ್ಲಿಯೂ ನುಸುಳಿವೆ; ಅಥವಾ ಸರಿಯಾದ ಭಾಷಾಜ್ಞಾನವಿಲ್ಲದ ಕಂಡರಣೆಕಾರನಿಂದಲೂ ಇಂಥಾ ಇನ್ನಷ್ಟು ದೋಷಗಳು ಉಂಟಾಗಿರಬಹುದು. ಒಟ್ಟಿನಲ್ಲಿ, ಈ ತಾಮ್ರಪತ್ರಗಳು ಮೂಲದ ಯಥಾವತ್ತಾದ ನಕಲುಗಳಾಗಿದ್ದರೂ ಅಧಿಕೃತವಾದುವಲ್ಲವೆನ್ನಲಡ್ಡಿಯಿಲ್ಲ. ಗೆದ್ದ ಪಕ್ಷದವರು ಪ್ರಸ್ತುತ ವ್ಯಾಜ್ಯತೀರ್ಮಾನದ ಒಂದು ಪ್ರತಿಯನ್ನು ತಮ್ಮಲ್ಲಿ ನಿರಂತರವಾಗಿ ಕಾಯ್ದಿರಿಸಿಕೊಳ್ಳಲೋಸುಗ ಸಿದ್ಧಪಡಿಸಲಾದ ಅನಧಿಕೃತ ಪತ್ರಗಳೆನ್ನಬಹುದು. ಅಲ್ಲದೆ, ಈ ವ್ಯಾಜ್ಯದಲ್ಲಿ ಗೆದ್ದ ದೊಡ್ಡೇರಿಯ ಮಾದಿಗರ ಹೊಟ್ಟೆರಂಗನಿಗೆ ಈ 'ಸೋತಪತ್ರ'ಗಳನ್ನು ಕೊಡಲಾಗಿದೆಯೆಂಬುದನ್ನು ೧ನೇ ತಾಮ್ರಪತ್ರದ ಆರಂಭದಲ್ಲೆ ಸೂಚಿಸಲಾಗಿದೆ.

ಪ್ರಸ್ತುತ ಪತ್ರಗಳಲ್ಲಿ ಬಳಸಲಾಗಿರುವ ಶಬ್ದಗಳು ಜನರಲ್ಲಿ ರೂಢಿಯಲ್ಲಿದ್ದ ಆಡುಭಾಷೆಗೆ ಹತ್ತಿರವಾದವು. ವ್ಯಾಜ್ಯವನ್ನು 'ವ್ಯವಹಾರ'ವೆಂದು, ಜಗಳ ಅಥವಾ ವಾಗ್ವಾದವನ್ನು 'ಮಾತು' ಎಂದು, ನ್ಯಾಯತೀರ್ಮಾನವನ್ನು 'ಜಯ-ಅಪಜಯ ಕಟ್ಟುವುದು' ಎಂದು ನಿರೂಪಿಸಲಾಗಿದೆ. 'ಸಮರ್ಥಿಸು' ಎಂಬುದನ್ನು 'ಜಯಿಸು' ಎಂಬ ಸಂದರ್ಭಕ್ಕೆ ಬಳಸಿದಂತಿದೆ. ಹಾಗೆಯೇ 'ಮಹದಾಜಿ'ಯನ್ನು 'ಮಹಾದಾಜ' ಎಂದು, 'ತಾರ್ಕಣೆಯಲ್ಲಿ' (ದೃಢೀಕರಣದಲ್ಲಿ) ಎಂಬುದನ್ನು 'ತಾರಕಿರ್ಥಿಯಾಲು' ಎಂದು ತಪ್ಪಾಗಿ ಬರೆಯಲಾಗಿದೆ. ಮುಖ್ಯವಾಗಿ, ಈ ಪತ್ರಗಳು ದಾಖಲಿಸಿರುವ 'ಕಾಣಾಚಿ', 'ದಿವಾಣ' ಮೊದಲಾದವು ಕಂದಾಯ ಆಡಳಿತಕ್ಕೆ ಸಂಬಂಧಿಸಿದ ಪಾರಿಭಾಷಿಕಗಳು.

'ಕಾಣಾಚಿ'ಯೆಂಬುದು ದ್ರಾವಿಡಮೂಲ ಶಬ್ದ; ಮಲಯಾಳಂ, ತಮಿಳು, ತೆಲುಗು ಮತ್ತು ಕನ್ನಡಭಾಷೆಗಳಲ್ಲಿ ಬಳಕೆಯಲ್ಲಿದೆ. 'ಕಾಣಿಯಾಡ್ಚಿ'ಯೆಂಬ ರೂಪ ತೆಲುಗು, ಕನ್ನಡ ಮತ್ತು ತಮಿಳುಭಾಷೆಗಳಲ್ಲಿ ದೊರಕುತ್ತದೆ. ಇದಕ್ಕಿರುವ ಅರ್ಥಗಳೆಂದರೆ,

ಆಸ್ತಿಮೇಲಿನ ಹಕ್ಕು, ಆನುವಂಶಿಕವಾಗಿ ಬಂದ ಆಸ್ತಿ ಅಥವಾ ಭೂಮಿಮೇಲಿನ ಹಕ್ಕು; ಅಥವಾ ಪಿತ್ರಾರ್ಜಿತ ವಾರಸುದಾರಿಕೆ ಇತ್ಯಾದಿ.[೧] ಪ್ರಸ್ತುತ ತಾಮ್ರಪತ್ರಗಳ ಮಟ್ಟಿಗೆ, ಇದು 'ವೃತ್ತಿಮೇಲಿನ ಹಕ್ಕು' ಎಂದಾಗುತ್ತದೆ. ಇನ್ನು, ಹಿಂದುಸ್ತಾನೀ ಮತ್ತು ಮರಾಠೀಭಾಷೆಗಳಲ್ಲಿ ದೊರಕುವ 'ದಿವಾಣ' ಶಬ್ದಕ್ಕೆ ಪ್ರಧಾನಮಂತ್ರಿ, ಜಿಲ್ಲೆಯೊಂದರ ಕಂದಾಯ ಆಡಳಿತ ನೋಡಿಕೊಳ್ಳುವ ಅಧಿಕಾರಿಯೆಂತಲೂ ಕನ್ನಡದಲ್ಲಿ ನ್ಯಾಯಾಸ್ಥಾನವೆಂತಲೂ ಅರ್ಥಗಳಿವೆ.[೨] 'ಮಹದಾಜಿ' ಎಂಬ ಮರಾಠೀ ಶಬ್ದಕ್ಕಿರುವ ಅರ್ಥ 'ಮಹಾಯೋಧ'. ಇದೊಂದು ಅಧಿಕಾರಸೂಚಕ ಹಾಗೂ ವೃತ್ತಿಸಂಬಂಧಿ ಶಬ್ದ. ಮಹಾರಾಷ್ಟ್ರದಲ್ಲಿ ಇದು ಮನೆತನ ಸೂಚಕವೂ ಆಗಿದೆ.

ಈ ತಾಮ್ರಪತ್ರಗಳು ಪ್ರಸ್ತಾಪಿಸುವ ಊರಿನ ಸಮಸ್ತರ ಪೈಕಿ ಒಬ್ಬನ ಹೆಸರು ಬಡಾ ಸೋಮಯ್ಯ ಎಂದಿದೆ. 'ಬಡಾ' ಎಂಬುದು ಹಿಂದುಸ್ತಾನೀ ಶಬ್ದ; 'ದೊಡ್ಡ' (ಹಿರಿಯ) ಎಂದು ಇದರ ಅರ್ಥ. ಸ್ಥಳೀಯ ಭಾಷೆಯ ಮೇಲೆ ಅನ್ಯಭಾಷಾ ಪ್ರಭಾವ ಆಗಿದ್ದುದಕ್ಕೆ ಇದು ಉದಾಹರಣೆ. 'ದುಭಾಷಿ' ಎಂಬುದು ಸಹಾ ಹಿಂದುಸ್ತಾನೀ ಮತ್ತು ಮರಾಠೀ ಭಾಷೆಗಳಲ್ಲಿ ಬಳಕೆಯಲ್ಲಿರುವ ಶಬ್ದ. ೧೮೬೩ರ ಕನ್ನಡ ಶಾಸನವೊಂದರಲ್ಲಿ 'ದುಬಾಸಿ' ಎಂಬ ರೂಪವಿದೆ. ದುಭಾಷಿಯೆಂದರೆ ಎರಡು ಭಾಷೆಗಳನ್ನು ಬಲ್ಲವನು. 'ಸರನಾಯಕ' ಎಂಬ ಫಾರ್ಸೀ ಶಬ್ದಕ್ಕಿರುವ ಅರ್ಥ ಸೇನಾಮುಖಂಡ. ಆದರೆ ಈ ಪತ್ರದಲ್ಲಿ ಇದು ವ್ಯಕ್ತಿನಾಮವಾಗಿರುವಂತೆ ತೋರುತ್ತದೆ. ಒಟ್ಟಿನಲ್ಲಿ, ಈ ತಾಮ್ರಪತ್ರಗಳ ಭಾಷೆಯ ಮೇಲೆ ಹಿಂದುಸ್ತಾನೀ ಮತ್ತು ಮರಾಠೀಭಾಷೆಗಳ ಪ್ರಭಾವವೂ ಸ್ವಲ್ಪಮಟ್ಟಿಗೆ ಆಗಿರುವುದು ಸ್ಪಷ್ಟ.

ಸ್ಥಳನಾಮ ಅಥವಾ ಗ್ರಾಮನಾಮಗಳಲ್ಲಿ ಹೆಚ್ಚಿನವು ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಮತ್ತು ಹಿರಿಯೂರು ತಾಲ್ಲೂಕುಗಳಿಗೆ ಸಂಬಂಧಿಸಿದವು. ಗ್ರಾಮನಾಮಗಳ ಅಧ್ಯಯನಕ್ಕೆ ಈ ತಾಮ್ರಪತ್ರಗಳಲ್ಲಿಯ ಊರುಗಳ ಹೆಸರುಗಳು ನೆರವಾಗಬಲ್ಲವಾದರೂ ಇವುಗಳಲ್ಲಿ ವಿಶೇಷತೆಯೇನೂ ಕಂಡುಬರುವುದಿಲ್ಲ. ಇವುಗಳ ಪೈಕಿ ಹಾಲಿ ಜನವಸತಿಯಿಂದ ಕೂಡಿರುವ ಜೀವಂತ ಗ್ರಾಮಗಳು ಬಹುಸಂಖ್ಯೆಯಲ್ಲಿದ್ದು, ಬೇಚರಾಕ್ ಅಥವಾ ಮರೆಯಾದ ಗ್ರಾಮಗಳು ಬೆರಳೆಣಿಕೆಯಷ್ಟಿವೆ. ಕಾಲಾನುಕ್ರಮದಲ್ಲಿ ಗ್ರಾಮಗಳ ಹೆಸರುಗಳಲ್ಲಿ ಆಗಿರುವ ಬದಲಾವಣೆಗಳನ್ನೂ ಗಮನಿಸಬಹುದು. ಉದಾಹರಣೆಗೆ, ಈಗಿನ ಮದುರೆಯು ತಾಮ್ರಪತ್ರದಲ್ಲಿ ಮಧುರೆಗಿರಿಯೆಂದಾಗಿದೆ. ಹಾಗೆಯೇ, ಗಂಜಿಕುಂಟೆ-ಗುಂಜಗುಂಟೆ (ಗಂಜಿಗುಂಟೆ), ಯಿಡಪನಕುಂಟೆ-ವಿಡಪನಕುಂಟೆ, ಕೊನಗಿರಹಳ್ಳಿ-ಕೋನಿಗರಹಳ್ಳಿ ಎಂದಾಗಿವೆ.

ತಾಮ್ರಪತ್ರಗಳು ಉಲ್ಲೇಖಿಸುವ ಚಳ್ಳಕೆರೆ ತಾಲ್ಲೂಕಿನ ಇಂದಿನ ಗ್ರಾಮಗಳೆಂದರೆ, ಮದುರೆ, ಕೋನಿಗರಹಳ್ಳಿ, ನಲ್ಲೂರಹಳ್ಳಿ, ಕಾಪರಹಳ್ಳಿ, ಯೆಲಗಟ್ಟ, ಮರಿಕುಂಟೆ, ಜಾಜೂರು, ಬೆಳಗೆರೆ, ಕಸವಿಗೊಂಡನಹಳ್ಳಿ, ನಾಗಗೊಂಡನಹಳ್ಳಿ, ಯಾದಲಗಟ್ಟ, ಕಾಲುವೇಹಳ್ಳಿ, ಕಾಮಸಮುದ್ರ, ರಡ್ಡಿಹಳ್ಳಿ, ವಿಡಪನಕುಂಟೆ ಮತ್ತು ಗುಂಜಗುಂಟೆ (ಗಂಜಿಗುಂಟೆ). ವ್ಯಾಜ್ಯ ತೀರ್ಮಾನಗೊಂಡ ಸ್ಥಳವಾದ ದೊಡ್ಡೇರಿ ನೆಲೆಸಿರುವುದು

ಚಳ್ಳಕೆರೆಯ ಪೂರ್ವಕ್ಕೆ ೬ ಕಿ.ಮೀ. ದೂರದಲ್ಲಿ; ಚಳ್ಳಕೆರೆಯಿಂದ ಪಾವಗಡಕ್ಕೆ ಸಾಗುವ ಬಸ್‌ಮಾರ್ಗದ ಎಡಬದಿಯಲ್ಲಿ. ಇದೊಂದು ಪ್ರಸಿದ್ಧ ಚಾರಿತ್ರಿಕ ಎಡೆ. ಇದನ್ನು 'ರಣದೊಡ್ಡೇರಿ'ಯೆಂತಲೂ ಕರೆದಿದೆ. ಆಡಳಿತಾತ್ಮಕವಾಗಿ ಇದನ್ನು 'ಗ್ರಾಮಠಾಣ' ಎನ್ನಲಾಗುತ್ತದೆ. ೧೮೮೨ರ ವರೆಗೆ ದೊಡ್ಡೇರಿಯೇ ತಾಲ್ಲೂಕಿನ ಕೇಂದ್ರಸ್ಥಾನವೆಂದು ಗುರುತಿಸಲ್ಪಟ್ಟಿದ್ದಿತು.

ಪ್ರಸ್ತುತ ವ್ಯಾಜ್ಯಕ್ಕೆ ಸಂಬಂಧಿಸಿದ ಮುಖ್ಯ ಎಡೆಯಾದ ಮದ್ದಿಹಳ್ಳಿಯು ಚಳ್ಳಕೆರೆಯಿಂದ ಸುಮಾರು ೪೦ ಕಿ.ಮೀ. ದೂರದಲ್ಲಿರುವಂಥಾ ಗ್ರಾಮ; ಹಿರಿಯೂರು ತಾಲ್ಲೂಕಿನಲ್ಲಿದೆ. ಈ ತಾಲ್ಲೂಕಿನ ಧರ್ಮಪುರ ಮತ್ತು ಚಳ್ಳಕೆರೆ ತಾಲ್ಲೂಕಿನ ಪರಶುರಾಮಪುರಗಳ ಮಧ್ಯೆ ನೆಲೆಸಿರುವ ಗ್ರಾಮವಿದು. ಹಾಗೆಯೇ, ಹಿರಿಯೂರು ತಾಲ್ಲೂಕಿನಲ್ಲಿರುವ ಇತರ ಗ್ರಾಮ ಗಳೆಂದರೆ ಮಲ್ಲಪ್ಪನಹಳ್ಳಿ ಮತ್ತು ಹೊಸಹಳ್ಳಿ. ಮಲ್ಲಪ್ಪನಹಳ್ಳಿಯು ಹರ್ತಿಕೋಟೆಗೆ ೩ ಕಿ.ಮೀ. ಅಂತರದಲ್ಲಿರುವಂಥಾದ್ದು. ನಿಡುಗಲ್ಲುದುರ್ಗವು ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕಿನಲ್ಲಿರುವ ಚಾರಿತ್ರಿಕ ಮಹತ್ವ ಹೊಂದಿದ ನೆಲೆ. ಮುಲುಕಲೋಟಿ ಎಂಬುದು ಚಳ್ಳಕೆರೆ ತಾಲ್ಲೂಕಿನ ಗಡಿಭಾಗದಲ್ಲಿ ನೆಲೆಸಿದ್ದು, ಅನಂತಪುರ ಜಿಲ್ಲೆ, ಕಲ್ಯಾಣದುರ್ಗ ತಾಲ್ಲೂಕಿನಲ್ಲಿ ಗುರುತಿಸಲ್ಪಟ್ಟಿದೆ.

ಇಂದಿಗೂ ಪ್ರಚಲಿತವಿರುವ ಹಲವಾರು ವ್ಯಕ್ತಿನಾಮಗಳು ಈ ತಾಮ್ರಪತ್ರಗಳಲ್ಲಿ ದಾಖಲುಗೊಂಡಿವೆ. ಗ್ರಾಮ್ಯರೂಪದಲ್ಲಿರುವ ಈ ವ್ಯಕ್ತಿನಾಮಗಳು ಸ್ವಾರಸ್ಯಪೂರ್ಣವಾದವು. ಇಲ್ಲಿ ಬರುವ ಕೆಲವು ವ್ಯಕ್ತಿಗಳೆಂದರೆ, ಹೊಟ್ಟೆರಂಗ, ಚಿಕ್ಕ, ತಿಮ್ಮ, ಚೆನ್ನ, ಕೊಡಿ, ದಾಸ, ಮಲ್ಲಣ್ಣ, ಮುದ್ದುರಂಗ, ಬಡಾ (ದೊಡ್ಡ) ಸೋಮಯ್ಯ, ತಮ್ಮಿ, ಹಿರೇಬಾಲಯ್ಯ, ಚಿಕ್ಕಬಾಲಯ್ಯ, ಕರೇಕಾಟಯ್ಯ, ಶಾನಯ್ಯ, ಚೆನ್ನವೀರಯ್ಯ, ಬಸವಣ್ಣಗೌಡ, ಶಿವಣ್ಣಗೌಡ, ಹಂಪಣ್ಣಗೌಡ, ಗಿಡ್ಡೇಗೌಡ (ಗಿಡ್ಡಚೆನ್ನಯ್ಯ), ಚಿಕ್ಕಚೆನ್ನಣ್ಣ(ಯ್ಯ), ಹ(ಹಾ)ರತ್ಯಪ್ಪ, ಹಗರೇಗೌಡ, ಚೆನ್ನಪ್ಪ, ನಾಗಿರೆಡ್ಡಿ (ನಾಗಣ್ಣಗೌಡ), ಬಡಾ(ದೊಡ್ಡ)ಕಾಟ, ಚಿಕ್ಕಕಾಟ, ನೀಲಯ್ಯ, ಕೆಂಚಬಸವಯ್ಯ (ಕೆಂಚಣ್ಣಗೌಡ), ತಮ್ಮಣ್ಣ, ಅಲಿಕಿ, ಹನುಮಯ್ಯ, ಮೂಕ, ದಾಗಿ, ಮರಿಯ, ಅಜಾ (ಅಜ್ಜ?), ವಗಮಲ್ಲ, ನರಸಿಂಹಭಟ್ಟ, ಶೇಷಭಟ್ಟ, ಬಾಲಸಿದ್ದಯ್ಯ, ಸಿಡಿದಲೆ ವೀರಯ್ಯ (ವೀರ?), ಸರನಾಯಕ (?), ಶೇರ್‌ಖಾನ್, ಮಕದುಮ್‌ಖಾನ್, ಲಿಂಗಪ್ಪ, ಮಹದಾಜಿ ರಘುನಾಥಪಂಡಿತ ಮತ್ತು ಶಂಕರಾಜಿಪಂಡಿತ. ಈ ಹೆಸರುಗಳ ಪೈಕಿ 'ಹ(ಹಾ)ರತ್ಯಪ್ಪ' ಎಂಬುದು ವಿಶೇಷವಾಗಿದ್ದು, ಈ ಹೆಸರಿನ ಹಿನ್ನೆಲೆಯಲ್ಲಿ ಹರ್ತಿಕೋಟೆಯ ಪ್ರತಿಷ್ಠಿತ ದೈವ ವೀರಭದ್ರಸ್ವಾಮಿಯ ಪ್ರಭಾವ ಇರುವಂತಿದೆ.

## ತಾಮ್ರಪತ್ರಗಳ ಮಹತ್ವ

ಈ ಜೋಡಿ ತಾಮ್ರಪತ್ರಗಳಲ್ಲಿ ರಾಜಕೀಯ ಚರಿತ್ರೆಗೆ ಸಂಬಂಧಿಸಿದ ಮಹತ್ವದ ಯಾವ ಅಂಶವೂ ಇಲ್ಲ. ಯಾವುದೇ ಅರಸ, ಆತನ ಮನೆತನ, ಸಾಧನೆ ಇತ್ಯಾದಿ

ವಿವರಗಳು ಪ್ರಸ್ತಾಪಗೊಂಡಿಲ್ಲ. ಆದರೆ ಸಮಕಾಲೀನ ಪ್ರಮುಖ ಸಾಮಾಜಿಕ ನಡವಳಿಯೊಂದನ್ನು ದಾಖಲಿಸಿಕೊಂಡಿರುವುದು ಇವುಗಳ ವೈಶಿಷ್ಟ್ಯ. ಪರಿಶಿಷ್ಟಜಾತಿಯೆನಿಸಿದ ಮಾದಿಗ ಸಮುದಾಯದ ಸಾಂಪ್ರದಾಯಿಕ ಕರ್ತವ್ಯ ಕುರಿತು ಈ ಪಟಗಳು ಬೆಳಕು ಹಾಯಿಸುತ್ತವೆ. ಸಾಮಾನ್ಯ ವ್ಯಾಜ್ಯ ಕುರಿತು ಈ ಪತ್ರಗಳು ಪ್ರಸ್ತಾಪಿಸುತ್ತವೆಂದರೂ ಇವು ಹೊಂದಿರುವ ಸಾಮಾಜಿಕ ಆಯಾಮ ಗಮನಾರ್ಹವಾದುದು.

ಪ್ರಸ್ತುತ ತಾಮ್ರಪತ್ರಗಳು ಶಾಸನಪ್ರಕಾರಕ್ಕೆ ಸೇರಿದ ಜಯರೇಖೆ ಅಥವಾ ಜಯಪತ್ರದ ಸ್ವರೂಪದವೆನ್ನಬಹುದು. ಆದರೆ ಇಲ್ಲಿಯ ವ್ಯತ್ಯಾಸವೆಂದರೆ, ವ್ಯಾಜ್ಯದಲ್ಲಿ ಜಯಿಸಿದವರಿಗೆ ನೀಡುವಂಥಾದ್ದು ಜಯರೇಖೆ/ಜಯಪತ್ರವಾದರೆ, ಸೋತವರು ಗೆದ್ದವರಿಗೆ ಬರೆದುಕೊಟ್ಟಂಥದು ಸೋತಪತ್ರ. ಹೀಗೆ ಜಯಪತ್ರ ಮತ್ತು ಸೋತಪತ್ರಗಳ ನಡುವಣ ವ್ಯತ್ಯಾಸ-ಹೋಲಿಕೆಗಳು ವಿಶಿಷ್ಟ ತೆರನಾದವೆನ್ನಬಹುದು. ಸೋತಪತ್ರಗಳೆನಿಸಿರುವ ಪ್ರಸ್ತುತ ತಾಮ್ರಪತ್ರಗಳು ಮಧ್ಯಕಾಲೀನ ಗ್ರಾಮೀಣ ನ್ಯಾಯತೀರ್ಮಾನ ಪದ್ಧತಿಯನ್ನು ವ್ಯಕ್ತಪಡಿಸುತ್ತವೆ. ಮಾದಿಗತನದ ಹಕ್ಕಿಗೆ ಸಂಬಂಧಿಸಿದಂತೆ ವಿವಾದಕ್ಕೆ ತೊಡಗಿದ ಎರಡು ಪಕ್ಷದವರು, ನ್ಯಾಯ ಪಡೆಯಲೋಸುಗ ತೀರ್ಪುಗಾರರ ಸ್ಥಾನದಲ್ಲಿದ್ದ ಊರಿನ ಸಮಸ್ತರು ಮತ್ತು ಆಯಗಾರರ ಸಮ್ಮುಖದಲ್ಲಿ ಹಾಗೂ ದೈವಸಾನ್ನಿಧ್ಯದಲ್ಲಿ ಆಣೆ-ಪ್ರಮಾಣದ ವಿಧಾನವನ್ನು ಅನುಸರಿಸಿದುದು ಕಂಡುಬರುತ್ತದೆ. ಅವರ ಮಕ್ಕಳು-ಮರಿ, ದನ-ಕರುಗಳನ್ನು ಸಾಕ್ಷಿಯಾಗಿಸಿ ಸಂಬಂಧಿಸಿದವರನ್ನು ದೇವರ ಎದುರಿಗೆ ನಿಲ್ಲಿಸಿ ಸತ್ಯಮಾಡಿಸುವ ಕ್ರಮವನ್ನು ಇಲ್ಲಿ ಪಾಲಿಸಲಾಗಿದ್ದು, ಗ್ರಾಮೀಣ ನ್ಯಾಯಪದ್ಧತಿಯಲ್ಲಿ ಇದೊಂದು ಸಾಮಾನ್ಯ ಲಕ್ಷಣವಾಗಿದ್ದಿತು.

ಮಾದಿಗತನದ ಕಾಣಾಚಿವ್ಯಾಜ್ಯ ನಡೆದ ಸಂದರ್ಭವನ್ನು ಕುರಿತು ಈ ತಾಮ್ರಪತ್ರಗಳು ಸೂಕ್ಷ್ಮವಾಗಿ ಪ್ರಸ್ತಾಪಿಸುತ್ತವೆ. ಒಂದುದಿನದ ವ್ಯತ್ಯಾಸದೊಡನೆ ಇವುಗಳಲ್ಲಿ ಕಾಲಮಾನವನ್ನು ಉಲ್ಲೇಖಿಸಲಾಗಿದೆ. ಮೊದಲನೇ ದಿನ ನಡೆದ ವ್ಯಾಜ್ಯತೀರ್ಮಾನದ ವಿವರಗಳು ಎರಡನೇ ದಿನದಂದು ಕೈಗೊಂಡ ತೀರ್ಮಾನದೊಡನೆ ಹೋಲುವುದು ಮಾತ್ರವಲ್ಲದೆ, ಸಂಬಂಧಿಸಿದವರು ಮೊದಲನೇ ದಿನದ ತೀರ್ಮಾನಕ್ಕೆ ಬದ್ಧರಾಗಿರುವಂತೆ ನಿರ್ಬಂಧಿಸುವ ತೆರನಲ್ಲಿ ಈ ಪತ್ರಗಳಿವೆ. ಊರಿನ ಸಮಸ್ತರು ಹಾಗೂ ವಂಶಪಾರಂಪರ್ಯವಾಗಿ ಗ್ರಾಮಕ್ಕೆ ಸೇವೆಸಲ್ಲಿಸುವ ಆಯಗಾರರ ಸಮ್ಮುಖದಲ್ಲಿ ಈ ವ್ಯಾಜ್ಯ ಬಗೆಹರಿದಿದೆ. ಇಲ್ಲಿಯ ಆಯಗಾರರೆಂದರೆ, ಗೌಡ, ಶಾನುಬೋಗ, ತಳವಾರ, ಕಮ್ಮಾರ, ಬಡಗಿ, ಕೆಲಸಿ, ಅಕ್ಕಸಾಲೆ, ಕುಂಬಾರ, ಅಗಸ ಮತ್ತು ಜೋಯಿಸರೇ ಅಲ್ಲದೆ, ಮಠವೊಂದರ ಸ್ವಾಮಿ (ಮಠದಯ್ಯ) ಹಾಗೂ ಸೇನಾಮುಖಂಡ(?). ಆಗ ಆದ ತೀರ್ಮಾನ ವನ್ನು ಮನ್ನಿಸಿ ಬರೆದುಕೊಡಲಾದ 'ಸೋತಪತ್ರ'ಗಳನ್ನು ದೊಡ್ಡೇರಿಯ ಸ್ಥಳೀಯ ಅಧಿಕಾರಿಗಳು (?) ದೃಢೀಕರಿಸಿರುವಂತೆ ತೋರುತ್ತದೆ. ಆದರೆ ತಾಮ್ರಪತ್ರಗಳಲ್ಲಿಯ ಭಾಷೆ ಸಾಕಷ್ಟು ದೋಷಪೂರ್ಣವಾದುದರಿಂದ, ಕೆಲವು ಸಂಗತಿಗಳನ್ನು ಸ್ಪಷ್ಟವಾಗಿ ಗ್ರಹಿಸಲಾಗುವುದಿಲ್ಲ.

ಪ್ರಸ್ತುತ ವ್ಯಾಜ್ಯವಾದರೂ ಮಾದಿಗತನಕ್ಕೆ ಸಂಬಂಧಿಸಿದುದು. 'ಮಾದಿಗತನ' ಎಂಬುದೇ ವಿಶಿಷ್ಟ ಪ್ರಯೋಗ. ಆಧುನಿಕ ಸಂದರ್ಭದಲ್ಲೂ ತಾತ್ವಿಕ ನೆಲೆಯಲ್ಲಿ ಈ ಪಾರಿಭಾಷಿಕವನ್ನು ಸಮರ್ಪಕವಾಗಿ ಬಳಸದಿರುವಾಗ, ೧೮ನೇ ಶತಮಾನದ ಅಂತ್ಯದಲ್ಲಿ ಇದು ಶಾಸನೋಕ್ತವಾಗಿರುವುದು ಗಮನಾರ್ಹ. ವಿಶಿಷ್ಟ ಅರ್ಥದಲ್ಲಿ ಬಳಕೆಗೆ ಬಂದಿರುವ ಈ ಶಬ್ದರೂಪದ ಹಿನ್ನೆಲೆ ಸಹಾ ರೋಚಕವಾದುದು. 'ಮಾದಿಗ' ಎಂಬುದರ ಹಿನ್ನೆಲೆ ಏನೇ ಇದ್ದರೂ ಬುದ್ಧನ ಅನುಯಾಯಿಗಳಾದ 'ಮಹಾಂತ' ಎಂಬ ಶಬ್ದದ ಅಪಭ್ರಂಶವೆಂದು ಭಾವಿಸಲಾಗಿದ್ದರೂ ಈ ಶಬ್ದಕ್ಕೆ 'ಇಗ' ಪ್ರತ್ಯಯ ಸೇರುವುದರೊಡನೆ, ದಲಿತೀಕರಣ ಪ್ರಕ್ರಿಯೆಯ ನೆಲೆಯಲ್ಲಿ ಇದು ನಿಂದಾತ್ಮಕ ರೂಪವಾಗಿ ಮಾರ್ಪಟ್ಟಿರುವುದಂತೂ ದಿಟ! 'ಮಾದಿಗತನ'ವೂ ಇದೇ ಜಾಯಮಾನದ್ದು. ಇಲ್ಲಿ 'ಮತಂಗ' ಎಂದರೆ ಮಾದಿಗ; ಶ್ವಪಚ=ಕೀಳುಜಾತಿಯವನು, ಚಂಡಾಲ, ಅಸ್ಪೃಶ್ಯ; 'ಮಾತಂಗಿ' ಎಂದರೆ ಚಂಡಾಲ ಸ್ತ್ರೀ.[೬]

'ಮಾದಿಗತನ' ಎಂಬುದು ವೃತ್ತಿಸಂಬಂಧಿ ಶಬ್ದ. ಮಾದಿಗತನವೆಂದರೆ, ಊರಿನ ಎಲ್ಲ ಬಗೆಯ ಸೇವಾವೃತ್ತಿಯನ್ನು ಅಥವಾ ಕೀಳುವೃತ್ತಿಯನ್ನು, ಅಂದರೆ ಕೊಳಕಿಗೆ ಸಂಬಂಧಿಸಿದ ಕೆಲಸಗಳನ್ನು ನಿರ್ವಹಿಸುವುದು. ಗ್ರಾಮೀಣ ಪ್ರದೇಶದಲ್ಲಿ ಆಚರಣೆಯಲ್ಲಿದ್ದ 'ಬಿಟ್ಟಿ ಸರದಿ'ಯನ್ನು ಕೈಗೊಳ್ಳುವುದು ಸಹಾ ಮಾದಿಗರ ಪ್ರಥಮ ಕರ್ತವ್ಯವಾಗಿದ್ದಿತು. ಊರಿನ ಯಾವನೇ ಪ್ರತಿಷ್ಠಿತ ವ್ಯಕ್ತಿ ಯಾವುದೇ ಹೊತ್ತಿನಲ್ಲಿ ಯಾವುದೇ ಸೇವಾಕಾರ್ಯಕ್ಕೆ ಮಾದಿಗರನ್ನು ನಿಯೋಜಿಸುವುದೇ 'ಬಿಟ್ಟಿ'. ಮಾದಿಗತನದ ಪ್ರಮುಖ ಹಾಗೂ ಅನಿವಾರ್ಯ ಕಾರ್ಯಗಳೆಂದರೆ, ಊರಿನಲ್ಲಿ ಹಾದಿ-ಬೀದಿಯ ಕಸಗುಡಿಸುವುದು; ದೇವಸ್ಥಾನ ಹಾಗೂ ಸಭೆ-ಸಮಾರಂಭಗಳು ನಡೆಯುವ ಆವರಣಗಳನ್ನು ಶುಚಿಗೊಳಿಸುವುದು; ಗುಡಿ-ಗುಂಡಾರಗಳ ಆಸುಪಾಸು ನೋಡಿಕೊಳ್ಳುವುದು; ಜಾತ್ರೆ-ಪರಿಶೆ-ಪಂಚಾಯಿತಿ ನಡೆಸುವ ಬಗೆಗೆ ತಮಟೆ (ತಪಟೆ ಅಥವಾ ತಪ್ಪಡಿ) ಬಡಿಯುತ್ತಾ ಊರಿನಲ್ಲೆಲ್ಲ ಸಾರುವುದು; ಮದುವೆ, ಮೆರವಣಿಗೆ, ಜಾತ್ರೆ, ಉತ್ಸವ, ಶವಯಾತ್ರೆ ಮೊದಲಾದ ಸಂದರ್ಭಗಳಲ್ಲಿ ಹಾಜರಿರುವುದು; ಸ್ಮಶಾನದಲ್ಲಿ ಶವವನ್ನು ಹೂಳಲು ಸಮಾಧಿ ಅಗೆಯುವುದು; ಮೃತಪಶುಗಳನ್ನು ಹೊತ್ತುಹಾಕುವುದು ಮತ್ತು ಚರ್ಮ ಸುಲಿಯುವುದು; ಚರ್ಮ ಹದಮಾಡುವುದು; ಪಾದರಕ್ಷೆ ಮೊದಲಾದ ಚರ್ಮದ ವಸ್ತುಗಳನ್ನು ಸಿದ್ಧಪಡಿಸಿ ಕೊಡುವುದು; ಅವುಗಳ ದುರಸ್ತಿ ಮಾಡುವುದು ಇತ್ಯಾದಿ.[೭]

ಮಾದಿಗರು ನಿರ್ವಹಿಸುತ್ತಿದ್ದ ಬಿಟ್ಟಿ ಕೆಲಸ ಹಾಗೂ ಮಾದಿಗತನದ ಕರ್ತವ್ಯಗಳಿಗೆ ಸಂಬಂಧಿಸಿದಂತೆ ಆಚರಣೆಯಲ್ಲಿದ್ದ ಒಂದು ವಿಶಿಷ್ಟ ಉದಾಹರಣೆ ಇಂತಿದೆ : "ಚಿತ್ರದುರ್ಗ ಜಿಲ್ಲೆಯ ಲಿಂಗಾಯತರೇ ಹೆಚ್ಚಾಗಿರುವ ಹಳ್ಳಿಯಲ್ಲಿನ ಮಾದಿಗರೆಲ್ಲ 'ಬಿಟ್ಟಿ' ಕೆಲಸದವರು. ವೀರಭದ್ರನ ಉತ್ಸವದಲ್ಲಿ ದಾರಿ ಗುಡಿಸಿ, ನೀರು ಸಿಂಪಿಸಿ ತೋರಣ ಕಟ್ಟುವುದು ಅವರ ಕೆಲಸ. 'ಸುದ್ದಿ ಮುಟ್ಟಿಸುವ' (ಸಾವಿನ ಸುದ್ದಿ ತಿಳಿಸುವ) ಕೆಲಸವು ಅವರದೇ. (ಅಲ್ಲಿ 'ಸುದ್ದಿ' ಬಂತು ಎಂದರೆ ಸಾವಿನ ಸುದ್ದಿ ಬಂತು ಎಂದೇ ಅರ್ಥ).

ಹಳ್ಳಿಯ ಜಮೀನುದಾರರ ಒಂದೊಂದು ಮನೆಗೂ ಒಂದೊಂದು ಮಾದಿಗರ ಮನೆ ಸಂಬಂಧಿಸಿದೆ. ಆಯಾ ಮಾದಿಗ ಆ ಜಮೀನುದಾರನಿಗೆ ಪಾದರಕ್ಷೆ, ಮಿಣಿ ಮಾಡಿಕೊಡಬೇಕು. ಆ ಮನೆಯ ಒಂದು 'ಗಂಡಾಳು' ಮತ್ತು ಒಂದು 'ಹೆಣ್ಣಾಳು' ಆ ಜಮೀನುದಾರ ಹೇಳಿ ಕಳುಹಿಸಿದಾಗಲೆಲ್ಲ ಕೆಲಸಕ್ಕೆ ಹೋಗಬೇಕು. ಆ ಆಳುಗಳಿಗೆ ಬೇರೆ ಕಡೆ ಕೆಲಸಕ್ಕೆ ಹೋದರೆ ಐದುರೂಪಾಯಿ ಸಿಗುತ್ತಿದ್ದರೂ ಅದನ್ನು ಕೈಬಿಟ್ಟು ತಮ್ಮ ಜಮೀನುದಾರನ ಕೆಲಸ ಮಾಡಿಕೊಟ್ಟು ಅವನು ಕೊಡುವ ಒಂದುರೂಪಾಯಿ ತೆಗೆದುಕೊಳ್ಳಬೇಕು. ವರ್ಷಕ್ಕೊಮ್ಮೆ ಆ ಜಮೀನುದಾರನಿಂದ ಅವರಿಗೆ 'ಆಯ' ಸಿಕ್ಕುತ್ತದೆ."[೫]

ಇಲ್ಲಿ ಪ್ರಸ್ತಾಪಿಸಬೇಕಾದ ಪ್ರಮುಖ ಅಂಶವೆಂದರೆ, 'ಮಾದಿಗತನ'ದ ಪ್ರಾಚೀನರೂಪವೇ 'ಮಾದಾರಿಕೆ'. ನೇಕಾರಿಕೆ, ಕಮ್ಮಾರಿಕೆ, ಕುಂಬಾರಿಕೆಗಳಂತೆ ಇದು ಸಹಾ ಮೇಲೆ ಪ್ರಸ್ತಾಪಿಸಿದ ಮಾದಿಗವೃತ್ತಿಯನ್ನು ಸೂಚಿಸುವಂಥಾದ್ದು. ೧೫-೧೬ನೇ ಶತಮಾನಗಳ ಶಾಸನಗಳಲ್ಲಿ ಇದರ ಉಲ್ಲೇಖ ದೊರೆಯುತ್ತದೆ.[೬] ಆದರೆ ಶಾಸನತಜ್ಞರು ಅರ್ಥೈಸಿರುವಂತೆ, ಮಾದರಿಕೆ ಎಂಬುದೊಂದು ತೆರಿಗೆ/ಸುಂಕ. ಇದು ಮಾದಿಗರು ಕೊಡುತ್ತಿದ್ದ ಸುಂಕವೆಂಬುದು ಅವರ ಅಭಿಪ್ರಾಯ. ಕೆಲವರು ಭಾವಿಸುವಂತೆ, "ಮಾದಿಗ ಕೆಲಸದಲ್ಲಿ ನಿರತನಾಗಿರುವುದು ಮಾದಾರಿಕೆ ಎಂದು. ಆದರೆ ಗೌಡ, ತಳವಾರರಂತೆ ಮಾದಿಗರು ಯಾವ 'ಅಧಿಕಾರ' ವೃತ್ತಿ ಮಾಡುವಂತಿರಲಿಲ್ಲವಾಗಿಯೂ ಈ ಪದ ತೆರಿಗೆ, ಸುಂಕಗಳ ಪಟ್ಟಿಯಲ್ಲಿ ಮಾತ್ರ ಕಂಡುಬರುವುದರಿಂದಲೂ 'ಇಕೆ', ಸುಂಕವನ್ನು ಸೂಚಿಸುತ್ತದೆಂದೇ ಹೇಳಬೇಕು. ಮಾದಿಗರು ಮಾಡುತ್ತಿದ್ದ ಚರ್ಮದ ಕೆಲಸಕ್ಕೆ ಸಂಬಂಧಿಸಿ ಮಾತ್ರ ಈ 'ತೆರಿಗೆ' ಇರುವಂತಿದೆ."[೭] ಮಾದಾರಿಕೆಯೆಂದರೆ ತೆರಿಗೆ/ಸುಂಕವೆಂತಲೇ ವ್ಯಾಪಕವಾಗಿ ಭಾವಿಸಿರುವುದು ಈ ಮೇಲಿನ ಉಲ್ಲೇಖಗಳಿಂದ ದೃಢಪಡುತ್ತದೆ. ಆದರೆ ಇಲ್ಲಿರುವ ನಿರ್ಣಯಗಳು ತಪ್ಪು.

ಮೇಲಿನ ಹೇಳಿಕೆಯಲ್ಲಿ, ಮಾದಿಗ ಕೆಲಸದಲ್ಲಿ ನಿರತನಾಗಿರುವುದು ಮಾದರಿಕೆ ಎಂಬುದೇನೊ ಸರಿ. ಆದರೆ ಅಂತ್ಯಪ್ರತ್ಯಯ 'ಇಕೆ' ಎಂಬುದು ಸುಂಕವನ್ನು ಸೂಚಿಸುತ್ತದೆಂಬುದು ಮಾತ್ರ ವಿಲಕ್ಷಣವಾದ ಅಭಿಪ್ರಾಯ. 'ಇಕೆ/ಇಕ್ಕೆ' ಎಂಬುದಕ್ಕೆ ಭಾವನಾಮಗಳನ್ನು ಸಾಧಿಸುವ ಒಂದು ತದ್ಧಿತ ಪ್ರತ್ಯಯವೆಂದು ವ್ಯಾಖ್ಯಾನಿಸಲಾಗಿದೆಯೇ ವಿನಾ ತೆರಿಗೆ/ಸುಂಕ ಎಂದಲ್ಲ. ಉದಾಹರಣೆಗೆ, ಕಮ್ಮಾರಿಕೆ ಇತ್ಯಾದಿ. ವೃತ್ತಿಯ ಸ್ಥಿತಿಯನ್ನೂ ನೆಲೆಯನ್ನೂ ಸೂಚಿಸುವಂಥಾದ್ದು 'ಇಕೆ/ಇಕ್ಕೆ'. ಇದು ಸುಂಕವೆನ್ನಲು ಎಲ್ಲಿಯೂ ಆಧಾರ ದೊರೆಯುವುದಿಲ್ಲ. ಆದ್ದರಿಂದ ವೃತ್ತಿಗಳ ಮೇಲೆ ವಿಧಿಸಿದ ಸುಂಕಗಳ ಸಾಲಿನಲ್ಲಿ ಮಾದಾರಿಕೆ ಎಂಬುದಿದ್ದರೂ ಅದೇ ಸುಂಕ ಎಂದಾಗುವುದಿಲ್ಲ. ಇದನ್ನು ಮುಖ್ಯವಾಗಿ ಗಮನಿಸಬೇಕು. ಮಾದಾರಿಕೆಯನ್ನು ಉಲ್ಲೇಖಿಸುವ ಎಲ್ಲ ಶಾಸನಗಳಲ್ಲಿಯ ಸಂದರ್ಭಗಳೂ ಇದನ್ನೇ ಸ್ಪಷ್ಟಪಡಿಸುತ್ತವೆ. ಆದ್ದರಿಂದ ಮಾದಾರಿಕೆ ಎಂಬುದು ವೃತ್ತಿಯೇ ವಿನಾ ಸುಂಕವಲ್ಲ.

ಹಾಗೆಯೇ, 'ಮಾದಾರಿಕೆವಟ್ಟ' (ಮಾದರಿಕೆ+ಪಟ್ಟ) ಮತ್ತು 'ಮಾದಾರಿಕೆವಟ್ಟಗಟ್ಟಿಗೆ' ಎಂಬ ಉಲ್ಲೇಖಗಳಿಗೆ ಸಂಬಂಧಿಸಿದಂತೆಯೂ ಸಂಶೋಧಕರು ವಿಚಾರ ಮಾಡಿದ್ದಾರೆ.[೮] ಇಲ್ಲಿ 'ಮಾದಾರಿಕೆವಟ್ಟ'ವೆಂದರೆ ಮಾದಿಗ(ಮಾದರ)ರ ಮುಖ್ಯಸ್ಥನ ಸ್ಥಾನವೆಂದು; ಮಾದಿಗರ ಸುಂಕವನ್ನು ಸಂಗ್ರಹಿಸುವುದು ಹಾಗೂ ಅವರನ್ನು ನಿಯಂತ್ರಿಸುವುದು ಅವನ ಕೆಲಸವೆಂದು ಅಭಿಪ್ರಾಯಪಡಲಾಗಿದೆ. ಇಂಥಾ ಮಾದಾರಿಕೆಪಟ್ಟವನ್ನು ಪಡೆದುಕೊಂಡ ಮುಖ್ಯಸ್ಥನ ಕೈಗೆ ಅವನ ವೃತ್ತಿಸೂಚಕವಾದ 'ಕೋಲ'ನ್ನು ಕೊಡುತ್ತಿದ್ದು, ತನ್ನ ಸ್ಥಾನಸೂಚಕವಾಗಿ ಅವನು ಹಿಡಿಯುತ್ತಿದ್ದ ದಂಡವೇ 'ಮಾದಾರಿಕೆವಟ್ಟಕಟ್ಟಿಗೆ' ಇರಬೇಕೆಂದೂ ಊಹಿಸಲಾಗಿದೆ. ಇದಕ್ಕಿರುವ ಹಿನ್ನೆಲೆ ಯಾವುದೋ ಯಾವ ಶಾಸನದಲ್ಲಿ ಉಲ್ಲೇಖಗೊಂಡಿದೆಯೋ ಸ್ಪಷ್ಟವಿಲ್ಲ. ಅಲ್ಲದೆ, 'ಮಾದಾರಿಕೆವಟ್ಟ'ವನ್ನು ಹೊಲೆಯರಿಗೆ ಕೊಡಲಾಗುತ್ತಿದ್ದಿತೆಂಬ; ಹಾಗೂ ಹೊಲೆಯನ ಕೈಗೆ ಅವನ ವೃತ್ತಿಸೂಚಕವಾದ 'ಕೋಲ'ನ್ನು ಕೊಡುತ್ತಿದ್ದರೆಂಬ ಅಭಿಪ್ರಾಯ ಸಹಾ ಸರಿಯಾದುದಲ್ಲ. 'ಮಾದಾರಿಕೆ' ಎಂಬುದು ಮಾದಿಗರಿಗೆ ಸಂಬಂಧಿಸಿದುದೇ ವಿನಾ ಹೊಲೆಯರಿಗಲ್ಲವೆಂಬುದನ್ನು ಗಮನಿಸಬೇಕು. ಸಂಶೋಧಕರು ಇಂಥಾ ಸೂಕ್ಷ್ಮ ಅಂಶಗಳನ್ನು ಸರಿಯಾಗಿ ಪರಿಶೀಲಿಸಿ ಗೊಂದಲಗಳನ್ನು ಪರಿಹರಿಸಿಕೊಳ್ಳುವುದು ಅಗತ್ಯ.

ಈ ಹಿನ್ನೆಲೆಯಲ್ಲಿ, ಮದ್ದಿಹಳ್ಳಿ ಮಾದಿಗ ಕೆಲಸದ ಹಕ್ಕನ್ನು ಅಥವಾ ಮಾದಿಗತನದ ಕಾಣಾಚಿಗೆ ಸಂಬಂಧಿಸಿದಂತೆ ಉಂಟಾದ ವ್ಯಾಜ್ಯವನ್ನು ಸೂಕ್ತವಾಗಿ ಅರ್ಥೈಸಬಹುದು. ಎರಡು ಪಕ್ಷಗಳ ನಡುವೆ ಏರ್ಪಟ್ಟ ಈ ವ್ಯಾಜ್ಯವು, ಊರಿನ ಸಮಸ್ತರು ಮತ್ತು ಆಯಗಾರರ ಸಮ್ಮುಖದಲ್ಲಿ ತೀರ್ಮಾನಗೊಂಡು ಬರಹರೂಪದಲ್ಲಿ ದಾಖಲಾದುದನ್ನು ಗಮನಿಸಿದರೆ, ಮಾದಿಗತನಕ್ಕೆ ಇದ್ದ ಬೇಡಿಕೆ ಮತ್ತು ಮಹತ್ವಗಳು ಮನದಟ್ಟಾಗುತ್ತವೆ. ದಲಿತರ ಸಾಮಾಜಿಕ ಚರಿತ್ರೆಯಲ್ಲಿ ಇದೊಂದು ವಿಶಿಷ್ಟ ಸಂದರ್ಭವೆನ್ನಬಹುದು. ದಲಿತರ ಸ್ಥಾನಮಾನಗಳು ಮಾತ್ರವಲ್ಲದೆ, ವ್ಯವಸ್ಥೆಯ ಭಾಗವಾಗಿ ಪರಂಪರೆಯಿಂದ ಮಾದಿಗ ಸಮುದಾಯದವರು ನಿರ್ವಹಿಸುತ್ತಾ ಬಂದ ಮಾದಿಗತನದ ಸಾಮಾಜಿಕ ಆಯಾಮವನ್ನೂ ವಿಶ್ಲೇಷಿಸಬಹುದು.

ಪ್ರಸ್ತುತ ತಾಮ್ರಪತ್ರಗಳಲ್ಲಿ ದೊಡ್ಡೇರಿಠಾಣ್ಯದ ಪ್ರಸ್ತಾಪವಿದೆ. ಈ ಠಾಣ್ಯದಲ್ಲಿದ್ದ ಅಧಿಕಾರಿವರ್ಗದವರು, ಈ ವ್ಯಾಜ್ಯದ ತೀರ್ಮಾನವನ್ನು ದೃಢೀಕರಿಸಿ ಅಧಿಕೃತಗೊಳಿಸಿರುವುದು ಸ್ಪಷ್ಟಪಡುತ್ತದೆ. ಈ ಅಧಿಕಾರಿಗಳು ಮತ್ತು ಅವರ ಸಿಬ್ಬಂದಿಯವರ ಹೆಸರುಗಳನ್ನೂ ಈ ಪತ್ರಗಳು ಪ್ರಸ್ತಾಪಿಸುತ್ತವೆ. ಮೇಲೆಯೇ ಹೇಳಿದಂತೆ, ೧೮೮೨ರ ವರೆಗೆ ದೊಡ್ಡೇರಿಯೇ ತಾಲ್ಲೂಕು ಕೇಂದ್ರವಾಗಿದ್ದಿತು. ಇಂದಿಗೂ ಇದನ್ನು 'ಗ್ರಾಮಠಾಣ' ಎನ್ನಲಾಗುತ್ತದೆ. ಈ ತಾಮ್ರಪತ್ರಗಳು ಈ ಕಾಲಕ್ಕೂ ಮುಂಚಿನವೆಂಬುದು ಸ್ಪಷ್ಟ. ಆಗ ಈ ಠಾಣ್ಯದಲ್ಲಿ ಅಧಿಕಾರಿಯಾಗಿದ್ದವನು ಮಹದಾಜಿ ರಘುನಾಥಪಂಡಿತನ ಸೋದರ(?) ಶಂಕರಾಜಿಪಂಡಿತ ಎಂದು ತೋರುತ್ತದೆ. ಆದರೆ ಈತ ಅಧಿಕಾರಿಯೊ ಅಲ್ಲವೊ ಅಥವಾ ಯಾವ ದರ್ಜೆಯ

ಅಧಿಕಾರಿಯಾಗಿದ್ದನೊ ತಿಳಿದುಬರುವುದಿಲ್ಲ. ಈ ವ್ಯಾಜ್ಯ ಕುರಿತ 'ಸೋತಪತ್ರ'ಗಳನ್ನು ಈತನೇ ದೃಢೀಕರಿಸಿರುವನೆಂಬುದನ್ನು ಒಪ್ಪಲಡ್ಡಿಯಿಲ್ಲ. ಈತನ ಅಧೀನದಲ್ಲಿ ರಾಣ್ಯದ ಸರನಾಯಕ, ಶೇರ್‌ಖಾನ್, ಮಕುದುಮ್‌ಖಾನ್ ಮೊದಲಾದವರು ಇದ್ದಿರಬಹುದು. ಏನೇ ಇದ್ದರೂ ದೊಡ್ಡೇರಿಯಲ್ಲಿ ಇಂಥಾ ಆಡಳಿತ ವ್ಯವಸ್ಥೆ ಇದ್ದ ಬಗೆಗೂ ಯಾವುದೇ ಸೂಚನೆ ದೊರೆಯುವುದಿಲ್ಲ. ಸೋತಪಕ್ಷದವರು 'ದಿವಾಣಕ್ಕೆ ಅಪರಾಧ (ದಂಡ) ಕೊಡುವ' ಪ್ರಸ್ತಾಪವಿದ್ದು, ಈ ದಿವಾಣ (ರಾಜಾಸ್ಥಾನ/ನ್ಯಾಯಾಸ್ಥಾನ) ಇದ್ದುದು ದೊಡ್ಡೇರಿಯಲ್ಲೊ ಬೇರೆಡೆಯಲ್ಲೊ ಸದ್ಯಕ್ಕೆ ತಿಳಿಯದು. ದಂಡವಾಗಿ ೧೨೦ ಗ (ಗದ್ಯಾಣ) ಅಥವಾ ಹ (ಹಣ)ವನ್ನು ತೆರುವ ಪದ್ಧತಿ ಬಗೆಗೂ ಪರಿಶೀಲಿಸಬೇಕಿದೆ.

* * *

ಹಿಂದಿನ ಸಮಾಜದಲ್ಲಿ, ಪರಿಶಿಷ್ಟಜಾತಿಯವರಿಗೆ ಸಂಬಂಧಿಸಿದ ವ್ಯಾಜ್ಯಗಳೂ ಊರಿನ ಸಮಸ್ತರು, ಆಯಗಾರರು ಮತ್ತು ಅಧಿಕಾರಿವರ್ಗದವರ ಸಮ್ಮುಖದಲ್ಲೇ ತೀರ್ಮಾನವಾಗುತ್ತಿದ್ದವೆಂಬುದು ಗಮನಾರ್ಹ. ಊರಿನ ಪ್ರಮುಖ ದೈವವನ್ನು ಸಾಕ್ಷಿಯಾಗಿರಿಸಿ ಆಣೆ-ಪ್ರಮಾಣದಂಥಾ ವಿಧಾನದಿಂದಲೂ ವ್ಯಾಜ್ಯಗಳನ್ನು ಬಗೆಹರಿಸಲಾಗುತ್ತಿದ್ದಿತು. ಆದರೆ ಸ್ಥಳೀಯ ನ್ಯಾಯದಾನ ಪದ್ಧತಿಯಲ್ಲಿ ದಲಿತರನ್ನು ಪ್ರತ್ಯೇಕವಾಗಿ ವಿಚಾರಣೆಗೆ ಗುರಿಪಡಿಸುತ್ತಿದ್ದಂತೆ ತೋರುವುದಿಲ್ಲ. ಇತರ ಜಾತಿವರ್ಗಗಳವರಂತೆಯೇ ದಲಿತರೂ ತಮ್ಮ ತಪ್ಪಿಗೆ ವಿಧಿಸಿದ ಪೂರ್ತದಂಡವನ್ನು ನ್ಯಾಯಾಲಯ ಅಥವಾ ನ್ಯಾಯಮಂಡಲಿಗೆ ಕಟ್ಟಲು ಸಿದ್ಧರಿದ್ದರೆಂಬುದು ಈ ತಾಮ್ರಪತ್ರಗಳಿಂದ ತಿಳಿದುಬರುತ್ತದೆ. ಈ ಸಮುದಾಯಗಳವರಿಗೆ ಸಂಬಂಧಿಸಿದ ವ್ಯಾಜ್ಯತೀರ್ಮಾನಗಳನ್ನು ಸಹಾ ಬರಹ/ದಾಖಲೆ ರೂಪದಲ್ಲಿ ಇಟ್ಟುಕೊಳ್ಳಲಾಗುತ್ತಿದ್ದಿ ತೆಂಬುದಕ್ಕೆ ಈ ತಾಮ್ರಪತ್ರಗಳೇ ಸಾಕ್ಷಿ ನುಡಿಯುತ್ತವೆ.

ಮಾದಿಗತನದಂಥಾ ಊರಿನ ಕೀಳು/ಕೊಳಕುವೃತ್ತಿಗಳ ನಿರ್ವಹಣೆ ಸಹಾ ಸಾಂಸ್ಥೀಕರಣಗೊಂಡುದನ್ನು, ಇದು ಸಹಾ ಪ್ರಚಲಿತವಿದ್ದ ರೀತಿ-ರಿವಾಜುಗಳ ವ್ಯಾಪ್ತಿಗೊಳಪಟ್ಟಿದುದನ್ನು, ವ್ಯವಸ್ಥೆ ಮತ್ತು ಸಮಾಜಗಳು ಈ ವೃತ್ತಿಗೆ ಮಾನ್ಯತೆ ನೀಡಿದುದನ್ನು ಪ್ರಸ್ತುತ ತಾಮ್ರಪತ್ರಗಳು ಸಮರ್ಥಿಸುತ್ತವೆ. ಮುಖ್ಯವಾಗಿ, ಇತ್ತೀಚಿನವರೆಗೆ, ಮಾದಿಗತನ ಅಥವಾ ಮಾದಾರಿಕೆಯೆಂಬುದು ಮಾದಿಗ ಸಮುದಾಯದವರಿಗಷ್ಟೆ ಮೀಸಲಾಗಿದ್ದ ಸಾಮಾಜಿಕ ಕರ್ತವ್ಯವಾಗಿದ್ದಿತು ಮಾತ್ರವಲ್ಲ, ಊರಿನ ಅತ್ಯಂತ ಕೊಳಕು ಕೆಲಸಗಳೆಲ್ಲ ಅವರ ಪಾಲಿನವೇ ಆಗಿರುತ್ತಿದ್ದವೆಂಬುದನ್ನು ಅಧಿಕೃತವಾಗಿ ಸಮರ್ಥಿಸುತ್ತವೆ.

## ತಾಮ್ರಪತ್ರಗಳ ಪಾಠ

**೧ನೇ ತಾಮ್ರಪತ್ರ -**

ಮುಂಬದಿ

ಶಾಲ್ಲಿವಾಹನ ಶೆಕ ಯಿವನಾಮ ಸಂವತ್ಸರದ ವರೂ
ಶೆಂಗಳು ೧೭೧೬ನೆ ವರೂಶಾ ಸ್ರಾವಣ ಸುಧ ೧ಯಾಲು

ದೊಡೆರ್‍ರಿ ಮಾದಿಗರ ಹೊಟೆರಂಗನವರಗೆ ಹರತಿಸಿಮೆ ಮ
ಲಪನಹಳಿ ಮಾದಿಗರ ಚಿಕನು ಮಧುರೆಗಿರ್‍ರಿಯಾ ತ್ರಿಂಮ
ನು ಬೆಳುಗೆರೆ ಚೆಂನ ಕೊಡಿ ದಾಸನು ಅಂತ್ತು ಜನಾ ೫ ಬ
ರಕೊಟ ಸೊತಪತ್ರ ಕ್ರಮವೆಂತ್ತೆಂದರೆ ಮದಿಹಳಿ ಮಾ
ದಿಗತನದ ಕಾಣಾಚಿ ನಂಮದು ಅಂಬೊಹಾಗೆ ನಾವು
ದೊಡೆರ್‍ರಿ ಗವುಡ್ರ ಮಲಣನ ಮಮಕಳ ಕ್ಯಯಾ ನುಡಸಿನು
ಅಂಬೊಹಾಗೆ ಹಿಡೆಲ್ಲಾಗಿ ಹಿಡದಾಗೆ ಯಿದ ಸಮಸ್ತರೂ
ಬೆಳುಗೆರೆ ಮುದರಂಗ ಬಡ ಸೊಮಾ ನಲೂರಹಳಿ ತಂ
ಮಿ ಕೊನಗಿರಹಳಿ ಹಿರೆಬಾಲಯ ಚಿಕಬಾಲಯಾ
ಕಾಪರಹಳಿ ಕರೆಕಾಟ ಯಲಗಟೆ ಶಾನಯ ಮರಕುಂ
ಟೆ ಚೆನವಿರಯ ಜಾಜುರ ಬಸವಣಗವುಡ ಕಾಮಸಮು
ದ್ರ ಶಿವಣಗವುಡ ಕಸವಿಗೊಂಡನಹಳಿ ಹಂಪನಗೌಡ ನಾಗಿ
ಗೊಂಡನಹಳಿ ಗಿಡಗೌಡ ಯಾದಲಕಟೆ ಚಿಕಚೆನಣ ಯಿಡ
ಪನಕುಂಟೆ ಹರತ್ಯಪ ಹೊಸಹಳಿ ಹಗರೆಗೌಡ ಕಾಲವೆಹಳಿ
ಚೆನಪ ರಡಿಹಳಿ ನಾಗಿರೆಡಿ ಯಿ ಸಮಸ್ತರೂ ದೊಡೆರ್‍ರಿ ಗೌಡ ಕೆಂಚ
ಬಸವಯಾನು ಕರದು ಮದಿಹಳಿ ಮಾದಿಗತನದ ಕಾಣಾಚಿ ಮ
ಲಪನಹಳಿ ಚಿಕನು ತಂನದು ಅಂಬೊಹಾಗೆ ನಿಂನ ಸಂಗಡ
ನುಡಸೆನು ಅಂಬೊಹಾಗೆ ಹೆಳುತ್ತಾನೆ ನಿನು ದೆವದ್ವಾರದಲು
ಧರ್ಮಾಧರ್ಮಾವಿದಹಾಗೆ ನುಡದು ಯಿವತ್ತು ವಂದು ದಿವಸ ಜ
ಯಿಸಿ ಹೊಗು ಅನಲಾಗಿ ಕೆಂಚಣಗವುಡ ನುಡದು ಮದಿಹ
ಳಿ ಮಾದಿಗತನದ ಕಾಣಾಚಿ ಹೊಟೆರಂಗನವರದೆ ಸರ್‍ರಿ ಮ
ಲಪನಹಳಿ ಚಿಕಗೆ ಕಾರಣವಿಲ್ಲ ಯಿ ಮಾತು ಸಮಸ್ತರೂ
ಕೆಳಿ ಜಯ ಅಪಜಯ ಕಟಿದರೂ ದೊಡೆರ್‍ರಿ ವಿರಭದ್ರ
ದೆವರ ಗುಡಿಮುಂದೆ ಮಕಳ ಮರ್‍ರಿ ವಳಗಾಗಿ ಯಿವತ್ತು ವಂ
ದು ದಿವಸ ಜಯಿಸಿದನು ಮದಿಹಳಿ ಮಾದಿಗತನ
ಹೊಟೆರಂಗದೆ ಸರಿ ನಂಮಗೆ ಕಾರಣವಿಲ್ಲಾ ನಾ

ಹಿಂಬದಿ

ವು ಹಿಡದಕ್ಕೆ ಅಪರಾದ ಕೊಟು ಹೊಗುತಯಿದೆ
ವೆ ಯಾಂದು ಕೊಟ ಸೊತಪತ್ರ ಮುಂದೆ ನಂಮ ಪುತ್ರ ಪ
ವುತ್ರ ಹಿಡೊದಕ್ಕೆ ಕಾರಣವಿಲ್ಲಾ ಯಿದಕ್ಕೆ ಸಾಕ್ಷಿ ದೊಡೆರ್‍ರಿ
ಗವುಡ ಕೆಂಚಣಗೌಡ ಕೊಡಿ ವಿರಾ ಶಾನಬೊಗ

ತಂಮಣ ತಳವಾರ ಅಲಿಕಿ ಕಂಮಾರ ಹನುಮಯ ಬಡಗಿ
ಮುಕ ಕೆಲಸಿ ದಾಗಿ ಅಗಸಾಲೆ ಮರ್‍ರಿಯ ಕುಂಬಾರ ಅ
ಜಾ ಅಗಸರ ವಗಮಲ್ಲಾ ಜೊಸಿ ನರಸಿಂಭಟ ಶೆಶೆಭಟ
ಮಟದ ಬಾಲಸಿದಯಾ ರಾಣೆದ ಸರನಾಯಕ ಸಿರಖಾ
ನ ಮಕದುಮಖಾನ ಯಿ ಮಲಪನಹಳಿ ಚಿಕನ ಸನಮತ
ದಿಂದಾ ಬರದಾತ ದುಬಾಸಿ ಲ್ಲಿಂಗಪನ ಸ್ವಹಸ್ತ ಬರಹ ||

೨ನೇ ತಾಮ್ರಪತ್ರ -

ಮುಂಬದಿ

ಶಾಲ್ಲಿವಾಹನ ಶಕ ಯಿವನಾಮ ಸಂವತ್ಸರದ ವರೂಶಂ
ಗಳು ೧೭೧೬ನೆ ವರೂಶಾ ಸ್ರಾವಣ ಸುಧ ೨ ಚಂದ ೩೦ನೆ ಜಿಲಹೆ
ಜ ಗುರುವಾರ ದೊಡೆರಿಟಾಣ್ಯವುರಾ || ಮಹಾದಾಜ ರಗುನಾ
ಥಾಪಂಡಿತರ ವಡಹುಟಿದ ಶೆಂಕರಾಜಿಪಂಡಿತರ ತಾ
ರಕಿರ್ಥಿಯಾಲು ಹರತಿಸಿಮೆ ಮಲಪನಹಳಿ ಮಾದಿಗರ
ಚಿಕನು ಮಧುರೆಗಿರ್‍ರಿಯ ತಿಂಮ ಬೆಳುಗೆರೆ ಚಂನ ಕೊಡಿ
ದಾಸನು ಅಂತ್ತು ಜನಾ ೫ ಬರಕೊಟ ಸೊಲಪತ್ರ ಕ್ರಮವೆ
೦ತೆಂದರೆ ಮದ್ದಿಹಳಿ ಮಾದಿಗತನದ ಕಾಣಾಚಿ ಮಾತಿಗೆ
ಹೊಟೆರಂಗನವರಗು ನಮಗು ವೆವಹಾರ ಬಿಳಲಾಗಿ ಪೂರ್ವ ಮದಿ
ಹಳಿ ಯಾಡಕ್ಕೈ ದಾಸನು ನಿಡುಗಲದುರ್ಗದಲು ನಂಮ ಪೂಜಾರ್‍ರಿ ತಿಂ
ಮಗು ಜಯಾ ಸಂವತ್ಸರದ ಪುಶ ಸುಧ ೧ಯಾಲು ದಾಸನು ವಾಲೆ ಬ
ರಕೊಟದ ವಿವರಾ ಮದಿಹಳಿ ಮಾದಿಗತನದ ಕಾಣಾಚಿ ತಂಮದು ಅ
೦ಬೊಹಾಗೆ ವಾಲೆಬರದು ಕೊಟುಯಿದನು ಆ ಪ್ರಕಾರಕ್ಕೆ ದೊಡೆ
ರ್‍ರಿಸಿಮೆ ಗವುಡ್ರ ಬೆಳುಗೆರೆ ಮುದರಂಗ ನಲೊರಹಳಿ ತಂಮಿ ಕೊನಗಿ
ರಹಳಿ ಹಿರೆಬಾಲಯ ಚಿಕಬಾಲಯ ಕಾಪರಹಳಿ ಕರೆಕಾ
ಟಯಾ ಯಲಗಟೆ ಶಾನಯಾ ಬೆಳುಗೆರೆ ಬಡ ಸೊಮಯಾ ಮ
ರಕುಂಟೆ ಚೆಂನವಿರಯಾ ಜಾಜುರ ಬಸವಣಗವುಡ ಕಾಮಸ
ಮುದ್ರ ಶಿವಣಗವುಡ ಕಸವಿಗೊಂಡನಹಳಿ ಹಂಪಣಾ ನಾಗಿಗೊಂ
ಡನಹಳಿ ಗಿಡಚೆನಯಾ ಯಾದಲಕಟ್ಟೆ ಚಿಕಚೆನಯಾ ಹಾರತ್ಯಪ
ಹೊಸಹಳಿ ಹಗರೆಗವುಡ ಕಾಲೆಹಳಿ ಕಂಚಗಾರ ಚೆನಪ ರ
ಡಿಹಳಿ ನಾಗಣಗೌಡ ಯೀ ಸಮಸ್ತರ ಮುಂದೆ ಗೌಡ್ರ ಮಲಣನ ಮಂ
ಮಗ ಕೆಂಚಣಗೌಡನು ದೊಡೆರ್‍ರಿ ವಿರಭದ್ರದೆವರಗುಡಿ ಮುಂದೆ
ನಿಜ ಆಶಾಡ ಸುಧ ೧೦ ಗುರವಾರ ಪ್ರಮಾಣಪೂರ್ವಕವಾಗಿ ನುಡ

ದು ಪೂರ್ವಆರಭ್ಯದಿಂದ ಮದಿಹಳಿ ಮಾದಿಗತನದ ಕಾಣಾ
ಚಿ ಹೊಟೆರಂಗನವರದು ಹವುದು ಯಿ ಪ್ರಾಕಾರಾ ನು
ಡೆಲ್ಲಾಗಿ ಸಮಸ್ತರೂ ಕುಡಿ ಹೆಳಿದ ಯಿ ಮಾತ್ತಿಗೆ ಯಿವ
ತು ವಂದು ದಿವಸ ಜಯಾಸಬೆಕು ಯಂದು ಹೆಳ
ಲ್ಲಾಗಿ ಯಿ ತಿಥಿ ಆರಭ್ಯದಿಂದ ಶ್ರಾವಣ ಸುಧ ಬಿದಗೆ
ಗುರವಾರ ತಂನ ಮಕಳು ಮರ್‍ರಿ ದನಾ ಕರು ಸಾಹಾ ಜ
ಯಿಸಿದನು ಮದಿಹಳಿ ಮಾದಿಗತನಾ ಹೊಟೆರಂಗ
ನವರದು ಹವುದು ಅವರಗೆ ಜಯಾ ಆಯಿತ್ತು ।

ಹಿಂಬದಿ

ನಂಮಗು ಸೊಲ ಆಯಿತು ಯಿದಕ್ಕೆ ಸಾಕ್ಷಿ ಮು
ಲುಕಲೊಟಿ ಸಿಡದಲೆ ವಿರಯಾ ಕಾಪರಹಳಿ
ಕರೆಕಾಟ ಬಡಕಾಟನ ಮಗ ಚಿಕಕಾಟ ಗಂಜಿಕುಂ
ಟೆ ನಿಲಯಾ ನಹುಚ(?) ಕಾಲೆಹಳಿ ಚೆಂನಪ ಯಿ ಸಮ
ಸ್ತರ ಮುಂದೆ ನಾವು ಜನಾ ೫ ಕೊಟ ಸೊತಪತ್ರ ಮುಂದೆ
ನಂಮ ಪಾರಂಪರ್‍ರಿಯಾಲು ಹಿಡೊದಕ್ಕೆ ಕಾರಣವಿಲ್ಲಾ
ಯಿಂನು ನಾವು ಹಿಡದರೆ ದಿವಾಣಕ್ಕೆ ಅಪರಾದ ಗ ೧೨೦
ಹ ಕೊಡಲುಳವರು ಯಂದು ಕೊಟ ಸೊತಪತ್ರ ಯಿವರ ಸ
ನಮತದಿಂದ ಬರದಾತ ದೊಡೆರ್‍ರಿ ದುಬಾಸಿ ಲ್ಲಿಂಗಪನ ಬ
ರಹ ॥

**ಟಿಪ್ಪಣಿಗಳು**

೧. ಎಫ್. ಕಿಟ್ಟೆಲ್, ೧೯೮೩, ಎ ಕನ್ನಡ-ಇಂಗ್ಲಿಷ್ ಡಿಕ್ಷನರಿ, ಏಷಿಯನ್ ಎಜುಕೇಶನಲ್ ಸರ್ವಿಸೆಸ್, ನ್ಯೂಡೆಲ್ಲಿ, ಪು. ೪೦೩
೨. ಅದೇ, ಪು. ೭೮೯
೩. ಅದೇ, ಪು. ೧೨೩೫
೪. ವಿವರಗಳಿಗೆ : ಎಸ್.ಆರ್. ಗುರುನಾಥ್, 'ಮಾದಿಗತನ : ಒಂದು ವಿಶ್ಲೇಷಣೆ', **ಘಟ್ಟಿಹೊಸಹಳ್ಳಿ ಗಟ್ಟಿಗ** (ಸಿ. ಮಲೆಸಿದ್ದಪ್ಪ ಸ್ಮರಣಸಂಪುಟ), ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ, ೨೦೦೨, ಪು. ೧೨೮-೧೪೨; ಹಾಗೂ ಗಮನಿಸಿ : ಎಂ. ಚಿದಾನಂದಮೂರ್ತಿ, ೧೯೮೫, **ಮಧ್ಯಕಾಲೀನ ಕನ್ನಡಸಾಹಿತ್ಯ ಮತ್ತು ಅಸ್ಪೃಶ್ಯತೆಯ ಪರಿಕಲ್ಪನೆ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು. ೩೨
೫. ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೨೮ : ಅಡಿಟಿಪ್ಪಣಿ-೪೧
೬. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೮ (ರೈಸ್ ಆವೃತ್ತಿ), ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ೧೯೬, ಕ್ರಿ.ಶ. ೧೪೦೪; ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, IX-ii, ರಾಜಗೊಂಡನಹಳ್ಳಿ, ೪೪೦, ಹರಪನಹಳ್ಳಿ ತಾಲ್ಲೂಕು, ಕ್ರಿ.ಶ. ೧೪೮೯; ಎ.ಕ., ೧೨ (ರೈಸ್ ಆವೃತ್ತಿ), ಕೋಲಾರ ಜಿಲ್ಲೆ,

ಬೌರಿಂಗ್‌ಪೇಟೆ ೭೨; ಎ.ಕ., ೩ (ಹೊಸ ಆವೃತ್ತಿ), ಮೈಸೂರು ಜಿಲ್ಲೆ, ಸರಗೂರು ೯೧ (ಹೆಗ್ಗಡದೇವನಕೋಟೆ), ಕ್ರಿ.ಶ. ೧೪೨೩; ಶಿವಪುರ ೧೭೬ (ಗುಂಡ್ಲುಪೇಟೆ), ಕ್ರಿ.ಶ. ೧೪೬೯; ಹೊಣಕನಹಳ್ಳಿ ೨೬ (ಗುಂಡ್ಲುಪೇಟೆ), ಕ್ರಿ.ಶ. ೧೫೦೬; ರಾಘವಾಪುರ ೩೯ (ಗುಂಡ್ಲುಪೇಟೆ), ಕ್ರಿ.ಶ. ೧೫೦೭; ತ್ರಿಯಂಬಕಪುರ ೧೩೬ (ಗುಂಡ್ಲುಪೇಟೆ), ಕ್ರಿ.ಶ. ೧೫೧೩; ಸಂಖ್ಯೆ ೧೩೪, ಕ್ರಿ.ಶ ೧೫೨೧; ಸಂಖ್ಯೆ ೧೫೦, ಕ್ರಿ.ಶ. ೧೫೨೧; ಕೋಡಿಹಳ್ಳಿ ೧೫೬ (ಗುಂಡ್ಲುಪೇಟೆ), ಕ್ರಿ.ಶ. ೧೫೨೧; ಎ.ಕ., ೪ (ಹೊಸ ಆವೃತ್ತಿ), ಮೈಸೂರು ಜಿಲ್ಲೆ, ದಾಸನಪುರ ೩೦೨ (ಚಾಮರಾಜನಗರ), ಕ್ರಿ.ಶ. ೧೫೩೬; ಅರಕಲವಾಡಿ ೩೦೧ (ಚಾಮರಾಜನಗರ), ಕ್ರಿ.ಶ. ೧೫೫೫; ಎ.ಕ., ೫ (ಹೊಸ ಆವೃತ್ತಿ), ಮೈಸೂರು ಜಿಲ್ಲೆ, ಕಲಿಯೂರು ೨೨೫ (ತಿ. ನರಸೀಪುರ), ಕ್ರಿ.ಶ. ೧೫೨೧; ಎ.ಕ., ೭ (ಹೊಸ ಆವೃತ್ತಿ), ಮಂಡ್ಯ ಜಿಲ್ಲೆ, ಮುಟ್ನಹಳ್ಳಿ ೧೦೬ (ಮಳವಳ್ಳಿ), ಕ್ರಿ.ಶ. ೧೫೦೬

೭. ಎಸ್.ಎಸ್. ಹಿರೇಮಠ, ೨೦೦೧, ದಲಿತ ಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೪೧; ಎಂ. ಚಿದಾನಂದಮೂರ್ತಿಯವರೂ 'ಮಾದಾರಿಕೆ'ಯೆಂಬುದನ್ನು ಸುಂಕವೆಂದು ಭಾವಿಸಿದ್ದಾರೆ - ಮಧ್ಯಕಾಲೀನ ಕನ್ನಡಸಾಹಿತ್ಯದಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ, ಪು. ೩೭ : ಅಡಿಟಿಪ್ಪಣಿ-೧೦. 'ಮಾದಾಜಿತೆರೆ' (ಎ.ಕ., ಸಂಪುಟ ೩-ಹೊಸಆವೃತ್ತಿ, ಹೆಗ್ಗಡದೇವನಕೋಟೆ ೯೧, ಕ್ರಿ.ಶ.೧೪೨೩) ಮತ್ತು 'ಮಾದೆಗಸುಂಕ'(ಅದೇ, ನಂಜನಗೂಡು ೩೮೧, ೧೬ನೇ ಶ.) ಎಂಬ ಶಬ್ದಗಳಿಗೆ 'ಮಾದೆಗಸುಂಕ; ಚರ್ಮದ ಕೆಲಸ ಮಾಡುವವರ ಮೇಲಿನ ಕರ(?)' ಎಂಬ ಅರ್ಥಗಳನ್ನು ಸೂಚಿಸುವುದರೊಡನೆ, 'ಮಾದಾಜಿಕೆ' (ಅದೇ, ಗುಂಡ್ಲುಪೇಟೆ ೧೩೪, ಕ್ರಿ.ಶ. ೧೫೨೧) ಎಂಬುದಕ್ಕೂ ಅದೇ ಅರ್ಥವನ್ನು ಸಂಪಾದಕರು ಸೂಚಿಸಿರುವುದು ಸರಿಯಲ್ಲವೆನ್ನಬೇಕು-ನೋಡಿ: ಶ್ರೀನಿವಾಸ ರಿತ್ತಿ ಮತ್ತಿತರರು (ಸಂ.), ೨೦೦೦, ಪ್ರಾಚೀನ ಕರ್ನಾಟಕದ ಆಡಳಿತ ಪರಿಭಾಷಾಕೋಶ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪು.೫೨.

೮. ಎಂ. ಚಿದಾನಂದಮೂರ್ತಿ, ಪೂರ್ವೋಕ್ತ, ಪು. ೩೭ : ಅಡಿಟಿಪ್ಪಣಿ-೧೦



ಮುಂಬದಿ



ಹಿಂಬದಿ

೧

## ನ್ಯಾಯ ನೀಡುವುದರಲ್ಲಿಯೇ ಧನ್ಯತೆ ಪಡೆದ ಬದುಕು

**ಎಸ್. ಆರ್. ವೈದ್ಯ**

ಕವಿವಾಣಿ ಹೇಳುವಂತೆ,

ಕೊಡು ಬದುಕಿರುವ ತನಕ, ಬದುಕುವ ತ್ರಾಣ
ಅರ್ಥಹೀನ, ತ್ರಾಣವಿಲ್ಲದ ಬದುಕು ನಿಷ್ಪ್ರಾಣ
ತ್ರಾಣದೊಂದಿಗೇನೇ ಗೌರವ, ಸನ್ಮಾನಗಳಿರಲಿ,
ಪ್ರಾಣಹೋಗಲಿ, ತುಸುವೇ ಗೌರವದ ಚ್ಯುತಿಯಲಿ.

ಬದುಕುವ ಅವಕಾಶವನ್ನು ಗೌರವ ಮತ್ತು ಪ್ರಾಮಾಣಿಕತೆಗಳಿಂದ ಬಳಸಿ, ಬದುಕಿನ ಬೆಲೆಯನ್ನು ಹೆಚ್ಚಿಸಿದ ವ್ಯಕ್ತಿಗೆ ಸಮಾಜ ಗೌರವ ತೋರಿಸಬೇಕಾಗಿರುವುದು ಇಂದಿನ ಮುಖ್ಯ ಕರ್ತವ್ಯವಾಗಿದೆ. ಇಂತಹ ವ್ಯಕ್ತಿಗಳಿಗೆ ಗೌರವ ತೋರುವುದರಿಂದ ಸಮಾಜದಲ್ಲಿ ನ್ಯಾಯವಂತ ಜನರು ಹೆಚ್ಚಾಗಿ ಸಮಾಜ ಸುಸಂಸ್ಕೃತಪೂರ್ಣವಾಗುವುದು. ನ್ಯಾಯಾಂಗದಲ್ಲಿ ಒಂದು ಹೇಳಿಕೆ ಇದೆ : 'ಹತ್ತು ಅಪರಾಧಿಗಳಿಗೆ ಶಿಕ್ಷೆಯಾಗದಿದ್ದರೂ ಚಿಂತೆಯಿಲ್ಲ, ಒಬ್ಬ ನಿರಪರಾಧಿಗೆ ಶಿಕ್ಷೆಯಾಗಬಾರದು.' ಇದು ಇಂದಿನ ನ್ಯಾಯಾಂಗದ ಧ್ಯೇಯವೂ ಆಗಿದೆ. ಆದರೆ ಅಪರಾಧಿಗೆ ಶಿಕ್ಷೆ ಕೊಡುವ ಒಂದು ಸಣ್ಣ ಅವಕಾಶವಿದ್ದರೂ ಅದನ್ನು ಉಪಯೋಗಿಸಿ ಅಪರಾಧಿಗೆ ತಕ್ಕ ಶಿಕ್ಷೆ ವಿಧಿಸಿ, ನ್ಯಾಯಾಂಗದ ಬಗ್ಗೆ ಜನರ ನಂಬಿಕೆಯನ್ನು ಹೆಚ್ಚಿಸಬೇಕು ಎನ್ನುವುದು ನ್ಯಾಯಾಧೀಶರಾಗಿದ್ದ ಶ್ರೀ ಜಿ.ಹೆಚ್. ಪ್ರಸಾದರ ಆದರ್ಶವಾಗಿತ್ತು.

ಚಿಕ್ಕಮಗಳೂರಿನಲ್ಲಿ ಜಿಲ್ಲಾ ಗ್ರಾಹಕರ ವೇದಿಕೆಯ ಅಧ್ಯಕ್ಷರಾಗಿ ಬಂದವರು ಶ್ರೀ ಪ್ರಸಾದ್. ಅವರನ್ನು ಭೇಟಿಯಾಗಿ ಪರಿಚಯಿಸಿಕೊಳ್ಳಲು ಧಾರವಾಡದ ಗೆಳೆಯ ಡಾ.ತೇಜಸ್ವಿ ಕಟ್ಟೀಮನಿ ಫೋನಾಯಿಸಿದರು. ನಮ್ಮ ಮೊದಲ ಭೇಟಿಯಲ್ಲಿಯೇ ಪ್ರಭಾವ ಬೀರುವ ವ್ಯಕ್ತಿತ್ವ ಹೊಂದಿದ್ದ ಪ್ರಸಾದ್ ಗಮನ ಸೆಳೆದರು. ತಮ್ಮ ಸ್ನೇಹಪೂರ್ವ ನಡವಳಿಕೆ, ನ್ಯಾಯಾಂಗದ ಬಗ್ಗೆ ಇರುವ ಅಗಾಧ ತಿಳುವಳಿಕೆ ಹಾಗೂ ಕಾಳಜಿಗಳಿಂದ

ಅವರು ವೈಶಿಷ್ಟ್ಯಪೂರ್ಣ ವ್ಯಕ್ತಿತ್ವ ಹೊಂದಿದವರೆಂಬುದು ಅರಿವಿಗೆ ಬಂದಿತು. ಈ ಕಾರಣದಿಂದ, ನನ್ನ ಅವರೊಂದಿಗಿನ ಭೇಟಿ ಸಾರ್ಥಕವೆಂದೇ ನನ್ನ ಎಣಿಕೆ.

ಅತ್ಯಂತ ಹಿಂದುಳಿದ ಕುಟುಂಬದಲ್ಲಿ, ೨೧-೧೨-೧೯೪೧ರಲ್ಲಿ, ದಾವಣಗೆರೆಯ ಮ್ಯಾಸ ಬೇಡರಕೇರಿಯ ಬಡ ರೈತನ ಮನೆಯಲ್ಲಿ ಜನಿಸಿದರು ಶ್ರೀ ಪ್ರಸಾದ್. ಸಮಾಜಸೇವೆಗೆ ಪ್ರಖ್ಯಾತರಾಗಿದ್ದ ಹಾಗೂ ಆಧ್ಯಾತ್ಮಿಕ ಜೀವಿಯಾಗಿದ್ದ ತಮ್ಮ ದೊಡ್ಡಪ್ಪ ಜಿ.ದುರ್ಗಪ್ಪನವರ 'ಮಾನಸಪುತ್ರ'ರಾಗಿ ಇವರು ಬಾಲ್ಯದಿಂದ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲಾರಂಭಿಸಿದರು. ತಮ್ಮ ದೊಡ್ಡಪ್ಪನವರ ಪ್ರೋತ್ಸಾಹದಿಂದ ಶಿಕ್ಷಣ ಪೂರೈಸಿ, ೧೯೬೭ರಲ್ಲಿ ರಾಜ್ಯ ಬಾರ್ ಕೌನ್ಸಿಲ್ ಪರೀಕ್ಷೆ ಪಾಸಾಗಿ, ದಾವಣಗೆರೆಯಲ್ಲಿ ತಮ್ಮ ವಕೀಲಿವೃತ್ತಿ ಪ್ರಾರಂಭಿಸಿದರು. ತಾವು ಶಿಕ್ಷಣ ಪಡೆದು ಬದುಕಿನ ಮಾರ್ಗವನ್ನು ಕಂಡುಕೊಂಡಂತೆ, ತಮ್ಮ ಜನಾಂಗದ ಜನರೂ ಶಿಕ್ಷಣ ಪಡೆದು ಸತ್ಪ್ರಜೆಗಳಾಗಿ ಹೊರ ಹೊಮ್ಮಬೇಕೆನ್ನುವ ಹಂಬಲ ಇವರಲ್ಲಿ ಬಹಳವಾಗಿತ್ತು.

ದಾವಣಗೆರೆಯಲ್ಲಿ ಓದುತ್ತಿರುವಾಗಲೇ ತ.ರಾ.ಸು. ಅವರ ಪ್ರಭಾವಕ್ಕೊಳಗಾದ ಪ್ರಸಾದ್ ಅವರು, ತರಾಸು ಅವರ ಒಡನಾಟದಿಂದ ಸಾಹಿತ್ಯಾಭಿಮಾನಿಗಳೂ ಆದರು. ತರಾಸು ಅವರ ಚಾರಿತ್ರಿಕ ಸಾಹಿತ್ಯದ ಲೇಖನಗಳನ್ನು ಮುದ್ರಿಸಿ ಜನತೆಗೆ ತಲುಪಿಸಬೇಕೆನ್ನುವ ಹೆಬ್ಬಯಕೆಯನ್ನು ಹೊಂದಿದ್ದರು!

೧೯೭೨ರಲ್ಲಿ ಮುನ್ಸಿಫ್ ಪರೀಕ್ಷೆಯನ್ನು ಪಾಸುಮಾಡಿದ ಪ್ರಸಾದ್ ಅವರು, ೧೯೭೪ರಲ್ಲಿ ನ್ಯಾಯಾಧೀಶರಾಗಿ ನೇಮಕಗೊಂಡು ತಮ್ಮ ಸೇವೆ ಪ್ರಾರಂಭಿಸಿದರು. ಈ ಮೂಲಕ ಸಮಾಜದ ಎಲ್ಲಾ ಜನರಿಗೂ ಜಾತಿ, ಧರ್ಮಗಳ ಎಲ್ಲೆಯನ್ನು ಮೀರಿ ನ್ಯಾಯ ಒದಗಿಸಿ, ಅವರಿಗೆ ಕಾನೂನಿನ ಹೊಣೆಗಾರಿಕೆಯ ಅರಿವು ಉಂಟುಮಾಡಿಕೊಡಲು ಶ್ರಮಿಸಿದರು. ಮಗುವಿನಷ್ಟು ಮುಗ್ಧನಾದ ಮನುಷ್ಯ ಮನೋವಿಕಾರಗೊಂಡಂತೆ ವರ್ತಿಸುವ ಹಾಗೂ ಈ ಮೂಲಕ ಕ್ರಿಮಿನಲ್ ಆಗಿ ಪರಿವರ್ತನೆಗೊಳ್ಳುವ ಹಿಂದಿರುವ ಕಾರಣಗಳ ಪರಿಶೀಲನೆಗೆ ಪ್ರಸಾದ್ ಅವರು ಹೆಚ್ಚು ಗಮನಹರಿಸಿದುದು ನ್ಯಾಯದಾನದಲ್ಲಿ ಅವರಿಗಿದ್ದ ತೀವ್ರ ಕಾಳಜಿಗೆ ಉದಾಹರಣೆಯಾಗಿದೆ.

'Justice delayed is justice denied' ಮತ್ತು 'Justice hurried is justice burried' ಎಂಬುದನ್ನು ತಮ್ಮ ವೃತ್ತಿಸೇವೆಯಲ್ಲಿ ಅಳವಡಿಸಿಕೊಂಡಿದ್ದ ಶ್ರೀಯುತರು, ನ್ಯಾಯತೀರ್ಮಾನ ನೀಡುವಲ್ಲಿ ಅತಿ ವಿಳಂಬವನ್ನಾಗಲೀ ಅತಿ ಅವಸರವನ್ನಾಗಲೀ ಮಾಡದೆ, ಸಂಬಂಧಿಸಿದ ಎಲ್ಲವನ್ನೂ ಪರಿಶೀಲಿಸಿ ಸಮಯೋಚಿತವಾಗಿ ತೀರ್ಪುನೀಡುವ ಅತ್ಯಂತ ಸಮತೋಲನ ವ್ಯಕ್ತಿತ್ವ ಹೊಂದಿದ್ದ ನ್ಯಾಯಾಧೀಶರಾಗಿದ್ದರು. ಮುನ್ಸಿಫ್ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುವ ಸಂದರ್ಭದಲ್ಲಿ, ಸಮಯಕ್ಕೆ ತಕ್ಕಂತೆ ಅವರು ತಮ್ಮ ಕನ್ನಡ ಭಾಷಾಭಿಮಾನ ಮೆರೆದ ಉದಾಹರಣೆಗಳೂ ಸಾಕಷ್ಟಿವೆ.

ಜಿ.ಹೆಚ್.ಪ್ರಸಾದ್ ಅವರ ದೃಷ್ಟಿಯಲ್ಲಿ ಪ್ರಾಮಾಣಿಕತೆಗೆ ಬೇರೆ ವ್ಯಾಖ್ಯಾನಗಳಿಲ್ಲ. ಏಕೆಂದರೆ ಪ್ರಾಮಾಣಿಕತೆಗೆ ಪ್ರಾಮಾಣಿಕತೆಯೇ ಉದಾಹರಣೆ! ಅವರ ಪ್ರಕಾರ, 'There is no less or more honesty, honesty is honesty' ಎಂಬುದೇ ಆಗಿತ್ತು. ಈ ಮೂಲಕ ಪ್ರಾಮಾಣಿಕತೆಯ ಬಗ್ಗೆ ಶ್ರೀಯುತರಿಗೆ ಇದ್ದ ಗೌರವ ಎಷ್ಟು ಅಪಾರ ಎಂಬುದು ಮನದಟ್ಟಾಗುತ್ತದೆ.

ನ್ಯಾಯಾಧೀಶರಾಗಿ ಪ್ರಸಾದ್ ಅವರು, ಸಾಕ್ಷಿಗಳು ಆರೋಪಿ ಹಾಗೂ ವಕೀಲರ ಜೊತೆಗೆ ಪರಿಸ್ಥಿತಿಗೆ ತಕ್ಕಂತೆ ವರ್ತಿಸಿ ಕಠಿಣತೆ ಹಾಗೂ ಮಾನವೀಯತೆಯನ್ನು ಮೆರೆಯುವಲ್ಲಿ ಹಿಂದೇಟು ಹಾಕುತ್ತಿರಲಿಲ್ಲ. ಹಾವೇರಿಯಲ್ಲಿ ನ್ಯಾಯಾಧೀಶರಾಗಿದ್ದಾಗ, ವೇಶ್ಯಾವಾಟಿಕೆಗೆ ಪ್ರಚೋದಿಸಿ, ಪ್ರೋತ್ಸಾಹಿಸುತ್ತಿದ್ದ ಮಹಿಳೆಯೊಬ್ಬಳನ್ನು, ಅವಳ ಅನೈತಿಕವಾದ ಅವ್ಯವಹಾರಕ್ಕಾಗಿ ಸಂಬಂಧಿಸಿದ ಪ್ರಕರಣವೊಂದರಲ್ಲಿ ಪೊಲೀಸರು ಬಂಧಿಸಿ ಇವರ ಮುಂದೆ ಮುಂದಿನ ಆದೇಶಕ್ಕಾಗಿ ಹಾಜರು ಮಾಡಿದರು. ಆಕೆಯ ಸಮಾಜಕ್ಕೇ ಸೇರಿದ ಪ್ರಸಿದ್ಧ ವಕೀಲರೊಬ್ಬರು ಆಕೆಯನ್ನು ಜಾಮೀನಿನ ಮೇಲೆ ಬಿಡುಗಡೆ ಮಾಡಲು ಅರ್ಜಿ ಹಾಕಿದಾಗ, ಇದು ಜಾಮೀನು ಕೊಡಬಹುದಾದ ಅಪರಾಧವಾದರೂ ಹೆಣ್ಣಿನ ಶೋಷಣೆಗೆ ಮತ್ತೊಂದು ಹೆಣ್ಣೇ ಕಾರಣ ಎಂಬ ವಾಸ್ತವಿಕತೆಯನ್ನು ಆಧರಿಸಿ ಆ ಮಹಿಳೆಗೆ ನ್ಯಾಯಾಂಗ ಬಂಧನದಲ್ಲಿ ಇಡುವಂತೆ ಆದೇಶಿಸಿದರು ಪ್ರಸಾದ್. ಆದರೆ ಮಾನವೀಯತೆಯನ್ನು ಮೆರೆಯುವ ಸಂದರ್ಭದಲ್ಲಿ ಹಿಂದೇಟು ಹಾಕುತ್ತಿರಲಿಲ್ಲವೆಂಬುದಕ್ಕೆ, ಕಳ್ಳತನದ ಆರೋಪದ ಮೇಲೆ ಬಂಧಿತನಾಗಿದ್ದ ಓರ್ವ ಅಲ್ಪಸಂಖ್ಯಾತ ಯುವ ಆರೋಪಿಯ ಘಟನೆಯೇ ಸಾಕ್ಷಿ. ಆ ಯುವ ಆರೋಪಿಯು ಜನರ ಹೊಡೆತದಿಂದ ರಕ್ತಸಿಕ್ತನಾಗಿ ನರಳುತ್ತಿದ್ದಾಗ, ಅವನನ್ನು ಸ್ವಂತ ಜಾಮೀನು ಮುಚ್ಚಳಿಕೆಯ ಮೇಲೆ ಆಸ್ಪತ್ರೆಗೆ ಕಳುಹಿಸಿ ಉಪಚಾರ ಕೊಡಿಸಿ, ನಂತರ ನ್ಯಾಯಾಲಯಕ್ಕೆ ಹಾಜರಾಗುವಂತೆ ಮಾಡಿದರು.

ತನಿಖಾಪದ್ಧತಿಯಲ್ಲಿ, ಸಾಕ್ಷಿಗಳು ಕೆಲವೊಮ್ಮೆ ವ್ಯತಿರಿಕ್ತವಾದ ಸಾಕ್ಷಿ ಹೇಳುವುದುಂಟು. ಇತರೆ ಲೋಪ-ದೋಷಗಳನ್ನು ಆಧರಿಸಿ ವಿಚಾರಣೆಯ ನಂತರ ಆರೋಪಿಯನ್ನು ಬಿಡುಗಡೆ ಮಾಡುವುದು ನ್ಯಾಯಾಧೀಶರಿಗೂ ಸುಲಭವಾದ ಕೆಲಸ. ತನಿಖಾಪದ್ಧತಿಯಲ್ಲಿ ಹಲವಾರು ಲೋಪ-ದೋಷಗಳಿರುವುದರಿಂದ ಹಾಗೂ ತನಿಖೆಯಲ್ಲಿ ವಿಳಂಬವುಂಟಾಗುವುದರಿಂದ ಆರೋಪಿ ಬಿಡುಗಡೆಯಾಗುವುದು ಸುಲಭ. ಆದರೆ ಅವರಿಗೆ ಶಿಕ್ಷೆ ಕೊಡುವುದು ಬಹಳ ಕಠಿಣ ಎಂಬುದು ಪ್ರಸಾದ್ ಅವರ ವೃತ್ತಿ ಅನುಭವ. ನ್ಯಾಯಾಧೀಶಪೀಠದಲ್ಲಿದ್ದಾಗಲೂ ಸತ್ಯಶೋಧನೆಗೆ ಹೆಚ್ಚಿನ ಮಹತ್ವ ಕೊಡುತ್ತಿದ್ದರು ಪ್ರಸಾದ್. Procedural law ಮತ್ತು Technicalities of lawಗಳ ಬಗ್ಗೆ ಹೆಚ್ಚು ಮಹತ್ವ ನೀಡದೆ, ತಾವು ನೀಡುವ ತೀರ್ಪಿನ ಬಗ್ಗೆ ಬರಬಹುದಾದ ಟೀಕೆ ಮತ್ತು ವಿಮರ್ಶೆಗಳ ಬಗ್ಗೆ ಗಮನ ನೀಡದೆ ತಮ್ಮ ಆತ್ಮಸಾಕ್ಷಿಗೆ ಅನುಗುಣವಾಗಿ ತೀರ್ಪು ನೀಡುತ್ತಿದ್ದರು.

ಆರೋಪಿಯನ್ನೇ ಅಪರಾಧಿ ಎಂದು ಪರಿಗಣಿಸದೆ, ಆರೋಪಿ ಅಪರಾಧಿಯಾಗುವವರೆಗೆ, ಅವನೊಂದಿಗೆ ವ್ಯವಹರಿಸುವಲ್ಲಿ ಮಾನವೀಯತೆಯನ್ನು ಮೆರೆಯುತ್ತಿದ್ದರು. ಆರೋಪಿಯ ಸ್ವಾತಂತ್ರ್ಯದ ಬಗ್ಗೆ ಹೆಚ್ಚು ಕಾಳಜಿ ವಹಿಸುತ್ತಿದ್ದ ಶ್ರೀಯುತರು, ಈ ಮೂಲಕ ಆರೋಪಿಯನ್ನು ಗೌರವಿಸುವ ಪರಂಪರೆಗೆ ನಾಂದಿಹಾಡಿದರು. ಏಕೆಂದರೆ ಆರೋಪಿ ಅಪರಾಧಿಯಾಗುವತನಕ ಅವನು ಆರೋಪಿ ಮಾತ್ರವಾಗಿರುತ್ತಾನೆ. ಆರೋಪಿಯ ಅವಲಂಬಿತರ ಬಗ್ಗೆ, ಅವರ ಭಾವನೆಗಳ ಬಗ್ಗೆ, ಬದುಕಿನ ಬಗ್ಗೆಯೂ ಕಾಳಜಿ ವಹಿಸು ತ್ತಿದ್ದ ಅಪೂರ್ವ ಪ್ರಸಂಗಗಳನ್ನೂ ಪ್ರಸಾದ್ ಅವರ ಬದುಕಿನಲ್ಲಿ ನಾವು ಕಾಣಬಹುದು. ಆರೋಪಿಯ ಅಪರಾಧಿಕೃತ್ಯಕ್ಕೆ ಒಳಗಾದ ಅಮಾಯಕ ವ್ಯಕ್ತಿ ಅಥವಾ ಅವರ ರಕ್ತಸಂಬಂಧಿಗಳ ಸ್ಥಿತಿ, ನೋವುಗಳ ಬಗ್ಗೆಯೂ ಗಮನಹರಿಸಿ, ಸೂಕ್ತ ಆದೇಶ ಮಾಡು ತ್ತಿದ್ದರು.

೧೯೯೫ರಲ್ಲಿ ಜಿಲ್ಲಾ ನ್ಯಾಯಾಧೀಶರಾಗಿ ಬಡ್ತಿಹೊಂದುವ ಮೂಲಕ ತಮ್ಮ ವೃತ್ತಿ ಜೀವನದ ಸಾಫಲ್ಯತೆಯನ್ನು ಕಂಡುಕೊಂಡ ಪ್ರಸಾದ್ ಅವರು, ೨೦೦೧ರಲ್ಲಿ ಶಿವಮೊಗ್ಗ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ನಿವೃತ್ತಿ ಹೊಂದುವುದರೊಂದಿಗೆ ತಮ್ಮ ಸುದೀರ್ಘ ನ್ಯಾಯಾಂಗಸೇವೆಗೆ ಮಂಗಳಹಾಡಿದರು.

೧೯೯೯-೨೦೦೧ರ ಅವಧಿಯಲ್ಲಿ ಶಿವಮೊಗ್ಗ ಜಿಲ್ಲಾ ಕಾನೂನುಸೇವಾ ಪ್ರಾಧಿಕಾರದ ಅಧ್ಯಕ್ಷರಾಗಿದ್ದಾಗ, ಲೋಕ್ ಅದಾಲತ್ ಮೂಲಕ ಅತಿ ಹೆಚ್ಚಿನ ವ್ಯಾಜ್ಯಗಳು ಇತ್ಯರ್ಥ ವಾಗುವಂತೆ ಮಾಡಿ, ರಾಜ್ಯದಲ್ಲಿಯೇ ಶಿವಮೊಗ್ಗ ಜಿಲ್ಲೆಗೆ ಎರಡುಸಾರಿ ಪ್ರಥಮ ಸ್ಥಾನ ವನ್ನು ದೊರಕಿಸಿಕೊಟ್ಟದ್ದು ಶ್ರೀಯುತರ ಸೇವಾವಧಿಯ ಮೇರುಸಾಧನೆ ಎಂದೆನ್ನಬಹುದು.

ತಮ್ಮ ವೃತ್ತಿಜೀವನದ ಹೊರತಾಗಿ, ಬಹುಮುಖ ಆಸಕ್ತಿಯ ಪ್ರತೀಕವಾದ ಜಿ.ಹೆಚ್. ಪ್ರಸಾದ್ ಅವರು, ಸಾಹಿತ್ಯ ಮತ್ತು ಸಂಗೀತದಲ್ಲಿ ಅಪಾರ ಆಸಕ್ತಿ ಹೊಂದಿದ್ದಾರೆ. ಹಿಂದೂಸ್ತಾನಿ ಮತ್ತು ಕರ್ನಾಟಕ ಸಂಗೀತದಲ್ಲೂ ಅಪಾರ ಆಸಕ್ತಿ ಹೊಂದಿರುವ ಇವರು, ಈ ಪ್ರಕಾರವನ್ನು ಕೇಳುವ ಹವ್ಯಾಸವನ್ನು ಬೆಳೆಸಿಕೊಂಡಿದ್ದಾರೆ. ಈ ಬಗ್ಗೆ ನಾವು ಎರಡು ಘಟನೆಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

೧೯೭೩ರ ಮಾರ್ಚ್ ತಿಂಗಳಲ್ಲಿ ದಾವಣಗೆರೆಯಲ್ಲಿ ನಡೆದ ನಾಯಕ ಜನಾಂಗದ ರಾಜ್ಯಮಟ್ಟದ ಎರಡನೇ ಮಹಾಸಮ್ಮೇಳನದ ಅಂಗವಾಗಿ ಹೊರತಂದ ಸ್ಮರಣಸಂಚಿಕೆ 'ವಾಲ್ಮೀಕಿ ಸಂದೇಶ'ದ ಪ್ರಕಟಣೆಗಾಗಿ ಪ್ರಸಾದ್ ಅವರು ಅವಿರತವಾಗಿ ಶ್ರಮಿಸಿದ್ದಾರೆ. ದಿವಂಗತ ಹರ್ತಿಕೋಟೆ ವೀರನಾಯಕರು ಈ ಸ್ಮರಣಸಂಚಿಕೆಯ ಸಂಪಾದಕರಾಗಿದ್ದರೆ, ಪ್ರಸಾದ್ ಅವರು ಸಂಪಾದಕೀಯ ಮಂಡಳಿಯ ಅಧ್ಯಕ್ಷರಾಗಿದ್ದರು. ಮುದ್ರಣಕಾರ್ಯ ತುಂಬಾ ಕಷ್ಟಕರವಾಗಿದ್ದ ೩ ದಶಕಗಳ ಹಿಂದೆ, ಐದು ಮುದ್ರಣಾಲಯಗಳಲ್ಲಿ ನಿರಂತರವಾಗಿ ಮುದ್ರಣಕಾರ್ಯವನ್ನು ನಡೆಸಿ, ಹಗಲು ರಾತ್ರಿ ಶ್ರಮಿಸಿ, ಸ್ಮರಣಸಂಚಿಕೆಯನ್ನು ನಿಗದಿತ ಸಮಯಕ್ಕೆ ಸರಿಯಾಗಿ ಬಿಡುಗಡೆ ಮಾಡಿದ್ದು ಪ್ರಸಾದ್ ಅವರ ಕಾರ್ಯ ಚತುರತೆಗೆ ಒಂದು ಉದಾಹರಣೆ.

ಪ್ರತಿಭಾವಂತ ಯುವ ಸಂಶೋಧಕರಾಗಿದ್ದ ಲಕ್ಷ್ಮಣ್ ತೆಲಗಾವಿಯವರನ್ನು ಬೆನ್ನುತಟ್ಟಿ ಪ್ರೋತ್ಸಾಹಿಸಿದ ಕೀರ್ತಿ ಪ್ರಸಾದ್ ಅವರಿಗೇ ಸಲ್ಲುತ್ತದೆ. ತೆಲಗಾವಿಯವರ 'ಮಾಯಕೊಂಡದ ಕಾಳಗ' ಮತ್ತು 'ಕುಮಾರರಾಮ'ಗಳಂತಹ ಸಂಶೋಧನ ಲೇಖನಗಳನ್ನು 'ವಾಲ್ಮೀಕಿ ಸಂದೇಶ'ದಲ್ಲಿ ಪ್ರಕಟಿಸುವಲ್ಲಿ ಶ್ರೀಯುತರ ಪಾತ್ರ ಅತ್ಯಂತ ಮಹತ್ವದ್ದು. ತಾವು ಮತ್ತು ತಮ್ಮ ಮಾವ ದಿವಂಗತ ಸಿ.ಮಲೆಸಿದ್ದಪ್ಪ ಈರ್ವರೂ ಲೇಖಕರಾದ ತೆಲಗಾವಿಯವರನ್ನು ತಮ್ಮೊಂದಿಗೇ ಕರೆದೊಯ್ದು, ಲೇಖನಕ್ಕೆ ಅವಶ್ಯಕವಾದ ಅನೇಕ ಐತಿಹಾಸಿಕ ಸ್ಥಳಗಳನ್ನು ತೋರಿಸಿ, ವ್ಯಕ್ತಿಗಳನ್ನು ಭೇಟಿಮಾಡಿಸಿ, ವಿಷಯ ಸಂಗ್ರಹಣಕಾರ್ಯದಲ್ಲಿ ನೆರವಾದದ್ದು ಪ್ರಸಾದ್ ಅವರ ಬದುಕಿನಲ್ಲಿ ಮರೆಯಲಾರದ ಘಟನೆಯಾಗಿದೆ.

ಜಿ.ಹೆಚ್.ಪ್ರಸಾದ್ ಅವರು ಬಿಜಾಪುರದಲ್ಲಿದ್ದಾಗ, ಶಾಸ್ತ್ರೀಯ ಸಂಗೀತಗಾರರಲ್ಲಿ ಎಲೆಮರೆಯ ಕಾಯಿಯಂತಿದ್ದ, ಸ್ಥಳೀಯ ಪ್ರತಿಭೆಯಾಗಿದ್ದ ಶ್ರೀ ಬಸಪ್ಪ ಮಾನಪ್ಪ ಹೆರಕಲ ಅವರ ಬಗ್ಗೆ 'ಕನ್ನಡಪ್ರಭ' ದಿನಪತ್ರಿಕೆಯಲ್ಲಿ ಸ್ವತಃ ತಾವೇ ಲೇಖನ ಬರೆದು ಪ್ರಕಟಿಸಿದರು. ತಮ್ಮ ಭಾವ ಜಿ.ವಿ.ನಾಯಕ್ ಅವರ ಮೂಲಕ ಅಂದಿನ ಮುಖ್ಯ ಮಂತ್ರಿಯಾಗಿದ್ದ ಶ್ರೀ ಎಸ್.ಬಂಗಾರಪ್ಪನವರ ಗಮನ ಸೆಳೆದರಲ್ಲದೆ, ಸಂಗೀತಗಾರ ಬಸಪ್ಪ ಹೆರಕಲರಿಗೆ ರಾಜ್ಯಪ್ರಶಸ್ತಿ ದೊರಕುವಂತೆ ಮಾಡಿದರು. ಪ್ರಸಾದ್ ಅವರ ಆಸಕ್ತಿಯ ಪ್ರತಿಫಲ ಎಂತಹದೆಂಬುದಕ್ಕೆ ಇದೂ ಒಂದು ಪ್ರಮುಖ ಉದಾಹರಣೆ. ಇದೇ ರೀತಿ ಹಾವೇರಿಯಲ್ಲಿದ್ದಾಗಲೂ ದಾಸರ, ವಿಶೇಷವಾಗಿ ಕನಕದಾಸರ ಪದಗಳನ್ನು ಸುಶ್ರಾವ್ಯವಾಗಿ ಹಾಡುವುದರಲ್ಲಿ ಪ್ರವೀಣೆ ಎನಿಸಿಕೊಂಡಿದ್ದ ರಂಗಕಲಾವಿದೆ ಜುಬೇದಾಬಾಯಿ ಸವಣೂರು ಅವರಿಗೆ ರಾಜ್ಯಮನ್ನಣೆ ದೊರಕಿಸಿಕೊಡಲು ಪ್ರಯತ್ನಿಸಿ ಸಫಲರಾದದ್ದು ಇನ್ನೊಂದು ಗಮನಾರ್ಹ ಸಂಗತಿ. ಸಂಗೀತದ ಬಗ್ಗೆ ಪ್ರಸಾದ್ ಅವರಲ್ಲಿದ್ದ ಕಾಳಜಿ ಇದರಿಂದ ವ್ಯಕ್ತವಾಗುತ್ತದೆ.

ವಿಶ್ರಾಂತಜೀವನ ನಡೆಸುತ್ತಿರುವ ಶ್ರೀ ಜಿ.ಹೆಚ್.ಪ್ರಸಾದ್ ಅವರು, ಇಂದಿಗೂ ತಮ್ಮ ವೃತ್ತಿಜೀವನದ ಶಿಸ್ತು, ಗಾಂಭೀರ್ಯ, ಸಂಯಮಗಳನ್ನು ಕಾಯ್ದುಕೊಂಡಿದ್ದಾರೆ. 'ನ್ಯಾಯಾಧೀಶ ಯಾವಾಗಲೂ ನ್ಯಾಯಾಧೀಶನೇ' ಎನ್ನುವ ಆಂಗ್ಲ ಉಕ್ತಿಯಂತೆ, ಇಂದಿಗೂ ಅವರು ಅದೇ ಶಿಸ್ತುಬದ್ಧ ಜೀವನ ನಡೆಸುತ್ತಿರುವುದು ಗಮನಾರ್ಹ. ಶ್ರೀಯುತರು ಇದುವರೆವಿಗೂ ನಡೆಸಿದ ಬದುಕು ಆದರ್ಶನೀಯವಾಗಿದ್ದು, ಅವರಿಗೆ ಒಳ್ಳೆಯ ಆರೋಗ್ಯ, ಆಯಸ್ಸು ಕೊಟ್ಟು ಕಾಪಾಡಲೆಂದು ದಯಾಮಯನಾದ ಭಗವಂತನಲ್ಲಿ ಪ್ರಾರ್ಥಿಸುತ್ತೇನೆ; ಹಾಗೂ ಡಿ.ವಿ.ಜಿ. ಯವರ 'ಕಗ್ಗ'ದ ಮೂಲಕ ನನ್ನ ಲೇಖನವನ್ನು ಮುಕ್ತಾಯಗೊಳಿಸುತ್ತೇನೆ:

ವಿಸ್ತಾರದಲಿ ಬಾಳು, ವೈಶಾಲ್ಯದಿಂ ಬಾಳು
ಕತ್ತಲೆಯ ಮೊಟಕು, ಮೂಲೆಗಳ ಸೇರದಿರು,
ಭಾಸ್ಕರನನುಗ್ರಹವೆ ನೂತನ ಜೀವನ ಸತ್ವ,
ಮೃತ್ಯು ನಿನಗಲ್ಪತೆಯೋ ಮಂಕುತಿಮ್ಮ.

೨

# ಜನಾದರಣೀಯ ವ್ಯಕ್ತಿತ್ವ

## ನ್ಯಾ|| ಸಿ. ಎನ್. ಅಶ್ವತ್ಥನಾರಾಯಣರಾವ್

ದಿನಾಂಕ ೩-೬-೮೮ ರಿಂದ ೨೯-೫-೮೯ರ ವರೆಗೂ ಸುಮಾರು ೧ ವರ್ಷ ಕಾಲ ನಾನು ಬಿಜಾಪುರದಲ್ಲಿ ಜಿಲ್ಲಾ ನ್ಯಾಯಾಧೀಶನಾಗಿ ಕೆಲಸ ಮಾಡಿದೆ. ಮಕ್ಕಳ ಇಂಜಿನಿಯರಿಂಗ್ ವಿದ್ಯಾಭ್ಯಾಸದ ಕಾರಣದಿಂದ ಕುಟುಂಬವನ್ನು ಬೆಂಗಳೂರಿನಲ್ಲಿಯೇ ಇರಿಸಿ ನಾನೊಬ್ಬನೇ ಬಿಜಾಪುರದಲ್ಲಿದ್ದು ಕೆಲಸ ಮಾಡುತ್ತಿದ್ದೆ. ನಾನು ಬಿಜಾಪುರಕ್ಕೆ ಹೋದ ದಿನವೇ ಶ್ರೀ ಜಿ.ಹೆಚ್.ಪ್ರಸಾದ್‌ರ ಪರಿಚಯವಾಯಿತು. ಅವರು ಆಗ ಅಲ್ಲಿ ಸಿವಿಲ್ ಜಡ್ಜ್‌ರಾಗಿ ಕೆಲಸ ಮಾಡುತ್ತಿದ್ದರು. ಪ್ರಥಮ ಭೇಟಿಯಲ್ಲೇ ಅವರು ಎಂತಹ ಸಾತ್ವಿಕ ಸ್ವಭಾವದ ಸಜ್ಜನರು ಎಂಬುದರ ಅರಿವಾಯಿತು. ಬಹಳ ನಮ್ರತೆಯಿಂದ ಸರಳವಾಗಿ ನನ್ನನ್ನು ಸ್ವಾಗತಿಸಿದರು. ನನ್ನ, ಅವರ ಮತ್ತು ಇತರ ನ್ಯಾಯಾಧೀಶರ ಸರ್ಕಾರೀ ಮನೆಗಳು ಒಂದೇ ಪ್ರಾಂಗಣ ದಲ್ಲಿದ್ದವು.

ಬಿಜಾಪುರ ಬಹಳ ದೊಡ್ಡ ಜಿಲ್ಲೆ. ನ್ಯಾಯಾಲಯದ ಕೆಲಸದ ಜೊತೆಗೆ ಆಡಳಿತದ ಕೆಲಸವೂ ನನಗೆ ಬಹಳಷ್ಟಿರುತ್ತಿತ್ತು. ಜಿಲ್ಲೆಯ ಅನೇಕ ನ್ಯಾಯಾಲಯಗಳ ಮತ್ತು ನ್ಯಾಯಾಧೀಶರ ಪರಿಚಯ, ಅವರ ಸಮಸ್ಯೆಗಳು -ಇವುಗಳನ್ನೆಲ್ಲಾ ತಿಳಿದುಕೊಂಡು ಪರಿಹಾರ ಕಂಡುಕೊಳ್ಳುವುದರಲ್ಲಿ ಶ್ರೀ ಪ್ರಸಾದ್ ನನಗೆ ಬಹಳ ಸಹಾಯಕರಾಗಿದ್ದರು. ಅವರ ಸ್ನೇಹ, ಒಡನಾಟದಲ್ಲಿ ನನಗೆ ನನ್ನ ಕುಟುಂಬದಿಂದ ದೂರವಿದ್ದ ನೋವು ಬಹಳಷ್ಟು ಕಡಿಮೆಯಾಗಿತ್ತು. ಪ್ರತಿ ಭಾನುವಾರ ಬೆಳಗಿನ ಉಪಾಹಾರ ಅವರ ಮನೆಯಲ್ಲಿ ನನಗಾಗಿ ಕಾದಿರುತ್ತಿತ್ತು. ಶ್ರೀ ಪ್ರಸಾದರಷ್ಟೇ ಅವರ ಪತ್ನಿ ಶ್ರೀಮತಿ ಪುಷ್ಪ ಸಹಾ ಉದಾರಿಗಳೂ ಸರಳರೂ ಆಗಿದ್ದರು. ಇಬ್ಬರು ಹೆಣ್ಣುಮಕ್ಕಳು, ಒಬ್ಬ ಮಗ ಇದ್ದ ಅವರದು ಸುಖೀ ಸಂಸಾರ. ಅಚ್ಚರಿ ಎಂದರೆ ತಂದೆ, ತಾಯಿ, ಮಕ್ಕಳು ಎಲ್ಲರಿಗೂ ಕಲೆ, ಸಂಗೀತ, ಸಾಹಿತ್ಯಗಳಲ್ಲಿ ಆಸಕ್ತಿ ಇತ್ತು. ಮಕ್ಕಳು ಪಲ್ಲವಿ, ವೇದ, ರಾಮನಾಥ ಮೂವರೂ ವಿವಿಧ ವಾದ್ಯಗಳೊಂದಿಗೆ ಸೊಗಸಾಗಿ ಸಂಗೀತ ಹಾಡುತ್ತಿದ್ದರು.

ಶ್ರೀ ಪ್ರಸಾದ್ ಜೀವನದಲ್ಲಿ ಎಷ್ಟು ಸರಳ-ಸಾಧು ಸ್ವಭಾವದವರೊ ಕರ್ತವ್ಯದಲ್ಲಿ ಅಷ್ಟೇ ಕಟ್ಟುನಿಟ್ಟಿನ, ಶಿಸ್ತಿನ ನ್ಯಾಯಾಧೀಶರು. ವಕೀಲರಲ್ಲಾಗಲೀ ಸಿಬ್ಬಂದಿಯವರಲ್ಲಾಗಲೀ ಕರ್ತವ್ಯಲೋಪವನ್ನು ಎಂದೂ ಸಹಿಸುತ್ತಿರಲಿಲ್ಲ. ಹೀಗಾಗಿ ಅವರು ಅತ್ಯಂತ ದಕ್ಷ ಅಧಿಕಾರಿಗಳಲ್ಲೊಬ್ಬರಾಗಿದ್ದರು. ಜೊತೆಗೆ ತಾವೂ ಬಹಳ ಕಷ್ಟಪಟ್ಟು ಕೆಲಸ ಮಾಡುತ್ತಿದ್ದರು. ಮಧ್ಯರಾತ್ರಿಯವರೆವಿಗೂ ಕೆಲಸ ಮಾಡುವುದು ಅವರಿಗೆ ಸಾಮಾನ್ಯವಾಗಿತ್ತು. ಆದ್ದರಿಂದ ಅವರು ಉಚ್ಚನ್ಯಾಯಾಲಯದವರು ನಿರ್ದೇಶಿಸಿದ್ದ ಕೆಲಸಕ್ಕಿಂತಲೂ ಹೆಚ್ಚಿನ ಕೆಲಸವನ್ನು ಪ್ರತಿ ತಿಂಗಳು ಮಾಡುತ್ತಿರುತ್ತಿದ್ದರು. ನ್ಯಾಯವಿತರಣೆಯಲ್ಲಿ ಸಾಧ್ಯವಾದಷ್ಟೂ ಪಕ್ಷಕಾರರ ನಡುವೆ ರಾಜೀಮಾಡಿಸುವುದು ಇವರಿಗೆ ಪ್ರಿಯವಾಗಿತ್ತು. ಈ ಗುಣದಿಂದಾಗಿ, ಶಿವಮೊಗ್ಗದಲ್ಲಿ ಜಿಲ್ಲಾ ನ್ಯಾಯಾಧೀಶರೂ ಕಾನೂನು ಸೇವಾ ಪ್ರಾಧಿಕಾರದ ಅಧ್ಯಕ್ಷರೂ ಆಗಿ ಕೆಲಸ ಮಾಡುವಾಗ ಇಡೀ ರಾಜ್ಯದಲ್ಲೇ ಅತಿ ಹೆಚ್ಚಿನ ವ್ಯಾಜ್ಯಗಳನ್ನು ಲೋಕ ಅದಾಲತ್ ಮೂಲಕ ಇತ್ಯರ್ಥವಾಗುವಂತೆ ಮಾಡಲು ಅವರಿಗೆ ಸಾಧ್ಯವಾಯಿತು.

ಬಿಜಾಪುರ ಒಂದರಲ್ಲೇ ನನ್ನೊಡನೆ ೭-೮ ನ್ಯಾಯಾಧೀಶರು ಕೆಲಸ ಮಾಡುತ್ತಿದ್ದರು. ಅವರೆಲ್ಲರ ನಡುವೆ ಕಿಂಚಿತ್ತೂ ಲೋಪವಿಲ್ಲದೆ ವಿಶ್ವಾಸ, ಸಹಕಾರ ಮೂಡಲು ಹಾಗೂ ಅದೇ ರೀತಿ ಉಳಿಯಲು ಶ್ರೀ ಪ್ರಸಾದ್ ಬಹಳಮಟ್ಟಿಗೆ ಕಾರಣರಾಗಿದ್ದರು. ಅವರ ಉದಾರತೆ, ಸಜ್ಜನಿಕೆಗೆ ಒಂದು ಉದಾಹರಣೆಯೆಂದರೆ, ಆಗಿನ್ನು ಟಿ.ವಿ.ಹೊಸದಾಗಿ ಬಂದ ಕಾಲ. ನನಗೂ ಅದರ ಆಕರ್ಷಣೆ ಇದ್ದು, ಪ್ರತಿದಿನ ಸಂಜೆ ಅರ್ಧಗಂಟೆಯ ಕಾಲ ಅವರ ಮನೆಯಲ್ಲಿ ಟಿ.ವಿ. ನೋಡಿ ಬರುತ್ತಿದ್ದೆ.

ಒಮ್ಮೆ ಜಿಲ್ಲಾ ನ್ಯಾಯಾಧೀಶರ ಸಮ್ಮೇಳನವಾಯಿತು. ಆಗ ಜಿಲ್ಲೆಯ ಎಲ್ಲ ಕಡೆಗಳಿಂದ ಸುಮಾರು ೩೫-೪೦ ಜನ ನ್ಯಾಯಾಧೀಶರು ಬಿಜಾಪುರಕ್ಕೆ ಬಂದಿದ್ದರು. ನಮ್ಮ ಸಭೆ ಭಾನುವಾರ ಬೆಳಿಗ್ಗೆ ೯ ಘಂಟೆಯಿಂದ ಪ್ರಾರಂಭವಾಗಲಿದ್ದು, ಅದೇ ಸಮಯಕ್ಕೆ ಆ ದಿನ ಪ್ರಥಮವಾಗಿ ಬಿ.ಆರ್.ಛೋಪ್ರಾ ಅವರ 'ಮಹಾಭಾರತ' ಸೀರಿಯಲ್ ಪ್ರಾರಂಭ ವಾಗಲಿತ್ತು. ನಮ್ಮ ಅಧಿಕಾರಿಗಳಿಗೆಲ್ಲಾ ಅದನ್ನು ನೋಡುವ ಆಸೆಯಾಗಿತ್ತು. ಇದನ್ನು ಮನಗಂಡ ನಾನು ಶ್ರೀ ಪ್ರಸಾದ್‌ರವರೊಡನೆ ಮಾತನಾಡಿ ನ್ಯಾಯಾಧೀಶರುಗಳಿಗೆ 'ಮಹಾ ಭಾರತ' ನೋಡುವ ಅವಕಾಶ ಮಾಡಿಕೊಡಬೇಕಾಗಿ ಕೋರಿ ಸಭೆಯನ್ನು ೧ ಘಂಟೆಯಕಾಲ ಮುಂದಕ್ಕೆ ಹಾಕಿದೆ. ಶ್ರೀ ಪ್ರಸಾದ್ ಅಷ್ಟುಜನ ನ್ಯಾಯಾಧೀಶರಿಗೂ ತಮ್ಮ ಮನೆಯಲ್ಲಿ ಮತ್ತು ಅಧಿಕ ಜಿಲ್ಲಾ ನ್ಯಾಯಾಧೀಶರಾಗಿದ್ದ ಶ್ರೀ ಶಂಕರಮುರುಗದ್ ಅವರ ಮನೆಯಲ್ಲಿ ಟಿ.ವಿ. ನೋಡಲು ಅನುಕೂಲ ಮಾಡಿಕೊಟ್ಟಿದ್ದಲ್ಲದೆ, ತಮ್ಮ ಮನೆಯಲ್ಲಿ ಎಲ್ಲರಿಗೂ ಚಹಾ-ಉಪಾಹಾರದ ವ್ಯವಸ್ಥೆ ಮಾಡಿದರು. ನಾನು ಇವತ್ತಿಗೂ ಅದನ್ನು ನೆನೆಸಿಕೊಳ್ಳು ತ್ತಿರುತ್ತೇನೆ.

ಕೊನೆಯದಾಗಿ, ಇನ್ನೊಂದು ಘಟನೆಯನ್ನು ಪ್ರಸ್ತಾಪಿಸಬೇಕು. ನಾವು ನ್ಯಾಯಾಧೀಶರು ವಾಸವಾಗಿದ್ದ ಪ್ರಾಂಗಣ ತುಂಬಾ ದೊಡ್ಡದಿದ್ದು, ಸುಮಾರು ೧ ೧/೨ ಎಕರೆ ಪ್ರದೇಶವಾಗಿತ್ತು.

ಅನೇಕ ದೊಡ್ಡ ದೊಡ್ಡ ಮರಗಳಿದ್ದವು. ಇದರಿಂದಾಗಿ ನೆಲದಲ್ಲಿದ್ದ ಅನೇಕ ಬಿಲಗಳಲ್ಲಿ ನಾಗರಹಾವುಗಳು ಸೇರಿಬಿಟ್ಟಿದ್ದವು. ಇವುಗಳ ಕಾಟ ಜಾಸ್ತಿಯಾಗಿ ಒಮ್ಮೆ ಮುನ್ಸಿಫರೊಬ್ಬರ ಮನೆಯ ಮೆಟ್ಟಿಲುಮೇಲೆ ಒಂದು ಭಾರೀ ನಾಗರಹಾವು ಮಲಗಿದ್ದು, ಎಲ್ಲರ ಆತಂಕಕ್ಕೆ ಎಡೆಮಾಡಿಕೊಟ್ಟಿತ್ತು.

ಯಾವ ಅನಾಹುತಕ್ಕೂ ಅವಕಾಶ ಮಾಡಿಕೊಡಕೂಡದೆಂದು ನಾನು ಈ ವಿಷಯವನ್ನು ಇತರ ನ್ಯಾಯಾಧೀಶರೊಂದಿಗೆ ಚರ್ಚಿಸಿದೆ. ಶ್ರೀ ಪ್ರಸಾದ್ ತಮ್ಮ ಸಿಬ್ಬಂದಿವರ್ಗದ ಒಬ್ಬರಿಗೆ ಬಾಗಲಕೋಟೆಯಲ್ಲಿ ಹಾವು ಹಿಡಿಯುವವರು ಇದ್ದಾರೆಂದು ತಿಳಿಸಿ, ಅವರ ಮೂಲಕ ಆತನನ್ನು ಕರೆಸಿದರು. ೬-೧-೮೯ರಂದು ಬಂದವರು ಬಳ್ಳಾಪುರಮಠದ ಶ್ರೀ ವೀರಯ್ಯಸ್ವಾಮಿ ಬಸಯ್ಯಸ್ವಾಮಿ ಬಾಗೇವಾಡಿ; ೭೫ ವರ್ಷದ ವೃದ್ಧರು. ಶ್ರೀಯುತರು ತಮ್ಮ ಅದ್ಭುತ ಕೈಚಳಕವನ್ನು ತೋರಿ, ನಮ್ಮ ಪ್ರಾಂಗಣದಲ್ಲಿ ಸುಮಾರು ೧೦ ಹಾವುಗಳನ್ನು ಹಿಡಿದು ನಮ್ಮೆಲ್ಲರ ಆತಂಕವನ್ನು ನಿವಾರಣೆ ಮಾಡಿದರು.

ಬಹುಮುಖ ಪ್ರತಿಭೆಯ ಶ್ರೀ ಪ್ರಸಾದ್ ಅತ್ಯಂತ ಜನಾದರಣೀಯ ವ್ಯಕ್ತಿ. ಸರ್ವರಿಗೂ ಬೇಕಾದವರು. ಇತ್ತೀಚೆಗೆ ಶ್ರೀ ಸಿ.ಮಲೆಸಿದ್ದಪ್ಪ ಅವರ ಸ್ಮರಣಸಂಪುಟ 'ಘಟ್ಟಿಹೊಸಹಳ್ಳಿ ಗಟ್ಟಿಗ' ಸಂಚಾಲಕರಾಗಿ ಪುಸ್ತಕವನ್ನು ಹೊರತಂದ ಸಾಹಸಿಗಳು. ಅದೊಂದು ಅಪೂರ್ವ ಕೃತಿ. ಬಿಜಾಪುರದ ನಾವಿಬ್ಬರೂ ವರ್ಗಾವಣೆಯಿಂದ ಬೇರೆಯಾಗಿ ೧೪ ದೀರ್ಘ ವರ್ಷಗಳು ಸಂದಿವೆ. ಇಬ್ಬರೂ ಈಗ ನಿವೃತ್ತರಾಗಿದ್ದೇವೆ. ಈಗಲೂ ನಮ್ಮ ಕೈಲಾದ, ಸಮಾಜಕ್ಕೆ ಒಳಿತಾಗುವ ಕೆಲಸಗಳನ್ನು ಮಾಡುತ್ತಿದ್ದೇವೆ. ದೇವರು ಶ್ರೀ ಪ್ರಸಾದ್ ಮತ್ತು ಅವರ ಕುಟುಂಬದವರಿಗೆ ಆಯುರಾರೋಗ್ಯ, ಐಶ್ವರ್ಯಗಳನ್ನು ಕೊಟ್ಟು ಕಾಪಾಡಲಿ ಎಂದು ಕೋರುತ್ತೇನೆ.

೩

# ಸರಳತೆ-ಸಾತ್ವಿಕತೆಗಳ ಪ್ರತಿರೂಪ

**ಎಸ್. ವೈ. ಈರಣ್ಣವರ್**

ಜಿ.ಹೆಚ್.ಪ್ರಸಾದ್ ಅವರು ನನ್ನಮೇಲಿನ ಅಧಿಕಾರಿಯಾಗಿ, ೧೯೯೫ನೇ ಸೆಪ್ಟೆಂಬರ್ ತಿಂಗಳ ಸುಮಾರಿಗೆ ಶಿವಮೊಗ್ಗದ ಪ್ರಧಾನ ಜಿಲ್ಲಾ ನ್ಯಾಯಾಧೀಶರಾಗಿ ಮಂಡ್ಯದಿಂದ ವರ್ಗವಾಗಿ ಬಂದಾಗ, ಆಗ ನಾನು ಸಹಾ ಶಿವಮೊಗ್ಗಕ್ಕೆ ವರ್ಗವಾಗಿ ಬಂದು ಸುಮಾರು ೩ ತಿಂಗಳು ಆಗಿತ್ತು. ಶ್ರೀಯುತರ ಬಗ್ಗೆ ಆ ಮೊದಲೇ ಕೇಳಿ ಗೊತ್ತಿತ್ತು. ಆದರೆ ನನ್ನ ಈ ಸೇವಾ ಅವಧಿಯಲ್ಲಿ ಮುಖತಃ ಭೇಟಿ ಆಗುವ ಅಥವಾ ಅವರ ಜೊತೆ ಕೆಲಸ ಮಾಡುವ ಅವಕಾಶ ಬಂದಿರಲಿಲ್ಲ. ಆದರೆ ನಾನು ಕೋಲಾರ ಜಿಲ್ಲೆಯಲ್ಲಿ ನ್ಯಾಯಾಧೀಶನಾಗಿ ಕೆಲಸಮಾಡುವ ಕಾಲಕ್ಕೆ ಅವರ ನಿಕಟವರ್ತಿಗಳಲ್ಲೊಬ್ಬರಾದ ಎಂ.ಎಸ್.ದೊಡ್ಡಮನಿ, ನಿವೃತ್ತ ನ್ಯಾಯಾಧೀಶರವರ ಸಂಪರ್ಕ ಒದಗಿತು. ಅವರ ಮೂಲಕ ಶ್ರೀ ಪ್ರಸಾದ್ ಅವರ ಸ್ನೇಹಜೀವನದ ಪರಿಚಯವಾಯಿತು. ಅದಕ್ಕೂ ಮುಂಚೆ ನಾನು ಮೈಸೂರು ಜಿಲ್ಲೆಯಲ್ಲಿ ಕೆಲಸಮಾಡುವ ಕಾಲಕ್ಕೆ, ಶ್ರೀಯುತರು ಮೈಸೂರಿನಲ್ಲಿ ಸಿ.ಜೆ.ಎಂ. ನ್ಯಾಯಾಧೀಶರಾಗಿ ಕೆಲಸ ಮಾಡಿ ಆಗಷ್ಟೇ ವರ್ಗವಾಗಿ ಹೋಗಿದ್ದರು. ಆಗ ಅವರ ಬಗ್ಗೆ ಒಳ್ಳೆಯ ಅಭಿಪ್ರಾಯ ವ್ಯಕ್ತವಾಗಿತ್ತು.

ಶ್ರೀಯುತರು ಬೆಂಗಳೂರಿನಲ್ಲಿ ಕೆಲಸಮಾಡುವ ಕಾಲದಿಂದಲೂ ಅವರ ಸಮಾನ ಮನಸ್ಕರ ಜೊತೆ ಆತ್ಮೀಯವಾದ ಗೆಳೆತನ ಬೆಳೆಸಿಕೊಂಡಿದ್ದ ಅಧಿಕಾರಿಯಾಗಿದ್ದರೆಂದು ಬೇರೆ ಹೇಳಬೇಕಾಗಿಲ್ಲ. ಅವರ ಪ್ರಾಮಾಣಿಕತೆ, ಸೌಜನ್ಯತೆ ಮತ್ತು ತಮ್ಮ ಸಹೋದ್ಯೋಗಿಗಳ ಅಥವಾ ಅವರ ಕೈಕೆಳಗಿನ ಅಧಿಕಾರಿಗಳ ಬಗ್ಗೆ ಸಮಾನ ಮನೋಭಾವ ಹೊಂದಿ ಅವರೆಲ್ಲರನ್ನು ಆದರದಿಂದ ಕಾಣುವ ವಿಷಯವನ್ನು ನಾನು ಸಾಕಷ್ಟು ಕೇಳಿ ತಿಳಿದುಕೊಂಡಿದ್ದೆ. ಅವರು ಅತ್ಯಂತ ಮೃದುಸ್ವಭಾವದವರೆಂದು ಆಗಾಗಲೇ ಗೊತ್ತಾಗಿದ್ದಿತು.

ಶ್ರೀಯುತರು ಮಂಡ್ಯದಿಂದ ವರ್ಗವಾಗಿ ಇಲ್ಲಿಗೆ ಪ್ರಧಾನ ಜಿಲ್ಲಾ ನ್ಯಾಯಾಧೀಶರಾಗಿ ಬರುತ್ತಾರೆಂಬ ವಿಷಯ ತಿಳಿದಾಗ, ಅವರ ಕೈಕೆಳಗೆ ಕೆಲಸಮಾಡುವ ಒಂದು ಸದಾವಕಾಶ ನನಗೆ ಬಂದಿತೆಂದು ನಾನು ಖುಷಿಪಟ್ಟಿದ್ದೆ. ಸಾಮಾನ್ಯವಾಗಿ ಎಲ್ಲ ಅಧೀನ ನ್ಯಾಯಾಧೀಶರು

ಗಳು ಇಷ್ಟಪಡುವ ಅಂಶ ಎಂದರೆ, ತನ್ನ ಮೇಲಾಧಿಕಾರಿ ಆದಷ್ಟು ಒಳ್ಳೆಯವರು ಸಿಗಲಿ ಎಂಬುದು. ನನ್ನ ಈ ನಿರೀಕ್ಷೆಯನ್ನು ಶ್ರೀ ಪ್ರಸಾದರು ತಮ್ಮ ಮೂರುವರ್ಷಗಳ ಸೇವಾವಧಿಯಲ್ಲಿ ಹುಸಿಗೊಳಿಸಲಿಲ್ಲ. ನಾನು ಅವರ ನಿವಾಸದಲ್ಲಿ ಅಥವಾ ಕಛೇರಿಯಲ್ಲಿ ಭೇಟಿಯಾಗಲು ಹೋದಾಗಲೆಲ್ಲಾ, ಆದರದಿಂದ ಬರಮಾಡಿಕೊಂಡು, "ಬನ್ನಿ ಸಾಹೇಬರೇ" ಎಂದು ಆಹ್ವಾನಿಸುವ ಒಂದು ಪದ್ಧತಿ ಇಟ್ಟುಕೊಂಡಿದ್ದರು. ಅಂದರೆ ಕಿರಿಯರನ್ನು ಸಹಾ ಸಮಾನ ಮನೋಭಾವದಿಂದ ಕಾಣುವ ಪ್ರವೃತ್ತಿ ಅವರಲ್ಲಿ ಇತ್ತು. ಫೋನಿನಲ್ಲಿ ಮಾತನಾಡುವಾಗಲೂ ಅದೇ ಸೌಜನ್ಯತೆಯಿಂದ "ಇಂಥಾ ಕೆಲಸ ಆಗಬೇಕು ಬನ್ನಿ" ಎಂದು ಕರೆಯುತ್ತಿದ್ದರು.

ಶ್ರೀ ಪ್ರಸಾದರು ಅಧಿಕಾರವಹಿಸಿಕೊಂಡ ದಿನದಿಂದಲೇ ನನ್ನ ಮತ್ತು ಅವರ ಒಡನಾಟ ಪ್ರಾರಂಭವಾಯಿತು. ಅವರ ಆತ್ಮೀಯ ಗೆಳೆಯರಲ್ಲಿ ಒಬ್ಬರಾದ ಶ್ರೀ ಲಟ್ಟೆ ಸಾಹೇಬರು ಶಿವಮೊಗ್ಗದಲ್ಲಿ ಕೆಲಸದಲ್ಲಿದ್ದು, ಅವರು ಮತ್ತು ನಾನು ಸೇರಿ ಅವರ ನಿವಾಸದಲ್ಲಿ ಭೇಟಿ ಆಗುತ್ತಿದ್ದೆವು. ಮೊದಲಿನಿಂದಲೂ ಅವರ ಮತ್ತು ಅವರ ಕುಟುಂಬದವರ ಒಂದು ಆತ್ಮೀಯತೆಯನ್ನು ಕಂಡುಕೊಂಡಿದ್ದೆವು. ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ನನ್ನ ಹಾಗೂ ನನ್ನ ಸಹೋದ್ಯೋಗಿಗಳ ಎಲ್ಲಾ ರೀತಿಯ ಸಹಕಾರ ಕೋರಿದ್ದರು ಶ್ರೀ ಪ್ರಸಾದ್. ಅದರಂತೆ ನಾವು ಸಹಾ ವಾಗ್ದಾನವನ್ನು ನೀಡಿದ್ದೆವು. ಶ್ರೀಯುತರು ನಿವೃತ್ತಿಯಾಗುವವರೆಗೂ ನಮ್ಮ ಜೊತೆಯಲ್ಲಿದ್ದು, ನಮ್ಮನ್ನೆಲ್ಲಾ ಆತ್ಮೀಯತೆಯಿಂದ ನೋಡಿಕೊಂಡರು.

ಅವರು ಬಂದ ಹೊಸದರಲ್ಲಿಯೇ ಬೃಹತ್ ಲೋಕಅದಾಲತ್ ಮಾಡುವ ಪ್ರಸಂಗ ಬಂತು. ಇದಕ್ಕಾಗಿ ಜಿಲ್ಲೆಯ ಎಲ್ಲ ತಾಲ್ಲೂಕುಗಳಿಗೆ ಪ್ರವಾಸ ಮಾಡಿ ಜಿಲ್ಲೆಯಲ್ಲಿಯ ನ್ಯಾಯಾಧೀಶರುಗಳನ್ನು, ವಕೀಲಸಂಘದ ಅಧ್ಯಕ್ಷರು, ಸದಸ್ಯರುಗಳನ್ನು ಭೇಟಿಯಾಗಿ ರಾಜಿ-ಸಂಧಾನ ತೀರ್ಮಾನದ ವಿಚಾರದಲ್ಲಿ ಎಲ್ಲರ ಸಹಕಾರವನ್ನು ಕೋರಿದರು. ಸುಮಾರು ೩ ತಿಂಗಳಕಾಲ ನಡೆದ ಈ ರಾಜಿ-ಸಂಧಾನ ಅವಧಿಯಲ್ಲಿ ಇಡೀ ಜಿಲ್ಲೆಯಲ್ಲಿ ಸುಮಾರು ೧೦ ಸಾವಿರಕ್ಕಿಂತಲೂ ಹೆಚ್ಚಿನ ಕೇಸಿನ ವಿಲೇವಾರಿಯ ಸಾಧನೆಯನ್ನು ಮಾಡಿ ತೋರಿಸಿದರು. ಅಂದರೆ ಆ ವರ್ಷ ೧೦,೬೬೦ ಪ್ರಕರಣಗಳು ಶ್ರೀಯುತರ ನೇತೃತ್ವದಲ್ಲಿ ವಿಲೇವಾರಿಗೊಂಡವು. ಅದೇರೀತಿ ಮರುವರ್ಷವೂ ಎಲ್ಲರನ್ನೂ ಹುರಿದುಂಬಿಸಿ ೩ನೇ ಲೋಕಅದಾಲತನ್ನು ಮಾಡಲಾಯಿತು. ಆಗಲೂ ಸುಮಾರು ೧೧ ಸಾವಿರಕ್ಕೂ ಹೆಚ್ಚು ಮೊಕದ್ದಮೆಗಳನ್ನು ಇತ್ಯರ್ಥಗೊಳಿಸುವಲ್ಲಿ ಸಫಲರಾದೆವು. ಅಂದರೆ ರಾಜ್ಯಮಟ್ಟದಲ್ಲಿ ೨ ವರ್ಷ ಸತತವಾಗಿ ೧೦,೦೦೦ಕ್ಕಿಂತಲೂ ಹೆಚ್ಚಿನ ಕೇಸುಗಳನ್ನು ಇತ್ಯರ್ಥಗೊಳಿಸಿ, ಶಿವಮೊಗ್ಗ ಜಿಲ್ಲೆಯು ರಾಜ್ಯದಲ್ಲೆ ಪ್ರಥಮವಾಗಿ ನಿಲ್ಲುವಂತೆ ನೋಡಿಕೊಂಡರು. ಈ ಒಂದುವರ್ಷ ರಾಜ್ಯಮಟ್ಟದ ಸಭೆಯಲ್ಲೂ ಇದು ವ್ಯಕ್ತವಾದಾಗ, ಶ್ರೀಯುತರು ಅತ್ಯಂತ ಖುಷಿಪಟ್ಟರು. ಈ ಸಂತೋಷವನ್ನು ನಮ್ಮ ಜೊತೆ ಹಾಗೂ ಶಿವಮೊಗ್ಗ ಜಿಲ್ಲಾ ವಕೀಲರ ಸದಸ್ಯರುಗಳ ಹತ್ತಿರ ಸಂದರ್ಭ ಬಂದಾಗಲೆಲ್ಲಾ ಹಂಚಿಕೊಂಡರು. ಈ ಒಂದು ಸಾಧನೆಗೆ

ಕಾರಣರಾದ ಎಲ್ಲ ಅಧೀನ ನ್ಯಾಯಾಧೀಶರುಗಳಿಗೂ ವಕೀಲಸಂಘದವರಿಗೂ ಸಿಬ್ಬಂದಿಯವರಿಗೂ ಅವರು ತಮ್ಮ ಅಭಿನಂದನೆ ಸಲ್ಲಿಸಿದರು. ಅದು ತಮ್ಮ ವೈಯಕ್ತಿಕ ಅಥವಾ ಒಬ್ಬರ ಸಾಧನೆಯಲ್ಲ, ಎಲ್ಲರ ಸಾಧನೆಯೆಂದು ಹೇಳುತ್ತಿದ್ದರು. ಅವರಲ್ಲಿಯ ಈ ಮನೋಭಾವನೆ ಶಿವಮೊಗ್ಗ ಜಿಲ್ಲೆಯಲ್ಲಿ ಜನಪ್ರಿಯ ನ್ಯಾಯಾಧೀಶರೆಂದು ಹೆಸರು ಪಡೆಯಲು ಸಹಾಯಕ ವಾಯಿತು.

ಇನ್ನು ಕಛೇರಿ ಕೆಲಸದ ವಿಚಾರಕ್ಕೆ ಬಂದರೆ, ಶ್ರೀ ಪ್ರಸಾದರು ದಕ್ಷತೆಗೆ ಹೆಸರಾದವರು. ಸಿಬ್ಬಂದಿವರ್ಗದಲ್ಲಿ ತಪ್ಪು-ತಡೆಗಳು ಕಂಡುಬಂದಲ್ಲಿ ತಮ್ಮ ಮೃದುವಾದ ಭಾಷೆಯಲ್ಲಿ ಗದರಿಸಿ, "ಈ ರೀತಿ ಆಗದಂತೆ ನೋಡಿಕೊಳ್ಳಿ" ಎಂದು ಎಚ್ಚರಿಕೆ ಕೊಡುತ್ತಿದ್ದರು. ತಪ್ಪುಗಳನ್ನು ತಿದ್ದಿಕೊಡುವ ಅಧಿಕಾರಿಗಳು ಬಹಳ ವಿರಳ. ಶ್ರೀ ಪ್ರಸಾದರು ಅಂತಹ ವಿರಳರಲ್ಲಿ ಒಬ್ಬರು ಎಂದು ಹೇಳಿದರೆ ತಪ್ಪಾಗಲಾರದು.

ವೈಯಕ್ತಿಕವಾಗಿ, ಶ್ರೀಯುತರು ಸಿಹಿತಿಂಡಿ, ಹಣ್ಣು-ಹಂಪಲುಗಳನ್ನು ಬಹಳವಾಗಿ ಇಷ್ಟಪಡುತ್ತಿದ್ದರು. ಹಣ್ಣು-ಹಂಪಲನ್ನು ಕೊಳ್ಳಲು ಕೆಲವೊಮ್ಮೆ ನಮ್ಮನ್ನೂ ಜೊತೆಗೆ ಕರೆದುಕೊಂಡು ಹೋಗುತ್ತಿದ್ದರು. ನಮ್ಮೊಡನೆ ಹಣ್ಣುಗಳನ್ನು ಖರೀದಿಸುತ್ತಿದ್ದರು. ವೈಯಕ್ತಿಕ ಆರೋಗ್ಯ ಹಾಗೂ ಕುಟುಂಬದ ಸದಸ್ಯರ ಆರೋಗ್ಯದ ಬಗ್ಗೆ ಅವರಲ್ಲಿ ಹೆಚ್ಚಿನ ಕಾಳಜಿ ಮತ್ತು ಕಳಕಳಿ ಇರುವುದು ಎದ್ದುಕಾಣುತ್ತಿತ್ತು. ಅದೇ ವಿಚಾರವನ್ನು ನಮಗೂ ತಿಳಿಹೇಳುತ್ತಿದ್ದರು.

ಸಂಗೀತದಲ್ಲಿ ಅಪಾರ ಆಸಕ್ತಿ ಉಳ್ಳವರಾಗಿದ್ದರು ಶ್ರೀ ಪ್ರಸಾದ್. ಹಳೆಯ ಹಿಂದಿ ಚಿತ್ರಗೀತೆ ಮತ್ತು ಶಾಸ್ತ್ರೀಯಸಂಗೀತದ ಕ್ಯಾಸೆಟ್ಟುಗಳನ್ನು ಸಾಕಷ್ಟು ಸಂಗ್ರಹಿಸಿದ್ದರು. ಇದಕ್ಕಾಗಿ ಒಂದು ರ್‍ಯಾಕ್ ಮಾಡಿಸಿದ್ದು, ಅದರಲ್ಲಿ ನೂರಾರು ಕ್ಯಾಸೆಟ್ಟುಗಳನ್ನು ಹೊಂದಿದ್ದರು. ತಮ್ಮ ಕಿರಿಯ ಮಗಳಿಗೆ ಸಂಗೀತ ಅಭ್ಯಾಸ ಮಾಡಲು, ಹಾರ್ಮೋನಿಯಂ ನುಡಿಸಲು ಏರ್ಪಾಡು ಮಾಡಿದ್ದರು.

ಪೂಜೆ-ಪುನಸ್ಕಾರ, ಶ್ರದ್ಧಾಭಕ್ತಿ-ಭಾವನೆಗಳಲ್ಲಿ ಅಪಾರ ಆಸಕ್ತಿ ಶ್ರೀ ಪ್ರಸಾದರಿಗೆ. ಎಲ್ಲಾ ವಿಚಾರದಲ್ಲಿಯೂ ಶಿಸ್ತು ಮತ್ತು ಸಂಯಮಗಳು ಎದ್ದುಕಾಣುತ್ತಿದ್ದವು. ಯೋಗ ಮತ್ತು ಧ್ಯಾನಗಳ ಬಗ್ಗೆಯೂ ಆಸಕ್ತಿ ಬೆಳೆಸಿಕೊಂಡಿದ್ದರು. ಶಿವಮೊಗ್ಗದಲ್ಲಿ ಪಿರಮಿಡ್ ರೂಪದಲ್ಲಿ ಒಂದು ಮಂದಿರ ಇದ್ದು, ಆ ಧ್ಯಾನಮಂದಿರಕ್ಕೆ ಭೇಟಿ ನೀಡುತ್ತಿರುತ್ತಿದ್ದರು. ಅಲ್ಲಿ ಎಷ್ಟು ಹೊತ್ತು ಕೂತರೂ ಸಾಕಾಗುವುದಿಲ್ಲವೆಂದು ಹೇಳುತ್ತಿದ್ದರು. ಶಾಂತಿ, ನೆಮ್ಮದಿತರುವ ತಾಣವೆಂದು ಅವರು ಹೇಳುತ್ತಿದ್ದರು. ಎಲ್ಲರಿಗೂ ಒಳ್ಳೆಯದನ್ನೆ ಬಯಸುವ ಪ್ರತಿಯೊಬ್ಬನಿಗೂ ದೇವರು ಒಳ್ಳೆಯದನ್ನೇ ಮಾಡುತ್ತಾನೆ ಎನ್ನುವ ಮಾತಿನಂತೆ ಅವರ ಜೀವನದಲ್ಲಿಯೂ ಒಂದು ಉತ್ತಮ ಕಾರ್ಯ ಘಟಿಸಿತು. ಅದೇ ಅವಳ ಕಿರಿಯ ಮಗಳ ಮದುವೆ. ಅವರ ಕಿರಿಯ ಮಗಳ ಮದುವೆ ಒಳ್ಳೆಯ ವರನೊಂದಿಗೆ ನಿಶ್ಚಯವಾಗಿ, ಸರಾಗವಾಗಿ ಮತ್ತು ಸರಳವಾಗಿ ನಡೆಯಿತು. ಮದುವೆ ಸಿದ್ಧತೆಗಳನ್ನೆಲ್ಲಾ

ಶ್ರೀ ಪ್ರಸಾದರೇ ಮುತುವರ್ಜಿವಹಿಸಿ ಮುಂದೆನಿಂತು ಮಾಡಿದ್ದರು. ಮದುವೆ ಆಹ್ವಾನ ಪತ್ರಿಕೆಗಳನ್ನು ತಾವೇ ಸ್ವತಃ ಹಂಚಲು ಕಾಳಜಿ ವಹಿಸಿದ್ದುದು ಅವರ ಸೌಜನ್ಯಕ್ಕೆ ಹಿಡಿದ ಕನ್ನಡಿ.

ಶ್ರೀ ಪ್ರಸಾದರು ಚಿಕ್ಕಮಗಳೂರಿನ ಜಿಲ್ಲಾ ಗ್ರಾಹಕರ ನ್ಯಾಯಾಲಯಕ್ಕೆ ಅಧ್ಯಕ್ಷರಾಗಿ ಹೋಗುವ ಮುನ್ನ, ಅವರಿಗೆ ಬೀಳ್ಕೊಡುವ ಸಮಾರಂಭ ಏರ್ಪಡಿಸಲಾಯಿತು. ಮನೆಯಿಂದ ಹೊರಡುವ ಮುನ್ನ ಆತ್ಮೀಯತೆಯಿಂದ ದುಃಖ ತಡೆಯಲಾರದೆ ಅವರ ಕಣ್ಣು ತುಂಬಿಬಂದಿತು. ನನ್ನ ಮತ್ತು ನನ್ನ ಸಹೋದ್ಯೋಗಿಗಳ ಸ್ಥಿತಿ ಕೂಡ ಅದೇರೀತಿ ಆಗಿತ್ತು. ಅದೊಂದು ತೀರಾ ಭಾವುಕ ಸನ್ನಿವೇಶ. ಅಂತಹ ಆತ್ಮೀಯ ಸಂಬಂಧ ಉಳ್ಳವರು ಶ್ರೀ ಪ್ರಸಾದ್.

ಈ ಲೇಖನವನ್ನು ಮುಗಿಸುವ ಮೊದಲು, ಶ್ರೀ ಪ್ರಸಾದರನ್ನು ಕುರಿತು ಒಂದೆರಡು ಪ್ರಸಂಗಗಳನ್ನು ಇಲ್ಲಿ ಹೇಳುವುದು ಅತ್ಯಂತ ಅವಶ್ಯಕವೆಂದು ಭಾವಿಸಿದ್ದೇನೆ.

ಮೊದಲನೆಯದು, ಶ್ರೀಯುತರ ಪ್ರಾಮಾಣಿಕತೆಯ ವಿಚಾರ. ಬುದ್ಧಿಮಟ್ಟದಲ್ಲಿ ತಾವು ಇತರರಿಗಿಂತ ಕಡಿಮೆ ಇರಬಹುದೇ ಹೊರತು, ಪ್ರಾಮಾಣಿಕತೆಯಲ್ಲಿ ತಾವು ಯಾರಿಗಿಂತಲೂ ಕಡಿಮೆ ಇಲ್ಲ (I am second to none) ಎಂಬುದಾಗಿ ಅವರು ಎದೆತಟ್ಟಿ ಹೇಳುತ್ತಿದ್ದರು. ಈ ಮಾತಿನಂತೆಯೇ ಅವರು ನಡೆದುಕೊಂಡರು. ಎರಡನೆಯದು, ಸೇವಾವಧಿಯಲ್ಲಿರುವಾಗಲೇ ತೀರಿಕೊಂಡಿದ್ದ ಒಬ್ಬ ಪ್ರಾಮಾಣಿಕ ಸಿಬ್ಬಂದಿಗೆ ಸಂಬಂಧಿಸಿದ್ದು. ಆ ಸಿಬ್ಬಂದಿಗೆ ಒಬ್ಬ ಮಗನಿದ್ದು, ಆತನಿಗೆ ಕೆಲಸದ ಅವಶ್ಯಕತೆಯಿದ್ದಿತು. ಈ ಅವಶ್ಯಕತೆಯನ್ನು ಮನಗಂಡ ಶ್ರೀ ಪ್ರಸಾದರು, ಎಲ್ಲ ಒತ್ತಡಗಳನ್ನು ಮೆಟ್ಟಿನಿಂತು, ಆ ಸಿಬ್ಬಂದಿಯ ಮಗನಿಗೆ ಕೆಲಸವನ್ನು ಕೊಟ್ಟು, ತಮ್ಮ ಅಚಲ ನಿರ್ಧಾರ ಮೆರೆದರು. ಈ ಮೂಲಕ ಅಸಹಾಯಕರ ಬಗ್ಗೆ ತಮ್ಮಲ್ಲಿ ಇದ್ದ ಕಳಕಳಿಯನ್ನು ಎತ್ತಿ ತೋರಿಸಿದ್ದರು. ಒಬ್ಬ ಯೋಗ್ಯವ್ಯಕ್ತಿಗೆ ಕೆಲಸವನ್ನು ಕೊಟ್ಟು, ಆರ್ಥಿಕವಾಗಿ ಬಿದ್ದುಹೋಗಿದ್ದ ಸಂಸಾರಕ್ಕೆ ಆಶ್ರಯ ಕಲ್ಪಿಸಿದುದು ಸಣ್ಣ ವಿಚಾರವೇನಲ್ಲ. ಒಂದು ಒಳ್ಳೆಯ ಕೆಲಸವನ್ನು ಮಾಡಿದೆನೆಂಬ ಆತ್ಮತೃಪ್ತಿ ಅವರಲ್ಲಿದ್ದುದು ಸ್ಪಷ್ಟ. ಶ್ರೀಯುತರ ಬೀಳ್ಕೊಡುಗೆ ಸಮಾರಂಭದಲ್ಲಿ ಈ ವಿಷಯವನ್ನು ನಾನು ಸಹಾ ಪ್ರಸ್ತಾಪ ಮಾಡಿದ್ದೆ. ಈ ಒಂದು ಒಳ್ಳೆಯ ಕಾರ್ಯ ಬಹುಶಃ ಅವರು ತಮ್ಮ ಜೀವನದಲ್ಲಿ ಚಿರಕಾಲ ನೆನಪು ಇಡುವಂತಹದ್ದು ಮಾತ್ರವಲ್ಲ, ಇದರಿಂದ ಅವರು ಪಡೆದುಕೊಂಡ ಆತ್ಮತೃಪ್ತಿಯೂ ಬೆಲೆ ಕಟ್ಟಲಾರದಂಥದ್ದು. ಇಂತಹದೇ ಮನೋಭಾವನೆಯನ್ನು ಆ ಸಿಬ್ಬಂದಿ ಮತ್ತು ಆತನ ಕುಟುಂಬದ ಸದಸ್ಯರು ಶ್ರೀ ಪ್ರಸಾದರ ಬಗ್ಗೆ ಇಂದಿಗೂ ಹೊಂದಿದ್ದಾರೆ.

ಇನ್ನೊಂದು ವಿಚಾರ. ಶ್ರೀ ಪ್ರಸಾದರು ಸೇವೆಯಿಂದ ನಿವೃತ್ತರಾಗಿ, ಚಿಕ್ಕಮಗಳೂರಿನ ಜಿಲ್ಲಾ ಗ್ರಾಹಕರ ನ್ಯಾಯಾಲಯಕ್ಕೆ ಅಧ್ಯಕ್ಷರಾಗಿ ಹೋಗುವ ಮುನ್ನ, ಶಿವಮೊಗ್ಗ ವಕೀಲರ ಸಂಘದ ಸದಸ್ಯರು ಬೀಳ್ಕೊಡುಗೆ ಸಮಾರಂಭ ಏರ್ಪಡಿಸಿದ್ದರು. ಈ

ಸಮಾರಂಭಕ್ಕೆ ಶ್ರೀ ಪ್ರಸಾದರ ಗುರುಗಳಾದ ಹಿರಿಯ ವಕೀಲ ಶ್ರೀ ಟಿ.ವೆಂಕಟರಾಮಾಶಾಸ್ತ್ರಿಯವರು ಅಧ್ಯಕ್ಷರಾಗಿದ್ದರು. ಬಹುಶಃ ಇಂತಹ ಅಪರೂಪದ ಪ್ರಸಂಗ ಬೇರೆ ಯಾವುದೇ ನ್ಯಾಯಾಧೀಶರ ಜೀವನದಲ್ಲಿ ನಡೆಯುವುದು ದುರ್ಲಭ ಎಂದು ನಾನು ಭಾವಿಸಿದ್ದೇನೆ. ಏಕೆಂದರೆ ಯಾರ ಕಛೇರಿಯಲ್ಲಿ ಕಿರಿಯ ವಕೀಲರಾಗಿ ವೃತ್ತಿಯನ್ನು ಪ್ರಾರಂಭಿಸಿದ್ದರೊ, ಅವರ ಅಧ್ಯಕ್ಷತೆಯಲ್ಲಿಯೇ ತಾವು ನಿವೃತ್ತಿಯಾಗುವ ಕಾಲಕ್ಕೆ ಬೀಳ್ಕೊಡುಗೆಯನ್ನು ಪಡೆದುಕೊಳ್ಳುವ ಅಪರೂಪದ ಅವಕಾಶವನ್ನು ಶ್ರೀಯುತರು ಪಡೆದುಕೊಂಡಿದ್ದರು. ಶ್ರೀ ಟಿ.ವೆಂಕಟರಾಮಾಶಾಸ್ತ್ರಿಯವರು ಆ ದಿನ ತಮ್ಮ ಅಧ್ಯಕ್ಷ ಸ್ಥಾನದಿಂದ ಮಾತನಾಡಿ, ಶ್ರೀಯುತರನ್ನು ಮನಸಾರೆ ಅಭಿನಂದಿಸಿ ಹರಸಿದರು. ಶ್ರೀ ಪ್ರಸಾದರನ್ನು ಕುರಿತು ಶ್ರೀ ಶಾಸ್ತ್ರೀಯವರು ಒಂದು ಕವನ ಸಹಾ ರಚಿಸಿದ್ದರಲ್ಲದೆ, ಆ ಕವನವನ್ನು ಆ ಬೀಳ್ಕೊಡುಗೆ ಸಮಾರಂಭದಲ್ಲಿ ವಾಚಿಸಿದುದು ಮರೆಯಲಾಗದಂತಹ ಸಂದರ್ಭವನ್ನು ಸೃಷ್ಟಿಸಿತು.

ಶ್ರೀ ಟಿ.ವೆಂಕಟರಾಮಾಶಾಸ್ತ್ರಿಯವರು ತಮ್ಮ ಅಧ್ಯಕ್ಷ ಭಾಷಣದಲ್ಲಿ, ಶ್ರೀ ಪ್ರಸಾದರು ಈ ಮಟ್ಟಕ್ಕೆ ಬಂದು ಜೀವನದಲ್ಲಿ ಯಶಸ್ಸು ಕಾಣುವಲ್ಲಿ ಶ್ರೀಮತಿ ಪ್ರಸಾದರ ಪಾತ್ರ ಅತ್ಯಂತ ಮಹತ್ವದ್ದೆಂದು ಒತ್ತಿಹೇಳಿ ಶ್ರೀಯುತರ ಪತ್ನಿಯವರನ್ನು ಸಹಾ ಅಭಿನಂದಿಸಿದರು. ಶ್ರೀಮತಿ ಪ್ರಸಾದರಲ್ಲಿಯ ತಾಳ್ಮೆ, ಸಹನೆಗಳಿಂದ ಸಂಸಾರವನ್ನು ತೂಗಿಸಿಕೊಂಡು ಹೋಗುವ ಸಾಮರ್ಥ್ಯದಿಂದ ಶ್ರೀ ಪ್ರಸಾದರು ನ್ಯಾಯಾಧೀಶರ ಕಾರ್ಯನಿರ್ವಹಣೆಯಲ್ಲಿ ಯಾವುದೇ ಅಡ್ಡಿ ಆತಂಕಗಳಿಲ್ಲದೆ ಇಷ್ಟು ಎತ್ತರಕ್ಕೆ ಬೆಳೆದರೆಂದು ಹೇಳಿದರು. ಶ್ರೀ ಪ್ರಸಾದರಿಗೆ ೬೦ ವರ್ಷ ತುಂಬಿರುವುದರಿಂದ ಷಷ್ಟ್ಯಬ್ದಿ ಸಮಾರಂಭ ಏರ್ಪಡಿಸಿಕೊಳ್ಳುವುದು ಸೂಕ್ತ; ಷಷ್ಟ್ಯಬ್ದಿ ಸಮಾರಂಭ ಒಬ್ಬ ವ್ಯಕ್ತಿಯ ಜೀವನದಲ್ಲಿ ಒಳ್ಳೆಯದನ್ನು ಮಾಡುತ್ತದೆ ಎಂದು ಸಹಾ ಶ್ರೀ ಶಾಸ್ತ್ರೀಯವರು ನುಡಿದಿದ್ದರು. ಬಹುಶಃ ಶ್ರೀ ಶಾಸ್ತ್ರಿಯವರ ಆಶಯವು ನಿಜವಾಗುತ್ತಿದೆಯೆಂಬಂತೆ ಶ್ರೀ ಜಿ.ಹೆಚ್.ಪ್ರಸಾದರ ಷಷ್ಟ್ಯಬ್ದಿ ಸಮಾರಂಭವನ್ನು ನಡೆಸಿ ಅವರನ್ನು ಅಭಿನಂದಿಸಲು ಹಾಗೂ ಈ ಶುಭಸಂದರ್ಭದಲ್ಲಿ ಗ್ರಂಥರೂಪದ ಉಡುಗೊರೆ ಅರ್ಪಿಸಲು ನಿರ್ಧರಿಸುವ ವಿಚಾರ ಅತ್ಯಂತ ಹರ್ಷದಾಯಕ ಎಂದು ನಾನು ನಂಬಿರುತ್ತೇನೆ.

ಶ್ರೀ ಜಿ.ಹೆಚ್.ಪ್ರಸಾದರ ಗುರುಗಳಾದ ಶ್ರೀ ಟಿ.ವೆಂಕಟರಾಮಾಶಾಸ್ತ್ರಿಯವರು ರಚಿಸಿರುವ ಕವನದೊಂದಿಗೆ ಈ ಲೇಖನವನ್ನು ಮುಗಿಸುತ್ತಿದ್ದೇನೆ:

ಗುಣಂಗಳೊಳ್ ಪರಮಗುಣಂ ಪ್ರಸಾದಂ
ಮನವನಪಹರಿಸುವುದು ತನ್ನ ನಲ್ಮೆಯಿಂ
ಮನುಜರೊಳ್, ನ್ಯಾಯವಿದರೊಳ್ ಈ ಪ್ರಸಾದಂ
ಜನಮನವ ಗೆದ್ದಿಹರು ಸತ್ಯ ಚಾರಿತ್ರ್ಯದಿಂ

ಸರಳ ಸಜ್ಜನಿಕೆಯಿಂ ಶುಭ್ರ ಸೇವಾವೃತ್ತಿಯಿಂ
ಹರುಷ ಹೆಚ್ಚಿಸುತ - ಬಹು ಮನ್ನಣೆಯ ಗಳಿಸಿ
ಪರಿಪರಿಯ ಹುದ್ದೆಗಳ ನಿರ್ವಹಿಸಿ ದಕ್ಷತೆಯಿಂ
ಪರಮೇಶ್ವರನ ಪ್ರಸಾದವಂ ಗಳಿಸಿಹರು ಇವರು

ಧನ್ಯತೆಯನಾಂತು ಪರಮ ಪವಿತ್ರ ವೃತ್ತಿಯಲಿ
ಮಾನ್ಯರೊಳ್ ಮಾನ್ಯರಿವರೆಂಬ ಖ್ಯಾತಿಯಲಿ
ನ್ಯೂನತೆಯ ತೋರದೆಲೆ ಅನುದಿನದ ಬಾಳಿನಲಿ
ಶ್ರೀನಿವಾಸನ ಕೃಪೆಗೆ ಪಾತ್ರರಾಗಿಹರು ದಿಟದಿ

ಸುವಿಶ್ರಾಂತ ಜೀವನದ ಹೊಸ್ತಿಲಲಿ ನಿಂತಿಹರು
ದಿವದ ದೇವತೆಗಳಿವರ ಮಂಗಳವ ಹರಸುವರು
ಕವಿಮಿತ್ರನೀ ಶುಭದ ಒಸಗೆನುಡಿ ನೀಡಿಹನು
ತವ ಭಾಗ್ಯ ದಿನದಿನವು ಬೆಳೆಯುತಿರಲೆಂದು

ಶುಭಂ

೪

# ಸತ್ಯದ ಪ್ರತಿಪಾದಕ

**ಎಂ. ಶಂಭುಲಿಂಗಪ್ಪ**

ಶ್ರೀ ಪ್ರಸಾದರ ಸಮೀಪವರ್ತಿಯಾಗಿ ಅವರ ಬಗ್ಗೆ ನಾನು ಗುರುತಿಸಿದ ಕೆಲವು ವಿಷಯಗಳನ್ನು ಮನಸ್ಸಿನ ಆಳದಿಂದ ಇಲ್ಲಿ ತೆರೆದಿಟ್ಟಿದ್ದೇನೆ. ಪ್ರಸಾದರು ಸಜ್ಜನರು, ಸರಳತೆ, ಸಂಯಮಗಳ ಸಾಕಾರಮೂರ್ತಿ, ಹಿತಮಿತವಾದ ಮಾತುಗಾರರು; ನುಡಿದಂತೆ ನಡೆಯುವವರು; ತಮ್ಮ ಆತ್ಮಸಾಕ್ಷಿಗೆ ಅನುಗುಣವಾಗಿ ನಡೆದುಕೊಳ್ಳುವವರು; ನ್ಯಾಯ, ನೀತಿ, ಧರ್ಮಗಳು ಅವರ ಉಸಿರು; ಶಿಸ್ತುಬದ್ಧವಾದ ಜೀವನಪದ್ಧತಿ ಪಾಲಿಸಿದವರು; ಸತ್ಸಂಗ ಬಯಸುವಂತಹವರು; ಸದ್ವಿಚಾರ, ಸದಾಚಾರಗಳನ್ನು ಬೆಳೆಸಿಕೊಂಡಂತಹವರು! ನ್ಯಾಯಾಧೀಶರಾಗಿ ತಮ್ಮ ಪವಿತ್ರ ಕರ್ತವ್ಯವನ್ನು ನಿರ್ಭಯವಾಗಿ ನಿಭಾಯಿಸಿದ್ದಾರೆ. ಆಸೆ, ಆಮಿಷಗಳಿಗೆ ಎಂದೂ ಒಳಗಾದವರಲ್ಲ.

೧೯೯೬-೯೭ರಲ್ಲಿ ನಾನು ಕರ್ನಾಟಕ ರಾಜ್ಯ ನ್ಯಾಯಾಂಗ ಅಧಿಕಾರಿಗಳ ಸಂಘದ ಅಧ್ಯಕ್ಷನಾಗಿದ್ದೆ. ಶ್ರೀ ಪ್ರಸಾದ್ ಅವರು ಆ ಅವಧಿಯಲ್ಲಿ ಉಪಾಧ್ಯಕ್ಷರಾಗಿದ್ದರು. ಆಗಿನ ಮುಖ್ಯಮಂತ್ರಿ ಶ್ರೀ ಜೆ.ಹೆಚ್.ಪಟೇಲ್ ಅವರನ್ನು ಸಂಪರ್ಕಿಸಿ, ಬ್ಯಾಂಕ್ವೆಟ್‌ಹಾಲ್‌ನಲ್ಲಿ ನ್ಯಾಯಾಧೀಶರ ಸಮ್ಮೇಳನ ನಡೆಸಲು ಸಹಕರಿಸಿದರು. ಯಾವುದೇ ಕಳಂಕ ಬಾರದಂತೆ ಉತ್ತಮವಾಗಿ ಕೆಲಸ ನಿರ್ವಹಿಸಿ, ಸಮ್ಮೇಳನವು ಯಶಸ್ವಿಯಾಗುವುದಕ್ಕೆ ಸಹಕರಿಸಿ, ಉಚ್ಚನ್ಯಾಯಾಲಯದ ಶ್ರೇಷ್ಠ ನ್ಯಾಯಮೂರ್ತಿಗಳು ಮತ್ತು ಹಿರಿಯ ನ್ಯಾಯಮೂರ್ತಿಗಳಿಂದ ಮೆಚ್ಚುಗೆ ಗಳಿಸಿದರು.

ಅವರು ಉಪಾಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಒಬ್ಬ ಸಿವಿಲ್ ನ್ಯಾಯಾಧೀಶರಿಗೆ ಪ್ರೊಮೋಷನ್ ಕೊಡುವ ವಿಚಾರದಲ್ಲಿ ಒಂದು ಸಣ್ಣ ಕಾರಣದಿಂದ ಅನ್ಯಾಯವಾಗಿತ್ತು. ಅದನ್ನು ಸಹಿಸದ ಶ್ರೀ ಪ್ರಸಾದರು, ಉಚ್ಚನ್ಯಾಯಾಲಯದ ಹಿರಿಯ ನ್ಯಾಯಮೂರ್ತಿಯವರ ಮುಂದೆ, "ಸಿವಿಲ್ ನ್ಯಾಯಾಧೀಶರಿಗೆ ಅನ್ಯಾಯವಾಗಿದೆ. ನ್ಯಾಯ ದೊರಕಿಸಿಕೊಡಿ" ಎಂದು ಗಳಗಳನೆ ಅತ್ತರು! ಆಗ ನಾನು ಅವರ ಪಕ್ಕದಲ್ಲೆ ಸ್ತಂಭೀಭೂತನಾಗಿ ಕುಳಿತುಕೊಂಡಿದ್ದು, ಸಮಾಧಾನಪಡಿಸಿದೆ. ಶ್ರೇಷ್ಠ ನ್ಯಾಯಾಲಯದ ಎಲ್ಲಾ ನ್ಯಾಯಮೂರ್ತಿಗಳು

ಪ್ರಸಾದರ ವಿನಂತಿಯನ್ನು ಕೂಲಂಕಶವಾಗಿ ಪರಿಗಣಿಸಿ, ಆ ಸಿವಿಲ್ ನ್ಯಾಯಾಧೀಶರಿಗೆ ಅನ್ಯಾಯವಾಗಿದೆಯೆಂದು ಮನಗಂಡು, ಅವರಿಗೆ ಬಡ್ತಿ ಕೊಟ್ಟರು. ಸತ್ಯಕ್ಕೆ ಜಯವಾಗಬೇಕು, ಸತ್ಯ ಹೇಳುವವರಿಗೆ ರಕ್ಷಣೆ ಬೇಕು, ಸಮರ್ಥ ನ್ಯಾಯದಾನ ವ್ಯವಸ್ಥೆಯಾಗಬೇಕು ಎಂದು ಪ್ರತಿಪಾದಿಸಿ, ಸೋಲರಿಯದ ಗೆಲುವನ್ನೆ ಸಾಧಿಸಿದರು. ಅಜ್ಞಾನದ ದೀಪ ಕರಗಿಸಿ ಸುಜ್ಞಾನದ ದೀಪ ಹೊರಹೊಮ್ಮಿಸಿದವರು ಶ್ರೀಪ್ರಸಾದರು ಎಂದು ನನ್ನ ಮನಸ್ಸಿನ ಭಾವನೆಗಳನ್ನು ಈ ಲೇಖನದ ಮೂಲಕ ಹಂಚಿಕೊಂಡಿದ್ದೇನೆ.

೫

# ಬಹುಮುಖಿ ವ್ಯಕ್ತಿತ್ವ

ಎನ್. ಶ್ರೀವತ್ಸ ಕೆದಿಲಾಯ

ಉಳಿದೆಲ್ಲರಿಗಿಂತ ಎತ್ತರದಲ್ಲಿ ಕುಳಿತು ನ್ಯಾಯದಾನ ಮಾಡುತ್ತಿರುವ ನ್ಯಾಯಾಧೀಶನ ಬದುಕು ಹೂವಿನ ಹಾಸಿಗೆ ಇರಬೇಕು ಎಂಬುದಾಗಿ ಮೇಲ್ನೋಟಕ್ಕೆ ಅನಿಸಿದರೂ ಅದು ಮೊನಚಾದ ಮುಳ್ಳಿನ ಕಂತೆಯ ಮೇಲಿರುವ ಹಾಸಿಗೆ ಎಂಬುದು ಹಗಲಿನಷ್ಟೇ ಸತ್ಯ! ಆದರೆ ಈ ಸತ್ಯವನ್ನು ಅರಿಯದೆ ಇದು ಸುಖದ ಸೋಪಾನ ಎಂಬುದಾಗಿ ಭಾವಿಸಿ ಅಥವಾ ಭ್ರಮಿಸಿ, ಅಧಿಕಾರ ಮದ ಮೆರೆಸಿ ದುರುಪಯೋಗಪಡಿಸಿ ಸ್ಥಾನಗೌರವಕ್ಕೆ ಚ್ಯುತಿ ತಂದ ನ್ಯಾಯಾಧೀಶರುಗಳು ಒಂದು ಕಡೆಯಾದರೆ; ಈ ಸತ್ಯವನ್ನು ಮನಗಂಡು ಸರಳತೆ, ಸಜ್ಜನಿಕೆ ಹಾಗೂ ಸದಾಚಾರಗಳಿಗೆ ಗೌರವ ಕೊಟ್ಟು, ಸಾತ್ವಿಕ ಜೀವನ ನಡೆಸಿ, ನ್ಯಾಯದ ಪರವಹಿಸಿ ನ್ಯಾಯಾಸ್ಥಾನದ ಕೀರ್ತಿ ಬೆಳಗಿದ ನ್ಯಾಯಾಧೀಶರುಗಳು ಇನ್ನೊಂದು ಕಡೆ. ಆ ರೀತಿ ಕೀರ್ತಿ ಬೆಳಗಿಸಿದವರಲ್ಲಿ ಹಿರಿಯರೂ ಗೆಳೆಯರೂ ಆಗಿರುವ ಶ್ರೀ ಜಿ.ಹೆಚ್.ಪ್ರಸಾದ್ ಒಬ್ಬರು.

ಶ್ರೀ ಜಿ.ಹೆಚ್.ಪ್ರಸಾದ್ ಅವರನ್ನು ನಾನು ನ್ಯಾಯಾಧೀಶನಾಗಿ ಅನೇಕ ವರ್ಷಗಳಿಂದ ಬಹಳ ಹತ್ತಿರದಿಂದ ಬಲ್ಲೆ. ಕೆಲವು ವರ್ಷ ಅವರ ಜೊತೆಯಲ್ಲೇ ನ್ಯಾಯಾಧೀಶನಾಗಿ ಮೈಸೂರಿನಲ್ಲಿ ಸೇವೆ ಸಲ್ಲಿಸುವ ಅವಕಾಶ ನನಗೊದಗಿತ್ತು. ಅವರಲ್ಲಿ ನಾನು ಕಂಡ ಬಹುದೊಡ್ಡ ಗುಣವೆಂದರೆ ಗುದ್ದಲಿಯನ್ನು ಗುದ್ದಲಿಯೆಂದೇ (spade is a spade) ಹೇಳುವ ಅವರ ನೇರ ಸ್ವಭಾವ; ಮತ್ತು ಒಳ್ಳೆಯದು ಎಲ್ಲಿಯೇ ಇರಲಿ ಅದನ್ನು ಮೆಚ್ಚುವ ಹೃದಯ ವೈಶಾಲ್ಯ. ಅನ್ಯಾಯಕ್ಕೆ ತಲೆಬಾಗಿ ಅದನ್ನು ಮೌನವಾಗಿ ನುಂಗುವ ಪ್ರವೃತ್ತಿ ಅವರದಲ್ಲ. ಇದರಿಂದಾಗಿ ನ್ಯಾಯಾಧೀಶರ ಬಳಗದಲ್ಲೇ ಅವರ ಬಗ್ಗೆ ಸಿಟ್ಟಾಗಿ ತಡವರಿಸಿದವರೂ ಇದ್ದಾರೆ. ಆದರೆ ಅದರಿಂದಾಗಿ ಅವರು ಜಗ್ಗಿದವರೂ ಅಲ್ಲ, ಬಗ್ಗಿದವರೂ ಅಲ್ಲ.

ಶ್ರೀ ಜಿ.ಹೆಚ್.ಪ್ರಸಾದ್ ಅವರದ್ದು ಬಹುಮುಖಿ ಪ್ರತಿಭೆಯ ವ್ಯಕ್ತಿತ್ವ. ವೃತ್ತಿಯಲ್ಲಿ ನ್ಯಾಯಾಧೀಶರಾದರೂ ಅವರ ಪ್ರವೃತ್ತಿಗಳತ್ತ ದೃಷ್ಟಿ ಹಾಯಿಸಿದರೆ ಅವರೋರ್ವ

ಸಮಾಜ ಸುಧಾರಕ. ನ್ಯಾಯಾಧೀಶನಾಗಿ ಕೇವಲ ನಾಲ್ಕು ಗೋಡೆಗಳ ಮಧ್ಯೆ ಕುಳಿತು ಏಕಾಂತದಲ್ಲಿ ಚಿಂತನೆ ನಡೆಸುವ ಪ್ರವೃತ್ತಿ ಅವರದಲ್ಲ. ಬದಲಾಗಿ ಸಮಯಪ್ರಜ್ಞೆ ರೂಢಿಸಿಕೊಂಡು ಸಾಮಾಜಿಕ ಸ್ಪಂದನ ಬೆಳೆಸಿಕೊಂಡವರು. ಸಾಮಾಜಿಕನ್ಯಾಯದ ಬಗ್ಗೆ ಅವರಿಗಿದ್ದ ವಿಶ್ವಾಸ, ಕಳಕಳಿ ಅಪಾರ.

ಇದನ್ನು ನಾವು ಅವರಿತ್ತ ಹಲವಾರು ಪ್ರಮುಖ ತೀರ್ಪುಗಳಲ್ಲಿ ಕಾಣಬಹುದು. ತೀರ್ಪಿಗೆ ವಿಧಿ-ವಿಧಾನಗಳು ಮುಖ್ಯ ಎಂಬುದು ಸರಿ. ಆದರೆ ಅದಕ್ಕಿಂತಲೂ ಮುಖ್ಯವಾಗಿ ಅದರಲ್ಲಿ ಎದ್ದು ಕಾಣಬೇಕಾದುದು ನ್ಯಾಯ. ತೀರ್ಪು ನ್ಯಾಯೋಚಿತವಾಗಿರಬೇಕು; ಸತ್ಯದ ಅನ್ವೇಷಣೆ ಜೊತೆಗೆ ಮಾನವೀಯತೆಯೂ ಅದರಲ್ಲಿ ಅಭಿವ್ಯಕ್ತವಾಗಬೇಕು. ಶ್ರೀ ಜಿ.ಹೆಚ್.ಪ್ರಸಾದ್ ಇಂತಹ ತೀರ್ಪುಗಳನ್ನು ನೀಡುವ ನ್ಯಾಯಾಧೀಶರ ಸಾಲಿಗೆ ಸೇರಿದ್ದವರು.

ಶ್ರೀ ಜಿ.ಹೆಚ್.ಪ್ರಸಾದ್ ಕಾನೂನುಲೋಕಕ್ಕೆ ಮಾತ್ರ ತಮ್ಮನ್ನು ಸೀಮಿತಗೊಳಿಸಿ ಕೊಂಡವರಲ್ಲ. ಸಾಹಿತ್ಯ ಹಾಗೂ ಸಂಗೀತ ಪ್ರಪಂಚದಲ್ಲೂ ಅವರ ಸಂಚಾರ ಇದೆ. ಸುಂದರವಾದ ಗ್ರಂಥಭಂಡಾರ ಅವರದ್ದು. ಅವರೋರ್ವ ಅದಮ್ಯ ಸಂಗೀತ ಪ್ರೇಮಿ, ಒಳ್ಳೆಯ ಶ್ರೋತೃ! ಸಂಗೀತವೆಂಬುದು ಹೃದಯದ ಭಾಷೆ. ಸಂಗೀತದ ಸವಿಯನ್ನು ಬಲ್ಲವರಿಗೇ ಗೊತ್ತು ಅದರಿಂದಾಗುವ ಆನಂದ! ತಮ್ಮ ಮಕ್ಕಳನ್ನು ಒಳ್ಳೆಯ ಸಂಗೀತ ಗಾರರನ್ನಾಗಿ ಮಾಡಿದ ಭಾಗ್ಯ ಅವರದ್ದು. ನ್ಯಾಯಾಲಯದ ದೈನಂದಿನ ಜಂಜಾಟದಿಂದ ಮುಕ್ತಿ ಪಡೆಯಲು ದಿನದ ಕೊನೆಯಲ್ಲಿ ಒಂದರ್ಧ ಗಂಟೆಯಾದರೂ ಸಂಗೀತವನ್ನಾಲಿಸಿ, ಅದರ ಮುದವನ್ನು ಅನುಭವಿಸಿ ಧನ್ಯತೆ ಪಡೆಯುವ ಅವರ ಬದುಕಿನ ದಾರಿ ಅದೆಷ್ಟು ಸುಂದರ! ರಸಿಕತೆ ಅವರ ಉಸಿರು.

ಶ್ರೀ ಜಿ.ಹೆಚ್.ಪ್ರಸಾದ್ ಅವರದ್ದು ಆದರಾತಿಥ್ಯಕ್ಕೆ ಎತ್ತಿದ ಕೈ. ಅವರ ನಿವಾಸಕ್ಕಾಗಲೀ ಕಛೇರಿಗಾಗಲೀ ನ್ಯಾಯಾಧೀಶ ಮಿತ್ರರು ಭೇಟಿ ಇತ್ತಾಗ ಮೊದಲಿಗೆ ಕಾಣುತ್ತಿದ್ದುದು ಅವರ ನಗುಮೊಗ. ಅದು ಕಪಟ ನಗೆಯಲ್ಲ; ಆತ್ಮೀಯತೆಯನ್ನು ಸೂಸುವ ನಗು. ತಮ್ಮಲ್ಲಿಗೆ ಬಂದಾತ ಹಿರಿಯನಿರಲಿ, ಕಿರಿಯನಿರಲಿ ತಾವು ಕುಳಿತಲ್ಲಿಂದ ಎದ್ದುಬಂದು ಆತನನ್ನು ಸ್ವಾಗತಿಸುವ ಸಜ್ಜನಿಕೆ ಅವರದ್ದು. ಅದೇರೀತಿ ಬಂದಾತ ವಾಪಾಸ್ಸಾಗುವಾಗಲೂ ಕಛೇರಿ ಬಾಗಿಲು ಅಥವಾ ಮನೆ ಗೇಟಿನವರೆಗೂ ಬಂದು ಬೀಳ್ಕೊಡುವ ಸತ್ಸಂಪ್ರದಾಯ ಇಟ್ಟುಕೊಂಡವರು.

ಶ್ರೀ ಜಿ.ಹೆಚ್.ಪ್ರಸಾದ್ ಅವರು ಓರ್ವ ನಿಜವಾದ ಗೆಳೆಯ (true friend). ಒಮ್ಮೆ ಸ್ನೇಹ ಬೆಳೆಸಿದರೆಂದರೆ ಅದನ್ನು ಸದಾ ಕಾಲ ಉಳಿಸಿಕೊಳ್ಳುವಂತಹವರು. ನ್ಯಾಯಾಧೀಶ ಸ್ನೇಹಿತರ ವಿಷಯದಲ್ಲಂತೂ ಈ ಬಗ್ಗೆ ಎರಡುಮಾತಿಲ್ಲ. ಸ್ನೇಹಿತ ನಿಜಕ್ಕೂ ಸಂಕಷ್ಟ ದಲ್ಲಿದ್ದಾನೆ ಅಥವಾ ಅನ್ಯಾಯಕ್ಕೆ ಒಳಗಾಗಿದ್ದಾನೆ ಎಂಬುದು ಒಮ್ಮೆ ಅವರಿಗೆ ಮನವರಿಕೆ ಯಾದರೆ ಸರಿ, ಅದೇನೇ ಬರಲಿ ಅದರ ನಿವಾರಣೆಗಾಗಿ ಏನೆಲ್ಲಾ ಮಾಡಲು ಸಾಧ್ಯವೋ

ಅದೆಲ್ಲವನ್ನೂ ಮಾಡುವ ವ್ಯಕ್ತಿತ್ವ ಅವರದ್ದಾಗಿದ್ದಿತು. ಈ ನಿವಾರಣೆ ಪ್ರಯತ್ನದಲ್ಲಿ, ತಮ್ಮ ಮೇಲಾಧಿಕಾರಿಗಳು ಸಿಟ್ಟಾದರೂ ಪರವಾಗಿಲ್ಲ, ಅದನ್ನು ಗಮನಿಸದೆ ಅನ್ಯಾಯವನ್ನು ಸರಿಪಡಿಸಲು ಯಾವುದೇ ಹೋರಾಟಕ್ಕೂ ಅವರು ಸಿದ್ಧರಾಗುತ್ತಿದ್ದರು. ಸ್ನೇಹಿತ ಸಾದಾ ಸೀದಾ ಆಗಿದ್ದಲ್ಲಿ ತಮ್ಮ ಎದೆಯಲ್ಲಿ ದಾರಿಕೊಡುವ ಧಾರಾಳತನದ ವ್ಯಕ್ತಿತ್ವ ಅವರದು. ಅದು ಅವರಿಗೆ ಸಾಧ್ಯವಾಗುತ್ತಿದ್ದುದು, ಅವರೋರ್ವ ಸ್ನೇಹಜೀವಿಯಾಗಿದ್ದುದರಿಂದಲೇ.

ನಿಸರ್ಗದ ಬಗ್ಗೆ ಶ್ರೀ ಜಿ.ಹೆಚ್.ಪ್ರಸಾದ್ ಅವರಿಗೆ ಅಪಾರ ಪ್ರೀತಿ. ಪ್ರಕೃತಿಯನ್ನು ಬಾಹ್ಯವಾಗಿ ಹಾಗೂ ಅಂತರ್ಮುಖಿಯಾಗಿ ನೋಡಿ ಅದರ ಸೊಬಗನ್ನು ಆಸ್ವಾದಿಸುವ ಹೃದಯವಂತ. ಅವರ ಜೊತೆಯಲ್ಲಿ ಹಲವಾರು ರಮಣೀಯ ಪ್ರದೇಶಗಳಿಗೆ ಇತರ ನ್ಯಾಯಾಧೀಶ ಬಂಧುಗಳೊಡನೆ ನಾನೂ ಪ್ರವಾಸ ಕೈಗೊಂಡಿದ್ದೆ. ಆ ಸಂದರ್ಭಗಳಲ್ಲಿ ನಿಸರ್ಗದ ಬಗ್ಗೆ ಅವರಿಗಿರುವ ಪ್ರೀತಿ ಹಾಗೂ ಕಾಳಜಿಯನ್ನು ನಾನು ಕಂಡು ಸಂತಸಗೊಂಡಿದ್ದೆ. ಅವರದ್ದು ನಿಜಕ್ಕೂ very romantic personality!

ಶ್ರೀ ಜಿ.ಹೆಚ್.ಪ್ರಸಾದ್ ‘ಓರ್ವ ಸಂಘಟನಾ ಚತುರ. ಅವರು ಬುದ್ಧಿಜೀವಿಯಲ್ಲದೆ, ಸಂಘಜೀವಿಯೂ ಆಗಿರುವುದರಿಂದ ಅದು ಸಾಧ್ಯವಾಗಿದೆ. ಕರ್ನಾಟಕ ರಾಜ್ಯ ನ್ಯಾಯಾಧೀಶರುಗಳ ಸಂಘದ ಹತ್ತು ಹಲವು ಚಟುವಟಿಕೆಗಳಲ್ಲಿ ಅವರು ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಂತಹವರು. ಅವರು ಸ್ಫೂರ್ತಿಯ ಚಿಲುಮೆಯಾಗಿದ್ದರೆಂದರೂ ತಪ್ಪಿಲ್ಲ.

ಒಟ್ಟಿನಲ್ಲಿ, ಶ್ರೀ ಜಿ.ಹೆಚ್.ಪ್ರಸಾದ್ ತಮ್ಮ ನಡೆ, ನುಡಿಗಳಿಂದ ನ್ಯಾಯಾಧೀಶ ಬಂಧುಗಳ ಹೆಚ್ಚಿನ ಒಲವಿಗೆ ಮತ್ತು ಗೌರವಕ್ಕೆ ಪಾತ್ರರಾಗಿದ್ದ ವ್ಯಕ್ತಿ. ಅರವತ್ತು ವಸಂತಗಳ ಕಾಲ ಸಾರ್ಥಕ ಬದುಕು ನಡೆಸಿದ ಅವರನ್ನು ಅಭಿನಂದಿಸುವುದು ಮತ್ತು ಅಭಿವಂದಿಸುವುದು ಸಂದರ್ಭೋಚಿತ. ದೇವರು ಅವರನ್ನು ನೂರ್ಕಾಲ ಚೆನ್ನಾಗಿಟ್ಟಿರಲಿ; ಮುಂದಿನ ದಿನಗಳಲ್ಲೂ ಅವರಿಗೆ ಸುಖ ಶಾಂತಿ ನೆಮ್ಮದಿ ಸಿಗಲಿ; ಮತ್ತು ಸಾಮಾಜಿಕ ಸೇವೆಯನ್ನು ಇನ್ನೂ ಹೆಚ್ಚಿನ ರೀತಿಯಲ್ಲಿ ಮಾಡುವಂತೆ ಚೈತನ್ಯವನ್ನು ಅವರಿಗೆ ನೀಡಲೆಂದು ಹಾರೈಸುತ್ತೇನೆ.

೬

# 'ಐರಾವತ'ದ ಮೇಲಿನ ವ್ಯಾಮೋಹ!

ಆರ್. ಚಂದ್ರಶೇಖರ್

ಒಬ್ಬ ಕಿರಿಯ ನ್ಯಾಯಾಧೀಶನಾಗಿದ್ದ ನನ್ನ ಒಡನಾಟ ಶ್ರೀ ಪ್ರಸಾದ್ ಅವರ ಜೊತೆ ಕೇವಲ ಕೆಲವು ತಿಂಗಳು ಮಾತ್ರವಾದರೂ ಒಂದು ರೀತಿಯ ಆತ್ಮೀಯ ನಂಟು ನಮ್ಮಲ್ಲಿ ಉಂಟಾಗಿತ್ತು. ಶಿವಮೊಗ್ಗಕ್ಕೆ ಬರುವ ಮೊದಲೇ ನನ್ನಲ್ಲಿ ಅವರ ಬಗ್ಗೆ ಒಂದು ರೀತಿಯ ಗೌರವ; ಅದಕ್ಕೂ ಮಿಗಿಲಾಗಿ ಸದ್ಭಾವನೆ ಮನೆ ಮಾಡಿತ್ತು. ಅವರ ವ್ಯಕ್ತಿತ್ವ, ಸೌಜನ್ಯಶೀಲತೆ, ಮಾನವೀಯ ಮೌಲ್ಯಗಳಿಗೆ ಅವರು ಸ್ಪಂದಿಸುವ ರೀತಿ, ನ್ಯಾಯಾಂಗದಲ್ಲಿ ಅವರಿಗೆ ಇರುವ ಅತಿಯಾದ ಗೌರವ, ಹೃದಯ ಶ್ರೀಮಂತಿಕೆಯ ಬಗ್ಗೆ ನನ್ನ ಮಿತ್ರರು ಮೆಚ್ಚುಗೆ ವ್ಯಕ್ತಪಡಿಸಿದ್ದರು. ಹೀಗಾಗಿ ಅವರ ಸಾಮೀಪ್ಯದಿಂದ ನನಗೆ ಅವರಲ್ಲಿನ ಸದ್ಗುಣಗಳ ಅನುಭವವಾಯಿತು.

ಅವರೊಬ್ಬರು ನಿರಹಂಕಾರಿ, ಸೌಜನ್ಯಮೂರ್ತಿ. ನನ್ನ ಕೆಲವು ಅನುಭವದ ಆಧಾರದ ಮೇಲೆ ಹೇಳುವುದಾದರೆ, ಅವರು ಶಿವಮೊಗ್ಗಕ್ಕೆ ಬರುವ ಮೊದಲು ವಸತಿ ವಿಚಾರದಲ್ಲಿ ಇವರಿಗೂ ಶ್ರೀ ಭರಮಗೌಡರಿಗೂ (ಜಿಲ್ಲಾ ನ್ಯಾಯಾಧೀಶರು) ಇರಿಸುಮುರಿಸು ಉಂಟಾಗಿತ್ತು. ಬಹುಶಃ ಸಂಪರ್ಕ ಸೇತುವೆಯ ಕೊರತೆಯ ಕಾರಣದಿಂದಲೋ ಅಥವಾ ಸಂಪರ್ಕಕ್ಕೆ ಕಾರಣರಾಗಬೇಕಿದ್ದವರ ಅಚಾತುರ್ಯದ ಕಾರಣದಿಂದಲೋ ಇಬ್ಬರಲ್ಲೂ ಭಿನ್ನಾಭಿಪ್ರಾಯ ಉಂಟಾಗಿತ್ತು. ಶ್ರೀಯುತರಾದ ಭರಮಗೌಡರು ಸಹಾ ಸಂಭಾವಿತರು, ಸೂಕ್ಷ್ಮತೆಯುಳ್ಳವರು. ಇವರು ನೇರವಾಗಿ ಶ್ರೀ ಪ್ರಸಾದ್ ಅವರಿಗೆ ಪ್ರಭಾರ (ಚಾರ್ಜ್) ವಹಿಸಿಕೊಡಬೇಕಿತ್ತು. ಶ್ರೀ ಭರಮಗೌಡರು ಪ್ರಭಾರ ವಹಿಸಿದ ನಂತರ ಕಛೇರಿ ವಾಹನವನ್ನು ಬಳಸುವುದು ಬೇಡವೆಂದು ನಿಶ್ಚಯಿಸಿ, ನನ್ನ ಕಾರನ್ನು ಬಳಸಲು ತರಿಸಿಕೊಂಡಿದ್ದರು. ಈ ವಿಚಾರವನ್ನು ನಾನು ಶ್ರೀ ಪ್ರಸಾದ್ ಅವರಿಗೆ ಹೇಳಿರಲಿಲ್ಲ.

ಪ್ರಭಾರವಹಿಸಿದ ನಂತರ, ಶ್ರೀ ಭರಮಗೌಡರನ್ನು ಬೀಳ್ಕೊಡಲು ಶ್ರೀ ಪ್ರಸಾದ್ ಅವರು ತಮ್ಮ ಕಛೇರಿಯಿಂದ ಮುಖ್ಯದ್ವಾರದವರೆಗೂ ಬಂದರು. ಅಲ್ಲಿ ನನ್ನ ಕಾರು ಇದ್ದುದ್ದನ್ನು ಕಂಡು, ವಿಷಯ ತಿಳಿದು, ತುಂಬಾ ನೊಂದುಕೊಂಡರು. "ಭರಮಗೌಡರೇ,

ನೀವು ಶಿವಮೊಗ್ಗ ಬಿಡುವವರೆಗೂ ಕಛೇರಿಯ ವಾಹನವನ್ನು ಬಳಸಿ. ಬೇರೆ ವಾಹನ ಬಳಸಿದರೆ ನನಗೆ ಅವಮಾನ ಮಾಡಿದಂತಾಗುತ್ತದೆ'' ಎಂದು ಹೇಳಿದರು. ನಾನು ಇದರ ಬಗ್ಗೆ ಅವರ ಗಮನಕ್ಕೆ ತರದೇ ಇದ್ದ ಕಾರಣಕ್ಕೆ ನೊಂದುಕೊಂಡರು. ಒಂದು ಪಕ್ಷ ತಾವು ಬೀಳ್ಕೊಡಲು ಕೆಳಗಿನ ಗೇಟಿನವರೆಗೆ ಬಾರದೇ ಇದ್ದಿದ್ದರೆ ಎಂತಹ ಅಪಚಾರವಾಗುತ್ತಿತ್ತೆಂದು ನನ್ನ ಕಡೆ ನೋಡಿದರು. ನಾನು ಅಪರಾಧಿಭಾವದೊಂದಿಗೆ ನಿರುತ್ತರನಾದೆ. ಇದು ಶ್ರೀ ಪ್ರಸಾದ್ ಅವರ ಸಜ್ಜನಿಕೆಯ ಮೊದಲ ಅನುಭವ.

ಶಿವಮೊಗ್ಗ ಜಿಲ್ಲಾ ನ್ಯಾಯಾಧೀಶರ ಬಳಕೆಗೆ ಸರಕಾರದಿಂದ ಕೊಟ್ಟಿದ್ದ ಕಾರಿನ ಬಗ್ಗೆ ಹೇಳುವುದಾದರೆ, ಅದೊಂದು ವಿಶೇಷ ರೀತಿಯದು. ಶಿವಮೊಗ್ಗ ನಗರ ಬಿಟ್ಟು ಅದರ ಹೊರಗೆ ಹೋಗಲು ನಾಲಾಯಕ್ಕು. ಆದರೂ ಅನಿವಾರ್ಯವೆಂದೇನಾದರೂ ಧೈರ್ಯಮಾಡಿ ತೆಗೆದುಕೊಂಡು ಹೋದರೆ, ಅದು ಮುಷ್ಕರ ಹೂಡುವುದಂತೂ ಖಂಡಿತ. ನಿಗದಿತ ಸಮಯಕ್ಕೆ ಹೋದದ್ದೇ ಆದರೆ ಅದು ಅವಿಸ್ಮರಣೀಯ ದಿನವೇ ಸರಿ! ನನ್ನ ಅನುಭವ ದಲ್ಲಿ ಹೇಳುವುದಾದರೆ, ಆ ಕಾರಿನ ಸ್ಥಿತಿ ೩-೪ ವರ್ಷಗಳಿಂದಲೂ ಇದೇ ರೀತಿಯಿತ್ತು. ಅನೇಕ ಪತ್ರವ್ಯವಹಾರವಾದರೂ ತಾಂತ್ರಿಕ ಕಾರಣಗಳನ್ನು ಮುಂದೊಡ್ಡಿ ಕಾರನ್ನು ಬದಲಾಯಿಸುವುದಕ್ಕೆ ಆಗಿರಲಿಲ್ಲ. ತಾಂತ್ರಿಕ ಅಡಚಣೆ ನ್ಯಾಯಾಂಗ ಇಲಾಖೆಗೆ ಮಾತ್ರ ಅನ್ವಯವಾಗುತ್ತದೆಯೋ ಏನೋ ಗೊತ್ತಿಲ್ಲ. ಒಮ್ಮೊಮ್ಮೆ ಅವರನ್ನು ಕಛೇರಿ-ಮನೆ ತಲುಪಿಸಲು ಕೂಡ ಈ ಕಾರು ಮುಷ್ಕರ ಹೂಡುತ್ತಿತ್ತು. ಈ ಕಾರಿಗೆ ಶ್ರೀ ಪ್ರಸಾದ್ ಅವರು 'ಐರಾವತ' ಎಂದು ನಾಮಕರಣ ಮಾಡಿದ್ದರು. ಅವರಲ್ಲಿ ಹಾಸ್ಯಪ್ರಜ್ಞೆ ಎಷ್ಟಿತ್ತು ಎಂಬುದಕ್ಕೆ ಇದೊಂದು ಉದಾಹರಣೆ.

೨೦೦೦ ಜುಲೈ-ಆಗಸ್ಟ್ ತಿಂಗಳಲ್ಲಿ ಶಿವಮೊಗ್ಗದ ಪ್ರಧಾನ ನ್ಯಾಯಿಕ ದಂಡಾಧಿಕಾರಿ ಯವರಿಗೆ ಹೊಸದಾದ ಅಂಬಾಸಿಡರ್ ಕಾರು ಬಂದಿತು. ಹೀಗೆ ಎಲ್ಲ ಜಿಲ್ಲೆಗಳಿಗೂ ಬಂದಿತು. ಇದೇನೂ ವಿಶೇಷವಲ್ಲ. ವಿಶೇಷವೆಂದರೆ, ಶ್ರೀ ಪ್ರಸಾದ್ ಅವರು ರಾಜ್ಯದ ಬೇರೆ ಅನೇಕ ಜಿಲ್ಲಾ ನ್ಯಾಯಾಧೀಶರಂತೆ ಹೊಸ ಕಾರನ್ನು ತಾವು ಇಟ್ಟುಕೊಂಡು ಹಳೆಯದನ್ನು ಪ್ರಧಾನ ನ್ಯಾಯಿಕ ದಂಡಾಧಿಕಾರಿಗಳಿಗೆ ಕೊಡಲಿಲ್ಲ. ಜಿಲ್ಲಾ ನ್ಯಾಯಾಧೀಶರಿಗೆ ಇಡೀ ಜಿಲ್ಲೆಯ ಎಲ್ಲಾ ಕೋರ್ಟುಗಳನ್ನು ತನಿಖೆ ಮಾಡುವ, ಸೂಚನೆ ಕೊಡದೇ ಕೋರ್ಟುಗಳ ತನಿಖೆಗೆ ಹೋಗುವ ಜವಾಬ್ದಾರಿ ಇರುತ್ತದೆ. ಆದರೂ ಹೊಸ ಕಾರನ್ನು ಮುಟ್ಟಲಿಲ್ಲ. 'ಐರಾವತ'ವನ್ನು ತಾವೇ ಇಟ್ಟಕೊಂಡರು. 'ಐರಾವತ'ದ ಬಗ್ಗೆ ಅವರ ವ್ಯಾಮೋಹ ಅಷ್ಟೊಂದಿತ್ತು! ಬೇರೆಯವರಿಗೆ ಎಂದು ಸರ್ಕಾರ ಕೊಟ್ಟಿದ್ದನ್ನು ತಾನೇ ಬಳಸಿಕೊಳ್ಳಬೇಕೆಂಬ ಆಸೆಯಾಗಲೀ ತನ್ನ ಕೈ ಕೆಳಗಿನ ಅಧಿಕಾರಿ ತನಗಿಂತ ಹೆಚ್ಚಿನ ಸವಲತ್ತುಗಳನ್ನು ಅನುಭವಿಸಬಾರದು ಎಂಬ ಬಾಲಿಶ ಯೋಚನೆಗಳಾಗಲೀ ತನ್ನ ಕಾಲದಲ್ಲಿ ಇಲ್ಲದಿದ್ದ ಸವಲತ್ತನ್ನು ಈಗಿನ ಅಧಿಕಾರಿಗಳು ಅನುಭವಿಸಬಾರದು ಎಂದು ಅತ್ತೆಯ ಮನೋಭಾವವಾಗಲೀ ಅವರಲ್ಲಿ ಇರಲಿಲ್ಲವೆಂಬುದಕ್ಕೆ ಇದಕ್ಕಿಂತ ಉತ್ತಮ

ನಿದರ್ಶನ ಬೇಕಾಗಿಲ್ಲ. ಅಷ್ಟು ಸೂಕ್ಷ್ಮ ಸಂವೇದನೆ ಉಳ್ಳವರು ಅವರು. ಬೇರೆ ಯಾರೇ ಜಿಲ್ಲಾ ನ್ಯಾಯಾಧೀಶರಾಗಿದ್ದರೂ ಖಂಡಿತ 'ಐರಾವತ'ವನ್ನು ಹೊರಗೆ ಹಾಕಿ ಹೊಸ ಕಾರನ್ನು ತಮ್ಮ ಉಪಯೋಗಕ್ಕೆ ಇಟ್ಟುಕೊಳ್ಳುತ್ತಿದ್ದರು. ಬಹುಶಃ ನನಗೆ ತಿಳಿದಹಾಗೆ, ಇಂತಹ ಕಾರನ್ನು ಇಟ್ಟುಕೊಂಡು ಹೊಸ ಕಾರನ್ನು ಸಂಬಂಧಿಸಿದವರಿಗೇ ಕೊಟ್ಟವರು ಇವರೊಬ್ಬರೇ. ವ್ಯಕ್ತಿ ಮೇಲೆ ಹೋದಂತೆಲ್ಲಾ ಅವನ ಮನಸ್ಸು ವಿಶಾಲವಾಗಬೇಕು ಎಂಬುದಕ್ಕೆ ಅವರು ಸೂಕ್ತ ಉದಾಹರಣೆ ಎಂದರೆ ಖಂಡಿತ ಹೊಗಳಿಕೆಯ ಮಾತಲ್ಲ.

ಶ್ರೀ ಪ್ರಸಾದ್ ಅವರು ಸಂವೇದನಶೀಲತೆಯ ಜೊತೆಗೆ ಕಾರ್ಯದಕ್ಷತೆ, ಪ್ರಾಮಾಣಿಕತೆ, ನೇರ ನಡೆ ನುಡಿಯುಳ್ಳವರು. ಪ್ರಾಮಾಣಿಕತೆಯ ವಿಚಾರದಲ್ಲಿ ನಾವು ಯಾರಿಗೂ ಎರಡನೆಯವರಲ್ಲ ಎಂದು ಹೇಳುವಷ್ಟು ಆತ್ಮಸ್ಥೈರ್ಯ ಅವರಲ್ಲಿತ್ತು. ಪ್ರಾಮಾಣಿಕತೆಯ ವಿಚಾರದಲ್ಲಿ ಯಾರಾದರೂ ಅಪಸ್ವರವೆತ್ತಿದರೆ, ಅದನ್ನು ಖಂಡತುಂಡವಾಗಿ ವಿರೋಧಿಸಲು ಯಾವಾಗಲೂ ಹಿಂದೆ ಮುಂದೆ ನೋಡಿದವರಲ್ಲ. ಅಂತಹ ಸಂದರ್ಭ ಬಂದಾಗ ನಮ್ಮ ಮೇಲಾಧಿಕಾರಿಗಳಿಗೆ ಯಾವ ಮುಲಾಜಿಲ್ಲದೆ. "ಸರ್, ಪ್ರಾಮಾಣಿಕತೆಯಲ್ಲಿ ನಾನು ಯಾರಿಗೂ ಎರಡನೆಯವನಲ್ಲ" ಎಂದು ಹೇಳಿದ ಸಂದರ್ಭ ಕೂಡ ಇದೆ.

ಶ್ರೀ ಪ್ರಸಾದ್ ಅವರು ಸ್ನೇಹಮಯಿ. ಸ್ನೇಹಹಸ್ತ ಚಾಚಲು ಎಂದೂ ಹಿಂದೆಮುಂದೆ ನೋಡಿದವರಲ್ಲ. ಎಲ್ಲರನ್ನೂ ಪ್ರೀತಿಯಿಂದ ಕಾಣುತ್ತಿದ್ದಂತಹವರು. ಒಳ್ಳೆಯತನಕ್ಕೆ ಬೆಲೆಕೊಟ್ಟು ಪ್ರೋತ್ಸಾಹಿಸುವ ಸ್ವಭಾವ. ಅನುಕೂಲಕ್ಕೆ ತಕ್ಕಂತೆ, ಸಂದರ್ಭಕ್ಕೆ ಅನುಗುಣವಾಗಿ ವರ್ತಿಸುವ ಗುಂಪಿಗೆ ಸೇರಿದವರಲ್ಲ. ಹಿರಿಯ ಅಧಿಕಾರಿ, ಕಿರಿಯ ಅಧಿಕಾರಿ ಎಂಬ ಭೇದವೆಣಿಸದೆ, ಆತ್ಮೀಯ ಮನೋಭಾವವುಳ್ಳವರು. ಸ್ನೇಹಹಸ್ತ ಚಾಚಿದ ಮೇಲೆ ಎಂದೂ ಹಿಂತೆಗೆದವರಲ್ಲ. ನಾನು ಕೇವಲ ೭-೮ ತಿಂಗಳ ಕಾಲ ಶಿವಮೊಗ್ಗದಲ್ಲಿ ಅವರೊಡನೆ ಕೆಲಸ ಮಾಡಿದ್ದರೂ ನೂರಾರು ಮೈಲುಗಳ ದೂರದಲ್ಲಿದ್ದರೂ ಮನೆಯಲ್ಲಿ ಎಸ್.ಟಿ.ಡಿ. ಸೌಲಭ್ಯವಿದ್ದರೂ ಬೂತ್‌ಗೆ ಬಂದು ನನಗೆ ಫೋನು ಮಾಡುತ್ತಿದ್ದರು. ನಮ್ಮ ಕುಟುಂಬದವರೆಲ್ಲರ ಕುಶಲ ವಿಚಾರಿಸುವ ಅವರ ಹೃದಯವೈಶಾಲ್ಯವನ್ನು ಇದು ಎತ್ತಿ ತೋರಿಸುತ್ತದೆ. ಯಾರನ್ನೇ ಆದರೂ ನೇರವಾಗಿ ನಂಬುವ ಸ್ವಭಾವ! ಮೊದಲೇ ಯಾರನ್ನೂ ಅನುಮಾನ ದೃಷ್ಟಿಯಿಂದ ನೋಡುವುದಿಲ್ಲ. ಆ ವ್ಯಕ್ತಿ ನಂಬುಗೆಗೆ ಅರ್ಹನಲ್ಲ ಎಂದು ಮನವರಿಕೆಯಾಗುವವರೆಗೂ ಆತನನ್ನು ಸಹಜ ಸ್ನೇಹಿತನಂತೆಯೇ ಕಾಣುತ್ತಾರೆ. ಎಲೆಮರೆಯ ಕಾಯಾಗಿ ಇದ್ದುಕೊಂಡೇ ಅನೇಕ ಕಿರಿಯ ಸ್ನೇಹಿತರಿಗೆ ಸಹಾಯ ಮಾಡಿದ್ದಾರೆ.

ಶ್ರೀ ಪ್ರಸಾದ್ ಅವರು ಸಂಗೀತ ಪ್ರಿಯರು. ಅವರ ಮನೆಯ ಮಂದಿಯೆಲ್ಲಾ ಸಂಗೀತ ಆರಾಧಕರೇ. ನಾನು ಕಂಡಹಾಗೆ, ಒಬ್ಬ ನ್ಯಾಯಾಧೀಶರಾದ ಅವರು ಮನೆಯಲ್ಲಿ ಇದ್ದ ಸಂಗೀತದ ಕ್ಯಾಸೆಟ್‌ಗಳು ಬಹುಶಃ ಬೇರೆ ಯಾವ ನ್ಯಾಯಾಧೀಶರ ಮನೆಯಲ್ಲೂ ಇರಲಿಕ್ಕಿಲ್ಲ ಎನ್ನಿಸುತ್ತದೆ. ಅವರ ಮನೆಯಲ್ಲಿ ಅವರನ್ನು ಹೊರತುಪಡಿಸಿ ಎಲ್ಲರೂ

ಸಂಗೀತಗಾರರೇ. ಹೇಗೆ ಸಂಗೀತಕ್ಕೆ ಜಾತಿ, ಮತ, ಭಾಷೆಗಳ ಭೇದವಿಲ್ಲವೋ ಹಾಗೆಯೇ ಈ ಸಂಗೀತಾರಾಧಕರಲ್ಲೂ ಆ ಸದ್ಗುಣಗಳು ಮೇಳೈಸಿವೆ ಎಂಬುದು ಅಷ್ಟೇ ಸತ್ಯ. ಅರ್ಧಾಂಗಿ ಎಂಬ ಪದಕ್ಕೆ ಅನುಗುಣವಾಗಿ ಶ್ರೀ ಪ್ರಸಾದ್ ಅವರ ಪತ್ನಿಯೂ ಪತಿಯ ಮಾರ್ಗದಲ್ಲಿಯೇ ಸಾಗುವವರು. ಅತಿಥಿಸತ್ಕಾರದಲ್ಲಂತೂ ಎತ್ತಿದ ಕೈ. ಮಕ್ಕಳು ಕೂಡ ತಂದೆ-ತಾಯಿಯಂತೆ ಸಜ್ಜನಿಕೆಯುಳ್ಳವರು.

ದೊಡ್ಡ ಹುದ್ದೆಯಲ್ಲಿದ್ದರೂ ಅನುಕೂಲಸ್ಥ ಕುಟುಂಬಕ್ಕೆ ಸೇರಿದವರಾದರೂ ಸರಳತೆಯನ್ನು ಮೈಗೂಡಿಸಿ ಕೊಂಡ ಶ್ರೀ ಪ್ರಸಾದ್ ಅವರ ಬಗ್ಗೆ ಪುಸ್ತಕ ಪ್ರಕಟಿಸುತ್ತಿರುವುದು ನಿಜವಾಗಲೂ ಅಭಿನಂದನಾರ್ಹ. ಶ್ರೀ ಪ್ರಸಾದ್ ಅವರು ಶತಾಯುಷಿಯಾಗಿ ತುಂಬುಜೀವನ ನಡೆಸಲಿ; ಅವರಿಗೂ ಅವರ ಕುಟುಂಬವರ್ಗದವರೆಲ್ಲರಿಗೂ ಆಯಸ್ಸು, ಆರೋಗ್ಯ, ನೆಮ್ಮದಿಗಳನ್ನು ಆ ಭಗವಂತನು ಕರುಣಿಸಲಿ ಎಂದು ನಾನು ಪ್ರಾರ್ಥಿಸುತ್ತೇನೆ.

೭

## ಬೀಳ್ಕೊಡುಗೆ*

**ಕೆ. ವಿ. ಶೇಷಾದ್ರಿ**

‘ವಿದ್ಯಾದದಾತಿ ವಿನಯಂ’ - ‘ಅತಿ ಸರ್ವತ್ರ ವರ್ಜಯೇತ್’
ಎಂಬುದ ಅನ್ವರ್ಥಗೊಳಿಪ ಜಿ.ಹೆಚ್.ಪ್ರಸಾದರು
‘೨ ೧/೨ ಅಡಿ ಎತ್ತರದ ನ್ಯಾಯಾಧಿಪತಿ ಪೀಠಕೆ’
ಭೂಷಣಮಂ ನೀಡಿ, ಸದಾ ಪ್ರಸನ್ನವದನರಾಗಿಹರು ||೧||

ಅತಿ ಬುದ್ಧಿವಂತಿಕೆ ಸಮಾಜಕೆ ಕೆಡುಕೆಂಬ
ನಾಣ್ನುಡಿಯ ಅನುಗುಣದೊಳು
‘ದುಷ್ಟ ಶಿಕ್ಷಕ, ಶಿಷ್ಟ ರಕ್ಷಕ’ ಭಾವನೆಯಂ
ಹೊಂದಿರ್ಪ ಇವರ್
ಕೊಲೆ, ದರೋಡೆತನ ಇತ್ಯಾದಿ ಅಪರಾಧಿಗಳ್ಗೆ
ಸೂಕ್ತ ಶಿಕ್ಷೆಯನ್ ನೀಡಿ, ಸಮಾಜ
ಸುಸ್ಥಿತಿಯಲಿರಲು ಕಾರಣಕರ್ತರಾಗಿಹರು ||೨||

ಅಂಗೈಯಲಿ ರೋಮವಿಲ್ಲದ ಕಾರಣವನು
ಅಕ್ಬರ್, ಬೀರಬಲ್ಲಗೆ ಕೇಳಲು,
ದಾನವ ನೀಡಿ ನೀಡಿ, ಅಕ್ಬರ್‌ನ ಅಂಗೈಗೆ
ದಾನವ ಪಡೆ ಪಡೆದು ಬೀರಬಲ ಅಂಗೈಗೆ
ರೋಮವಿಲ್ಲದಿರೆ ಇದಕಂಡು ಮತ್ಸರದಿ
ಅಂಗೈಗಳ ಉಜ್ಜಿಕೊಳ್ಳುವುದರಿಂದೆ, ಇತರರ

---

ಮಂಡ್ಯದಲ್ಲಿ ಅಪರ ಜಿಲ್ಲಾ ನ್ಯಾಯಾಧೀಶರಾಗಿದ್ದ ಶ್ರೀ ಜಿ.ಹೆಚ್.ಪ್ರಸಾದ್ ಅವರು ೧೯೯೯ರಲ್ಲಿ ಪ್ರಧಾನ ಜಿಲ್ಲಾ ನ್ಯಾಯಾಧೀಶರಾಗಿ ಶಿವಮೊಗ್ಗಕ್ಕೆ ವರ್ಗವಾದಗ, ಮಂಡ್ಯದ ವಕೀಲ ಸಂಘದವರು ಬೀಳ್ಕೊಡುಗೆ ಸಮಾರಂಭವನ್ನು ಏರ್ಪಡಿಸಿದ್ದರು. ಆ ಸಂದರ್ಭದಲ್ಲಿ ವಾಚಿಸಲಾದ ಕವನ ಇದು.

ಅಂಗೈಯಲಿ ರೋಮವಿಲ್ಲವೆಂಬ ಉತ್ತರದ ಪರಿಯೊಳು
ಪ್ರಸಾದರು, ಹಿರಿಯ-ಕಿರಿಯ ವಕೀಲರೊಳಗೂ
ಎಂದೂ ಮನನೋಯುವವೋಲ್
ವರ್ತಿಸಿದುದ ನಾ ಕಾಣೆ ||೩||

ಕೇಸಿನ ಯಾವುದೇ ಅರ್ಜಿಗೆ, ಕಾನೂನಿನ
ಅತಿ ಅಂಶವ ಹಿಂಡಿ, ವಜಾಮಾಡದೆ
ಸೂಕ್ತ ಪರಿಹಾರ ನೀಡಿಹರು
ಇಂತದೇ ಸದ್ಗುಣ ಅವಿರತವಿರಲಿ, ಇವರಲಿ ||೪||

ಸಕ್ಕರೆನಗರದ ವಕೀಲರು, ಸಕ್ಕರೆಯ ಪಾಕದಂತಿರಲು
ಹದದ ಶಾಖವ ನೀಡಿ, ಸರಿಯಾದ ಪಾಕಕೆ
ಇಚ್ಛೆಯ ಬಣ್ಣವಂ ಬೆರೆಸಿ, ಕುಸುರಿ ಅಚ್ಚಿಗೆ
ಪಾಕವ ಬಿಡೆ, ಅಂದ ಚೆಂದದ ಸಕ್ಕರೆಯಚ್ಚು
ಆಗುವ ಕಾರ್ಯವ ಸಫಲಗೊಳಿಸಿಹರು ಇವರು ||೫||

ಮುದಿಕರಡಿ ಹೊಂಗೆಬೀಜವನು
'ಬಾದಾಮಿ ಕೋ'ಯೆನುತ, ಪದುಳದಿಂ
ಮೊಮ್ಮಂಗೆ ಕೊಡಲು, ಸಿಹಿಯಹುದೆ?
ಹೃದಯವೊಳಿತಿಲ್ಲದೊಡೇಂ? ತಿಳಿವಿಹುದೆ?
ಸುಧೆ ಬಂತೆ ಸುಲಭದಲಿ? - ಮಂಕುತಿಮ್ಮ
-ಎಂಬುದ ನೆನೆಯುವ ಇವರ ಶ್ರೇಷ್ಠ ಹೃದಯವಂತಿಕೆಗೆ
ಅಧಿಕಾರ ಯಾವುದೇ ದುಷ್ಪರಿಣಾಮ ನೀಡಿಲ್ಲ ||೬||

ಕಿಂಚಿತು ಕೊರತೆ-ದೋಷಗಳಿಲ್ಲದವರ್
ಮಾನವರೆನಿಸದೆ, ದಾನವರೆನಿಪರ್ ಎಂಬವೋಲ್
i. ನಿಗದಿತ ದಿನದೊಳ್ ಆಜ್ಞೆ ಆಗದಿದ್ದರೂ ದೋಷವಿಲ್ಲದೊಡೆ
'ಎ' ಡೈರಿಯಲಿ, ಮುಂದೂಡಿದ ದಿನಾಂಕ ಲಿಖಿತಗೊಳ್ಳುವುದು
ii. ವಾದ-ವಿವಾದಕೆ ವಕೀಲರ್ಗೆ ಸಾಕಷ್ಟು ಸಮಯ ನೀಡಿದೊಡೆ
-ಒಳಿತಲ್ಲವೆ? ||೭||

ಕಬ್ಬಿನನಾಡಲಿ ದೊರೆತ ಸುಖ-ಶಾಂತಿ,
ನೆಮ್ಮದಿ, ಸಹ್ಯಾದ್ರಿ ತಪ್ಪಲಿನ ಶಿವಮೊಗ್ಗೆಯಲೂ
ಮೇಣ್ ಜೀವನಪರ್ಯಂತ ದೊರೆಯಲೆಂದು
ಆಶಿಸುವೆವು, ಮಂಡ್ಯ ವಕೀಲವೃಂದ ||೮||

8

# G.H.Prasad-A Suave & Sprightly Figure

**I. S. Antin**

My acquaintance with Sri G.H.Prasad dates back to 1992. Before such period, I had only heard of him as a fine gentleman. I came in close contact with him only when I had the previlege of accompanying him to New Delhi for undergoing training in Criminology. We stayed together for about 12 days. It was during this time, I realised the precious virtues, Sri Prasad possessed in a pre-eminent degree. His gracious manners, spirit of magnanimity left an indelible imprint on my mind. I felt honoured and benefitted to be associated with him for the 12 days- the fragrant memories of which still linger in my mind. Though I happened to be much junior to him in service & age, he has always treated me like his younger brother. I regard his genuine concern, kindliness and compassion for me as my enduring treasure. By dint of his prodigenous industry and integrity of scholarship, he has made his mark in the judiciary. He enjoys enormous respect and affection among the public in general & judicial fraternity in paricular. He has endeared himself to one and all by his winsome & precious qualities.

Born in an Agriculturist's family, he has worked his way up to occupy a significant position and status in judicial service. He has spread light and joy wherever he has served. The panoramic sweep of his mind is one of the many facts of his versatile personality. He has a magnetic personality, associated with great tranquility, sunshine always plays around his heart and one would love to bask in the sunshine. Being an embodiment of virtue and wisdom, he has been courteous to one and all. He exemplifies in his own personal life, the philosophy of plain living and high thinking. He is totally devoid of any feeling of self importance. His innate graciousness, sterling virtue and deep knowledge

are worthy of emulation. He has a large number of friends, well wishers and admirers through out the length and breadth of the state.

As a close and trusted friend, I had also the privilege of enjoying the hospitality of his family members. My family and I stayed in his house and the hospitality we enjoyed, was indeed a sumptuous feast to savour. Lady Prasad is a noble woman and the couple is blessed with three humble and polite children. It is indeed heartening to note that Sri Prasad has contributed his utmost in bringing out 'Ghatti Hosahalli Ghattiga', a commemoration volume of Sri C.Malesiddappa, a renowned freedom fighter, a socialist and a great educationist. Man of such a stature is none other than father-in-law of Sri Prasad.

Sri Prasad being inspired by the high ideals has always followed the noble path laid by Sri Malesiddappa.

I am immensely happy that a function is being arranged in honour of Sri G.H.Prasad, to mark the completion of 60 years of his very significant and purposeful existance. I am particularly happy to learn that a Souvenier will be released on the auspicious occasion.

I wish Sri G.H.Prasad and his family long life, prosperity and happiness.

೯

## ಸ್ಫಟಿಕಮಣಿ

### ಪ್ರೊ. ಲಕ್ಷ್ಮಣ್ ತೆಲಗಾವಿ

ಅಸ್ತಿತ್ವಕ್ಕೆ ಅರ್ಥ, ವ್ಯಕ್ತಿತ್ವಕ್ಕೆ ಬೆಲೆ, ವಿಚಾರಗಳಿಗೆ ಮಾನ್ಯತೆ - ಇವು ಯಾವುದೇ ವ್ಯಕ್ತಿ ತನ್ನ ಜೀವಿತಕಾಲದಲ್ಲಿ ಸಾಧಿಸಿಕೊಳ್ಳಬೇಕಾದ ಕನಿಷ್ಠ ಅರ್ಹತೆಗಳು. ಪರಿಪೂರ್ಣತೆಯತ್ತ ಸಾಗಲು ಇವು ಮಾರ್ಗದರ್ಶಿ ಪಾತ್ರ ನಿರ್ವಹಿಸುತ್ತವೆ; ವೈಯಕ್ತಿಕ ಸಿದ್ಧಿ-ಸಾಧನೆಗಳಿಗೆ ಮಾತ್ರವಲ್ಲದೆ, ಸಾಮಾಜಿಕ-ಸಾಮುದಾಯಿಕ ಪ್ರಗತಿಗೂ ಕಾರಣವಾಗುತ್ತವೆ. ಆದರೆ ಇದೊಂದು ವಿರಳ ಸ್ವಭಾವ. ಕೆಲವರಿಗೆ ಮಾತ್ರ ಇಂಥಾ ಸ್ಥಿತಿಯನ್ನು ಸೃಷ್ಟಿಸಿಕೊಳ್ಳಲು ಸಾಧ್ಯ. ನಿರಂತರ ಪ್ರಯತ್ನದಿಂದ ಇದು ಇತರರಿಗೂ ಈಡೇರಬಹುದೇನೊ. ಜಿ.ಹೆಚ್.ಪ್ರಸಾದ್ ಅವರನ್ನು ಗಮನಿಸುವಾಗಲೆಲ್ಲ ಈ ಬಗೆಯ ವಿಚಾರ ನನ್ನಲ್ಲಿ ಮೂಡುತ್ತಿರುತ್ತದೆ.

ಸೌಮ್ಯತೆಯೆಂಬುದು ಸಾತ್ವಿಕವಾದುದು; ಅದಕ್ಕೂ ಮಿಗಿಲಾಗಿ ದೈವಿಕವಾದುದು. ಮೌನ-ಶಾಂತ-ಸಹನಶೀಲ ಸ್ವಭಾವಗಳು ಇದರ ಇತರ ಮುಖಗಳು; ಆಧ್ಯಾತ್ಮಿಕವಾಗಿ ಪ್ರಚಂಡ ಶಕ್ತಿಯಾಗಿ ಹೊರಹೊಮ್ಮಬಲ್ಲಂಥವು. ಆದರೆ ಇಂಥಾ ಪ್ರವೃತ್ತಿ ಉಂಟಾಗಲು ಇರಬೇಕಾದ ಮಾನಸಿಕ-ಬೌದ್ಧಿಕ ಸ್ಥಿತಿಗಳು ಮಾತ್ರ ಊಹೆಗೂ ನಿಲುಕದಂಥವು. ಈ ನಿಟ್ಟಿನಲ್ಲಿ ಪ್ರಯತ್ನಶೀಲರಾದವರು ಸಾಕಷ್ಟು ಮಂದಿ ಇದ್ದಾರೆ. ಕೆಲವರಿಗೆ ಇದು ಸ್ವಾಭಾವಿಕವಾಗಿಯೇ ದಕ್ಕಿರುತ್ತದೆ. ಇಂಥವರು ಸ್ವಯಂ ಶಕ್ತಿಶಾಲಿಗಳಾಗಿರುತ್ತಾರೆ ಮಾತ್ರವಲ್ಲ, ತಮ್ಮ ಸಂಪರ್ಕಕ್ಕೆ ಬಂದಂಥವರನ್ನೂ ಶಕ್ತಿಸಂಪನ್ನರಾಗುವಂತೆ ಸಜ್ಜುಗೊಳಿಸುತ್ತಿರುತ್ತಾರೆ. ಇಂಥವರ ಕಾರ್ಯಪ್ರವೃತ್ತಿಗಳು ಇತರರಿಗಿಂತ ಭಿನ್ನವೂ ಅರ್ಥಪೂರ್ಣವೂ ಆಗಿರುವುದುಂಟು. ಈ ಸಾಲಿನಲ್ಲಿ ಜಿ.ಹೆಚ್.ಪ್ರಸಾದ್ ಅವರನ್ನೂ ಗುರುತಿಸುವುದಾದರೆ ಅದು ಖಂಡಿತ ಉತ್ಪ್ರೇಕ್ಷೆ ಎನಿಸದು. ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಇಂಥಾ ವಿರಳರು, ತಮ್ಮ ಪಾಲಿನ ಕರ್ತವ್ಯ ನಿರ್ವಹಣೆಯಲ್ಲಿ ನಿಸ್ಪೃಹರೂ ನಿಸ್ವಾರ್ಥಿಗಳೂ ಜನಾನುರಾಗಿಗಳೂ ಆಗಿ ಕಾಣಿಸಿಕೊಳ್ಳುವುದುಂಟು.

‘ಬ್ರಹ್ಮಜ್ಞಾನಿ’ ರಾಮಕೃಷ್ಣ ಪರಮಹಂಸರ ಪ್ರಕಾರ ಸಿದ್ಧರಲ್ಲಿ ಎರಡು ವಿಧ : ಸಾಧನಸಿದ್ಧರು ಮತ್ತು ಕೃಪಾಸಿದ್ಧರು. ಆತ್ಮಜಾಗೃತಿ ಹೊಂದಲು ಕಷ್ಟಪಡುವವರು ಸಾಧನ ಸಿದ್ಧರಾದರೆ, ಅಷ್ಟೇನೂ ಕಷ್ಟಪಡದೆ ಜಾಗೃತಿ ಹೊಂದಬಲ್ಲಂಥವರು ಕೃಪಾಸಿದ್ಧರು. ಇವರಿಗೆ ಇದ್ದಕ್ಕಿದ್ದಂತೆ ಆತ್ಮಜ್ಞಾನ ದೊರೆತುಬಿಡಬಹುದು. ಇವರಲ್ಲದೆ, ನಿತ್ಯಸಿದ್ಧರೂ ಇದ್ದಾರೆ. ಇಂಥವರು ಆತ್ಮಜಾಗೃತಿ ಹೊಂದಿಯೇ ಜನ್ಮವೆತ್ತುತ್ತಾರೆ. ಲೋಕಶಿಕ್ಷಣ ಇಂಥವರ ಜನನದ ಉದ್ದೇಶ. ಇವರು ಎಂದಿಗೂ ಸಂಸಾರದ ಬಂಧನದಲ್ಲಿರುವುದಿಲ್ಲ. ಸ್ವಲ್ಪ ವಯಸ್ಸಾಗುವುದರೊಳಗೇ ಜಾಗೃತರಾಗಿ ಬಿಡುತ್ತಾರೆ. ಸತ್ಕರ್ಮಾಸಕ್ತಿ ಬೆಳೆಯುತ್ತದೆ. ಇವರಿಗೆ ಪ್ರಾಪಂಚಿಕವಾದುದಾವುದೂ ರುಚಿಸುವುದಿಲ್ಲ. ಲೋಭ-ಮೋಹಗಳಲ್ಲಿ ಎಂದಿಗೂ ಆಸಕ್ತರಾಗುವುದಿಲ್ಲ. ಇಂಥಾ ನಿತ್ಯಸಿದ್ಧರ ಸಾಲಿನಲ್ಲಿ ಹಲವಾರು ಮಹನೀಯರು ನಮ್ಮ ಮಧ್ಯದಿಂದಲೇ ಎದ್ದುಬಂದು ನಿಂತಿರುವುದನ್ನು ನಾವು ಕಂಡಿದ್ದೇವೆ. ಜಿ.ಹೆಚ್.ಪ್ರಸಾದ್ ಅವರನ್ನು ‘ನಿತ್ಯಸಿದ್ಧ’ರಂತೆ ಬಿಂಬಿಸುವ ಪ್ರಯತ್ನ ಇಲ್ಲಿಯದಲ್ಲವಾದರೂ ಇಂಥಾ ಸ್ಥಿತಿಯನ್ನು ತಲುಪುವ ಮಾರ್ಗದಲ್ಲಿ ಅವರಿರುವರೆಂಬುದನ್ನು ನಿರ್ಭಿಡೆಯಿಂದ ಹೇಳಲಡ್ಡಿಯಿಲ್ಲ. ಅವರು ಸಾಗಿಬಂದಿರುವ ಹಾದಿಯೇ ಇದನ್ನು ಸಮರ್ಥಿಸುತ್ತದೆ.

ನಾನು ಭಾವಿಸುವಂತೆ, ಜಿ.ಹೆಚ್.ಪ್ರಸಾದರೊಂದು ಸ್ಫಟಿಕಮಣಿ. ಈ ಮಣಿ ಸ್ವಚ್ಛವೂ ಪಾರದರ್ಶಕವೂ ಆದ ಒಂದು ಅತ್ಯುತ್ತಮ ಖನಿಜ. ಸೂರ್ಯಕಾಂತಶಿಲೆಯೆಂಬ ಹೆಸರು ಇದಕ್ಕಿದೆ. ಬೆಣಚುಕಲ್ಲು ಜಾತಿಗೆ ಸೇರಿದ ನಿರ್ಮಲವೂ ಪಾರದರ್ಶಕವೂ ಆಗಿರುವ ಬಿಳಿಯ ಹೊಳಪಿನ ಕಲ್ಲು ಎಂತಲೂ ಗುರುತಿಸಲ್ಪಟ್ಟಿದೆ. ಅತಿಶೈತ್ಯವಾಗಿರುವುದು ಈ ಶಿಲೆಯ ಗುಣ. ಶಿವಾಲಯಗಳಲ್ಲಿರುವ ಕೆಲವು ಲಿಂಗಗಳು ಹಾಗೂ ನಂದಿವಿಗ್ರಹಗಳು ಸ್ಫಟಿಕದಿಂದ ನಿರ್ಮಾಣಗೊಂಡಂಥವು. ಚಿತ್ರದುರ್ಗ ನಾಯಕ ಅರಸರ ಪೈಕಿ ಒಂಬತ್ತನೆಯವನಾದ ಹಿರೇಮದಕರಿನಾಯಕನು (೧೭೨೧-೧೭೪೮), ಚಂದ್ರಮೌಳೇಶ್ವರ ಎಂಬ ಸ್ಫಟಿಕದ ಲಿಂಗವನ್ನು ಮಾಡಿಸಿ, ಅದನ್ನು ಅತ್ಯಂತ ಭಕ್ತಿ-ನೇಮ-ನಡೆಗಳಿಂದ ಪೂಜಿಸುತ್ತಿದ್ದ. ಇದರಿಂದ ವ್ಯಕ್ತಪಡುವುದೇನೆಂದರೆ, ಈ ಶಿಲೆ ಎಷ್ಟು ಶುಭ್ರವೊ, ನಿರ್ಮಲವೊ ಅಷ್ಟೇ ಪವಿತ್ರವಾದುದೆಂಬುದು. ಸಮಕಾಲೀನರ ದೃಷ್ಟಿಯಲ್ಲಿ ಪ್ರಸಾದ್ ಅವರೂ ಇಂಥದೇ ಸದಭಿಪ್ರಾಯಕ್ಕೆ ಪಾತ್ರರಾಗಿರುವರೆಂಬುದನ್ನು ನಿರಾಕರಿಸಲಾಗುವುದಿಲ್ಲ. ಅವರೊಬ್ಬ ಸಂತಪ್ರತೀಕದಂತೆ ತೋರುವುದರಿಂದಲೇ ಅವರು ಎಲ್ಲರ ಗೌರವಕ್ಕೆ ಪಾತ್ರರು.

* * *

ಇಲ್ಲಿಗೆ ೩೫ ವರ್ಷಗಳಿಂದಲೂ ನನ್ನೊಡನೆ ನಿಕಟ ಬಾಂಧವ್ಯ ಇರಿಸಿಕೊಂಡಿರುವ ಪ್ರಸಾದ್ ಅವರನ್ನು ಕುರಿತು ಹೇಳುವುದು ಬಹಳಷ್ಟಿದೆ. ಈ ಅವಧಿಯ ಉದ್ದಕ್ಕೂ ಅವರು ನನ್ನ ಹಿತೈಷಿಯಾಗಿ ಏಕರೀತಿಯಲ್ಲಿ ಮುಂದುವರೆದುಕೊಂಡು ಬಂದಿದ್ದಾರೆಂಬುದೇ ನನ್ನ ಪಾಲಿಗೆ ಸಂತೋಷದ ಸಂಗತಿ. ಹಿರಿಯ ಸಹೋದರರಾಗಿ, ಮಾರ್ಗದರ್ಶಕರಾಗಿ,

ಮುಖ್ಯವಾಗಿ ಓರ್ವ ಆಪ್ತರಾಗಿ ಅವರು ನನ್ನೊಡನೆ ನಡೆದುಕೊಂಡಿದ್ದಾರೆ. ನನ್ನಮಟ್ಟಿಗೆ ಹಾಗೂ ನನ್ನ ಪಾಲಿಗೆ, ಇಂಥವರು ಕೆಲವರಾದರೂ ಇದ್ದಾರೆನ್ನುವುದೇ ನೆಮ್ಮದಿ ತರುವಂಥಾದ್ದು.

ಜಿ.ಹೆಚ್.ಪ್ರಸಾದ್ ಅವರನ್ನು ನಾನು ಮೊದಲಿಗೆ ಭೇಟಿಯಾದುದು ೧೯೭೩ರಲ್ಲಿ. ಆಗ ಪ್ರಸಾದ್ ದಾವಣಗೆರೆಯಲ್ಲಿ ವಕೀಲರಾಗಿದ್ದರು ಮತ್ತು ಆ ವೇಳೆಗೆ ಮುನ್ಸಿಫ್ ಹುದ್ದೆಗೆ ಆಯ್ಕೆಗೊಂಡಿದ್ದರು. ೧೮ ಮಾರ್ಚ್ ೧೯೭೩ರಲ್ಲಿ ದಾವಣಗೆರೆಯಲ್ಲಿ ಸಮಾವೇಶ ಗೊಳ್ಳಲಿದ್ದ ಅಖಿಲ ಕರ್ನಾಟಕ ನಾಯಕ ಜನಾಂಗದ ದ್ವಿತೀಯ ಮಹಾಸಮ್ಮೇಳನದ ನಿಮಿತ್ತ 'ವಾಲ್ಮೀಕಿ' ಹೆಸರಿನ ಸ್ಮರಣಸಂಚಿಕೆ ಹೊರತರಲು ನಿರ್ಧರಿಸಲಾಗಿತ್ತು. ಈ ಮಹಾಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರು ಸಿ.ಮಲೆಸಿದ್ದಪ್ಪ; ಸ್ಮರಣಸಂಚಿಕೆಯ ಸಂಪಾದಕರಾಗಿ ನಿಯೋಜಿತರಾಗಿದ್ದವರು 'ಇತಿಹಾಸಜ್ಞ' ಹೆಚ್.ವಿ.ವೀರನಾಯಕ 'ಹರತಿ'. ಸ್ಮರಣಸಂಚಿಕೆ ಸಂಪಾದಕ ಮಂಡಲಿಯ ಅಧ್ಯಕ್ಷರು ಜಿ.ಹೆಚ್.ಪ್ರಸಾದ್.

'ವಾಲ್ಮೀಕಿ' ಸಂಚಿಕೆಗಾಗಿ ಕೆಲವರ ಸಂದೇಶ, ಲೇಖನ ಇತ್ಯಾದಿಯನ್ನು ಸಂಗ್ರಹಿಸಲು ಮೈಸೂರಿಗೆ ಬಂದಿದ್ದ ಪ್ರಸಾದ್, ಮಾನಸಗಂಗೋತ್ರಿಯಲ್ಲಿದ್ದ ನನ್ನನ್ನೂ ಭೇಟಿ ಮಾಡಿದರು. ೧೯೭೨ರಲ್ಲಿ ಚರಿತ್ರೆ ಎಂ.ಎ. ಮುಗಿಸಿದ ಕೂಡಲೆ ವಿಶ್ವವಿದ್ಯಾನಿಲಯದ ಫೆಲೋಷಿಪ್ ಗೌರವಕ್ಕೆ ಪಾತ್ರನಾಗುವ ಅವಕಾಶ ಪ್ರಾಪ್ತವಾಗಿದ್ದಿತು ನನಗೆ. ವಿಭಾಗದ ಮುಖ್ಯಸ್ಥ ಹಾಗೂ ಪ್ರಸಿದ್ಧ ಇತಿಹಾಸಕಾರ ಪ್ರೊ.ಬಿ.ಷೇಕ್‌ಅಲಿಯವರ ಮಾರ್ಗದರ್ಶನದಲ್ಲಿ 'ಚಿತ್ರದುರ್ಗ ನಾಯಕ ಅರಸರು' ವಿಷಯ ಕುರಿತು ಪಿಎಚ್.ಡಿ. ಅಧ್ಯಯನವನ್ನು ಆರಂಭಿಸಿದ್ದೆ. ಆ ವೇಳೆಗಾಗಲೇ ಪತ್ರಿಕೆಗಳಲ್ಲಿ, ಅಲ್ಲಿ-ಇಲ್ಲಿ ಪ್ರಕಟಗೊಂಡಿದ್ದ ನನ್ನ ಬರಹಗಳು ಕೆಲವರ ಗಮನಕ್ಕೂ ಬಂದಿದ್ದವು. ಪ್ರಸಾದ್ ಅವರು ನನ್ನನ್ನು ಭೇಟಿ ಮಾಡಿದುದು ಈ ಹಿನ್ನೆಲೆಯಲ್ಲಿಯೇ.

ಒಂದು ಮಧ್ಯಾಹ್ನ ಮಾನವಿಕಶಾಸ್ತ್ರಗಳ ಕಟ್ಟಡದಲ್ಲಿದ್ದ ನಮ್ಮ ವಿಭಾಗಕ್ಕೆ ಬಂದ ಪ್ರಸಾದ್, ಸಂಶೋಧಕರ ಕೊಠಡಿಯಲ್ಲಿದ್ದ ನನ್ನನ್ನು ಭೇಟಿಯಾದರು. ಸರಳತೆ, ಸೌಜನ್ಯ, ಕಾರ್ಯಶ್ರದ್ಧೆ -ಇವು ಪ್ರಸಾದ್ ಅವರಲ್ಲಿ ನಾನು ಪ್ರಾರಂಭದಲ್ಲೆ ಗಮನಿಸಿದ ಗುಣಗಳು. ಕರ್ನಾಟಕದ ನಾಯಕ ಮನೆತನಗಳ ಸಂಶೋಧನೆ ಕುರಿತು ನಾವು ಸಾಕಷ್ಟು ಚರ್ಚಿಸಿದೆವು. ಮಾತು, ಚರ್ಚೆ ಮುಂದುವರೆದಂತೆ, ನನ್ನ ಸಂಶೋಧನ ಪ್ರಯತ್ನಕ್ಕೆ ಉತ್ಸಾಹ ತುಂಬಲು ಬಂದವರಂತೆ ಕಂಡುಬಂದರು ಪ್ರಸಾದ್. ಅವರ ಸ್ನೇಹಪೂರ್ವಕ ನಡವಳಿಕೆಗೆ ನಾನು ಮಾರುಹೋದೆ. ನನ್ನ ಎರಡು ಲೇಖನಗಳನ್ನು ಸಂಚಿಕೆಯಲ್ಲಿ ಪ್ರಕಟಿಸಲು ಸಮ್ಮತಿಸಿದರು. ನನ್ನ ಪಾಲಿಗೆ ಇದೊಂದು ಸುವರ್ಣ ಅವಕಾಶವೆಂಬುದು ಆಗಿನ ಮಟ್ಟಿಗೆ ಅನ್ನಿಸಲಿಲ್ಲ. ಇಷ್ಟೇ ಅಲ್ಲ, ಈ ಸಂದರ್ಭ ಮುಂದೆ ಹರತಿ ವೀರನಾಯಕ, ಮಲೆಸಿದ್ದಪ್ಪರಂಥಾ ವ್ಯಕ್ತಿಗಳೊಡನೆ ನನ್ನ ಬಾಂಧವ್ಯ ಗಾಢವಾಗಿ ಬೆಸೆಯಲು ಕಾರಣವಾಗುತ್ತದೆಂಬ ಕಲ್ಪನೆಯೂ ಇರಲಿಲ್ಲ. 'ವಾಲ್ಮೀಕಿ' ಸಂಚಿಕೆಯಲ್ಲಿ 'ಮಾಯಕೊಂಡದ ಕಾಳಗ' ಮತ್ತು

'ಹುಲ್ಲೂರು ಶ್ರೀನಿವಾಸ ಜೋಯಿಸರ ಗಂಡುಗಲಿ ಕುಮಾರರಾಮ' ಎಂಬ ನನ್ನ ಎರಡು ಲೇಖನಗಳು ಅಚ್ಚುಗೊಂಡವು.

ಜಿ.ಹೆಚ್.ಪ್ರಸಾದ್ ಅವರ ಅಭಿಮಾನಪೂರ್ವಕ ಸ್ನೇಹ ಈ ಸಮ್ಮೇಳನಕ್ಕಷ್ಟೆ ಸೀಮಿತಗೊಳ್ಳದೆ ಆ ನಂತರವೂ ಮುಂದುವರೆಯಿತು. ಸೋದರವಾತ್ಸಲ್ಯದ ಸವಿಯನ್ನು ನೋಡಿದೆ. ತಮ್ಮ ಕುಟುಂಬದ ಸ್ವಂತ ಸದಸ್ಯನಂತೆ ನನ್ನನ್ನು ನಡೆಸಿಕೊಂಡರು. ಯಾವ ಋಣಾನುಬಂಧವೋ! ಕರ್ನಾಟಕಾದ್ಯಂತ, ಅಂದರೆ ಮುಖ್ಯವಾಗಿ ನಾಯಕ ಪ್ರಭುತ್ವ ನೆಲೆಸಿದ್ದ ಕೇಂದ್ರಗಳಿಗೆಲ್ಲಾ ಪ್ರವಾಸವೇರ್ಪಡಿಸುವ ಯೋಜನೆ ರೂಪಿಸಿದರು ಪ್ರಸಾದ್, ಅದೂ ಸ್ವಂತ ಖರ್ಚಿನಲ್ಲಿ. ದಾವಣಗೆರೆಗೆ ಬರಮಾಡಿಕೊಂಡರು. ಲಾಡ್ಜ್‌ನಲ್ಲಿ ವಸತಿ ಏರ್ಪಡಿಸಿದರು. ತಮ್ಮ ಕೆಲಸ-ಕಾರ್ಯಗಳನ್ನೆಲ್ಲಾ ಬದಿಗಿರಿಸಿ, ಒಬ್ಬ ನಿಷ್ಠಾವಂತ ಸಂಶೋಧನ ವಿದ್ಯಾರ್ಥಿಯಂತೆ ನನ್ನೊಡನೆ ಬಂದರು. ಕ್ಷೇತ್ರಕಾರ್ಯದ ಮೊದಲ ಕಾರ್ಯಕ್ರಮವಾಗಿ ಹರಿಹರ, ಉಚ್ಚಂಗಿದುರ್ಗ, ಹರಪನಹಳ್ಳಿ, ಮತ್ತಿ, ಮಾಗಡಿ, ಮಾಯಕೊಂಡ, ಸಂತೆಬೆನ್ನೂರು, ಭದ್ರಾವತಿ -ಹೀಗೆ ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳ ಪ್ರಮುಖ ಚಾರಿತ್ರಿಕ ಎಡೆಗಳ ದರ್ಶನ ಮಾಡಿಸಿದರು. ಈ ಕೆಲವು ಸಂದರ್ಭಗಳಲ್ಲಿ ಪ್ರಸಾದರೊಡನೆ ಸ್ವತಃ ಮಲೆಸಿದ್ದಪ್ಪನವರೂ ಇರುತ್ತಿದ್ದರೆಂಬುದು ಅಭಿಮಾನದ ಸಂಗತಿ. ತಮ್ಮ ಏನೆಲ್ಲಾ ಕೆಲಸಗಳನ್ನು ಬದಿಗಿಟ್ಟು ನನ್ನ ಕ್ಷೇತ್ರಕಾರ್ಯದಲ್ಲಿ ಜತೆಗಿದ್ದು, ಸಮಾನ ಆಸಕ್ತಿಯನ್ನು ವ್ಯಕ್ತಪಡಿಸಿ ಉತ್ತೇಜಿಸಿದ ಮಲೆಸಿದ್ದಪ್ಪನವರ ಸೌಜನ್ಯವನ್ನು ಇಲ್ಲಿ ಎಷ್ಟು ನೆನೆದರೂ ಕಡಿಮೆಯೇ. ಈ ಮೇಲಿನ ಕೆಲವು ಸ್ಥಳಗಳಲ್ಲಿಯ ಸ್ಮಾರಕಗಳನ್ನು ಕುರಿತ ನನ್ನ ಕೆಲವು ಸಚಿತ್ರ ಲೇಖನಗಳು ಆ ನಂತರ ಕನ್ನಡ ದಿನಪತ್ರಿಕೆಗಳಲ್ಲಿ ಮತ್ತಿತರ ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡವು. ಇವುಗಳನ್ನು ಓದಿ ಮೊದಲು ಸಂಭ್ರಮಿಸಿದವರು ಪ್ರಸಾದ್ ಮತ್ತು ಮಲೆಸಿದ್ದಪ್ಪ.

ಮತ್ತೆ ಇಂಥಾ ಪ್ರಯತ್ನ ಮುಂದುವರೆಯಿತು. ಮೈಸೂರಿನಲ್ಲಿದ್ದ ಕೆಲವು ಪ್ರಭಾವಶಾಲಿ ನಾಯಕಬಂಧುಗಳೊಡನೆ ನನ್ನನ್ನು ಪರಿಚಯಿಸಿದರು ಪ್ರಸಾದ್. ಬೆಂಗಳೂರಿಗೆ ಕರೆದೊಯ್ದು ನನ್ನ ಅಧ್ಯಯನಕ್ಕೆ ಅಗತ್ಯವಾದ ಕೆಲವು ಅಮೂಲ್ಯ ಪುಸ್ತಕಗಳನ್ನು ಕೊಡಿಸಿದರು. ಕೆಲವು ಸಾಹಿತಿಗಳ ಮನೆಗಳಿಗೆ ಜತೆಯಲ್ಲೆ ಅಲೆದಾಡಿದೆವು. ಪ್ರಸಿದ್ಧ ವಿದ್ವಾಂಸ ದಂಪತಿಗಳಾದ ಹಂಪನಾ ಮತ್ತು ಕಮಲಾ ಹಂಪನಾ ಅವರನ್ನು ನಾನು ಮೊದಲಿಗೆ ಸಂದರ್ಶಿಸಿದುದು ಇದೇ ಸಂದರ್ಭದಲ್ಲಿ, ಪ್ರಸಾದರ ಜತೆಯಲ್ಲಿ. ಬೆಂಗಳೂರಿನಲ್ಲಿ ಕೊರಟಿ ಶ್ರೀನಿವಾಸರಾವ್, ಮೈಸೂರಿನಲ್ಲಿ ತರಾಸು, ಜಿ.ವರದರಾಜರಾವ್, ತ.ಸು.ಶಾಮರಾವ್ ಮೊದಲಾದವರನ್ನೆಲ್ಲಾ ಕಂಡು ಚರ್ಚಿಸಿದೆವು. ಹೀಗೆ ಆರಂಭದಲ್ಲಿ ಸಂಶೋಧನಕ್ಷೇತ್ರದಲ್ಲಿ ಯಾವುದೇ ಪ್ರೋತ್ಸಾಹವಿಲ್ಲದೆ ದಿಕ್ಕುಗೆಟ್ಟಿದ್ದ ನನಗೆ ಬೆಂಬಲ-ಪ್ರೋತ್ಸಾಹ-ಮಾರ್ಗದರ್ಶನ ನೀಡಿ ಧೈರ್ಯೋತ್ಸಾಹಗಳನ್ನು ತುಂಬಿದವರು ಪ್ರಸಾದ್. ಕಳೆದ ಮೂವತ್ತೈದು ವರ್ಷಗಳಿಂದ ಏಕಪ್ರಕಾರವಾಗಿ ಅಭಿಮಾನಪೂರ್ವಕ ಪ್ರೋತ್ಸಾಹ ನೀಡುತ್ತಾ ಬಂದಿರುವ ಈ


ಮಾಯಕೊಂಡ ಪ್ರವಾಸದಲ್ಲಿ ಸಿ.ಮಲೆಸಿದ್ದಪ್ಪ ಮತ್ತು ಜಿ.ಹೆಚ್.ಪ್ರಸಾದ್ (೬.೮.೧೯೭೩)

ಮಹನೀಯರೊಡನೆ ಹಲವು ಸಂದರ್ಭಗಳಲ್ಲಿ ಸಾಕಷ್ಟು ಚರ್ಚಿಸಿದ್ದೇನೆ. ಈ ನಿಟ್ಟಿನಲ್ಲಿ ತಮ್ಮ ಅಳಿಯ ಪ್ರಸಾದರಂತೆಯೇ ತಮ್ಮ ಎಲ್ಲ ಬಗೆಯ ಸಹಕಾರ ನೀಡಿದವರು ಮಲೆಸಿದ್ದಪ್ಪ.

ಮಲೆಸಿದ್ದಪ್ಪ ಮತ್ತು ವೀರನಾಯಕರ ವಿಶ್ವಾಸಕ್ಕೆ ಪಾತ್ರನಾದುದು ನನ್ನಮಟ್ಟಿಗೆ ಹೆಮ್ಮೆಯ ಸಂಗತಿ. ಈ ಈರ್ವರ ಪ್ರಭಾವ ನನ್ನ ಮೇಲೆ ಗಾಢವಾಗಿಯೇ ಇದ್ದಿತು. ವೀರನಾಯಕರು ತಮ್ಮ ಜೀವಿತಕಾಲದಲ್ಲಿ ಚಾರಿತ್ರಿಕ ಸಂಶೋಧನೆ-ಬರವಣಿಗೆಗಳಿಗೆ ಸಂಬಂಧಿಸಿದಂತೆ ಪ್ರೇರಣೆ ನೀಡಿದರೆ, ಮಲೆಸಿದ್ದಪ್ಪನವರು ಸ್ವಾಭಿಮಾನ-ಛಲ-ಬೌದ್ಧಿಕ ಕ್ರಿಯಾಶೀಲತೆಗಳ ಸಂಕೇತವಾಗಿ ಉಳಿದುಕೊಂಡರು. ೧೯೮೩ ಮಾರ್ಚ್ ೨೬ರಂದು ವೀರನಾಯಕರು ಕಾಲವಶರಾದ ನಂತರ, ೧೯೮೭ರಲ್ಲಿ ಅವರ ನೆನಪಿನಲ್ಲಿ 'ಹರತಿಸಿರಿ' ಸಂಪುಟ ಪ್ರಕಟವಾಯಿತು. ಈ ಸಂಪುಟದ ಪ್ರಕಟಣ ಸಮಿತಿಯ ಸದಸ್ಯರಾಗಿದ್ದುಕೊಂಡು ಮಲೆಸಿದ್ದಪ್ಪನವರು ಸಹಕರಿಸಿದರು. ಪ್ರಸಾದ್ ಅವರು ಈ ಸಮಿತಿಯ ಇನ್ನೊರ್ವ ಸದಸ್ಯರಾಗಿದ್ದರು. ವೀರನಾಯಕರ ಹಿರಿಯಪುತ್ರ ಹರ್ತಿಕೋಟೆ ವೀರೇಂದ್ರಸಿಂಹ ಅವರ ಸೌಜನ್ಯದಿಂದ 'ಹರತಿಸಿರಿ' ಸಂಪುಟವನ್ನು ಸಂಪಾದಿಸಿಕೊಡುವ ಅವಕಾಶ ನನಗೆ ಪ್ರಾಪ್ತವಾದರೆ, ಪ್ರಸಾದ್ ಅವರ ಸೌಜನ್ಯದಿಂದ ಮಲೆಸಿದ್ದಪ್ಪನವರ ಸ್ಮರಣಸಂಪುಟ ಪ್ರಕಟಣ ಸಮಿತಿಯ ಉಪಾಧ್ಯಕ್ಷನಾಗುವ ಗೌರವ ನನಗೆ ಲಭಿಸಿತು. ತಿಳಿಯದು, ಯೋಗಾಯೋಗವೆಂದರೆ ಇದೇ ಇರಬೇಕು.

* * *

ತಾವು ಒಮ್ಮೆ ಕೈಗೆತ್ತಿಕೊಂಡ ಕೆಲಸವನ್ನು ಪೂರೈಸದೇ ಬಿಡುವವರಲ್ಲ ಪ್ರಸಾದ್. ಅವರ ವೃತ್ತಿಜೀವನಕ್ಕೆ ಸಂಬಂಧಿಸಿದಂತೆ ಇಂಥಾ ಹಲವಾರು ಸಂದರ್ಭಗಳಿವೆಯಾದರೂ ಇಲ್ಲಿ ನಾನು ಪ್ರಸ್ತಾಪಿಸಬಯಸುವ ಸಂಗತಿ ಕೇವಲ ಗ್ರಂಥ ಪ್ರಕಟಣೆ ಕುರಿತದ್ದು. ಅದೆಂದರೆ, ಸಿ. ಮಲೆಸಿದ್ದಪ್ಪನವರ ಸ್ಮರಣೆಗೆ ಹೊರತರಲಾದ 'ಘಟಿಹೊಸಹಳ್ಳಿ ಗಟ್ಟಿಗ' ಸಂಪುಟದ ಯೋಜನೆ. ಈ ಸಂಪುಟವನ್ನು ಸಂಪಾದಿಸಿದವರು ಗೆಳೆಯರಾದ ಹರ್ತಿಕೋಟೆ ವೀರೇಂದ್ರಸಿಂಹ ಮತ್ತು ಡಾ.ತೇಜಸ್ವಿ ಕಟ್ಟೀಮನಿ. ಸಂಚಾಲಕರಾಗಿ ದುಡಿದವರು ಪ್ರಸಾದ್. ತಮ್ಮ ಪ್ರೀತಿಯ ಮಾವನವರ ನೆನಪಿಗಾಗಿ ಈ ಸಂಪುಟವನ್ನು ಹೊರತರಲು ನಿರ್ಧರಿಸಿದವರು ಅವರೇ.

ಸಿ.ಮಲೆಸಿದ್ದಪ್ಪ ಅವರ ಬಗೆಗೆ ಸಂಪುಟವನ್ನು ಹೊರತರುವ ಅಗತ್ಯ ಕುರಿತು ಪ್ರಸಾದ್ ಅವರು ತಮ್ಮ 'ಸಂಚಾಲಕರ ಮಾತಿ'ನಲ್ಲಿ ಹೇಳಿರುವುದು ಹೀಗೆ : " ಪಾನನಿರೋಧ ನೀತಿಯನ್ನು ತಮ್ಮ ಗ್ರಾಮದಲ್ಲಿ ಯಶಸ್ವಿಯಾಗಿ ಜಾರಿಗೆ ತಂದದ್ದು, ಜಾತೀಯತೆಯ ವಿರುದ್ಧ ಹೋರಾಡಿದ್ದು, ಸ್ವಚ್ಛ ರಾಜಕಾರಣ ಮಾಡಿದ್ದು, ತಾಲ್ಲೂಕಿನ ಸರ್ವತೋಮುಖ ಅಭಿವೃದ್ಧಿಗಾಗಿ, ಸಮಾಜದ ಸುಧಾರಣೆಗಾಗಿ ಹೀಗೆ ಹತ್ತು ಹಲವಾರು ರೀತಿಯಲ್ಲಿ ತ್ರಿಕರಣ ಶುದ್ಧಿಯಿಂದ ತಮ್ಮನ್ನು ಅರ್ಪಿಸಿಕೊಂಡವರೆಂದರೆ ಸಿ.ಮಲೆಸಿದ್ದಪ್ಪ ಅವರು. ಸ್ವಾತಂತ್ರ್ಯಯೋಧರ ಸಂಘವಾಗಲೀ ಸಾರ್ವಜನಿಕರಾಗಲೀ ಸರ್ಕಾರವಾಗಲೀ ಇಂಥವರ ನಿಸ್ವಾರ್ಥ ಸೇವೆಯನ್ನು ಗುರುತಿಸಿ ಸ್ಮರಿಸದೇ ಇದ್ದುದು ದುರಂತವೆಂದೇ ಹೇಳಬೇಕು. ಈ ಹಿನ್ನೆಲೆಯಲ್ಲಿ ಅವರ ಜೀವಿತ ಸಾಧನೆಗಳ ಕಿರುಪರಿಚಯವನ್ನು ಸಮಾಜಕ್ಕೆ ಮಾಡಿಸಬೇಕೆಂಬ ಹಂಬಲ ಬಹುದಿನಗಳಿಂದಲೂ ನನ್ನನ್ನು ಕಾಡುತ್ತಿತ್ತು."

ಪ್ರಸಾದ್ ಅವರ ಈ ಯೋಜನೆ ಕಾರ್ಯಗತಗೊಳ್ಳಲು ತೆಗೆದುಕೊಂಡ ಕಾಲಾವಧಿ ಒಟ್ಟು ಹತ್ತುವರ್ಷ. 'ಅಭಿನಂದನಗ್ರಂಥ'ವು 'ಸ್ಮರಣಗ್ರಂಥ'ವಾಗಿ ಪ್ರಕಟಗೊಂಡುದಕ್ಕೆ ಕಾರಣಗಳೇನೇ ಇದ್ದರೂ ಬಿಟ್ಟೂಬಿಡದಂತೆ ಮಲೆಸಿದ್ದಪ್ಪನವರ ಸೇವೆ-ತ್ಯಾಗಗಳನ್ನು ಸಾರ್ವಜನಿಕವಾಗಿ ದಾಖಲಿಸಲು ಕಾರಣಕರ್ತರಾದವರು ಪ್ರಸಾದ್. ಸಂಪುಟ ಪ್ರಕಟಣೆಯ ಕಾರ್ಯ ತಡವಾದುದಕ್ಕೆ ಅವರಲ್ಲಿ ವಿಷಾದವಿದ್ದರೂ ಅದನ್ನು ಈ ಮುಂದಿನಂತೆ ಸೂಕ್ಷ್ಮವಾಗಿಯೇ ಪ್ರಸ್ತಾಪಿಸಿದ್ದಾರೆ : "ಎಷ್ಟೇ ಪ್ರಯತ್ನಪಟ್ಟರೂ ಯೋಜಿತ ಅಭಿನಂದನ ಗ್ರಂಥವನ್ನು ಮಲೆಸಿದ್ದಪ್ಪನವರು ಜೀವಂತ ಇರುವಾಗ ಹೊರತರಲು ಸಾಧ್ಯವಾಗಲಿಲ್ಲ. ಇಂಥಾ ವಿಳಂಬಕ್ಕೆ ಹಲವಾರು ಕಾರಣಗಳಿದ್ದು, ಅವುಗಳ ಪ್ರಸ್ತಾಪ ಇಲ್ಲಿ ಅಪ್ರಸ್ತುತ ಎಂದಷ್ಟೆ ಹೇಳಬಲ್ಲೆ. ಬಹುಶಃ ಮಲೆಸಿದ್ದಪ್ಪನವರು ಈ ಬಗ್ಗೆ ಅನಾಸಕ್ತಿ ತೋರಿದ್ದರಿಂದಲೇ ಈ ಯೋಜನೆ ಕಾರ್ಯಗತವಾಗಲಿಲ್ಲವೇನೊ ಎಂದು ಸಮಾಧಾನಪಟ್ಟುಕೊಳ್ಳುತ್ತೇನೆ."

ಸಂಪಾದಕರು ಸಂಪುಟದ ಪ್ರಕಟಣಕಾರ್ಯದಲ್ಲಿ ಪ್ರಸಾದ್ ಅವರು ವಹಿಸಿದ ಶ್ರಮವನ್ನು ಗುರುತಿಸದೆ ಬಿಟ್ಟಿಲ್ಲ. ಅವರ ಮಾತುಗಳಿವು : " 'ಘಟ್ಟಿಹೊಸಹಳ್ಳಿ ಗಟ್ಟಿಗ' ಸ್ಮರಣಸಂಪುಟ ಹೊರತರಲು ಮೊಟ್ಟಮೊದಲು ಪ್ರೇರಣೆ ಇತ್ತವರು ಮಲೆಸಿದ್ದಪ್ಪನವರ ಅಳಿಯಂದಿರಾದ ಗೌ.ನ್ಯಾಯಾಧೀಶರಾದ ಜಿ.ಹೆಚ್.ಪ್ರಸಾದ್ ಅವರು. ಇವರು ಸಂಪುಟ ಕಾರ್ಯದಲ್ಲಿ ಅತ್ಯಂತ ಆಸಕ್ತಿವಹಿಸಿ ಬೆಂಬಲವಾಗಿ ನಿಂತರು. ಇವರ ತಾಳ್ಮೆ, ಸಹನೆ ನಿಜಕ್ಕೂ ಮೆಚ್ಚಲೇಬೇಕು. ವಿನಯವಂತರೂ ಮೃದುಸ್ವಭಾವದವರೂ ಸ್ನೇಹಪರರೂ ಆದ ಜಿ.ಹೆಚ್. ಪ್ರಸಾದರು ನಮಗಿಂತಲೂ ಹೆಚ್ಚಿನ ಕಾಳಜಿ, ಶ್ರಮವಹಿಸಿ ಈ ಕಾರ್ಯದಲ್ಲಿ ದುಡಿದಿದ್ದಾರೆ. ಮಲೆಸಿದ್ದಪ್ಪನವರ ಬಗೆಗೆ ಹತ್ತು ಹಲವಾರು ಕಡೆಗಳಿಂದ ಮಾಹಿತಿಗಳನ್ನು, ಭಾವಚಿತ್ರಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ."

ಕರ್ನಾಟಕ ಸರ್ಕಾರದಲ್ಲಿ ಮಂತ್ರಿಗಳಾಗಿದ್ದ ಕೆ.ಹೆಚ್.ರಂಗನಾಥ್ ಅವರಿಂದ ಲೇಖನ ಪಡೆಯುವಲ್ಲಿ, ಪ್ರೊ.ಬರಗೂರು ರಾಮಚಂದ್ರಪ್ಪ ಅವರಿಂದ 'ಬೆನ್ನುಡಿ' ಬರೆಸುವಲ್ಲಿ ಪ್ರಸಾದರು ವಹಿಸಿದ ಆಸಕ್ತಿ ಸಹಾ ಪ್ರಶಂಸನೀಯವಾದುದು.

ಇದರೊಡನೆ, 'ಘಟ್ಟಿಹೊಸಹಳ್ಳಿ ಗಟ್ಟಿಗ' ಸ್ಮರಣಸಂಪುಟ ಪ್ರಕಟಣೆಯಲ್ಲಿ ನನ್ನ ಪಾತ್ರ ಏನಿದ್ದಿತೆಂಬುದನ್ನು ಇಲ್ಲಿ ಪ್ರಸ್ತಾಪಿಸುವುದು ಅನಿವಾರ್ಯ. ಮೊದಲಿಗೆ, ಪ್ರಸಾದ್ ಅವರು ಈ ನಿಟ್ಟಿನಲ್ಲಿ ಆಲೋಚಿಸಿದುದೇ ಒಂದು ಯೋಗಾಯೋಗವೆಂದು ಭಾವಿಸುತ್ತೇನೆ. ಮಲೆಸಿದ್ದಪ್ಪ ಅವರ ಸ್ಮರಣಸಂಪುಟಕ್ಕೆ ಪ್ರೇರಣೆಯಾದುದು ನಾನು ಸಂಪಾದಿಸಿದ ಹೆಚ್. ವಿ.ವೀರನಾಯಕ 'ಹರತಿ' ಅವರ ನೆನಪಿಗಾಗಿ ಹೊರತಂದ 'ಹರತಿಸಿರಿ' ಸಂಪುಟವೇ ಎಂಬುದನ್ನು ಗಮನಿಸಿದರೆ ಆಶ್ಚರ್ಯವೂ ಸಂತೋಷವೂ ಆಗುತ್ತದೆ. ಪ್ರಸಾದ್ ಅವರ ಮಾತುಗಳಿವು : "ಗ್ರಂಥವನ್ನು ಹೊರತರುವ ಆಸೆಯನ್ನು ಈಡೇರಿಸಿಕೊಳ್ಳುವ ದಾರಿ ಕಾಣದೇ ಇದ್ದಾಗ, ನನ್ನ ದೂರದ ಬಂಧು ಹಾಗೂ ನನ್ನನ್ನು ಯಾವಾಗಲೂ ಪ್ರೀತಿ-ಮಮತೆಗಳಿಂದ ಕಾಣುತ್ತಿದ್ದ, 'ಇತಿಹಾಸಜ್ಞ' ಎಂಬ ಬಿರುದಿಗೆ ಪಾತ್ರರಾಗಿದ್ದ, ಎಲೆಮರೆಯ ಕಾಯಿಯಂತೆ ತಮ್ಮನ್ನು ಸಮಾಜಕ್ಕೆ ಅರ್ಪಿಸಿಕೊಂಡಿದ್ದ ಹರ್ತಿಕೋಟೆ ವೀರನಾಯಕರ ಸ್ಮರಣೆಗಾಗಿ ಇತಿಹಾಸ ಸಂಶೋಧಕ ಲಕ್ಷ್ಮಣ್ ತೆಲಗಾವಿಯವರ ಸಂಪಾದಕತ್ವದಲ್ಲಿ ಬಿಡುಗಡೆಯಾದ 'ಹರತಿಸಿರಿ' ಮಹಾನ್‌ಗ್ರಂಥವನ್ನು ನೋಡಿದಾಗ, ಮಲೆಸಿದ್ದಪ್ಪನವರ ಸೇವೆಯನ್ನು ಸ್ಮರಿಸುವ ಒಂದು ಅಭಿನಂದನಗ್ರಂಥವನ್ನೇ ತರಬಹುದಲ್ಲಾ ಎಂದು ಅನ್ನಿಸಿತ್ತು. ಮಲೆಸಿದ್ದಪ್ಪನವರ ಅಭಿನಂದನಗ್ರಂಥದ ಆಲೋಚನೆ ಮನದಲ್ಲಿ ಸುಳಿದಾಗ, ಲಕ್ಷ್ಮಣ್ ತೆಲಗಾವಿಯವರೇ ಇದನ್ನು ಕಾರ್ಯರೂಪಕ್ಕೆ ತರಲು ಸೂಕ್ತ ಹಾಗೂ ಅರ್ಹವ್ಯಕ್ತಿ ಎಂದು ತೀರ್ಮಾನಿಸಿ ಸಮಯ ಕಾಯುತ್ತಿದ್ದೆ. ೧೯೯೯ರಲ್ಲಿ ಗೆಳೆಯ ಪಿ.ಟಿ. ಪಾಟೀಲ್, ಸಿವಿಲ್ ಜಡ್ಜ್, ಅವರೊಂದಿಗೆ ಆಗ ಕರ್ನಾಟಕ ಗೆಜೆಟಿಯರ್‌ನ ಸಂಪಾದಕರಾಗಿ ಕಾರ್ಯನಿರ್ವಹಿಸುತ್ತಿದ್ದ ತೆಲಗಾವಿಯವರನ್ನು ಕಾವೇರಿಭವನದಲ್ಲಿ ಭೇಟಿ ಮಾಡಿ ವಿಷಯ ಪ್ರಸ್ತಾಪಿಸಿದೆ. ಅವರು 'ಇದು ಆಗಲೇಬೇಕಾದ ಕಾರ್ಯ. ಮಾಡೋಣ' ಅಂದರು."

ಆ ನಂತರ ರಚನೆಯಾದ ಸಿ.ಮಲೆಸಿದ್ದಪ್ಪ ಅಭಿನಂದನಗ್ರಂಥ ಸಮಿತಿಯ ಉಪಾಧ್ಯಕ್ಷನನ್ನಾಗಿ ನನ್ನನ್ನು ಆಯ್ಕೆಮಾಡಿದರು. ಸಂಪುಟ ಸಿದ್ಧಗೊಂಡನಂತರ ೨೦೦೨ ಮೇ ೨೬ರಂದು ಚಿತ್ರದುರ್ಗದಲ್ಲಿ ಅದ್ದೂರಿ ಕಾರ್ಯಕ್ರಮದಲ್ಲಿ ಅದು ಬಿಡುಗಡೆಗೊಂಡಿತು. ಆಗಷ್ಟೆ ನಿಟ್ಟುಸಿರುಬಿಟ್ಟು ವಿರಮಿಸಿದರು ಪ್ರಸಾದ್!

* * *

ಪ್ರಸಾದ್‌ರನ್ನು ಕುರಿತ ನನ್ನ ನೆನಪು ಮೂರೂವರೆ ದಶಕಗಳಷ್ಟು ಹಿಂದಕ್ಕೆ ಹೋಗುತ್ತದೆ. ಆ ಅವಧಿಯಲ್ಲಿ ಅವರಿಂದ ನನಗೆ ವೈಯಕ್ತಿಕವಾಗಿ ದೊರೆತ ನೈತಿಕ ಬೆಂಬಲ ಸದಾ ಸ್ಮರಣೀಯ. ಪ್ರಸಾದರು ತಮ್ಮ ವೃತ್ತಿನಿಮಿತ್ತ ಯಾವುದೇ ಊರಿನಲ್ಲಿದ್ದರೂ ಚಿತ್ರದುರ್ಗಕ್ಕೆ ಬಂದಾಗಲೊಮ್ಮೆ ಆಗಿನ ನಮ್ಮ ಪುಟ್ಟ ಚಪ್ಪಲಿ ಅಂಗಡಿಗೆ ತಪ್ಪದೆ ಭೇಟಿಕೊಡುತ್ತಿದ್ದರು.(ಇದು ಈಗಲೂ ಮುಂದುವರೆದಿದೆ). ಆಗೆಲ್ಲ ನಾನು ಮೈಸೂರಿನಲ್ಲಿರುತ್ತಿದ್ದುದರಿಂದ, ಅಂಗಡಿಯಲ್ಲಿರುತ್ತಿದ್ದ ನಮ್ಮ ಪೂಜ್ಯ ತಂದೆ 'ಕರ್ಮಯೋಗಿ'

ಪರಸಪ್ಪ ತೆಲಗಾವಿ (ಈಗ ದಿವಂಗತರು) ಮತ್ತು ಅಣ್ಣನವರನ್ನು ಗೌರವಪೂರ್ವಕ ಮಾತನಾಡಿಸಿಕೊಂಡು ಹೋಗುತ್ತಿದ್ದುದು ಅವರ ಸಂಪ್ರದಾಯವಾಗಿದ್ದಿತು. ಪ್ರಸಾದರು ಅಂಗಡಿಗೆ ಬಂದರೆಂದರೆ ಈರ್ವರಿಗೂ ಖುಷಿ. ಯಾವುದೇ ತಾರತಮ್ಯವಿಲ್ಲದೆ, ಎಲ್ಲರೊಡನೆ ಪ್ರೀತಿಪೂರ್ವಕ ಬೆರೆತು, ನಮ್ಮ ಸರಳ ಆತಿಥ್ಯವನ್ನು ಸ್ವೀಕರಿಸಿ, ನಾನು ಕೈಗೊಂಡಿದ್ದ ಚಿತ್ರದುರ್ಗ ಕುರಿತ ಸಂಶೋಧನೆಯ ಮಹತ್ವವನ್ನು ನನ್ನ ತಂದೆಯವರಿಗೆ ಬಾರಿಬಾರಿಗೆ ಮನದಟ್ಟು ಮಾಡಿಸಿ ತೆರಳುತ್ತಿದ್ದುದು ಪ್ರಸಾದ್ ಅವರ ವಾಡಿಕೆ. ಅಧ್ಯಾಪಕನಾಗುವುದರ ಬದಲು ನಾನು ಸಂಶೋಧನ ವಿದ್ಯಾರ್ಥಿಯಾಗಿ ಮುಂದುವರೆದಿದ್ದರ ಬಗೆಗೆ ನನ್ನ ತಂದೆಯವರಲ್ಲಿದ್ದ ಅಸಮಾಧಾನವನ್ನು ಸೂಕ್ಷ್ಮವಾಗಿ ನಿವಾರಿಸಿ, ಪರೋಕ್ಷವಾಗಿ ನನ್ನ ಬೆಂಬಲಕ್ಕೆ ನಿಲ್ಲುತ್ತಿದ್ದುದನ್ನು ನಾನು ಗಮನಿಸುತ್ತಿದ್ದೆ. ಈ ಹಿನ್ನೆಲೆಯಲ್ಲಿ, ನನ್ನ ಕುಟುಂಬದವರು ನನ್ನನ್ನು ಹೆಮ್ಮೆಯಿಂದ, ಗೌರವದಿಂದ ಕಾಣುವಂತೆ ಮಾಡಿದುದರಲ್ಲಿ ಪ್ರಸಾದ್ ಅವರು ನಿರ್ವಹಿಸಿದ ಪಾತ್ರ ಪರಿಣಾಮಕಾರಿಯಾದುದು. ಆಗಿನ ಸನ್ನಿವೇಶದಲ್ಲಿ ಪ್ರಸಾದ್ ಅವರಂಥವರು ನೀಡುತ್ತಿದ್ದ ನೈತಿಕ ಸ್ಥೈರ್ಯ ಇಂದಿಗೂ ನನಗೆ ದೊಡ್ಡದಾಗಿ ಕಾಣುತ್ತದೆ.

ನಾನು ಮೈಸೂರಿನಲ್ಲಿದ್ದ ಹತ್ತುವರ್ಷಗಳ ಅವಧಿಯಲ್ಲಿ ಪ್ರಸಾದ್ ಅವರನ್ನು ಹಲವಾರು ಬಾರಿ ಭೇಟಿ ಮಾಡಿದ್ದೆ. ಅವರು ಯಾರುಯಾರಲ್ಲಿಗೆ ಅತಿಥಿಯಾಗಿ ಬರುತ್ತಿದ್ದರೊ ಅಲ್ಲಿ ಅವರೊಡನೆ ನಾನೂ ಹಾಜರಿರಬೇಕಾಗಿತ್ತು. ಅವರಿಗೆ ದೊರೆಯುತ್ತಿದ್ದ ಆತಿಥ್ಯದಲ್ಲಿ ನನಗೂ ಪಾಲು ದಕ್ಕುತ್ತಿತ್ತು! ನಾನು ಬೆಂಗಳೂರಿಗೆ ತೆರಳಿದ ನಂತರವೂ ಇದು ಮುಂದುವರೆಯಿತು. ಮೊದಲಿಗೆ ಕನ್ನಡ ಸಾಹಿತ್ಯ ಪರಿಷತ್ತು, ಆ ನಂತರ ನಾನು ಪ್ರವೇಶಿಸಿದ ಕರ್ನಾಟಕ ಗೆಜೆಟಿಯರ್ ಇಲಾಖೆಗಳಲ್ಲಿ ಕೆಲಸ ಮಾಡುವಾಗಲೂ ಅವರು ಆಗಾಗ್ಗೆ ನನ್ನಲ್ಲಿಗೆ ಬಂದು ಚರ್ಚಿಸುತ್ತಿದ್ದರು. ೧೯೮೦-೮೪ರಲ್ಲಿ ಅವರು ವಿಧಾನಸೌಧದಲ್ಲಿ ಕಾನೂನು ಇಲಾಖೆಯ ಅಧೀನ ಕಾರ್ಯದರ್ಶಿಯಾಗಿ ಸೇವೆಸಲ್ಲಿಸುತ್ತಿದ್ದಾಗ ಆಗಾಗ ಅವರಲ್ಲಿಗೆ ಹೋಗಿ ಭೇಟಿ ಮಾಡುತ್ತಿದ್ದುದುಂಟು. ಎಂದಿನಂತೆ ಸಂಶೋಧನೆ, ಬರವಣಿಗೆ ಮತ್ತಿತರ ಶೈಕ್ಷಣಿಕ ವಿಚಾರಗಳನ್ನು ಕುರಿತು ಚರ್ಚಿಸುತ್ತಿದ್ದೆವು.

ತಮ್ಮ ಪಾರದರ್ಶಕ, ಸೌಜನ್ಯಪೂರ್ವಕ ಹಾಗೂ ಶಿಸ್ತುಬದ್ಧ ನಡವಳಿಕೆಯಿಂದ ವೃತ್ತಿಯಲ್ಲೂ ಸಾರ್ವಜನಿಕ ಜೀವನದಲ್ಲೂ ಎಲ್ಲರ ಪ್ರೀತಿ-ಗೌರವಗಳಿಗೆ ಪಾತ್ರರಾದವರು ಪ್ರಸಾದ್. ನನಗೆ ಅವರ ಪರಿಚಯವಾದಂದಿನಿಂದ ಅವರೊಡನೆ ಎಷ್ಟೋ ಸಭೆ-ಸಮಾರಂಭ-ಸತ್ಕಾರಕೂಟಗಳಲ್ಲಿ ಭಾಗವಹಿಸಿದ್ದೇನೆ; ಅವರ ವಿಚಾರಧಾರೆಯನ್ನು ಗಮನಿಸಿದ್ದೇನೆ. ಎಲ್ಲೆಡೆಯಲ್ಲೂ ತೂಕತಪ್ಪದ ಮಾತು ಮತ್ತು ನಡವಳಿಕೆ ಅವರದು. ಆದ್ದರಿಂದಲೇ ಅವರದು ಆದರಣೀಯ ವ್ಯಕ್ತಿತ್ವ. ಅವರು ಇರುವೆಡೆಯಲ್ಲಿ ಸ್ನೇಹ-ಔದಾರ್ಯ-ಸಾತ್ವಿಕತೆಗಳ ದರ್ಶನವಾಗುತ್ತದೆ. ಅವರು ಇತರರಿಗೆ ತಮ್ಮ ಸಹಾಯಹಸ್ತ ಚಾಚಲು ಯಾವಾಗಲೂ ಸಿದ್ಧರಿರುತ್ತಾರೆ. ಅದನ್ನು 'ಪಡೆದುಕೊಳ್ಳುವ ಭಾಗ್ಯ'

ಬೇರೆಯವರಲ್ಲಿರಬೇಕಷ್ಟೆ. ಗುಣಗ್ರಾಹಿಗಳಾದ ಪ್ರಸಾದ್, ವ್ಯಕ್ತಿಗಳನ್ನು ತಕ್ಷಣವೇ ಗುರುತಿಸುವಂಥಾ ಸೂಕ್ಷ್ಮಮತಿ. ಗುಣಕ್ಕೆ ಮತ್ಸರ ಪಡುವವರಲ್ಲ. ಯೋಗ್ಯರನ್ನು ಸದಾ ಪ್ರೋತ್ಸಾಹಿಸುವ, ಪ್ರಶಂಸಿಸುವ ಔದಾರ್ಯ ಅವರದು.

ಪ್ರತಿಭಾವಂತರ ಬಗೆಗೆ ಯಾವಾಗಲೂ ಕುತೂಹಲಪಡುವ ಸ್ವಭಾವದವರು ಪ್ರಸಾದ್. ಸಾಹಿತಿ-ಕಲಾವಿದರ ಬಗೆಗೆ ಅವರಿಗೆ ಅಪಾರ ಅಭಿಮಾನ. ಉತ್ತಮ ವಾಕ್ಪಟುಗಳನ್ನು ಕಂಡು ಸಂತೋಷಿಸುವುದುಂಟು. ಯೋಗ್ಯರನ್ನು ಮೇಲಿಂದ ಮೇಲೆ ಹೊಗಳುವ, ಅವರ ಬಗೆಗಿನ ತಮ್ಮ ಪ್ರೀತಿ-ಅಭಿಮಾನಗಳನ್ನು ಇತರರಲ್ಲಿಯೂ ಹಂಚಿಕೊಳ್ಳುವ ಸಹೃದಯತೆ ಅವರಲ್ಲಿದೆ. ಹಾಸ್ಯಸಾಹಿತ್ಯದ ಬಗೆಗೆ ಅವರಲ್ಲಿ ಒಲವಿದೆ. ತಾವೂ ಕೆಲವೊಮ್ಮೆ 'ಜೋಕ್'ಗಳನ್ನು ಸಿಡಿಸಿ ಗೆಳೆಯರನ್ನು ನಗಿಸಲೆತ್ನಿಸುತ್ತಾರೆ! ಆದರೆ ಅವರ ಈ ಮುಗ್ಧತೆ-ಕುತೂಹಲ-ಸೌಜನ್ಯಗಳನ್ನು ಅವರ ಮಿತಿಯೆಂದು ತಿಳಿಯುವವರಿದ್ದಾರೆ. ಅಂಥವರು ಪ್ರಸಾದ್ ಅವರನ್ನು ಒಂದುಸಾರಿ ಭೇಟಿ ಮಾಡಿದ ನಂತರ ಮುಂದೆ ಎಚ್ಚರ ವಹಿಸುವುದುಂಟು. ಯಾರನ್ನೂ ನೋಯಿಸದ ಪ್ರೀತಿಪೂರ್ವಕ ವರ್ತನೆ ಅವರದಾದರೂ ಸಂದರ್ಭ ಒದಗಿದಾಗ ಅವರಿಂದ ಕಟುಮಾತು ಹೊರಬೀಳುವ ಸಾಧ್ಯತೆಯೂ ಇಲ್ಲದಿಲ್ಲ. ಹೂ-ಮುಳ್ಳಿನಂತೆ ಮೃದುವಾಗಿ ಚುಚ್ಚುವ ಅವರ ವ್ಯಂಗ್ಯೋಕ್ತಿಗೆ ಗುರಿಯಾದವರಿಗೇ ಗೊತ್ತು ಅದರ ಸವಿ! ನಾನು ಗ್ರಹಿಸಿದಂತೆ, ಪ್ರಸಾದ್ ಅವರು ರೇಷ್ಮೆಯಷ್ಟು ಮೃದು; ವಜ್ರದಷ್ಟು ಕಠಿಣ!

* * *

ಜಿ.ಹೆಚ್.ಪ್ರಸಾದ್ ಅವರ ಸ್ನೇಹಿತರು, ಸಹೋದ್ಯೋಗಿಗಳು, ಸಮಕಾಲೀನರು, ಕುಟುಂಬದ ಸದಸ್ಯರು ಅವರ ಅತಿಥಿಸತ್ಕಾರದ ಪರಿಯನ್ನು ವಿವಿಧ ರೀತಿಯಲ್ಲಿ ವಿವರಿಸಿದ್ದಾರೆ. ಬಂಧು-ಮಿತ್ರರಿಗೆ ಅವರ ಆತಿಥ್ಯ ಪ್ರಿಯವೆನಿಸಬಹುದಾದರೂ ಅವರ ನೇರ-ಸರಳ ವ್ಯಕ್ತಿತ್ವವನ್ನು ಅರಿಯಲಾರದ ಕೆಲವರಾದರೂ ಅದರಿಂದ ಸಂಕೋಚಪಟ್ಟು ಕೊಳ್ಳುವುದುಂಟು. ಅಂಥಾ ಉದಾಹರಣೆಗಳಿಗೇನೂ ಕೊರತೆಯಿಲ್ಲ. ಪ್ರಸಾದ್ ಅವರ ನಿಕಟ ಪರಿಚಯವಾದ ನಂತರವೂ ನಾನು ಸಹಾ ಇಂಥಾ ಪ್ರಸಂಗವನ್ನು ಎದುರಿಸಿದ್ದೇನೆ.

ಪ್ರಸಾದ್ ಅವರು ಮೈಸೂರಿನಲ್ಲಿ ನ್ಯಾಯಾಧೀಶರಾಗಿದ್ದಾಗ ಒಮ್ಮೆ ನನ್ನನ್ನು ತಮ್ಮ ಮನೆಗೆ ಊಟಕ್ಕೆ ಆಹ್ವಾನಿಸಿದ್ದರು. ಆಗ ಅವರು ನೆಲೆಸಿದ್ದುದು ಸರಸ್ವತಿಪುರಂನ ಮುಖ್ಯರಸ್ತೆಯಲ್ಲಿ. ಅವರು ಅತಿಥಿಗಳನ್ನು ಸತ್ಕರಿಸುವ ಸ್ವಭಾವದ ಪರಿಚಯವಾದುದು ಆಗಲೇ. ಆತಿಥ್ಯ ನೀಡುವಲ್ಲಿ ಪ್ರಸಾದ್ ಮತ್ತು ಅವರ ಕುಟುಂಬವರ್ಗದವರ ಕಾಳಜಿಯನ್ನು ಕಂಡು ನಾನು ಸಂಕೋಚದಿಂದ ಮುದುಡಿಹೋದೆ. ಸಾತ್ವಿಕ ಹಾಗೂ ರುಚಿಕರ ಊಟವಾದ ಮೇಲೆ ಸಾಕಷ್ಟು ಹಣ್ಣುಗಳ ಸಮಾರಾಧನೆ ಆಯಿತು. ನಾನು ಅಲ್ಲಿಂದ ಹೊರಟು ನಿಂತಾಗ ರಾತ್ರಿ ೯ರ ಸಮಯ. ಆಗಿನ್ನು ಬೀದಿಯಲ್ಲಿ ಸರಿಯಾದ ದೀಪದ ವ್ಯವಸ್ಥೆಯಿರಲಿಲ್ಲ. ಪ್ರಸಾದ್ ಅವರು ಕೈಯಲ್ಲೊಂದು ಟಾರ್ಚ್ ಹಿಡಿದು ಅದೇ ಬೀದಿಯ ಕೊನೆಯಲ್ಲಿದ್ದ ಅಗ್ನಿಶಾಮಕದಳದ ಠಾಣೆಯವರೆಗೆ ಬೀಳ್ಕೊಡಲು ಜತೆಯಲ್ಲಿ

ಬಂದರು. ನ್ಯಾಯಾಧೀಶರಾದವರು ಕತ್ತಲಲ್ಲಿ ಒಬ್ಬರೇ ಅಡ್ಡಾಡುವುದು ತರವಲ್ಲವೆಂದು ವಿನಂತಿಸಿಕೊಂಡರೂ ಅದಕ್ಕೆ ಅವರು ಕಿವಿಗೊಡಲಿಲ್ಲ. ಕತ್ತಲಲ್ಲೆ ಜತೆಗೆ ಬಂದು ನನ್ನನ್ನು ಬೀಳ್ಕೊಟ್ಟು ಹಿಂದಿರುಗಿದರು.

ಪ್ರಸಾದ್ ಅವರ ಆತಿಥ್ಯದ ಸಂಬಂಧದಲ್ಲಿ ಉಲ್ಲೇಖಿಸಲರ್ಹವಾದ ಒಂದು ವಿಶಿಷ್ಟ ಪ್ರಸಂಗವೆಂದರೆ 'ಕೋಚೆ' ಅವರದು. ಆಗ ಪ್ರಸಾದ್ ಅವರು ಬಾದಾಮಿಯಲ್ಲಿ ಮುನ್ಸಿಫ್ ಮ್ಯಾಜಿಸ್ಟ್ರೇಟ್ ಆಗಿ ಸೇವೆ ಸಲ್ಲಿಸುತ್ತಿದ್ದರು. ಹಿರಿಯ ತಲೆಮಾರಿನ ಲೇಖಕರೂ ಪ್ರಸಿದ್ಧ ನ್ಯಾಯಾಧೀಶರೂ ಆಗಿದ್ದ ಕೋ.ಚೆನ್ನಬಸಪ್ಪ (ಕೋಚೆ) ಅವರು, ತಮ್ಮ ಅನುಭವ ಕಥನವಾದ 'ನ್ಯಾಯಾಧೀಶನ ನೆನಪುಗಳು' (೧೯೮೬: ಮೈಸೂರು) ಕೃತಿಯಲ್ಲಿ, ಪ್ರಸಾದ್ ಅವರ ಆತಿಥ್ಯದ ವೈಖರಿಯನ್ನು ಕುರಿತು ಈ ಕೆಳಗಿನಂತೆ ಸ್ವಾರಸ್ಯಕರವಾಗಿ ನಿರೂಪಿಸಿದ್ದಾರೆ:

> ...ಐಹೊಳೆ, ಪಟ್ಟದಕಲ್ಲು, ಮಹಾಕೂಟ, ಬನಶಂಕರಿ ನೋಡಿಕೊಂಡು ರಾತ್ರಿ ಬಾದಾಮಿಗೆ ಬಂದೆವು. ಮರುದಿನ ಆ ನ್ಯಾಯಾಲಯದ ತನಿಖೆ ಎಂದು ಗೊತ್ತಾಗಿದ್ದರಿಂದ ಅಲ್ಲಿದ್ದ ಮುನ್ಸೀಫ್ ಮ್ಯಾಜಿಸ್ಟ್ರೇಟ್ ನಮಗೆ ಪ್ರವಾಸಿಮಂದಿರದಲ್ಲಿ ತಕ್ಕ ಏರ್ಪಾಟು ಮಾಡಿದ್ದರು. ಆಗ ಮಾವಿನಹಣ್ಣಿನ ಕಾಲ. ದ್ರಾಕ್ಷಿಯೂ ಚೆನ್ನಾಗಿ ಬಿಡುತ್ತಿದ್ದ ಒಳ್ಳೆ ಸುಗ್ಗಿ. ನಾನು ಇಳಿದುಕೊಳ್ಳಬೇಕಾಗಿದ್ದ ಪ್ರವಾಸಿಮಂದಿರದ ಕೊಠಡಿಯ ಮೇಜಿನ ಮೇಲೆ ಒಂದು ತಟ್ಟೆಯ ತುಂಬ ಡಜನ್ ಬಾದಾಮಿ ಮಾವಿನಹಣ್ಣು, ದ್ರಾಕ್ಷಿ, ಬಾಳೆಹಣ್ಣು ಇಟ್ಟಿದ್ದರು. ನನ್ನ ಇಬ್ಬರು ಮಕ್ಕಳೂ ನನ್ನೊಡನೆ ಇದ್ದರು. ಮರುದಿನ ತನಿಖೆ ಮುಗಿಸಿಕೊಂಡು ಆ ರಾತ್ರಿ ತಂಗಿದ್ದು, ಅದರ ಮಾರನೇ ದಿನ ಬೆಳಿಗ್ಗೆ ಮ್ಯಾಜಿಸ್ಟ್ರೇಟರ ಮನೆಯಲ್ಲಿ ತಿಂಡಿ ತಿಂದು ಪ್ರವಾಸಿಮಂದಿರಕ್ಕೆ ಬಂದು ಅಲ್ಲಿಂದ ಹೊರಡಲು ಸಿದ್ಧರಾದೆವು. ಸಾಮಾನುಗಳನ್ನೆಲ್ಲ ಕಾರಿನಲ್ಲಿಟ್ಟು, ನಮ್ಮ ಮಡದಿ-ಮಕ್ಕಳು ಕಾರಿನಲ್ಲಿ ಕುಳಿತುಕೊಳ್ಳಲು ಹೊರಗೆ ಹೋದಮೇಲೆ ನಾನೊಬ್ಬನೇ ಹೊರಟು ನಿಂತಿದ್ದಾಗ ಮುನ್ಸೀಫ್-ಮ್ಯಾಜಿಸ್ಟ್ರೇಟ್ ಕೊಠಡಿಯ ಒಳಗೆ ಬಂದರು. ಮೇಜಿನ ಮೇಲೆ ಇಟ್ಟಿದ್ದ ಹಣ್ಣುಗಳೆಲ್ಲ ಹೇಗೆ ಇಟ್ಟಿದ್ದರೊ ಹಾಗೆಯೇ ಇದ್ದವು. ಅದನ್ನು ನೋಡಿ :
>
> "ಏನು ಸಾರ್, ಹಣ್ಣು ಹಾಗೇ ಇದೆ. ಒಂದಾದರೂ ತಿಂದಿಲ್ಲ" ಎಂದು ಸ್ವಲ್ಪ ವ್ಯಥೆಯಿಂದಲೇ ನುಡಿದರು.
>
> "ಊಟ ತುಂಬಾ ಚೆನ್ನಾಗಿತ್ತು. ಹಣ್ಣನ್ನು ತಿನ್ನುವ ಅಗತ್ಯವೇ ಬೀಳಲಿಲ್ಲ. ತುಂಬ ಚೆನ್ನಾಗಿ ಅಡುಗೆ ಮಾಡಿದ್ದರು."
>
> ಆ ಮುನ್ಸೀಫ್-ಮ್ಯಾಜಿಸ್ಟ್ರೇಟ್‌ರು ದಾವಣಗೆರೆಯವರು, ನಮ್ಮ ಸ್ವಗ್ರಾಮಕ್ಕೆ ಹತ್ತಿರದವರು. ತಮ್ಮ ಸಹಜ ದಾವಣಗೆರೆ ಅಚ್ಚಕನ್ನಡದಲ್ಲಿ,
>
> "ಹಂಗಾರೆ ಅಣ್ಣು ಚೆಂದಕ್ಕಿಟ್ಟಂಗಾತು" ಎಂದರು.
>
> ನಾನು ಆ ಅಚ್ಚಕನ್ನಡದ ಗ್ರಾಮ್ಯಮಾತು ಕೇಳಿ ಖುಷಿಯಾಗಿ, "ಹಣ್ಣಿಗಿಂತ ನಿಮ್ಮ ಮಾತು ಚೆಂದ" ಅಂದೆ.
>
> ಅವರು ಈ ಮಾತಿನ ಇಂಗಿತ ಕೂಡಲೇ ತಿಳಿಯದೆ ಮುಖ ಸಣ್ಣದು ಮಾಡಿ ಕೊಂಡರು. ನನಗೆ ಅವರ ಬಗ್ಗೆ ಅಭಿಮಾನ. ಅಲ್ಪಸಂಖ್ಯಾತರ ಹಿಂದುಳಿದವರ್ಗಕ್ಕೆ

ಸೇರಿದ ಅವರು ನನ್ನ ನಿರೀಕ್ಷೆಗಿಂತ ಹೆಚ್ಚು ಶ್ರಮಪಟ್ಟು, ಸಮರ್ಥರಾಗಿ ಕೆಲಸ ಮಾಡುತ್ತಿದ್ದರು. ಅವರಿಗೆ ನೋವಾಗದಿರಲೆಂದು,

"ನಿಮ್ಮ ಮನೆಯಲ್ಲಿ ತಿಂಡಿ ತಿಂದದ್ದು ತುಂಬ ಚೆನ್ನಾಗಿತ್ತು. ಅಷ್ಟು ಸಾಕಲ್ಲವೆ? ಇದೆಲ್ಲ ಮುಟ್ಟಲೂ ಬೇಕಾಗಲಿಲ್ಲ" ಎಂದು ಸಮಾಧಾನಪಡಿಸಬೇಕಾಯಿತು(ಪು.೩೬೭).

* * *

ನಾನು ಕಂಡಂತೆ, ಪ್ರಸಾದ್ ಅವರು ತಮ್ಮ ಪ್ರವಾಸದಲ್ಲಿ, ಟ್ಯಾಕ್ಸಿ ಚಾಲಕನಿಂದ ಹಿಡಿದು ತಾವು ಭೇಟಿಯಾಗಲಿರುವ ಉನ್ನತ ವ್ಯಕ್ತಿಗಳವರೆಗೆ ಎಲ್ಲರೊಡನೆ ಸಮಾನವಾಗಿ ವ್ಯವಹರಿಸುವುದು ಅವರು ಬೆಳೆಸಿಕೊಂಡಿರುವ ಸತ್ಸಂಪ್ರದಾಯ. ಅವರೊಡನಿರುವಾಗ ಉತ್ತಮ ಊಟೋಪಚಾರದೊಡನೆ ಹಣ್ಣು-ಹಂಪಲು, ಸಿಹಿತಿಂಡಿಗಳ ಸಮಾರಾಧನೆ ಇದ್ದದ್ದೆ. ತಮ್ಮ ಕಾರಿನ ಚಾಲಕರು ಮಾತ್ರವಲ್ಲದೆ, ಅವರ ಕುಟುಂಬವರ್ಗದವರಿಗೂ ಇಷ್ಟವಾಗುವಂಥಾ ಏನಾದರೂ ವಸ್ತುವನ್ನು, ಕಡೆಗೆ ಸಿಹಿತಿಂಡಿಗಳ ಪೊಟ್ಟಣವನ್ನಾದರೂ ಕಳುಹಿಸಿಕೊಡುವುದು ಅವರಲ್ಲಿರುವ ಇನ್ನೊಂದು ಉದಾರಗುಣ. ನಾನು ಚಿತ್ರದುರ್ಗದಲ್ಲಿ ಭೇಟಿಯಾದಾಗಲೆಲ್ಲ, ಪ್ರಸಾದರು ನಮ್ಮ ಮನೆಗೆ ಬಂದು ಸ್ವಲ್ಪಹೊತ್ತು ಸಂವಾದ ನಡೆಸಿ ಹೋಗುವುದು ಅವರ ಸೌಜನ್ಯಕ್ಕೆ ಹಿಡಿದ ಕನ್ನಡಿ. ಕೆಲವೊಮ್ಮೆ ಅವರೇ ನನ್ನನ್ನು ತಾವಿರುವಲ್ಲಿಗೆ ಆಹ್ವಾನಿಸಿ, ಸಂಗಡ ಕರೆದೊಯ್ದು ಉತ್ತಮ ಹೋಟೆಲಿನಲ್ಲಿ ರುಚಿಕರ ತಿಂಡಿ-ತಿನಿಸು ಕೊಡಿಸಿ ಸಂತೋಷಿಸುವುದು ಮೊದಲಿನಿಂದಲೂ ನಡೆದುಬಂದಂಥಾದ್ದು. ಒಮ್ಮೊಮ್ಮೆ ನನ್ನೊಡನೆ ನನ್ನ ಸಹೋದರರ ಪುಟಾಣಿಗಳನ್ನೂ ತಮ್ಮ ಜತೆಯಲ್ಲಿ ಕರೆದೊಯ್ದು ತಿಂಡಿ ಕೊಡಿಸಿ ಸಮಾಧಾನ ಪಟ್ಟುಕೊಂಡುದುಂಟು.

ಅಲ್ಲದೆ, ಚಿತ್ರದುರ್ಗವಾಗಿರಲಿ ಅಥವಾ ಘಟ್ಟಿಹೊಸಹಳ್ಳಿಯಾಗಿರಲಿ, ತಮ್ಮ ಸ್ವಂತ ಬಂಧುಗಳ ಮನೆಗಳಲ್ಲಿ ಯಾವುದೇ ಶುಭಕಾರ್ಯ ನಡೆದರೂ ಪ್ರಸಾದ್ ಅವರು ನನ್ನನ್ನೂ ತಪ್ಪದೆ ಆಹ್ವಾನಿಸುವುದುಂಟು. ತಮ್ಮ ಬಂಧುವರ್ಗದವರ ಮಧ್ಯೆ ಕೂರಿಸಿ ಸಹಪಂಕ್ತಿ ಭೋಜನದ ಗೌರವ ಕಲ್ಪಿಸುವುದೊಂದು ನಾನು ಮರೆಯಲಾಗದ ಸಂಗತಿ. ಪ್ರಸಾದ್ ಅವರಂತೆಯೇ ಅವರ ಬಂಧುಗಳು ಸಹಾ ನನ್ನೊಡನೆ ಆತ್ಮೀಯತೆಯಿಂದ ನಡೆದುಕೊಳ್ಳು ವುದನ್ನು ಕಂಡಾಗಲೆಲ್ಲ ಇವರೆಲ್ಲರ ದೊಡ್ಡತನಕ್ಕೆ ತಲೆಬಾಗಿಸುತ್ತೇನೆ. ರಾಜಕೀಯಕ್ಷೇತ್ರದಲ್ಲಿ ಬೆಳೆದಿರುವ ಸಿ.ಎಂ.ಅಶೋಕ್, ಶಿಕ್ಷಣಕ್ಷೇತ್ರದಲ್ಲಿ ಹೆಸರು ಮಾಡಿರುವ ಪ್ರೊ.ಸಿ.ಎಂ. ವಿವೇಕಾನಂದ -ಇಂಥವರು ಹಾಗೂ ಇವರ ಸಹೋದರ ವರ್ಗದವರು ತಮ್ಮ ಸ್ವಂತ ಬಂಧುವಿನಂತೆ ನನ್ನನ್ನು ಆದರಿಸುವುದೇ ನನಗೆ ದೊರೆತ ಗೌರವ. ಈ ಬಂಧುಗಳಲ್ಲಿ ಇಂಥಾ ಸಂಸ್ಕಾರವನ್ನು ಬೆಳೆಸಿದ ಸಮಾಜವಾದಿ ನೆಲೆಯ ಸಿ.ಮಲೆಸಿದ್ದಪ್ಪ ಅವರ ಉನ್ನತ ವ್ಯಕ್ತಿತ್ವಕ್ಕೆ, ಪ್ರಭಾವ ಬೀರಿದ ಪ್ರಸಾದ್ ಅವರ ಸೌಜನ್ಯಕ್ಕೆ ಪ್ರಣಾಮಗಳನ್ನು ಅರ್ಪಿಸ ದಿರಲಾರೆ.

ಪ್ರಸಾದ್ ಅವರು ಸ್ವಭಾವತಃ ಗಂಭೀರ ಪ್ರವೃತ್ತಿಯವರಾಗಿರುವಂತೆಯೇ ತಮಾಷೆ ಸ್ವಭಾವದವರೂ ಹೌದು. ಸದಾ ಹಸನ್ಮುಖಿ. ಅವರನ್ನು ಸಮೀಪಿಸಿದವರು ಯಾರಾದರೂ

ಆಗಿರಲಿ ಅವರು ಸಹಾ ಸದಾ ಹಸನ್ಮುಖಿರಾಗಿರುವಂತೆ ಮಾಡುವ ಕಲೆಗಾರಿಕೆ ಅವರಿಗೆ ಸಿದ್ಧಿಸಿದೆಯೆನ್ನಬಹುದು. ಸ್ನೇಹಿತರಕೂಟದಲ್ಲಿ ಅವರು ಪಡುವ ಸಂಭ್ರಮಕ್ಕೆ ಎಣೆಯೇ ಇಲ್ಲ. ಒಂದು ವಿಧದ ಸಂತೃಪ್ತಭಾವ ಇಣುಕುತ್ತಿರುತ್ತದೆ ಅವರಲ್ಲಿ! ಅವರಲ್ಲಿರುವ ಜೀವನೋತ್ಸಾಹವು ಇತರರಿಗೂ ಸ್ಫೂರ್ತಿ ನೀಡುವಂಥಾದ್ದೆಂದರೆ ಉತ್ಪ್ರೇಕ್ಷೆಯಲ್ಲ. ಮುಕ್ತ ಮನಸ್ಸಿನ ಪ್ರತೀಕ ಈ ಉತ್ಸಾಹ!

ಒಮ್ಮೆ ಪ್ರಸಾದ್ ಅವರಿಂದ ಒಂದುನೂರು ರೂಪಾಯಿಯನ್ನು ಬಹುಮಾನವಾಗಿ ಪಡೆದುಕೊಳ್ಳುವ ಸದಾವಕಾಶ ನನಗೆ ಒದಗಿತು. ಇದೊಂದು ಸಿಹಿ ನೆನಪು. ಅಂಥಾ ಸಂದರ್ಭ ಸೃಷ್ಟಿಯಾದುದು ಹೀಗೆ: ಚಿತ್ರದುರ್ಗ ನಗರದ ಅಭಿವೃದ್ಧಿಗೆ ಕಾರಣಕರ್ತರಾದ ಹಿಂದಿನ ಪುರಸಭಾಧ್ಯಕ್ಷ ಹಾಗೂ ಹೆಸರಾಂತ ಜನನಾಯಕ ದಿವಂಗತ ಎ.ಭೀಮಪ್ಪನಾಯಕ ಅವರ ಸ್ಮರಣೆಗೆ ಸಂಪುಟವೊಂದನ್ನು ಪ್ರಕಟಿಸಿ ಹೊರತರುವ ಸಂಬಂಧದಲ್ಲಿ, ಒಂದು ಮುಂಜಾನೆ ಗೆಳೆಯ ಹರ್ತಿಕೋಟೆ ವೀರೇಂದ್ರಸಿಂಹ ಅವರ ಚಿತ್ರದುರ್ಗದ ನಿವಾಸದಲ್ಲಿ ಸಭೆ ಸೇರಲಾಗಿತ್ತು. ಇದರಲ್ಲಿ ಭಾಗವಹಿಸಿದ್ದವರು ಪ್ರಸಾದ್, ಡಾ.ತೇಜಸ್ವಿ ಕಟ್ಟೀಮನಿ ಮತ್ತು ನಾನು. ಪ್ರಸಾದ್ ಈ ಸಂಪುಟ ಪ್ರಕಟಣ ಸಮಿತಿಯ ಅಧ್ಯಕ್ಷರು; ಡಾ. ಕಟ್ಟೀಮನಿ ಮತ್ತು ನಾನು ಸಂಚಾಲಕರು; ಹಾಗೂ ಹರ್ತಿಕೋಟೆ ವೀರೇಂದ್ರಸಿಂಹ ಅವರು ಸಂಪುಟದ ಸಂಪಾದಕರು. ಚರ್ಚೆಯ ಒಂದು ಹಂತದಲ್ಲಿ ಸಂಪುಟಕ್ಕೆ ಶೀರ್ಷಿಕೆ ಸೂಚಿಸುವ ಬಗೆಗೆ ಪ್ರಸ್ತಾಪವಾಯಿತು. ಪ್ರತಿಯೊಬ್ಬರೂ ಒಂದೊಂದು ಶೀರ್ಷಿಕೆಯನ್ನು ಸೂಚಿಸಿ ಅಂತಿಮವಾಗಿ ಸೂಕ್ತವಾದುದನ್ನು ಆಯ್ಕೆಮಾಡಲು ತೀರ್ಮಾನವಾಯಿತು. ನಾನು ಏನನ್ನೋ ಯೋಚಿಸಿ, "ಸಂಪುಟಕ್ಕೆ ಯಾರ ಶೀರ್ಷಿಕೆ ಆಯ್ಕೆಗೊಳ್ಳುತ್ತದೋ ಅವರಿಗೆ ಒಂದುನೂರು ರೂಪಾಯಿ ಬಹುಮಾನ ಕೊಟ್ಟರೆ ಚೆನ್ನಾಗಿರುತ್ತದೆ" ಎಂದೆ. ಎಲ್ಲರೂ ಉತ್ಸಾಹದಿಂದ ಈ ಸಲಹೆಯನ್ನು ಒಪ್ಪಿದರು. ನಾನು ಸೂಕ್ತವಾದ ಹಾಗೂ ಬಹುಮಾನ ಪಡೆದೇ ತೀರುವ ಶೀರ್ಷಿಕೆಯೊಂದನ್ನು ಮೊದಲೇ ಯೋಚಿಸಿಕೊಂಡಿದ್ದೆನಾದ್ದರಿಂದ ನಿರಾಳವಾಗಿದ್ದೆ. ಸಿಂಹ ಮತ್ತು ಡಾ.ಕಟ್ಟೀಮನಿ ಅವರು ಶೀರ್ಷಿಕೆಯನ್ನು ರೂಪಿಸಲು ಪ್ರಯತ್ನಿಸುತ್ತಿದ್ದರು. ಬಹುಮಾನ ತಮಗೇ ಬರುತ್ತದೆಂಬ ನಿರೀಕ್ಷೆ ಅವರದು! ಪ್ರಸಾದ್ ಅವರು ನಿರ್ಲಿಪ್ತರಾಗಿದ್ದು, ನಮ್ಮನ್ನು ಕಂಡು ಹುಸಿನಗೆ ಬೀರುತ್ತಿದ್ದರು. ಕೊನೆಗೆ ನಮ್ಮ ನಮ್ಮ ಶೀರ್ಷಿಕೆಗಳನ್ನು ಅವರ ಮುಂದೆ ಮಂಡಿಸಿದೆವು. ಮೂರು ಶೀರ್ಷಿಕೆಗಳನ್ನೂ ಪರಿಶೀಲಿಸಿ ಅವುಗಳ ಬಗೆಗೆ ಸಣ್ಣದಾಗಿ ಚರ್ಚಿಸಿದನಂತರ 'ದುರ್ಗಶಿಲ್ಪಿ'ಯೆಂಬ ನನ್ನ ಶೀರ್ಷಿಕೆಯನ್ನು ಆಯ್ಕೆ ಮಾಡಿದರು. ಒಪ್ಪಂದದಂತೆ, ಇಬ್ಬರು ಮಿತ್ರರ ಪರವಾಗಿ ಪ್ರಸಾದ್ ಅವರು ತಾವೇ ಒಂದುನೂರು ರೂಪಾಯಿಯ ನೋಟನ್ನು ಹೊರತೆಗೆದು ನನ್ನ ಕೈಯಲಿಟ್ಟರು. ನಾನು ಅದನ್ನು ಅಷ್ಟೇ ಪ್ರೀತಿಯಿಂದ ಪಡೆದು ಜೇಬಿಗಿಳಿಸಿ ಧನ್ಯನಾದೆ!

* * *

ಜಿ.ಹೆಚ್.ಪ್ರಸಾದ್ ಅವರ ಜೀವನ-ಸಾಧನೆ-ವಿಚಾರಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸುವ ಅಗತ್ಯವಿದೆ. ಪ್ರಸಾದ್ ಅವರು ಜನಿಸಿದುದು ದಾವಣಗೆರೆಯಲ್ಲಿ (೨೧ ಡಿಸೆಂಬರ್

೧೯೪೧), ರೈತ ಕುಟುಂಬದಲ್ಲಿ. ದಾವಣಗೆರೆ, ಮೈಸೂರು, ಬೆಳಗಾವಿಗಳಲ್ಲಿ ಶಿಕ್ಷಣ. ೧೯೬೭ರಲ್ಲಿ ರಾಜ್ಯ ಬಾರ್ ಕೌನ್ಸಿಲ್ ಪರೀಕ್ಷೆಯಲ್ಲಿ ಉನ್ನತದರ್ಜೆಯಲ್ಲಿ ತೇರ್ಗಡೆ. ಅದೇ ವರ್ಷ ದಾವಣಗೆರೆಯಲ್ಲಿ ವಕೀಲಿವೃತ್ತಿ ಆರಂಭ. ೧೯೭೨ · ಮುನ್ಸಿಫ್ ಪರೀಕ್ಷೆಯಲ್ಲಿ ತೇರ್ಗಡೆ. ೧೯೭೪ : ಮುನ್ಸಿಫ್ ಆಗಿ ನೇಮಕ. ದೇವದುರ್ಗ, ಪಾವಗಡ, ಹೊಸಪೇಟೆ, ಬಾದಾಮಿ ಮತ್ತು ತುಮಕೂರುಗಳಲ್ಲಿ ಮುನ್ಸಿಫ್ ಮ್ಯಾಜಿಸ್ಟ್ರೇಟ್ ಆಗಿ ಸೇವೆ. ೧೯೮೦-೮೪ : ಕಾನೂನು ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿ. ೧೯೮೪-೮೬ : ಹಾವೇರಿಯ ಮುನ್ಸಿಫ್ ಮ್ಯಾಜಿಸ್ಟ್ರೇಟ್. ೧೯೮೬ : ಸಿವಿಲ್ ಜಡ್ಜ್ ಆಗಿ ಬಡ್ತಿ. ೧೯೮೬-೮೯ : ಸಿವಿಲ್ ಜಡ್ಜ್ ಮತ್ತು ಸಿ.ಜೆ.ಎಂ. ಬಿಜಾಪುರ ಮತ್ತು ೧೯೮೯-೯೩ : ಮೈಸೂರು. ೧೯೯೩-೯೫ : ಕಾನೂನು ಇಲಾಖೆಯಲ್ಲಿ ಉಪಕಾರ್ಯದರ್ಶಿ. ೧೯೯೫ : ಜಿಲ್ಲಾ ನ್ಯಾಯಾಧೀಶರಾಗಿ ಬಡ್ತಿ. ೧೯೯೫-೯೭ : ಬೆಂಗಳೂರು ಸಿಟಿ ಸಿವಿಲ್ ಮತ್ತು ಸೆಷನ್ಸ್ ಜಡ್ಜ್. ೧೯೯೬-೯೭ : ಕರ್ನಾಟಕ ರಾಜ್ಯ ನ್ಯಾಯಾಂಗ ಅಧಿಕಾರಿಗಳ ಸಂಘದ ಉಪಾಧ್ಯಕ್ಷ. ೧೯೯೭-೯೯ : ಮಂಡ್ಯ ಜಿಲ್ಲಾ ಸೆಷನ್ಸ್ ಜಡ್ಜ್ . ೧೯೯೯-೨೦೦೧ : ಶಿವಮೊಗ್ಗದ ಜಿಲ್ಲಾ ಮತ್ತು ಸೆಷನ್ಸ್ ಜಡ್ಜ್.

ಶಿವಮೊಗ್ಗ ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಅಧ್ಯಕ್ಷರಾದ ಅವಧಿಯಲ್ಲಿ (೧೯೯೯-೨೦೦೧) ಅತಿ ಹೆಚ್ಚಿನ ವ್ಯಾಜ್ಯಗಳನ್ನು ಲೋಕ ಅದಾಲತ್ ಅಡಿಯಲ್ಲಿ ಇತ್ಯರ್ಥವಾಗುವಂತೆ ಮಾಡಿ ರಾಜ್ಯದಲ್ಲಿಯೇ ಶಿವಮೊಗ್ಗ ಜಿಲ್ಲೆಗೆ ಎರಡು ಸಾರಿ ಪ್ರಥಮ ಸ್ಥಾನ ದೊರಕಿಸಿಕೊಟ್ಟುದು ಪ್ರಸಾದ್ ಅವರ ಸಾಧನೆ. ಸಂಘಟನಾ ಚತುರರಾದ ಪ್ರಸಾದ್, ಸಾರ್ವಜನಿಕ ಸೇವಾಕ್ಷೇತ್ರಗಳಲ್ಲೂ ನಾನಾ ತೆರನಾಗಿ ಸೇವೆ ಸಲ್ಲಿಸಿದಂಥವರು. ಹಲವಾರು ಸಾಹಿತ್ಯಿಕ-ಸಂಶೋಧನ-ಸಾಂಸ್ಕೃತಿಕ ಚಟುವಟಿಕೆಗಳಿಗೆ ಇವರ ನೆರವು ಸಂದಿದೆ. ಜನೋಪಕಾರಿ ಕಾರ್ಯಗಳಲ್ಲಿ ಸದಾ ಆಸಕ್ತರಾದವರು ಪ್ರಸಾದ್.

ನ್ಯಾಯಾಧೀಶರಾಗಿ, ಸಾರ್ವಜನಿಕ ಕ್ಷೇತ್ರದಲ್ಲಿ ಕ್ರಿಯಾಶೀಲರಾಗಿ, ಸಮಾಜದ ಎಲ್ಲ ವರ್ಗಗಳನ್ನು ಸನಿಹದಿಂದ ಬಲ್ಲವರಾಗಿ ಹಾಗೂ ಮುಖ್ಯವಾಗಿ, ಕೆಳಸ್ತರದಿಂದ ಮೇಲಕ್ಕೆ ಏರಿದವರಾಗಿ ಪ್ರಸಾದ್ ಅವರು ಕಾನೂನು ಮತ್ತು ರಕ್ಷಣಾ ವ್ಯವಸ್ಥೆಗಳನ್ನು ವಿಶ್ಲೇಷಿಸ ಬಲ್ಲವರಾಗಿದ್ದರು. ಜನಸಾಮಾನ್ಯರು ಸರ್ಕಾರದ ಸೌಲಭ್ಯಗಳನ್ನು ಸದುಪಯೋಗ ಮಾಡಿಕೊಳ್ಳಬೇಕೆಂಬ ಕಳಕಳಿ ಅವರಲ್ಲಿದ್ದಿತು. ದುರ್ಬಲವರ್ಗದವರ ಏಳಿಗೆಗಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಮ್ಮಿಕೊಂಡಿರುವ ಉಚಿತ ಕಾನೂನು ನೆರವು ಸೌಲಭ್ಯಗಳನ್ನು ಸಾರ್ವಜನಿಕರು ಸದುಪಯೋಗಪಡಿಸಿಕೊಳ್ಳುವಂತೆ ಒತ್ತಾಯಿಸುತ್ತಿದ್ದರು. ಅವರ ಪ್ರಕಾರ, ಉಚಿತ ಕಾನೂನು ನೆರವು ಸಲಹಾ ಸಮಿತಿಯನ್ನು ಸರ್ಕಾರ ರಚಿಸಿರುವುದರಿಂದ ಸಮಾಜದಲ್ಲಿನ ಅತಿದುರ್ಬಲ ವರ್ಗದವರಿಗೂ ಯಾವುದೇ ಶುಲ್ಕವಿಲ್ಲದೆ ನ್ಯಾಯ ದೊರಕಿಸಿಕೊಡಲು ಸಹಾಯಕವಾಗುತ್ತದೆ. ಇದರ ಪೂರ್ಣ ಪ್ರಯೋಜನ ಪಡೆಯುವುದಾದರೆ ಸಮಾಜದಲ್ಲಿ ಪರಸ್ಪರ ಸಹಕಾರಜೀವನ ನಡೆಸಲು ಸಹಾಯಕವಾಗುತ್ತದೆ. ಇತರ ನ್ಯಾಯಾಧೀಶರು ಭಾವಿಸುವಂತೆ, ಸಾರ್ವಜನಿಕರು ಚಿಕ್ಕಪುಟ್ಟ ವ್ಯಾಜ್ಯಗಳಿಗೂ

ನ್ಯಾಯಾಲಯಗಳ ಮೊರೆ ಹೋಗದೆ ರಾಜಿ ಮೂಲಕ ಅವುಗಳನ್ನು ಪರಿಹರಿಸಿಕೊಂಡಲ್ಲಿ ಕಕ್ಷಿದಾರರಿಬ್ಬರಿಗೂ ಆಗುವ ಸಮಯದ ಅಪವ್ಯಯ ಮತ್ತು ವೆಚ್ಚವನ್ನು ತಡೆಗಟ್ಟಬಹುದೆಂಬುದಕ್ಕೆ ಪ್ರಸಾದ್ ಅವರ ಸಮರ್ಥನೆ ಇರುತ್ತಿದ್ದಿತು.

ಜನಪ್ರತಿನಿಧಿಗಳೂ ಕಾನೂನಿನ ಅರಿವನ್ನು ಪಡೆದುಕೊಳ್ಳಬೇಕೆಂಬುದು ಪ್ರಸಾದ್ ಅವರ ಒತ್ತಾಸೆ. ಇದರಿಂದ ಸಮಾಜದ ಹಾಗೂ ದೇಶದ ಅಭಿವೃದ್ಧಿ ಸಾಧ್ಯ; ದೇಶದ ಅಭಿವೃದ್ಧಿಯ ಜವಾಬ್ದಾರಿ ಅಧಿಕಾರಿಗಳಿಗಿಂತ ಚುನಾಯಿತ ಪ್ರತಿನಿಧಿಗಳಿಗೇ ಹೆಚ್ಚು ಎಂಬುದು ಅವರ ಅಭಿಪ್ರಾಯ. ಜನರಲ್ಲಿ ಕಾನೂನಿನ ಅರಿವು ಸರಿಯಾಗಿ ಇಲ್ಲವಾದ್ದರಿಂದ, ಇಂದು ನ್ಯಾಯಾಲಯಗಳಲ್ಲಿ ಅಪರಾಧ ಪ್ರಕರಣಗಳು ಹೆಚ್ಚಾಗುತ್ತಿವೆ. ಈ ದೃಷ್ಟಿಯಿಂದ, ಪ್ರಾದೇಶಿಕಮಟ್ಟದಲ್ಲಿ ಅರಿವು ಮೂಡಿಸುವ ಕಾರ್ಯ ನಡೆಯಬೇಕಾಗಿದೆ. ಇದಕ್ಕೆ ಜನಪ್ರತಿನಿಧಿಗಳೂ ಕೈಜೋಡಿಸಬೇಕು. ಕಾನೂನಿನ ಅರಿವಿದ್ದು, ಅದನ್ನು ಸರಿಯಾಗಿ ಪಾಲಿಸುವುದರಿಂದ ನೆಮ್ಮದಿಯ ಬದುಕು ಸಾಧ್ಯ. ಮುಖ್ಯವಾಗಿ ಗ್ರಾಮೀಣರು ಇದನ್ನು ಅರ್ಥಮಾಡಿಕೊಳ್ಳಬೇಕು. ನಮ್ಮ ಸಂಸ್ಕೃತಿಯ ಉಳಿವಿಗೂ ಇಂಥಾ ಅರಿವು ಅಗತ್ಯ. ಇಂದು ನಗರ ಪ್ರದೇಶಗಳಲ್ಲಿ ನಮ್ಮ ಸಂಸ್ಕೃತಿ ನಾಶವಾಗುತ್ತಿದ್ದು, ಅದು ಹಳ್ಳಿಗಳಲ್ಲಿ ಇನ್ನೂ ಉಳಿದುಕೊಂಡಿದೆ. ಕಾನೂನಿನ ಅರಿವಿದ್ದರೆ ಸಂಸ್ಕೃತಿ ಉಳಿಸುವ ಕಾರ್ಯವೂ ಈಡೇರುತ್ತದೆಂಬುದು ಅವರ ವಿವರಣೆ.

ಕಾನೂನನ್ನು ಅರ್ಥಮಾಡಿಕೊಳ್ಳುವಲ್ಲಿ ನಮ್ಮ ಗ್ರಾಮೀಣ ಜನರೇಕೆ ಹಿಂದುಳಿದಿದ್ದಾರೆ? ಸಂಪೂರ್ಣ ಸಾಕ್ಷರತೆಯ ಅಭಾವವೇ ಇದಕ್ಕೆ ಕಾರಣವೆಂಬುದು ಪ್ರಸಾದ್ ಅವರ ವ್ಯಾಖ್ಯಾನ. ಅವರು ಪ್ರತಿಪಾದಿಸುವಂತೆ, ಶೋಷಿತವರ್ಗದವರು ಹಾಗೂ ಗ್ರಾಮೀಣ ಅನಕ್ಷರಸ್ಥರಲ್ಲಿ ಕಾನೂನಿನ ಅರಿವು ಮೂಡಿಸಬೇಕು. ಇದರಲ್ಲಿ ವಕೀಲರು ಮತ್ತು ಸಮಾಜಕಾರ್ಯಕರ್ತರ ಪಾತ್ರ ಬಹುಮುಖ್ಯವಾದುದು. ಇದರಿಂದ ನ್ಯಾಯಾಲಯಗಳಲ್ಲಿ ಹೆಚ್ಚುತ್ತಿರುವ ಕೆಲಸಗಳ ಸಂಖ್ಯೆ ಇಳಿಮುಖವಾಗಬಲ್ಲದು. ಕಾನೂನು ಅರಿಯಲು ವಯಸ್ಸು, ಲಿಂಗವರ್ಗಗಳ ತಾರತಮ್ಯ ಇರಬಾರದು. ಆಗ ಮಾತ್ರ ಕಾನೂನನ್ನು ಅರಿಯಲು ಸಾಧ್ಯ. ನಮ್ಮ ದೇಶದಲ್ಲಿ ಸಂಪತ್ತು ಅಧಿಕ ಪ್ರಮಾಣದಲ್ಲಿದ್ದರೂ ಇದರ ಸದ್ಬಳಕೆಯಾಗುತ್ತಿಲ್ಲ. ಇದರಿಂದ ದೇಶದ ಅಭಿವೃದ್ಧಿ ಕುಂಠಿತವಾಗಿದೆ. ಚುನಾಯಿತ ಪ್ರತಿನಿಧಿಗಳು ಕಾನೂನಿನ ಸಮರ್ಪಕ ಜ್ಞಾನ ಹೊಂದುವುದರಿಂದ ಜನರಿಗೆ ಸರಿಯಾದ ಮಾರ್ಗದರ್ಶನ ನೀಡಲು ಸಾಧ್ಯವಾಗುತ್ತದೆ; ದೇಶೋದ್ಧಾರವೂ ಆಗುತ್ತದೆ; ಆಡಳಿತದಲ್ಲಿ ಗೊಂದಲವುಂಟಾಗದೆ, ಅಭಿವೃದ್ಧಿ ಕಾರ್ಯ ಸುಸೂತ್ರವಾಗಿ ನಡೆಯುವಂತಾಗುತ್ತದೆ.

ಪ್ರಸಾದ್ ಅವರು ವಿವರಿಸುವಂತೆ, ಮಹಾತ್ಮಾ ಗಾಂಧೀಜಿಯ ಗ್ರಾಮಸ್ವರಾಜ್ಯ ಪರಿಕಲ್ಪನೆಯ ಹಾದಿಯಲ್ಲಿ ಸಾಗಲು ಆಡಳಿತ ವಿಕೇಂದ್ರೀಕರಣ ವ್ಯವಸ್ಥೆ ಜಾರಿಗೆ ಬಂದಿದೆ ಯೆಂಬುದನ್ನು ನಮ್ಮ ಜನಪ್ರತಿನಿಧಿಗಳು ಅರಿಯಬೇಕು. ಈ ವ್ಯವಸ್ಥೆ ಯಶಸ್ವಿ ಯಾಗಬೇಕಾದರೆ, ಸ್ಥಳೀಯ ಆಡಳಿತ ಕುರಿತ ಕಾನೂನುಗಳನ್ನು ಜನಪ್ರತಿನಿಧಿಗಳು ಚೆನ್ನಾಗಿ

ಪರಿಚಯ ಮಾಡಿಕೊಳ್ಳಬೇಕು. ಇದರಿಂದ ಅಧಿಕಾರವಿಕೇಂದ್ರೀಕರಣ ವ್ಯವಸ್ಥೆಯ ವಿವಿಧ ಹಂತದ ಚುನಾಯಿತ ಪ್ರತಿನಿಧಿಗಳು, ಅಧ್ಯಕ್ಷರು-ಉಪಾಧ್ಯಕ್ಷರು ಹಾಗೂ ಅಧಿಕಾರಿಗಳು ತಮ್ಮ ಕಾರ್ಯವ್ಯಾಪ್ತಿಯ ಚೌಕಟ್ಟಿನೊಳಗೆ ವ್ಯವಸ್ಥಿತವಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತದೆ. ಸ್ವಾತಂತ್ರ್ಯಾನಂತರದಲ್ಲಿ ಸಾಕ್ಷರತೆ ಸುಧಾರಣೆಯಾಗಿದ್ದರೂ ಜನರಲ್ಲಿ ತಮ್ಮ ಹಕ್ಕುಬಾಧ್ಯತೆಗಳ ರಕ್ಷಣೆಗಿರುವ ಸಾಮಾನ್ಯ ಕಾನೂನುಗಳ ಬಗೆಗೆ ಅರಿವಿಲ್ಲ. ಇಂಥಾ ಅರಿವುಳ್ಳವರು ಶೇಕಡ ೧೦ರಷ್ಟು ಜನರು ಮಾತ್ರ. ಹಿಂಸಾಚಾರ, ದೌರ್ಜನ್ಯ, ಮಹಿಳೆಯರ ಶೋಷಣೆ ಇತ್ಯಾದಿಗಳಿಗೆ ಬಡತನ ಮತ್ತು ಅನಕ್ಷರತೆಗಳು ಎಷ್ಟು ಕಾರಣವೊ, ಜನತೆಯಲ್ಲಿರುವ ಕಾನೂನಿನ ಅಜ್ಞಾನವೂ ಅಷ್ಟೇ ಕಾರಣ. ಈ ದೃಷ್ಟಿಯಿಂದಲೇ ಸರ್ಕಾರವು ೧೯೮೭ರಲ್ಲಿ ಕಾನೂನುಸೇವಾ ಪ್ರಾಧಿಕಾರವನ್ನು ರಚಿಸಿದುದು; ಹಾಗೆಯೇ, ೧೯೯೫ರಲ್ಲಿ ಕರ್ನಾಟಕರಾಜ್ಯ ಸೇವಾಕಾನೂನನ್ನು ಪ್ರಾರಂಭಿಸಿದುದು.

ಕಾನೂನು ಬಗೆಗೆ ಅಗತ್ಯ ತಿಳಿವಳಿಕೆಯಿಲ್ಲದಿರುವುದೇ ಜನಸಾಮಾನ್ಯರ ಸಮಸ್ಯೆಗಳು ಉಲ್ಬಣಗೊಳ್ಳಲು ಕಾರಣವೆಂದು ಬಗೆದವರು ಪ್ರಸಾದ್. ಅವರು ಮೇಲಿಂದ ಮೇಲೆ ಪ್ರಸ್ತಾಪಿಸುವ ವಿಚಾರವೆಂದರೆ, ದೇಶದಲ್ಲಿ ಕಾನೂನುಸಾಕ್ಷರ ಸ್ಥಿತಿ ಅಧೋಗತಿಯಲ್ಲಿದೆ. ದೇಶದ ವಿವಿಧೆಡೆ ಮತ್ತು ನಗರ ಪ್ರದೇಶದಲ್ಲಿ ಹಿಂಸೆ, ಅತ್ಯಾಚಾರ, ಮಕ್ಕಳ ಮತ್ತು ದುರ್ಬಲವರ್ಗದವರ ಶೋಷಣೆ ಒಂದೇ ಸಮನೆ ನಡೆಯುತ್ತಿದೆ. ಅನಕ್ಷರತೆ, ಬಡತನ ಮತ್ತು ಕಾನೂನಿನ ಅರಿವಿಲ್ಲದಿರುವಿಕೆಯೇ ಇದಕ್ಕೆ ಕಾರಣ. ಇಂಥಾ ವಿಚಾರಗಳಲ್ಲಿ ನ್ಯಾಯಾಂಗವು ತನ್ನ ಕರ್ತವ್ಯವನ್ನು ಸಮರ್ಥವಾಗಿ ನಿರ್ವಹಿಸಬೇಕಾಗುತ್ತದೆ. ಇಲ್ಲವಾದರೆ ಇದರಿಂದ ಪ್ರಜಾಪ್ರಭುತ್ವಕ್ಕೆ ಕುತ್ತುಂಟಾಗುವುದು ಖಚಿತ. ಶೋಷಣೆ-ಅನ್ಯಾಯಗಳಿಗೆ ಒಳಗಾದ ಹಾಗೂ ಕಾನೂನಿನ ಅರಿವಿಲ್ಲದಿರುವ ಜನಸಾಮಾನ್ಯರಿಗೆ, ಅಂದರೆ ಕಕ್ಷಿದಾರರಿಗೆ ನ್ಯಾಯವನ್ನು ಒದಗಿಸುವಲ್ಲಿ ನ್ಯಾಯಾಧೀಶರು, ವಕೀಲರು ಮತ್ತು ಸಿಬ್ಬಂದಿಗಳ ಪಾತ್ರ ಮಹತ್ವದ್ದು. ಜನಸಾಮಾನ್ಯರ ಸಮಸ್ಯೆಗಳನ್ನು ಪರಿಹರಿಸುವಲ್ಲಿ, ಅವರಲ್ಲಿ ಜಾಗೃತಿ ಮೂಡಿಸುವಲ್ಲಿ ನ್ಯಾಯಾಂಗವು ದಕ್ಷತೆಯಿಂದ ಕಾರ್ಯನಿರ್ವಹಿಸುವುದು ಅಗತ್ಯ.

ಪ್ರಸ್ತುತ ಸಮಾಜದಲ್ಲಿ ಜನರಲ್ಲಿ ಕಾನೂನು ಪಾಲನೆಯ ಸ್ಥಿತಿ ಹೇಗಿದೆ? ಇದು ಸಮಾಧಾನಕರವಾಗಿಲ್ಲವೆಂತಲೇ ಭಾವಿಸುತ್ತಾರೆ ಪ್ರಸಾದ್. ಅವರು ಗ್ರಹಿಸಿರುವಂತೆ, ಇಂದಿನ ಸಮಾಜದಲ್ಲಿ ಹೆಚ್ಚಿನ ಅಪರಾಧಗಳು ಜರುಗುತ್ತಿರುವುದು ಯುವಕರಿಂದಲೇ. ಇದೇ ಪರಿಸ್ಥಿತಿ ಮುಂದುವರೆದಲ್ಲಿ ಸಮಾಜದಲ್ಲಿ ಬರ್ಬರ ಸನ್ನಿವೇಶ ಸೃಷ್ಟಿಯಾಗುತ್ತದೆ. ಈಗ ಇದರ ಪರಿಣಾಮವನ್ನು ಎದುರಿಸಲಾಗುತ್ತಿದೆ. ನ್ಯಾಯಾಂಗವು ಸಕ್ರಿಯವಾಗಿದ್ದರೆ ಯುವಕರಲ್ಲಿನ ಅಪರಾಧಿ ಮನೋಭಾವವನ್ನು ತೊಡೆದುಹಾಕಿ ಅವರನ್ನು ಸತ್ಪ್ರಜೆಗಳನ್ನಾಗಿ ಸುಧಾರಿಸಬಹುದು. ಹಾಗೆಯೇ, ಸಾಕ್ಷಿಗಳ ವಿಚಾರದಲ್ಲಿಯೂ ನ್ಯಾಯಾಂಗವು ಆತ್ಮವಿಮರ್ಶೆ ಮಾಡಿಕೊಳ್ಳಬೇಕಾದ ಅಗತ್ಯವಿದೆ. ಕೊಲೆ, ಅತ್ಯಾಚಾರ ಮೊದಲಾದ ಹೇಯ ದುಷ್ಕೃತ್ಯಗಳಲ್ಲಿ ನೊಂದ ಕುಟುಂಬದವರಿಗೆ ನ್ಯಾಯ ಒದಗಿಸಲು ಪ್ರಸಕ್ತ ಸನ್ನಿವೇಶದಲ್ಲಿ ಕಷ್ಟವಾಗುತ್ತಿದೆ.

ಅಪರಾಧಿಗಳನ್ನು ರಕ್ಷಿಸುವುದಕ್ಕಾಗಿ ಸಾಕ್ಷಿಗಳನ್ನು ನಾಶಪಡಿಸುತ್ತಿರುವುದೇ ಇದಕ್ಕೆ ಕಾರಣ. ಇಂಥಾ ಪರಿಸ್ಥಿತಿ ನಿರ್ಮಾಣಗೊಳ್ಳಲು ಪ್ರಜೆಗಳಿಂದ ಆಯ್ಕೆಗೊಳ್ಳುವ ಜನಪ್ರತಿನಿಧಿಗಳೂ ಕೆಲವೊಮ್ಮೆ ಕಾರಣರಾಗುವುದುಂಟು. ಇಂದಿನ ರಾಜಕಾರಣದಲ್ಲಿ ಸಕ್ರಿಯರಾಗಿರುವವರಲ್ಲಿ ಅಪರಾಧದ ಹಿನ್ನೆಲೆಯಿರುವವರೂ ಕಂಡುಬರುತ್ತಾರೆ. ಹೀಗಾಗಿ ಸಮಾಜದ ನಿರ್ಮಾಣದಲ್ಲಿ ತಡೆಯುಂಟಾಗುವ ಸಾಧ್ಯತೆ ಹೆಚ್ಚಿದೆ.

ಸ್ವಾತಂತ್ರ್ಯಪೂರ್ವದಲ್ಲಿ ದೇಶಕ್ಕೆ ಸ್ವಾತಂತ್ರ್ಯ ಕಲ್ಪಿಸಬೇಕೆಂಬ ಉದ್ದೇಶದಿಂದ ನಡೆದ ಹೋರಾಟದಲ್ಲಿ ವಕೀಲರು ಸಕ್ರಿಯವಾಗಿ ಪಾಲ್ಗೊಂಡಂತೆಯೇ ಪ್ರಸ್ತುತ ಸಮಾಜದ ಹಿತರಕ್ಷಣ ಕಾರ್ಯದಲ್ಲಿಯೂ ಸಕ್ರಿಯರಾಗುವ ಅಗತ್ಯವಿದೆಯೆನ್ನುತ್ತಾರೆ ಪ್ರಸಾದ್. ಇಷ್ಟಾದರೂ ಕಾನೂನಿನಿಂದಲೇ ಎಲ್ಲ ವಿಧದ ಸಮಸ್ಯೆ ಹಾಗೂ ವ್ಯಾಜ್ಯಗಳಿಗೆ ಪರಿಹಾರ ದೊರಕುತ್ತದೆಂದು ಹೇಳಲಾಗದು. ಹಾಗೆಯೇ, ಅಪರಾಧನಿಗ್ರಹವೂ ಸಾಧ್ಯವಾಗದಿರಬಹುದು. ಕೇವಲ ಮನಃಪರಿವರ್ತನೆಯಿಂದ ಮಾತ್ರ ಇವೆಲ್ಲವನ್ನೂ ಸಾಧಿಸಲು ಸಾಧ್ಯ. ಈ ಕಾರ್ಯಸಾಧನೆಗೆ, ರಥದ ಎರಡು ಚಕ್ರಗಳಂತಿರುವ ನ್ಯಾಯಾಧೀಶರು ಮತ್ತು ವಕೀಲರ ಮಧ್ಯೆ ಸಾಮರಸ್ಯಯುತ ಸೌಹಾರ್ದ ಸಂಬಂಧ ಬಲಗೊಳ್ಳಬೇಕಿದೆಯೆನ್ನುತ್ತಾರೆ ಅವರು.

* * *

ಸಾಮಾಜಿಕ ಕಳಕಳಿ, ನ್ಯಾಯಾಂಗದ ಮೂಲತತ್ವಗಳಿಗೆ ಹೆಚ್ಚು ಒತ್ತುಕೊಟ್ಟು ಕಾರ್ಯನಿರ್ವಹಿಸುವ ಕರ್ತವ್ಯನಿಷ್ಠೆ, ಸುಸಂಸ್ಕೃತ ಸ್ವರೂಪದ ಶಿಸ್ತು, ನ್ಯಾಯಾಂಗದ ಗೌರವ ಎತ್ತಿಹಿಡಿಯುವಲ್ಲಿನ ಸಂಯಮಶೀಲ ಪ್ರವೃತ್ತಿ, ಮಾನವೀಯ ಸಂವೇದನೆ, ಔದಾರ್ಯ, ಸಾಹಿತ್ಯಾಭಿರುಚಿ, ಸಂಗೀತಪ್ರಿಯತೆ ಇತ್ಯಾದಿ ಗುಣಸಂಪನ್ನರಾದ ಪ್ರಸಾದ್, ನನ್ನ ದೃಷ್ಟಿಯಲ್ಲಿ, ಓರ್ವ ಸಂಸ್ಕೃತಿಸಂಪನ್ನ ಹಾಗೂ ಸಂಸ್ಕಾರಸಂಪನ್ನ. ಅವರ ಶೌಚಾಚಾರ ಅಪರೂಪದ್ದು. ಅವರು ನ್ಯಾಯಾಂಗ ವ್ಯವಸ್ಥೆಯಲ್ಲಿ ನ್ಯಾಯಪರರಾಗಿ ಶ್ರದ್ಧೆಯಿಂದ ಕರ್ತವ್ಯಪಾಲನೆ ಮಾಡಿದಂತೆಯೇ, ಸಾರ್ವಜನಿಕಕ್ಷೇತ್ರಗಳಲ್ಲಿಯೂ ಉತ್ಸಾಹದಿಂದ ಕಾರ್ಯನಿರ್ವಹಿಸಿದ್ದಾರೆ. ಇಂದಿಗೂ ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ವಲಯಗಳಲ್ಲಿ ಕ್ರಿಯಾಶೀಲರಾಗಿದ್ದು, ಹಲವು ವಿಧದ ಮಾರ್ಗದರ್ಶನ ನೀಡುತ್ತಿದ್ದಾರೆ.

ಜಿ.ಹೆಚ್.ಪ್ರಸಾದ್ ಅವರನ್ನು ಯಾವ ನಿಟ್ಟಿನಿಂದ ವಿಶ್ಲೇಷಿಸಿದರೂ ಸ್ಫಟಿಕಮಣಿಯಂಥಾ ಪರಿಶುದ್ಧ ವ್ಯಕ್ತಿತ್ವ ಅವರದು. ನನ್ನ ಬದುಕಿನಲ್ಲಿ ಅವರಂಥವರ ಒಡನಾಟ ಒದಗಿಬಂದುದಕ್ಕೆ ಹರ್ಷಿಸುತ್ತೇನೆ. ಆದರೆ ಅವರು ಹರ್ಷಿಸುವುದು ನಮ್ಮಂಥವರ ಒಡನಾಟ ಒದಗಿದುದಕ್ಕೆ! ಸೌಜನ್ಯದ ನಡವಳಿಕೆಯೆಂದರೆ ಇದೇ ಅಲ್ಲವೇ?

೧೦

## ಪ್ರಸಾದ್ ಅವರ ಕೆಲವು ಟಿಪ್ಪಣಿಗಳು

### ಸಂಗ್ರಹ / ಪ್ರೊ. ಲಕ್ಷ್ಮಣ್ ತೆಲಗಾವಿ

ಜಿ.ಹೆಚ್.ಪ್ರಸಾದ್ ಅವರು ತಮ್ಮ ಸರಳ, ಸಜ್ಜನ, ಆದರ್ಶಮಯ ಜೀವನದಿಂದಾಗಿ ಸಮಾಜದ ಎಲ್ಲ ವರ್ಗಗಳವರಿಗೂ ಸ್ಫೂರ್ತಿದಾಯಕರಾಗಿದ್ದಾರೆನ್ನಬಹುದು. ತಮ್ಮ ಎಡಬಿಡದ ಕಾರ್ಯಒತ್ತಡಗಳ ಮಧ್ಯೆಯೂ ಸಾಹಿತ್ಯ, ಸಂಗೀತ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಶ್ಲಾಘನೀಯ. ತಮ್ಮ ಕರ್ತವ್ಯನಿಮಿತ್ತ ಅವರು ಹಲವಾರು ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆ; ಟಿಪ್ಪಣಿಗಳನ್ನು ಸಿದ್ಧಪಡಿಸಿದ್ದಾರೆ; ಉದ್ಬೋಧಕ ಉಪನ್ಯಾಸಗಳನ್ನು ನೀಡಿದ್ದಾರೆ. ವೃತ್ತಿ ಮತ್ತು ಸಾರ್ವಜನಿಕ ಬದುಕಿನಲ್ಲಿ ತಾವು ಸಂಪಾದಿಸಿದ ನೇರ ಅನುಭವವನ್ನು ತಾತ್ವಿಕ ಮತ್ತು ತಾರ್ಕಿಕ ನೆಲೆಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಪ್ರಸಾದ್ ಅವರ ವಿಚಾರಗಳು ಸ್ಫೂರ್ತಿಯುತವಾದವೆನ್ನುವುದರಲ್ಲಿ ಸಂದೇಹವಿಲ್ಲ. ಆತ್ಮೀಯತೆಯ ನೆಲೆಯಲ್ಲಿ ಸರಳವಾಗಿ, ಸರಾಗವಾಗಿ ಹಾಗೂ ಸುಂದರವಾಗಿ ಹರಿಯುವಂಥವು ಅವರ ವಿಚಾರಗಳು. ತಮ್ಮ ಗಮನವನ್ನು ವಿಷಯದ ಮೇಲಷ್ಟೆ ಕೇಂದ್ರೀಕರಿಸಿ, ಅಗತ್ಯವಾದುದನ್ನು ಮತ್ತು ಅನಿವಾರ್ಯವೆನಿಸಿದುದನ್ನು ಸ್ಪಷ್ಟವಾಗಿ, ನೇರವಾಗಿ ನಿರೂಪಿಸುವ ಸ್ವಭಾವ ಅವರದು. ಇಲ್ಲಿ ಸಂಗ್ರಹಿಸಲಾಗಿರುವ ಕೆಲವು ಟಿಪ್ಪಣಿಗಳೇ ಅವರ ಚಿಂತನಾ ಕ್ರಮ, ಸಾಮರ್ಥ್ಯ, ಅಭಿರುಚಿ, ಕಾಳಜಿ, ಕಳಕಳಿ, ಸಹೃದಯತೆ, ಅಂತಃಕರಣ, ಸ್ಪಂದನಗುಣಗಳನ್ನು ತೆರೆದಿಡುತ್ತವೆ.

ಪ್ರಸ್ತುತ ಟಿಪ್ಪಣಿಗಳು ಸಂಖ್ಯೆಯಲ್ಲಿ ಹೆಚ್ಚಿಲ್ಲ. ಆದರೆ ಗುಣಾತ್ಮಕವಾಗಿವೆ; ದೀರ್ಘವಾಗಿಲ್ಲ, ಆದರೆ ವಸ್ತುನಿಷ್ಠವಾಗಿವೆ; ಭಾಷೆ ಮತ್ತು ನಿರೂಪಣೆಗಳಲ್ಲಿ ಲಾಲಿತ್ಯವಿಲ್ಲ, ಆದರೆ ಸಹಜಾಭಿವ್ಯಕ್ತಿಗನುಗುಣವಾಗಿವೆ. ತಮ್ಮ ಬಾಳಿನ ಉದ್ದಕ್ಕೂ ಪ್ರಸಾದ್ ಅವರು ಅನುಸರಿಸಿದ ಹಾಗೂ ಅಳವಡಿಸಿಕೊಂಡ ಮೌಲ್ಯಗಳ ಸೂಕ್ಷ್ಮ ದರ್ಶನವಾಗುತ್ತದೆ ಇವುಗಳಲ್ಲಿ. ಭಾಷೆ, ದೇಶ, ಜನಾಂಗ, ಯುವಜನತೆ, ನ್ಯಾಯಪಾಲನೆ, ಶೋಷಣೆ, ದೌರ್ಜನ್ಯ, ಕ್ರೌರ್ಯ, ಮುಗ್ಧತೆ, ನೋವು, ಹತಾಶೆ, ಭರವಸೆ ಹೀಗೆ ಹಲವು ಮುಖಗಳನ್ನು ಇಲ್ಲಿ

ವಿಶ್ಲೇಷಿಸಲೆತ್ನಿಸುತ್ತಾರೆ. ಸಾಹಿತ್ಯ, ಸಂಗೀತ, ಗ್ರಂಥಾಲಯ, ಪುಸ್ತಕಸಂಸ್ಕೃತಿ ಇತ್ಯಾದಿ ವಿಶಿಷ್ಟ ಕ್ಷೇತ್ರಗಳ ಬಗೆಗೂ ತಮ್ಮ ಚಿಂತನಧಾರೆ ಹರಿಸುತ್ತಾರೆ. ತಮ್ಮ ಕರ್ತವ್ಯಪಾಲನೆಯಲ್ಲಿ ಸ್ವನಿಷ್ಠೆ, ಸ್ವನೀತಿ ಹಾಗೂ ಸ್ವಮೌಲ್ಯಮಾಪನಗಳಿಗೆ ಕಟ್ಟುಬಿದ್ದು, ತಮ್ಮನ್ನು ನೈತಿಕ ಅಂಕೆಗೊಳಪಡಿಸಿಕೊಳ್ಳುವ ನಿಟ್ಟಿನಲ್ಲಿ 'ಸ್ವಯಂ ಸೇವಾಸೂತ್ರ'ಗಳನ್ನು ರೂಪಿಸಿಕೊಳ್ಳುತ್ತಾರೆ; ಹಾಗೂ ಮುಖ್ಯವಾಗಿ, ೧೭ನೇ ಶತಮಾನದ ನ್ಯಾಯಾಧೀಶ ಮ್ಯಾಥ್ಯೂ ಹೇಲ್ ಅವರು ಇತರ ನ್ಯಾಯಾಧೀಶರಿಗೆ ಹಾಕಿಕೊಟ್ಟ ಮಾರ್ಗದರ್ಶನಸೂತ್ರಗಳನ್ನು ಕಟ್ಟುನಿಟ್ಟಾಗಿ ಅನುಸರಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾಗುತ್ತಾರೆ. ಪ್ರಸಾದ್ ಅವರ ವ್ಯಕ್ತಿತ್ವದ ಗುಣವನ್ನರಿಯಲು ಇಂಥಾ ಅಂಶಗಳೇ ಆಧಾರ.

ಭವಿಷ್ಯದ ಬೆಳಕಾಗಿರುವ ವಿದ್ಯಾರ್ಥಿಗಳು, ಅದರಲ್ಲೂ ಎಳೆಯ ವಿದ್ಯಾರ್ಥಿಗಳ ಬಗೆಗಿನ ಪ್ರಸಾದ್ ಅವರ ವಿಚಾರಗಳು ಮಾತೃಹೃದಯದ, ಪಿತೃವಾತ್ಸಲ್ಯದ ಸಂಕೇತಗಳಂತಿವೆ. ತಮ್ಮ ಸ್ವಂತವೃತ್ತಿಯ ಬಗೆಗೆ ಅವರಲ್ಲಿರುವ ಅಭಿಮಾನ-ಗೌರವಗಳು ಎಣೆಯಿಲ್ಲದವು. ಆದರೆ ಯಾರೇ ಆದರೂ ತಮ್ಮ ವೃತ್ತಿಪರತೆಯನ್ನು ಯಶಸ್ವಿಗೊಳಿಸಲು ಒಂದು ನಿರ್ದಿಷ್ಟ ನೀತಿಸಂಹಿತೆಯನ್ನು ಅನುಸರಿಸದಿದ್ದರೆ ವ್ಯಕ್ತಿಗೂ ವೃತ್ತಿಗೂ ಕಳಂಕ ತಪ್ಪಿದ್ದಲ್ಲ. ಈ ಎಚ್ಚರವನ್ನು ಕಾಣಬಹುದು ಪ್ರಸಾದ್ ಅವರ ನುಡಿಗಳಲ್ಲಿ. ವರದಕ್ಷಿಣೆಯ ಪಿಡುಗು ಸಮಾಜವನ್ನೆ ನಲುಗುವಂತೆ ಮಾಡಿರುವುದು ಸಹಜ. ಇದರ ಹಿನ್ನೆಲೆಯಲ್ಲಿರುವ ಅಮಾನವೀಯ, ಕ್ರೂರ ಹಾಗೂ ಸ್ವಾರ್ಥಭರಿತ ವರ್ತನೆಗಳು ಭಯಾನಕವಾದವು. ನ್ಯಾಯಾಲಯಗಳಲ್ಲಿ ಇಂಥಾ ಪ್ರಕರಣಗಳ ವಿಚಾರಣೆ ನಡೆಸುವಲ್ಲಿ ಸೂಕ್ಷ್ಮ ಸಂವೇದನೆಯುಳ್ಳ ಕೆಲವು ನ್ಯಾಯವಾದಿಗಳಿಗಾಗಲಿ, ನ್ಯಾಯಾಧಿಪತಿಗಳಿಗಾಗಲಿ, ಇನ್ನಿತರರಿಗಾಗಲಿ ಏನನ್ನಿಸ ಬಹುದು? ಮನಸ್ಸಿನ ಮೇಲೆ ಎಂಥಾ ಪರಿಣಾಮ ಬೀರಬಹುದು? ಇದಕ್ಕೆ ಪ್ರಸಾದರೂ ಹೊರತಲ್ಲವೆಂಬುದಕ್ಕೆ ಅವರ ಟಿಪ್ಪಣಿಯೇ ಸಾಕ್ಷಿ.

ನಮ್ಮ ದೇಶಕ್ಕೆ ಸ್ವಾತಂತ್ರ್ಯ ದೊರೆತಿದೆ, ನಿಜ. ಆದರೆ ಬಡವರಿನ್ನೂ ದಾಸ್ಯದಲ್ಲಿದ್ದಾರೆ. ದೀನ-ದಲಿತ-ಅಸ್ಪೃಶ್ಯ-ಅಸಹಾಯಕರ ಬಾಳಿನಲ್ಲಿ ಸ್ವಾತಂತ್ರ್ಯದ ಹೊಂಗಿರಣ ಪ್ರವೇಶಿಸಿಯೇ ಇಲ್ಲ. ಸ್ವಾತಂತ್ರ್ಯದ ಪರಿಕಲ್ಪನೆ ಮತ್ತು ಅರಿವುಗಳನ್ನು ಹೊಂದದ ಜನಸಾಮಾನ್ಯರಿನ್ನೂ ಕತ್ತಲಿನಲ್ಲಿಯೇ ಇದ್ದಾರೆ. ಕೇವಲ ಧನಾಢ್ಯರು-ಬಲಾಢ್ಯರು ಅದರ ಪ್ರಯೋಜನವನ್ನು ಉಪಯೋಗಿಸಿಕೊಳ್ಳುತ್ತಾ ದೇಶದ ದುರಂತ ಭವಿಷ್ಯಕ್ಕೆ ಭಾಷ್ಯ ಬರೆಯುತ್ತಿದ್ದಾರೆ. ಅನ್ನ, ಅಕ್ಷರ, ಸಮಾನ ಗೌರವ, ಉದ್ಯೋಗಾವಕಾಶ ಇತ್ಯಾದಿಗಳಿಂದ ನಿರಂತರವಾಗಿ ವಂಚಿತರಾಗಿರುವವರ ಸಂಖ್ಯೆ ಕೋಟಿ-ಕೋಟಿಗಳಷ್ಟಿದೆ. ದೇಶದ ಸ್ವಾತಂತ್ರ್ಯವನ್ನು ಬಲಿಷ್ಠ ರಾಷ್ಟ್ರಗಳಿಗೆ ಪ್ರಜ್ಞಾಪೂರ್ವಕವಾಗಿ ಒತ್ತೆಯಿಟ್ಟು ಅಟ್ಟಹಾಸಗೈಯುತ್ತಿರುವ ಕೆಲವು ರಾಜಕಾರಣಿಗಳು ಹಾಗೂ ದುಷ್ಟಕೂಟಗಳವರ ಕೈ ಮೇಲಾಗಿದೆ. ಪ್ರಸಾದ್ ಅವರ ಚಿಂತನೆ ಈ ನಿಟ್ಟಿನಲ್ಲಿಯೇ ಸಾಗಿದೆ. ಆದರೆ ತಮ್ಮ ಶಿಸ್ತನ್ನು, ಸಂಯಮದ ಮಿತಿಯನ್ನು ಮೀರದ ಕಾರಣಕ್ಕೆ ಸೌಮ್ಯವಾದವನ್ನೆ ಮುಂದೊಡ್ಡಿ ಮುಲುಕಾಡುವ ತೆರನಲ್ಲಿ ಅವರು ನಾಜೂಕಾಗಿಯೇ

ತಮ್ಮ ವಿಚಾರಗಳನ್ನು ಮಂಡಿಸುತ್ತಾರೆ. ಅವರ ಅಂತರಂಗದ ಕೋಲಾಹಲಗಳು ಸಾತ್ವಿಕ ನೆಲೆಯಲ್ಲಿಯೇ ಹರಿದಾಡುತ್ತವೆ.

ಪ್ರಸಾದ್ ಅವರ ಟಿಪ್ಪಣಿಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಪ್ರಕಟಿಸಲು ಸಾಧ್ಯವಾಗಿದೆ. ಅವರ ಸಮಗ್ರ ವಿಚಾರಗಳನ್ನು ಅರಿಯಲು ಎಲ್ಲೆಲ್ಲೋ ಹರಡಿ ಹೋಗಿರುವ ಅವರ ಇತರ ಟಿಪ್ಪಣಿಗಳನ್ನೂ ಇನ್ನೂ ಶೋಧಿಸಬೇಕಿದೆ. ಅವರ ಟಿಪ್ಪಣಿಗಳು ಈ ಕೆಳಗಿನಂತಿವೆ:

**ಟಿಪ್ಪಣಿ-೧ : ಜನತಾ ನ್ಯಾಯಾಲಯಗಳು**

ಅನಾದಿಕಾಲದಲ್ಲಿ ಯಾವುದೇ ಕಾನೂನು-ಕಟ್ಟಳೆಗಳು ಇರಲಿಲ್ಲ. 'ಶಕ್ತಿಯೇ ಹಕ್ಕಾಗಿತ್ತು' (Might is right). ಮನುಷ್ಯ ನಾಗರಿಕತೆಯತ್ತ ಸಾಗತೊಡಗಿದಂತೆ ತನ್ನ ಜೀವನವನ್ನು ಸುಗಮವಾಗಿ ಸಾಗಿಸಲು; ತನ್ನ ಸಾಮಾಜಿಕ ಚಟುವಟಿಕೆಗಳಿಗಾಗಿ, ಶಾಂತಿ, ನೆಮ್ಮದಿಯಿಂದ ಬಾಳಲು ಹಾಗೂ ಆರೋಗ್ಯವಂತ ಸಮಾಜ ನಿರ್ಮಾಣಮಾಡಲು ಕೆಲವು ಕಟ್ಟು-ಕಟ್ಟಳೆಗಳನ್ನು ಸೃಷ್ಟಿ ಮಾಡಿಕೊಂಡ. ಅವನ್ನೇ ನಾವು ಕಾನೂನುಗಳು ಎಂದು ಕರೆಯುತ್ತೇವೆ.

ಈ ಕಾನೂನುಗಳನ್ನು ನಾವು ಪಾಲಿಸುವ ಮೂಲಕ ಗೌರವಿಸದಿದ್ದಲ್ಲಿ ನಮ್ಮ ಜನ ಜೀವನ ಅಸ್ತವ್ಯಸ್ತವಾಗುತ್ತದೆ; ಶಾಂತಿ, ನೆಮ್ಮದಿ ಹಾಳಾಗುತ್ತವೆ; ಹಾಗೂ ಸಮಾಜದ ಆರೋಗ್ಯ ಕೆಟ್ಟು, ಅಶಾಂತಿ, ಹಿಂಸೆ, ಕೊಲೆ, ಸುಲಿಗೆ, ದೌರ್ಜನ್ಯ, ಶೋಷಣೆ, ಅತ್ಯಾಚಾರಗಳಿಗೆ ಎಡೆಮಾಡಿಕೊಡುತ್ತವೆ. ಆದ್ದರಿಂದ ನಾವು ನೆಮ್ಮದಿಯಿಂದ ಜೀವನ ಸಾಗಿಸಬೇಕಾದರೆ, ಆರೋಗ್ಯವಂತ ಸಮಾಜ ನಿರ್ಮಾಣ ಮಾಡಬೇಕಾದರೆ ನಾವೇ ಸೃಷ್ಟಿಸಿಕೊಂಡಿರುವ ಕಾನೂನುಗಳನ್ನು ಪಾಲಿಸಬೇಕು. ಒಂದುವೇಳೆ ಅವುಗಳನ್ನು ನಾವು ಪಾಲಿಸದಿದ್ದಲ್ಲಿ, ಅವುಗಳ ರಕ್ಷಣೆಗಾಗಿ ಇರುವ ಪೊಲೀಸರು ಸಂಬಂಧಪಟ್ಟವರ ಮೇಲೆ ಕಾನೂನು ಪ್ರಕಾರ ಕ್ರಮ ತೆಗೆದುಕೊಳ್ಳುವುದು ಅನಿವಾರ್ಯವಾಗುತ್ತದಷ್ಟೆ.

ನಮ್ಮ ಹಕ್ಕುಗಳಿಗೆ ತೊಂದರೆ ಬಂದಲ್ಲಿ ನ್ಯಾಯನೀಡಲು ನ್ಯಾಯಾಲಯಗಳು ಸ್ಥಾಪಿತವಾಗಿವೆ. ಆದ್ದರಿಂದ ನಾವು ದೇಶದ ಕಾನೂನುಗಳ ಪೈಕಿ, ನಮ್ಮ ನಿತ್ಯಜೀವನಕ್ಕೆ ಬೇಕಾಗುವ ಕಾನೂನುಗಳನ್ನು ತಿಳಿದುಕೊಳ್ಳಲೇ ಬೇಕಾಗುತ್ತದೆ. ಇಂತಹ ಕಾನೂನುಗಳ ಬಗೆಗೆ ಅರಿವು ಮೂಡಿಸಲು, ಸಮೂಹ ಮಾಧ್ಯಮಗಳಾದ ಪತ್ರಿಕೆಗಳು, ಆಕಾಶವಾಣಿ, ದೂರದರ್ಶನಗಳಿವೆ; ಸಾರ್ವಜನಿಕ ಸಂಘ-ಸಂಸ್ಥೆಗಳಿವೆ; ವಕೀಲರಿದ್ದಾರೆ; ಕಾನೂನು ವಿದ್ಯಾರ್ಥಿಗಳಿದ್ದಾರೆ. ಇದಲ್ಲದೆ, ನಮ್ಮ ಆಡಳಿತವು ೧೯೮೭ರಲ್ಲಿ ಕಾನೂನು ಸೇವಾ ಪ್ರಾಧಿಕಾರ ಕಾನೂನನ್ನು ಜಾರಿಗೆ ತಂದಿದೆ.

ಅದರ ಅಡಿಯಲ್ಲಿ ರಾಷ್ಟ್ರಮಟ್ಟದಲ್ಲಿ, ರಾಜ್ಯಗಳ ಮಟ್ಟದಲ್ಲಿ, ಜಿಲ್ಲಾ ಮತ್ತು ತಾಲ್ಲೂಕುಗಳ ಮಟ್ಟದಲ್ಲಿ ಕಾನೂನು ಸೇವಾ ಪ್ರಾಧಿಕಾರಗಳು ಸ್ಥಾಪಿತವಾಗಿ, ಕಾನೂನಿನ ನೆರವು ಮತ್ತು ಸಲಹೆನೀಡುವ ಕೆಲಸ ಮಾಡುತ್ತವೆ. ಕಾನೂನು ನೆರವು ಮತ್ತು ಸಲಹಾ ಶಿಬಿರಗಳನ್ನು ನಡೆಸಲಾಗುತ್ತದೆ. ಪರಿಶಿಷ್ಟಜಾತಿ-ಪರಿಶಿಷ್ಟವರ್ಗದವರಿಗೆ, ದೇಶದ ದುರ್ಬಲ ವರ್ಗದವರಿಗೆ, ಮಹಿಳೆಯರಿಗೆ, ಮಕ್ಕಳಿಗೆ, ಮಾನಸಿಕ ಅಸ್ವಸ್ಥರಿಗೆ; ಕ್ಷಾಮ, ಭೂಕಂಪ,

ಪ್ರವಾಹಗಳ ವಿನಾಶಗಳಿಗೆ ತುತ್ತಾದವರಿಗೆ; ಮನುಷ್ಯರ ದಬ್ಬಾಳಿಕೆಗಳಿಗೆ ಒಳಗಾದವರಿಗೆ ಉಚಿತ ಕಾನೂನಿನ ನೆರವು ಮತ್ತು ಸೇವೆ ಸಿಗುತ್ತದೆ. ಇದಲ್ಲದೆ ಆದಾಯವು ವರ್ಷಕ್ಕೆ ೧೮ ಸಾವಿರ ರೂಪಾಯಿಗಳಿಗೆ ಮೀರಿಲ್ಲದ ಎಲ್ಲ ವರ್ಗದ ಜನರಿಗೆ ಉಚಿತ ಕಾನೂನಿನ ಸೇವೆ, ನೆರವು ದೊರೆಯುತ್ತದೆ. ಯಾವುದೇ ಆದಾಯದ ಪರಿಮಿತಿಯಿಲ್ಲದ ಎಲ್ಲ ವರ್ಗದ ಜನರಿಗೆ ಉಚಿತ ಕಾನೂನಿನ ಸಲಹೆ ದೊರೆಯುತ್ತದೆ.

ಜಿಲ್ಲಾಮಟ್ಟದಲ್ಲಿ ಜಿಲ್ಲಾ ನ್ಯಾಯಾಲಯಗಳಲ್ಲಿ, ತಾಲ್ಲೂಕುಮಟ್ಟದಲ್ಲಿ ಅಲ್ಲಿನ ನ್ಯಾಯಾಲಯಗಳಲ್ಲಿ ಕಾನೂನು ಸೇವಾ ಪ್ರಾಧಿಕಾರದ ಸಮಿತಿಗಳು ಇರುತ್ತವೆ. ಅವುಗಳನ್ನು ಕೆಲಸದ ವೇಳೆ ಸಂಪರ್ಕಿಸಬಹುದು. ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸರಿಸಮಾನರು; ಶ್ರೀಮಂತ-ಬಡವ ಎಂಬ ಭೇದ-ಭಾವ ಇರುವುದಿಲ್ಲ.

ಬಡವನ ಆರ್ಥಿಕಸ್ಥಿತಿಯು ಆತನ ಹಕ್ಕನ್ನು ಸಾಧಿಸಲು, ನ್ಯಾಯಪಡೆಯಲು ಅಡ್ಡಬಾರದೆಂದು, ಸರ್ಕಾರವು ಕೆಲವೊಂದು ವ್ಯವಸ್ಥೆಗಳನ್ನು ಮಾಡಿದೆ. ಕಾನೂನು ಸೇವಾ ಪ್ರಾಧಿಕಾರವೇ ಅಂತಹ ವ್ಯವಸ್ಥೆ. ಆದ್ದರಿಂದ ಸಂಬಂಧಿಸಿದವರು ಈ ಯೋಜನೆಗಳಿಂದ ಪ್ರಯೋಜನ ಪಡೆಯಬಹುದು. ಗ್ರಾಮಗಳಲ್ಲಿ ನ್ಯಾಯಪಂಚಾಯಿತಿಗಳು ಜನರಿಗೆ ನ್ಯಾಯನೀಡುವ ವ್ಯವಸ್ಥೆ ಮಾಡುತ್ತಿದ್ದವು. ಅಲ್ಲಿ ಜನರು ಸತ್ಯವನ್ನು ಹೇಳಲೇಬೇಕಾಗಿತ್ತು. ಸತ್ಯವನ್ನು ಹೇಳುತ್ತಿದ್ದರು. ಈಗ ನ್ಯಾಯಾಲಯಗಳು ನ್ಯಾಯನೀಡುವ ಕೆಲಸ ಮಾಡುತ್ತಿವೆ. ಆದರೆ ನ್ಯಾಯವ್ಯವಸ್ಥೆ ಸುಗಮವಾಗಿ ಸಾಗಲು ಜನರಿಗೆ ನ್ಯಾಯ ಸಿಗುವಂತೆ ಮಾಡಬೇಕಾದರೆ, ನ್ಯಾಯಾಲಯಕ್ಕೆ ಬರುವ ಜನರು ಸತ್ಯ ಹೇಳಬೇಕು. ಇಲ್ಲದಿದ್ದಲ್ಲಿ ನ್ಯಾಯವೂ ಒಂದೊಂದು ಸಾರಿ ಕುಂಟಬೇಕಾದ ಅನಿವಾರ್ಯದ ಪರಿಸ್ಥಿತಿ ಎದುರಾಗುತ್ತದೆ.

ಜನಸಂಖ್ಯೆ ಜಾಸ್ತಿ ಆದಂತೆ, ನ್ಯಾಯಾಲಯಗಳಿಗೆ ನ್ಯಾಯವನ್ನು ಅರಸಿ ಬರುವ ಜನರ ಹಾಗೂ ಕೇಸುಗಳ ಸಂಖ್ಯೆ ಬೆಟ್ಟದಂತೆ ಏರುತ್ತಿದೆ. ಆದರೆ ಅವುಗಳ ಸಮಕ್ಕೆ ನ್ಯಾಯಾಲಯಗಳ ಸಂಖ್ಯೆ ಜಾಸ್ತಿ ಆಗಿಲ್ಲ. ಹಾಗಾಗಿ ಕೇಸುಗಳನ್ನು ತೀರ್ಮಾನಮಾಡಲು ಕೆಲವೊಂದು ಸಾರಿ ವರ್ಷಗಳೇ ಹಿಡಿಯುತ್ತವೆ.

ಆದ್ದರಿಂದ ಪರ್ಯಾಯ ವ್ಯವಸ್ಥೆಯಂತಿರುವ ಲೋಕ ಅದಾಲತ್ ಜನತಾ ನ್ಯಾಯಾಲಯಗಳ ಪದ್ಧತಿಯನ್ನು ಜಾರಿಗೆ ತಂದಿದೆ. ಈ ವ್ಯವಸ್ಥೆಯಿಂದ ಕೇಸುಗಳು ತೀರ್ಮಾನವಾದಲ್ಲಿ ಅದೇ ಅಂತಿಮ ತೀರ್ಮಾನವಾಗಿ ಕಕ್ಷಿದಾರರಿಗೆ ಶಾಶ್ವತ ಪರಿಹಾರ, ಶಾಂತಿ, ನೆಮ್ಮದಿ ಸಿಗುತ್ತದೆ; ನ್ಯಾಯಾಲಯಗಳ ಮೇಲಿನ ಹೊರೆಯೂ ಕಡಿಮೆಯಾಗುತ್ತದೆ. ಆದ್ದರಿಂದ ಜನತಾ ನ್ಯಾಯಾಲಯಗಳ ಪ್ರಯೋಜನ ಪಡೆಯಲು ಸಂಬಂಧಿಸಿದವರು ಮುಂದಾಗಬೇಕು.

**ಟಿಪ್ಪಣಿ-೨ : ನಮ್ಮ ಸ್ವಾತಂತ್ರ್ಯ ದಿನಾಚರಣೆ**

ನಾವು ದೇಶಾದ್ಯಂತ ಸಂತೋಷ, ಸಂಭ್ರಮ-ಸಡಗರ ಹಾಗೂ ಉತ್ಸಾಹದಿಂದ ಪ್ರತಿ ವರ್ಷವೂ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸುತ್ತೇವೆ. ನಮ್ಮ ದೇಶ ಪರಕೀಯರ

ದಾಸ್ಯದಿಂದ ಬಿಡುಗಡೆಯಾಗಿ ೬೦ ವರ್ಷಗಳು ಕಳೆದರೂ ಇನ್ನೂ ಇಂತಹ ರಾಷ್ಟ್ರೀಯ ಹಬ್ಬಗಳನ್ನು ವೆಹಲಿ, ದೇಶದ ಗಡಿ ಹಾಗೂ ಆಯಕಟ್ಟಿನ ಪ್ರದೇಶಗಳಲ್ಲಿ ಸೈನಿಕರ ರಕ್ಷಣೆಯಲ್ಲಿ ತುಂಬಾ ಆತಂಕದಿಂದ ಆಚರಿಸುವ ಸ್ಥಿತಿ ಇದೆ!

ದೇಶದ ಗಡಿಪ್ರದೇಶಗಳಲ್ಲಿ ದಿನನಿತ್ಯ ನಡೆಯುವ ಅಮಾಯಕ ಜನರ ಕಗ್ಗೊಲೆ, ಅತ್ಯಾಚಾರ, ದೌರ್ಜನ್ಯ, ಸಾರ್ವಜನಿಕ ಆಸ್ತಿಗಳ ನಾಶ, ಸೆರೆಸಿಕ್ಕ ನಮ್ಮ ವೀರಯೋಧರನ್ನು ಅಮಾನುಷ ರೀತಿಯಲ್ಲಿ ಹಿಂಸಿಸಿ ಪ್ರಾಣ ತೆಗೆಯುತ್ತಿರುವ ಪ್ರಕರಣಗಳು ಅವ್ಯಾಹತವಾಗಿ ನಡೆಯುವುದನ್ನು ನೋಡಿದರೆ, ಮುಂದಿನ ದಿನಗಳಲ್ಲಿ ನಮ್ಮ ದೇಶವು ಯಾವ ಸ್ಥಿತಿಯನ್ನು ಮುಟ್ಟಬಹುದು ಅನ್ನುವುದನ್ನು ಊಹಿಸಲು ಅಸಾಧ್ಯ. ಬಹುಶಃ ಸ್ವಾತಂತ್ರ್ಯ ಬಂದಕೂಡಲೇ ನಮ್ಮ ಸರ್ಕಾರ ನಮ್ಮ ಗಡಿಪ್ರದೇಶಗಳನ್ನು ಸರಿಯಾಗಿ ರಕ್ಷಣೆ ಮಾಡಿಕೊಂಡಿದ್ದರೆ, ನಮ್ಮ ದೇಶಕ್ಕೆ ಇಂತಹ ದುಸ್ಥಿತಿ ಬರುತ್ತಿರಲಿಲ್ಲವೇನೊ.

ನಮ್ಮೆಲ್ಲರಿಗೂ ಗೊತ್ತಿರುವಂತೆ, ಮೊದಲು ಬ್ರಿಟಿಷರಿಂದ, ಆ ನಂತರ ಪೋರ್ಚುಗೀಸರಿಂದ ಸ್ವಾತಂತ್ರ್ಯಗಳಿಸಲು ಈ ದೇಶದ ದೇಶಪ್ರೇಮಿ ಯುವಜನರು, ವಕೀಲರು, ಸ್ವಾತಂತ್ರ್ಯಪ್ರಿಯ ಜನರು ಹಾಗೂ ಇನ್ನೂ ಅನೇಕ ಮಹನೀಯರು ತ್ಯಾಗ-ಬಲಿದಾನಗಳನ್ನು ಮಾಡಬೇಕಾಯಿತು ಅನ್ನುವುದು ಈಗ ಇತಿಹಾಸ.

ಆಗಿಹೋದ ಪ್ರಾತಃಸ್ಮರಣೀಯರಾದ ಅಪ್ರತಿಮ ದೇಶಪ್ರೇಮಿ ನೇತಾಜಿ ಸುಭಾಷ್ ಚಂದ್ರ ಬೋಸ್, ರಾಷ್ಟ್ರಪಿತ ಮಹಾತ್ಮಾಗಾಂಧಿ, ಬಾಬು ರಾಜೇಂದ್ರಪ್ರಸಾದ್, ಸರದಾರ್ ವಲ್ಲಭಬಾಯಿ ಪಟೇಲ್, ಬಾಲಗಂಗಾಧರ ತಿಲಕ್, ಗೋಪಾಲಕೃಷ್ಣ ಗೋಖಲೆ, ಲಾಲಾ ಲಾಜಪತ್‌ರಾಯ್, ಚಂದ್ರಶೇಖರ್ ಆಜಾದ್, ಭಗತ್‌ಸಿಂಗ್, ವೀರ ಸಾವರ್ಕರ್, ಪಂಡಿತ ಜವಾಹರ್‌ಲಾಲ್, ನೆಹರು, ಮೌಲಾನ ಅಬ್ದುಲ್ ಕಲಂ ಆಜಾದ್-ಹೀಗೆ ರಾಷ್ಟ್ರಪ್ರೇಮಿಗಳ ಪಟ್ಟಿ ಉದ್ದಕ್ಕೂ ಬೆಳೆಯುತ್ತಾ ಹೋಗುತ್ತದೆ. ಇಂತಹ ಮಹನೀಯರು ತಮ್ಮ ತ್ಯಾಗ, ಬಲಿದಾನಗಳಿಂದ ತಂದುಕೊಟ್ಟ ಸ್ವಾತಂತ್ರ್ಯವನ್ನು ಇಂದು ನಾವು ಅನುಭವಿಸುತ್ತಿದ್ದೇವೆ.

ಆದರೆ ಈ ದೇಶಕ್ಕೆ ಬಂದ ಸ್ವಾತಂತ್ರ್ಯ ದುರುಪಯೋಗವಾಗಿ ದೇಶ ವಿನಾಶದತ್ತ ಸಾಗಿದೆ. ಪುನಃ ನಮ್ಮ ದೇಶ ಸ್ವಾತಂತ್ರ್ಯವನ್ನು ಕಳೆದುಕೊಳ್ಳಬಹುದೇನೊ ಅನ್ನುವ ರೀತಿಯಲ್ಲಿ ಸಮಸ್ಯೆ-ಸವಾಲುಗಳು ಉಲ್ಬಣಿಸಿವೆ. ದೇಶದಲ್ಲಿ ದಿನೇ ದಿನೇ ಹೆಚ್ಚುತ್ತಿರುವ ಹಿಂಸೆ, ಕೊಲೆ, ಸುಲಿಗೆ, ದೌರ್ಜನ್ಯ, ಅತ್ಯಾಚಾರ, ವರದಕ್ಷಿಣೆಯಂತಹ ಅನಿಷ್ಟಪದ್ಧತಿ, ರಾಜಕೀಯ ಹಾಗೂ ನೌಕರಶಾಹಿ ವ್ಯವಸ್ಥೆಯಲ್ಲಿ ಅವ್ಯಾಹತವಾಗಿ ನಡೆಯುತ್ತಿರುವ ಭ್ರಷ್ಟಚಾರದ ವಿರಾಟ್ ಸ್ವರೂಪ, ಅಸಹ್ಯಪಡುವಷ್ಟು ಶ್ರೀಮಂತಿಕೆಯ ವೈಭವದ ಪ್ರದರ್ಶನಗಳ ಸಮಾರಂಭಗಳು; ಒಂದುಕಡೆ ಬಡತನದ ನಗ್ನರೂಪಗಳು, ಇನ್ನೊಂದು ಕಡೆ ಅನೇಕ ಸಮಸ್ಯೆ ಮತ್ತು ಸವಾಲುಗಳನ್ನು ತಂದೊಡ್ಡುತ್ತಿರುವ ಜನಸಂಖ್ಯಾ ಸ್ಫೋಟಗಳಂತಹ ವಿಷಯಗಳು ದೇಶವನ್ನು ಯಾವ ದುಸ್ಥಿತಿಗೆ ತೆಗೆದುಕೊಂಡು ಹೋಗುತ್ತಿವೆಯೋ ಊಹಿಸಲೂ ಅಸಾಧ್ಯವೆನಿಸುವಂತಹ ಪರಿಸ್ಥಿತಿಯನ್ನು ಸೃಷ್ಟಿಸಿವೆ.

ಇನ್ನು ನ್ಯಾಯಾಲಯ. ಕ್ರಿಮಿನಲ್ ಪ್ರಕರಣಗಳನ್ನು ತೆಗೆದುಕೊಂಡಲ್ಲಿ, ಅನೇಕ ಕೊಲೆ, ಸುಲಿಗೆ, ದರೋಡೆ, ಕಳ್ಳತನ, ಹಿಂಸೆ, ಅತ್ಯಾಚಾರ, ಇನ್ನೂ ಅನೇಕ ಗಂಭೀರ ಸ್ವರೂಪದ ಆಪಾದನೆಗಳನ್ನು ಎದುರಿಸುತ್ತಿರುವ ಆರೋಪಿಗಳಲ್ಲಿ ಶೇಕಡ ೮೦ ಭಾಗದಷ್ಟು ೨೦ ರಿಂದ ೨೫ ವರ್ಷದ ಯುವಕರೇ ಅನ್ನುವುದು ಕಟುಸತ್ಯ. ಇದು ಹೀಗೇ ಮುಂದುವರೆದರೆ, ದೇಶದ ಯುವಶಕ್ತಿ ದುಷ್ಟಶಕ್ತಿಯಾಗಿ ಬೆಳೆದು, ಅವರು ತಮ್ಮ ಬಾಳನ್ನು ಹಾಳುಮಾಡಿಕೊಳ್ಳುವುದರ ಜೊತೆಗೆ ಸಾರ್ವಜನಿಕರ ಸುಖ, ಶಾಂತಿ, ನೆಮ್ಮದಿಗೆ ಭಂಗ ತರುವುದಲ್ಲದೆ ದೇಶಕ್ಕೆ ಕಳಂಕ ಹಾಗೂ ಪ್ರಗತಿಗೆ ಕಂಟಕಪ್ರಾಯರಾಗುತ್ತಾರೆ. ದುಷ್ಟರಾಗುತ್ತಿರುವ ಯುವಕರನ್ನು ಸೂಕ್ತ ರೀತಿಯಲ್ಲಿ ಪರಿವರ್ತಿಸಿ, ಅವರನ್ನು ಒಳ್ಳೆಯ ಪ್ರಜೆಗಳನ್ನಾಗಿ ಮಾಡುವ ಗುರುತರವಾದ ಹೊಣೆಯು ವಕೀಲರು, ಸಮಾಜ ಸುಧಾರಕರು, ಮನೋವೈದ್ಯರು ಹಾಗೂ ಇಡೀ ಸಮಾಜವನ್ನು ಸನ್ಮಾರ್ಗದತ್ತ ತೆಗೆದುಕೊಂಡು ಹೋಗಬೇಕಾಗಿರುವ ವೈರಾಗ್ಯಸ್ವರೂಪಿಗಳಾದ ಸ್ವಾಮಿಗಳ ಮೇಲೆ ಇದೆ.

ಅಮೆರಿಕದಲ್ಲಿ ನಡೆದ ವಿಶ್ವದ ಸರ್ವಧರ್ಮಗಳ ಸಮ್ಮೇಳನದಲ್ಲಿ ಸಭಿಕರನ್ನು ಮೊದಲನೇ ಬಾರಿಗೆ "ಸಹೋದರರೇ ಮತ್ತು ಸಹೋದರಿಯರೇ" ಎಂದು ಸಂಬೋಧಿಸಿ, ಸಭಿಕರನ್ನು ಮಂತ್ರಮುಗ್ಧರನ್ನಾಗಿ, ಭಾವುಕರನ್ನಾಗಿ ಮಾಡಿದವರು ವಿಶ್ವದ ಮಹಾದಾರ್ಶನಿಕ ಸ್ವಾಮಿ ವಿವೇಕಾನಂದರು. ಅವರು ಈ ದೇಶದ ಯುವಜನರನ್ನು ಉದ್ದೇಶಿಸಿ, "ಯುವಕರೇ, ಎದ್ದೇಳಿ, ನಿಲ್ಲದಿರಿ ಗುರಿ ತಲುಪುವತನಕ" ಎಂದು ಸಂದೇಶ ಕೊಟ್ಟಿದ್ದಾರೆ. ಆ ಸಂದೇಶ ಯಾವ ಕಾರಣಕ್ಕೂ ವ್ಯರ್ಥವಾಗಬಾರದು.

ಈ ದೇಶವು ವಿಸ್ತೀರ್ಣದಲ್ಲಿ ಚಿಕ್ಕದಿದ್ದರೂ ಬಹುಶಃ ಇಲ್ಲಿರುವಷ್ಟು ಅಪಾರ ಜಲ ಸಂಪತ್ತು, ಅರಣ್ಯಸಂಪತ್ತು, ಖನಿಜಸಂಪತ್ತು, ಇತರೆ ನೈಸರ್ಗಿಕಸಂಪತ್ತು ಬೇರೆಲ್ಲೂ ಇರಲಾರದು. ಅದನ್ನು ದೇಶದ, ಮಾನವನ ಹಾಗೂ ಪ್ರಾಣಿಗಳ ಹಿತಕ್ಕಾಗಿ ಸರಿಯಾಗಿ ಉಪಯೋಗಿಸಬೇಕಾದುದು ಸರ್ಕಾರ, ಸರ್ಕಾರವನ್ನು ನಡೆಸುತ್ತಿರುವ ಮಹನೀಯರು, ಸಂಬಂಧಪಟ್ಟ ಸರಕಾರಿ ನೌಕರರು ಹಾಗೂ ಎಲ್ಲ ಭಾರತೀಯರ ಕರ್ತವ್ಯ.

ನಮ್ಮ ರಾಜ್ಯವನ್ನು ಶ್ರೀಗಂಧದನಾಡೆಂದು ಕರೆಯುವುದುಂಟು. ಮೈಸೂರು ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಶ್ರೀಗಂಧದ ಸಂಪತ್ತು ತುಂಬಾ ಹೆಚ್ಚಿತ್ತು. ಆದರೆ ಈಗ ಅವ್ಯಾಹತವಾಗಿ ನಡೆಯುತ್ತಿರುವ ಶ್ರೀಗಂಧದ ಕಳ್ಳಸಾಗಣೆಕೆಯಿಂದಾಗಿ 'ಹಿಂದೊಮ್ಮೆ ಶ್ರೀಗಂಧದ ನಾಡಾಗಿತ್ತು' ಎಂದು ಹೇಳಿಕೊಳ್ಳುವ ಪರಿಸ್ಥಿತಿ ಬರುತ್ತಾ ಇದೆ.

ನಮ್ಮ ದೇಶದಲ್ಲಿ ಅನೇಕ ಸಂತರು, ಋಷಿಗಳು, ಮಹಾದಾರ್ಶನಿಕರು, ತತ್ವಜ್ಞಾನಿಗಳು, ಸಂಖ್ಯಾಶಾಸ್ತ್ರಪ್ರಾಜ್ಞರು, ಮಹಾ ಮೇಧಾವಿಗಳು, ಮಹಾಕವಿಗಳು ಮೊದಲಾದವರು ಆಗಿ ಹೋಗಿದ್ದಾರೆ. ಕಲಾವಿಭಾಗಗಳಾದ ನಾಟಕ, ಕಲೆ, ಸಂಗೀತ, ಸಾಹಿತ್ಯಕ್ಷೇತ್ರಗಳಲ್ಲಿ ನಮ್ಮದು ದೊಡ್ಡ ಹೆಸರು. ನಮ್ಮ ಭಾರತೀಯ ಸಂಸ್ಕೃತಿ ಇಷ್ಟೊಂದು ಭವ್ಯ ಪರಂಪರೆಯಿಂದ ಕೂಡಿದ್ದರೂ ಇದನ್ನು ಮರೆತು ನಾವು ವಿದೇಶಿ ಸಂಸ್ಕೃತಿಗೆ ಮಾರುಹೋಗುತ್ತಿದ್ದೇವೆ.

ನಮ್ಮ ದೇಶಕ್ಕೆ ದೂರದರ್ಶನ ಬಂದಮೇಲೆ ಅನೇಕ ಯುವಕರು ನಮ್ಮ ಸಂಸ್ಕೃತಿಯನ್ನು ಮರೆತು ವಿದೇಶಿ ಸಂಸ್ಕೃತಿಯತ್ತ ಆಕರ್ಷಿತರಾಗುತ್ತಿದ್ದಾರೆ. ಇದೇ ಪರಿಸ್ಥಿತಿ ಮುಂದುವರೆದಲ್ಲಿ, 'ನಮ್ಮ ದೇಶ ಒಂದುಕಾಲದಲ್ಲಿ ಒಳ್ಳೆಯ ಸಂಸ್ಕೃತಿಯುಳ್ಳ ದೇಶವಾಗಿತ್ತು' ಎಂದು ಮುಂದೊಂದು ದಿನ ಹೇಳಬೇಕಾಗಿ ಬರಬಹುದು.

ಇತ್ತೀಚೆಗೆ ಶತಮಾನಗಳಿಂದ ಸುಂದರವಾಗಿ ಕಂಗೊಳಿಸಿದ್ದ ಬುದ್ಧನ ಪ್ರತಿಮೆಗಳನ್ನು ವಿಶ್ವದ ನಾಗರಿಕ ಸರ್ಕಾರಗಳು ಖಂಡಿಸಿದರೂ ಅದನ್ನು ಗಮನಕ್ಕೆ ತೆಗೆದುಕೊಳ್ಳದೇ ನಾಶಮಾಡಿದ ರೀತಿ ಇಡೀ ಮಾನವ ಜನಾಂಗ ತಲೆತಗ್ಗಿಸುವ ಪ್ರಸಂಗ.

ನ್ಯಾಯಾಲಯದ ಎಲ್ಲ ಸಿಬ್ಬಂದಿವರ್ಗದವರು, ನ್ಯಾಯವನ್ನು ಅರಸಿ ಬರುವ ಜನರ ಜೊತೆ ಹಾಗೂ ಅವರ ಹಿತವನ್ನು ಕಾಪಾಡಲು ಇರುವ ವಕೀಲರ ಜೊತೆ ಸೌಜನ್ಯದಿಂದ ವರ್ತಿಸಬೇಕು. ಪ್ರಾಮಾಣಿಕತೆ ಮತ್ತು ನಿಷ್ಠೆಯಿಂದ ತಮ್ಮ ಕರ್ತವ್ಯಗಳನ್ನು ನಿರ್ವಹಿಸಿ ನ್ಯಾಯಾಂಗ ಇಲಾಖೆಯ ಘನತೆ ಗೌರವವನ್ನು ಎತ್ತಿಹಿಡಿಯಬೇಕಾದುದು ಎಲ್ಲರ ಧರ್ಮ.

ನಾನು ಈ ಹಿಂದೆ ಹೇಳಿದಂತೆ, ದೇಶ ಸ್ವತಂತ್ರವಾದ ನಂತರ ರಾಜಕೀಯದಲ್ಲಿ ಸಕ್ರಿಯ ಪಾತ್ರವಹಿಸಿದಂತೆ, ಈಗಲೂ ವಕೀಲರು ತಮ್ಮ ವಕೀಲವೃತ್ತಿಯ ಜೊತೆ ರಾಜಕೀಯ ದಲ್ಲಿಯೂ ಸಕ್ರಿಯ ಪಾತ್ರವಹಿಸಿ, ಆರೋಗ್ಯವಂತ ಸಮಾಜದ ನಿರ್ಮಾಣಕ್ಕೆ ಕಾರಣರಾಗ ಬೇಕು. ಅದು ಆಗದಿದ್ದಲ್ಲಿ, ಕಡೇಪಕ್ಷ ಚುನಾವಣೆಗಳಲ್ಲಿ ಪಕ್ಷಭೇದ ಮರೆತು ಒಳ್ಳೆಯ ವ್ಯಕ್ತಿಗಳನ್ನು ಗೆಲ್ಲಿಸಲು ಸಕ್ರಿಯ ಪಾತ್ರ ವಹಿಸಬೇಕು.

ನ್ಯಾಯಾಧೀಶರು ಮತ್ತು ವಕೀಲರು ಒಂದೇ ನಾಣ್ಯದ ಎರಡು ಮುಖಗಳಿದ್ದ ಹಾಗೆ. ಒಂದು ಭಾಗ ಸವಕಲಾದರೆ ಆ ನಾಣ್ಯ ಚಲಾವಣೆ ಆಗದು. ಆದ್ದರಿಂದ ಆ ನಾಣ್ಯದ ಎರಡು ಭಾಗಗಳೂ ಚೆನ್ನಾಗಿರುವಂತೆ ನೋಡಿಕೊಳ್ಳುವುದು ನಮ್ಮ ನಿಮ್ಮೆಲ್ಲರ ಜವಾಬ್ದಾರಿ ಹಾಗೂ ಕರ್ತವ್ಯ ಎಂದು ನಾನು ಭಾವಿಸಿದ್ದೇನೆ. ಈ ದಿಸೆಯಲ್ಲಿ ನಾವೆಲ್ಲರೂ ಕಾರ್ಯಪ್ರವೃತ್ತರಾದರೆ, ಮೊದಲಿನಂತೆ ನಮ್ಮ ದೇಶ ಭವ್ಯ ಪರಂಪರೆಯುಳ್ಳ ಪ್ರಗತಿಪರ ಹಾಗೂ ಸದೃಢ ರಾಷ್ಟ್ರವಾಗುವುದರಲ್ಲಿ ಸಂಶಯವಿಲ್ಲ.

**ಟಿಪ್ಪಣಿ-೩ : ವಿದ್ಯಾರ್ಥಿಗಳಿಗೆ ಹಿತವಚನ**

ನ್ಯಾಯಾಧೀಶರ ಪ್ರತಿದಿನದ ಕೆಲಸ ಅಂದರೆ, ವಕೀಲರ ವಾದ-ವಿವಾದಗಳನ್ನು ಕೇಳುವುದು; ನಂತರ ಸೂಕ್ತವಾದ ತೀರ್ಪುಗಳನ್ನು ಕೊಡುವುದು. ಮಾತನಾಡುವ ಅಭ್ಯಾಸವೇ ಇರುವುದಿಲ್ಲ! ಆದರೂ ಈ ದಿನದ ಸಭೆಗೆ ಒಪ್ಪಿ ಬಂದಮೇಲೆ, ಸಂಪ್ರದಾಯದಂತೆ ಕೆಲವು ಮಾತುಗಳನ್ನು ಆಡುವುದು ಅನಿವಾರ್ಯವಾಗಿದೆ.

ಜೀವನದಲ್ಲಿ ವಿದ್ಯಾರ್ಥಿಜೀವನವೆಂಬುದು ತುಂಬಾ ಮಹತ್ವದ ಘಟ್ಟ. ನೀವು ಹೇಗೆ ವಿದ್ಯಾಭ್ಯಾಸ ಮಾಡುತ್ತೀರಿ, ನಿಮ್ಮ ಅಭ್ಯಾಸಗಳೇನು, ನಿಮ್ಮ ಹವ್ಯಾಸಗಳೇನು, ನೀವು ಯಾವ ಯಾವ ವಿಷಯಗಳಲ್ಲಿ ಆಸಕ್ತಿ ತೋರಿಸುತ್ತೀರಿ, ನಿಮ್ಮ ಬೇಕು ಬೇಡಗಳು

ಯಾವುವು, ನೀವು ಯಾವ ಯಾವ ಸದ್ಗುಣಗಳನ್ನು ಹೊಂದಿದ್ದೀರಿ, ನೀವು ಯಾರ ಯಾರ ಸಹವಾಸ ಮಾಡುತ್ತೀರಿ ಎಂಬುದನ್ನು ತಿಳಿದುಕೊಳ್ಳಲು ನಿಮ್ಮ ತಂದೆ-ತಾಯಿಗಳು, ನಿಮ್ಮ ಹಿರಿಯರು ಹೆಚ್ಚಿನ ಆಸಕ್ತಿ ಹೊಂದಿರುತ್ತಾರೆ. ಅದು ಸಂಬಂಧಿಸಿದವರೆಲ್ಲರ ಸಹಜ ಪ್ರವೃತ್ತಿ.

ಆದ್ದರಿಂದ ವಿದ್ಯಾರ್ಥಿಗಳು ಒಳ್ಳೆಯ ಹವ್ಯಾಸಗಳನ್ನು ಬೆಳೆಸಿಕೊಳ್ಳುವುದು, ಒಳ್ಳೆಯವರ ಸಹವಾಸ ಮಾಡುವುದು, ಒಳ್ಳೆಯ ಗುಣಗಳನ್ನು ಅಳವಡಿಸಿಕೊಳ್ಳುವುದು, ತರಗತಿಯಲ್ಲಿ ಒಳ್ಳೆಯ ಅಭ್ಯಾಸದ ಕಡೆ ಒಲವುತೋರುವುದು ಅತಿ ಅವಶ್ಯ.

ವಿದ್ಯಾರ್ಥಿದೆಸೆಯಲ್ಲಿ ಜ್ಞಾನಸಂಪಾದನೆಯೊಂದೇ ಮುಖ್ಯಗುರಿಯಾಗಿರಬೇಕು. ವಿದ್ಯೆಗಾಗಿ ತಪಸ್ಸಿನ ರೀತಿಯಲ್ಲಿ ಸಾಧನೆ ಮಾಡಬೇಕಾಗುತ್ತದೆ. ತಪಸ್ಸೆಂದರೆ ಏಕಾಗ್ರತೆ. ಏಕಾಗ್ರತೆಯಿಂದ ತರಗತಿಗಳಲ್ಲಿ ಪಾಠ ಕೇಳಿದಲ್ಲಿ ಅಥವಾ ಓದಿದಲ್ಲಿ ಅದು ಮನಸ್ಸಿನಲ್ಲಿ ಆಳವಾಗಿ ಉಳಿದು ಪರೀಕ್ಷೆಯಲ್ಲಿ ಪ್ರಶ್ನೆಗಳಿಗೆ ಉತ್ತರ ಬರೆಯಲು ಅನುಕೂಲವಾಗುತ್ತದೆ.

ಒಳ್ಳೆಯ ನಡತೆ ಮತ್ತು ಇತರೆ ಸದ್ಗುಣಗಳನ್ನು ಬೆಳಸಿಕೊಂಡಲ್ಲಿ ನಿಮ್ಮ ಜೀವನದಲ್ಲಿ ತುಂಬಾ ಅನುಕೂಲವಾಗುತ್ತದೆ. Sound mind in a sound body ಎನ್ನುವ ಹಾಗೆ, ವಿದ್ಯಾರ್ಥಿಗಳು ವ್ಯಾಯಾಮ ಮತ್ತು ಯೋಗಾಭ್ಯಾಸಗಳನ್ನು ಮಾಡುವುದು ತೀರ ಅವಶ್ಯ.

ನಾವು ಸಚ್ಚಾರಿತ್ರ್ಯವುಳ್ಳವರಾಗುವುದು ಬಹಳ ಮುಖ್ಯ. ಈ ಬಗೆಗೆ ಇಂಗ್ಲಿಷ್‌ನಲ್ಲಿ ಒಂದು ಮಾತಿದೆ : "If the wealth is lost nothing is lost, if the health is lost some thing is lost, if the character is lost everything is lost". ಆದ್ದರಿಂದ ನಮ್ಮ ನಡತೆ ಸರಿಯಾಗಿರಬೇಕು. ನಮ್ಮ ನುಡಿಯಂತೆ ನಮ್ಮ ನಡೆಯು ಇರಬೇಕು. ವಿದ್ಯಾರ್ಥಿಗಳು ರಾಜಕೀಯದಲ್ಲಿ ತಮ್ಮ ಆಸಕ್ತಿ ತೋರಿಸುವುದು ತಪ್ಪೇನಲ್ಲ. ಆದರೆ ಅದರಲ್ಲಿ ಭಾಗವಹಿಸಿ ತಮ್ಮ ವಿದ್ಯಾರ್ಥಿಜೀವನವನ್ನು ವ್ಯರ್ಥ ಮಾಡಿಕೊಳ್ಳಬಾರದು.

**ಟಿಪ್ಪಣಿ-೪ : ವಕೀಲವೃತ್ತಿ**

ಇನ್ನು ವಕೀಲವೃತ್ತಿಯ ಬಗ್ಗೆ ಹೇಳಬೇಕೆಂದರೆ, ವಕೀಲರಾಗುವವರಿಗೆ ತುಂಬಾ ತಾಳ್ಮೆ ಇರಬೇಕು. ಯಾವುದೇ ಬುದ್ಧಿವಂತ ವಕೀಲರು ಒಂದೇ ಬಾರಿಗೆ ಹಣಗಳಿಸಲು, ಹೆಸರು ಮಾಡಲು ಸಾಧ್ಯವಿಲ್ಲ. ದಿನಗಳು ಕಳೆದಂತೆಲ್ಲಾ ಹಣವನ್ನು ಸಂಪಾದಿಸಬಹುದು; ಹೆಸರನ್ನೂ ಗಳಿಸಬಹುದು. ಈ ತಾಳ್ಮೆ ಎಂತಹದು ಅಂದರೆ Donkey's patience ಇರಬೇಕು! ತಂದೆ ಅಥವಾ ಮಾವ ಅಥವಾ ತಮ್ಮ ಆತ್ಮೀಯ ಜನರು ವಕೀಲರಾಗಿದ್ದಲ್ಲಿ, ಪ್ರಕರಣಗಳನ್ನು ನಡೆಸಲು ಸುಲಭವಾಗಿ ಅವಕಾಶ ಸಿಕ್ಕುತ್ತದೆ. ಆಗ ಹಣವೂ ಬರುತ್ತೆ, ಹೆಸರೂ ಬರುತ್ತೆ. ಬೇರೆಯವರಿಗೆ ಹೆಸರು ಮಾಡಲು ಸ್ವಲ್ಪ ಕಾಲ ಬೇಕಾಗುತ್ತದೆ. ಅದಕ್ಕೆ ನೀವು ಸಿದ್ಧರಾಗಿರಬೇಕು.

ದೇಶದ Highest paid profession is that of an advocate; ಆದರೆ ಡಾಕ್ಟರ್ ಅಥವಾ ಇಂಜಿನಿಯರ್ ಅಲ್ಲ. ಒಬ್ಬ ಡಾಕ್ಟರ್ ಕೆಲವೊಮ್ಮೆ ಒಂದು ಕೇಸಿಗೆ ಜಾಸ್ತಿ ಅಂದರೆ

೨೫ ಸಾವಿರ ರೂಪಾಯಿ ಫೀ ಚಾರ್ಜ್ ಮಾಡಬಹುದು. ಆದರೆ ನಮ್ಮಲ್ಲಿ ಕೆಲವು ಹಿರಿಯ ವಕೀಲರೊಡನೆ ಒಂದು ಸಮಾಲೋಚನೆ (consultation) ಮಾಡಿದಲ್ಲಿ ೫೦ ರಿಂದ ೬೦ ಸಾವಿರ ರೂಪಾಯಿಗಳು ಕೊಡಬೇಕು. ಕೆಲವು ಕೇಸುಗಳಲ್ಲಿ ಲಕ್ಷಾಂತರ ರೂಪಾಯಿ ಫೀಜು ಕೊಡಬೇಕಾಗಿ ಬರಬಹುದು. ಅಂತಹ ಪರಿಸ್ಥಿತಿ ದೆಹಲಿ, ಬೆಂಗಳೂರು, ಚೆನ್ನೈ, ಕೋಲ್ಕತ್ತಾ, ಮುಂಬೈ ಕಡೆಗಳಲ್ಲಿ ಇರುತ್ತದೆ. ಆದರೆ ಈ ಪರಿಸ್ಥಿತಿ ಸಣ್ಣ ಪ್ರದೇಶ ಗಳಲ್ಲಿರುವುದಿಲ್ಲ. ವಕೀಲರು ಸ್ವಲ್ಪ ಪ್ರಯತ್ನಪಟ್ಟರೂ ಸುಖಜೀವನ ನಡೆಸಲು ಯಾವ ತೊಂದರೆಯೂ ಇಲ್ಲ.

**ಟಿಪ್ಪಣಿ-೫ : ವರದಕ್ಷಿಣೆಯ ಪಿಡುಗು**

ಜನಸಂಖ್ಯೆ ಬೆಳೆದಂತೆಲ್ಲ ಸಮಸ್ಯೆಗಳೂ ಜಾಸ್ತಿಯಾಗುತ್ತವೆ. ಅದೇರೀತಿ ಸಮಾಜದಲ್ಲಿ ಅನಿಷ್ಟಗಳೂ ಜಾಸ್ತಿಯಾಗುತ್ತವೆ. ವರದಕ್ಷಿಣೆಯ ಪಿಡುಗು ಜಾಸ್ತಿಯಾಗಿದೆ. ಮದುವೆ ಎಂಬ ಮಾರುಕಟ್ಟೆಯಲ್ಲಿ ಗಂಡಿಗೇ ರೇಟು. ಇಂತಿಂತಹವರಿಗೆ ಇಂತಿಷ್ಟು ವರದಕ್ಷಿಣೆ. ಅವರವರ ಅಂತಸ್ತಿಗೆ ತಕ್ಕ ನಿರ್ಧಾರವಾದಂತಿದೆ. ಡಾಕ್ಟರ್, ಇಂಜಿನಿಯರ್, ಬ್ಯಾಂಕ್ ಆಫೀಸರ್‌ಗಳಲ್ಲದೆ, ಈಗ ವಕೀಲರೂ ಈ ಸಾಲಿನಲ್ಲಿದ್ದಾರೆ. ವರದಕ್ಷಿಣೆ ಪಿಡುಗಿನಿಂದಾಗಿ ನಮ್ಮ ದೇಶದಲ್ಲಿ ಅಮಾಯಕ ಹೆಣ್ಣುಮಕ್ಕಳು ಹಿಂಸೆಗಳಿಗೆ ಗುರಿಯಾಗುತ್ತಿದ್ದಾರೆ. ಇವರಲ್ಲಿ ಕೆಲವರು ಬಲಿಯಾಗುತ್ತಿರುತ್ತಾರೆ.

ಇದನ್ನು ಕೇವಲ ಕಾನೂನಿನಿಂದ ತಡೆಗಟ್ಟಲು ಸಾಧ್ಯವಿಲ್ಲ. ಯುವಕರು, ಯುವತಿಯರು ಈ ಬಗ್ಗೆಗೆ ದೃಢನಿರ್ಧಾರ ತೆಗೆದುಕೊಂಡರೆ ಈ ಪಿಡುಗನ್ನು ಸಾಕಷ್ಟು ಕಡಿಮೆ ಮಾಡಬಹುದು.

ಉತ್ತಮ ಶಿಕ್ಷಣ, ಉತ್ತಮ ಉದ್ಯೋಗ ಅವಕಾಶ, ಅತ್ಯುತ್ತಮ ಸ್ಥಾನ-ಮಾನ- ಇವೆಲ್ಲವನ್ನು ಪಡೆದುಕೊಳ್ಳಲು, ಅದರಿಂದ ಸಮಾಜಕ್ಕೆ ನೆರವಾಗಲು ಯುವಕ-ಯುವತಿ ಯರಿಗೆ ಅಪಾರ ಅವಕಾಶಗಳಿವೆ. ಮೊದಲಿಗೆ ಇಂತಹವರು ಈ ದಿಸೆಯಲ್ಲಿ ತ್ಯಾಗಮಯಿ ಗಳಾಗಬೇಕು; ಇತರರಿಗೆ ಮಾರ್ಗದರ್ಶಕರಾಗಬೇಕು. ಯಾರದೇ ಮಹತ್ವಾಕಾಂಕ್ಷೆಗಳು ಈಡೇರಲು ನೈತಿಕ ನೆಲಗಟ್ಟು ಮುಖ್ಯ. ವರದಕ್ಷಿಣೆ ತ್ಯಾಗವೂ ಒಂದು ಸಮಾಜಸೇವೆಯೇ.

**ಟಿಪ್ಪಣಿ-೬: ನ್ಯಾಯಾಧೀಶನ ಗುಣ-ಸ್ವಭಾವಗಳು**

ನ್ಯಾಯಾಧೀಶನ ನಡೆ-ನುಡಿ ಒಂದಾಗಿರಬೇಕು. ನ್ಯಾಯಧೀಶನು ಮಿತಭಾಷಿಯಾಗಿದ್ದು, 'ನುಡಿದರೆ ಮುತ್ತಿನಹಾರದಂತಿರಬೇಕು' ಎಂಬ ಅಣ್ಣನ ವಚನದಂತೆ, ತೂಕದ, ಎಲ್ಲರ ಹಿತದ ನುಡಿ ಇರಬೇಕು.

ಮನಸ್ಸಿನಲ್ಲಿ ಬಂದಿದ್ದನ್ನೆಲ್ಲಾ ನಾಲಿಗೆಗೆ ಹೊರಹಾಕಲು ಕೊಡಬಾರದು. ನಾಲಿಗೆಯ ಮೇಲೆ ಹತೋಟಿ ಇರಬೇಕು. ಹತೋಟಿ ತಪ್ಪಿದಲ್ಲಿ ತಾನೂ ಇಲ್ಲಸಲ್ಲದ ಅಪಾದನೆಗೆ ಗುರಿಯಾಗುವ ಅಪಾಯದ ಸಂಭವ ಉಂಟು.

ತನ್ನ ನಡವಳಿಕೆ ಸಂಶಯಾತೀತವಾಗಿರಬೇಕು. ತನ್ನ ಬದುಕು ತೆರೆದ ಪುಸ್ತಕದಂತಿದ್ದು, ಈಚಲಗಿಡದ ಅಡಿಯಲ್ಲಿ ಮಜ್ಜಿಗೆ ಕುಡಿದರೂ ಹೆಂಡ ಕುಡಿದರೆಂಬ ಸಂಶಯಕ್ಕೆ ಅವಕಾಶ ಇರಬಾರದು.

ಸ್ವಚ್ಛ ಕನ್ನಡಿಯಂತಿರಬೇಕು.

ಶಾಂತಚಿತ್ತನೂ ಸಮಾಧಾನಿಯೂ ಆಗಿರಬೇಕು.

ನೊಂದವರ, ಬೆಂದವರ ದುಃಖ, ಮನಸ್ಸಿನ ಆತಂಕ, ದುಗುಡ-ದುಮ್ಮಾನಗಳನ್ನು ಅವರ ಸ್ಥಾನದಲ್ಲಿ ನಿಂತು ಅರಿಯಬೇಕು.

ನ್ಯಾಯದಾನ ಕೇವಲ ಯಾಂತ್ರಿಕ ಕಾನೂನನ್ವಯವಾಗಿರದೆ, ನ್ಯಾಯ, ನೀತಿ, ಧರ್ಮ, ಅಂತಃಕರಣ, ದಯೆ, ಮಾನವೀಯತೆಗಳ ಆಧಾರದ ಮೇಲಿರಬೇಕು.

* * *

ಪ್ರಸಾದ್ ಅವರಿಗೆ ಪ್ರಿಯರಾದ ಹಾಗೂ ಅವರ ವೃತ್ತಿಜೀವನದಲ್ಲಿ ಪ್ರೇರಣೆನೀಡಿದ ಹಿಂದಿನಕಾಲದ ನ್ಯಾಯಾಧೀಶರಲ್ಲಿ ಮ್ಯಾಥ್ಯೂ ಹೇಲ್ ಸಹಾ ಒಬ್ಬರು. ಮ್ಯಾಥ್ಯೂ ಅವರ ಮಾರ್ಗದರ್ಶನಸೂತ್ರಗಳನ್ನು ಅವರು ತಮ್ಮ ಟಿಪ್ಪಣಿಯಲ್ಲಿ ಗುರುತುಹಾಕಿಕೊಂಡುದು ಕಂಡುಬರುತ್ತದೆ. ಅದು ಇಂತಿದೆ:

೧೭ನೇ ಶತಮಾನದಲ್ಲಿ ನ್ಯಾಯಾಧೀಶ ಮ್ಯಾಥ್ಯೂ ಹೇಲ್ ಅವರು ನ್ಯಾಯಾಧೀಶರಿಗೆ ಹಾಕಿಕೊಟ್ಟ ಮಾರ್ಗದರ್ಶನಸೂತ್ರಗಳು:

೧. ನ್ಯಾಯನಿರ್ವಹಣೆಯ ಈ ಕಾರ್ಯಗಳನ್ನು ದೇವರು, ಸರ್ಕಾರ ಮತ್ತು ದೇವರ ಸಲುವಾಗಿ ನನಗೆ ನಂಬಿಕೆಯಿಂದ ವಹಿಸಿಕೊಡಲಾಗಿದೆ. ಆದ್ದರಿಂದ

೨. ಅದನ್ನು-

i. ಪ್ರಾಮಾಣಿಕವಾಗಿ

ii. ಸಾವಧಾನವಾಗಿ ವಿಚಾರಮಾಡಿ, ಮತ್ತು

iii. ದೃಢನಿಶ್ಚಯದಿಂದ

ನೆರವೇರಿಸುವುದಕ್ಕಾಗಿ-

೩. ನಾನು ಕೇವಲ ನನ್ನ ಬುದ್ಧಿಶಕ್ತಿ ಹಾಗೂ ಸಾಮರ್ಥ್ಯಗಳನ್ನಷ್ಟೇ ಅವಲಂಬಿಸದೆ, ದೈವನಿರ್ದೇಶ ಮತ್ತು ಭಗವತ್‌ಶಕ್ತಿಯ ಮೇಲೆ ಭಾರವಿಡುತ್ತೇನೆ.

೪. ನ್ಯಾಯನಿರ್ವಹಣೆಯ ಸಮಯದಲ್ಲಿ ನನ್ನ ಸ್ವಂತ ಪೂರ್ವಗ್ರಹಗಳನ್ನು ಬದಿಗಿರಿಸುತ್ತೇನೆ ಮತ್ತು ಅವೆಷ್ಟೇ ಕುಟಿಲ ಸ್ವರೂಪದವುಗಳಾಗಿದ್ದರೂ ಅವಕ್ಕೆ ನಾನು ಆಸ್ಪದವನ್ನು ಕೊಡುವುದಿಲ್ಲ.

೫. ನನ್ನ ಮುಂದಿರುವ ವ್ಯವಹಾರದ ಬಗೆಗೆ ನಾನು ಪೂರ್ಣತತ್ಪರನಾಗಿರುತ್ತೇನೆ. ಮಿಕ್ಕ ಎಲ್ಲ ವ್ಯವಹಾರಗಳನ್ನು ಮತ್ತು ಆಲೋಚನೆಗಳನ್ನು ಅಸಮಂಜಸವೆಂದು ಮತ್ತು ಅಡೆತಡೆಗಳೆಂದು ನಾನು ತಳ್ಳಿಹಾಕುತ್ತೇನೆ.

೬. ವ್ಯವಹಾರವು ಪೂರ್ಣವಾಗಿ ಮುಗಿಯುವವರೆಗೆ ಮತ್ತು ಎರಡೂ ಪಕ್ಷದವರ ಅಹವಾಲನ್ನು ಕೇಳುವವರೆಗೆ, ನಾನು ಯಾವುದೇ ತೀರ್ಮಾನಕ್ಕೆ ಬರುವುದಿಲ್ಲ.

೭. ಮೊಕದ್ದಮೆಯ ಪ್ರಾರಂಭದಲ್ಲಿಯೇ ಯಾವುದೇ ನಿಶ್ಚಯಕ್ಕೆ ಬಾರದೇ ಯಾವ ಪೂರ್ವಗ್ರಹಕ್ಕೂ ಒಳಗಾಗದೆ ಅಹವಾಲನ್ನು ಪೂರ್ಣವಾಗಿ ಕೇಳುವವರೆಗೂ ನಾನು ಕಾಯುತ್ತೇನೆ.

೮. ಮರಣದಂಡನೆಯನ್ನು ಒಳಗೊಳ್ಳುವ ಅಪರಾಧಗಳ ಸಂದರ್ಭದಲ್ಲಿ ನನ್ನ ಸ್ವಭಾವವು ಕರುಣೆಯನ್ನು ತೋರಲು ಪ್ರೇರೇಪಿಸಿದರೂ ದೇಶಕ್ಕೂ ಕರುಣೆ ಸಲ್ಲಬೇಕಾಗಿದೆ ಎಂಬುದನ್ನು ನಾನು ಪರಿಗಣಿಸುತ್ತೇನೆ.

೯. ಆಗಿರುವ ಹಾನಿಯೆಲ್ಲ ತೀರ್ಮಾನದ ವಿಭಿನ್ನತೆಯಾಗಿರುವಾಗ, ಸಂಪೂರ್ಣವಾಗಿ ಮನಸ್ಸಾಕ್ಷಿಗೆ ಸಂಬಂಧಿಸಿದ ವಿಷಯಗಳಲ್ಲಿ ನಾನು ಅತಿಶಯವಾಗಿ ಪಟ್ಟುಹಿಡಿಯುವುದಿಲ್ಲ.

೧೦. ನ್ಯಾಯದ ವಿಷಯ ಬಂದಾಗ ಬಡವರಿಗೆ ಅನುಕಂಪವನ್ನು ಅಥವಾ ಶ್ರೀಮಂತರಿಗೆ ಒಲವನ್ನು ನಾನು ತೋರಿಸುವುದಿಲ್ಲ.

೧೧. ಜನಸಾಮಾನ್ಯರು ಮೆಚ್ಚುವುದು ಅಥವಾ ಮೆಚ್ಚದಿರುವುದು, ನ್ಯಾಯದಾನ ಮಾಡುವಲ್ಲಿ ನಾನು ಮಾಡುವ ಯಾವುದರ ಮೇಲೂ ಯಾವ ಪ್ರಭಾವವನ್ನೂ ಬೀರುವುದಿಲ್ಲ.

೧೨. ನ್ಯಾಯಸೂತ್ರಗಳಿಗೆ ಅನುಗುಣವಾಗಿ ನಾನು ಚಾಚೂ ತಪ್ಪದೆ ನಡೆಯುತ್ತಿರುವವರೆಗೂ ಜನ ಏನೆನ್ನಬಹುದು, ಏನೆಂದು ಯೋಚಿಸಬಹುದು ಎಂಬುದರ ಬಗೆಗೆ ನಾನು ತವಕಪಡುವುದಿಲ್ಲ.

೧೩. ಅಪರಾಧಿಗಳ ಸಂದರ್ಭದಲ್ಲಿ ಯಾವುದಾದರೂ ಸಂದೇಹಕ್ಕೆ ಅವಕಾಶವಿದ್ದರೆ, ದಯೆ ಹಾಗೂ ಖುಲಾಸೆಯ ಕಡೆಗೆ ನಾನು ವಾಲುತ್ತೇನೆ.

೧೪. ಯಾವುದೇ ಹಾನಿಉಂಟುಮಾಡಿರದ ಕೇವಲ ಬಾಯಿಮಾತಿನ ಅಪರಾಧಗಳ ಸಂದರ್ಭದಲ್ಲಿ ಸೌಮ್ಯತೆ ಅನ್ಯಾಯವಾಗದು.

೧೫. ರಕ್ತಪಾತದ ಅಪರಾಧಗಳ ಸಂದರ್ಭದಲ್ಲಿ ಸಂಗತಿಗಳು ಸ್ಪಷ್ಟವಾಗಿದ್ದರೆ ನಿಷ್ಠುರತೆಯೇ ನ್ಯಾಯ.

೧೬. ನನ್ನ ಮುಂದಿರುವ ವಿಷಯಗಳಿಗೆ ಸಂಬಂಧಿಸಿದ ಯಾವುದೇ ಖಾಸಗಿ ಪ್ರಾರ್ಥನೆಗಳನ್ನು, ಅವು ಯಾರಿಂದಲೇ ಬಂದಿರಲಿ ಅಥವಾ ಎಂಥವೇ ಆಗಿರಲಿ, ನಾನು ಹೇಯವೆಂದು ಭಾವಿಸುತ್ತೇನೆ.

೧೭. ನನ್ನ ನೌಕರರು ಯಾವ ವಿಷಯದಲ್ಲಿಯೇ ಆಗಲಿ ಕೈಹಾಕದಂತೆ ಮೊಕದ್ದಮೆಗಳನ್ನು ವಿಚಾರಣೆಗೆ ತೆಗೆದುಕೊಳ್ಳುವಲ್ಲಿ ತಾರತಮ್ಯ ಮಾಡದಂತೆ, ನ್ಯಾಯವಾದಿಗಳ ಬಗೆಗೆ ಶಿಫಾರಸ್ಸು ಮಾಡದಂತೆ ನಾನು ಅವರಿಗೆ ಆಜ್ಞೆಮಾಡುತ್ತೇನೆ.

೧೮. ನಾನು ಮಾಡಬೇಕಾದ ಕರ್ತವ್ಯದ ಬಗೆಗೆ ದಕ್ಷನಾಗಿರುವುದಕ್ಕಾಗಿ, ನನ್ನ ಊಟೋಪಚಾರ ಗಳಲ್ಲಿ ನಾನು ಹಿತಮಿತವಾಗಿರುತ್ತೇನೆ.

**ಟಿಪ್ಪಣಿ-೭ : ಪುಸ್ತಕ ಸಂಸ್ಕೃತಿ**

'ಪುಸ್ತಕಗಳು ಭೂಲೋಕದ ಕಾಮಧೇನು ಕಲ್ಪವೃಕ್ಷ' - ಕುವೆಂಪು.

ಅಸತೋಮ ಸದ್ಗಮಯ
ತಮಸೋಮ ಜ್ಯೋತಿರ್ಗಮಯ
ಮೃತ್ಯೋರ್ಮ ಅಮೃತಂಗಮಯ
ಓಂ ಶಾಂತಿ ಶಾಂತಿ ಶಾಂತಿಃ

ಮಹತ್ವದ ಬೆಳಕಿನ ಹಬ್ಬವಾದ ದೀಪಾವಳಿಯು ಜಗತ್ತನ್ನು ಅಂಧಕಾರದಿಂದ ಬೆಳಕಿನೆಡೆಗೆ ಕೊಂಡೊಯ್ಯುವ ಹಬ್ಬ; ಜನರ ಮನೆ ಮನಗಳಲ್ಲಿ ಬೆಳಕು ತುಂಬುವ ಹಬ್ಬ; ಭಾರತೀಯ ಸಂಸ್ಕೃತಿಯ ಸಂಕೇತವೂ ಕೂಡ.

ಕೋಟ್ಯಾಂತರ ಭಕ್ತರ ಅರಾಧ್ಯದೈವ ಶ್ರೀ ಮಂಜುನಾಥೇಶ್ವರಸ್ವಾಮಿಯವರ ಪುಣ್ಯಕ್ಷೇತ್ರ ಮತ್ತು ಸರ್ವಧರ್ಮಗಳ ಸಮನ್ವಯಕೇಂದ್ರ ಧರ್ಮಸ್ಥಳದಲ್ಲಿ ಈ ಶುಭದಿನದಂದು ಕನ್ನಡ ಸಂಸ್ಕೃತಿ ಭಾಗವಾದ ಪುಸ್ತಕ ಸಂಸ್ಕೃತಿಯನ್ನು ಕುರಿತ ಉಪನ್ಯಾಸವನ್ನು, 'ಪರೋಪಕಾರ್ಥಮಿದಂ ಶರೀರಂ' ಎಂಬ ಸೂಕ್ತಿಯನ್ನು ಮತ್ತು ಕಾಯಕವೇ ಕೈಲಾಸ ಎಂಬ ಶರಣರ ವಾಣಿಯನ್ನು ಅಕ್ಷರಶಃ ಸಾಕಾರಗೊಳಿಸುತ್ತಿರುವ ಪೂಜನೀಯ ಪದ್ಮಭೂಷಣ ಡಾ. ವೀರೇಂದ್ರ ಹೆಗ್ಗಡೆ ಅವರ ನೇತೃತ್ವ ಮತ್ತು ಸಾನ್ನಿಧ್ಯದಲ್ಲಿ ಏರ್ಪಡಿಸಿರುವುದು ಸಂತೋಷದ ವಿಷಯ.

ಋಷಿ-ಮುನಿಗಳು ರಚಿಸಿದ ಭಾರತೀಯ ಸಂಸ್ಕೃತಿಯ ಭಾಗವಾದ ಅಮೂಲ್ಯ ವೇದ-ಉಪನಿಷತ್ತುಗಳು ಆ ನಂತರ ಬರವಣಿಗೆಯ ರೂಪದಲ್ಲಿ ಕಂಡುಬಂದವು. ಮುಂದೆ ಜನಸಾಮಾನ್ಯರ ಅನುಭವದ ಭಟ್ಟಿಯಲ್ಲಿ ಮೂಡಿಬಂದ ನುಡಿಮುತ್ತುಗಳು ಜನಪದ ಸಂಸ್ಕೃತಿಯಾಗಿ ಬೆಳೆದು ಪುಸ್ತಕಸ್ವರೂಪ ಪಡೆದವು. ಅದೇ ಪುಸ್ತಕ ಸಂಸ್ಕೃತಿ. 'ಪುಸ್ತಕ ಸಂಸ್ಕೃತಿ' ಎಂಬ ಸುಂದರ ಪದ-ಪುಂಜಗಳ ಜನಕ ಡಾ.ಹಾ.ಮಾ.ನಾಯಕರು, ಇದನ್ನು ತಮ್ಮ 'ಪುಸ್ತಕ ಸಂಸ್ಕೃತಿ' ಎಂಬ ಪುಸ್ತಕದಲ್ಲಿ ಸೂಚ್ಯವಾಗಿ ಪ್ರಸ್ತಾಪಿಸಿದ್ದಾರೆ. ಪ್ರಾತಃ ಸ್ಮರಣೀಯರಾದ ಅತ್ತಿಮಬ್ಬೆ ಜೈನಧರ್ಮದ ಅಮೂಲ್ಯ ಕೃತಿಗಳ ಪ್ರತಿಗಳನ್ನು ಮಾಡಿಸಿ ದಾನಮಾಡುತ್ತಿದ್ದರಂತೆ. ಅವರ ಪುಸ್ತಕದಾನ ಈಗಲೂ ಒಂದು ಆದರ್ಶವಾಗಿ ಉಳಿದಿದೆ.

ಮುದ್ರಣ ಸೌಲಭ್ಯ ಬಂದಮೇಲೆ ಪುಸ್ತಕಗಳು ರಾಶಿಗಟ್ಟಲೆ ಹೊರಬರಲಾರಂಭಿಸಿದವು. ಬಂಗಾಲದ ಸೆರಾಮ್‌ಪುರದಲ್ಲಿ ಮೊದಲ ಪುಸ್ತಕ ಅಚ್ಚಾಯಿತು. ನಮ್ಮ ಕನ್ನಡದ ಮೊದಲನೆಯ ಪುಸ್ತಕವೂ ಅಲ್ಲಿಯೇ ಅಚ್ಚಾಯಿತು. ಮುಂದೆ ಪುಸ್ತಕ ಪ್ರಕಾಶನ ಒಂದು ಉದ್ದಿಮೆಯಾಗಿ ಬೆಳೆಯಿತು.

ಕನ್ನಡ ಸಾಹಿತ್ಯಕ್ಷೇತ್ರಕ್ಕೆ ಹಿರಿಯ ಸಾಹಿತಿ ಪ್ರೊ.ಚಂದ್ರಯ್ಯನಾಯಿಡು ಅವರ ಕೊಡುಗೆ ಗಣನೀಯವಾಗಿದೆ. ಇವರು ಅನೇಕ ಅಮೂಲ್ಯ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸುತ್ತಿದ್ದಾರೆ. ಇವರು ಪುಸ್ತಕಪ್ರೇಮಿಯೂ ಹೌದು. ಇವರ ಮನೆಯಲ್ಲಿನ ಗ್ರಂಥಭಂಡಾರದಲ್ಲಿ ೧೫ ಸಾವಿರಕ್ಕೂ ಹೆಚ್ಚು ಪುಸ್ತಕಗಳ ಸಂಗ್ರಹವಿದ್ದು, ನಾಡಿನ ಅನೇಕ ಸಾಹಿತಿಗಳ ಅನೇಕ ಪ್ರಕಾರಗಳಿಗೆ ಸೇರಿದ ಸಾಹಿತ್ಯದ ಪುಸ್ತಕಗಳಿವೆ. ಇವು ನಿಜಕ್ಕೂ ಅಮೂಲ್ಯ ಮತ್ತು ಅಪರೂಪದ ಪುಸ್ತಕಗಳು. ಇವರ ಮನೆಯೇ ಒಂದು ಸಣ್ಣ ವಿಶ್ವವಿದ್ಯಾಲಯ. ತಮ್ಮ ಮನೆಯಲ್ಲಿನ ಪುಸ್ತಕಭಂಡಾರದಿಂದ ಓದುಗರಿಗೆ ಪುಸ್ತಕಗಳನ್ನು ತಲುಪಿಸುವ ಔದಾರ್ಯದ ಮನೋಭಾವ, ಹೃದಯ ವೈಶಾಲ್ಯತೆ ಇವರದು. ಇವರ ಶ್ರೀಮತಿ, ಸಾಹಿತಿ ವಾಣಿಯವರೂ ನಾಯಿಡು ಅವರ ಜೊತೆ ಈ ಸತ್ಕಾರ್ಯದಲ್ಲಿ ಕೈಜೋಡಿಸಿ ಪುಸ್ತಕಪ್ರೇಮ, ಸಾಹಿತ್ಯಪ್ರೇಮಗಳನ್ನು ಮೆರೆದಿದ್ದಾರೆ.

ಸಾಮಾನ್ಯವಾಗಿ ವಿದ್ಯಾರ್ಥಿಯಾಗಲಿ, ಅಧ್ಯಾಪಕರಾಗಲಿ ಅಗತ್ಯ ಬಿದ್ದಾಗಲಷ್ಟೆ ಪುಸ್ತಕ ಭಂಡಾರಕ್ಕೆ ಹೋಗುತ್ತಾರೆ. ಪುಸ್ತಕಗಳನ್ನು ಎರವಲು ಪಡೆಯುತ್ತಾರೆ. ಆದರೆ ಪುಸ್ತಕಗಳನ್ನು ಕೊಳ್ಳುವುದು, ಮನೆಯಲ್ಲಿ ಒಂದು ಪುಸ್ತಕಭಂಡಾರವನ್ನು ಬೆಳೆಸುವುದು ಬಹುಜನರಿಗೆ ಬೇಕಾಗಿಲ್ಲ. ಅವರಿಗೆ ಪುಸ್ತಕಗಳನ್ನು ಕೊಳ್ಳುವುದು ದುಬಾರಿ ಹವ್ಯಾಸ. ಕೊಳ್ಳುವ ಶಕ್ತಿಯುಳ್ಳ ಅನೇಕ ಶ್ರೀಮಂತರು ಪುಸ್ತಕಗಳನ್ನು ಕೊಳ್ಳುವ ಮನಸ್ಸು ಮಾಡುವುದಿಲ್ಲ. ಆದರೆ ಅಪಾರ ಬೆಲೆಯ ಇತರೆ ವಸ್ತುಗಳನ್ನು ಖರೀದಿಮಾಡಿ ಅವುಗಳನ್ನು ಬಂದ ಜನರಿಗೆ ತೋರಿಸಿ ಸಂತೋಷಪಡುವ ಮನೋಧರ್ಮದವರು. ಪುಸ್ತಕಗಳನ್ನು ಓದುವುದರಿಂದ ನಮ್ಮ ರಾಜ್ಯದ, ದೇಶದ ಮತ್ತು ಹೊರರಾಷ್ಟ್ರಗಳ ಸಂಸ್ಕೃತಿ, ನಾಗರಿಕತೆಗಳನ್ನು ತಿಳಿದು ಕೊಳ್ಳಲು ಸಹಾಯವಾಗುತ್ತದೆ. ಒಂದೊಂದು ಪುಸ್ತಕಭಂಡಾರಕ್ಕೆ ಭೇಟಿ ಕೊಟ್ಟಾಗ, ಅಲ್ಲಿನ ಅಸಂಖ್ಯಾತ ಪುಸ್ತಕಗಳನ್ನು ನೋಡಿದಾಗ ಅವುಗಳನ್ನು ಓದಲು ಹಲವಾರು ಜನ್ಮಗಳೇ ಬೇಕಾಗಬಹುದು ಎಂದೆನಿಸುತ್ತದೆ.

ಶ್ರೀ ಕೋಲೆರಿಜ್ ಅವರು ಓದುಗರ ನಾಲ್ಕುವರ್ಗಗಳನ್ನು ಗುರುತಿಸಿದ್ದಾರೆ :

೧. ಕೆಲವರಿಗೆ ಓದು ಓದಿಗಾಗಿ ಮಾತ್ರ. ಇವರ ಮೇಲೆ ಓದಿನ ಪ್ರಭಾವ ಯಾವ ರೀತಿಯಲ್ಲೂ ಆಗಿರುವುದಿಲ್ಲ. ಇವರು ಸಮಯ ಕಳೆಯುವ ಸಲುವಾಗಿ ಓದುತ್ತಾರೆ. ಇಂತಹವರಿಗೆ ಕಣ್ಣಿನ ಕ್ರಿಯೆಯೇ ಹೊರತು ಮನಸ್ಸಿನ ಪ್ರಕ್ರಿಯೆಯಲ್ಲ.

೨. ಕೆಲವು ಓದುಗರು ಪುಸ್ತಕಗಳಲ್ಲಿ ಇರುವ ವಿಷಯಗಳನ್ನು ಉರುಹೊಡೆಯುತ್ತಾರೆ. ಉದಾಹರಣೆಗೆ, ಪರೀಕ್ಷೆಗಾಗಿ ಬಾಯಿಪಾಠ ಮಾಡುವ ವಿದ್ಯಾರ್ಥಿಗಳು.

೩. ಇನ್ನೂ ಕೆಲವರು ಪುಸ್ತಕಗಳಲ್ಲಿರುವ ಮುಖ್ಯವಾದ ವಿಷಯಗಳನ್ನೇ ಬಿಟ್ಟು ಗೌಣವಾದ ವಿಷಯಗಳನ್ನು ತಲೆಯಲ್ಲಿ ಉಳಿಸಿಕೊಳ್ಳುತ್ತಾರೆ.

೪. ಆನೇ ವರ್ಗದ ಓದುಗರು ಪ್ರತ್ಯುತ್ಪನ್ನಮತಿಗಳು; ಪ್ರತಿಫಲಿಸುವ ವಜ್ರಗಳು. ಓದುಗಾರಿಕೆಯ ಶ್ರೇಷ್ಠತೆಯೆಲ್ಲಾ ಇಲ್ಲಿ ಹೊಳೆಯುತ್ತದೆ; ಮಾಧುರ್ಯ, ಬೆಳಕುಗಳು

ಕಾಣಿಸಿಕೊಳ್ಳುತ್ತವೆ. ಇದು ಕ್ರಿಯಾತ್ಮಕವಾದ ಓದು. ಸೃಜನಶೀಲತೆ ಇಲ್ಲಿ ಉಸಿರಾಡುತ್ತದೆ. ಆದುದರಿಂದ ನಿಜವಾದ ಓದು ಮನುಷ್ಯನನ್ನು ವಜ್ರವನ್ನಾಗಿಸುತ್ತದೆ. ಬೆಳಕು ಅಲ್ಲಿ ಪ್ರತಿಫಲಿಸುತ್ತದೆ. (ಡಾ.ಹಾ.ಮಾ.ನಾಯಕ : ಸೂಲಂಗಿ).

ಡಾ.ಹಾ.ಮಾ.ನಾಯಕರು ಹೀಗೆ ಹೇಳುತ್ತಾರೆ : ಪುಸ್ತಕಗಳು ನಮ್ಮ ಬದುಕಿನ ಅವಿಭಾಜ್ಯ ಅಂಗಗಳಾಗದೆ ಹೋದರೆ ನಾವು ಕಲಿತಿದ್ದಕ್ಕೆಲ್ಲ ಬೆಲೆ ಇಲ್ಲವಾಗುತ್ತದೆ. ಕಲಿತಿದ್ದು ಬೆಳೆಯಬೇಕು. ಅದಕ್ಕೆ ಪೋಷಣೆ ಪುಸ್ತಕಗಳಿಂದ. ಸಾರ್ಥಕವಾಗಿ ಸಮಯ ಕಳೆಯಲು ಪುಸ್ತಕಗಳಿಗಿಂತ ಬೇರೆ ಸಂಗಾತಿಗಳು ಯಾರು ಸಿಕ್ಕುತ್ತಾರೆ? 'ಹೊತ್ತು ಹೋಗುವುದೆನಗೆ ಸತ್ತವರ ಸಂಗದಲಿ' ಎಂಬುದು ಕವಿಯ ಮಾತು. ಶತಮಾನಗಳ ಹಿಂದೆ ಆಗಿಹೋದ ಮಹಾಚೇತನಗಳ ಗೆಳೆತನ ನಮಗೆ ಉಂಟಾಗುವುದು ಪುಸ್ತಕಗಳ ಮೂಲಕ ಮಾತ್ರ.

ಪುಸ್ತಕಗಳು ನಮ್ಮ ದಾರಿ; ನಮ್ಮ ಬೆಳಕು. ನಮಗೆ ಅವು ಗುರಿ ತೋರಿಸುತ್ತವೆ; ನಮ್ಮ ಅನುಭವಗಳನ್ನು ವಿಸ್ತಾರಗೊಳಿಸುತ್ತವೆ; ಆಲೋಚನೆಗಳನ್ನು ಒರೆಗೆ ಹಚ್ಚುತ್ತವೆ. ಜ್ಞಾನವೆ? ಮನರಂಜನೆಯೆ? ಆಧ್ಯಾತ್ಮವೆ? ಯಾವುದು ಬೇಕು ನಿಮಗೆ? ಅವೆಲ್ಲ ಪುಸ್ತಕಗಳ ಮೂಲಕ ನಿಮ್ಮಲ್ಲಿಗೆ ಬರುತ್ತವೆ. ಆದರೂ ನಮ್ಮ ಜನರ ಒಲವು ಪುಸ್ತಕಗಳ ಕಡೆ ಹರಿದಿಲ್ಲ. ಪಠ್ಯಪುಸ್ತಕಗಳನ್ನು ಬಿಟ್ಟು ಬೇರೆ ಪುಸ್ತಕ ಓದುವವರಿಲ್ಲ. ಕೊನೆಗೆ ಪಠ್ಯಪುಸ್ತಕಗಳನ್ನಾದರೂ ಓದಿದ್ದಾರೆಂಬ ಭರವಸೆ ಇಲ್ಲ.

ಪುಸ್ತಕಗಳ ಬಗೆಗೆ ನಮ್ಮ ತಾತ್ಸಾರ ನಮ್ಮ ರಾಷ್ಟ್ರೀಯ ದೌರ್ಬಲ್ಯ. ಶ್ರೀಮಂತರು ಹೃದಯಶ್ರೀಮಂತರಾಗಿದ್ದಾರೆಂಬುದನ್ನು ತೋರಿಸಲು, ನಾಗರಿಕರು ಸಂಸ್ಕೃತಿಹೀನರಲ್ಲ ಎಂಬುದನ್ನು ದೃಢಪಡಿಸಲು, ವಿದ್ಯಾವಂತರು ಕೇವಲ ಅಕ್ಷರಸ್ಥರಲ್ಲ ಎಂಬುದನ್ನು ರುಜುವಾತುಗೊಳಿಸಲು ಒಳ್ಳೆಯ ಪುಸ್ತಕಗಳು ರಾಶಿ ರಾಶಿ ಅವರ ನಡುಮನೆಯಲ್ಲಿ ತುಂಬಬೇಕು. ಪುಸ್ತಕಗಳೂ ಸಂಪತ್ತು ಎಂಬ ಭಾವನೆ ಅವರಲ್ಲಿ ಬೆಳೆಯಬೇಕು.(ಸೂಲಂಗಿ).

ಪ್ರೊ. ಚಂದ್ರಯ್ಯನಾಯಿಡು ಅವರು ತಮ್ಮ 'ಶಿಕ್ಷಕರು ಮತ್ತು ಪುಸ್ತಕಗಳು' ಲೇಖನದಲ್ಲಿ ಈ ರೀತಿ ಹೇಳುತ್ತಾರೆ : 'ಪುಸ್ತಕಗಳಿಲ್ಲದಿದ್ದರೆ ದೇವರೇ ಮೂಕವಾಗಿ ಬಿಡುತ್ತಾನೆ; ನ್ಯಾಯದೇವತೆ ನಿದ್ರಿಸುತ್ತಾಳೆ; ವಿಜ್ಞಾನ ಸ್ಥಗಿತಗೊಳ್ಳುತ್ತದೆ; ತತ್ವಜ್ಞಾನ ಕುಂಟುತ್ತದೆ; ಸಾಹಿತ್ಯ ಅರ್ಥಹೀನವಾಗುವುದು; ಉಳಿದೆಲ್ಲವೂ ಅಂಧಕಾರದಲ್ಲಿ ಅಡಗಿಬಿಡುತ್ತದೆ'. ಈ ಮಾತು ಪುಸ್ತಕಗಳ ಮಹತ್ವವನ್ನು ಸಾರುತ್ತಿದ್ದರೂ ನಮ್ಮಲ್ಲಿ ಪುಸ್ತಕಗಳನ್ನು ಓದುವ ಸಂಸ್ಕೃತಿ ಬಹಳ ಕಡಿಮೆಯಾಗುತ್ತಿರುವುದು ವಿಷಾದದ ಸಂಗತಿ.

ಪುಸ್ತಕಗಳು ಒಂದು ದೇಶ, ಜನಾಂಗದ ಸಂಸ್ಕೃತಿ, ಸಾಹಿತ್ಯ, ನಂಬಿಕೆ, ಲೋಕಾರೂಢಿಗಳನ್ನು ಎತ್ತಿ ಹಿಡಿಯುವಂತಹವು. ಅವು ಅಜ್ಞಾನದ ಅರಿವನ್ನು ನೀಡುವ ದೀವಿಗೆಗಳಿದ್ದ ಹಾಗೆ. ಅಲ್ಲಿ ಬದುಕಿಗೆ ಬೇಕಾದ ಏನೆಲ್ಲವೂ ದೊರೆಯುತ್ತವೆ. ಬಗೆ ಬಗೆಯಾದ ಪುಸ್ತಕಗಳು ನಮ್ಮ ಮನವನ್ನು ಅರಳಿಸುತ್ತವೆ. ಅದರ ಮಧುರತೆಯನ್ನು ವಿದ್ಯಾರ್ಥಿಗಳೂ

ಸವಿಯಬಹುದು. ಗೆಳೆಯರು, ಮಿತ್ರರು, ಬಂಧುಗಳು, ಆಪ್ತರು ಕೊಡಲಾಗದ ಜ್ಞಾನದ ಗೆಳೆತನವನ್ನು ಪುಸ್ತಕಗಳು ನೀಡುತ್ತವೆ. ಪುಸ್ತಕಗಳೆಂಬ ಗೆಳೆಯರು ಇರುವ ತಾಣವೇ ಸ್ವರ್ಗಸಮಾನ. ಸಾಕ್ರಟಿಸ್‌ಗೆ ಪುಸ್ತಕಗಳೆಂದರೆ ಪಂಚಪ್ರಾಣ. ತನ್ನ ಎಲ್ಲ ಸಂಪತ್ತೂ ಅವುಗಳಲ್ಲಿಯೇ ಇದೆಯೆಂದು ಅವನು ಹೇಳುತ್ತಿದ್ದನು. ತನ್ನ ಗ್ರಂಥಾಲಯವು ತನ್ನ ವಿಚಾರಗಳ ಹೆರಿಗೆಯ ಸ್ಥಳವೆಂದು ಅವನು ತಿಳಿದಿದ್ದನು. ಸಾವಿರಾರು ವರ್ಷಗಳ ಜ್ಞಾನ ಒಂದು ಪುಟ್ಟ ಗ್ರಂಥಾಲಯದಲ್ಲಿ ಸಂಗ್ರಹವಾಗಿರುತ್ತದೆ. ಅಲ್ಲಿ ಮನುಷ್ಯನ ಮನಸ್ಸನ್ನು ಪ್ರಸನ್ನಗೊಳಿಸುವ ಜ್ಞಾನಿಗಳ ಸಹವಾಸ ಅವನಿಗೆ ಲಭಿಸುತ್ತದೆ. ನಾಗರಿಕ ಜಗತ್ತಿನ ವಿವೇಕ-ವಿನೋದ ಎಲ್ಲವೂ ಅವನಿಗೆ ಅಲ್ಲಿ ಸಿಕ್ಕುತ್ತವೆ. ಪುಸ್ತಕಗಳ ಸಹಾಯದಿಂದ ಮನುಷ್ಯನೂ ದೊಡ್ಡವನಾಗಿ ತನ್ನ ವಿವೇಕಕ್ಕೆ ಸಾಣೆ ಹಿಡಿದುಕೊಳ್ಳುತ್ತಾನೆ. 'ದೇಶ ನೋಡು ಕೋಶ ಓದು' ಎಂಬ ಲೋಕೋಕ್ತಿಯೇ ಇದೆ.

ಪುಸ್ತಕಗಳು ಹೇಗೆ ತಮ್ಮ ಬದುಕನ್ನು ರೂಪಿಸಿದವು ಎಂಬುದನ್ನು ವಿಶ್ರಾಂತ ಪ್ರಾಧ್ಯಾಪಕ, ಸಾಹಿತಿ ಡಾ.ಸಿ.ಪಿ.ಕೃಷ್ಣಕುಮಾರ್ ಅವರು ಕವಿತೆಯೊಂದರಲ್ಲಿ ಹೀಗೆ ಚಿತ್ರಿಸುತ್ತಾರೆ:

ಮೂರುಹೆಜ್ಜೆಯ ಬೇಡಿ ಬಂದ
ವಾಮನನಂತೆ ನೀವು ಬಂದಿರಿ ನಮ್ಮ ಬಾಳಿಗೆ.
ಈಗಲೋ ನನಗೆ ಜಾಗವಿಲ್ಲದ ಹಾಗೆ
ನನ್ನ ಸುತ್ತೆಲ್ಲ ನಿಮ್ಮದೇ ಸಾಮ್ರಾಜ್ಯ!
ಇಲ್ಲ ಕಿಂಚಿತ್ತೂ ಪಶ್ಚಾತ್ತಾಪ ನನಗೆ
ನನಗಿರುವುದೊಂದೇ ಆಸೆ;
ನಿಮ್ಮನ್ನು ನೋಡುತ್ತ, ನೋಡುತ್ತ
ಬರಲಿ ನನಗೆ ಅನಾಯಾಸ ಮರಣ
ನಾನು ಪುಸ್ತಕ ಶರಣ.

ಡಾ.ಹಾ.ಮಾ.ನಾಯಕರು ಒಂದು ಪತ್ರಿಕಾ ಸಂದರ್ಶನದಲ್ಲಿ ಈ ರೀತಿ ಹೇಳಿದ್ದರು : "ಸುತ್ತಲೂ ಬಗೆ ಬಗೆಯಾದ ಪುಸ್ತಕಗಳ ರಾಶಿ. ಅವುಗಳ ಮಧ್ಯೆ ಕೈಯಲ್ಲಿ ಪುಸ್ತಕ ಹಿಡಿದ ನಾನು. ಇಂಥ ಸಂದರ್ಭದಲ್ಲಿ ಈ ಲೋಕದಲ್ಲಿ ನನ್ನಂಥ ಸುಖಿ ಯಾರಿದ್ದಾರೆ? ನಾನು ಬಯಸುವುದು ಇಂಥ ಸುಖವನ್ನು; ಸ್ವರ್ಗಸುಖವನ್ನು."

ಹಾ.ಮಾ.ನಾಯಕರ ಸಾವು ಪುಸ್ತಕಗಳ ನಡುವೆಯೇ ಸುಖಮಯವಾಗಿ ಆದದ್ದು ಒಂದು ದಾಖಲೆ.

ಇತ್ತೀಚೆಗೆ ಎಂಥೆಂಥ ಪುಸ್ತಕಗಳು ಬರುತ್ತಿವೆ, ಯಾವುದನ್ನು ಓದಬೇಕು ಯಾವುದನ್ನು ಓದಬಾರದು ಎಂಬುದನ್ನು ಡಾ.ಸಿದ್ದಯ್ಯ ಪುರಾಣಿಕರು 'ಸ್ವತಂತ್ರಧೀರ ಸಿದ್ಧೇಶ್ವರ'ನಲ್ಲಿ ತಮ್ಮ ವಚನದ ಮೂಲಕ ಹೀಗೆ ಮೊರೆಯಿಡುತ್ತಾರೆ :

ಕೈತೊಳೆದು ಮುಟ್ಟಬೇಕಾದ ಗ್ರಂಥಗಳ ಕೊಡು ತಂದೆ,
ಮುಟ್ಟಿ ಕೈತೊಳೆಯಬೇಕಾದ ಕೃತಿಗಳನ್ನಲ್ಲ;
ಓದಿದಷ್ಟು ಓದಬೇಕೆನಿಸುವ ಹೊತ್ತಗೆಗಳ ಕೊಡು ತಂದೆ,
ಮೊದಲ ಓದಿಗೆ ವಾಕರಿಕೆ ಬರಿಸುವ ಪುಸ್ತಕಗಳನ್ನಲ್ಲ;
ಮನವ ಪಳಗಿಸುವ
ಮತಿಯ ಬೆಳಗಿಸುವ
ಕೃತಿಗಳೇ ನನ್ನ ಸಂಗಾತಿಗಳಾಗಿರಲಯ್ಯಾ
ಸ್ವತಂತ್ರಧೀರ ಸಿದ್ಧೇಶ್ವರಾ !

ಒಂದು ಒಳ್ಳೆಯ ಪುಸ್ತಕದ ಲಾಭವೇನು ಎಂಬುದನ್ನು ಒಬ್ಬ ತತ್ವಜ್ಞಾನಿ ತುಂಬ ಅರ್ಥಗರ್ಭಿತವಾಗಿ ಹೀಗೆ ಹೇಳಿದ್ದಾನೆ : ಒಳ್ಳೆಯ ಪುಸ್ತಕದ ಓದು ಎಂದರೆ ಬಟ್ಟೆಯನ್ನು ಸುಗಂಧದ ಪನ್ನೀರಿನಲ್ಲಿ ನೆನಸಿದಂತೆ. ಬಟ್ಟೆ ಒಣಗಿದರೂ ಪನ್ನೀರಿನ ಪರಿಮಳ ಉಳಿಯುವಂತೆ ಓದಿದ ಪುಸ್ತಕದ ಅಮೃತಸಾರ ಕೆಲಕಾಲ ಮನದಲ್ಲಿ ಉಳಿಯುವುದು.

ಪುಸ್ತಕಗಳು ಪರಿಮಳವೀಯಬೇಕು, ಪರಿಮಳದಿಂದ ಜನರ ದೃಷ್ಟಿ ಪುಸ್ತಕ ಸಂಸ್ಕೃತಿಯತ್ತ ವಾಲುವಂತಾಗಬೇಕು, ಬಗೆ ಬಗೆಯಾದ ಬಿಸಿ ಬಿಸಿಯಾದ ತಿಂಡಿತಿನಿಸುಗಳಿಗೆ ನಮ್ಮ ಮನಸ್ಸು ಹಾತೊರೆಯುವಂತೆ ಉತ್ತಮ ಪುಸ್ತಕಗಳಿಗೂ ಹಾತೊರೆಯಬೇಕು.

ಓದು-ಬರಹ ಹೇಗಿರಬೇಕು ಎಂಬುದನ್ನು ಕುರಿತು ಖ್ಯಾತ ವಿದ್ವಾಂಸರಾದ ಪ್ರೊ.ಎಸ್. ಕೆ.ರಾಮಚಂದ್ರರಾವ್ ಹೇಳಿರುವುದು ಹೀಗೆ : "ಲೋಕದಲ್ಲಿ ಎರಡು ಬಗೆಯ ಜನ : ಬರೆಯುವವರು ಬರೆಯುತ್ತಾರೆ, ಓದುವವರು ಓದುತ್ತಾರೆ. ಬರೆದದ್ದನ್ನೆಲ್ಲಾ ಓದಲೇಬೇಕೆಂಬ ನಿಯಮವೇನಿಲ್ಲ. ಹಾಗೆಯೇ ಓದಲೆಂದೇ ಬರೆಯಬೇಕೆಂಬ ನಿಯಮವೂ ಇಲ್ಲವೋ? ಪ್ರಕಟಗೊಳ್ಳುವ ಬರಹಗಳಲ್ಲಿ ಮೂರು ಮೌಲ್ಯಗಳು ಸೇರಿರಬೇಕು - ಹಿತ, ಮಿತ ಹಾಗೂ ಸತ್ಯ".

ಪುಸ್ತಕಗಳೇ ನಮ್ಮ ಸಂಪತ್ತು; ಪುಸ್ತಕಗಳೇ ನಮ್ಮ ಸರ್ವಸ್ವ; ಪುಸ್ತಕಗಳಿಗಿಂತ ಉತ್ತಮ ಗೆಳೆಯರು ಜಗದೊಳಿಲ್ಲವೆಂದು ಅರಿಯಬೇಕು. ಒಳ್ಳೆಯ ಪುಸ್ತಕಗಳು ನಮ್ಮ ಬದುಕಿನ ಅವಿಭಾಜ್ಯ ಅಂಗಗಳಾಗಬೇಕು. ಮಗುವಿಗೆ ತಾಯಿಹಾಲು ಎಷ್ಟು ಮುಖ್ಯವೋ, ಅಷ್ಟೇ ಮುಖ್ಯ ಅದಕ್ಕೆ ಪುಸ್ತಕಸಂಸ್ಕಾರ ಮಾಡಿಸುವುದು. ತಂದೆ ತಾಯಿಯವರು ಒಳ್ಳೆಯ ಪುಸ್ತಕಗಳನ್ನು ಕೊಂಡುತಂದು ಓದಬೇಕು, ಅವನ್ನು ಮಕ್ಕಳಿಗೆ ಕೊಟ್ಟು, ಓದುವಂತೆ, ಅಭ್ಯಾಸ ಮಾಡುವಂತೆ ಮಾಡಬೇಕು. ಅವರನ್ನು ಗ್ರಂಥಾಲಯಗಳಿಗೆ ಕರೆದುಕೊಂಡು ಹೋಗಿ ಅಲ್ಲಿನ ಒಳ್ಳೆಯ ಪುಸ್ತಕಗಳನ್ನು ಅವರಿಗೆ ಪರಿಚಯ ಮಾಡಿಸುವುದರ ಮೂಲಕ ಪುಸ್ತಕ ಸಂಸ್ಕೃತಿಯನ್ನು ಬೆಳೆಸುವುದು ಅತಿ ಅವಶ್ಯ.

ಈಗ ವಿದ್ಯುನ್ಮಾನದ ಆವಿಷ್ಕಾರವಾಗಿ ಪುಸ್ತಕಗಳನ್ನು ಸುಲಭವಾಗಿ, ಆಕರ್ಷಕವಾಗಿ ಮುದ್ರಿಸಲು ಅವಕಾಶವಾಗಿದೆ. ಕಂಪ್ಯೂಟರ್‌ನಲ್ಲೂ ಪುಸ್ತಕಗಳ ಸಾರವನ್ನು ಹಿಡಿದಿಟ್ಟು

ನಮಗೆ ಬೇಕಾದಾಗ ಗುಂಡಿ ಒತ್ತಿ ಅದರ ಪರದೆ ಮೇಲೆ ಮೂಡಿದ ಪುಸ್ತಕದ ಸಾಲುಗಳನ್ನು ಓದಲು ಅವಕಾಶವಾಗಿದೆ. ಆದರೆ ಮೂಲ ಪುಸ್ತಕಗಳನ್ನು ಓದುವಾಗಿನ ಸಂತೋಷದ ಅನುಭವ ಕಂಪ್ಯೂಟರ್‌ನ ಪರದೆಯಲ್ಲಿ ಮೂಡಿದ ಅಕ್ಷರಗಳನ್ನು ಓದುವಾಗ ಆಗುವುದಿಲ್ಲ.

ಅನೇಕ ಪ್ರಕಾಶಕರು ಅನೇಕ ಕನ್ನಡ ಪುಸ್ತಕಗಳನ್ನು ಪ್ರಕಟಿಸುತ್ತಿದ್ದರೂ ಅವೆಲ್ಲವೂ ಓದುಗರ ಗಮನಕ್ಕೆ ಬರುವುದಿಲ್ಲ. ಈ ಪುಸ್ತಕಗಳ ಪ್ರಚಾರಕ್ಕೆ ನಿಯತಕಾಲಿಕೆ / ಪತ್ರಿಕೆಗಳಿರುವುದಿಲ್ಲ. ಈಗ ಕನ್ನಡ ವಿಶ್ವವಿದ್ಯಾಲಯದ 'ಪುಸ್ತಕ ಮಾಹಿತಿ' ಎಂಬ ನಿಯತಕಾಲಿಕದಲ್ಲಿ ಕನ್ನಡ ಪುಸ್ತಕಗಳ ಪಟ್ಟಿ ಪ್ರಕಟವಾಗುತ್ತದೆ. ಆಕಾಶವಾಣಿ, ದೂರದರ್ಶನ ಹಾಗೂ ಕನ್ನಡ ದಿನ/ವಾರ/ಮಾಸಪತ್ರಿಕೆಗಳು ಪುಸ್ತಕಗಳ ಬಗ್ಗೆ ಕೆಲಮಟ್ಟಿನ ಮಾಹಿತಿ ನೀಡುತ್ತವೆ.

ಪುಸ್ತಕ ಸಂಸ್ಕೃತಿಯನ್ನು ಬೆಳೆಸುವ ಉದ್ದೇಶದಿಂದ ಡಾ.ಹಾ.ಮಾ.ನಾಯಕರು 'ಪುಸ್ತಕ ಪ್ರಸ್ತಾಪ' ಎಂಬ ಶೀರ್ಷಿಕೆಯಲ್ಲಿ 'ಕರ್ಮವೀರ' ವಾರಪತ್ರಿಕೆಗೆ ಅಂಕಣ ಬರೆದು ಪುಸ್ತಕಗಳ ಪರಿಚಯ/ವಿಮರ್ಶೆಯನ್ನು ಮಾಡುತ್ತಿದ್ದರು. ಮುಂದೆ ಡಾ.ನಾಯಕರ 'ಸಂಪ್ರತಿ' ಎಂಬ ಅಂಕಣಗಳ ಬರಹ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡಮಿಯ ಪ್ರಶಸ್ತಿ ದೊರಕಿತು.

ಅನೇಕ ಉದಯೋನ್ಮುಖ ಪ್ರತಿಭಾನ್ವಿತ ಕವಿಗಳು, ಸಾಹಿತಿಗಳು ರಚಿಸಿರುವ ಅನೇಕ ಮೌಲಿಕ ಕೃತಿಗಳು ಹಣಕಾಸಿನ ತೊಂದರೆಯಿಂದ ಪ್ರಕಟವಾಗದೆ ಇರುವ ಸಂಭವವಿದ್ದು, ಈ ಬಗ್ಗೆ ಸರ್ಕಾರ ಮತ್ತು ಸಂಬಂಧಪಟ್ಟ ಸಂಸ್ಥೆಗಳು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಪುಸ್ತಕ ಪ್ರಾಧಿಕಾರ ಮತ್ತು ವಿಶ್ವವಿದ್ಯಾನಿಲಯಗಳು ಗಮನ ಹರಿಸಬೇಕು. ಹಿರಿಯ ಸಾಹಿತಿಗಳ ಒಂದು ಸಮಿತಿ ರಚನೆಯಾಗಿ, ಆ ಸಮಿತಿಯು ಪ್ರಕಟಣೆಗೆ ಯೋಗ್ಯವಾದ ಕೃತಿಗಳನ್ನು ಆಯ್ಕೆಮಾಡಿ ಸಂಬಂಧಿಸಿದವರಿಗೆ ನೀಡುವ ವರದಿಯ ಆಧಾರದ ಮೇಲೆ ಅವುಗಳನ್ನು ಪ್ರಕಟಿಸಬೇಕು. ಆಗ ಬೆಳಕು ಕಾಣದ ಎಷ್ಟೋ ಕೃತಿಗಳು ಓದುಗರ ಕೈ ಸೇರಿ ಅವರ ಜ್ಞಾನಭಂಡಾರವನ್ನು ಹೆಚ್ಚಿಸಲು ಕಾರಣವಾಗಬಹುದು.

ತಮ್ಮ ಮನೆಗೆ ಬರುವ ಅತಿಥಿಗಳಿಗೆ ಕೆಲವು ಉತ್ತಮ ಪುಸ್ತಕಗಳನ್ನು ಉಚಿತವಾಗಿ ವಿತರಿಸುವ ಪ್ರೊ.ಚಂದ್ರಯ್ಯನಾಯಿಡು ಅಂಥವರು ಮತ್ತು ಧಾರವಾಡದ ಮನೆ ಮನೆಗೆ ಸೈಕಲ್ ಮೇಲೆ ಹೋಗಿ ಪುಸ್ತಕಗಳನ್ನು ಹಂಚುವ ಎಪ್ಪತ್ತರ ಹರೆಯದ ಕವಿ ಐರ್‌ಸಂಗ್ ಅಂತಹವರು ಎಲ್ಲೆಡೆ ಹೆಚ್ಚಾದಲ್ಲಿ ಪುಸ್ತಕ ಸಂಸ್ಕೃತಿ ಹೆಚ್ಚು ಹೆಚ್ಚು ಬೆಳೆಯುತ್ತದೆ.

ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಕೆಂಗಲ್ ಹನುಮಂತಯ್ಯನವರು ಹಾಗೂ ಶ್ರೀ ಆರ್. ಗುಂಡುರಾಯರು ಹಲವಾರು ಮೌಲಿಕ ಕನ್ನಡ ಪುಸ್ತಕಗಳನ್ನು ಮರುಪ್ರಕಟನೆಗೊಳಿಸಿ ಸುಲಭ ಬೆಲೆಯಲ್ಲಿ ಓದುಗರಿಗೆ ದೊರೆಯುವಂತೆ ಮಾಡಿದ್ದು ಈಗ ದಾಖಲೆ. ಕರ್ನಾಟಕ ಸರ್ಕಾರ, ಕನ್ನಡ ಸಾಹಿತ್ಯ ಪರಿಷತ್ತು, ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳ ಪ್ರಸಾರಾಂಗಗಳು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಪುಸ್ತಕ ಪ್ರಕಾಶನ ಸಂಸ್ಥೆಗಳು, ಕವಿ/ಲೇಖಕರ ಹೆಚ್ಚು ಹೆಚ್ಚು ಮೌಲಿಕ ಪುಸ್ತಕಗಳನ್ನು ಸುಲಭ ಬೆಲೆಯಲ್ಲಿ ಓದುಗರಿಗೆ ದೊರಕುವಂತೆ ಮಾಡಿದಲ್ಲಿ ಪುಸ್ತಕ ಸಂಸ್ಕೃತಿ ಬೆಳೆಯಲು ಅವಕಾಶವಾಗುತ್ತದೆ. ಈ

ದಿಶೆಯಲ್ಲಿ ಸಂಬಂಧಿಸಿದವರ ಪ್ರಯತ್ನ ಯಶಸ್ಸನ್ನು ಪಡೆದು ಪುಸ್ತಕ ಸಂಸ್ಕೃತಿ ಎಲ್ಲರ ಮನೆ-ಮನಗಳನ್ನು ತುಂಬಲಿ.

ಒಟ್ಟಿನಲ್ಲಿ, ಈ 'ಪುಸ್ತಕ ಸಂಸ್ಕೃತಿ'ಯು ನಾಡಿನ ಸಂಸ್ಕೃತಿಯನ್ನು ಮತ್ತು ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದು 'ಏನಾದರೂ ಆಗು ಮೊದಲು ಮಾನವನಾಗು' ಎಂದು ಕವಿವಾಣಿಯ ಸಂದೇಶವನ್ನು ಸಾಕಾರಗೊಳಿಸಲು ಕಾರಣವಾಗಲೆಂದು ಹಾರೈಸುತ್ತೇನೆ.

**ಟಿಪ್ಪಣಿ-೮ : ಶ್ರೀ ತುಳಸಿತನಯರ ಭಾವಗೀತೆಗಳು ಮತ್ತು ಧ್ವನಿಸುರಳಿಗಳು**

ಚಿಕ್ಕಮಗಳೂರು ಜಿಲ್ಲೆ ಕಲೆ, ಸಾಹಿತ್ಯ, ಸಂಗೀತ, ಕಾಫೀಕ್ಷೇತ್ರಗಳನ್ನು ಶ್ರೀಮಂತಗೊಳಿಸುತ್ತಿರುವ ಪ್ರಕೃತಿ ಸೌಂದರ್ಯದ ಬೀಡು. ರಾಷ್ಟ್ರಕವಿ ಕುವೆಂಪು, ಶ್ರೀ ಎ.ಆರ್.ಕೃಷ್ಣಶಾಸ್ತ್ರಿ ಮತ್ತು ಇನ್ನೂ ಅನೇಕ ಸಾಹಿತಿಗಳಿಗೆ, ಸಂಗೀತಗಾರರಿಗೆ ಜನ್ಮಕೊಟ್ಟ ಸಾಂಸ್ಕೃತಿಕ ಮಹತ್ವದ ಜಿಲ್ಲೆ ಇದು.

ಇಂದಿನ ಸಮಾರಂಭ ಎರಡು ಮುಖ್ಯ ಕಾರಣಗಳಿಂದ ಮಹತ್ವ ಪಡೆದಿದೆ ಎಂದು ನನ್ನ ಭಾವನೆ. ಒಂದು, ಜಿಲ್ಲಾಮಟ್ಟದಲ್ಲಿ ಚಿಕ್ಕಮಗಳೂರು ನಗರದಿಂದ ಇದೇ ಪ್ರಥಮ ಬಾರಿಗೆ ಸ್ಥಳೀಯ ಜನಪರಕವಿಯೊಬ್ಬರ ಭಾವಗೀತೆಗಳು ಸಂಗೀತದ ಲೇಪ ಪಡೆದು ಧ್ವನಿಸುರಳಿಯಾಗಿ ಹೊರಬರುತ್ತಿರುವುದು; ಎರಡನೆಯದು, ಜಿಲ್ಲೆಯ ಹೊರಗಿನ ಸಂಗೀತ ಪ್ರತಿಭೆಗಳ ಜೊತೆ ಸ್ಥಳೀಯ ಸಂಗೀತ ಪ್ರತಿಭೆಗಳನ್ನು ಬಳಸಿಕೊಂಡು ತಯಾರಿಸಿದ ಧ್ವನಿಸುರಳಿಯನ್ನು ಹೊರತರುತ್ತಿರುವುದು.

ಸ್ಥಳೀಯ ಸಂಗೀತ ಪ್ರತಿಭೆ ಶ್ರೀ ಎಂ.ಎಸ್. ಸುಧೀರ್ ಅವರ 'ಭಾವಾಂಜಲಿ' ಗೀತಗಾಯನ ಸಮಾರಂಭದಲ್ಲಿ, ಕವಿ ಶ್ರೀ ತುಳಸಿತನಯ ಅವರು 'ನಾನು ಪೆನ್ನು ಮತ್ತು ಪೇಪರ್ ಜೊತೆ ಮಾತನಾಡುತ್ತೇನೆ' ಎಂದು ಹೇಳಿದ್ದರು. ಅದು ನಿಜ. ಅವರ 'ಬೆಳಕ್ಕಿ ಪಯಣ' ಮತ್ತು 'ಕಪ್ಪೆಚಿಪ್ಪು' ಗೀತೆಗಳ ಸಂಕಲನಗಳಲ್ಲಿ ತಮ್ಮ ಗೀತೆಗಳ ಮೂಲಕ ಓದುಗರೊಂದಿಗೆ ಚೆನ್ನಾಗಿಯೇ ಮಾತನಾಡಿದ್ದಾರೆ. ಈ ಧ್ವನಿಸುರಳಿಯಲ್ಲಿರುವ ಭಾವಗೀತೆಗಳನ್ನು ರಚನೆ ಮಾಡಿದ ಸರಳಸಜ್ಜನ ಸಹೃದಯ ಕವಿ ಶ್ರೀ ತುಳಸಿತನಯರು ವಿದ್ಯುತ್ ಮಂಡಳಿಯಲ್ಲಿ ಸೇವೆ ಮಾಡುತ್ತಿದ್ದರೂ ಸಾಕಷ್ಟು ಒಳ್ಳೆಯದನ್ನು ಕೊಟ್ಟಿರುವ ಸಮಾಜಕ್ಕೆ ಒಳ್ಳೆಯದನ್ನು ಕೊಡಬೇಕೆಂಬ ಉದ್ದೇಶದಿಂದ ಉಪಯುಕ್ತ ಸಾಹಿತ್ಯ ರಚನೆಗೆ ತೊಡಗಿಸಿಕೊಂಡು ಆ ದಿಸೆಯಲ್ಲಿ ಮುನ್ನುಗ್ಗುತ್ತಿದ್ದಾರೆ. ಕವಿ ಶ್ರೀ ತುಳಸಿತನಯ ಅವರು ತಮ್ಮ ಐವತ್ತನೇ ವಯಸ್ಸಿನಲ್ಲಿ ಈ ಒಂದು ಅಪರೂಪದ ಧ್ವನಿಸುರಳಿಯ ಮೂಲಕ ಶ್ರೋತೃಗಳಿಗೆ ತಮ್ಮ ಅಂತರಾಳದಿಂದ ಹೊರಬಂದಿರುವ ಭಾವಗೀತೆಗಳನ್ನು ಪರಿಚಯ ಮಾಡಿಸುವ ಕೆಲಸಕ್ಕೆ ನಾಂದಿ ಹಾಡಿದ್ದಾರೆ. ಈ ಕಾರ್ಯ ಈ ಮೊದಲೇ ಆಗಬೇಕಾಗಿತ್ತು. ಈಗಲಾದರೂ ಆಗಿದ್ದಕ್ಕೆ ಅವರ ಹಿತೈಷಿಗಳಿಗೆ, ಅಭಿಮಾನಿಗಳಿಗೆ, ಓದುಗರಿಗೆ, ಶ್ರೋತೃಗಳಿಗೆ ಸಂತೋಷವಾಗಿದೆ.

ವಯಸ್ಸಾದ ತಂದೆ-ತಾಯಿಯರನ್ನು ವೃದ್ಧಾಶ್ರಮಕ್ಕೆ ಸೇರಿಸುವ ಈ ಕಾಲದಲ್ಲಿ, ಹೆತ್ತು ಹೊತ್ತು ತನ್ನ ಕಷ್ಟಗಳನ್ನು ಬದಿಗಿರಿಸಿ ಪ್ರೀತಿಯಿಂದ ಸಾಕಿಸಲುಹಿದ ತಾಯಿಗೆ ಕವಿ ಶ್ರೀ ತುಳಸಿತನಯರು ತಮ್ಮ ಕೃತಜ್ಞತೆಯನ್ನು 'ಅಮ್ಮನಿಗೆ' ಎಂಬ ತಮ್ಮ ಕವನದಲ್ಲಿ ವ್ಯಕ್ತಪಡಿಸಿದ್ದಾರೆ. ತಮ್ಮ ತಾಯಿ ಶ್ರೀಮತಿ ತುಳಸಮ್ಮನವರ ಸ್ಮರಣೆಗಾಗಿ ಇವರು ಧರಿಸಿರುವ ಕಾವ್ಯನಾಮ 'ತುಳಸಿತನಯ' ಮತ್ತು ಇವರ ಮನೆಗೆ ಇಟ್ಟಿರುವ ಹೆಸರು 'ತುಳಸಿವನ'. 'ಕಪ್ಪೆಚಿಪ್ಪು' ಎಂಬ ಕವನ ಸಂಕಲನವನ್ನು ಶ್ರೀಮತಿ ತುಳಸಮ್ಮ ರಾಮೇ ಗೌಡರಿಗೆ ಅರ್ಪಿಸುವಷ್ಟು ಹೃದಯವೈಶಾಲ್ಯ ಇವರದು. ಬದುಕಿನ ಕೆಲವು ಮೌಲ್ಯಗಳು, ಕೆಲವು ಸಂದೇಶಗಳು ಇವರ ಕವನಗಳಲ್ಲಿ ಕಂಡುಬರುತ್ತವೆ. ಇವರ ಬದುಕು-ಬರಪಗಳು ಸಾರ್ಥಕವೆನಿಸಿವೆ.

ಎಲೆಮರೆಯ ಕಾಯಿಯಂತೆ ಸಂಗೀತಕ್ಷೇತ್ರದಲ್ಲಿ, ತಮ್ಮ ಆರೋಗ್ಯದ ಕಡೆಗೂ ಸಾಕಷ್ಟು ಗಮನಕೊಡದೆ ಅವಿರತವಾಗಿ ತೊಡಗಿಸಿಕೊಂಡಿರುವವರು ಸುಗಮ ಸಂಗೀತ-ಗಂಗಾದ ಶ್ರೀ ಮಂಜುನಾಥ ಕಾಮತ್. ಡಾ.ಜೆ.ಪಿ.ಕೃಷ್ಣಗೌಡರು ಮತ್ತು ಅವರ ಬಳಗದಿಂದ 'ಹಾಡುತ್ತೀರಾಗ' ಎಂಬ ಸಿ.ಡಿ. ಮತ್ತು 'ಬಾರೋ ಮನೆಗೆ ಶ್ರೀನಿವಾಸ' ಎಂಬ ಧ್ವನಿಸುರಳಿಗಳು ಈ ಹಿಂದೆ ಬಂದಿವೆ. ಆದರೆ ಅವುಗಳಲ್ಲಿ ಜಿಲ್ಲೆಯ ಆಚೆಯ ಹೆಸರಾಂತ ಕವಿಗಳು ರಚಿಸಿದ ಗೀತೆಗಳನ್ನು ಬಳಸಿಕೊಳ್ಳಲಾಗಿದೆ. ಆದರೆ ಈ ಧ್ವನಿಸುರಳಿಯಲ್ಲಿ ನಗರದ ಕವಿ ಶ್ರೀ ತುಳಸಿತನಯರು ರಚಿಸಿದ ಭಾವಗೀತೆಗಳನ್ನು ಅಳವಡಿಸಿಕೊಂಡಿರುವುದು ಈ ನಗರಕ್ಕೊಂದು ಹೆಮ್ಮೆಯ ಸಂಗತಿ. ಕವಿ ಶ್ರೀ ತುಳಸಿತನಯ ಅವರ ಈ 'ಬೆಳ್ಳಕ್ಕಿಸಾಲು' ಧ್ವನಿಸುರಳಿಯ ಹೆಸರೇ ಚೆಂದ. ಸಂಜೆಯವೇಳೆ ಆಕಾಶದಲ್ಲಿ ಬೆಳ್ಳಕ್ಕಿಗಳು ಸಾಲುಸಾಲಾಗಿ ತಮ್ಮ ರೆಕ್ಕೆಗಳನ್ನು ಲಯಬದ್ಧವಾಗಿ ಬಡಿಯುತ್ತಾ ಮುಂದೆಸಾಗುವ ದೃಶ್ಯ ವನ್ನು ನೋಡುವುದು ಮನಸ್ಸಿಗೆ ಮುದನೀಡುವಂತೆಯೇ, ಈ ಧ್ವನಿಸುರಳಿಯಲ್ಲಿ ಮೂಡಿರುವ ಬೆಳ್ಳಕ್ಕಿಗಳೂ ಸಂಗೀತದ ಲೇಪ ಪಡೆದಿರುವುದರಿಂದ, ಕೇಳುಗರ ಮನಸ್ಸನ್ನು ಸಂತೋಷಪಡಿಸುವಂತಹವು. ಈ ಧ್ವನಿಸುರಳಿಯಲ್ಲಿರುವ ಕೆಲವು ಕವನಗಳಾದರೂ ನಿದ್ದೆ ಯಲ್ಲಿರುವ ನಮ್ಮನ್ನು ಸ್ವಲ್ಪಮಟ್ಟಿಗಾದರೂ ಎಚ್ಚರಿಸಿದರೂ ಶ್ರೀ ತುಳಸಿತನಯರ ಪರಿಶ್ರಮ ಸಾರ್ಥಕವಾದೀತು.

ಈಗ ಹೆಸರಾಂತ ಆಕಾಶ್ ಆಡಿಯೋ ಅವರು, ಈ ಜಿಲ್ಲೆಯ ಹೆಸರಾಂತ ಕವಿ ಶ್ರೀ ತುಳಸಿತನಯ ಅವರ ಭಾವಗೀತೆಗಳಿಗೆ ಹೆಸರಾಂತ ಗಾಯಕ-ಗಾಯಕಿಯರಾದ ಯಶವಂತ ಹಳೇಬಂಡಿ, ಉಪಾಸನಾ ಮೋಹನ, ಸಂಗೀತ ಕಟ್ಟಿ, ಅರ್ಚನಾ ಹಾಗೂ ಈ ಜಿಲ್ಲೆಯ ಹೆಸರಾಂತ ಗಾಯಕ-ಗಾಯಕಿಯರಾದ ಮಲ್ಲಿಗೆ ಸುಧೀರ ಮತ್ತು ಕು.ರೇಖಾ ಅವರ ಸ್ವರಮಾಧುರ್ಯ ಬಳಸಿಕೊಂಡಿದ್ದಾರೆ; ಹಾಗೂ ಉಪಾಸನಾ ಮೋಹನ ಅವರ ಸಮರ್ಥ ಸಂಗೀತ ನಿರ್ದೇಶನದಲ್ಲಿ ಹೊರತಂದು ಈ ಧ್ವನಿಸುರಳಿಯ ಮಹತ್ವ ಹೆಚ್ಚಿಸಲು ಕಾರಣ ರಾಗಿದ್ದಾರೆ.

ಸಾಮವೇದದ ಉಪವೇದವಾದ ಗಾಂಧರ್ವವೇದದಲ್ಲಿ ಹುಟ್ಟಿದ ಭಾರತೀಯ ಸಂಗೀತದಲ್ಲಿ ಎರಡು ಮುಖ್ಯ ಶೈಲಿಗಳಿವೆ. ಅವೆಂದರೆ, ಕರ್ನಾಟಕ ಶಾಸ್ತ್ರೀಯ ಸಂಗೀತ ಮತ್ತು ಹಿಂದೂಸ್ಥಾನಿ ಸಂಗೀತ. ಈ ಮಹಾವೃಕ್ಷದ ಶಾಖೆಗಳೆಂದರೆ, ಭಕ್ತಿಸಂಗೀತ, ಜನಪದ ಸಂಗೀತ, ದಾಸರ ಪದಗಳು ನೃತ್ಯಸಂಗೀತ, ಭಾವಗೀತೆ, ದೇಶಭಕ್ತಿ ಇತ್ಯಾದಿ ಶೈಲಿಗಳು. ಸಪ್ತಸ್ವರಗಳಿಂದಾದ ಈ ಸಂಗೀತವು ಹಿಂದೂಸ್ಥಾನಿ ಮತ್ತು ಕರ್ನಾಟಕ ಸಂಗೀತ ಎಂಬ ಎರಡು ಶಾಸ್ತ್ರೋಕ್ತ ಸಂಗೀತಪದ್ಧತಿಗಳನ್ನು ಹುಟ್ಟಿಹಾಕಿ ಭಾರತೀಯ ಸಂಗೀತ ಪರಂಪರೆಯ ಸಾಂಸ್ಕೃತಿಕ ಮೌಲ್ಯವನ್ನು ಹೆಚ್ಚಿಸಿವೆ. ಸಂಗೀತವು ಪಶು, ಪಕ್ಷಿ, ಮನುಷ್ಯ, ಗಿಡಮರಗಳಿಗೂ ಆಪ್ಯಾಯಮಾನವಾಗಿದೆ ಎಂದು ಹೇಳುತ್ತಾರೆ. 'ಸರಿಗಮಪದನಿ' ಎಂಬ ಸಪ್ತಸ್ವರಗಳಿಗೆ ಪಶುಪಕ್ಷಿಗಳ ಕಲರವ ಧ್ವನಿಗಳೇ ಆಧಾರ ಎಂದು ಹೇಳುತ್ತಾರೆ.

ಕರ್ನಾಟಕ ಸಂಗೀತ ತ್ರಿಮೂರ್ತಿಗಳಾದ ಶ್ರೀ ತ್ಯಾಗರಾಜರು, ಶ್ರೀ ಶ್ಯಾಮಶಾಸ್ತ್ರಿಗಳು ಮತ್ತು ಶ್ರೀ ಮುತ್ತುಸ್ವಾಮಿ ದೀಕ್ಷಿತರು ಸಹಾ 'ವೆಂಕಟಮುಖಿ' ಎಂಬ ಸಂಗೀತಜ್ಞ ಬುನಾದಿ ಹಾಕಿದ ೭೨ ಮೇಳಕರ್ತ ರಾಗಗಳ ಆಧಾರದ ಮೇಲೆ ಅನೇಕ ರಾಗಗಳಲ್ಲಿ ತಮ್ಮ ಕೃತಿಗಳನ್ನು ರಚನೆಮಾಡಿದ್ದಾರೆ. ವೆಂಕಟಮುಖಿಯು 'ಚತುರ್ದಂಡಿ ಪ್ರಕಾಶಿಕ' (ರಾಗ ಆಲಾಪ ಇತ್ಯಾದಿ) (೪ ಪಿಲ್ಲರ್ಸ್) ಎಂಬ ಅಮೂಲ್ಯ ಸಂಗೀತಗ್ರಂಥವನ್ನು ರಚಿಸಿದ್ದಾನೆ. ಈ ವೆಂಕಟಮುಖಿಯು ೧೬೩೪ರಲ್ಲಿ ತಂಜಾವೂರಿನ ರಾಜ ರಘುನಾಥನಾಯಕರ ಮಂತ್ರಿಯಾಗಿದ್ದವನು. ಈತ ಕನ್ನಡಿಗ; ಹಾಗೂ ಪಕ್ಕದ ಶಿವಮೊಗ್ಗ ಜಿಲ್ಲೆಯವನು ಎಂಬುದು ಕನ್ನಡಿಗರು ಹೆಮ್ಮೆಪಡುವ ವಿಷಯ. ಮೈಸೂರಿನ ಗಣಪತಿ ಸಚ್ಚಿದಾನಂದ ಸ್ವಾಮೀಜಿಯವರು ಇದೇ ವಂಶಜರೆಂದು ಹೇಳುತ್ತಾರೆ. (ಆಧಾರ : ವಿದ್ವಾನ್ ಶ್ರೀ ನಂಜುಂಡಸ್ವಾಮಿ : ಸಂಗೀತ ಸಂಕಾಶ).

ಕರ್ನಾಟಕ ಸಂಗೀತದ ಪಿತಾಮಹ ಪುರಂದರದಾಸರ ಪುತ್ರ ಮಹಿಪತಿದಾಸರು, ಸಂಗೀತ, ಸಂಗೀತಗಾರರು, ಶ್ರೋತೃಗಳ ಮನೋಧರ್ಮ ಹೇಗಿರಬೇಕು ಎಂಬುದರ ಬಗ್ಗೆ ಹೀಗೆ ಹೇಳಿದ್ದಾರೆ : "ತಾಳಬೇಕು, ತಕ್ಕ ಮೇಳಬೇಕು, ಶಾಂತವೇಳೆಬೇಕು, ಗಾನವನ್ನು ಕೇಳಬೇಕೆಂಬುವರಿಗೆ ಯತಿಪ್ರಾಸವಿರಬೇಕು, ಗತಿಗೆ ನಿಲ್ಲಿಸಬೇಕು..."

ಅರವತ್ತರ ದಶಕದಲ್ಲಿ ಹೈದರಾಬಾದಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಂದು ಸಂಜೆ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಪ್ರಸಿದ್ಧ ಪಿಟೀಲುವಾದಕ ದ್ವಾರಂ ವೆಂಕಟಸ್ವಾಮಿ ನಾಯಿಡು ಅವರ ಪಿಟೀಲು ವಾದ್ಯದ ಕಛೇರಿ ನಡೆದಿತ್ತು. ಇದೇ ಸಂದರ್ಭದಲ್ಲಿ ವೇದಿಕೆಯಲ್ಲಿದ್ದ ಅಂದಿನ ಪ್ರಧಾನಿ ಪಂಡಿತ ಜವಹರಲಾಲ್ ನೆಹರು ಅವರು ಇತರ ಮುಖಂಡರ ಜೊತೆ ಮಾತನಾಡತೊಡಗಿದ್ದರು. ಇದು ಸಂಗೀತ ಕಛೇರಿಯ ವಾತಾವರಣದ ಶಾಂತತೆಗೆ ಭಂಗತರುವಂತಿದ್ದಿತು. ಆಗ ನಾಯಿಡು ಅವರು ಪಿಟೀಲು ನುಡಿಸುವುದನ್ನು ನಿಲ್ಲಿಸಿದರು. ಸ್ವಲ್ಪಹೊತ್ತಿನ ನಂತರ ಇದನ್ನು ಗಮನಿಸಿದ ನೆಹರು ಅವರು ನಾಯಿಡು ಅವರನ್ನು ಉದ್ದೇಶಿಸಿ, "ಪಿಟೀಲು ನುಡಿಸುವುದನ್ನು ಏಕೆ ನಿಲ್ಲಿಸಿದಿರಿ" ಎಂದಾಗ.

ನಾಯಿಡು ಅವರು "ನೀವೆಲ್ಲ ಮಾತನಾಡುತ್ತಾ ಕುಳಿತರೆ ನನ್ನದೇನು ಕೆಲಸ" ಎಂದರು. ಆಗ ನೆಹರು ಅವರು ನಾಯಿಡು ಅವರ ಕ್ಷಮೆಕೇಳಿ ಸಂಗೀತ ಕಛೇರಿಯನ್ನು ಮುಂದುವರೆಸುವಂತೆ ಕೋರಿಕೊಂಡರು. ಹಿಂದೆ ಮೈಸೂರಿನ ಪಿಟೀಲು ಚೌಡಯ್ಯನವರು, ಸಂಗೀತಕ್ಕೆ ಗಿಡಗಳು ಸ್ಪಂದಿಸುವುದನ್ನು ಪ್ರಯೋಗ ಮಾಡಿ ತೋರಿಸಿದ್ದರಂತೆ. ಅಷ್ಟು ಶಕ್ತಿ ಇದೆ ಈ ಸಂಗೀತಕ್ಕೆ.

ಭಾವಗೀತೆಗಳಿಗೆ ಮೊದಲು ಸಂಗೀತದ ಜೀವ ತುಂಬಿದವರು ಪಿ. ಕಾಳಿಂಗರಾಯರು, ಮೈಸೂರು ಅನಂತಸ್ವಾಮಿ, ಹೆಚ್.ಕೆ.ನಾರಾಯಣ್, ಹೆಚ್.ಆರ್.ಲೀಲಾವತಿ, ಉಷಾ ಖಾಡಿಲ್‌ಕರ್, ಸಿ.ಹುಕ್ಕೇರಿ ಬಾಳಪ್ಪನವರು; ನಂತರ ಸಿ. ಅಶ್ವಥ್, ಶಿವಮೊಗ್ಗ ಸುಬ್ಬಣ್ಣ, ರತ್ನಮಾಲಾ ಪ್ರಕಾಶ್, ಸಂಗೀತಾ ಕಟ್ಟಿ, ಉಪಾಸನಾ ಮೋಹನ ಇತರೆಯವರು. ಇವರೆಲ್ಲರೂ ತಮ್ಮ ಸಿರಿಕಂಠದಿಂದ ಭಾವಗೀತೆಗಳ ಸೌಂದರ್ಯವನ್ನು ಹೆಚ್ಚಿಸಿ ಕವಿಗಳನ್ನು-ಕವಿತೆಗಳನ್ನು ಜನಪ್ರಿಯಗೊಳಿಸಿದ್ದಾರೆ; ತಮ್ಮ ಪ್ರತಿಭೆಯನ್ನು ಜನರು ಗುರುತಿಸುವಂತೆ ಮಾಡಿದ್ದಾರೆ; ಗೀತೆಗಳ ಕೇಳುಗರನ್ನು (ಶ್ರೋತೃಗಳನ್ನು) ಸಂತೋಷ ಪಡಿಸುತ್ತಿದ್ದಾರೆ. ಕವಿ ಕೆ.ಎಸ್.ನಿಸಾರ್ ಅಹಮದ್ ಅವರ ಭಾವಗೀತೆಗಳ 'ನಿತ್ಯೋತ್ಸವ' ಧ್ವನಿಸುರಳಿಯು ಭಾವಗೀತೆಗಳ ಮೊದಲ ಧ್ವನಿಸುರಳಿಯಾಗಿ ಅಪಾರ ಜನಮನ್ನಣೆಗಳಿಸಿ, ಭಾವಗೀತೆಗಳ ಧ್ವನಿಸುರಳಿಗಳು ಬರಲು ನಾಂದಿಹಾಡಿತು.

ಅಂದಿನಿಂದ ಭಾವಗೀತೆಗಳ ಸಾವಿರಾರು ಧ್ವನಿಸುರಳಿಗಳು ಹೊರಬಂದಿದ್ದು, ಜನಪ್ರಿಯತೆಗಳಿಸಿವೆ. ಹೀಗೆ ನಮ್ಮ ನಾಡಿನ ಅನೇಕ ಪ್ರಸಿದ್ಧ ಕವಿಗಳ ಕವನಗಳನ್ನು ನಮ್ಮ ಸಂಗೀತಗಾರರು ಸಂಗೀತಕ್ಕೆ ಅಳವಡಿಸಿ ಗಾಯಕ-ಗಾಯಕಿಯರಿಂದ ಹಾಡಿಸದಿದ್ದಲ್ಲಿ, ಧ್ವನಿಸುರಳಿಗಳನ್ನು ಹೊರತರದಿದ್ದಲ್ಲಿ ನಮ್ಮ ಕವಿಗಳ ಭಾವಗೀತೆಗಳು ಈಗಿನಷ್ಟು ಪ್ರಸಿದ್ಧಿ ಪಡೆಯುತ್ತಿರಲಿಲ್ಲ. ಹಾಗೆಯೇ, ನಮ್ಮ ಕವಿಗಳ ಭಾವಗೀತೆಗಳು ಇರದಿದ್ದಲ್ಲಿ ನಮ್ಮ ಸಂಗೀತಗಾರರು, ಗಾಯಕ-ಗಾಯಕಿಯರೂ ಇಷ್ಟೊಂದು ಪ್ರಸಿದ್ಧಿ ಪಡೆಯುತ್ತಿರಲಿಲ್ಲವೇನೊ. ಹಾಗೆಯೇ, ಜನಪದಗೀತೆಗಳು; ಜನಪದ ಗಾಯಕ-ಗಾಯಕಿಯರು.

ಹಿಂದೆ ಸಂಗೀತ ಜೀವನಕ್ಕೆ ಆಧಾರವಾಗಿತ್ತು. ಸಾಹಿತ್ಯ ಮತ್ತು ಸಂಗೀತಗಳು ಈಗ ಉಪಕಸಬು ಅಥವಾ ಹವ್ಯಾಸವಾಗಿವೆ. ಕೆಲವೇ ಪ್ರಸಿದ್ಧ ಸಾಹಿತಿಗಳು ಮತ್ತು ಸಂಗೀತಗಾರರು ಸಾಹಿತ್ಯ ಮತ್ತು ಸಂಗೀತ ಕೃಷಿಯಿಂದ ಬದುಕುತ್ತಿದ್ದಾರೆ. ಸತ್ವ ಇರತಕ್ಕಂತಹ ಸಾಹಿತ್ಯ ರಚನೆ ಮಾಡುವ ಮತ್ತು ಸಮಾಜದ ಸ್ವಾಸ್ಥ್ಯಕ್ಕಾಗಿ ಬರೆಯುವ ಕೆಲವು ಸಾಹಿತಿಗಳು ತಮ್ಮ ಬರವಣಿಗೆ ಜೀವನಕ್ಕೆ ಆಧಾರವಾಗಿರಬೇಕು ಎಂದು ಆಶಿಸುವುದು ಸಹಜ. ಅಂತಹ ಸ್ಥಿತಿ ಬರಬೇಕಾದರೆ ಹೆಚ್ಚು ಜನರು ಸಾಹಿತ್ಯದ ಕೃತಿಗಳನ್ನು ಕೊಂಡು ಓದುವ ಅಭ್ಯಾಸ ಬೆಳೆಸಿಕೊಳ್ಳಬೇಕು. ಸಂಗೀತಗಾರರಿಗೂ ಹೆಚ್ಚಿನ ಪ್ರೋತ್ಸಾಹ ಇದ್ದಲ್ಲಿ ಅವರೂ ಸಂಗೀತದಿಂದಲೇ ಬದುಕಲು, ಬೆಳೆಯಲು ಸಾಧ್ಯವಾಗುತ್ತದೆ.

ಅಪರೂಪದ ಕವಿ ಶ್ರೀ ಸಿದ್ದಯ್ಯ ಪುರಾಣಿಕರು ತಮ್ಮ 'ವಚನ ನಂದನ' ಕಾವ್ಯ ಸಂಕಲನದಲ್ಲಿ ಹೇಳಿರುವುದು ಹೀಗೆ:

ಹಳ್ಳಿಯಲ್ಲಿ ಹುಟ್ಟಿ ನಗರ ಸೇರಿದವರು
ಎಷ್ಟು ಬೇಗ ಹಳ್ಳಿಯನ್ನೇ ಮರೆತುಬಿಡುತ್ತಾರೆ!
ಬಡವರಾಗಿ ಹುಟ್ಟಿ ಒಡೆಯರಾದವರು
ಎಷ್ಟು ಬೇಗ ಬಡವರನ್ನೇ ಮರೆತುಬಿಡುತ್ತಾರೆ!
ಹರಿಜನರಾಗಿ ಹುಟ್ಟಿ ಹಿರಿಜನರಾದವರು
ಎಷ್ಟು ಬೇಗ ಹರಿಜನರನ್ನೇ ಮರೆತುಬಿಡುತ್ತಾರೆ!
ಕನ್ನಡಿಗರಾಗಿ ಹುಟ್ಟಿ ಇಂಗ್ಲೀಷು ಕಲಿತವರು
ಎಷ್ಟು ಬೇಗ ಕನ್ನಡವನ್ನೇ ಮರೆತುಬಿಡುತ್ತಾರೆ!
ಸ್ವತಂತ್ರಧೀರ ಸಿದ್ಧೇಶ್ವರಾ,
ನಿನ್ನ ದಯೆಯಿಂದಲೇ ಉನ್ನತಿ ಪಡೆದವರು
ಎಷ್ಟು ಬೇಗ ನಿನ್ನನ್ನೇ ಮರೆತುಬಿಡುತ್ತಾರೆ!

ಆದರೆ ಶ್ರೀ ತುಳಸಿತನಯರು ಈ ವಚನಕ್ಕೆ ಒಂದು ಅಪವಾದ. ಇವರು ತಮ್ಮ ಹಳ್ಳಿಯನ್ನು, ತಮಗೆ ಪ್ರೀತಿಯನ್ನು ಧಾರೆ ಎರೆದ ಮಾತೋಶ್ರೀಯನ್ನು, ಕನ್ನಡ ಪ್ರೇಮವನ್ನು, ಬಡತನವನ್ನು ಮತ್ತು ಹಳೆಯದಾವುದನ್ನೂ ಮರೆತಿಲ್ಲದಿರುವುದು ಇವರನ್ನು ಜೀವನದಲ್ಲಿ ಎತ್ತರಕ್ಕೆ ಏರಿಸುತ್ತಿದೆ. ಇಂತಹ ಕವಿ ಶ್ರೀ ತುಳಸಿತನಯರ ಧ್ವನಿಸುರಳಿಗಳು ನಮ್ಮ ಮನೆಗಳನ್ನು ತುಂಬಲಿ; ಅವರ ಗೀತೆಗಳು ಮನಗಳನ್ನು ತುಂಬಿ ಅವುಗಳ ಸೊಬಗು-ಪರಿಮಳಗಳು ಎಲ್ಲೆಡೆ ಪಸರಿಸಲೆಂದು ಹಾರೈಸುತ್ತೇನೆ.

**ಟಿಪ್ಪಣಿ-೯ : ಮಹಿಳೆಯರಿಗೆ ಕಾನೂನು**

ಮಹಿಳೆಯರಿಗೆ ತಮ್ಮ ತಂದೆ ಮತ್ತು ತಾತನ ಹಾಗೂ ಇತರೆ ರಕ್ತಸಂಬಂಧಿಗಳ ಆಸ್ತಿಯಲ್ಲಿ ಪಾಲಿದೆ ಎಂದು ಹೇಳಿದರೂ ಸಂಬಂಧಿಸಿದವರು ಆಕೆಗೆ ಆ ಆಸ್ತಿಯಲ್ಲಿ ಪಾಲು ಕೊಡದೇ ಇರುವುದರಿಂದ, ಅವರು ನ್ಯಾಯಾಲಯದ ಮೊರೆ ಹೋಗಬೇಕಾಗುತ್ತದೆ. ಇದರಿಂದ ಮಹಿಳೆಯರಿಗೆ ಕಾನೂನು ಅರಿವು ಅಗತ್ಯ ಎಂಬುದು ಮನದಟ್ಟಾಗುತ್ತದೆ.

ಇನ್ನು ವೇಶ್ಯಾವೃತ್ತಿಗೆ ಅವರ ಬಡತನ, ಕೆಟ್ಟಪರಿಸರ, ಅವಿದ್ಯೆಗಳೇ ಮುಖ್ಯ ಕಾರಣ ವೆನ್ನಬೇಕು. ಅಂತಹ ಮಹಿಳೆಯರಿಗೆ ಶಿಕ್ಷಣದ ಜೊತೆಗೆ ದುಡಿಮೆಗೆ ಅಗತ್ಯವಿರುವ ವೃತ್ತಿಶಿಕ್ಷಣವನ್ನು ಕೊಡುವುದು ಹಾಗೂ ಅವರ ಪುನರ್‌ವಸತಿಗೆ ಕ್ರಮ ತೆಗೆದುಕೊಳ್ಳುವುದು ಅವಶ್ಯವಿರುತ್ತೆ. ಅಂತಹ ಕೆಲಸವನ್ನು ಸರ್ಕಾರ ಹಾಗೂ ಸಾರ್ವಜನಿಕ ಸಂಸ್ಥೆಗಳು ಮಾಡಬೇಕೆಂದು ಸರ್ವರೂ ನಿರೀಕ್ಷಿಸುವುದು ಸಹಜ.

ಮಾನಭಂಗ, ಅತ್ಯಾಚಾರ, ವರದಕ್ಷಿಣೆಯ ಕಿರುಕುಳ, ಹಿಂಸೆ, ಸಾವು-ನೋವುಗಳ ಪ್ರಕರಣಗಳು ಪೊಲೀಸ್ ಠಾಣೆಗಳಲ್ಲಿ ದಾಖಲಾದಾಗ, ಸಂಬಂಧಿಸಿದವರು ಸಾಕ್ಷಿಗಳನ್ನು

ಪೊಲೀಸರ ಬಳಿ ಕರೆದುಕೊಂಡು ಹೋಗಿ ಹೇಳಿಕೆಗಳನ್ನು ಕೊಡಿಸುವುದು ಹಾಗೂ ನ್ಯಾಯಾಲಯದಲ್ಲಿ ಕೇಸು ವಿಚಾರಣೆಗೆ ಬಂದಾಗ ಅವರಿಂದ ಸಾಕ್ಷಿ ಹೇಳಿಸುವುದು ಬಹುಮುಖ್ಯ. ಇಲ್ಲದೇ ಹೋದರೆ, ನ್ಯಾಯಾಲಯಗಳು ನಿಸ್ಸಹಾಯಕ ಪರಿಸ್ಥಿತಿಯಲ್ಲಿ ಅಪರಾಧಿಯನ್ನು ಬಿಡುಗಡೆ ಮಾಡಬೇಕಾಗುತ್ತೆ.

ಈಗ ಕಾನೂನಿನ ಬಲೆಯಲ್ಲಿ ತುಂಬಾ ದೊಡ್ಡ ದೊಡ್ಡ ರಂಧ್ರಗಳಿದ್ದು, ಆರೋಪಿಗಳು ಅದರಲ್ಲಿ ಸಿಕ್ಕಿಹಾಕಿಕೊಳ್ಳದೇ ತಪ್ಪಿಸಿಕೊಳ್ಳುವ ಪ್ರಸಂಗಗಳೇ ಹೆಚ್ಚು. ಈಗ ಬೆಂಗಳೂರಿನಲ್ಲಿ ಶೋಷಣೆಗೆ ಒಳಗಾದ ಮಹಿಳೆಯರ ರಕ್ಷಣೆಗೆ ಸಹಾಯಮಾರ್ಗ ಪದ್ಧತಿ (Help Line System) ಜಾರಿಗೆ ಬಂದಿದ್ದು, ಸಮಾಜಕಲ್ಯಾಣ ಇಲಾಖೆ, ವಕೀಲರು, ಪೊಲೀಸರು, ರೋಟರಿ, ಲಯನ್ಸ್ ಇನ್ನಿತರ ಸಾರ್ವಜನಿಕ ಸಂಸ್ಥೆಗಳೂ ಇಂತಹ ವ್ಯವಸ್ಥೆಯನ್ನು ಜಾರಿಗೆ ತರುವುದು ಉಚಿತ.

ಅಲ್ಲದೆ, ನೆರೆಹೊರೆಯವರು, ಸಾರ್ವಜನಿಕರು ಮಹಿಳೆಯು ಶೋಷಣೆಗೆ ಒಳಗಾದಾಗ ಇದು ತಮ್ಮ ಸಮಸ್ಯೆಯಲ್ಲವೆಂದು ಸುಮ್ಮನೆ ಇರುವುದು ಸಾಮಾನ್ಯ ಸಂಗತಿ. ಆದರೆ ಸಂಬಂಧಿಸಿದ ನೆರೆಹೊರೆಯವರು, ಸಾರ್ವಜನಿಕರು ಯಾವುದೇ ಮಹಿಳೆ ಹಿಂಸೆ, ಶೋಷಣೆಗೆ ಒಳಗಾಗಿದ್ದು ಗೊತ್ತಾದಲ್ಲಿ ಪೊಲೀಸ್ ಅಥವಾ ಸಂಬಂಧಿಸಿದ ಸಾರ್ವಜನಿಕ ಸಂಸ್ಥೆಗಳಿಗೆ ತಿಳಿಸುವುದು ಅಗತ್ಯ. ಆಗ ಅವರು ಹಿಂಸೆ ಅಥವಾ ಶೋಷಣೆಗೊಳಗಾದ ಮಹಿಳೆಯರ ರಕ್ಷಣೆಗೆ ಮುಂದಾಗಲು ಸಹಾಯವಾಗುತ್ತೆ.

೧೧

# 'ಉದಹಿಡಿತ'ದ ಪ್ರಸಾದ್ : ಕೆಲವು ಪ್ರಸಂಗಗಳು

ಡಾ. ತೇಜಸ್ವಿ ಕಟ್ಟೀಮನಿ

೧

"ವಿದ್ಯಾರ್ಥಿದೆಸೆಯಿಂದಲೇ ಸಮಾಜಕ್ಕಾಗಿ, ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮನ್ನು ತೊಡಗಿಸಿಕೊಂಡವರು ಸಿ.ಮಲೆಸಿದ್ದಪ್ಪ ಅವರು. ಪದವೀಧರರಾಗಿದ್ದ ಇವರಿಗೆ ಉನ್ನತ ಹುದ್ದೆಯ ಅವಕಾಶವಿದ್ದರೂ ಕೆಲಸಕ್ಕೆ ಸೇರದೆ, ಸ್ವಾತಂತ್ರ್ಯಾನಂತರ 'ವಿದ್ಯಾವಂತರೆಲ್ಲ ತಮ್ಮ ತಮ್ಮ ಹಳ್ಳಿಗಳಿಗೆ ಹೋಗಿ ನೆಲೆಸಿ ಗ್ರಾಮೋದ್ಧಾರ ಮಾಡಿರಿ' ಎಂಬ ಗಾಂಧೀಜಿಯ ಕರೆಯಂತೆ ತಮ್ಮ ಸ್ವಗ್ರಾಮ ಘಟ್ಟಿಹೊಸಹಳ್ಳಿಗೆ ಹೋಗಿ ನೆಲೆಸಿದರು. ಗ್ರಾಮದಲ್ಲಿ ಖಾದಿ ಚರಕಕೇಂದ್ರ ಸ್ಥಾಪಿಸಿ, ಗ್ರಾಮಸ್ಥರಿಗೆ ಸ್ವಯಂ ಉದ್ಯೋಗ ಕಲ್ಪಿಸಿದರು. ಸೈನ್ಸ್ ಟೀಚರ್ ಆಗಿ ಯಾವ ಫಲಾಪೇಕ್ಷೆಯೂ ಇಲ್ಲದೇ ಎರಡುವರ್ಷ ಸೇವೆಸಲ್ಲಿಸಿ ಮಕ್ಕಳಿಗೆ ಮಾರ್ಗದರ್ಶಿಯಾದರು. ಹೊಳಲ್ಕೆರೆ ತಾಲ್ಲೂಕಿನಲ್ಲಿ ಅನೇಕ ಸಹಕಾರಿಸಂಘಗಳನ್ನು, ಸಹಕಾರಿ ಬೇಸಾಯಸಂಘಗಳನ್ನು ಸ್ಥಾಪಿಸಿದ್ದು, ಹಲವು ವಿದ್ಯಾಸಂಸ್ಥೆಗಳ ಸ್ಥಾಪನೆಗೆ ಕಾರಣರಾಗಿದ್ದಾರೆ. ಸ್ವಗ್ರಾಮದಲ್ಲಿ ಅಸ್ಪೃಶ್ಯತೆಯ ನಿವಾರಣೆಗಾಗಿ ಹರಿಜನರೂ ಸಾರ್ವಜನಿಕ ಬಾವಿಯನ್ನು ಉಪಯೋಗಿಸಲು ಅವಕಾಶ ಮಾಡಿಕೊಟ್ಟರಲ್ಲದೆ, ಅವರಿಗೆ ದೇವಸ್ಥಾನಗಳಲ್ಲಿ ಪ್ರವೇಶ ಕಲ್ಪಿಸಿದ್ದು ಅವರ ಸಮಾನತೆಯ ತುಡಿತವನ್ನು ತೋರಿಸುವಂತಹದು. ಮೂಢನಂಬಿಕೆಯನ್ನು ಸಮಾಜದಿಂದ ಹೊರದೂಡಿಸುವ ನಿಟ್ಟಿನಲ್ಲಿ ಊರಜಾತ್ರೆಯಲ್ಲಿ ಬಹಿರಂಗವಾಗಿ ಜೀವಂತ ಆಡಿನಮರಿಯ ಚರ್ಮ ಸುಲಿದುಕೊಳ್ಳುವ ಪದ್ಧತಿಯನ್ನು ಯಾವ ವಿರೋಧವನ್ನೂ ಲೆಕ್ಕಿಸದೆ ನಿಲ್ಲಿಸಿದರು.

"ಪಾನನಿರೋಧ ನೀತಿಯನ್ನು ತಮ್ಮ ಗ್ರಾಮದಲ್ಲಿ ಯಶಸ್ವಿಯಾಗಿ ಜಾರಿಗೆತಂದದ್ದು, ಜಾತೀಯತೆಯ ವಿರುದ್ಧ ಹೋರಾಡಿದ್ದು, ಸ್ವಚ್ಛ ರಾಜಕಾರಣ ಮಾಡಿದ್ದು, ತಾಲ್ಲೂಕಿನ ಸರ್ವತೋಮುಖ ಅಭಿವೃದ್ಧಿಗಾಗಿ, ಸಮಾಜಸುಧಾರಣೆಗಾಗಿ ಹೀಗೆ ಹತ್ತು ಹಲವಾರು

ರೀತಿಯಲ್ಲಿ ತ್ರಿಕರಣಶುದ್ಧಿಯಿಂದ ತಮ್ಮನ್ನು ಅರ್ಪಿಸಿಕೊಂಡವರೆಂದರೆ ಮಲೆಸಿದ್ದಪ್ಪ ಅವರು''-ಹೀಗೆ 'ಘಟ್ಟಿಹೊಸಹಳ್ಳಿ ಗಟ್ಟಿಗ' ಸಂಪುಟದಲ್ಲಿ ಅವರನ್ನು ಕುರಿತು ಬರೆದಿದ್ದಾರೆ ವಿಶ್ರಾಂತ ನ್ಯಾಯಾಧೀಶ ಜಿ.ಹೆಚ್.ಪ್ರಸಾದ್.

ಘಟ್ಟಿಹೊಸಹಳ್ಳಿಯಂಥ ಕುಗ್ರಾಮವನ್ನು ತಮ್ಮ ಕರ್ಮಭೂಮಿಯನ್ನಾಗಿಸಿಕೊಂಡು, ಗ್ರಾಮೋದ್ಧಾರವನ್ನೇ ತಮ್ಮ ಉಸಿರಾಗಿ ಬಾಳಿದ ಸಿ.ಮಲೆಸಿದ್ದಪ್ಪನವರನ್ನು ಕುರಿತು 'ಅಭಿನಂದನಗ್ರಂಥ' ತರಬೇಕೆಂದು ನ್ಯಾಯಾಧೀಶ ಜಿ.ಹೆಚ್.ಪ್ರಸಾದ್ ಅವರು ಕಳೆದ ಹನ್ನೊಂದು ವರ್ಷಗಳಿಂದ ಹಗಲೂ-ರಾತ್ರಿ ಧ್ಯಾನಿಸಿದ್ದಾರೆ. ಹರ್ತಿಕೋಟೆ ವೀರೇಂದ್ರಸಿಂಹ ಹಾಗೂ ನನ್ನನ್ನು ಸಂಪಾದಕರನ್ನಾಗಿ ಅಧಿಕೃತವಾಗಿ ನಿಯಮಿಸಿದ್ದರೂ, ಗ್ರಂಥದ ಬಹು ಪಾಲು ಕೆಲಸವನ್ನು ಖ್ಯಾತ ಇತಿಹಾಸಕಾರ ಪ್ರೊ.ಲಕ್ಷ್ಮಣ್ ತೆಲಗಾವಿ ನೋಡಿಕೊಂಡಿದ್ದಾರೆ. 'ಅಭಿನಂದನಗ್ರಂಥ'ದ ಕೆಲಸ ಸುರುವಾದ ಮೇಲೆ ಹ.ವೀ.ಸಿ. - ದಾವಣಗೆರೆ, ಬಳ್ಳಾರಿ ಜೇಲುಗಳನ್ನು ಸುತ್ತಿಕೊಂಡು ಚಿತ್ರದುರ್ಗಕ್ಕೆ ಬಂದರು. ನಾನು ಸಂಘಟನೆ, ಪತ್ರಿಕೆ, ರಾಜಕಾರಣ, ಶ್ರೀಮಠ ಎಂದು ಅನೇಕ ಸುತ್ತು ಕರ್ನಾಟಕವನ್ನು ಬಿಡುವಿಲ್ಲದೆ ಸುತ್ತಿದೆ. ಜಿ.ಹೆಚ್.ಪ್ರಸಾದ್ ಅವರು ಛಲಬಿಡದೆ ಬೆಂಬತ್ತಿದ್ದರು. ಕೆಲ ಲೇಖಕರಿಗೆ ೨-೩ ಸಲ ಪತ್ರಿಸಿದೆವು, ಕೆಲವರಿಗೆ ಫೋನಿಸಿದೆವು. ಕೆಲವರು ತಕ್ಷಣ ಕಳಿಸಿದರು! ಕೆಲವರು ಅಂತು ಕಳಿಸಿದರು! ಇನ್ನೂ ಕೆಲವರು ಕಳಿಸಲೇ ಇಲ್ಲ!

೧೬-೧-೨೦೦೨ರಂದು ಮಲೆಸಿದ್ದಪ್ಪನವರು ಇಹಲೋಕ ತ್ಯಜಿಸಿದರು! ಅಭಿನಂದನ ಸಮಿತಿಯ ಅಧ್ಯಕ್ಷರಾಗಿದ್ದ ವಾಲ್ಮೀಕಿ ಜನಾಂಗದ ಹಿರಿಯರಾಗಿದ್ದ, ರಾಜಕಾರಣದಲ್ಲಿ ಸ್ವಚ್ಛ ಕೈಗೆ ಪ್ರಸಿದ್ಧರಾಗಿದ್ದ ಮೈಸೂರಿನ ಎನ್. ಸಂಜೀವಯ್ಯನವರು ದೈವಾಧೀನರಾಗಿದ್ದರು! ಖ್ಯಾತ ಶಿಕ್ಷಣತಜ್ಞ ಪ್ರಿನ್ಸಿಪಾಲ ಕೆ.ಬಿ. ಪಾಲಯ್ಯನವರ ಅಧ್ಯಕ್ಷತೆಯಲ್ಲಿ ಪ್ರಕಟಣಸಮಿತಿ ಸಜ್ಜುಗೊಂಡಿತು. ಆಗಲೇ ತಯಾರಿರುವ ಲೇಖನಗಳನ್ನು ಜೋಡಿಸಿ ಡಿ.ಟಿ.ಪಿ.ಗೆ ಕಳಿಸಿಬಿಟ್ಟರು ಹರ್ತಿಕೋಟೆ ವೀರೇಂದ್ರಸಿಂಹ ಅವರು!

೧೯-೫-೨೦೦೨ರಂದು ಹರ್ತಿಕೋಟೆಯಲ್ಲಿ 'ಚಿತ್ರದುರ್ಗ ಜಿಲ್ಲಾ ಮಟ್ಟದ ನಾಯಕ ಜನಾಂಗದ ಎರಡನೇ ಸಮ್ಮೇಳನ'ವನ್ನು ವಿರೇಂದ್ರಸಿಂಹ ಅವರು ಅತ್ಯಂತ ಶಿಸ್ತುಬದ್ಧವಾಗಿ ಸಂಘಟಿಸಿದ್ದರು. ಪ್ರೊ.ಲಕ್ಷ್ಮಣ್ ತೆಲಗಾವಿ, ನ್ಯಾಯಧೀಶರಾದ ಜಿ.ಹೆಚ್.ಪ್ರಸಾದ್ ಹಾಗೂ ನಾನು ಭಾಗವಹಿಸಿದ್ದೆವು. ಹರ್ತಿಕೋಟೆಯಲ್ಲಿ ಇಡೀ ದಿನ ಹಬ್ಬದ ವಾತಾವರಣ. ಪ್ರಥಮಸಲ ಗಿರಿಜನ ಬರಹಗಾರರ ರಾಜ್ಯಮಟ್ಟದ ಸಮಾವೇಶ ಕೂಡಾ ಅಂದೇ ನಡೆಯಿತು. ಡಾ.ಕಮಲಾ ಹಂಪನಾ ಅವರು ಉದ್ಘಾಟಿಸಿ 'ವಾಲ್ಮೀಕಿ ಬುಡಕಟ್ಟಿನ' ಶಿಸ್ತುಬದ್ಧ ಅಧ್ಯಯನಕ್ಕೆ ಕರೆಕೊಟ್ಟರು. ಮರುದಿನ, ೨೦ರಂದು ನಾವು ನಾಲ್ಕೂಜನ ಬೆಂಗಳೂರಿನ ಚಾಮರಾಜಪೇಟೆಯಲ್ಲಿರುವ 'ವಿಶ್ವಾಸ್ ಪ್ರಿಂಟ್ಸ್'ನಲ್ಲಿ ಮುಂಜಾನೆ ೧೧ಗಂಟೆಗೆ ಭೇಟಿಯಾಗುವುದೆಂದು ನಿರ್ಧರಿಸಲಾಗಿತ್ತು. ಅಂದು ರಾತ್ರಿಯೇ ಶ್ರೀಮತಿ

ಕಮಲಾ ಹಂಪನಾ ಅವರ ಕಾರಿನಲ್ಲಿ ನಾನು ಬೆಂಗಳೂರು ತಲುಪಿ ಬೆಳಿಗ್ಗೆ ಪ್ರೆಸ್ಸಿಗೆ ಹೋದಾಗ-ನಮ್ಮ ಸಂಪಾದಕರಾದ ಹರ್ತಿಕೋಟೆ ವೀರೇಂದ್ರಸಿಂಹ, ಸಂಚಾಲಕರಾದ ಜಿ.ಹೆಚ್.ಪ್ರಸಾದ್, ಉಪಾಧ್ಯಕ್ಷರಾದ ಪ್ರೊ.ಲಕ್ಷ್ಮಣ್ ತೆಲಗಾವಿ ಅವರಲ್ಲದೆ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಕೆ.ಎಲ್.ರಾಜಶೇಖರ್ ಹಾಜರಿದ್ದರು. ಪುಸ್ತಕಗಳ ಪ್ರಿಂಟ್, ಪ್ರೂಫ್, ಮುಖಪುಟ ವಿನ್ಯಾಸದಲ್ಲಿ ರಾಜಶೇಖರ್ ಎತ್ತಿದ ಕೈ. ರಾತ್ರಿ ೧೧ರ ವರೆಗೆ ಕೆಲವರು ಪ್ರೂಫ್ ನೋಡಿದರೆ, ಉಳಿದವರು ವಿನ್ಯಾಸದ ಕಡೆಗೆ ಗಮನಹರಿಸಿದರು. ಮತ್ತೆ ಮರುದಿನ ಬೆಳಿಗ್ಗೆ ೯ ಗಂಟೆಗೆ ನಾವೆಲ್ಲಾ ಪ್ರೆಸ್ಸಿನಲ್ಲಿ ಹಾಜರ್ ! ಮಧ್ಯಾಹ್ನದ ತಿಂಡಿ/ಊಟ ಎಲ್ಲಾ 'ವಿಶ್ವಾಸ್ ಪ್ರಿಂಟ್ಸ್' ನಲ್ಲಿಯೇ! ಜಿ.ಹೆಚ್.ಪ್ರಸಾದ್ ಅವರು ಅರಣ್ಯಮಂತ್ರಿ ಕೆ.ಎಚ್.ರಂಗನಾಥ ಅವರ ಲೇಖನ ತರಲು ಪರದಾಡುತ್ತಿದ್ದರು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ.ಬರಗೂರು ರಾಮಚಂದ್ರಪ್ಪನವರಿಂದ 'ಬೆನ್ನುಡಿ' ಬರೆಸುವುದು ಬೇರೆ ಬಾಕಿಯಿತ್ತು. ಪ್ರಸಾದ್ ಸಾಹೇಬರ ಶ್ರಮ ಮೆಚ್ಚತಕ್ಕದ್ದು. ದಿವಂಗತ ಮಲೆಸಿದ್ದಪ್ಪನವರ ಜೊತೆಗೆ ಜೇಲಿನಲ್ಲಿದ್ದ, ಅವರೊಂದಿಗೆ ಸಮಾಜವಾದಿಪಕ್ಷದ ಜೊತೆ ತಮ್ಮನ್ನು ತಾವು ಗುರ್ತಿಸಿಕೊಂಡಿದ್ದ, ಗೌರವಸ್ಥ ರಾಜಕಾರಣಿ ಎಂದು ಇವತ್ತಿಗೂ ಕರೆಯಲ್ಪಡುವ ಕೆ.ಎಚ್.ರಂಗನಾಥ್‌ರ ಲೇಖನವನ್ನು ಹಾಕಲೇಬೇಕೆಂದು ಅವರ ಹಠ! ರಂಗನಾಥರಿಗೆ ಪುರಸೊತ್ತಿಲ್ಲ! ಒಂದುಕಾಲಕ್ಕೆ ನಮಗೆಲ್ಲಾ ಗಂಟೆಗಟ್ಟಲೆ ಹರಟಲು ಸಿಗುತ್ತಿದ್ದ ಬರಗೂರು ರಾಮಚಂದ್ರಪ್ಪನವರು ಇವತ್ತು ಸಮಯಾಭಾವದಿಂದ ದುಬಾರಿ ಯಾಗಿದ್ದಾರೆ. ಮೊದಲು ಬರಗೂರು ಅವರ ಲೇಖನ ಹಾಕುವುದೆಂದು ನಿರ್ಧರಿಸಲಾಗಿತ್ತು. ಆಮೇಲೆ 'ಬೆನ್ನುಡಿ'ಯನ್ನಾದರೂ ಬರೆದುಕೊಡಲು ದುಂಬಾಲು ಬಿದ್ದೆವು. 'ಛಲಬಿಡದ ತ್ರಿವಿಕ್ರಮನಂತೆ ಈ ಇಬ್ಬರೂ ವಿ.ವಿ.ಐ.ಪಿ.ಗಳ ಕಡೆ ಅಲೆದ ಪ್ರಸಾದ ಅವರು, ಸಾಯಂಕಾಲದ ಹೊತ್ತಿಗೆ ಕೆ.ಎಚ್.ರಂಗನಾಥ ಅವರ ಲೇಖನ, ಬರಗೂರು ರಾಮಚಂದ್ರಪ್ಪ ನವರ ಬೆನ್ನುಡಿ ಹೊತ್ತು ಪ್ರೆಸ್ಸಿಗೆ ಬಂದೇಬಿಟ್ಟರು. ನಾನು ಹ.ವೀ.ಸಿ. ಆಗಲೇ ಸುಸ್ತಾಗಿದ್ದೆವು. ನಾನಂತೂ ಸಿಕ್ಕ ಬಸ್ಸಿನಲ್ಲಿ ಧಾರವಾಡಕ್ಕೆ ಓಡಿ ಹೋಗಲು ತಯಾರಾಗಿದ್ದೆ!

ಮೇ ೨೬ರ ಭಾನುವಾರ (೨೦೦೨) ಚಿತ್ರದುರ್ಗದ ಗುರುಭವನದಲ್ಲಿ 'ಘಟ್ಟಿಹೊಸಹಳ್ಳಿ ಗಟ್ಟಿಗ' ಸಂಪುಟ ಬಿಡುಗಡೆ ಕಾರ್ಯಕ್ರಮ. ಚಿತ್ರದುರ್ಗ ಜಿಲ್ಲೆಯ ಹಳೇ ತಲೆಮಾರಿನ ಹಿರಿಯರು ಬೆಳಿಗ್ಗೆಯೇ ಒಬ್ಬೊಬ್ಬರೇ ಬರಹತ್ತಿದ್ದರು. ದಿವಂಗತ ಮಲೆಸಿದ್ದಪ್ಪನವರ ಸಹಪಾಠಿಗಳು, ಜೇಲುವಾಸಿಗಳು, ಜೊತೆಗೆ ರಾಜಕೀಯ ಮಾಡಿದವರು, ಅವರನ್ನು ಮೆಚ್ಚಿ ಅವರ ಹಿಂಬಾಲಕರಾಗಿದ್ದವರು ತಮ್ಮ ನೆನಪುಗಳ ಬುತ್ತಿಯನ್ನು ಪರಸ್ಪರ ಹಂಚಿಕೊಳ್ಳುತ್ತ, ಪರಸ್ಪರರನ್ನು ಅಭಿನಂದಿಸುತ್ತ ಕುಳಿತರು.

ಮಲೆಸಿದ್ದಪ್ಪನವರ ಆರೂಜನ ಹೆಣ್ಣುಮಕ್ಕಳು, ಅಳಿಯಂದಿರು, ಆರೂಜನ ಗಂಡು ಮಕ್ಕಳು, ಸೊಸೆಯಂದಿರು, ಅಸಂಖ್ಯಾತ ಮೊಮ್ಮಕ್ಕಳು, ಸಂಬಂಧಿಕರು, ಒಡನಾಡಿಗಳು,

ಅವರ ಧರ್ಮಪತ್ನಿ ಶ್ರೀಮತಿ ಶಾರದಮ್ಮ ಅವರುಗಳಿಂದ ತುಂಬಿ ತುಳುಕುತ್ತಿದ್ದ ಸಭಾಭವನ.

ನಾಯಕ ಜನಾಂಗದಲ್ಲಿ ನನಗೆ ಗೊತ್ತಿರುವ ಮಟ್ಟಿಗೆ, ಇಂಥ ಸೌಭಾಗ್ಯ ಪಡೆದವರು ದಿವಂಗತ ಹರತಿ ವೀರನಾಯಕರು ಮತ್ತು ಸಿ.ಮಲೆಸಿದ್ದಪ್ಪನವರು ಮಾತ್ರ. ವೀರನಾಯಕರ ಮಕ್ಕಳಿಗಿಂತ ಅನುಕೂಲಸ್ಥರು ಬಹಳ ಜನರಿದ್ದಾರೆ. ಮಲೆಸಿದ್ದಪ್ಪನವರ ಮಕ್ಕಳು, ಅಳಿಯಂದಿರಿಗಿಂತ ಅಧಿಕಾರ, ಹಣದಲ್ಲಿ ಮೇಲುಗೈ ಸಾಧಿಸಿರುವವರು ಅನೇಕರಿದ್ದಾರೆ. ಆದರೆ ಅವರಾರಿಗೂ ಹರ್ತಿಕೋಟೆ ವೀರೇಂದ್ರಸಿಂಹರಂತೆ, ತಮ್ಮ ತಂದೆಗೆ ಇಂಥಾ ಅಪೂರ್ವಗೌರವ ಸಲ್ಲಿಸುವ ಭಾಗ್ಯ ಸಿಕ್ಕಿಲ್ಲ! ರಂಗಸ್ವಾಮಿ, ಜಿ.ಹೆಚ್.ಪ್ರಸಾದ್, ವಿಜಯವಿಕ್ರಂ, ಪ್ರೊ.ಮಾರುತಿ ನಾಯಕರಂಥ ಅಳಿಯಂದಿರು; ಪ್ರಕಾಶ್, ಸಿ.ಎಂ.ಅಶೋಕ, ಸತೀಶ್, ಪ್ರೊ.ವಿವೇಕಾನಂದ, ಡಾ.ರವಿ, ಏಕಲವ್ಯರಂಥಾ ಮಕ್ಕಳು ಮಲೆಸಿದ್ದಪ್ಪನವರ ನೆನಪು ಚಿರಸ್ಥಾಯಿಯಾಗುವಂತೆ ಅವರ ನೆನಪುಗಳೊಂದಿಗೆ, ಬುಡಕಟ್ಟು ದೊರೆಗಳ, ಕೋಟೆ-ಕೊತ್ತಲುಗಳ ನೆನಪು ಮೇಳೈಸುವಂತೆ, ಸಮಾಜವಾದೀ ಹೋರಾಟಗಳ ಹಿನ್ನೆಲೆಯಲ್ಲಿ-ಮಲೆಸಿದ್ದಪ್ಪನವರ ವ್ಯಕ್ತಿತ್ವವನ್ನು ಪುನರ್‌ವ್ಯಾಖ್ಯಾನಿಸುವಂತೆ ತಂದಿರುವ ಈ ಸಂಪುಟ ಬೇಡ ಬುಡಕಟ್ಟಿನ ಸಂಸ್ಕೃತಿಯನ್ನು ದಾಖಲಿಸುವಲ್ಲಿ ಚಾರಿತ್ರಿಕ ಮಹತ್ವವನ್ನು ಹೊಂದಿದೆ! ಬೇಡ ಜನಾಂಗದಲ್ಲಿ ಇಂಥಾ ಒಂದು ಸಾಂಸ್ಕೃತಿಕ ಪರಂಪರೆಯನ್ನು ಆರಂಭಿಸಿದ ಹರ್ತಿಕೋಟೆ ವೀರೇಂದ್ರಸಿಂಹ ಹಾಗೂ ಅವರ ಬಂಧುಗಳು, ಜಿ.ಹೆಚ್.ಪ್ರಸಾದ್ ಹಾಗೂ ಅವರ ಕಳ್ಳುಬಳ್ಳಿಯವರು ಅಭಿನಂದನೆಗೆ ಅರ್ಹರು.

೨

ನ್ಯಾಯ, ನಿಷ್ಠುರತೆಯೊಂದಿಗೆ, ಮೃದುಮಾತಿಗೂ ಹೆಸರಾದ ಜಿ.ಹೆಚ್.ಪ್ರಸಾದ್‌ರು ತಮ್ಮ ಸುದೀರ್ಘ ೨೮ ವರ್ಷಗಳ (೧೯೭೪) ನ್ಯಾಯಾಂಗ ಸೇವೆಯಿಂದ ನಿವೃತ್ತರಾಗಿಯೂ ಚಿಕ್ಕಮಗಳೂರು ಜಿಲ್ಲಾ ಗ್ರಾಹಕರ ಸೇವಾ ವೇದಿಕೆಯ ಅಧ್ಯಕ್ಷರಾಗಿ ನ್ಯಾಯಾಂಗ ಸೇವೆಯಲ್ಲಿ ಮುಂದುವರೆದವರು. ೧೯೪೧ರ ಡಿಸೆಂಬರ್ ೨೧ರಂದು ದಾವಣಗೆರೆಯಲ್ಲಿ ಬಹುದೊಡ್ಡ ಕುಟುಂಬದಲ್ಲಿ ಜನಿಸಿ, ದಾವಣಗೆರೆ, ಮೈಸೂರು, ಬೆಳಗಾವಿಯಲ್ಲಿ ಶಿಕ್ಷಣ ಪಡೆದು, ೧೯೬೭ರಲ್ಲಿ ದಾವಣಗೆರೆಯಲ್ಲಿ ವಕೀಲಿವೃತ್ತಿಯನ್ನು ಆರಂಭಿಸಿದರು. ೧೯೭೪ ರಿಂದ ಮುನ್ಸೀಫ್‌ರಾಗಿ ದೇವದುರ್ಗ, ಪಾವಗಡ, ಹೊಸಪೇಟೆ, ಬಾದಾಮಿ ಮತ್ತು ತುಮಕೂರುಗಳಲ್ಲಿ ಸೇವೆಸಲ್ಲಿಸಿದರು. ತಮ್ಮ ನ್ಯಾಯಪರ ತೀರ್ಮಾನಗಳಿಂದ 'ಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್' ಎಂದೇ ಹೆಸರುವಾಸಿಯಾದರು. ೧೯೮೦ ರಿಂದ ೧೯೮೪ ವರೆಗೆ ಕಾನೂನು ಇಲಾಖೆಯಲ್ಲಿ ಅಧೀನ ಕಾರ್ಯದರ್ಶಿಯಾಗಿ ನೇಮಕ. ೧೯೮೪ ರಿಂದ ೧೯೮೬ರ ವರೆಗೆ ಹಾವೇರಿಯಲ್ಲಿ ಮುನ್ಸೀಫ್ ಮ್ಯಾಜಿಸ್ಟೇಟ್ ಆಗಿ ಸೇವೆ. ೧೯೮೬ ರಿಂದ ಸಿವಿಲ್‌ಜಡ್ಜ್ ಆಗಿ ಬಡ್ತಿಪಡೆದು ಬಿಜಾಪುರ, ಮೈಸೂರಿನಲ್ಲಿ ಸೇವೆಗೈದರು. ೯೩ ರಿಂದ ೯೫ರ ವರೆಗೆ

ಕಾನೂನು ಇಲಾಖೆಯಲ್ಲಿ ಉಪಕಾರ್ಯದರ್ಶಿಯಾಗಿ ಜನಪರ ಕಾನೂನುಗಳನ್ನು ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸುವಿಕೆ. ೧೯೯೫ರಲ್ಲಿ ಜಿಲ್ಲಾ ನ್ಯಾಯಾಧೀಶರಾಗಿ ಬಡ್ತಿ. ಬೆಂಗಳೂರು ಸಿಟಿ ಸಿವಿಲ್ ಮತ್ತು ಸೆಶನ್ಸ್ ಜಡ್ಜ್ ಆಗಿ ತಮ್ಮ ಕಾರ್ಯನೈಪುಣ್ಯಕ್ಕೆ ಮೆಚ್ಚುಗೆ ಪಡೆದರು. ಈ ಮಧ್ಯೆ ಕರ್ನಾಟಕ ರಾಜ್ಯ ನ್ಯಾಯಾಂಗ ಅಧಿಕಾರಿಗಳ ಸಂಘದ ಉಪಾಧ್ಯಕ್ಷರಾಗಿ ತಮ್ಮ ಸಂಘಟನಾ ಶಕ್ತಿಯನ್ನು ತೋರ್ಪಡಿಸಿದರು. ೯೭ ರಿಂದ ೯೮ರ ವರೆಗೆ ಮಂಡ್ಯ ಜಿಲ್ಲಾ ಸೆಷನ್ಸ್ ಜಡ್ಜ್ ಆಗಿ, ೧೯೯೯ ರಿಂದ ೨೦೦೧ರ ವರೆಗೆ ಶಿವಮೊಗ್ಗ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಸೇವೆಸಲ್ಲಿಸಿದರು. ಶಿವಮೊಗ್ಗ ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಅಧ್ಯಕ್ಷರಾದಾಗ (೧೯೯೯-೨೦೦೧) ಅತೀ ಹೆಚ್ಚಿನ ವ್ಯಾಜ್ಯಗಳನ್ನು ಲೋಕ ಅದಾಲತ್ ಅಡಿಯಲ್ಲಿ ಇತ್ಯರ್ಥವಾಗುವಂತೆ ಮಾಡಿ ರಾಜ್ಯದಲ್ಲಿಯೇ ಶಿವಮೊಗ್ಗ ಜಿಲ್ಲೆಗೆ ಎರಡು ಸಾರಿ ಪ್ರಥಮಸ್ಥಾನ ದೊರಕಿಸಿಕೊಟ್ಟುದು ಜಿ.ಹೆಚ್.ಪ್ರಸಾದ್‌ರ ಹೆಗ್ಗಳಿಕೆ. ೧೯೬೭ ರಿಂದ ೧೯೭೪ರ ವರೆಗೆ ದಾವಣಗೆರೆಯಲ್ಲಿ ವಕೀಲಿವೃತ್ತಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದ ಪ್ರಸಾದ್‌ರು (೧೮-೦೩-೧೯೭೩) ಅಖಿಲ ಕರ್ನಾಟಕ ಮಟ್ಟದ ನಾಯಕ ಜನಾಂಗದ ದ್ವಿತೀಯ ಸಮ್ಮೇಳನದ ಕಾರ್ಯದರ್ಶಿಯಾಗಿ ತಮ್ಮ ಸಮಾಜಪರ ಕಾಳಜಿಯನ್ನು ಆರಂಭದಲ್ಲಿಯೇ ತೋರಿಸಿದ್ದರು. ದಿವಂಗತ ಹೊ.ಚಿ. ಬೋರಯ್ಯ, 'ಇತಿಹಾಸಜ್ಞ' ದಿವಂಗತ ಹರತಿ ವೀರನಾಯಕರ ಮುಖಂಡತ್ವದಲ್ಲಿ ಸಮ್ಮೇಳನ ವನ್ನು ಯಶಸ್ವಿಯಾಗಿ ಸಂಘಟಿಸಿ ರಾಜ್ಯದ ಮೂಲೆ ಮೂಲೆಯಿಂದ ವಾಲ್ಮೀಕಿ ಮುಖಂಡರು ಪಾಲ್ಗೊಳ್ಳುವಂತೆ ಮಾಡುವಲ್ಲಿ ಪ್ರಸಾದ್ ಅವರ ವ್ಯಾಪಕ ಜನಪರ ಕಾಳಜಿಯನ್ನು ಗುರುತಿಸಬಹುದು. ಅದೇ ಅಖಿಲ ಕರ್ನಾಟಕ ನಾಯಕ ಜನಾಂಗದ ದ್ವಿತೀಯ ಸಮ್ಮೇಳನದಲ್ಲಿ 'ವಾಲ್ಮೀಕಿ' ಸ್ಮರಣಸಂಚಿಕೆಯನ್ನು ದಿವಂಗತ ಹರ್ತಿಕೋಟೆ ವೀರನಾಯಕರ ಸಂಪಾದಕತ್ವದಲ್ಲಿ ಹೊರತರುವಲ್ಲಿ ಪ್ರಸಾದ್‌ರ ದುಡಿಮೆ ಅಗಾಧವಾಗಿದೆ.

೧೩-೬-೧೯೭೧ರಲ್ಲಿ ಬೆಂಗಳೂರಿನ ಪುಟ್ಟಣ್ಣಚೆಟ್ಟಿ ಪುರಭವನದಲ್ಲಿ 'ಅಖಿಲ ಮೈಸೂರು ನಾಯಕ ಜನಾಂಗದ ಪ್ರಥಮ ಸಮ್ಮೇಳನ' ಜರುಗಿದ್ದು, ಮೈಸೂರು ಸರ್ಕಾರದ ಸಾರಿಗೆ ಉಪಸಚಿವರಾಗಿದ್ದ ದಿವಂಗತ ಹೊ.ಚಿ.ಬೋರಯ್ಯನವರು ಅಧ್ಯಕ್ಷರಾಗಿಯೂ ಬೆಂಗಳೂರಿನ ವಕೀಲರಾದ ಎಸ್.ಹನುಮಂತಯ್ಯನವರು ಪ್ರಧಾನ ಕಾರ್ಯದರ್ಶಿಗಳಾಗಿಯೂ ಕಾರ್ಯ ನಿರ್ವಹಿಸಿದ್ದನ್ನು ನೆನೆಯಬಹುದು. ಆಂಧ್ರಪ್ರದೇಶದ ಕೋಸಗಿ ರಾಜಮನೆತನದ ಎಂ.ಎಲ್.ಎ. ಸತ್ಯನಾರಾಯಣರಾಜು (ಕಲಬುರ್ಗಿಯ ನಿವೃತ್ತ ತಹಶೀಲದಾರ ಎಂ. ರಾಮರಾಜು ಅವರ ಮಾವಂದಿರು) ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು. ಮೈಸೂರು ಪ್ರದೇಶ ಕಾಂಗ್ರೆಸ್(ಆರ್)ನ ಅಧ್ಯಕ್ಷರಾಗಿದ್ದ ಡಿ.ದೇವರಾಜ ಅರಸ್ ಅವರು ಉದ್ಘಾಟನೆ ಯನ್ನು ನೇರವೇರಿಸಿದ್ದರು. ಸಭೆಗೆ ಆಂಧ್ರಪ್ರದೇಶ, ತಮಿಳುನಾಡು ಹಾಗೂ ರಾಜ್ಯದ ಎಲ್ಲ ಭಾಗದಿಂದಲೂ ಪ್ರತಿನಿಧಿಗಳು ಬಂದಿದ್ದರು (ಅಖಿಲ ಕರ್ನಾಟಕ ನಾಯಕ ಜನಾಂಗದ

ದ್ವಿತೀಯ ಮಹಾಸಮ್ಮೇಳನದ ಸ್ಮರಣಸಂಚಿಕೆ 'ವಾಲ್ಮೀಕಿ'ಯಲ್ಲಿ ದಿ.ವೀರ ನಾಯಕರ ಲೇಖನ, ಪು.೨). ಹೀಗೆ 'ಬೆಳೆಯ ಸಿರಿ ಮೊಳಕೆಯಲ್ಲಿ' ಎಂಬಂತೆ ಜಿ.ಹೆಚ್. ಪ್ರಸಾದ್ ತಮ್ಮ ಯೌವನದ ದಿನಗಳಲ್ಲಿಯೇ ಸಮಾಜದ ಸಂಘಟನೆಯಲ್ಲಿ ತೊಡಗಿಸಿ ಕೊಂಡು ತಮ್ಮ ಜೀವನದ ಮುಂದಿನ ನಿಲುವನ್ನು ತೋರ್ಪಡಿಸಿದ್ದರು.

ನ್ಯಾಯಾಂಗ ಇಲಾಖೆಯ ಉನ್ನತ ಹುದ್ದೆಗಳಲ್ಲಿರುವ ಬೇರೆ ಜನಾಂಗದ ಅನೇಕ ಸ್ನೇಹಿತರನ್ನು ಬಲ್ಲ ನಾನು, ಜಿ.ಹೆಚ್.ಪ್ರಸಾದ್‌ರನ್ನು ಅವರ ನಡವಳಿಯ ಎದುರು ನೋಡಿದಾಗ ಕೆಲಸಲ ಇವರದು ಅತಿ ಜಾಗರೂಕತೆಯ ನಡತೆ ಎಂದು ಅನ್ನಿಸದೇ ಇರದು. ೧೯೯೭ರ ಫೆಬ್ರುವರಿ ತಿಂಗಳ ಒಂದು ಮುಂಜಾನೆ ವಸಂತನಗರದಲ್ಲಿರುವ ಸರಕಾರಿ ವಸತಿಗೃಹದಲ್ಲಿದ್ದ ಪ್ರಸಾದ್‌ರ ಮನೆಗೆ ಫೋನು ಮಾಡಿಯೇ ಹೋಗಿದ್ದೆ. ಪ್ರಸಾದ್ ದಂಪತಿಗಳು ತಮ್ಮ ಎಂದಿನ ತುಂಬು ನಗುಮುಖದಿಂದಲೇ ಸ್ವಾಗತಿಸಿದರು. ತಿಂಡಿತಿನ್ನಲೇಬೇಕೆಂದು ಒತ್ತಾಯಿಸಿದರು. ಡೈನಿಂಗ್ ಟೇಬಲ್ ಮುಂದೆ ಕೂಡುತ್ತ ನಾನು 'ಧಾರವಾಡದ ಪೇಢಾ' ಪ್ರಸಾದ್‌ರಿಗೆ ಕೊಡಹೋದೆ. "ಇದ್ಯಾಕ್ರಿ ಪ್ರೊಫೆಸರ್, ನಮಗೆ ಬೇಡ್ರಿ ಮಾರಾಯ್ರೆ" ಎಂದು ದೃಢವಾಗಿಯೇ ನಿರಾಕರಿಸಿದರು. ನಾನು ಅಷ್ಟೇ ಸ್ಪಷ್ಟವಾಗಿ "ನೋಡ್ರಿ ಸಾಹೇಬ್ರೆ, ನಾನು ವಕೀಲ ಅಲ್ಲ. ಅಲ್ಲದೇ ನನ್ನ ಯಾವ ಕೇಸು ದೇಶದ ಯಾವ ಮೂಲೆಯ ಕೋರ್ಟಿನಲ್ಲೂ ಪೆಂಡಿಂಗ್ ಅಲ್ಲ" ಅಂದೆ. ಅವರು ನಗುತ್ತಲೇ "ಸರಿ ಆತು ಬಿಡ್ರಿ, ನನ್ನ ಮನಸಿನೊಳಗಿಂದು ತಿಳಿಕೊಂಡಬಿಟ್ರಿ" ಅನ್ನುತ್ತ ಪೇಢೆ ಪಾಕೀಟ್ ತೆಗೆದು ಕೊಂಡರು.

ಹೀಗೆ, ಸಂಪೂರ್ಣ ಪಾರದರ್ಶಕತೆಯನ್ನು ತಮ್ಮ ನಡೆನುಡಿಯಲ್ಲಿ ಮೈಗೂಡಿಸಿಕೊಂಡ ಜಿ.ಹೆಚ್.ಪ್ರಸಾದ್‌ರು ಯಾವುದೇ ಒಂದು ಕೆಲಸ ಹಿಡಿದರೆಂದರೆ, 'ಉಡ ಹಿಡಿತ' ಎಂದು ಕರೆದರೆ ಅತಿಶಯೋಕ್ತಿಯೇನಲ್ಲ. ಸಿ.ಮಲೆಸಿದ್ದಪ್ಪನವರ ಅಭಿನಂದನ ಗ್ರಂಥ ತರಹೊರಟ ನಾವೆಲ್ಲಾ 'ಸಂಸ್ಮರಣಗ್ರಂಥ' ತರಬೇಕಾಗಿ ಬಂದರೂ ೭-೮ ವರ್ಷ ಬೇಸರಪಡದೆ, ಪ್ರೊ.ಲಕ್ಷ್ಮಣ್ ತೆಲಗಾವಿ ಅವರಿಗೆ, ಹರ್ತಿಕೋಟೆ ವೀರೇಂದ್ರಸಿಂಹ ಅವರಿಗೆ, ನನಗೆ ಪತ್ರ ಬರೆಯುತ್ತ, ಫೋನಿಸುತ್ತ, ನೆನಪಿಸುತ್ತ, ಕೆಲಸಲ ಪ್ರೀತಿಯಿಂದ ಜಬರಿಸುತ್ತ, ತಕ್ಷಣ ತಮ್ಮ ಫೇಮಸ್ ಮಗುವಿನ ನಗೆ ನಗುತ್ತ ತುಂಬ ಅಚ್ಚುಕಟ್ಟಾಗಿ 'ಘಟ್ಟಿಹೊಸಹಳ್ಳಿ ಗಟ್ಟಿಗ' ಗ್ರಂಥವನ್ನು ಹೊರತಂದ 'ಪ್ರಸಾದ'ರು ನಿಜವಾದ ಗಟ್ಟಿಗರೇ!

ಜಿ.ಹೆಚ್.ಪ್ರಸಾದ್ ಹಾಗೂ ಅವರ ಮಾವ ದಿವಂಗತ ಘಟ್ಟಿಹೊಸಹಳ್ಳಿ ಮಲೆಸಿದ್ದಪ್ಪ ಅವರ ಸಂಬಂಧದ ಬಗ್ಗೆ ಬರೆಯದೇ ಹೋದರೆ, ಪ್ರಸಾದ್‌ರ ಪರಿಚಯ ಅಪೂರ್ಣವಾದಂತೆ. ಮಲೆಸಿದ್ದಪ್ಪ ತಮ್ಮ ಸಾತ್ವಿಕ ಸಿಟ್ಟಿಗೆ ಹೆಸರಾದವರು. ಹೋರಾಟದಲ್ಲಿ ಗಟ್ಟಿಗರು. ಬಹುದೊಡ್ಡ ಕುಟುಂಬಸ್ತರು. ಅವರ ಎರಡನೇ ಅಳಿಯಂದಿರಾದ ಪ್ರಸಾದ್‌ರದು ಮೃದುಸ್ವಭಾವ. ಮಲೆಸಿದ್ದಪ್ಪನವರ ಹಾಗೆ 'ಸತ್ಯವನ್ನು ರೊಪ್ಪಲಂತ' ಮುಖದ ಮೇಲೆ

ಹೇಳುವವರಲ್ಲ. ಹೀಗೆ ವೈರುಧ್ಯಗಳ ಸ್ವಭಾವ ಹೊಂದಿದ್ದರೂ ಇವರಿಬ್ಬರಲ್ಲಿ ಸ್ನೇಹಿತರ ಸಲಿಗೆಯಿತ್ತು. ತಂದೆ ಮಗನ ಅನ್ಯೋನ್ಯತೆಯಿತ್ತು. ಈ ಬಗೆಯ ಅನೂನಭಾವಸಂಬಂಧ ಅಪರೂಪವೆಂಬುದನ್ನು ಲ.ತೆ., ಹ.ವೀ.ಸಿ., ನಾನು ಆಗಾಗ ಮಾತಾಡಿಕೊಂಡು ಸಂಭ್ರಮಪಟ್ಟ ನೂರಾರು ನೆನಪುಗಳಿವೆ.

ಜಿ.ಹೆಚ್.ಪ್ರಸಾದ್‌ರಿಗೆ ಇಷ್ಟವಾದ, 'ಬೇಡಚರಿತ್ರೆ ಹಾಗೂ ಬೇಡ ಪಾಳೆಯಗಾರರ ಕಾಲದ ನ್ಯಾಯಾಂಗವ್ಯವಸ್ಥೆ'ಯ ಸುತ್ತ ಮುತ್ತ ಕುರಿತಂತೆ ಒಂದು ಅಭಿನಂದನಗ್ರಂಥವನ್ನು ತರುತ್ತಿರುವ ಪ್ರೊ.ಲಕ್ಷ್ಮಣ್ ತೆಲಗಾವಿ, ಹರ್ತಿಕೋಟೆ ವೀರೇಂದ್ರಸಿಂಹ ಅವರ ನುಡಿಕಾಯಕಕ್ಕೆ ನಾವೂ ಕೈಹಚ್ಚೋಣ.

೧೨

# ದೊಡ್ಡ ವ್ಯಕ್ತಿತ್ವದ ನನ್ನ ಭಾವ

**ಸಿ. ಎಂ. ಸತೀಶ್**

ನಾನು ಸುಮಾರು ಏಳನೇ ತರಗತಿಯಲ್ಲಿ ಓದುತ್ತಿದ್ದಾಗಿನಿಂದಲೂ ಶ್ರೀ ಜಿ.ಹೆಚ್.ಪ್ರಸಾದ್ ಅವರನ್ನು ಬಲ್ಲೆ. ಏಕೆಂದರೆ ಅವರು ನನ್ನ ಸ್ವಂತ ಭಾವ. ನಾನು ಏಳನೇ ತರಗತಿಯಲ್ಲಿ ಓದುತ್ತಿರುವಾಗಲೇ ಅವರು ನಮ್ಮ ಅಕ್ಕನವರನ್ನು ವಿವಾಹವಾದರು.

ಆ ಸಮಯದಲ್ಲಿ ಅವರು ವಕೀಲಿವೃತ್ತಿಯಲ್ಲಿದ್ದರು. ಹೆಚ್ಚು ಮಾತನಾಡುತ್ತಿರಲಿಲ್ಲ. ತುಂಬಾ ಗಂಭೀರವಾಗಿರುತ್ತಿದ್ದರು. ತುಂಬಾ ತಲೆಹರಟೆ, ಕೆಲಸಕ್ಕೆ ಬಾರದ ಮಾತುಗಳು, ವ್ಯರ್ಥ ಕಾಲಹರಣ ಇವುಗಳನ್ನು ಅವರು ಇಷ್ಟಪಡುತ್ತಿರಲಿಲ್ಲ. ಈ ತರಹದ ಸ್ವಭಾವದವರಾಗಿದ್ದರೂ ಯಾರನ್ನೂ ಅವರು ಮೂದಲಿಸುವುದಾಗಲೀ, ಅವಮಾನ ಮಾಡುವುದಾಗಲೀ, ಬೇಜಾರು ಮಾಡುವುದಾಗಲೀ ನಾನು ಇದುವರೆಗೂ ಕಂಡಿಲ್ಲ! ತುಂಬಾ ನಿಷ್ಠುರವಾದಿಯಾಗಿದ್ದರೂ ಯಾರ ಮನಸ್ಸಿಗೂ ನೋವುಂಟಾಗದಂತೆ ವರ್ತಿಸುತ್ತಿದ್ದುದನ್ನು ನಾನು ಮೊದಲಿನಿಂದಲೂ ಗಮನಿಸಿದ್ದೇನೆ. ಅವರ ಗಂಭೀರತೆಯನ್ನು ಚಿಕ್ಕಂದಿನಿಂದಲೂ ನೋಡಿದ್ದ ನನಗೆ, ಅವರು ತುಂಬಾ ಕೋಪಿಷ್ಟರಿರಬಹುದೆಂದು ತಿಳಿದು ಅವರ ಜೊತೆ ಮಾತನಾಡಲು ಭಯವಾಗುತ್ತಿತ್ತು. ಏಕೆಂದರೆ ಹಳ್ಳಿಯಲ್ಲಿ ಹುಟ್ಟಿ, ಬೆಳೆದ ನನಗೆ ಸಭ್ಯತೆ, ಗಂಭೀರತೆ, ಸಂದರ್ಭಗಳಿಗೆ ತಕ್ಕ ರೀತಿಯಲ್ಲಿ ಪ್ರತಿಕ್ರಿಯಿಸುವುದು, ವರ್ತಿಸುವುದು ಕೆಲವೊಮ್ಮೆ ಗೊತ್ತಾಗುತ್ತಿರಲಿಲ್ಲ. ಆದರೂ ಪ್ರಸಾದ್ ಅವರು ನಮ್ಮ ಮನಸ್ಸಿಗೆ ಆಘಾತವಾಗುವಂತಹ ಮಾತುಗಳನ್ನು ಆಡಿದ್ದಾಗಲೀ, ಬೈದದ್ದಾಗಲೀ, ತಮಾಷೆಗಾಗಿ ಯಾದರೂ ಹಗುರವಾಗಿ ನಮ್ಮ ಬಗ್ಗೆ ಹೇಳುವುದಾಗಲೀ -ಇಂತಹದನ್ನು ನಾನು ಇದುವರೆಗೂ ಕಾಣಲಿಲ್ಲ.

ಈ ವಿಚಾರವನ್ನು ನಾನು ಏಕೆ ಒತ್ತಿ ಹೇಳುತ್ತಿದ್ದೇನೆ ಅಂದರೆ, ಸಾಮಾನ್ಯವಾಗಿ ಮನುಷ್ಯರು ಎಷ್ಟು ಬುದ್ಧಿವಂತರಿರಲೀ ವಿದ್ಯಾವಂತರಿರಲೀ ಮಾತುಗಳನ್ನು ಆಡುವಾಗ, ಸಂವಾದದಲ್ಲಿ ತೊಡಗಿರುವಾಗ, ಗೊತ್ತಿದ್ದೋ ಗೊತ್ತಿಲ್ಲದೆಯೋ ಹಗುರವಾಗಿ ಮಾತನಾಡಿ, ಎಷ್ಟೋ ಸಂಬಂಧಿಕರಿಗೆ, ಸ್ನೇಹಿತರಿಗೆ, ಇತರರಿಗೆ, ಆಗದವರಿಗೆ ನೋವುಂಟು ಮಾಡುವುದೇ

ಆಗಿರುತ್ತದೆ. ಇದು ಮನುಷ್ಯ ತನ್ನ ಜೀವನದಲ್ಲಿ ಮಾಡುವ ಅಪರಾಧಗಳಲ್ಲಿ ಮಹಾಪರಾಧ ಎಂಬುದು ನನ್ನ ಅಭಿಪ್ರಾಯ. ಏಕೆಂದರೆ ಪೃಥ್ವಿಯ ಮೇಲಿರುವ ಜೀವ ರಾಶಿಗಳಲ್ಲಿ, ಯೋಚಿಸುವ ಮತ್ತು ಮಾತನಾಡಬಲ್ಲ ವರವು ಮನುಷ್ಯನಿಗೆ ನೀಡಲ್ಪಟ್ಟಿದೆ. ಇದನ್ನು ಅರಿಯದ ಮಾನವ ಮಾತಿನ ಶಕ್ತಿಯನ್ನು ಯದ್ವಾತದ್ವಾ ಬಳಸಿ ದುಃಖದಲ್ಲಿ ಜೀವನ ಸಾಗುವಂತೆ ತಾನೇ ಮಾಡಿಕೊಂಡಿದ್ದಾನೆ.

ಮಾತಿನ ದುರ್ಬಳಕೆಯಿಂದ ಆಗಿರುವ ಅನಾಹುತವನ್ನು ಅರಿತ ತಮ್ಮ ಋಷಿವರ್ಯರಲ್ಲಿ ಪ್ರಮುಖರಾದ ಪಾತಂಜಲಿ ಮಹರ್ಷಿಗಳು, ಮನುಷ್ಯರು ಮಾತು ಮತ್ತು ಮನಸ್ಸನ್ನು ಹೇಗೆ ಬಳಸಬೇಕು (ಸಮೃದ್ಧ ಜೀವನಕ್ಕೆ) ಎಂಬ ವಿಚಾರವನ್ನು ತಮ್ಮ ಉತ್ಕೃಷ್ಟ ಗ್ರಂಥ 'ಪಾತಂಜಲಿ ಯೋಗಸೂತ್ರ'ದಲ್ಲಿ ವಿವರಿಸಿದ್ದಾರೆ. ಒಳ್ಳೆಯ ಮಾತುಗಳನ್ನು ನಾವು ಆಡದಿದ್ದರೆ ಕರ್ಮವನ್ನು ಹೆಚ್ಚಿಸಿಕೊಂಡಂತೆಯೇ! ಹಾಗಾಗಿಯೇ ಏನೊ, ಸಿದ್ಧಾರ್ಥನು ಬುದ್ಧನಾದ ಮೇಲೆ ಅವನ ಯಾವುದೇ ಮಾತುಗಳು, ಕಾರ್ಯಗಳು, ಯೋಚನೆಗಳು, ವಿಚಾರಗಳು ಇನ್ನೊಬ್ಬರನ್ನು ಘಾಸಿಗೊಳಿಸುವಂತಿರಲಿಲ್ಲ. ಹಾಗೆಯೇ, ಬೇರೆ ಯಾರಾದರೂ ಆತನಿಗೆ ಘಾಸಿಗೊಳಿಸುವಂತೆ, ಚುಚ್ಚುವಂತೆ ಮಾತನಾಡಿದರೂ ಬುದ್ಧ ಕೋಪಗೊಳ್ಳದೆ ಶಾಂತನಾಗಿರುತ್ತಿದ್ದ. ಕೋಪವರ್ತನೆಗೆ ಪ್ರತಿಕ್ರಿಯಿಸುತ್ತಿರಲಿಲ್ಲ. ನನ್ನ ಮಟ್ಟಿಗೆ, ಇದೊಂದು ಅದ್ಭುತ ಸಾಧನೆ. ಈ ತರಹದಲ್ಲಿಯೇ ಮಾತು ಕತೆಗಳನ್ನಾಡುತ್ತಿದ್ದವರು ಜಿ.ಹೆಚ್. ಪ್ರಸಾದ್. ಅವರು ಎಷ್ಟೇ ಕೋಪಗೊಂಡಿದ್ದಾಗಲೂ ಇನ್ನೊಬ್ಬರ ಮನನೋಯಿಸದಂತೆ ಪ್ರತಿಕ್ರಿಯಿಸುತ್ತಿದ್ದರು.

ಕೆಲವು ವರ್ಷಗಳ ಕಾಲ ವಕೀಲಿವೃತ್ತಿ ಮಾಡಿದ ಮೇಲೆ, ಪ್ರಸಾದ್ ಅವರು ಮುನ್ಸೀಫ್ ಆಗಿ ಸೆಲೆಕ್ಟ್ ಆದರು. ಆಗ ನನಗನ್ನಿಸುತ್ತಿದ್ದುದು, ಇದು ಪ್ರಸಾದ್ ಅವರಿಗೆ ಹೇಳಿ ಮಾಡಿಸಿದಂತಹ ಹುದ್ದೆಯಾಗಿದ್ದಿತೆಂದು. ಈ ಹುದ್ದೆಯನ್ನು ಪ್ರಸಾದ್ ಅವರು ಜಿಲ್ಲಾ ನ್ಯಾಯಾಧೀಶರಾಗಿ ನಿವೃತ್ತಿ ಹೊಂದುವವರೆಗೂ ತುಂಬ ಯಶಸ್ವಿಯಾಗಿ ನಿರ್ವಹಿಸಿದರು. ಅವರ ಈ ಯಶಸ್ಸಿಗೆ ತಮ್ಮ ಸ್ವಂತ ಜೀವನದಲ್ಲಿ ಇನ್ನೊಬ್ಬರಿಗೆ ಯಾವ ತರಹದ ಅನ್ಯಾಯವಾಗಬಾರದು ಎಂಬ ಧೋರಣೆ ಅನುಸರಿಸಿದುದೇ ಕಾರಣ. ನ್ಯಾಯ-ಅನ್ಯಾಯದ ವಿಚಾರ ಬಂದರೆ, ಅವರು ಯಾವುದೇ ಪಕ್ಷಪಾತಕ್ಕೆ ಒಳಗಾಗುತ್ತಿರಲಿಲ್ಲ. ನ್ಯಾಯಾಲಯದಲ್ಲಿರುವ ಕೇಸಿನ ವಿಚಾರದಲ್ಲಿ ಯಾರಾದರೂ 'ನಮ್ಮ ಗೆಳೆಯರೇ ನ್ಯಾಯಾಧೀಶರಾಗಿದ್ದಾರೆ. ನಮ್ಮ ಸಂಬಂಧಿಕರೇ ನ್ಯಾಯಾಧೀಶರಾಗಿದ್ದಾರೆ' ಎಂಬ ಸಲಿಗೆಯಲ್ಲಿ ಹಸ್ತಕ್ಷೇಪ ಮಾಡಲು ಯತ್ನಿಸಿದಲ್ಲಿ, ಅದು ಅವರ ಗಮನಕ್ಕೆ ತಕ್ಷಣವೇ ಗೋಚರವಾಗುತ್ತಿತ್ತು. ಅಂತಹ ಸಂದರ್ಭದಲ್ಲಿ ಮಾತ್ರ ಅವರು ತಮ್ಮ ನಿರ್ದಾಕ್ಷಿಣ್ಯ ನಿಲುವನ್ನು ಬಹಿರಂಗಗೊಳಿಸುತ್ತಿದ್ದರು.

ನನಗೆ ತಿಳಿದಹಾಗೆ, ನಾನು ಪ್ರಸಾದ್ ಅವರ ಮನೆಯಲ್ಲಿರುತ್ತಿದ್ದ ಸಮಯದಲ್ಲಿ, ಕೆಲವುಮಂದಿ ಸಂಬಂಧಿಕರು, ಸ್ನೇಹಿತರು ಹಾರ, ಹಣ್ಣು, ತುರಾಯಿಗಳೊಡನೆ

ಆಗಮಿಸಿದರೆಂದರೆ ಪ್ರಸಾದ್ ಅವರು, ಅವರು ಬಂದ ಉದ್ದೇಶದ ಸೂಕ್ಷ್ಮತೆಯನ್ನು ತಕ್ಷಣವೇ ಗ್ರಹಿಸಿಬಿಡುತ್ತಿದ್ದರು. ಬಂದವರಿಗೆ ಘಾಸಿಯಾಗದ ಹಾಗೆ, "ನೀವೇನಾದರೂ ಕೇಸಿನ ವಿಚಾರವಾಗಿ ಏನಾದರೂ ಹಸ್ತಕ್ಷೇಪ ಮಾಡುವ ಉದ್ದೇಶದಿಂದ ಬಂದಿದ್ದರೆ ಖಂಡಿತ ನಾನು ಸ್ವಾಗತ ಬಯಸುವುದಿಲ್ಲ. ಕೇಸಿಗೆ ಸಂಬಂಧಿಸಿದ್ದಲ್ಲದೆ ಬೇರೆ ಕುಶಲೋಪರಿಗಳೇನಾದರೂ ಇದ್ದರೆ ನಿಮಗೆ ಸ್ವಾಗತವಿರುತ್ತದೆ. ಮತ್ತು ನಿಮ್ಮೊಡನೆ ಮಾತನಾಡಲು ಇಚ್ಛಿಸುತ್ತೇನೆ" ಎಂಬುದಾಗಿ, ಖಡಾಖಂಡಿತವಾಗಿ ಹೇಳಿದ್ದನ್ನು ಸ್ವತಃ ಎಷ್ಟೋ ಬಾರಿ ಕೇಳಿದ್ದೇನೆ; ಅಲ್ಲದೆ, ನನ್ನ ಮುಂದೆಯೇ ಈ ತರಹದ ಎಷ್ಟೋ ಘಟನೆಗಳನ್ನು ನಡೆದುದನ್ನೂ ವೀಕ್ಷಿಸಿದ್ದೇನೆ.

ನ್ಯಾಯಾಧೀಶ ಹುದ್ದೆ ಅಲಂಕರಿಸಿರುವ ಒಬ್ಬ ವ್ಯಕ್ತಿಗೆ ಈ ತರಹದ ಪ್ರಾಮಾಣಿಕ ಮತ್ತು ನಿರ್ದಾಕ್ಷಿಣ್ಯ ಗುಣ-ಸ್ವಭಾವಗಳು ಅತಿ ಮುಖ್ಯವೆಂಬ ಅರಿವು ಅವರಲ್ಲಿತ್ತು. ಯಾವುದೇ ತರಹದ ಆಸೆ, ಆಮಿಷಗಳಿಗೆ, ಶಿಫಾರಸ್ಸುಗಳಿಗೆ ಅವರು ಎಂದೂ ಎಡೆಕೊಟ್ಟಿರಲಿಲ್ಲ ಮತ್ತು ಚಂಚಲರಾಗುತ್ತಿರಲಿಲ್ಲ. ಪ್ರಸಾದರಿಗೆ ಕಲೆ, ಸಂಗೀತ ಅಂದರೆ ತುಂಬಾ ಆಸಕ್ತಿ. ಸ್ವತಃ ತಾವೇ ಸಂಗೀತಗಾರರೇನಾಗಿಲ್ಲದಿದ್ದರೂ ಸಂಗೀತವನ್ನು ಬಹಳ ವಾಗಿ ಇಷ್ಟಪಡುವಂತಹವರು. ಅವರು ತಮ್ಮ ಅಧಿಕಾರಾವಧಿಯಲ್ಲಿ ಯಾವ ಯಾವ ಸ್ಥಳಗಳಲ್ಲಿ ಕಾರ್ಯನಿರ್ವಹಿಸಿದರೋ ಆ ಸ್ಥಳಗಳಲ್ಲಿಯ ಪ್ರಸಿದ್ಧ ಗಾಯಕರನ್ನು ಪತ್ತೆಹಚ್ಚಿ, ತಮ್ಮ ಮಕ್ಕಳಿಗೆ ಸಂಗೀತಪಾಠ, ತಬಲ ಕಲಿಸಿಕೊಡಲು ಕೇಳಿಕೊಂಡು ಅವರನ್ನು ತುಂಬಾ ಗೌರವಿಸುತ್ತಿದ್ದುದನ್ನು ನಾನು ಕಂಡಿದ್ದೇನೆ. ಅಲ್ಲದೆ, ಅವರಲ್ಲಿರುತ್ತಿದ್ದ ಅಗಾಧ ಪ್ರತಿಭೆಯನ್ನು ಆಧರಿಸಿ, ಸಮಾಜದಲ್ಲಿ ಅವರ ವೃತ್ತಿಜೀವನದಲ್ಲಿ ಅನ್ಯಾಯವಾಗಿದ್ದರೆ, ತುಂಬಾ ಬಡತನದಲ್ಲಿ ಜೀವನ ನಡೆಸುತ್ತಿದ್ದರೆ ಅಂತಹ ವ್ಯಕ್ತಿಗಳನ್ನು ಗುರುತಿಸಿ ರಾಜ್ಯಪ್ರಶಸ್ತಿ ಅಥವಾ ಸರ್ಕಾರದಿಂದ ಸಂಭಾವನೆ ದೊರಕಿಸಿಕೊಡಲು ಪ್ರಯತ್ನಿಸುತ್ತಿದ್ದರು. ಅವರ ಸಹಾಯದಿಂದ ಇಬ್ಬರಿಗೆ ರಾಜ್ಯಪ್ರಶಸ್ತಿ ದೊರಕಿದುದನ್ನು ಇಲ್ಲಿ ಪ್ರಸ್ತಾಪಿಸಲೇಬೇಕು.

ಜಿ.ಹೆಚ್.ಪ್ರಸಾದ್ ಅವರು ಯಾವುದೇ ಪಟ್ಟಣಕ್ಕೆ ಹೋಗಲಿ, ಅಲ್ಲಿಯ ಕ್ಯಾಸೆಟ್ ಅಂಗಡಿಗೆ ಭೇಟಿ ನೀಡಿ ಹಳೇ ಗಾಯಕರ, ಅಪರೂಪದ ಶಾಸ್ತ್ರೀಯಹಾಡುಗಳಿರುವ ಕ್ಯಾಸೆಟ್‌ಗಳೇನಾದರೂ ದೊರೆತರೆ ಅವುಗಳನ್ನು ಕೊಂಡುಹೋಗುತ್ತಿರುತ್ತಾರೆ. ಇದು ಅವರಲ್ಲಿರುವ ಸಂಗೀತದ ಅಭಿರುಚಿಯನ್ನು ತೋರಿಸುತ್ತದೆ. ಯಾರೇ ಉತ್ತಮ ಗಾಯಕರಿರಲಿ, ಸಂಗೀತವಾದ್ಯ ಪರಿಣಿತರಿರಲಿ ಅವರನ್ನು ಗೌರವಿಸುತ್ತಿದ್ದುದು ಮತ್ತು ಪ್ರಶಂಸಿಸುತ್ತಿದ್ದುದು ಅವರ ಒಂದು ದೊಡ್ಡ ಗುಣ. ಈಗಲೂ ಇದು ನಿರಂತರವಾಗಿ ಮುಂದುವರೆದಿದೆ. ಈ ತರಹದ ದೊಡ್ಡ ವ್ಯಕ್ತಿತ್ವವನ್ನು ಹೊಂದಿದಂತಹವರು ನನಗೆ ಭಾವನವರಾಗಿದ್ದಾರೆ ಎಂಬುದೇ ನನಗೆ ಒಂದು ತರಹದ ಹೆಮ್ಮೆ!

೧೩

# ಹಿರಿಯ ಹಿತೈಷಿ

**ಡಾ. ಸಿ. ಎಂ. ರವಿ**

ಶ್ರೀ ಜಿ.ಹೆಚ್.ಪ್ರಸಾದ್ ಅವರು ದಾವಣಗೆರೆಯ ಹೆಸರಾಂತ ಸಜ್ಜನ-ಸುಸಂಸ್ಕೃತ ಕುಟುಂಬದಲ್ಲಿ ಹುಟ್ಟಿದವರು. ಬಹಳ ಸುಶೀಲ ಮತ್ತು ಪ್ರೀತಿಯ ಮಗನೆಂದು ಹೆಸರು ಪಡೆದವರು. ಇಂದಿಗೂ ತಮ್ಮ ಅಣ್ಣ-ತಮ್ಮಂದಿರ ಹಾಗೂ ಅಕ್ಕ-ತಂಗಿಯರ ಪ್ರೀತಿ-ವಿಶ್ವಾಸಗಳಿಗೆ ಅವರು ಪಾತ್ರರಾಗಿದ್ದಾರೆ.

ಶಿಸ್ತು ಮತ್ತು ಪ್ರಾಮಾಣಿಕತೆ -ಇವು ಅವರು ತಮ್ಮ ಜೀವನುದ್ದಕ್ಕೂ ಪಾಲಿಸಿಕೊಂಡು ಬಂದ ತತ್ವಗಳು. ಮುಖ್ಯವಾಗಿ, ಇದು ನ್ಯಾಯಾಧೀಶರಿಗೆ ಅನಿವಾರ್ಯವಾಗಿ ಇರಬೇಕಾದಂತಹ ಗುಣ. ಈ ಲಕ್ಷಣಗಳು ಅವರ ಜೀವನದಲ್ಲಿ ಆರಂಭದಿಂದಲೂ ಬೆಳೆದು ಬಂದಿದ್ದವೆನ್ನಬೇಕು.

ನ್ಯಾಯಾಲಯಗಳಲ್ಲಿ ಎಂತಹ ಗಂಭೀರ ಪರಿಸ್ಥಿತಿಯಲ್ಲೂ ಹಾಸ್ಯಮಾಡಿ ಉದ್ವೇಗವನ್ನು ತಣ್ಣಗಾಗುವಂತೆ ಮಾಡುತ್ತಿದ್ದುದು ಅವರ ವಿಶೇಷ. ತಮ್ಮ Sense of Humour ನಿಂದ ಪರಿಸ್ಥಿತಿ ವಿಕೋಪಕ್ಕೆ ಹೋಗದಂತೆ ನೋಡಿಕೊಂಡು, ಅಂತ್ಯದಲ್ಲಿ ನ್ಯಾಯ ದೊರಕಿಸುತ್ತಿದ್ದರು. ಅವರು ಕೊಟ್ಟಂತಹ ತೀರ್ಪುಗಳನ್ನು ನೋಡಿ ಅವರ ಮೇಲ್ಕಂಡ ನ್ಯಾಯಾಧೀಶರು ಮೆಚ್ಚುಗೆ ವ್ಯಕ್ತಪಡಿಸಿದುದುಂಟು.

ಸುಮಾರು ೩೦ ವರ್ಷಗಳ ಕಾಲಾವಧಿಯ ತಮ್ಮ ನ್ಯಾಯಾಂಗ ಜೀವನದಲ್ಲಿ ಒಂದು ಬಾರಿಯೂ ಪ್ರಸಾದರಾಗಲೀ ಕುಟುಂಬವರ್ಗದವರಾಗಲೀ ಯಾವರೀತಿಯ 'threat'ಗೂ ಒಳಗಾದವರಲ್ಲವೆಂಬುದೇ ಅವರ ತೀರ್ಪು ನ್ಯಾಯಪರವಾಗಿರುತ್ತಿತ್ತೆನ್ನಲು ಸಾಕ್ಷಿ. ಅವರು ಕರ್ನಾಟಕದ ಸುಮಾರು ೧೧ ಸ್ಥಳಗಳಲ್ಲಿ ಕಾರ್ಯನಿರ್ವಹಿಸಿದ್ದಾರೆ; ಹಾಗೂ ನ್ಯಾಯಾಂಗ ಸಿಬ್ಬಂದಿ ಮತ್ತು ಜನರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಇಂತಹ ನ್ಯಾಯಾಧೀಶರಿದ್ದುದರಿಂದಲೇ ನ್ಯಾಯವು ಜೀವಂತವಾಗಿರಲು ಸಾಧ್ಯವಾಗಿದೆಯೆಂಬ ಜನಾಭಿಪ್ರಾಯ ವ್ಯಕ್ತಪಟ್ಟಿದುದು ಸಹಜ. ಕೈಗೆತ್ತಿಕೊಂಡ ಕೆಲಸ ನೆರವೇರುವವರೆಗೂ ಅವರು ಸುಮ್ಮನಿರು

ತ್ತಿರಲಿಲ್ಲ. ಶ್ರದ್ಧೆ-ಆಸಕ್ತಿಗಳಿಂದ ಕಾರ್ಯನಿರ್ವಹಿಸುವುದು ಅವರ ಹುಟ್ಟುಗುಣವೆಂದರೆ ಅತಿಶಯೋಕ್ತಿಯೇನಲ್ಲ.

ಪ್ರಸಾದರು ವೈಯಕ್ತಿಕ ಮತ್ತು ಕೌಟುಂಬಿಕ ಆರೋಗ್ಯದ ಕಡೆಗೆ ಬಹಳ ಗಮನ ಹರಿಸುತ್ತಿದ್ದರೆಂಬುದು ಎಲ್ಲರಿಗೂ ತಿಳಿದ ವಿಚಾರ. ಅವರು ಅತಿಸೂಕ್ಷ್ಮ ಪಂಚೇಂದ್ರಿಯಗಳುಳ್ಳವರು! ಯಾವ ರೀತಿಯ ದುರಭ್ಯಾಸಗಳಿಗೂ ವಶರಾಗಲಿಲ್ಲ. ವಿಧ ವಿಧವಾದ ತಿಂಡಿ-ತಿನಿಸುಗಳ ಬಗ್ಗೆ ಸದಭಿರುಚಿ ಬೆಳೆಸಿಕೊಂಡಿದ್ದಂತಹ ರಸಿಕತೆಯ ಮನೋಧರ್ಮದವರು. ಉಡುಪು ಧರಿಸುವುದರಲ್ಲಿ ಬಹಳ ಗಮನ ಹರಿಸುತ್ತಿದ್ದರು. ತಮ್ಮ ಗೋಧಿಬಣ್ಣದ ದೇಹಕ್ಕೆ ಸೂಟು-ಬೂಟು ಹಾಕಿದರೆಂದರೆ ಎಲ್ಲರನ್ನೂ ಆಕರ್ಷಿಸುವಂತಹವರೆನಿಸುತ್ತಿದ್ದರು. ಕೆಲವರು ಭಾವಿಸುತ್ತಿದ್ದಂತೆ, ಸುಪ್ರೀಂಕೋರ್ಟ್‌ನ ನ್ಯಾಯಾಧೀಶರಾಗುವ ಅರ್ಹತೆ ಅವರಲ್ಲಿದ್ದಿತು. ಯಾವುದೇ ವಸ್ತುವನ್ನು ಖರೀದಿಸುವ ಮುನ್ನ ಬಹಳಷ್ಟು ವಿಮರ್ಶೆ ಮಾಡುತ್ತಿದ್ದರಲ್ಲದೆ, ಕಡೆಯಲ್ಲಿ ಅವರ ಆಯ್ಕೆಯು ಎಲ್ಲರಿಗೂ ಇಷ್ಟವಾಗುವಂತಹದ್ದಾಗಿರುತ್ತಿತ್ತು.

ಸಂಗೀತದಲ್ಲಿ ಬಹಳಷ್ಟು ಆಸಕ್ತಿ ಮತ್ತು ಅಭಿರುಚಿಗಳನ್ನು ಹೊಂದಿದ್ದವರು ಪ್ರಸಾದ್. ಮಕ್ಕಳು ಸಂಗೀತಗಾರರಾಗಲಿ ಎಂದು ಅವರಿಗೆ ಚಿಕ್ಕಂದಿನಿಂದಲೇ ಹೆಸರಾಂತ ಸಂಗೀತಗಾರರಿಂದ ಸಂಗೀತಪಾಠ ಹೇಳಿಸಿದ್ದಾರೆ. ಇಂದಿಗೂ ಕ್ಲಾಸಿಕಲ್ ಸಂಗೀತದಲ್ಲಿ ಆಸಕ್ತಿ ಹೊಂದಿದ್ದು, ನೂರಾರು ಕ್ಯಾಸೆಟ್‌ಗಳ ಸಂಗ್ರಹ ಮಾಡಿದ್ದಾರೆ; ಹಾಗೂ ಹಾರ್ಮೋನಿಯಂ, ತಂಬೂರಿ ಮತ್ತು ತಬಲಗಳನ್ನು ಇಂದಿಗೂ ತಮ್ಮ ಮನೆಯಲ್ಲಿ ಇಟ್ಟುಕೊಂಡಿದ್ದಾರೆ.

ಪ್ರಸಾದರು ತಾವು ಸ್ವೀಕರಿಸಿದ ಯಾವುದೇ ಆಮಂತ್ರಣ ಪತ್ರಿಕೆಗೂ ಬಹಳ ಗೌರವ ಕೊಡುತ್ತಿದ್ದರು. ಎಷ್ಟೇ ಕಷ್ಟದ ಪರಿಸ್ಥಿತಿಯಿದ್ದರೂ ಕಾರ್ಯಕ್ರಮದಲ್ಲಿ ಉಪಸ್ಥಿತರಿರು ತ್ತಿದ್ದರು. ಪ್ರಯಾಣವೆಂಬುದು ಅವರಿಗೆ ಒಂದು ಅಭ್ಯಾಸವೇ ಆಗಿದ್ದಿತೆಂದು ಹೇಳಬಹುದು.

ನಮ್ಮ ತಂದೆ ದಿವಂಗತ ಸಿ.ಮಲೆಸಿದ್ದಪ್ಪನವರ ನಿಸ್ವಾರ್ಥ ಸಮಾಜಸೇವೆಯನ್ನು ನೋಡಿ ಬಹಳ ಪ್ರಭಾವಿತರಾಗಿದ್ದರು. ಮಾವ-ಅಳಿಯರ ಸಂಬಂಧವೂ ವಿಶೇಷವಾದುದಾಗಿ ದ್ದಿತು. ಪರಸ್ಪರರೂ ಗೌರವಾದರಗಳಿಂದ ನಡೆದುಕೊಳ್ಳುತ್ತಿದ್ದರು; ಇತರರಿಗೆ ಮಾದರಿ ಯಾಗಿದ್ದರು.

ಒಟ್ಟಾರೆ, ನಾಯಕ ಜನಾಂಗದಲ್ಲಿ ಜನಿಸಿ ಭ್ರಷ್ಟಾಚಾರದ ಸಮುದ್ರದಲ್ಲಿ ತಮ್ಮ ಶಿಸ್ತು, ನಿಸ್ವಾರ್ಥ, ಪ್ರಾಮಾಣಿಕತೆಗಳ ಅಲೆಯನ್ನು ಎಬ್ಬಿಸಿ, ಯಾವ ಕಳಂಕವೂ ಇಲ್ಲದೆ ಸುರಕ್ಷಿತವಾಗಿ ದಡ ಸೇರಿದುದೇ ಅವರ ಹೆಗ್ಗಳಿಕೆ. ಕರ್ನಾಟಕದ ನ್ಯಾಯಾಧೀಶರುಗಳ ಪ್ರೀತಿ-ಮೆಚ್ಚುಗೆಗಳಿಗೆ ಪಾತ್ರರಾಗಲು ಅವರ ಇಂತಹ ಪರಿಶುದ್ಧ ಸೇವೆಯೇ ಕಾರಣ. ನಾಯಕ ಜನಾಂಗಕ್ಕೆ ಮಾತ್ರವಲ್ಲದೆ, ಎಲ್ಲ ಕೆಳವರ್ಗಗಳಿಗೂ ಇದೊಂದು ಹೆಮ್ಮೆಯ ವಿಷಯ. ಸಜ್ಜನರ ಮಟ್ಟಿಗಂತೂ ಪ್ರಸಾದರು ದಾರಿದೀಪವಾಗಿದ್ದಾರೆ.

ಇಂದಿಗೂ ಪ್ರಸಾದರು ತಮ್ಮ ಸೇವೆಯನ್ನು ವಿವಿಧ ಕ್ಷೇತ್ರಗಳಿಗೆ ವಿಸ್ತರಿಸಿಕೊಂಡಿದ್ದಾರೆ. Consumer Forumನ ಅಧ್ಯಕ್ಷರಾಗಿ ಚಿಕ್ಕಮಗಳೂರು ಜಿಲ್ಲೆಯಲ್ಲಿ ಸೇವೆ ಸಲ್ಲಿಸಿದ್ದಾರೆ. ಅದರಲ್ಲಿ ಸಮಾಜಸೇವೆ ಮಾಡುವ ಆಕಾಂಕ್ಷೆ ಹೊಂದಿ ಅದನ್ನು ಅವರು ಸಮರ್ಥವಾಗಿ ನಿರ್ವಹಿಸಿದರೆಂಬುದರಲ್ಲಿ ಅನುಮಾನವಿಲ್ಲ. ಅದನ್ನು ಯಶಸ್ವಿಯಾಗಿ ನೆರವೇರಿಸಲು ದೇವರು ಅವರಿಗೆ ಶಕ್ತಿ ಕೊಟ್ಟಿದ್ದನೆಂತಲೇ ನನ್ನ ನಂಬಿಕೆ. ಜೊತೆಯಲ್ಲಿ ಮಕ್ಕಳು-ಮೊಮ್ಮಕ್ಕಳೊಂದಿಗೆ ನೆಮ್ಮದಿಯ ನಿವೃತ್ತ ಜೀವನ ನಡೆಸುತ್ತಿರುವ ಪ್ರಸಾದರು ನೂರ್ಕಾಲ ಬಾಳಲಿ! ಇಂತಹ ನಿಸ್ವಾರ್ಥ ಪ್ರಾಮಾಣಿಕ ನ್ಯಾಯಾಧೀಶರ ಅಳಿಯನೆನಿಸಿರುವುದೇ ನನಗೆ ಹೆಮ್ಮೆಯ ವಿಷಯ. ಅವರು ನಮ್ಮಂತಹವರ ಪಾಲಿಗೆ ಓರ್ವ ಹಿರಿಯ ಹಿತೈಷಿ!

೧೪

# ಪಿತೃದೇವೋಭವ!

## ಪಲ್ಲವಿ ಲೋಲಾಕ್ಷ

'ಪ್ರಸಾದ' ಎಂದರೆ, ವಚನಕಾರ ಆದಯ್ಯ ಹೇಳುವಂತೆ, 'ಪರಮಜ್ಞಾನ, ಪರಾಪರ, ಪರಬ್ರಹ್ಮ, ಪರಮಾನಂದ, ಗುರು ಲಿಂಗ ಜಂಗಮ.' ಹಾಗೆಯೇ, ನಮ್ಮ ತಂದೆ ಪ್ರಸಾದರು ಸಹಾ ನಮ್ಮ ಕುಟುಂಬಕ್ಕೆ ಎಲ್ಲವೂ!

ನಮ್ಮ ತಂದೆ ಶಾಂತಿಪ್ರಿಯರು, ಸ್ವಭಾವತಃ ಸೌಜನ್ಯಶೀಲರು; ನ್ಯಾಯ, ನೀತಿ, ಧರ್ಮ ಇವೇ ಮನುಷ್ಯನ ಜೀವನದ ಉದ್ದೇಶ, ಗುರಿ ಅಂತ ತಿಳಿದವರು ಹಾಗೂ ತಿಳಿಹೇಳಿದವರು. ನಾನು ಕಂಡಂತೆ, ಅವರ ಈ ಉದ್ದೇಶ, ನಿಲುವುಗಳಿಗೆ ಎಂದೂ ಚ್ಯುತಿ ಬಂದಿಲ್ಲ. ಅವರ ಈ ಸ್ವಚ್ಛ, ದಿಟ್ಟ, ದೃಢ ನಿಲುವುಗಳಿಗೆ ಪ್ರಾಯಶಃ ನಮ್ಮ ಅಜ್ಜ ದಿವಂಗತ ದುರ್ಗಪ್ಪನವರ ಪ್ರಭಾವವೇ ಕಾರಣವಾಗಿದ್ದಿರಬಹುದು. ನಮ್ಮ ಅಜ್ಜ ಸಂಸಾರಿಯಾಗಿದ್ದರೂ ಆಧ್ಯಾತ್ಮ ಜೀವಿ. ನಮ್ಮ ತಂದೆಯವರನ್ನು ಚಿಕ್ಕವರಿದ್ದಾಗಿನಿಂದಲೇ ಜ್ಞಾನಮಾರ್ಗದಲ್ಲೇ ಬೆಳೆಸಲು ಪ್ರಯತ್ನಿಸಿದರು. ಇವರಲ್ಲದೆ, ನಮ್ಮ ತಂದೆ ವೃತ್ತಿಜೀವನದಲ್ಲಿದ್ದಾಗ, ನಮ್ಮ ತಾತ ಹಾಗೂ ಸ್ವಾತಂತ್ರ್ಯ ಹೋರಾಟಗಾರ ಸಿ.ಮಲೆಸಿದ್ದಪ್ಪನವರ ಪ್ರಭಾವವಾಯಿತು. 'ಕಾಯಕವೇ ಕೈಲಾಸ', 'ಜನಸೇವೆಯೇ ಜನಾರ್ಧನನ ಸೇವೆ' ಎಂದೆಲ್ಲಾ ನಂಬಿದವರು ನಮ್ಮ ತಾತ. ಇಂತಹ ಸುಜನರ ಬಾಂಧವ್ಯದಿಂದಾಗಿ ನಮ್ಮ ತಂದೆಯವರ ಜೀವನ ನ್ಯಾಯಪರ ಹಾದಿಯಲ್ಲಿ ಸಾಗುವಂತಾಯಿತೆನ್ನಬಹುದು.

ನ್ಯಾಯಾಧೀಶರಾಗಿದ್ದ ನನ್ನ ತಂದೆ, ಪ್ರಾಮಾಣಿಕತೆ, ಕರ್ತವ್ಯಪ್ರಜ್ಞೆ ಹಾಗೂ ಸೇವಾ ನಿಷ್ಠೆಗಳಿಗೆ ಆದ್ಯತೆ ನೀಡಿದವರು. ಅವರ ದಿನಚರಿ ಪ್ರಾರಂಭಗೊಳ್ಳುತ್ತಿದ್ದುದು ನಸುಕಿನಲ್ಲಿ-ತಮ್ಮ ಫೈಲಿನೊಂದಿಗೆ; ರಾತ್ರಿ ಅಂತ್ಯಗೊಳ್ಳುತ್ತಿದ್ದುದೂ ಫೈಲಿನೊಂದಿಗೇ. ಅಂದು ಹಬ್ಬವಾಗಲಿ, ರಜಾದಿನವಾಗಲಿ ಅವರ ಈ ಕೆಲಸ ಮಾತ್ರ ನಿರಂತರವಾಗಿ ನಡೆಯುತ್ತಲೇ ಇರುತ್ತಿತ್ತು. ಎಷ್ಟೋಬಾರಿ ಸಂಬಂಧಿಕರು, ಪರಿಚಯದವರು, ಮಠಾಧೀಶರು ಬಂದು ತಮ್ಮ ಕೇಸ್‌ಗಳ ಬಗೆಗೆ ಪ್ರಸ್ತಾಪಿಸಲು ಪ್ರಯತ್ನಿಸುತ್ತಿದ್ದರು. "ಕೇಸ್ ವಿಚಾರವನ್ನು ಬಿಟ್ಟು ಬೇರೆ ಏನಾದ್ರೂ ಮಾತಾಡಿರಿ. ನ್ಯಾಯಾಧೀಶನಾಗಿ ನ್ಯಾಯವನ್ನು ಕೊಡುವುದೇ

ನನ್ನ ಕೆಲಸ. ಅದನ್ನು ಮಾಡಬೇಡ ಎಂದು ಆ ದೇವರೇ ಬಂದು ಹೇಳಿದರೂ ನಾನು ಬಿಡುವುದಿಲ್ಲ" ಎಂದು ನೇರವಾಗಿ ಹೇಳಿಬಿಡುತ್ತಿದ್ದರು.

ಕೊಲೆ, ದರೋಡೆಯಂತಹ ಪ್ರಕರಣಗಳ ವಿಚಾರಣೆ ನಡೆಯುವಾಗ ಬೆದರಿಕೆಪತ್ರಗಳು, ಫೋನ್‌ಕರೆಗಳು ಬಂದರೂ ನ್ಯಾಯವನ್ನು ಮಾತ್ರ ಬಿಡಲಿಲ್ಲ. ರಾಜಕಾರಣಿಗಳ ಪರಿಚಯವಿದ್ದರೂ ತಮ್ಮ ವೃತ್ತಿಜೀವನದಲ್ಲಿ ಯಾವ ಕಳಂಕಕ್ಕೂ ಅವಕಾಶ ನೀಡಲಿಲ್ಲ. ಕೆಲವು ಪ್ರಭಾವೀ ರಾಜಕಾರಣಿಗಳು ತಮ್ಮಂತೆ ಕೆಲಸ ಮಾಡಿಸಿಕೊಳ್ಳಲು ವಿಫಲ ಪ್ರಯತ್ನ ಪಟ್ಟಿದುದುಂಟು. ಈ ಬಗೆಯ ನಿಲುವು ಪ್ರದರ್ಶಿಸಲು ಆತ್ಮಬಲ, ಸ್ಥೈರ್ಯ, ಧೈರ್ಯ ಎಲ್ಲವೂ ಅಗತ್ಯ.

ನಮ್ಮ ತಂದೆ ನಿಷ್ಠಾವಂತ ನ್ಯಾಯಾಧೀಶರಾಗಿದ್ದಂತೆಯೇ, ಓರ್ವ ಶ್ರದ್ಧಾವಂತ ಸಂಗೀತಶ್ರೋತೃವೂ ಆಗಿದ್ದರು. ಎಲ್ಲಿ ಹೋದರೂ ಅಲ್ಲೆಲ್ಲ ದೊರೆಯುವ ಸಂಗೀತದ ಕ್ಯಾಸೆಟ್‌ಗಳನ್ನು ಕೊಂಡುತಂದು ಆಲಿಸದಿದ್ದರೆ ಅವರಿಗೆ ಸಮಾಧಾನವೇ ಇರುತ್ತಿರಲಿಲ್ಲ. ಸಾವಿರಾರು ಸಂಖ್ಯೆಯಲ್ಲಿ ಸಂಗೀತದ ಕ್ಯಾಸೆಟ್‌ಗಳನ್ನು ಮನೆಯಲ್ಲಿ ಇಟ್ಟುಕೊಂಡಿದ್ದಾರೆ. ಸಂಗೀತವಲ್ಲದೆ, ಆಧ್ಯಾತ್ಮಚಿಂತನ, ಪ್ರವಚನ, ಯೋಗ ಮತ್ತು ಇತರೆ ವಿಷಯಗಳಿಗೆ ಸಂಬಂಧಿಸಿದ ಸಾವಿರಕ್ಕೂ ಹೆಚ್ಚು ಧ್ವನಿಸುರುಳಿಗಳು ಈಗಲೂ ಮನೆಯಲ್ಲಿವೆ. ಮಕ್ಕಳಲ್ಲಿ ಹಾಡುಗಾರಿಕೆಯ ಅಭಿರುಚಿಯನ್ನು ಗುರುತಿಸಿ ನಮ್ಮನ್ನು ದೊಡ್ಡ ಸಂಗೀತಗಾರರನ್ನಾಗಿಸಲು ಬಹಳ ಪ್ರಯತ್ನಪಟ್ಟಂತಹವರು. ಕಲಿಕೆಗೆಂದೇ ವಾದ್ಯಗಳನ್ನು ತಂದು, ಆಯಾ ಊರಿನ ಪ್ರತಿಷ್ಠಿತ ಗುರುಗಳ ಮನ ಒಲಿಸಿ ಮನೆಗೆ ಬಂದು ಸಂಗೀತ ಕಲಿಸುವಂತೆ ಮಾಡುತ್ತಿದ್ದರು. ಆದರೆ ದುರಾದೃಷ್ಟದಿಂದ ಅವಾವುವೂ ನಿರೀಕ್ಷಿತ ಫಲಕಾಣಲಿಲ್ಲ! ಅದೊಂದು ಕೊರಗು, ಕೊರತೆ ಅವರಲ್ಲಿರುವಂತೆಯೇ, ಮಕ್ಕಳಾದ ನಮ್ಮಲ್ಲಿಯೂ ಇದೆ.

ಈ ಪ್ರಯತ್ನದ ಸಂದರ್ಭದಲ್ಲಿ ಕೆಲ ಪ್ರತಿಭಾನ್ವಿತ ಸಂಗೀತ ಗುರುಗಳಿಗೆ (ಸರ್ಕಾರದಿಂದ ಪ್ರೋತ್ಸಾಹದ ಅಗತ್ಯ ಮತ್ತು ಸನ್ಮಾನಗಳಿಗೆ ಅರ್ಹತೆ ಇದ್ದರೂ ಅವು ಅವರಿಗೆ ದೊರಕದಿದ್ದಾಗ) ನ್ಯಾಯ ದೊರಕಿಸಿಕೊಡಲು ಓಡಾಡಿ ಸಫಲತೆ ಕಂಡಂತಹವರು ನಮ್ಮ ತಂದೆ. ನಮ್ಮ ಪೂಜ್ಯ ಗುರುಗಳಾಗಿದ್ದ ದಿವಂಗತ ಬಸಪ್ಪ ಹೆರಕಲ್ ಮತ್ತು ದಿವಂಗತ ಜುಬೇದಾಬಾಯಿ ಸವಣೂರು ಅವರುಗಳಿಗೆ ಕರ್ನಾಟಕ ರಾಜ್ಯಪ್ರಶಸ್ತಿ ದೊರಕಿದ್ದು ಇವರು ಪಟ್ಟ ಪ್ರಯತ್ನದ ಫಲವಾಗಿ. ತಮಗಾಗಿ ನಮ್ಮ ತಂದೆಯವರು ಓಡಾಡಿ ಶ್ರಮಿಸುವುದನ್ನು ಕಂಡು ನಮ್ಮ ಗುರುಗಳೇ "ಬೇಡಬಿಡಿ ಸಾರ್" ಎಂದು ವಿನಂತಿಸಿಕೊಂಡುದುಂಟು. ಆದರೆ ನಮ್ಮ ತಂದೆ ಮಾತ್ರ "ಅದು ನಿಮಗೆ ಸಲ್ಲಲೇಬೇಕಾದ ಗೌರವ. ನಾನು ಇದಕ್ಕೆ ಪ್ರಯತ್ನಪಡುತ್ತೇನೆ" ಎನ್ನುತ್ತಲೇ ಇರುತ್ತಿದ್ದರು.

ನೈಸರ್ಗಿಕವಾಗಿ ಆಯಾ ಋತುಮಾನಗಳಲ್ಲಿ ದೊರೆಯುವ ತಾಜಾ ಹಣ್ಣುಗಳೆಂದರೆ ತಮ್ಮ ತಂದೆಯವರಿಗೆ ಎಲ್ಲಿಲ್ಲದ ಆಕರ್ಷಣೆ. ಚಿಕ್ಕಂದಿನಿಂದಲೂ ಇವು ತಮ್ಮ ಮನ ಸೆಳೆದಂತಹವೆಂದು ಹೇಳುತ್ತಿರುತ್ತಾರೆ. ಇಂದಿಗೂ ನಮ್ಮ ಮನೆಯಲ್ಲಿ ಹಣ್ಣುಗಳಿಲ್ಲದ

ದಿನವೇ ಇಲ್ಲ ಎನ್ನಬಹುದು. ಇಂದಿಗೂ ಎಲ್ಲೇ ಹೋಗಲಿ, ಅಲ್ಲಿಯ ವಿಶೇಷ ಹಣ್ಣುಗಳ ಬಗ್ಗೆ ಮಾಹಿತಿ ಪಡೆದು ತಾವೇ ಓಡಾಡಿ ಅವುಗಳನ್ನು ಸಂಗ್ರಹಿಸಿಕೊಳ್ಳುತ್ತಾರೆ.

ಕೆಲವೊಮ್ಮೆ ನೋಡಲು ಚೆಂದವಿದ್ದು, ತಿಂದಾಗ ರುಚಿಯೂ ತೋರಿ ನಂತರ ಆರೋಗ್ಯ ಕೆಡಿಸುವಂತಹ ಹಣ್ಣುಗಳನ್ನು ತಿಂದು ಸತತ ಒಂದೆರಡು ದಿನಗಳು ಮಲಗಿದ ಪ್ರಸಂಗಗಳೂ ಅವರಿಗೆ ಒದಗಿವೆ. ಇಷ್ಟಾದರೂ ರುಚಿಕರ ಹಣ್ಣುಗಳನ್ನು ಕುರಿತ ಮಾಹಿತಿ ಸಂಗ್ರಹಣೆಯ ಅವರ ಉತ್ಸಾಹಕ್ಕೆ ಎಂದೂ ಅಡ್ಡಿಯಾಗಿಲ್ಲ. ಅವರ ಬಾಲ್ಯದಲ್ಲಿ ನಮ್ಮ ಅಜ್ಜನವರು ಅವರ ಬೆಳಗಿನ ತಿಂಡಿಗಾಗಿ ಒಂದು ಪ್ರಸಿದ್ಧ ಹೋಟೆಲನ್ನೇ ಬುಕ್ ಮಾಡಿದ್ದರಂತೆ. ಅವರು ಏನೇನು ತಿನ್ನುತ್ತಿದ್ದರೋ ಅದಕ್ಕೆ ತಿಂಗಳಿಗೊಮ್ಮೆ ಬಿಲ್ ಪಾವತಿಸುವುದಷ್ಟೇ ಅವರ ಕೆಲಸವಾಗಿದ್ದಿತಂತೆ. ದೇಹಾರೋಗ್ಯದ ವಿಚಾರದಲ್ಲಿ ನಮ್ಮ ತಂದೆಯವರು ಯಾವಾಗಲೂ ಎಚ್ಚರವಹಿಸುವುದರಿಂದ ಇಂದಿಗೂ ಲವಲವಿಕೆಯಿಂದ ಕೂಡಿದ್ದಾರೆ.

ಆಧ್ಯಾತ್ಮದ ಪ್ರಭಾವ ನಮ್ಮ ಕುಟುಂಬದ ಮೇಲೆ ಆಗಿದೆಯೆಂದರೆ ತಪ್ಪಾಗಲಾರದು. ನಿವೃತ್ತಿಜೀವನ ನಡೆಸುವಲ್ಲಿ ಇದರಿಂದ ಆಗುವ ಲಾಭ ಅಪಾರ. ನಾವು ಕಂಡಂತೆ, ನಮ್ಮ ತಂದೆಯವರಲ್ಲಿ ಮೊದಲಿನಿಂದಲೂ ಆಧ್ಯಾತ್ಮಿಕ ಚಿಂತನೆ ಬಗ್ಗೆ ಅಪಾರ ಆಸಕ್ತಿ. ಇದರ ಜೊತೆಗೆ ಸದಾ ಕಲೆ, ಇತಿಹಾಸ, ಕನ್ನಡಸಾಹಿತ್ಯ ಕೃತಿಗಳನ್ನು ಓದುವುದು ಅವರಿಗೆ ಬಹಳ ಪ್ರಿಯವಾದುದು. ಪ್ರೇಕ್ಷಣೀಯ ಸ್ಥಳಗಳಿಗೆ ಹೋಗುವುದು, ಅಲ್ಲಿನ ಭಾಷೆ ಕಲಿಯುವುದು, ಹೊಸ ಜನರು ಮತ್ತು ಅವರ ಜೀವನಶೈಲಿಗಳನ್ನು ಅವಲೋಕಿಸುವುದು-ಇವೆಲ್ಲಾ ಅವರನ್ನು ಬಹಳ ಆಕರ್ಷಿಸುವಂತಹವು. ಹಾಗೆಯೇ, ದೇಹಾರೋಗ್ಯಕ್ಕೆ ಸಂಬಂಧಿಸಿದಂತೆ ಯೋಗ, ಆಯಿಲ್‌ಪುಲ್ಲಿಂಗ್ ಅಕ್ಯುಪ್ರೆಷರ್, ನೀರಿನ ಚಿಕಿತ್ಸೆಗಳನ್ನು ಅನುಸರಿಸುತ್ತಿರುತ್ತಾರೆ.

ಅವರಲ್ಲಿ ಸಮಾಧಾನ ಪ್ರವೃತ್ತಿ ಹೆಚ್ಚು. ಯಾವುದೇ ಕೆಲಸವಾಗಲಿ ಅದು ನಿಗದಿತ ಸಮಯಕ್ಕೆ ಪೂರೈಸದಿದ್ದರೂ ಅದರ ಬಗ್ಗೆ ತಾತ್ಸಾರ, ನಿರಾಸಕ್ತಿ ಭಾವನೆ ವ್ಯಕ್ತಪಡಿಸದೆ, ಅದು ಮುಗಿಯುವವರೆಗೆ ನಿರಂತರ ಪ್ರಯತ್ನ ಮಾಡುತ್ತಿರುತ್ತಾರೆ. ಉದಾಹರಣೆಗೆ, ನಮ್ಮ ತಾತ ದಿವಂಗತ ಸಿ. ಮಲೆಸಿದ್ದಪ್ಪನವರ ಸ್ಮರಣಗ್ರಂಥ. ಇದು ಪ್ರಕಟಗೊಳ್ಳಲು ಒಟ್ಟು ಹತ್ತು ವರ್ಷ ಬೇಕಾಯಿತು. ಕಾಲ ವಿಳಂಬವಾದರೂ ಈ ಕಾರ್ಯದಲ್ಲಿ ನಮ್ಮ ತಂದೆ ಯವರಿಗಿದ್ದ ಆಸಕ್ತಿ, ಕಾಳಜಿಗಳು ಸ್ವಲ್ಪವೂ ಕಡಿಮೆಯಾಗಲಿಲ್ಲ.

ಸೃಜನಶೀಲರನ್ನು ಅತಿಥಿಗಳಾಗಿ ಮನೆಗೆ ಕರೆದು ಸತ್ಕರಿಸುವುದು ಅವರ ಮತ್ತೊಂದು ಸದ್ಗುಣ. ನಗುವುದು, ನಗಿಸುವುದು ಎಂದರೆ ಅವರಿಗೆ ಬಹಳ ಖುಷಿ. ಹಾಸ್ಯಗಾರಿಕೆ ಅವರಲ್ಲಿ ಸ್ವಲ್ಪ ಕಡಿಮೆ ಇರುವ ಕಾರಣ ಹಾಸ್ಯಭರಿತ ಕ್ಯಾಸೆಟ್‌ಗಳನ್ನು ತಂದು ಕೇಳುತ್ತಿರುತ್ತಾರೆ. ರಜೆಯಲ್ಲಿ ನಮ್ಮ ಹಳ್ಳಿಯಲ್ಲಿ ಎಲ್ಲಾ ಸಂಬಂಧಿಗಳು ಸೇರಿದಾಗ ಇಂತಹ ಕ್ಯಾಸೆಟ್‌ಗಳನ್ನು ಹಾಕಿ ಎಲ್ಲರನ್ನು ನಗಿಸುವುದು ಅವರ ಹವ್ಯಾಸ. ಇಷ್ಟಲ್ಲದೆ, ಉತ್ತಮ

ಕ್ಯಾಸೆಟ್ ಮತ್ತು ಪುಸ್ತಕಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ಖರೀದಿಸಿ ಆಸಕ್ತಿ ಇರುವವರಿಗೆ ಕಾಣಿಕೆಯಾಗಿ ಕೊಡುವುದು ಅವರಲ್ಲಿರುವ ಇನ್ನೊಂದು ವಿಶಿಷ್ಟ ಗುಣ.

ಸ್ವಭಾವತಃ ಶಾಂತಿಪ್ರಿಯರಾದ ನಮ್ಮ ತಂದೆಯವರು, ಎಂತಹ ಕಷ್ಟವೇ ಆಗಿರಲಿ ಅದನ್ನು ಶಾಂತರೀತಿಯಿಂದ ಪರಿಹರಿಸಬೇಕೆನ್ನುತ್ತಾರೆ. ಮಕ್ಕಳೇ ಅವರ strength and weakness. ತಮ್ಮ ಮಕ್ಕಳು ತಮ್ಮ ನಿರೀಕ್ಷೆಗೆ ಸಿಗದಿದ್ದಾಗಲೂ ಸಮಚಿತ್ತದಿಂದ ವರ್ತಿಸಿ ಪ್ರೀತಿ, ವಾತ್ಸಲ್ಯ ಮತ್ತು ಆರೈಕೆಗಳಲ್ಲಿ ಯಾವ ಕೊರತೆಯೂ ಆಗದಂತೆ ನೋಡಿಕೊಂಡುದು ಅವರ ಔದಾರ್ಯ. ಎಷ್ಟೋಬಾರಿ ಅವರ ನಿರೀಕ್ಷೆಗೆ ಮೀರಿ ಫಲ ದೊರೆತು ಸಂತೋಷದ ಸ್ಥಿತಿ ಉಂಟಾದಾಗ ಅವರು ಹೆಮ್ಮೆಪಡಲು ಹೋಗುತ್ತಿರಲಿಲ್ಲ. ನಮ್ಮೆಲ್ಲರನ್ನು ಸದಾ ಜೀವನ ಸತ್ಯಕ್ಕೆ ಹತ್ತಿರವಾಗಿರಿಸಲಿಕ್ಕೆ ಪ್ರಯತ್ನಿಸುತ್ತಿದ್ದರು. ಹೊಗಳಿಕೆಗೆ ಹಿಗ್ಗದೆ, ತೆಗಳಿಕೆಗೆ ಕುಗ್ಗದೆ ಇರುವ ಮನೋಧರ್ಮವನ್ನು ನಮ್ಮಲ್ಲಿ ಬೆಳೆಸಲು ಹಾತೊರೆಯುತ್ತಿದ್ದರು.

ಕೆಲವೊಮ್ಮೆ ಕೆಲವರಿಗೆ ಸಂಬಂಧಿಸಿದಂತೆ ಅವರು ತೀರಾ ಕಠೋರವಾಗಿ ನಡೆದುಕೊಂಡಿದ್ದುಂಟು. ಆದರೆ ಅದು ವ್ಯಕ್ತಿಗತ ದ್ವೇಷವಾಗಿರುತ್ತಿರಲಿಲ್ಲವೆಂಬುದು ಮಾತ್ರ ಅಕ್ಷರಶಃ ಸತ್ಯ. ದ್ವೇಷಿಸಬೇಕಾದುದು ಒಬ್ಬ ವ್ಯಕ್ತಿಯಲ್ಲಿಯ ದುರ್ಗುಣವನ್ನೆ ವಿನಾ ಆ ವ್ಯಕ್ತಿಯನ್ನಲ್ಲ ಎಂಬ ತತ್ವ ಅವರದು. ಹೀಗಾಗಿ ಅವರು ಅಜಾತಶತ್ರುವಿನಂತೆ ಕಂಡಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇಲ್ಲ.

'Behind every successful man there is a woman' ಎಂಬ ನಾಣ್ಣುಡಿಗೆ ತಕ್ಕಂತೆ ಇರುವಂತಹವರು ನಮ್ಮ ತಾಯಿ. ನಮ್ಮ ತಂದೆಯವರಿಗೆ ನಮ್ಮ ತಾಯಿಯ ಬೆಂಬಲ ಅಪಾರ. ಕೆಲವೊಮ್ಮೆ ದುರಾಸೆಪೀಡಿತ ಮಡದಿಯ ಪ್ರೇರಣೆಯಿಂದ ಒಬ್ಬ ದಕ್ಷ, ಪ್ರಮಾಣಿಕ ಅಧಿಕಾರಿಯೂ ಅನ್ಯಾಯಮಾರ್ಗ ತುಳಿಯುವುದುಂಟು. ಆದರೆ ನಮ್ಮ ತಂದೆಯವರಿಗೆ ಇಂತಹ ಅಡಚಣೆಗಳಿರಲಿಲ್ಲವೆಂಬುದೇ ಸಮಾಧಾನದ ಸಂಗತಿ ಎನ್ನಬಹುದು. ನಮ್ಮ ತಂದೆಯವರ ಯಶಸ್ವಿ ಜೀವನಕ್ಕೆ ಇದೇ ಕಾರಣವೆಂದರೆ ಉತ್ಪ್ರೇಕ್ಷೆಯಾಗಲಾರದು.

ನಮ್ಮ ತಾಯಿಯವರು ಮನೆಯಲ್ಲಿ ರುಚಿಕರ ಅಡುಗೆ ಸಿದ್ಧತೆ, ಪೂಜೆ-ಪುನಸ್ಕಾರ, ಅತಿಥಿ ಮೇಲ್ವಿಚಾರಣೆ ಇತ್ಯಾದಿಯೆಲ್ಲವನ್ನೂ ನಿರ್ವಹಿಸುತ್ತಾ ಆದರ್ಶ ಗೃಹಿಣಿಯಾಗಿರುವುದು ಒಂದು ಕಾರಣವಾಗಿದ್ದರೆ, ಮನೆಯಲ್ಲಿ ಯಾವುದೇ ಜಗಳ, ಕಲಹ, ಶಾಂತಿಭಂಗಗಳಂತಹ ಕ್ಷುಲ್ಲಕ ಪ್ರಸಂಗಗಳಿಗೆ ಎಡೆಮಾಡಿಕೊಡದೇ ಇರುವುದು ಇನ್ನೊಂದು ಬಹುಮುಖ್ಯ ಕಾರಣ. ಈ ದೃಷ್ಟಿಯಿಂದ, ನಮ್ಮ ತಂದೆಯವರ ಯಶಸ್ಸಿನಲ್ಲಿ ನಮ್ಮ ತಾಯಿಯವರದೂ ಸಮಾನ ಪಾಲಿದೆ.

೧೫

# ನಾನು ಕಂಡಂತೆ ನನ್ನ ಬದುಕು

## ಜಿ. ಹೆಚ್. ಪ್ರಸಾದ್

### ನನ್ನ ಹಿರಿಯರು

ಹರಪನಹಳ್ಳಿ ಪಾಳೆಯಗಾರರ ಕಾಲದಲ್ಲಿ ದಳವಾಯಿಗಳಾಗಿ ಸೇವೆ ಸಲ್ಲಿಸುತ್ತಿದ್ದವರಲ್ಲಿ ಪ್ರಮುಖನಾದವನು ದಳವಾಯಿ ಜೆಟ್ಟಿಂಗಪ್ಪ. ಯುದ್ಧಗಳಲ್ಲಿ ಅವನು ತೋರಿಸಿದ ಅಪ್ರತಿಮ ಸಾಹಸಗಳನ್ನು, ವೀರಗಾಥೆಗಳನ್ನು ಜನಪದರು ಕೋಲಾಟ ಪದಗಳ ರೂಪದಲ್ಲಿ ಕಳೆದ ಶತಮಾನದ ಆದಿಯಲ್ಲಿ ಪ್ರದರ್ಶಿಸುತ್ತಿದ್ದರು. ಹರಪನಹಳ್ಳಿಯ ಹೊರವಲಯದಲ್ಲಿರುವ ತಿಮ್ಮಲಾಪುರ ತಿಮ್ಮಪ್ಪನ ಜಾತ್ರೆಯಲ್ಲಿ ಹಾಡುವುದರ ಮೂಲಕ ಆ ವೀರನನ್ನು ಸ್ಮರಿಸುತ್ತಿದ್ದುದನ್ನು ಆತನ ವಂಶಜರಾದ ನಮ್ಮ ತಂದೆ, ದೊಡ್ಡಪ್ಪ ಮತ್ತು ನಮ್ಮ ಕುಟುಂಬದವರು ಹೆಮ್ಮೆಯಿಂದ ಹೇಳುತ್ತಿದ್ದುದನ್ನು ಕೇಳಿ ಪುಳಕಿತನಾಗುತ್ತಿದ್ದೆ.

ಆ ಜೆಟ್ಟಿಂಗಪ್ಪನ ಮಗ ಗಿಡ್ಡಪ್ಪನಿಗೆ ಸಾಕಷ್ಟು ಜಮೀನು-ಮನೆ-ಆಸ್ತಿಗಳಿದ್ದರೂ ಹತ್ತೊಂಬತ್ತನೇ ಶತಮಾನದಲ್ಲಿ ಬಂದ ಭೀಕರ ಬರಗಾಲ ಬವಣೆಗೆ ತತ್ತರಿಸಿ ಹೋದ. ಆಸ್ತಿ ಕಂದಾಯವನ್ನು ಕೊಡಲು ಸಹಾ ಶಕ್ತಿ ಇಲ್ಲವಾಯಿತು. ಜೀವನ ಮಾಡುವುದೇ ದುಸ್ತರವಾದಾಗ, ಎಲ್ಲವನ್ನೂ ಬಿಟ್ಟು ತನ್ನ ಆರಾಧ್ಯದೈವ ದುರ್ಗಮ್ಮನ ಮೂರ್ತಿಯನ್ನು ತನ್ನ ಹೆಗಲಮೇಲೆ ಹೊತ್ತುಕೊಂಡು ಹರಪನಹಳ್ಳಿ ಬಿಟ್ಟು ಕಾಲ್ನಡಿಗೆಯಲ್ಲಿ ದಾವಣಗೆರೆಗೆ ಬಂದ. ಆ ಮೂರ್ತಿಯನ್ನು ಸ್ಥಳೀಯ ದೊಡ್ಡದುರ್ಗಮ್ಮನ ದೇವಸ್ಥಾನದಲ್ಲಿ ಇರಿಸಿ, ತಾನು ದಾವಣಗೆರೆಯಲ್ಲಿ ಇತರರ ಬಳಿ ಸೇವೆಮಾಡಿ ಜೀವನ ಸಾಗಿಸತೊಡಗಿದ. ಆತನಿಗೆ ಇಬ್ಬರು ಹೆಣ್ಣುಮಕ್ಕಳು. ಎರಡನೇ ಮಗಳು ಸಣ್ಣದುರ್ಗಮ್ಮ; ಆಕೆಯ ಗಂಡ ಗಿಡ್ಡಪ್ಪ ಎಂಬ ಹೆಸರಿನವನೇ. ಅವರ ಎರಡನೇ ಪುತ್ರ ನಮ್ಮ ತಂದೆ ಹಾಲಪ್ಪ. ಈ ಹಾಲಪ್ಪ-ಹನುಮಮ್ಮ ಅವರ ಎಂಟನೇ ಪುತ್ರನಾಗಿ ೨೧-೧೨-೧೯೪೧ರಲ್ಲಿ ದಾವಣಗೆರೆಯಲ್ಲಿ ನನ್ನ ಜನನವಾಯಿತು.

ದೊಡ್ಡಪ್ಪ ದುರ್ಗಪ್ಪ ಸಾಹಸಿ, ಉದ್ಯಮಿ, ಸಮಾಜ ಸುಧಾರಕ, ಆಧ್ಯಾತ್ಮಿ. ದುರ್ಗಪ್ಪ ಮತ್ತು ಪತ್ನಿ ಸಿದ್ದಮ್ಮರಿಗೆ ಮಕ್ಕಳಿಲ್ಲದ ಕಾರಣ, ನಾಲ್ಕುವರ್ಷದ ನನ್ನನ್ನೇ ಅವರು ತಮ್ಮ

ಮಡಿಲಿನಲ್ಲಿ ಹಾಕಿಕೊಂಡರು. ತಮ್ಮ ಸರ್ವಸ್ವವನ್ನೂ ಧಾರೆಯೆರೆದು ನನ್ನನ್ನು ಅತಿ ಅಕ್ಕರೆಯಿಂದ ಬೆಳೆಸಿದರು. ಸಮಾಜದಲ್ಲಿ ನಾನು ಒಬ್ಬ ಒಳ್ಳೆಯ ವ್ಯಕ್ತಿಯಾಗಬೇಕೆಂಬುದು ಅವರಿಬ್ಬರ ಮಹದಾಸೆಯಾಗಿತ್ತು. ಅವರು ಎಷ್ಟು ಪ್ರೀತಿಯಿಂದ ನನ್ನನ್ನು ಸಾಕಿದರೆಂದರೆ, ನಾನು ಅವರ ಸ್ವಂತಮಗನೇ ಎಂಬ ಭಾವನೆ ನನ್ನಲ್ಲಿ ಮೂಡಿತು.

ಈ ಮಧ್ಯೆ ನನ್ನ ದೊಡ್ಡಮ್ಮನಿಗೆ ದೊಡ್ಡ ಖಾಯಿಲೆ ಇದೆಯೆಂದು ವೈದ್ಯರು ಹೇಳಿದಾಗ, ನನ್ನ ತಾಯಿ ನನ್ನನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಬೇಕೆಂದು ತೀವ್ರ ಪ್ರಯತ್ನ ಮಾಡಿದರು. ಅದಕ್ಕೆ ದೊಡ್ಡಮ್ಮ-ದೊಡ್ಡಪ್ಪ ಒಪ್ಪಿದರೂ ನಾನು ದೊಡ್ಡಮ್ಮನ ಮೇಲಿಟ್ಟಿದ್ದ ಪ್ರೀತಿಯಿಂದಾಗಿ ನನ್ನನ್ನು ದೊಡ್ಡಮ್ಮನಿಂದ ಬೇರ್ಪಡಿಸಲಾಗಲಿಲ್ಲ. ಆಗ ನನಗಿನ್ನೂ ಐದುವರ್ಷಗಳಿರಬೇಕು. ಕೆಲದಿನಗಳು ನಮ್ಮ ಮನೆಯ ರಸ್ತೆಯಲ್ಲಿದ್ದ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ ಅಭ್ಯಾಸಮಾಡಿದ ನಂತರ, ಆದರ್ಶ ಶಿಕ್ಷಕರೆಂದು ಹೆಸರಾದ ಶ್ರೀ ಶಿವಲಿಂಗಪ್ಪನವರು ಸ್ವಾಗೇರಬೀದಿಯಲ್ಲಿ ನಡೆಸುತ್ತಿದ್ದ ಖಾಸಗಿಶಾಲೆಗೆ ಸೇರಿ ಪ್ರಾಥಮಿಕ ಶಿಕ್ಷಣ ಪೂರೈಸಿದೆ. ಆ ಶಿಕ್ಷಕರು ತುಂಬಾ ಬಿಗಿ ಮತ್ತು ನಿಷ್ಠುರವಾದಿಗಳು. ಪಾಠದ ನಂತರ ಕೇಳಿದ ಪ್ರಶ್ನೆಗಳಿಗೆ ತಪ್ಪು ಉತ್ತರ ಹೇಳಿದವರಿಗೆ ಸರಿ ಉತ್ತರ ಹೇಳಿದ ವಿದ್ಯಾರ್ಥಿಗಳಿಂದ ಕಪಾಳಮೋಕ್ಷ ಮಾಡಿಸುತ್ತಿದ್ದರು. ಅನೇಕ ಸಲ ಬೇರೆಯವರಿಗೆ ಕಪಾಳಮೋಕ್ಷ ಮಾಡಿದ ನಾನೂ ಒಂದುಸಾರಿ ಇತರರಿಂದ ಕಪಾಳಮೋಕ್ಷ ಮಾಡಿಸಿಕೊಂಡಿದುಂಟು. ಒಟ್ಟಿನಲ್ಲಿ, ಆ ಶಾಲೆಯ ಕೆಲವೇ ಬುದ್ಧಿವಂತ ವಿದ್ಯಾರ್ಥಿಗಳಲ್ಲಿ ನಾನೂ ಒಬ್ಬನೆಂದು ಗುರುತಿಸಲ್ಪಟ್ಟುದು ನನಗೆ ಹೆಮ್ಮೆಯ ವಿಷಯವಾಗಿತ್ತು.

ಮನೆಯಲ್ಲಿ ದೊಡ್ಡಮ್ಮ ಸಿಹಿಭಕ್ಷ್ಯ-ಭೋಜನಗಳನ್ನು ನನಗಾಗಿ ಮಾಡಿ, ಅವು ಮುಗಿಯುವ ಮೊದಲೇ ಹೊಸ ಹೊಸ ಸಿಹಿತಿಂಡಿಯನ್ನು ಮಾಡಿಕೊಡುತ್ತಿದ್ದರು. ದೊಡ್ಡಪ್ಪನಿಗೆ ಆಧ್ಯಾತ್ಮದೆಡೆಗೆ ವಿಶೇಷ ಒಲವು ಇದ್ದಿತು. ಅವರು ಸಾಹಸಿ ಉದ್ಯಮಿ, ಸನ್ಯಾಸಿ. ಆದರೂ ಆದರ್ಶ ಸಂಸಾರಿಯೆನ್ನುವ ಮಾತಿಗೆ ಉದಾಹರಣೆಯಂತಿದ್ದರು. ಆಯಾಯ ಕಾಲದಲ್ಲಿ ಪೇಟೆಯಲ್ಲಿ ಸಿಗುತ್ತಿದ್ದ ಹಣ್ಣುಗಳನ್ನು ನಿತ್ಯ ತರುವುದು ರೂಢಿಯಾಗಿತ್ತು. ಸಾಧು-ಸಂತರು, ಗೆಳೆಯರು, ಸಂಬಂಧಿಕರು ಮನೆಗೆ ಬಂದಲ್ಲಿ ಅವರನ್ನು ವಿಶೇಷವಾಗಿ ಸತ್ಕರಿಸಿ ಆದರಿಸುತ್ತಿದ್ದರು. ಧೀಮಂತ ರಾಜಕಾರಣಿ ಶ್ರೀ ಎ.ಭೀಮಪ್ಪನಾಯಕ ಮತ್ತು ಸಮಾಜದ ಕೆಲವು ಗೆಳೆಯರ ಸಹಕಾರದೊಂದಿಗೆ ಬಾಡಿಗೆ ಮನೆಯಲ್ಲಿ ಅವರು ಪ್ರಾರಂಭಿಸಿದ ನಾಯಕ ವಿದ್ಯಾರ್ಥಿನಿಲಯಕ್ಕೆ ಅನೇಕ ಬಾರಿ ತಮ್ಮ ಮನೆಯಲ್ಲಿ ಮಾಡಿದ ಅಡಿಗೆಯನ್ನೆ ಸರಬರಾಜು ಮಾಡುತ್ತಿದ್ದರು. ಕೆಲವುಸಾರಿ ವಿದ್ಯಾರ್ಥಿಗಳೇ ಮನೆಗೆ ಬಂದು ಊಟಮಾಡಿಕೊಂಡು ಹೋಗುತ್ತಿದ್ದುದು ಈ ದಂಪತಿಗಳಿಗೆ ಖುಷಿ ಕೊಡುತ್ತಿತ್ತು.

ನನ್ನ ದೊಡ್ಡಮ್ಮ ನನ್ನ ಮೇಲೆ ಇಟ್ಟಿದ್ದ ಪ್ರೀತಿ ಎಣೆಯಿಲ್ಲದ್ದು. ನಾನು ಪ್ರಾಥಮಿಕ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುವ ವೇಳೆಯಲ್ಲಿ ಹೊರಗಡೆ ಹೋಗುವಾಗ ನನ್ನನ್ನು

ನಡೆಸದೆ ಎತ್ತಿಕೊಂಡೇ ಹೋಗುತ್ತಿದ್ದರು. ಪ್ರತಿದಿನ ಬೇರೆ ಬೇರೆ ಭಕ್ಷ್ಯಗಳನ್ನು ನನಗೆ ಮಾಡಿಕೊಡುವುದಲ್ಲದೆ, ಪಕ್ಕದಮನೆಯಲ್ಲಿ ನನ್ನ ತಾಯಿ-ತಂದೆಯವರ ಜೊತೆಯಲ್ಲಿದ್ದ ನನ್ನ ತಮ್ಮ ನಾಗರಾಜ, ತಂಗಿ ದುರ್ಗ್ಗಾವತಿಯರನ್ನು ಕರೆದು ಅವರಿಗೂ ಉಣಬಡಿಸಿ ಸಂತೋಷಪಡುತ್ತಿದ್ದರು.

ಅತಿ ಮೇಧಾವಿಯಾಗಿದ್ದ ನನ್ನ ದೊಡ್ಡಪ್ಪ, ತಮ್ಮ ಸಂಸಾರ ಬಡತನದಲ್ಲಿದ್ದಾಗ, ಐದನೇ ತರಗತಿಯಲ್ಲಿದ್ದಾಗಲೇ ಶಾಲೆಗೆ ಶರಣುಹೊಡೆದವರು. ಆದರ್ಶವ್ಯಕ್ತಿಯಂತಿದ್ದ ಹಿರಿಯಣ್ಣ ದೊಡ್ಡದುರ್ಗಪ್ಪ ನಡೆಸುತ್ತಿದ್ದ ಕಡ್ಲೆಭಟ್ಟಿಯಲ್ಲಿ ಕೆಲಸಮಾಡಲು ಪ್ರಾರಂಭಿಸಿದರು. ಆತ ತೀರಿಕೊಂಡ ನಂತರ, ದಳ್ಳಾಳಿ ಅಂಗಡಿಯಲ್ಲಿ ಹಮಾಲಿವೃತ್ತಿ ಪ್ರಾರಂಭಿಸಿದರು. ನಂತರ ತಾವೇ ಕಟ್ಟಿಗೆಡಿಪೋ ಇಟ್ಟು ಅದನ್ನು ನಡೆಸತೊಡಗಿದರು. ಆ ಕಾಲದಲ್ಲಿಯೇ ಲೋಯರ್ ಸೆಕೆಂಡರಿ ಪರೀಕ್ಷೆ ಪಾಸುಮಾಡಿದಂತಹ ಉಪಾಧ್ಯಾಯರಾಗುವ ಅರ್ಹತೆ ಪಡೆದಿದ್ದರೂ ಆರೋಗ್ಯ ಸರಿಯಿಲ್ಲದ ಕಾರಣದಿಂದ ಕೆಲಸಕ್ಕೆ ಸೇರದಿದ್ದ ಮೇಧಾವಿ; ಮತ್ತು ಶಿಸ್ತಿಗೆ ಹೆಸರಾಗಿದ್ದ ತಮ್ಮ ಇನ್ನೊಬ್ಬ ತಮ್ಮ ರಾಮಪ್ಪನವರಿಗೆ ಆ ಕಟ್ಟಿಗೆಡಿಪೋವನ್ನು ಬಿಟ್ಟುಕೊಟ್ಟರಲ್ಲದೆ ತಾವು ಸ್ವಂತ ದಳ್ಳಾಳಿ ಅಂಗಡಿ ಪ್ರಾರಂಭಿಸಿದರು. ಆ ನಂತರ ತಮ್ಮ ಮೂವರು ಆತ್ಮೀಯ ಗೆಳೆಯರ ಸಹಭಾಗಿತ್ವದಲ್ಲಿ ಜಯಲಕ್ಷ್ಮೀ ಮೋಟಾರ್ ಸರ್ವೀಸ್ ಎಂಬ ಹೆಸರಿನಲ್ಲಿ ದಾವಣಗೆರೆಯಿಂದ ಜಗಳೂರಿಗೆ ಪ್ರಥಮ ಬಸ್ ಸೇವೆ ಆರಂಭಿಸಿದರು. ಅದನ್ನು ಕೆಲವು ವರ್ಷ ನಡೆಸಿ ಅದರಲ್ಲಿ ನಿರೀಕ್ಷಿತ ಯಶಸ್ಸು ಸಿಗದೆ ಹೋದಾಗ ಅದನ್ನು ನಿಲ್ಲಿಸಿದರು. ಮುಂದೆ ಇಟ್ಟಿಗೆ ತಯಾರಕರಾಗಿ ಹಾಗೂ ಜೈಲಿನಲ್ಲಿರುತ್ತಿದ್ದ ಆರೋಪಿಗಳಿಗೆ ಆಹಾರ ಸರಬರಾಜು ಮಾಡುವ ಕಾಂಟ್ರ್ಯಾಕ್ಟ್ ಕೆಲಸ ಮಾಡಿ ಹೆಸರುಮಾಡಿದವರು ನನ್ನ ದೊಡ್ಡಪ್ಪ.

ನಾನು ಹುಟ್ಟಿ ಬೆಳೆದಿದ್ದು ಬಡ ಹಿಂದುಳಿದವರ್ಗಗಳು ಮತ್ತು ಅಲ್ಪಸಂಖ್ಯಾತರೇ ಬಹುಸಂಖ್ಯೆಯಲ್ಲಿದ್ದ ಮ್ಯಾಸಬೇಡರ ಬೀದಿಯಲ್ಲಿ. ಅಲ್ಲಿ ಹುಟ್ಟಿ ಬೆಳೆದ ಆ ಪರಿಸರ ದಲ್ಲಿ ನನ್ನ ಇತರ ಬಾಲ್ಯಸ್ನೇಹಿತರಾಗಲಿ, ಅಲ್ಲಿನ ನನ್ನ ಸಮಕಾಲೀನರಾಗಲಿ ಯಾರಾದರೂ ಪದವೀಧರರಾಗುವುದಿರಲಿ ಕಾಲೇಜು ಮೆಟ್ಟಿಲನ್ನು ಸಹಾ ಹತ್ತಲಿಲ್ಲವೆಂಬುದು ವಿಷಾದನೀಯ ಸಂಗತಿಯೇ ಸರಿ. ನನ್ನ ಬಾಲ್ಯಸ್ನೇಹಿತರು ದೊಡ್ಡವರಾದಾಗ ಜೀವನಕ್ಕಾಗಿ ದಳ್ಳಾಳಿ ಅಂಗಡಿಗಳಲ್ಲಿ ಹಮಾಲಿಮಾಡುವುದು, ಸಿನಿಮಾ ಥಿಯೇಟರ್‌ಗಳಲ್ಲಿ, ಸೈಕಲ್ ಅಂಗಡಿಗಳಲ್ಲಿ ಕೆಲಸ ಮಾಡುವುದು, ಎತ್ತಿನಗಾಡಿಗಳನ್ನು ನಡೆಸುವುದು, ಬಟ್ಟೆ ಹೊಲಿಯುವುದು ಇತ್ಯಾದಿ ಉದ್ಯೋಗಗಳಲ್ಲಿ ತೊಡಗಿಸಿಕೊಂಡರು. ಈ ಕಾರಣಕ್ಕಾಗಿಯೇ ಏನೋ ನನ್ನನ್ನು ನೋಡ ಲೆಂದೇ ಅನೇಕ ಹಿರಿಯರು ನಮ್ಮ ಮನೆಗೆ ಬಂದು ಪ್ರೀತಿಯ ಸವಿನುಡಿಗಳನ್ನಾಡಿ ಆಶೀರ್ವದಿಸುವುದರ ಮೂಲಕ ತಮ್ಮ ಹೃದಯವೈಶಾಲತೆಯನ್ನು ತೋರಿ ಹೋಗುತ್ತಿದ್ದರು. ಇದನ್ನು ಈಗ ನೆನೆಸಿಕೊಂಡರೆ ನನ್ನಲ್ಲಿ ಅವರ ಬಗೆಗೆ ಕೃತಜ್ಞತಾಭಾವ ಮೂಡುತ್ತದೆ. ನಾನು ಅವರೆಲ್ಲರ ಪ್ರೀತಿ-ಮಮತೆ-ವಾತ್ಸಲ್ಯಗಳಿಗೆ ಪಾತ್ರನಾಗಿದ್ದುದು ನನ್ನ ಪುಣ್ಯವಿಶೇಷ.

ಎಳೆಯ ವಯಸ್ಸಿನಲ್ಲಿ ಮನೆಯವರ, ನೆರೆಹೊರೆಯವರ ಪ್ರೀತಿ-ವಾತ್ಸಲ್ಯಗಳಲ್ಲದೆ ಮನಸ್ಸು ಮತ್ತೇನನ್ನು ಬಯಸಬಲ್ಲದು? ಆ ನನ್ನ ಬಾಲ್ಯದ ದಿನಗಳು ಅತಿ ಮಧುರಕ್ಷಣಗಳಾಗಿದ್ದವು.

ಪ್ರಾಥಮಿಕಶಿಕ್ಷಣದ ನಂತರ ನನ್ನನ್ನು ದಾವಣಗೆರೆಯಲ್ಲಿ ಮಾದರಿ ಮಾಧ್ಯಮಿಕ ಶಾಲೆಯೆಂದು ಹೆಸರಾದ ಡಿ.ಇ.ಎ. ಮಿಡ್ಲ್‌ಸ್ಕೂಲಿಗೆ ನನ್ನ ಅಣ್ಣ ಸೇರಿಸಿದರು. ಅಲ್ಲಿ ಆದರ್ಶ ಶಿಕ್ಷಕರೆಂದು ಹೆಸರು ಪಡೆದಿದ್ದ ಶ್ರೀ ಶೇಷಗಿರಿರಾವ್, ಶ್ರೀ ರಾಮಚಂದ್ರರಾವ್, ಶ್ರೀ ಎ.ಆರ್.ಶಂಕರರಾವ್, ಶ್ರೀ ಗಣಪತಿಭಟ್ಟ, ಶ್ರೀ ಉಳುವಪ್ಪ, ಶ್ರೀ ಗಂಗಪ್ಪ ಮತ್ತು ಶ್ರೀ ಕೃಷ್ಣಮೂರ್ತಿ ಇವರೇ ಮೊದಲಾದವರ ಮಾರ್ಗದರ್ಶನದಲ್ಲಿ ಉತ್ತಮ ವಿದ್ಯಾರ್ಥಿಗಳಲ್ಲಿ ನಾನೂ ಒಬ್ಬನಾಗಿ ಹೋದೆ. ಐದನೇ ತರಗತಿಯ ಪರೀಕ್ಷೆಯಲ್ಲಿ ಇಂಗ್ಲಿಷ್‌ನಲ್ಲಿ ಶ್ರೀಮಂತ ಗೆಳೆಯ ಬಿ.ಟಿ.ಶ್ರೀಕಾಂತ ನೂರಕ್ಕೆ ೭೩, ನಾನು ೭೧ ಅಂಕಗಳನ್ನು ಪಡೆದಿದ್ದು, ನನ್ನ ನೆನಪಿನಾಳದಲ್ಲಿ ಇನ್ನೂ ಹಚ್ಚಹಸಿರಾಗಿದೆ.

ನಾನು ಆರನೇ ತರಗತಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ, ನನ್ನನ್ನು ತಮ್ಮ ಮಗನೆಂದೇ ಭಾವಿಸಿ, ಪ್ರೀತಿ-ಅಕ್ಕರೆ-ಮಮತೆ-ಅಂತಃಕರಣಗಳಿಂದ ಬೆಳೆಸುತ್ತಿದ್ದ ನನ್ನ ದೊಡ್ಡಮ್ಮನಿಗೆ ಕಾಯಿಲೆ ಉಲ್ಬಣವಾಗಿ ಅವರು ಇಹಲೋಕ ತ್ಯಜಿಸಿದರು. ನನಗೆ ಬರಸಿಡಿಲು ಬಡಿದಂತಾಗಿ, ನಾನು ತಾಯಿಯನ್ನು ಕಳೆದುಕೊಂಡ ತಬ್ಬಲಿಯಂತಾದೆ. ಈ ಘಟನೆ ನನ್ನ ಮನಸ್ಸಿನ ಮೇಲೆ ಎಷ್ಟು ಆಘಾತ ಉಂಟುಮಾಡಿತೆಂದರೆ, ವಿದ್ಯಾಭ್ಯಾಸದಲ್ಲಿ ಆಸಕ್ತಿ ಕಳೆದುಕೊಂಡ ನಾನು ಶಾಲೆಗೆ ಹೋಗುವುದನ್ನೇ ನಿಲ್ಲಿಸಿದೆ. ಈ ನನ್ನ ಅವಿವೇಕದ ನಿರ್ಧಾರ, ನನ್ನನ್ನು ತಮ್ಮ ಮಗನಂತೆ ನೋಡುತ್ತಿದ್ದ, ನನ್ನ ಉತ್ತಮ ಭವಿಷ್ಯದ ಬಗೆಗೆ ಕನಸುಕಟ್ಟಿದ್ದ ಹಾಗೂ ನಾನೇ ಅವರ ಸರ್ವಸ್ವ ಎಂದು ನಂಬಿದ್ದ ನನ್ನ ದೊಡ್ಡಪ್ಪನವರಿಗೆ ತುಂಬಾ ನಿರಾಸೆಯುಂಟು ಮಾಡಿತು. ಪ್ರೀತಿಯ ಪತ್ನಿಯನ್ನು ಕಳೆದುಕೊಂಡ ದುಃಖದ ಜೊತೆಗೆ ನನ್ನ ವರ್ತನೆಯೂ ಅವರಿಗೆ ತೀರಾ ಯಾತನೆ ನೀಡಿತು. ತಾವು ದಾವಣಗೆರೆಯನ್ನೇ ಬಿಟ್ಟು ಬೇರೆಕಡೆ ಹೋಗಿ ಇರಲು ನಿರ್ಧರಿಸಿದರು. ಅದನ್ನು ಅವರು ತಮ್ಮ ಸಹೋದರರ ಮುಂದೆ ಪ್ರಕಟಗೊಳಿಸಿದಾಗ, ನನ್ನ ಚಿಕ್ಕಪ್ಪ ಶ್ರೀ ರಾಮಪ್ಪ ನನ್ನ ವಿದ್ಯಾಭ್ಯಾಸದ ಜವಾಬ್ದಾರಿಯನ್ನು ವಹಿಸಿಕೊಂಡು ಕೈಕಟ್ಟಿ ಕೂತಿದ್ದ ನನ್ನನ್ನು ಪುನಃ ಅದೇ ಶಾಲೆಗೆ ಸೇರಿಸಿದರು; ನನ್ನ ದೊಡ್ಡಪ್ಪನವರಿಗೆ ದೊಡ್ಡ ಸಮಾಧಾನ ತಂದು ಅವರು ದಾವಣಗೆರೆಯಲ್ಲಿಯೇ ಉಳಿಯುವಂತೆ ಮಾಡಿದರು. ಆ ನಂತರ ನನ್ನ ದೊಡ್ಡಪ್ಪ ತಮ್ಮ ವ್ಯವಹಾರಗಳನ್ನು ಮುಂದುವರೆಸಿಕೊಂಡು ಹೋಗುವುದರ ಜೊತೆಗೆ, ಇನ್ನೂ ಹೆಚ್ಚಿನ ರೀತಿಯಲ್ಲಿ ಸಾರ್ವಜನಿಕ ಕ್ಷೇತ್ರ ಮತ್ತು ಆಧ್ಯಾತ್ಮಿಕಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಆ ಪ್ರಸಂಗ ನನ್ನ ಜೀವನದ ಮುಖ್ಯ ತಿರುವೆಂದೇ ಹೇಳಬೇಕು. ನನ್ನ ವಿದ್ಯಾಭ್ಯಾಸ ಸುಗಮವಾಗಿ ಸಾಗುವಂತೆ ಮಾಡಿದುದಲ್ಲದೆ, ನನ್ನನ್ನು ದೊಡ್ಡಪ್ಪ, ತಂದೆ-

ಧಾರವಾಡ ದಾಟಿ ಹೋಗದಿದ್ದ ನನಗೆ ಯಾವುದೋ ದೂರದ ಪ್ರದೇಶಕ್ಕೆ ಕರೆದುಕೊಂಡು ಹೋದಂತಾಗಿತ್ತು. ಆದರೆ ಮೈಸೂರಿನಲ್ಲಿ ಬಿ.ಎ. ವ್ಯಾಸಂಗ ಮಾಡುತ್ತಿದ್ದಾಗ ಸ್ನೇಹಿತರಾಗಿದ್ದ ಕೋಗಳಿ ಬಸವನಗೌಡ ಆಗಲೇ ಅಲ್ಲಿ ವ್ಯಾಸಂಗ ಮಾಡುತ್ತಿದ್ದುದರಿಂದ ಹಾಗೂ ಅವರು ವಾಸ್ತವ್ಯ ಮಾಡಿದ್ದ ಕಾಲೇಜ್ ಹಾಸ್ಟೆಲ್‌ನಲ್ಲಿಯೇ ನಾನೂ ವಾಸ್ತವ್ಯ ಮಾಡಬೇಕಾಗಿದ್ದರಿಂದ ಸ್ವಲ್ಪ ಸಮಾಧಾನ ತಂದಿತು. ಅದೇ ಕಾಲೇಜಿನಲ್ಲಿ ಗೌ : ನ್ಯಾಯಮೂರ್ತಿ ರಾಜೇಂದ್ರಬಾಬು, ಮಾಜಿ ಸಚಿವ ಡಿ.ಬಿ.ಚಂದ್ರೇಗೌಡ, ಸಿರಸಪ್ಪ ಗೋಗಿ ಅವರು ಎರಡನೇ ಎಲ್‌ಎಲ್.ಬಿ. ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದರು. ಕಾನೂನು ವ್ಯಾಸಂಗ ಮಾಡಲು ಆ ಕಾಲೇಜಿಗೆ ದೂರ ದೂರದಿಂದಲೂ ವಿದ್ಯಾರ್ಥಿಗಳು ಬರುತ್ತಿದ್ದರು. ಬಿಜಾಪುರದ ಎನ್.ಎಸ್.ಲೋನಿ, ವಿ.ಆರ್.ಪಾಟಿಲ್, ದೇಶಪಾಂಡೆ, ಚಿಕ್ಕೋಡಿಯ ಬಾತೆ, ಹೊಸಪೇಟೆಯ ಅಚ್ಯುತ ದೇವರಾಯ, ಬಿ.ಕೆ.ನಾಯಕ್, ಬೋಜನಗೌಡ ಮತ್ತು ಇತರೆಯವರ ಪರಿಚಯದ ಲಾಭ ನನಗಾದುದು ಆಗಲೇ.

ನಮ್ಮ ಕುಟುಂಬವರ್ಗದವರು, ವಿಶೇಷವಾಗಿ ನನ್ನ ದೊಡ್ಡಪ್ಪನವರು ನ್ಯಾಯಾಸ್ಥಾನದ ಮತ್ತು ನ್ಯಾಯಾಧೀಶರ ಬಗೆಗೆ ಆಗಾಗ್ಗೆ ಆಡುತ್ತಿದ್ದ ಮಾತುಗಳಿಂದ ನ್ಯಾಯವ್ಯವಸ್ಥೆ, ನ್ಯಾಯಾಸ್ಥಾನ ಹಾಗೂ ನ್ಯಾಯಾಧೀಶರ ಬಗೆಗೆ ಅವರು ಇಟ್ಟುಕೊಂಡಿದ್ದ ಗೌರವದ ಭಾವನೆ ವ್ಯಕ್ತಪಡುತ್ತಿತ್ತು. ನಾಗರೀಕರ ಹಕ್ಕುಗಳನ್ನು ಎತ್ತಿಹಿಡಿಯಲು, ಶೋಷಣೆಗೆ ಒಳಗಾದ ಜನರಿಗೆ ನ್ಯಾಯ ದೊರಕಿಸಲು ಮತ್ತು ಅಪರಾಧಮಾಡಿದ ವ್ಯಕ್ತಿಗಳನ್ನು ಶಿಕ್ಷೆಗೆ ಒಳಪಡಿಸಲು ಹಾಗೂ ಆರೋಗ್ಯವಂತ ಸಮಾಜಕ್ಕಾಗಿ ನ್ಯಾಯಾಧೀಶನ ಪಾತ್ರ ಎಷ್ಟು ಮುಖ್ಯ ಅನ್ನುವುದನ್ನು ತಿಳಿಯಲು ನಾನು ಸಹಾ ಕುತೂಹಲಿಯಾಗಿದ್ದೆ. ಈ ಕಾರಣಕ್ಕಾಗಿಯೇ ಈ ಅನಿವಾರ್ಯ ವ್ಯವಸ್ಥೆ ಮತ್ತು ನ್ಯಾಯಾಧೀಶರ ಬಗೆಗೆ ಗೌರವದ ಭಾವನೆಯನ್ನಿಟ್ಟು ಕೊಂಡಿದ್ದೆ. ಆದರೂ ಒಂದೊಂದು ಸಲ ನ್ಯಾಯಾಲಯಗಳ ಬಗೆಗೆ ನನ್ನಲ್ಲಿ ಭಯ ಮೂಡುತ್ತಿದ್ದುದರಿಂದ, ನಾನು ವಕೀಲನಾಗುವ ಮೊದಲು ನ್ಯಾಯಾಲಯದ ಹತ್ತಿರ ಹೋಗಲೂ ಹಿಂಜರಿಯುತ್ತಿದ್ದೆ.

ಎಲ್‌ಎಲ್.ಬಿ. ಪದವಿ ಪಡೆದಮೇಲೆ ವಕೀಲನಾಗಲು ಆಗ ಹಿರಿಯ ವಕೀಲರೊಬ್ಬರಲ್ಲಿ ಆರುತಿಂಗಳುಗಳ ಕಾಲ ಶಿಷ್ಯವೃತ್ತಿ ಮಾಡಿ ನಂತರ ಬಾರ್ ಕೌನ್ಸಿಲ್ ಪರೀಕ್ಷೆಯಲ್ಲಿ ಪಾಸಾಗುವುದು ಕಡ್ಡಾಯವಾಗಿತ್ತು. ಹಾಗಾಗಿ ಶಿವಮೊಗ್ಗ, ಚಿತ್ರದುರ್ಗ ಮತ್ತು ಚಿಕ್ಕ ಮಗಳೂರು ಜಿಲ್ಲೆಗಳಲ್ಲಿ ಒಳ್ಳೆಯ ಹಾಗೂ ಸಮರ್ಥ ವಕೀಲರಲ್ಲೊಬ್ಬರೆಂದು ಹೆಸರು ಮಾಡಿದ್ದ ಶಿವಮೊಗ್ಗದ ಹಿರಿಯ ವಕೀಲ ಶ್ರೀ ಟಿ.ವೆಂಕಟರಾಮಾಶಾಸ್ತ್ರಿಯವರ ಕಛೇರಿಗೆ ಆರುತಿಂಗಳು ಶಿಷ್ಯವೃತ್ತಿ ಮಾಡಲು ಸೇರಿಕೊಂಡೆ. ಅವರ ಕಛೇರಿಗೆ ಸೇರಲು ಆ ಹಿಂದೆ ಅವರ ಕಛೇರಿಯಲ್ಲಿ ಹಿರಿಯ ವಕೀಲರಾಗಿ ಕೆಲಸಮಾಡಿದ್ದ ದಾವಣಗೆರೆಯ ವಕೀಲ ಶ್ರೀ ಎ.ನಾರಾಯಣಮೂರ್ತಿಯವರು ಮುಖ್ಯರೆನ್ನಬಹುದು. ಆ ಹಿರಿಯ ವಕೀಲರ ಕಛೇರಿಗೆ ಸೇರಿದ ಮೊದಲ ಮೂರು-ನಾಲ್ಕು ದಿನಗಳು ನ್ಯಾಯಾಲಯಗಳಲ್ಲಿ ತುಂಬಿದ ವಕೀಲರು,

ಕಕ್ಷಿದಾರರು ಮತ್ತು ಆ ವಾತಾವರಣ ನನ್ನನ್ನು ದಿಗ್ಭ್ರಮೆಗೊಳಿಸಿತು. ಎಂದೂ ನ್ಯಾಯಾಲಯದ ಒಳಗಡೆ ಹೋಗದಿದ್ದ ನನ್ನನ್ನು ಹಿಂಜರಿಯುವಂತೆ ಮಾಡಿತು. ಆರಂಭದ ಸಮಯವೆಲ್ಲವೂ ನ್ಯಾಯಾಲಯದ ನಡವಳಿಕೆಗಳನ್ನು ಹೊರಗಡೆಯಿಂದಲೇ ಕಿಟಕಿಗಳ ಮೂಲಕ ಗಮನಿಸುವುದರಲ್ಲಿ ಕಳೆಯಿತು. ನಂತರ ಕೆಲವು ಹಿರಿಯ ವಕೀಲರ ಧೈರ್ಯದ ಮಾತುಗಳು ನನ್ನ ನೆರವಿಗೆ ಬಂದವು. ನಮ್ಮ ಹಿರಿಯ ವಕೀಲರು, ಅವರ ಕಛೇರಿಯಲ್ಲಿ ಕೆಲಸಮಾಡುತ್ತಿದ್ದ ವಕೀಲರು ಮತ್ತು ಇತರೆ ವಕೀಲರುಗಳು ಅಲ್ಲಿನ ನಡವಳಿಕೆಗಳಲ್ಲಿ ಭಾಗವಹಿಸುತ್ತಿದ್ದುದನ್ನು ಗಮನಿಸತೊಡಗಿದೆ. ಕ್ರಮೇಣ ನಾನು ನ್ಯಾಯಾಲಯಗಳ ಒಳಗಡೆ ಕುಳಿತು, ಅಲ್ಲಿ ನಡೆಯುತ್ತಿದ್ದ ಪ್ರಕರಣಗಳ ವಿಚಾರಣೆಗಳನ್ನು ಗಮನಿಸಲು ಪ್ರಾರಂಭಿಸಿದ ಮೇಲೆ ಮೊದಲಿದ್ದ ಹಿಂಜರಿಕೆ ದೂರವಾಯಿತು.

ಹಿರಿಯ ವಕೀಲರ ಕಛೇರಿಗೆ ನಾವು ಪ್ರತಿದಿನ ಬೆಳಿಗ್ಗೆ ಮತ್ತು ಸಂಜೆ ಹೋದಾಗ ನ್ಯಾಯಾಲಯಗಳಲ್ಲಿ ಚಾಲ್ತಿಯಲ್ಲಿದ್ದ ಪ್ರಕರಣಗಳ ಕಡತಗಳನ್ನು ನಿಸ್ಸಂಕೋಚವಾಗಿ ನೋಡಲು ಮತ್ತು ಅಭ್ಯಾಸ ಮಾಡಲು ಸ್ವಾತಂತ್ರ್ಯವಿತ್ತು. ಸಣ್ಣ ಕೇಸು ಮತ್ತು ಅಪೀಲುಗಳ ಕಡತಗಳನ್ನು (ಡ್ರಾಫ್ಟ್) ಮಾಡಲು ಅವಕಾಶ ಕೊಟ್ಟು ಅವುಗಳಲ್ಲಿನ ದೋಷ ಮತ್ತು ನ್ಯೂನತೆಗಳನ್ನು ನಮ್ಮ ಹಿರಿಯ ವಕೀಲರು ಎತ್ತಿ ತೋರಿಸಿ ಸೂಕ್ತ ಮಾರ್ಗದರ್ಶನ ಮಾಡುತ್ತಿದ್ದರು. ಇದರಿಂದ ನಮ್ಮಲ್ಲಿ ವೃತ್ತಿಯ ಬಗೆಗೆ ಆತ್ಮವಿಶ್ವಾಸ ಮೂಡಲು ಸಹಾಯವಾಯಿತಲ್ಲದೆ, ಅವರ ಶಿಸ್ತು, ಸಮಯಪಾಲನೆ, ಅವರ ಗಾಂಭೀರ್ಯದ ವ್ಯಕ್ತಿತ್ವಗಳು ನಮ್ಮ ಮೇಲೆ ಪರಿಣಾಮ ಬೀರತೊಡಗಿದವು. ನಮ್ಮ ಹಿರಿಯ ವಕೀಲರು ತಮ್ಮ ಕಿರಿಯ ವಕೀಲರಿಗೆ ನೀಡುತ್ತಿದ್ದ ಮಾರ್ಗದರ್ಶನ, ಕಕ್ಷಿದಾರರ ಜೊತೆ ವ್ಯವಹರಿಸುತ್ತಿದ್ದ ರೀತಿ, ಕಕ್ಷಿದಾರರ ಹಕ್ಕುಗಳ ಹಿತರಕ್ಷಣೆ ಮಾಡಲು ತೋರುತ್ತಿದ್ದ ಕಳಕಳಿ, ಆ ಬಗೆಗೆ ಶ್ರಮದ ಪ್ರಯತ್ನ, ನ್ಯಾಯನಿಷ್ಠುರತೆ ಬಗೆಗೆ ಇದ್ದ ನಿರ್ಭೀತ ಅಭಿಪ್ರಾಯ-ಅಭಿಮತ, ಅವರ ವಿಶಿಷ್ಟ ಜೀವನಶೈಲಿ ಇತ್ಯಾದಿ ನನ್ನ ಮೇಲೆ ತುಂಬಾ ಪ್ರಭಾವವನ್ನುಂಟು ಮಾಡಿದವು. ಆಗ ಕಛೇರಿಯಲ್ಲಿ ಸಹವಕೀಲರಾಗಿದ್ದವರು ಶ್ರೀ ಸುಬ್ಬಣ್ಣಾಚಾರ್. ಶಿಷ್ಯವೃತ್ತಿಯಲ್ಲಿದ್ದವರು ಎಸ್.ಎಂ.ಪಟ್ಟಾಭಿರಾಮರಾವ್, ಎಂ.ಎಸ್. ಶಿವಶಂಕರರಾವ್, ಮೆಹಬೂಬ್ ಮತ್ತು ದ್ವಾರಕನಾಥ್. ಶ್ರೀ ಸುಬ್ಬಣ್ಣ ನಿಷ್ಠಾವಂತ ಗುಮಾಸ್ತರಾಗಿದ್ದರು.

ನನ್ನ ಆರುತಿಂಗಳ ಶಿಷ್ಯವೃತ್ತಿ ಮುಗಿದ ಮೇಲೆ ರಾಜ್ಯಮಟ್ಟದ ಬಾರ್ ಕೌನ್ಸಿಲ್ ಪರೀಕ್ಷೆ ಬರೆದಿದ್ದಾಯಿತು. ಫಲಿತಾಂಶ ಹೊರಬಿದ್ದಾಗ ನನಗೆ ಮೂರನೇ ಸ್ಥಾನ. ಇದು ನನಗೆ ತುಂಬ ಸಂತೋಷ ತಂದಿತು. ನಮ್ಮ ಕಛೇರಿಯವರು, ಅದರಲ್ಲೂ ನನ್ನ ಹಿರಿಯ ವಕೀಲರಾದ ಶಾಸ್ತ್ರಿಗಳು ಸಂತೋಷದೊಡನೆ ಅಭಿಮಾನಪಟ್ಟರು. ಇದು ಆ ದಿನಗಳಲ್ಲಿ ನನಗೆ ಹೆಮ್ಮೆಪಡುವ ವಿಷಯವಾಯಿತು.

ಶ್ರೀಮತಿ ಪುಷ್ಪಾ ಪ್ರಸಾದ್ ಮತ್ತು ಶ್ರೀ ಜಿ.ಹೆಚ್. ಪ್ರಸಾದ್



ಕುಟುಂಬದ ಸದಸ್ಯರು : ವೇದ ರವಿ, ಡಾ. ಸಿ.ಎಂ. ರವಿ, ಡಾ. ಜಿ.ಪಿ. ರಾಮನಾಥ್
ಸಚಿತಾ ರಾಮನಾಥ್, ಪಲ್ಲವಿ ಲೋಲಾಕ್ಷ, ಎಂ. ಎಸ್. ಲೋಲಾಕ್ಷ
ಮೊಮ್ಮಕ್ಕಳು : ಸುಜನಾ, ತೇಜಸ್ ಮತ್ತು ಸುಪ್ರೀತಾ



ತಂದೆ-ಗಿಡ್ಡಪ್ಪನವರ ಹಾಲಪ್ಪ, ತಾಯಿ-ಶ್ರೀಮತಿ ಹನುಮಮ್ಮ



ದೊಡ್ಡಪ್ಪ-ಗಿಡ್ಡಪ್ಪನವರ ದುರ್ಗಪ್ಪ



ಚಿಕ್ಕಪ್ಪ-ಗಿಡ್ಡಪ್ಪನವರ ರಾಮಪ್ಪ



ಅಣ್ಣ–ಜಿ.ಹೆಚ್. ಶರಣಪ್ಪ



ತಮ್ಮ–ಜಿ.ಹೆಚ್. ನಾಗರಾಜ



ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಯಾಗಿ ಪ್ರಸಾದ್



ಯೋಗಾಭ್ಯಾಸದಲ್ಲಿ ನಿರತರಾದ ಪ್ರಸಾದ್

ದಾವಣಗೆರೆ ಡಿ.ಆರ್.ಎಮ್. ಕಾಲೇಜಿನ ವಾರ್ಷಿಕ ಸಮಾರಂಭದಲ್ಲಿ (೧೯೫೮) ಸಾಹಿತಿ ತ.ರಾ.ಸು. ಅವರೊಂದಿಗೆ ಕಾಲೇಜಿನ ಪ್ರಾಚಾರ್ಯ ರಾಮಚಂದ್ರಯ್ಯ, ಉಪನ್ಯಾಸಕರಾದ ಅಬ್ದುಲ್ ಘನಿ, ಶಾಂತರಾಜಯ್ಯ, ಮಾಜಿ ಶಾಸಕ ಎ. ಹೆಚ್. ಶಿವಾನಂದಸ್ವಾಮಿ ಹಾಗೂ ವಿದ್ಯಾರ್ಥಿಸಂಘದ ಪದಾಧಿಕಾರಿಗಳೊಂದಿಗೆ ಪ್ರಸಾದ್ (ನಿಂತವರಲ್ಲಿ ಬಲಗಡೆಯಿಂದ ಮೂರನೆಯವರು)

ಮಾವನವರಾದ ಘಟ್ಟಿಹೊಸಹಳ್ಳಿಯ ಸಿ. ಮಲೆಸಿದ್ದಪ್ಪ, ಪತ್ನಿ ಶಾರದಮ್ಮ ಕುಟುಂಬವರ್ಗದವರು ಮತ್ತು ಮಾಜಿಶಾಸಕ ಉಮಾಪತಿಯವರೊಂದಿಗೆ

ಬೆಂಗಳೂರಿನಲ್ಲಿ ಮುಖ್ಯಮಂತ್ರಿ ಡಿ. ದೇವರಾಜ ಅರಸು ಅವರನ್ನು ಸಿ. ಮಲೆಸಿದ್ದಪ್ಪ ಅವರ ನೇತೃತ್ವದಲ್ಲಿ ಭೇಟಿ ಮಾಡಿದ ಸಂದರ್ಭ (೧೯೭೩). ಎಸ್. ಹನುಮಂತಯ್ಯ, ಎಂ. ಹನುಮಂತಪ್ಪ, ಕುಮಾರ್ ಹೂವಿನಮಡು ಚಂದ್ರಪ್ಪ, ಪರಶುರಾಂಪುರ ಲಿಂಗಪ್ಪ ಇತರರೊಂದಿಗೆ ಪ್ರಸಾದ್

ಮಾಜಿ ಮುಖ್ಯಮಂತ್ರಿ ಎಸ್. ಬಂಗಾರಪ್ಪ ಅವರು ಪ್ರಸಾದ್ ಅವರ ಶಿವಮೊಗ್ಗದ ನಿವಾಸಕ್ಕೆ ಭೇಟಿ ನೀಡಿದಾಗ. ಚಿತ್ರದಲ್ಲಿರುವವರು: ಸಿ. ಮಲೆಸಿದ್ದಪ್ಪ, ಪಿ. ದಾಸಣ್ಣ, ಅಶೋಕ್ ವಿವೇಕಾನಂದ, ಸತೀಶ್, ರವಿ ಮತ್ತು ಏಕಲವ್ಯ (೨೦೦೦)



ಬಾದಾಮಿಯಲ್ಲಿ
ಗೌ॥ ಮುಖ್ಯನ್ಯಾಯಮೂರ್ತಿ
ಜಿ.ಕೆ. ಗೋವಿಂದಭಟ್
ಅವರನ್ನು
ಸ್ವಾಗತಿಸಿದ ಸಂದರ್ಭ
(೧೯೭೭)



ಬೆಂಗಳೂರಿನಲ್ಲಿ
೧೯೭೧ರಲ್ಲಿ ಜರುಗಿದ
ಕರ್ನಾಟಕ ರಾಜ್ಯ
ನಾಯಕರ ಪ್ರಥಮ
ಸಮ್ಮೇಳನದಲ್ಲಿ
ಮಾಜಿ ಮಂತ್ರಿ
ಹೆಚ್. ಸಿ. ಬೋರಯ್ಯ
ಸುದರ್ಶನ, ತಿಮ್ಮಯ್ಯ
ಮತ್ತಿತರರೊಂದಿಗೆ



ರಾಣೆಬೆನ್ನೂರಿನಲ್ಲಿ
ನ್ಯಾಯಾಧೀಶ
ಕೆ.ಹೆಚ್. ರಾಜಶೇಖರ್
ಮತ್ತು ತಮ್ಮ
ಮಕ್ಕಳೊಂದಿಗೆ
(೧೯೮೫)



ಗೌ॥ ನ್ಯಾಯಮೂರ್ತಿ ಶ್ರೀ ಶಿವರಾಜ ಪಾಟೀಲ್ ಅವರೊಂದಿಗೆ (೨೦೦೫)



ಹಾವೇರಿ ಪ್ರವಾಸಿಮಂದಿರದಲ್ಲಿ ಗೌ॥ ಮುಖ್ಯನ್ಯಾಯಮೂರ್ತಿ
ವಿ. ಎಸ್. ಮಳೀಮಠ, ಶ್ರೀಮತಿ ಮಳೀಮಠ, ಜಿಲ್ಲಾ ನ್ಯಾಯಾಧೀಶ
ಎಂ.ಎಂ. ಮಿರ್ಧೆ, ನ್ಯಾಯಾಧೀಶ ಕೆ. ರಾಜಶೇಖರ್ ಅವರೊಂದಿಗೆ (೧೯೮೫)



ಗೌ॥ ನ್ಯಾಯಮೂರ್ತಿ ಬಿ. ಎನ್. ಮಲ್ಲಿಕಾರ್ಜುನ, ನ್ಯಾಯಾಧೀಶರಾದ
ಅನಂತಮೂರ್ತಿ, ಪಿ.ಟಿ. ಪಾಟೀಲ, ಆರ್.ಬಿ. ಬೂದಿಹಾಳ
ವಕೀಲ ಬಿ.ಎನ್. ದಯಾನಂದ ಹಾಗೂ ಇತರರೊಂದಿಗೆ



ಜಮಖಂಡಿಯಲ್ಲಿ ಗೌ॥ ನ್ಯಾಯಮೂರ್ತಿಗಳಾದ ಎಂ. ರಾಮಾಜೋಯಿಸ್, ಕೆ.ಬಿ. ನಾವದಗಿ ಹಾಗೂ ಜಿಲ್ಲಾನ್ಯಾಯಾಧೀಶರಾದ ಸಿ.ಎನ್. ಅಶ್ವತ್ಥನಾರಾಯಣರಾವ್, ಶಂಕರ ಮುರಗದ ಭರಮಗೌಡರ, ಲಾಡ್‌ಖಾನ್, ಕುಲಕರ್ಣಿ ಅವರೊಂದಿಗೆ (೧೯೮೮)



ದೆಹಲಿಯ ಕರ್ನಾಟಕ ಭವನ ಆವರಣದಲ್ಲಿ ನ್ಯಾಯಾಧೀಶರಾದ ಅಶೋಕ್‌ಕುಮಾರ್ ಧೋಲೆ ಮತ್ತು ಐ.ಎಸ್. ಆಂಟೀನ್ ಅವರೊಂದಿಗೆ (೧೯೯೪)



ನ್ಯಾಯಾಧೀಶರಾದ ಎಸ್.ಎನ್. ವಡ್ಡಿಕೊಪ್ಪ ಬಿ.ರಂಗಸ್ವಾಮಿ, ಎಚ್.ಆರ್. ಸುಧೀರ್ ಅವರೊಂದಿಗೆ (೧೯೯೨)



ಶಿವಮೊಗ್ಗ ಜಿಲ್ಲಾ ೩ನೇ ಬೃಹತ್ ಲೋಕ್ ಅದಾಲತ್‌ನ ಸಮಾರಂಭಕ್ಕೆ ಹೋಗುವಾಗ
ನ್ಯಾಯಮೂರ್ತಿ ಎ.ಜೆ. ಸದಾಶಿವ, ನ್ಯಾಯಾಧೀಶರಾದ ಗದಗ ಮಹಾದೇವಯ್ಯ
ಜಿಲ್ಲಾಧಿಕಾರಿಗಳಾದ ಗಣೇಶನ್, ವಕೀಲರ ಸಂಘದ ಅಧ್ಯಕ್ಷ ಕೆ.ಹೆಚ್. ಹನುಮೇಗೌಡ
ವಕೀಲರಾದ ಎ.ಟಿ. ಬೆಳ್ಳಿಯಪ್ಪ ಹಾಗೂ ಇತರರೊಂದಿಗೆ (೨೦೦೧)

ಗೌ॥ ನ್ಯಾಯಮೂರ್ತಿ ಅಜಿತ್ ಸಿ. ಕಬ್ಬಿನ್ ಮತ್ತು ಶ್ರೀಮತಿ ಮಂಗಳಾ ಕಬ್ಬಿನ್ ಅವರೊಂದಿಗೆ



ಶಿವಮೊಗ್ಗ ಜಿಲ್ಲಾ
೨ನೇ ಬೃಹತ್ ಲೋಕ್
ಅದಾಲತ್‌ನ ಉದ್ಘಾಟನಾ
ಸಮಾರಂಭದಲ್ಲಿ
ಗೌ॥ ಮುಖ್ಯನ್ಯಾಯಮೂರ್ತಿ
ಭಾಸ್ಕರರಾವ್
ಗೌ॥ ನ್ಯಾಯಮೂರ್ತಿ
ಹೆಚ್. ಎಲ್. ದತ್ತು
ನ್ಯಾಯಾಧೀಶ
ಎಸ್. ವೈ. ಈರಣ್ಣವರ್
ಹಾಗೂ ಇತರರೊಂದಿಗೆ



ಕಾನೂನು ಅರಿವು ಕಾರ್ಯಕ್ರಮದ ಉದ್ಘಾಟನೆ
ಚಿತ್ರದಲ್ಲಿರುವವರು: ಶಿವಮೊಗ್ಗ ಕಾನೂನು ಕಾಲೇಜು ವಿದ್ಯಾರ್ಥಿಗಳು, ಕಾಲೇಜಿನ ಪ್ರಾಚಾರ್ಯ ಸತ್ಯಮೂರ್ತಿ
ನ್ಯಾಯಾಧೀಶ ಎಸ್. ವೈ. ಈರಣ್ಣವರ್ ಹಾಗೂ ವಕೀಲರು (೨೦೦೦)



ಬಿಜಾಪುರಕ್ಕೆ
ಕೇರಳದ ಗೌ॥ ನ್ಯಾಯಮೂರ್ತಿ
ಕೆ. ಸುಕುಮಾರನ್ ಭೇಟಿ
ನೀಡಿದಾಗ. ಜೊತೆಯಲ್ಲಿ
ಜಿಲ್ಲಾ ನ್ಯಾಯಾಧೀಶರಾದ
ಶಂಕರ್ ಮುರಗದ ಅವರು
(೧೯೮೮)



ಮೈಸೂರು ಬೃಂದಾವನದಲ್ಲಿ
ಮಾರಿಷಸ್‌ನ
ಗೌ॥ ಮುಖ್ಯನ್ಯಾಯಮೂರ್ತಿ
ಸರ್. ವಿಕ್ಟರ್ ಗ್ಲೋವರ್
ಮತ್ತು ಭಾರತದ
ಶ್ರೇಷ್ಠ ನ್ಯಾಯಾಲಯದ
ರಿಜಿಸ್ಟ್ರಾರ್
ಹೆಚ್.ಎಸ್. ಕಪೂರ್
ಅವರೊಂದಿಗೆ




ಶಿವಮೊಗ್ಗ ವಕೀಲರ
ಸಂಘದ ಕಚೇರಿಯಲ್ಲಿ
ಗೌ॥ ಮುಖ್ಯನ್ಯಾಯಮೂರ್ತಿ
ಪಿ.ವಿ. ರೆಡ್ಡಿ
ಗೌ॥ ನ್ಯಾಯಮೂರ್ತಿ ಪದ್ಮರಾಜ
ಸಂಘದ ಅಧ್ಯಕ್ಷ
ಕೆ. ಹೆಚ್. ಹನುಮೇಗೌಡ
ಅವರೊಂದಿಗೆ (೨೦೦೧)

ಗುರುಗಳಾದ ನ್ಯಾಯವಾದಿ ಟಿ. ವೆಂಕಟರಾಮಾಶಾಸ್ತ್ರಿ ಅವರೊಂದಿಗೆ
ಪ್ರಸಾದ್ ದಂಪತಿಗಳು (೨೦೦೧)

ಚಿಕ್ಕಮಗಳೂರು ಜಿಲ್ಲಾ ಗ್ರಾಹಕರ ವೇದಿಕೆಯಿಂದ ಪ್ರಸಾದ್ ಅವರಿಗೆ ಬೀಳ್ಕೊಡುಗೆ
ಹಾಗೂ ಪ್ರಭಾರ ಅಧ್ಯಕ್ಷ ಬಿ.ಎಸ್. ತೋಟದ ಅವರಿಗೆ ಸ್ವಾಗತಿಸುವ ಕಾರ್ಯಕ್ರಮದಲ್ಲಿ

ಖ್ಯಾತ ಕಾದಂಬರಿಕಾರ ಎಸ್. ಎಲ್. ಭೈರಪ್ಪ ಹಾಗೂ ಪ್ರಧಾನ್ ಗುರುದತ್ ಅವರೊಂದಿಗೆ

ಚಿಕ್ಕಮಗಳೂರಿನ ಕಾರ್ಯಕ್ರಮವೊಂದರಲ್ಲಿ ಕವಿ ಡಾ. ಎಚ್.ಎಸ್. ವೆಂಕಟೇಶಮೂರ್ತಿ
ಡಾ. ಜೆ.ಪಿ. ಕೃಷ್ಣೇಗೌಡ, ಯಶವಂತ ಹಳಿಬಂಡಿ, ಎಸ್.ಎಸ್. ವೆಂಕಟೇಶ್ ಹಾಗೂ ಇತರರೊಂದಿಗೆ



ಪೂಜ್ಯಶ್ರೀ
ಸಿದ್ದೇಶ್ವರಸ್ವಾಮೀಜಿ
ನ್ಯಾಯಾಧೀಶರಾದ
ಜಿ.ಟಿ. ವೀರಭದ್ರಪ್ಪ
ಟಿ. ನಾಗಪ್ಪ
ಡಾ.ಎಸ್.ಎಂ ಕಂಠೀಕರ್
ಅವರೊಂದಿಗೆ
(೨೦೦೫)



ಧರ್ಮಸ್ಥಳದ
ಡಾ. ವೀರೇಂದ್ರ ಹೆಗ್ಗಡೆ
ಸಾಹಿತಿ
ಚಂದ್ರಯ್ಯ ನಾಯಿಡು
ಮತ್ತು
ಗೌ.ಮ.ಉಮಾಪತಿಶಾಸ್ತ್ರಿ
ಅವರೊಂದಿಗೆ



ಗಾಯಕ ಪುತ್ತೂರು
ನರಸಿಂಹನಾಯಕ
ಸುಗಮ ಸಂಗೀತ ಗಂಗಾದ
ಮಂಜುನಾಥ ಕಾಮತ್
ಸಾಹಿತಿ ಅರವಿಂದ ದೀಕ್ಷಿತ
ಮತ್ತು ತಮ್ಮ ಮಗ
ಡಾ. ಜಿ.ಪಿ. ರಾಮನಾಥ್
ಅವರೊಡನೆ

ಸಾಣೇಹಳ್ಳಿ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯಸ್ವಾಮೀಜಿ ಅವರಿಂದ
'ಕಲಪನಹಳ್ಳಿ ಕಲ್ಪತರು' ಶ್ರೀ ಶರಣ ಬಸಪ್ಪಜ್ಜನವರ ಮಹಾಶಿವರಾತ್ರಿ ಸಪ್ತಾಹದ
ಸ್ಮರಣಫಲಕ ಸ್ವೀಕಾರ

ಚಿಕ್ಕಮಗಳೂರಿನ ಸಾಹಿತಿ ಚಂದ್ರಯ್ಯ ನಾಯಿಡು ಅವರಿಂದ ಗೌರವ ಸ್ವೀಕಾರ

ಶಿವಮೊಗ್ಗ ವಕೀಲ ಸಂಘದವರಿಂದ ಬೀಳ್ಕೊಡುಗೆ ಸ್ವೀಕರಿಸಿದ ಸಂದರ್ಭದಲ್ಲಿ
ಅಧ್ಯಕ್ಷ ಕೆ. ಬಸಪ್ಪಗೌಡರು, ಹೆಚ್. ಆರ್. ರಂಗನಾಥರಾವ್ ಅವರೊಂದಿಗೆ (೨೦೦೧)

ಸಿ. ಮಲೆಸಿದ್ದಪ್ಪ ಸ್ಮರಣ ಸಂಪುಟ 'ಗಟ್ಟಿಹೊಸಹಳ್ಳಿ ಗಟ್ಟಿಗ' ಬಿಡುಗಡೆ ಸಮಾರಂಭದಲ್ಲಿ
ಮಾಜಿಸಚಿವ ಕೆ.ಎಚ್. ರಂಗನಾಥ್ ಮತ್ತು ಮಾಜಿಶಾಸಕ ಜಿ.ಹೆಚ್. ತಿಪ್ಪಾರೆಡ್ಡಿ ಅವರೊಡನೆ (೨೦೦೨)




'ಅಧೋಲೋಕ' ಮತ್ತು 'ಇತಿಹಾಸಕಾರ ಹೆಚ್.ವಿ. ವೀರನಾಯಕ ಹರತಿ' ಕೃತಿಗಳ ಬಿಡುಗಡೆ ಸಮಾರಂಭದ ಅಧ್ಯಕ್ಷ ಸ್ಥಾನದಲ್ಲಿ ಪ್ರಸಾದ್. ವೇದಿಕೆಯಲ್ಲಿ: ಪ್ರೊ. ಲಕ್ಷ್ಮಣ್ ತೆಲಗಾವಿ ಎಸ್. ಆರ್. ಗುರುನಾಥ್, ಡಾ. ಅಮರೇಶ ನುಗಡೋಣಿ, ಹರ್ತಿಕೋಟೆ ವೀರೇಂದ್ರಸಿಂಹ ಡಾ. ಜಿ. ರಂಗಯ್ಯ ಮತ್ತು ಬೆಳಗೆರೆ ಕೃಷ್ಣಶಾಸ್ತ್ರಿಗಳು (೨೦೦೪)




ಚಿತ್ರದುರ್ಗದಲ್ಲಿ ನಡೆದ ಕರ್ನಾಟಕ ಬೇಡ ಸಮುದಾಯ ಕುರಿತ ವಿಚಾರ ಸಂಕಿರಣದಲ್ಲಿ ಡಾ. ಮಂಜುನಾಥ ಬೇವಿನಕಟ್ಟಿ, ಪ್ರೊ. ಲಕ್ಷ್ಮಣ್ ತೆಲಗಾವಿ, ಡಾ. ಕೆ. ಎಂ. ಸುರೇಶ್ ಡಿ. ಬೋರಪ್ಪ, ಎಂ. ಜಯಣ್ಣ ಮತ್ತು ಹರ್ತಿಕೋಟೆ ವೀರೇಂದ್ರಸಿಂಹ ಅವರೊಡನೆ (೨೦೦೭)



ಶ್ರೀ ಜಿ. ಹೆಚ್. ಪ್ರಸಾದ್ ಅಭಿನಂದನ ಸಂಪುಟ ಪ್ರಕಟಣ ಸಮಿತಿಯ ಅಧ್ಯಕ್ಷ ಕೆ. ಮಲ್ಲಪ್ಪ, ಸಂಚಾಲಕ
ಹಾಗೂ ಪ್ರಕಾಶಕ ಹರ್ತಿಕೋಟೆ ವೀರೇಂದ್ರಸಿಂಹ ಹಾಗೂ ಸಂಪಾದಕ ಪ್ರೊ. ಲಕ್ಷ್ಮಣ್ ತೆಲಗಾವಿ ಅವರೊಂದಿಗೆ



ಸಮಿತಿಯ ಸದಸ್ಯರಾದ ಎಸ್. ಆರ್. ಗುರುನಾಥ್, ಪ್ರೊ. ಲಕ್ಷ್ಮಣ್ ತೆಲಗಾವಿ
ಹರ್ತಿಕೋಟೆ ವೀರೇಂದ್ರಸಿಂಹ ಮತ್ತು ಕೆ. ಎಲ್. ರಾಜಶೇಖರ್ ಅವರೊಂದಿಗೆ

ಆಗಿದ್ದರಿಂದ ಅದನ್ನು ನಡೆಸಲೇಬೇಕಿತ್ತು. ಮಲೆಸಿದ್ದಪ್ಪನವರು ಊರಲಿಲ್ಲದ ಕೊರತೆಯನ್ನು ಅವರ ಬಲಗೈಯಂತಿದ್ದ ಅವರ ಸೋದರಳಿಯ ಹುಲೆಮಳಲಿಯ ಎನ್.ರಾಮಚಂದ್ರಪ್ಪ ತುಂಬಿದರು; ತಮ್ಮ ಸೌಜನ್ಯಪೂರ್ವಕ ನಡವಳಿಕೆಯಿಂದ ನಮ್ಮನ್ನು ಉಪಚರಿಸಿದರು.

ತಮ್ಮ ಮಗಳಿಗೆ ಅವಸರದಲ್ಲಿ ಮದುವೆಮಾಡುವ ಇಚ್ಛೆ ಶ್ರೀ ಮಲೆಸಿದ್ದಪ್ಪನವರಿಗೆ ಇಲ್ಲದಿದ್ದರೂ ನಮ್ಮ ಮನೆಯವರ ಕಡೆಯಿಂದ ಒಪ್ಪಿಕೊಳ್ಳಬೇಕಾಯಿತು. ಹೀಗಾಗಿ, ೨೬-೫-೧೯೭೬ರಂದು ದಾವಣಗೆರೆಯ ರಾಜನಹಳ್ಳಿ ಹನುಮಂತಪ್ಪನವರ ಧರ್ಮಶಾಲೆಯಲ್ಲಿ ನಡೆದ ಸರಳ ವಿವಾಹದಲ್ಲಿ ಅವರ ಎರಡನೇ ಮಗಳು ಪುಷ್ಪಾ ಅವರನ್ನು ನನ್ನ ಬಾಳ ಸಂಗಾತಿಯನ್ನಾಗಿ ಮಾಡಿಕೊಳ್ಳುವ ಸುಯೋಗ ಒದಗಿತು. ಆ ಮದುವೆಗೆ ಅಪಾರ ಬಂಧು-ಮಿತ್ರರಲ್ಲದೆ, ಸಮಾಜದ ಹಿರಿಯರು ಹಾಗೂ ರಾಜ್ಯದ ಸಚಿವರಾಗಿದ್ದ ಹಾಗೂ ಪ್ರಮಾಣಿಕ ರಾಜಕಾರಣಿ ಎಂದು ಹೆಸರಾಗಿದ್ದ ಹೊ.ಚಿ.ಬೋರಯ್ಯನವರೂ ಆಗಮಿಸಿದ್ದರು. ಇದು ವಿವಾಹ ಸಮಾರಂಭದ ಕಳೆಯನ್ನು ಹೆಚ್ಚಿಸಿತ್ತು. ಅಲ್ಲಿಯೇ ರಾಜ್ಯಮಟ್ಟದ ನಾಯಕರ ಸಮಾಜದ ಪ್ರಥಮ ಸಮ್ಮೇಳನದ ಪ್ರಾಥಮಿಕ ಸಭೆ ನಡೆದು, ಮುಂದೆ ೧೯೭೭ರಲ್ಲಿ ಆ ಸಮ್ಮೇಳನವು ಬೆಂಗಳೂರಿನ ಪುರಭವನದಲ್ಲಿ ನಡೆದಿದ್ದು ದಾಖಲೆ. ಆ ಸಮ್ಮೇಳನದಲ್ಲಿ ಹಿಂದುಳಿದವರ್ಗಗಳಿಗೆ ಸೇರಿದ ಶ್ರೀ ದೇವರಾಜ ಅರಸು, ಕೆ.ಹೆಚ್. ರಂಗನಾಥ್, ಹೊ.ಚಿ. ಬೋರಯ್ಯ, ಸಿ.ಮಲೆಸಿದ್ದಪ್ಪ, ಎಲ್.ಜಿ.ಹಾವನೂರು, ಕೆ.ಆರ್. ನಾಯಕ, ಎಸ್. ಹನುಮಂತಯ್ಯ, ಎ.ಬಿ.ಮರಿಯಪ್ಪ, ಎಸ್.ಸಂಜೀವಯ್ಯ, ಟಿ.ಎಂ.ಕೆ. ಪೀರ್‌ಸಾಹೇಬ್, ಸತ್ಯನಾರಾಯಣರಾಜು ಕೋಸಗಿ ಅವರೂ ಸೇರಿದಂತೆ ಅನೇಕ ಮುಖಂಡರುಗಳು ಭಾಗವಹಿಸಿ ಅತಿ ಮಹತ್ವದ ನಿರ್ಣಯಗಳನ್ನು ತೆಗೆದುಕೊಂಡರು. ಆ ನಂತರ ಅವರಲ್ಲಿ ಅನೇಕರು ರಾಜ್ಯ ರಾಜಕಾರಣದಲ್ಲಿ ಆಡಳಿತದ ಚುಕ್ಕಾಣಿ ಹಿಡಿದು ಪ್ರಸಿದ್ಧರಾದುದು ಈಗ ಇತಿಹಾಸ.

**ವಿವಾಹಾನಂತರ**

ಮದುವೆಯ ನಂತರ, 'ಶ್ರೀ ಗುರುದೇವ ಭವನ' ಎಂಬ ಹೆಸರಿನ ನಮ್ಮ ದೊಡ್ಡಪ್ಪನವರಿಗೆ ಸೇರಿದ ಮನೆಯಲ್ಲಿ ಮಡದಿಯೊಂದಿಗೆ ನನ್ನ ಸಂಸಾರ ಪ್ರಾರಂಭಗೊಂಡಿತು. ನಮ್ಮ ದೊಡ್ಡಪ್ಪನವರೂ ನಮ್ಮ ಜೊತೆಯಲ್ಲಿರಲು ಒಪ್ಪಿ ಬಂದರು. ಅವರು ಸಂಸಾರಿಯಾಗಿದ್ದರೂ ಆಧ್ಯಾತ್ಮದ ಕಡೆಗೂ ಹೆಚ್ಚಿನ ಒಲವು ಇಟ್ಟುಕೊಂಡವರು. ಕಲಪನಹಳ್ಳಿಯ ಮಹಾತ್ಮ ಬಸಪ್ಪಅಜ್ಜನವರ ಗದ್ದಿಗೆ ಇರುವ ಮಠಕ್ಕೆ ಮತ್ತು ದಾವಣಗೆರೆಯಲ್ಲಿರುವ ಕನ್ನಡವನ್ನು ಕಸ್ತೂರಿ ಕನ್ನಡ ಎಂದು ತಮ್ಮ ಕವಿತೆಯ ಮೂಲಕ ಸಾರಿದ ಅವಧೂತಪಂಥಕ್ಕೆ ಸೇರಿದ ಮಹಾಲಿಂಗರಂಗ ಎಂಬ ಹೆಸರಿನ ಸಂತಕವಿ ರಂಗಾವಧೂತರಮಠಕ್ಕೆ ನಿತ್ಯ ಆಧ್ಯಾತ್ಮ ಚಿಂತನೆಗೆ ಹೋಗಿ ಬರುವುದು ಅವರಿಗೆ ವಾಡಿಕೆಯಾಗಿತ್ತು. ಅವರ ಜೀವನಕ್ರಮ ಒಂದು ಸಂದೇಶದಂತಿದ್ದು, ಅದು ನಮಗೆ ಮಾರ್ಗದರ್ಶಿಯಾಗಿತ್ತು. ಸ್ವಲ್ಪಕಾಲ ಪಿ.ಯು.ಸಿ. ವ್ಯಾಸಂಗಕ್ಕಾಗಿ ನಮ್ಮ ಜೊತೆಯಲ್ಲಿದ್ದ ಭಾವ ಅಶೋಕನಿಂದ ಬಿಡುವಿನ

ವೇಳೆಯಲ್ಲಿ ತಮ್ಮ ಆಧ್ಯಾತ್ಮ ಚಿಂತನೆಯ ಬಗೆಗೆ ಹಾಗೂ 'ವೃತ್ತಿರತ್ನಾವಳಿ' ಎಂಬ ಗ್ರಂಥದ ಬಗೆಗೆ ಬರೆಸುತ್ತಿದ್ದರು.

ಮೊದಲು ಸಾರಥಿ ದುಗ್ಗಪ್ಪನವರ ಕಟ್ಟಡದ ಕೊಠಡಿಯೊಂದರಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದ ನಾನು, ಮದುವೆಯ ನಂತರ ಕಛೇರಿಯನ್ನು ನಾವಿದ್ದ ಶ್ರೀ ಗುರುದೇವ ಭವನ ಮಹಡಿಯ ರೂಮಿಗೆ ಸ್ಥಳಾಂತರಿಸಿದೆ. ನನಗೆ ಊರಲ್ಲಿ ಮತ್ತು ಸುತ್ತಮುತ್ತಲಿನ ಕೆಲವು ಗ್ರಾಮಗಳಲ್ಲಿ ಸಾಕಷ್ಟು ಜನರ ಪರಿಚಯವಿದ್ದುದರಿಂದ, ಕಾನೂನು ಸಲಹೆಗಾಗಿ, ಪ್ರಕರಣಗಳನ್ನು ದಾಖಲುಮಾಡಲು, ಪ್ರಕರಣ ನಡೆಸಲು ಕೇಳಿಕೊಂಡು ಬರುತ್ತಿದ್ದರು. ನಾನು ನನ್ನ ಕಾನೂನುಜ್ಞಾನದ ಪರಿಮಿತಿಯಲ್ಲಿ ಆ ಪ್ರಕರಣಗಳ ಸಾಧಕ-ಬಾಧಕಗಳನ್ನು ಹೇಳಿಬಿಡುತ್ತಿದ್ದೆ. ಅನೇಕ ಪ್ರಕರಣಗಳಲ್ಲಿ ನನ್ನ ನೇರ ಸಲಹೆ, ಸೂಚನೆಗಳನ್ನು ನೀಡುತ್ತಿದ್ದೆ. ಪ್ರಕರಣಗಳಿಂದ ಆಗಬಹುದಾದ ಪರಿಣಾಮ, ನಿರೀಕ್ಷಿಸಬಹುದಾದ ಫಲಿತಾಂಶಗಳು ಅವರ ಅನಿಸಿಕೆಗಳ, ಅಂದಾಜುಗಳ ವಿರುದ್ಧವಾಗಿದ್ದ ರಿಂದಲೋ ಏನೊ ಮತ್ತು ಕ್ರಿಮಿನಲ್ ಪ್ರಕರಣಗಳಲ್ಲಿ ನಾನು ಪೊಲೀಸ್ ಠಾಣೆಗಳಿಗೆ ಹೋಗಲು ಒಪ್ಪದೇ ಇದ್ದುದರಿಂದಲೊ ಏನೊ, ನನ್ನ ವಕೀಲಿವೃತ್ತಿ ಆಶಾದಾಯಕ ವಾಗಿರಲಿಲ್ಲ. ವಕೀಲಿ ಜೊತೆ, ಜಿಲ್ಲಾ ಸಹಕಾರ ಸಂಘಗಳ ಆರ್ಬಿಟ್ರೇಟರ್ ಆಗಿದ್ದುದರಿಂದ, ಸಾಕಷ್ಟು ಪ್ರಕರಣಗಳನ್ನು ಅಂದಿನ ಅಸಿಸ್ಟೆಂಟ್ ರಿಜಿಸ್ಟ್ರಾರ್‌ಗಳು ತೀರ್ಮಾನಕ್ಕಾಗಿ ನನಗೆ ಕಳುಹಿಸುತ್ತಿದ್ದುದು, ಆ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗಲು ಸಹಾಯ ಮಾಡಿತು. ವೃತ್ತಿಯಲ್ಲಿ ಅಂದಿನ ನ್ಯಾಯಮೂರ್ತಿ ಬಿ.ಕೆ.ಸೋಮಶೇಖರ್ ಮತ್ತು ನ್ಯಾಯಮೂರ್ತಿ ಎ.ಬಿ.ಮುರುಗೋಡ್, ನ್ಯಾಯಮೂರ್ತಿ ಎಸ್.ಆರ್.ವೆಂಕಟೇಶಮೂರ್ತಿ ಅವರ ಕಾನೂನುಬದ್ಧ ಸಹಕಾರ, ಪ್ರೋತ್ಸಾಹ; ಅನೇಕ ಹಿರಿಯ ಮತ್ತು ಕಿರಿಯ ವಕೀಲರ ಸಹಕಾರ, ಪ್ರೀತಿ, ಸ್ನೇಹ-ಇವು ನಾನು ವೃತ್ತಿಯನ್ನು ಮುಂದುವರೆಸಿಕೊಂಡು ಹೋಗಲು ಸಹಾಯಮಾಡಿದವು. ಜೊತೆಗೆ ನನ್ನ ದೊಡ್ಡಪ್ಪನವರ ಆಸ್ತಿಗಳಿಂದ ಬರುತ್ತಿದ್ದ ಆದಾಯ ನನ್ನ ಕೈಗೇ ಸೇರುತ್ತಿದ್ದುದರಿಂದ, ಸರಳ ಜೀವನ ನಡೆಸಲು ತೊಂದರೆ ಇರಲಿಲ್ಲ. ಸರಳ ಜೀವನಕ್ಕೆ ಮತ್ತು ನಮ್ಮ ಬಂಧುಗಳ ಜೊತೆಗೆ ಹೊಂದಿಕೊಂಡಿದ್ದ ಹಾಗೂ ಅತಿಥಿಸತ್ಕಾರಕ್ಕೂ ಹೆಸರಾಗಿದ್ದ ಮಡದಿ ಜೊತೆಗೆ ಇದ್ದುದರಿಂದ ಸಂಸಾರ ಪ್ರೀತಿ-ನೆಮ್ಮದಿಯಿಂದ ಸಾಗಿತು.

ಈ ಮಧ್ಯೆ ೧೯೭೦ರಲ್ಲಿ ಚಿ.ರಾಮನಾಥ್ ಜನಿಸಿದ. ಅವನು ಎಲ್ಲರ ಮುದ್ದಿನ ಮಗನಾದ. ಅವನು ಆಕರ್ಷಕವಾಗಿ ಕಾಣುತ್ತಿದ್ದುದರಿಂದ ಮತ್ತು ಮುಗ್ಧ ಸ್ವಭಾವದವನಾಗಿದ್ದುದರಿಂದ ಸಹಜವಾಗಿಯೇ ಎಲ್ಲರ ಪ್ರೀತಿಗೆ ಪಾತ್ರನಾಗಿ ಬೆಳೆದ. ಮುಂದೆ ೧೯೭೨ರಲ್ಲಿ ಕು.ವೇದಾವತಿ ಜನಿಸಿದಳು. ಆಕೆ ಮಗುವಾಗಿದ್ದಾಗ ತನ್ನ ಸುಂದರ, ಮುಗ್ಧ ಹಾಗೂ ಗಂಭೀರ ಸ್ವಭಾವದಿಂದ ಎಲ್ಲರ ಮನವನ್ನು ಗೆದ್ದಳು.

### ರಾಜ್ಯಮಟ್ಟದ ಎರಡನೇ ನಾಯಕ ಸಮ್ಮೇಳನ

೧೯೭೧ರ ರಾಜ್ಯಮಟ್ಟದ ನಾಯಕ ಜನಾಂಗದ ಪ್ರಥಮ ಸಮ್ಮೇಳನವೇ ಸ್ಫೂರ್ತಿಯಾಗಿ ಅಂತಹುದೇ ಇನ್ನೊಂದು ಸಮ್ಮೇಳನವನ್ನು ದಾವಣಗೆರೆಯಲ್ಲಿ ನಡೆಸಬೇಕೆಂದು ತೀರ್ಮಾನ

ವಾಯಿತು. ಸಿ.ಮಲೆಸಿದ್ದಪ್ಪನವರು ಸ್ವಾಗತಸಮಿತಿಯ ಅಧ್ಯಕ್ಷ, ಡಿ.ಎಂ.ರಘುವಪ್ಪ ಮತ್ತು ಕೊಡಗನೂರು ನಾಗಪ್ಪ ಉಪಾಧ್ಯಕ್ಷರು, ಬಿ.ಹೆಚ್.ಶ್ರೀನಿವಾಸನಾಯಕ ಮತ್ತು ಹೂವಿನಮಡು ಚಂದ್ರಪ್ಪ ಕಾರ್ಯದರ್ಶಿಗಳೆಂದಾಯಿತು.

ಆ ಹೊತ್ತಿಗೆ ಮುನ್ಸಿಫ್ ಹುದ್ದೆ ಆಯ್ಕೆ ಪರೀಕ್ಷೆಗಾಗಿ ಪಿ.ಎಸ್.ಸಿ. ಅರ್ಜಿಗಳನ್ನು ಕರೆದ ವಿಷಯ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಈ ವಿಷಯ ನನ್ನ ಮೇಲೆ ವಿಶೇಷ ಪ್ರೀತಿಯನ್ನಿಟ್ಟುಕೊಂಡಿದ್ದ ಮೈಸೂರಿನ ಭಾವ ಪ್ರೊ.ಎಸ್.ಬಿ.ಹನುಮಂತಪ್ಪನವರ ಮೂಲಕ ಗೊತ್ತಾಗಿ ಅದಕ್ಕೆ ಅರ್ಜಿಯನ್ನು ಹಾಕಿದ್ದೂ ಆಯಿತು. ಆ ಪರೀಕ್ಷೆಗೆ ತಯಾರಿ ನಡೆಸಿ, ಅದರಲ್ಲಿ ಪಾಸಾಗಿ ಸಂದರ್ಶನದ ನಂತರ ಮುನ್ಸಿಫ್ ಹುದ್ದೆಗೆ ೧೯೭೨ರಲ್ಲಿ ಆಯ್ಕೆಯೂ ಆಯಿತು. ಆದರೆ ಆಗ ರಾಜ್ಯದಲ್ಲಿ ಆರ್ಥಿಕ ಬಿಕ್ಕಟ್ಟಿನಿಂದಾಗಿ ನೇಮಕಾತಿ ಆದೇಶ ಕೂಡಲೇ ಬರುವಂತಿರಲಿಲ್ಲ. ಆಗ ನಾಯಕ ಜನಾಂಗದ ೨ನೇ ಸಮ್ಮೇಳನದಲ್ಲಿ ಪೂರ್ವ ಸಿದ್ಧತಾ ಕಾರ್ಯಕ್ರಮಗಳಲ್ಲಿ ನಾನು ಅಧಿಕೃತವಾಗಿ ಭಾಗವಹಿಸಿದಲ್ಲಿ ನೇಮಕಾತಿ ಪ್ರಕ್ರಿಯೆಗೆ ತೊಂದರೆಯಾಗಬಹುದೆಂಬ ಶಂಕೆಯಿಂದ ಸಮ್ಮೇಳನದ ಅನಧಿಕೃತ ಸಂಚಾಲಕ-ಖಜಾಂಚಿಯಾಗಿ ಕೆಲಸ ಮಾಡಬೇಕಾಯಿತು. ದಾವಣಗೆರೆ ನಾಯಕರ ವಿದ್ಯಾರ್ಥಿನಿಲಯದಲ್ಲಿ ಸಮ್ಮೇಳನದ ಕಛೇರಿ ಆರಂಭಿಸಲು ಉದ್ದೇಶಿಸಿದ್ದು, ಕೆಲವರ ವಿರೋಧದಿಂದ ಅಲ್ಲಿ ಸ್ಥಳಾವಕಾಶ ದೊರೆಯದೇ ಹೋಯಿತು. ಆದರೆ ನಾನು ಅದನ್ನು ಒಂದು ಛಾಲೆಂಜ್ ಆಗಿ ತೆಗೆದುಕೊಂಡು ನಮ್ಮ ಮನೆಯ ರೂಮೊಂದನ್ನು ಸಮ್ಮೇಳನದ ಕಛೇರಿಯನ್ನಾಗಿ ಪರಿವರ್ತಿಸಿದೆ.

ದಾವಣಗೆರೆಯಲ್ಲಿ ನಡೆದ ರಾಜ್ಯಮಟ್ಟದ ೨ನೇ ನಾಯಕ ಸಮ್ಮೇಳನದ ಅನಧಿಕೃತ ಸಂಚಾಲಕ-ಖಜಾಂಚಿಯಂತಿದ್ದ ನಾನು, ಸ್ವಾಗತಸಮಿತಿಯ ಅಧ್ಯಕ್ಷ ಸಿ.ಮಲೆಸಿದ್ದಪ್ಪ, ಕಾರ್ಯದರ್ಶಿಗಳಾದ ಬಿಳಿಚೋಡಿನ ಬಿ.ಹೆಚ್.ಶ್ರೀನಿವಾಸನಾಯಕ ಹಾಗೂ ಹೂವಿನಮಡು ಚಂದ್ರಪ್ಪ ಅವರೊಡನೆ ಜನಸಂಘಟನೆ ಮತ್ತು ಹಣಸಂಗ್ರಹಕ್ಕಾಗಿ ಚಿತ್ರದುರ್ಗ, ಧಾರವಾಡ, ಬಳ್ಳಾರಿ, ತುಮಕೂರು, ಬೆಂಗಳೂರು, ಮೈಸೂರು ಮೊದಲಾದ ಜಿಲ್ಲೆಗಳಲ್ಲಿ ಪ್ರವಾಸ ಕೈಗೊಂಡೆ. ಕೆಲವೊಮ್ಮೆ ಹೊ.ಚಿ.ಬೋರಯ್ಯನವರ ಹತ್ತಿರ ಸಂಬಂಧಿ ಸಿ. ಕಾಟಪ್ಪನವರೂ ನಮ್ಮ ಜೊತೆ ಬರುತ್ತಿದ್ದರು. ಆ ಪ್ರವಾಸದಲ್ಲಿ ಕಹಿಘಟನೆಗಳಿಗಿಂತ ಸಿಹಿಘಟನೆಗಳೇ ಹೆಚ್ಚು ಸಂಭವಿಸಿದವು. ಕೆಲವೊಮ್ಮೆ ಅಭಿಮಾನ, ಪ್ರೀತಿ, ವಿಶ್ವಾಸ, ಆದರಗಳಿಂದ ಕೂಡಿದ ಜನರ ಪ್ರತಿಕ್ರಿಯೆಯಿಂದಾಗಿ ಸಂತೋಷವೆನಿಸುತ್ತಿತ್ತು. ತಮಗಿಂತ ದುಸ್ಥಿತಿಯಲ್ಲಿರುವ ಸಮಾಜದ ಇತರ ಬಂಧುಗಳ ಅಭಿವೃದ್ಧಿ ಬಗೆಗೆ ಅವರಲ್ಲಿದ್ದ ಕಾಳಜಿ, ಇನ್ನೂ ಹೆಚ್ಚಿನ ರೀತಿಯಲ್ಲಿ ಈ ಕಾರ್ಯದಲ್ಲಿ ತೊಡಗಿಸಿಕೊಳ್ಳಲು ನಮ್ಮನ್ನು ಪ್ರೇರೇಪಿಸುತ್ತಿತ್ತು.

ಸಮ್ಮೇಳನದ ಸಂದರ್ಭದಲ್ಲಿ ನಾಯಕ ಇತಿಹಾಸ ಮತ್ತು ಸಮಾಜದ ಸ್ಥಿತಿಗತಿಗಳ ಬಗೆಗೆ ಸ್ಮರಣಸಂಚಿಕೆಯೊಂದನ್ನು ಹೊರತರುವ ಉದ್ದೇಶದಿಂದ ತಿ.ತಾ.ಶರ್ಮ, ಬಸವರಾಜ

ಕಟ್ಟೀಮನಿ, ಹಂಪ ನಾಗರಾಜಯ್ಯ, ತ.ರಾ.ಸು., ಜಿ.ವರದರಾಜರಾವ್, ಕೊರಟಿ ಶ್ರೀನಿವಾಸರಾವ್ ಇನ್ನೂ ಅನೇಕ ಸಾಹಿತಿ ಮಹನೀಯರನ್ನು ಅವರ ಲೇಖನಗಳಿಗಾಗಿ ಭೇಟಿಯಾದೆವು. ಆ ಸಂದರ್ಭದಲ್ಲಿಯೇ ಎಂ.ಎ. ಪೂರೈಸಿ, ಮೈಸೂರಿನ ಮಾನಸ ಗಂಗೋತ್ರಿಯಲ್ಲಿ ಸಂಶೋಧನಕಾರ್ಯ ಮುಂದುವರೆಸಿದ್ದ, ಚಿತ್ರದುರ್ಗದ ಲಕ್ಷ್ಮಣ್ ತೆಲಗಾವಿ ಅವರನ್ನು ಭೇಟಿ ಮಾಡಿದೆ. ಇತಿಹಾಸಕ್ಕೆ ಸಂಬಂಧಿಸಿದಂತೆ ಅವರು ಬರೆದ ಪತ್ರ 'ಪ್ರಜಾವಾಣಿ'ಯಲ್ಲಿ ಪ್ರಕಟವಾದದ್ದನ್ನು ಓದಿ ಅವರ ಬಗ್ಗೆ ಅಭಿಮಾನವಿರಿಸಿಕೊಂಡಿದ್ದೆ. ಅವರನ್ನು ಭೇಟಿಯಾಗಲೇಬೇಕೆಂಬ ಉದ್ದೇಶದಿಂದ ನಾನು ಮಾನಸಗಂಗೋತ್ರಿಗೆ ಹೋಗಿ ಭೇಟಿಯಾಗಿ ಪರಿಚಯ ಮಾಡಿಕೊಂಡಾಗ, ಅವರಿಂದ ಉತ್ತಮ ಪ್ರತಿಕ್ರಿಯೆ ದೊರೆತುದು ನಮ್ಮೆಲ್ಲರಿಗೂ ಸಂತೋಷ ತಂದಿತು. ಅವರು ನಮ್ಮ ಕೋರಿಕೆಗೆ ಸ್ಪಂದಿಸಿ, ಲೇಖನಗಳನ್ನು ಕೊಡಲು ಸಂತೋಷದಿಂದ ಒಪ್ಪಿದರು. ಮುಂದೆ 'ಮಾಯಕೊಂಡ ಕಾಳಗ' ಮತ್ತು 'ಕುಮಾರರಾಮ' ಎಂಬ ಪ್ರಬುದ್ಧ ಲೇಖನಗಳನ್ನು ಕಳುಹಿಸಿ ಸ್ಮರಣಸಂಚಿಕೆಯ ಮಹತ್ವವನ್ನು ಹೆಚ್ಚಿಸಲು ಕಾರಣರಾದರು.

ಸಂಪಾದಕರಾಗಿದ್ದ ಹರ್ತಿಕೋಟೆ ವೀರನಾಯಕರಂತಹ ಹಿರಿಯರ ಸಹಾಯ ಸಹಕಾರದಿಂದ ಸ್ಮರಣಸಂಚಿಕೆಯು ರೂಪುಗೊಂಡಿತು. ಆದರೆ ಕಾಲಾವಕಾಶ ಕಡಿಮೆ ಇದ್ದುದರಿಂದ, ಲೇಖನಗಳನ್ನು ದಾವಣಗೆರೆಯ ಒಟ್ಟು ಐದು ಮುದ್ರಣಾಲಯಗಳಲ್ಲಿ ಏಕಕಾಲಕ್ಕೆ ಅಚ್ಚು ಹಾಕಿಸಲು ನಾನೊಬ್ಬನೇ ಓಡಾಡುವುದು ಅನಿವಾರ್ಯವಾಯಿತು. ಆ ಸ್ಮರಣಸಂಚಿಕೆ ಈಗ ಒಂದು ದಾಖಲೆ.

೧೯೭೩ರಲ್ಲಿ ನಾನು ಲಕ್ಷ್ಮಣ್ ತೆಲಗಾವಿಯವರನ್ನು ಭೇಟಿಯಾದಾಗಿನ ಕ್ಷಣದಿಂದಲೇ ಅವರು ನನ್ನ ಆತ್ಮೀಯರಾಗಿಬಿಟ್ಟರು. ಆ ಆತ್ಮೀಯತೆ ದಿನೇ ದಿನೇ ಹೆಚ್ಚಾಗುತ್ತಾ ಬಂದು, ಅವರು ನಮ್ಮ ಮನೆಯ ಸದಸ್ಯರಂತಾದರು. ಸಿ.ಮಲೆಸಿದ್ದಪ್ಪನವರು ಮತ್ತು ನಾನು ಅವರೊಡನೆ ಕ್ಷೇತ್ರಕಾರ್ಯ ಕೈಗೊಂಡು, ಚಿತ್ರದುರ್ಗದ ಪಾಳೆಯಗಾರ ಮತ್ತಿ ತಿಮ್ಮಣ್ಣ ನಾಯಕನ ಸಮಾಧಿಯಿರುವ ಮತ್ತಿಗ್ರಾಮ, ಮಾಯಕೊಂಡ, ಸಂತೆಬೆನ್ನೂರು, ಹರಪನಹಳ್ಳಿ ಇತ್ಯಾದಿ ಊರುಗಳಿಗೆ ಹೋದಾಗ, ಅಲ್ಲಿ ಸಿಕ್ಕ ಐತಿಹಾಸಿಕ ಪುರಾವೆಗಳನ್ನು ಕಂಡು ನಾವೆಲ್ಲರೂ ಪುಳಕಿತರಾಗುತ್ತಿದ್ದ ಕ್ಷಣಗಳು ಮನದಲ್ಲಿ ಇನ್ನೂ ಹಸಿರಾಗಿವೆ.

### ಮುನ್ಸಿಫ್-ಮ್ಯಾಜಿಸ್ಟ್ರೇಟ್ ಆಗಿ

೧೯೭೨ರಲ್ಲಿ ಮುನ್ಸಿಫ್ ಹುದ್ದೆಗೆ ಆಯ್ಕೆಯಾಗಿದ್ದರೂ ಸರ್ಕಾರದ ಆರ್ಥಿಕ ಮುಗ್ಗಟ್ಟಿನಿಂದಾಗಿ ಹೊಸ ಹುದ್ದೆಗಳನ್ನು ತುಂಬಲು ಕೆಲವೊಂದು ನಿಷೇಧಗಳಿದ್ದವು. ಕೊನೆಗೆ ೧೯೭೪ರಲ್ಲಿ ನೇಮಕಾತಿ ಆದೇಶ ಬಂದಿತು. ದೂರದ ರಾಯಚೂರು ಜಿಲ್ಲೆಯ ಐತಿಹಾಸಿಕ ದೇವದುರ್ಗದಲ್ಲಿ ಮುನ್ಸಿಫ್-ಮ್ಯಾಜಿಸ್ಟ್ರೇಟ್ ಆಗಿ ಸೇವೆಮಾಡಲು ಉಚ್ಚ ನ್ಯಾಯಾಲಯದಿಂದ ಆದೇಶವಾಗಿದ್ದಿತು. ಅದರಂತೆ, ಸ್ವಾತಂತ್ರ್ಯೋತ್ಸವ ದಿನದಂದು ಆ ಕಾಣದ ಊರಿಗೆ ಮೊದಲು ನಾನೊಬ್ಬನೇ ಹೋಗುವುದೆಂದು ತೀರ್ಮಾನಿಸಿದೆ. ದಾವಣಗೆರೆ

ಯಿಂದ ಹೊಸಪೇಟೆ, ಹೊಸಪೇಟೆಯಿಂದ ತಿಂತಿಣಿ ಸೇತುವೆ ಕೂಡುವ ದಾರಿ, ನಂತರ ಅಲ್ಲಿಂದ ದೇವದುರ್ಗಕ್ಕೆ ಒಟ್ಟು ಮೂರು ಬಸ್ಸುಗಳಲ್ಲಿ ದಾರಿ ಸವೆಸಿ ಆ ಊರನ್ನು ತಲುಪಿಯಾಯಿತು. ಬಸ್‌ನಿಲ್ದಾಣದಲ್ಲಿ ನನಗಾಗಿ ಕಾಯುತ್ತಿದ್ದ ನ್ಯಾಯಾಲಯದ ಸಿಬ್ಬಂದಿಯೊಡನೆ ಪ್ರವಾಸಿಮಂದಿರಕ್ಕೆ ಹೋಗಿ ವಾಸ್ತವ್ಯ ಹೂಡಿದೆ. ಮಾರನೇ ದಿನ ಅಲ್ಲಿಂದ ವರ್ಗವಾಗಿದ್ದ ಶ್ರೀ ಎಂ.ಡಿ.ಚೌಗಲೇ ಅವರಿಂದ ಛಾರ್ಜು ತೆಗೆದುಕೊಂಡೆ. ಅವರಿಂದ ಕೆಲವು ಮಾಹಿತಿಯನ್ನು ಪಡೆದು, ನನ್ನ ಕರ್ತವ್ಯಗಳನ್ನು ನಿರ್ವಹಿಸಲಿಕ್ಕೆ ಆರಂಭಿಸಿದೆ. ಕೆಲವು ದಿನಗಳ ನಂತರ, ಸಂಸಾರವನ್ನು ಅಲ್ಲಿಗೆ ಸ್ಥಳಾಂತರಿಸಿದೆ.

**ದೇವದುರ್ಗ**

ದೇವದುರ್ಗದ ಸುತ್ತಲೂ ಬೆಟ್ಟ-ಗುಡ್ಡ; ಕೋಟೆ-ಕೊತ್ತಲುಗಳಿಂದ ಸುತ್ತುವರೆದ ದುರ್ಗಮ ರಮಣೀಯ ಪ್ರದೇಶ. ಕುಡಿಯುವ ನೀರಿನ ಸಮಸ್ಯೆಯಿಂದಾಗಿ ಕೊಡಕ್ಕೆ ೫೦ ಪೈಸೆಯಂತೆ ದೂರದ ಬಾವಿಯಿಂದ ತರಿಸಬೇಕಿತ್ತು. ಬೇಸಿಗೆಯಲ್ಲಿ ರಾತ್ರಿ ೧೦-೧೧ರ ವರೆಗೂ ನೆಲಹಾಸಿಗೆ ಮೇಲೆ ನೀರು ಹಾಕುತ್ತಿರಬೇಕಾಗಿತ್ತು. ಆದರೆ ಈ ಸಮಸ್ಯೆಗಳಾವುವೂ ನನ್ನ ಕರ್ತವ್ಯನಿರ್ವಹಣೆಗೆ ಅಡ್ಡಿಯಾಗಲಿಲ್ಲ.

ಈ ನ್ಯಾಯಾಲಯದಲ್ಲಿ ಹೆಚ್ಚಿನ ಸಂಖ್ಯೆಯ ಪ್ರಕರಣಗಳು ಚಾಲ್ತಿಯಿರಲಿಲ್ಲ. ೮-೧೦ ಮಂದಿ ಸ್ಥಳೀಯ ವಕೀಲರಿದ್ದು, ಕೆಲವರು ರಾಯಚೂರಿನಿಂದ ಬರುತ್ತಿದ್ದರು. ಅವರೆಲ್ಲರೂ ಪ್ರಕರಣಗಳನ್ನು ನಡೆಸಲು ಸಂಪೂರ್ಣ ಸಹಕಾರ ನೀಡುತ್ತಿದ್ದರು. ಸಿಬ್ಬಂದಿಯಲ್ಲಿ ಹೆಚ್ಚಿನವರು ಪ್ರಾಮಾಣಿಕರಿದ್ದು, ನನ್ನ ಕರ್ತವ್ಯನಿರ್ವಹಣ ಸಹಾಯಕರಾಗಿದ್ದರು. ಕೆಲವರು ತಮ್ಮ ವೈಯಕ್ತಿಕ ಅನುಕೂಲಕ್ಕೂ ನಿಷ್ಠೆಯಿಂದ ಸಹಾಯ-ಸಹಕಾರ ನೀಡಿ, ಅಲ್ಲಿನ ವಾಸ್ತವ್ಯವನ್ನು ಯಾವ ತೊಂದರೆಯೂ ಇಲ್ಲದಂತೆ ಮಾಡಿದ್ದು ವಿಶೇಷವೇ.

ಅಲ್ಲಿನ ಜನರ ಮಾತುಗಳು ಮೇಲ್ನೋಟಕ್ಕೆ ಒರಟಾಗಿ ಕಂಡರೂ ಅವರು ಸ್ವಭಾವತಃ ಮುಗ್ಧರು ಮತ್ತು ಹೃದಯವಂತರು. ಸರ್ಕಾರಿ ನೌಕರರ ಬಗೆಗೆ, ಅದರಲ್ಲೂ ನ್ಯಾಯಾಧೀಶರ ಬಗೆಗೆ ಅವರಿಗೆ ಎಲ್ಲಿಲ್ಲದ ಭಯಮಿಶ್ರಿತ ಗೌರವ. ಬಸ್ಸಿನಲ್ಲಿ ಪ್ರಯಾಣಿಸುವಾಗ ನ್ಯಾಯಾಧೀಶರು ಕುಳಿತುಕೊಂಡ ಸೀಟಿನ ಪಕ್ಕದ ಸೀಟು ಖಾಲಿಯಿದ್ದರೂ ಪಕ್ಕದಲ್ಲಿ ಕುಳಿತುಕೊಳ್ಳಲು ಒತ್ತಾಯ ಮಾಡಿದರೂ ಅವರು ಕೂರದೇ ನಿಂತು ಪ್ರಯಾಣಿಸುವುದನ್ನು ಕಂಡು ಕನಿಕರವಾಗುತ್ತಿತ್ತು.

ಬೇಸಿಗೆಯಲ್ಲಿ ಸುತ್ತಲಿನ ಗುಡ್ಡಗಳು ಬರೀ ಕಲ್ಲಿನ ಗುಡ್ಡಗಳಾಗಿ ಕಂಡರೂ ಮಳೆಗಾಲ ದಲ್ಲಿ ಆ ಗುಡ್ಡಗಳೇ ಹಚ್ಚ ಹಸಿರಾಗಿ ಕಂಗೊಳಿಸುತ್ತಿದ್ದವು. ದಸರಾಹಬ್ಬದ ವೇಳೆಗೆ ಗುಡ್ಡ ದಲ್ಲಿನ ಲೆಕ್ಕವಿಲ್ಲದಷ್ಟು ಸೀತಾಫಲದ ಗಿಡಗಳು ಫಲಭರಿತವಾಗುತ್ತಿದ್ದವು. ಕಾಯಿಗಳ ಭಾರಕ್ಕೆ ಗಿಡಗಳು ಬಾಗುತ್ತಿದ್ದ ದೃಶ್ಯ ಮನಕ್ಕೆ ಆಹ್ಲಾದ ನೀಡುತ್ತಿದ್ದಿತು. ಅಲ್ಲದೆ, ಬಹಳ ಕಡಿಮೆ ಬೆಲೆಯಲ್ಲಿ ಮಾರುತ್ತಿದ್ದ ಆ ಹಣ್ಣುಗಳನ್ನು ಒಂದುಬಾರಿಗೆ ನೂರು-ಇನ್ನೂರರಂತೆ ಖರೀದಿಸಿ, ಮಡದಿ ಮಕ್ಕಳೊಂದಿಗೆ ನಿತ್ಯವೂ ಮನಬಂದಂತೆ ತಿಂದ ಸವಿಕ್ಷಣಗಳು ಇನ್ನೂ

ನೆನಪಿನಲ್ಲಿವೆ. ಅಲ್ಲಿನ ಸುಂದರ ಪರಿಸರ, ಮುಗ್ಧಜನರ ನೆನಪು ಈಗಲೂ ಇದೆ. ಒಮ್ಮೊಮ್ಮೆ ಮನಸ್ಸು ಆ ಕಡೆ ಹರಿಯುತ್ತದೆ.

**ತುಮಕೂರಿನಲ್ಲಿ**

ನಾನು ತುಮಕೂರಿನಲ್ಲಿ ಕೆಲಸ ಮಾಡುತ್ತಿದ್ದಾಗ ನನಗೆ ಅತಿ ನಿಕಟವಾದವರು ಅಲ್ಲಿಯೇ ಇದ್ದ ಹಿರಿಯ ಆದರ್ಶ ನ್ಯಾಯಾಧೀಶ ಶ್ರೀ ಬಿ.ಎನ್.ಮಲ್ಲಿಕಾರ್ಜುನ (ಈಗ ನ್ಯಾಯಮೂರ್ತಿ) ಅವರು. ತಾವು ಅಧಿಕೃತನಿವಾಸಕ್ಕೆ ಮನೆಯನ್ನು ಬದಲಾಯಿಸಿದಾಗ, ಅವರಿದ್ದ ಖಾಸಗಿಮನೆಯನ್ನು ಅವರ ಮಾಲೀಕರಿಗೆ ಶಿಫಾರಸ್ಸು ಮಾಡಿ ನನಗೇ ಬಾಡಿಗೆಗೆ ಕೊಡಿಸಿದರು. ಮುಂದೆ ಅವರು ಮತ್ತು ಅವರ ಮನೆಯವರೆಲ್ಲ ನಮ್ಮ ಮನೆಯವರಿಗೆ ಮತ್ತು ನಮ್ಮ ಬಂಧುಗಳಿಗೆ ಬಹಳ ಹತ್ತಿರವಾದರು. ಅವರು ನನ್ನ ಹಿತೈಷಿಯಾಗಿ, ಮಾರ್ಗದರ್ಶಕರಾಗಿ, ಸ್ಫೂರ್ತಿಯ ಸೆಲೆಯಂತಾದರು. ಅದರಂತೆಯೇ ನಮಗೆಲ್ಲ ಬಹಳ ಹತ್ತಿರವಾದವರು, ಹಿರಿಯ ನ್ಯಾಯಾಧೀಶ ಪತ್ರೆ ಬಸವನಗೌಡರು (ಈಗ ನ್ಯಾಯಮೂರ್ತಿ). ಸದಾ ಹಸನ್ಮುಖಿಯಾದ ಅವರು, ನನ್ನ ಮಾರ್ಗದರ್ಶಿ ಹಾಗೂ ಹಿತೈಷಿಯಾದರು.

ನಾನು ಅಲ್ಲಿದ್ದಾಗ, ಸಾರಿಗೆ ಇಲಾಖಾ ಬಸ್ಸಿನ ಅಲ್ಪಸಂಖ್ಯಾತವರ್ಗಕ್ಕೆ ಸೇರಿದ ಚಾಲಕರೊಬ್ಬರ ಕೇಸಿನ ವಿಚಾರಣೆ ನಡೆಸಿದೆ. ತಮ್ಮ ಮನೆಯ ಮಾಲೀಕರು ತಮ್ಮನ್ನು ಮನೆಯಿಂದ ಬಿಡಿಸಬೇಕೆಂಬ ಉದ್ದೇಶದಿಂದ Toiletಗೆ ಹೊರಗಡೆಯಿಂದ ಕಲ್ಲುಗಳನ್ನು ತುಂಬಿಸಿ, ಅದನ್ನು ಉಪಯೋಗಿಸದಂತೆ ಮಾಡಿದ್ದಾರೆ; ಆದ್ದರಿಂದ Toiletನ್ನು ಉಪಯೋಗಿಸಲು ಅನುವು ಮಾಡಿಕೊಡುವಂತೆ ಆ ಮಾಲೀಕರಿಗೆ ನಿರ್ದೇಶನ ಕೊಡಬೇಕೆಂದು ಕೋರಿ ನ್ಯಾಯಾಲಯಕ್ಕೆ ಬಾಡಿಗೆ ನಿಯಂತ್ರಣ ಕಾಯಿದೆ ಅಡಿಯಲ್ಲಿ ಅರ್ಜಿ ಹಾಕಿದ್ದರು. ಈ ವಿಷಯ ಗಂಭೀರವಾಗಿದ್ದಿತು. ನಮ್ಮ ಮನೆಯಲ್ಲಿ ಘೋಷಾ ಪದ್ಧತಿಯನ್ನು ಅನುಸರಿಸುವ ಮಹಿಳೆಯರಿದ್ದಾರೆ, ಅವರು ಬಹಿರ್ದೆಸೆಗೆ ಹೊರಗಡೆ ಹೋಗಲು ಕಷ್ಟವೆಂದು ತಮ್ಮ ಅರ್ಜಿಯಲ್ಲಿ ಹೇಳಿಕೊಂಡಿದ್ದರು. ಆ ಅರ್ಜಿಯ ಬಗೆಗೆ ಮನೆಯ ಮಾಲೀಕರಿಗೆ ತುರ್ತು ನೋಟೀಸು ಜಾರಿಗೆ ಆದೇಶ ಮಾಡಿದೆ. ಅವರು ಆ ಅರ್ಜಿಗೆ ತಕರಾರು ಹಾಕಲು ಮತ್ತು ವಾದ ಕೇಳಲು ದಿನೇ ದಿನೇ ವಿಚಾರಣೆಗೆ ಹಾಕುತ್ತಿದ್ದರಿಂದ, ಮಾಲೀಕರ ಪರವಾಗಿ ಹಾಜರಾಗುತ್ತಿದ್ದ ವಕೀಲರು ಅಸಮಾಧಾನಗೊಂಡರು. ನಾನು ಬಾಡಿಗೆದಾರರ ಪರವಾಗಿ ವರ್ತಿಸುತ್ತಿದ್ದೇನೇನೊ ಎಂದು ಭಾವಿಸಿ ಒಮ್ಮೆ ಆ ರೀತಿ ಆಪಾದನೆ ಮಾಡಿದಾಗ, ನಾನು ಸಹನೆ ಕಳೆದುಕೊಳ್ಳುವಂತಾಯಿತು. ಆ ವಕೀಲರು ಮಾಡಿದ ಸಲ್ಲದ ಆಪಾದನಾ ವಿವರಗಳನ್ನು ಉಲ್ಲೇಖಿಸಿ, ನನ್ನ ನೇರ ಅನಿಸಿಕೆಗಳನ್ನು ಕೇಸಿನ ನಡವಳಿಕೆ ಕಾಗದದಲ್ಲಿ (ಆರ್ಡರ್‌ಶೀಟ್) ಬರೆದು, ಆ ಕೇಸನ್ನು ನಾನು ತೀರ್ಮಾನ ಮಾಡುವುದಿಲ್ಲ; ಅದನ್ನು ಬೇರೆ ನ್ಯಾಯಾಲಯಕ್ಕೆ ವರ್ಗಮಾಡಿರೆಂದು ಜಿಲ್ಲಾ ನ್ಯಾಯಾಲಯಕ್ಕೆ ಬರೆಯಬೇಕಾಯಿತು.

ಅಲ್ಲಿ ಕೆಲವು ವಕೀಲರು ತುಂಬಾ ಪ್ರಭಾವಶಾಲಿಗಳಾಗಿದ್ದು, ಅವರ ಪ್ರಭಾವ ಉಚ್ಚ ನ್ಯಾಯಾಲಯದಲ್ಲೂ ಇತ್ತು. ಹೀಗಾಗಿ ಕೆಲವೊಮ್ಮೆ ನ್ಯಾಯಾಧೀಶರು ತಮ್ಮದೇನೂ ತಪ್ಪಿಲ್ಲದಿದ್ದರೂ ವಕೀಲರು ತಮ್ಮ ಮೇಲೆ ಇಲ್ಲಸಲ್ಲದ ಚಾಡಿಹೇಳಿ ವರ್ಗಾವಣೆ ಅಥವಾ ಇನ್ನಾವುದೇ ತೊಂದರೆ ಮಾಡಬಹುದೆಂಬ ಭಾವನೆ ಇತ್ತು.

ಆಗ ಜಿಲ್ಲಾ ನ್ಯಾಯಾಧೀಶರಾಗಿ ಕೆಲಸ ಮಾಡುತ್ತಿದ್ದವರು ಶ್ರೀ ಸೇವ ನಮಿರಾಜ್ ಮಲ್ಲ (ಎಸ್.ಎನ್.ಮಲ್ಲ). ಇವರನ್ನು ನ್ಯಾಯಾಲಯದಲ್ಲಿ ನಡೆದ ಒಂದು ಪ್ರಸಂಗದಲ್ಲಿ, ಅವರು ಯಾವುದೇ ತಪ್ಪು ಮಾಡದಿದ್ದರೂ ಆಗಿನ ಪಬ್ಲಿಕ್ ಪ್ರಾಸಿಕ್ಯೂಟರರ ಮಾತಿಗೆ ಜೋತುಬಿದ್ದು, ಆ ನ್ಯಾಯಾಧೀಶರನ್ನು ಉಚ್ಚನ್ಯಾಯಾಲಯದವರು ಕರೆಸಿಕೊಂಡು ವಿಚಾರಿಸಿದ ಪ್ರಸಂಗ ನಡೆಯಿತು. ನ್ಯಾಯಾಲಯದಲ್ಲಿ ಏನೇನು ನಡೆಯಿತು ಎಂದು ವಿವರಿಸಿ ಅವರು ಸಮಜಾಯಿಸಿ ಹೇಳಿದರೂ ತೃಪ್ತಿಗೊಳ್ಳದ ಉಚ್ಚನ್ಯಾಯಾಲಯವು, ಮಾರನೇ ದಿನವೇ ಆ ನ್ಯಾಯಾಧೀಶರನ್ನು ಶಿವಮೊಗ್ಗಕ್ಕೆ ವರ್ಗಮಾಡಿದ ತಂತಿ ಆದೇಶ ರವಾನಿಸಿತು. ಆ ನೇರ ನಡೆನುಡಿಯ ಪ್ರಾಮಾಣಿಕ ನ್ಯಾಯಾಧೀಶರು, ಕಿಂಚಿತ್ತೂ ವಿಚಲಿತರಾಗದೆ, "ನಾನು ದಕ್ಷಿಣಕನ್ನಡ ಜಿಲ್ಲೆಯವನು. ನಾನು ಸೇವೆಯಿಂದ ನಿವೃತ್ತನಾಗಲು ಇನ್ನು ಆರುತಿಂಗಳು ಮಾತ್ರ ಉಳಿದಿದೆ. ಆದ್ದರಿಂದ ನನಗೆ ಅನುಕೂಲವಾಗಲೆಂದೇ ಉಚ್ಚನ್ಯಾಯಾಲಯದವರು ನಮ್ಮ ಊರಿಗೆ ಹತ್ತಿರದ ಶಿವಮೊಗ್ಗಕ್ಕೆ ವರ್ಗಮಾಡಿ ಉಪಕಾರ ಮಾಡಿದ್ದಾರೆ" ಎಂದು ಸಕಾರಾತ್ಮಕ ಧೋರಣೆ ತಳೆದು ಶಿವಮೊಗ್ಗಕ್ಕೆ ಹೋದದ್ದು ಈಗ ದಾಖಲೆ.

ಒಂದು ಪ್ರಕರಣದಲ್ಲಿ, ನನ್ನ ತಾತ್ಕಾಲಿಕ ಆದೇಶವು ಕಾನೂನಿಗೆ ಅನುಗುಣವಾಗಿದ್ದರೂ ಅದರಿಂದ ಅಸಮಾಧಾನಗೊಂಡ ಹಿರಿಯ ವಕೀಲರೊಬ್ಬರು ಆಕ್ಷೇಪಣೆ ವ್ಯಕ್ತಪಡಿಸಿ, "ಜಿಲ್ಲಾ ನ್ಯಾಯಾಧೀಶರ ಬಳಿ ಹೋಗೋಣ ಬನ್ನಿ" ಎಂದರು. "ನಾನೇಕೆ ನಿಮ್ಮ ಜೊತೆ ಅವರಲ್ಲಿಗೆ ಬರಬೇಕು? ನೀವೇ ಹೋಗಿ ಏನು ಬೇಕಾದರೂ ಹೇಳಿ" ಎಂದೆ. ಆ ಮಾತಿಗೆ ಕೆರಳಿದ ಅವರು, "ನಿಮ್ಮ ಮುಖ್ಯನ್ಯಾಯಮೂರ್ತಿಗಳು ನನಗೆ ಗೊತ್ತು. ಅವರಲ್ಲಿ ಹೇಳುತ್ತೇನೆ" ಎಂದರು. ಆಗ ನಾನು "ಯಾರಲ್ಲಿ ಬೇಕಾದರೂ ಹೇಳಿ ನನಗೇನೂ ಭಯ ವಿಲ್ಲ" ಎಂದೆ. ಆಗ ಅವರು, "ನಾನು ಯಾರು ಗೊತ್ತೊ? ವಿಧಾನಸಭೆಯಲ್ಲಿ ವಿರೋಧ ಪಕ್ಷದ ನಾಯಕನಾಗಿದ್ದೆ. ನಾನು ಈ ವಕೀಲವೃತ್ತಿಯಿಂದಲೇ ಜೀವನ ಮಾಡಬೇಕೆಂದೇನೂ ಇಲ್ಲ. ನನಗೆ ಸಾಕಷ್ಟು ಜಮೀನಿದೆ. ನೀವು ಹೇಳಿದರೆ ಈ ಕರಿಕೋಟನ್ನು ತೆಗೆದು, ಈ ವಕೀಲವೃತ್ತಿ ಬಿಟ್ಟುಬಿಡುತ್ತೇನೆ" ಎಂದರು ಖಾರವಾಗಿ. ಆಗ ನಾನು, "ವಕೀಲರಾಗುವಾಗ ನೀವು ನನ್ನನ್ನು ಕೇಳಿ ವಕೀಲರಾಗಿಲ್ಲ. ಆದ್ದರಿಂದ ನೀವು ವಕೀಲವೃತ್ತಿ ಮುಂದುವರೆಸುವುದು ಬಿಡುವುದು ನಿಮಗೇ ಬಿಟ್ಟ ವಿಷಯ"ವೆಂದು ತಿರುಗಿಸಿ ಹೇಳಿದೆ. ಕೊನೆಗೆ ಅವರೇ ಈ ಘಟನೆಯನ್ನು ಮರೆತು, "ಇಲ್ಲಿಗೆ ಎಲ್ಲವನ್ನೂ ಮುಕ್ತಾಯಗೊಳಿಸ್ಸೋಣ" ಎಂದು ಹೇಳಿಹೋದರು. ಆ ಮೊದಲು ನನ್ನ ಮುಂದೆ ಹಲವಾರು ಪ್ರಕರಣಗಳನ್ನು ನಡೆಸಿದ್ದ

ಅವರು, ನಂತರ ನಾನು ಕಾನೂನು ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದಾಗ, ಅವರ ಮಗನ ವಿವಾಹದ ಆಮಂತ್ರಣ ಪತ್ರ ಕಳುಹಿಸಿದ್ದರು. ನಂತರ ಒಂದೆರಡು ಸಾರಿ ವಿಧಾನಸೌಧದಲ್ಲಿ ಆಕಸ್ಮಿಕ ಭೇಟಿಯಾದಾಗ ಅವರು ವಿಶ್ವಾಸದಿಂದ ನನ್ನ ಯೋಗಕ್ಷೇಮ ವಿಚಾರಿಸಿದ್ದು ಮನದಲ್ಲಿ ಇನ್ನೂ ಹಸಿರಾಗಿ ಉಳಿದಿದೆ.

ನ್ಯಾಯಾಂಗಸೇವೆಗೆ ಸೇರಿದ ನಂತರ, ಅನೇಕ ಹಿರಿಯ ಕಿರಿಯ ನ್ಯಾಯಾಧೀಶರ ಪರಿಚಯದಿಂದ ಇಲಾಖೆಗೆ ಸಂಬಂಧಿಸಿದ ವಿಷಯ, ಕಾನೂನು ಮತ್ತು ಜೀವನದ ಬಗೆಗೆ ಅವರವರ ಅನುಭವ ತಿಳಿದುಕೊಳ್ಳಲು ಸಹಾಯಕವಾಯಿತು. ನಾನು ಕಾನೂನು ಇಲಾಖೆಗೆ ಎರವಲು ಸೇವೆಗಾಗಿ ಸೇರಿದಾಗ, ಅಲ್ಲಿ ಸೇವೆಸಲ್ಲಿಸುತ್ತಿದ್ದ ಅನೇಕ ನ್ಯಾಯಾಧೀಶರ ಆತ್ಮೀಯ ಆಪ್ಯಾಯಮಾನ ನಡವಳಿಕೆ, ಸಲಹೆ-ಸೂಚನೆಗಳು ಮತ್ತು ಅವರ ಕಂಪನಿಯಲ್ಲಿ ಅಲ್ಲಿನ ಸೇವಾ ಅವಧಿ ಮಧುರಕ್ಷಣಗಳಂತಿದ್ದವು. ಆಗ ನನಗೆ ಬಂಧುಗಳಿಗಿಂತಲೂ ಹತ್ತಿರವಾದವರು ಗೆಳೆಯರಾದ ಕೆ.ಹೆಚ್.ರಾಜಶೇಖರ್, ಅಜಿತ್ ಸಿ.ಕಬ್ಬಿನ, ಜೈಪರಮೇಶ್ವರ್, ಎಂ.ಆರ್.ಹೆಗಡೆ, ಆರ್.ಹೆಚ್.ರೆಡ್ಡಿ ಮತ್ತು ಬಿ.ಎಸ್.ರಮಾಕಾಂತ. ಅದರಲ್ಲೂ ಕೆ.ಹೆಚ್. ರಾಜಶೇಖರ್ ಮತ್ತು ಅಜಿತ್ ಕಬ್ಬಿನ್ ತುಂಬ ಆತ್ಮೀಯರಾಗಿದ್ದರು. ಬಹುಪಾಲು ವೇಳೆ ಅವರ ಸಹವಾಸದಲ್ಲಿರುವ ಲಾಭವೂ ದೊರೆಯಿತು.

ಮುಂದಿನ ದಿನಗಳಲ್ಲಿ ಜಿಲ್ಲಾ ನ್ಯಾಯಾಧೀಶರಾಗಿ ಬಡ್ತಿಹೊಂದಿ, ಬೆಳಗಾವಿಯಲ್ಲಿ ಸೇವೆಸಲ್ಲಿಸುತ್ತಿದ್ದ ನನ್ನ ಆತ್ಮೀಯ ಗೆಳೆಯ ಕೆ.ಹೆಚ್.ರಾಜಶೇಖರ್ ಜಾಂಡೀಸ್ ಖಾಯಿಲೆಯಿಂದ ಮಧ್ಯವಯಸ್ಸಿನಲ್ಲಿಯೇ ಅನಿರೀಕ್ಷಿತವಾಗಿ ವಿಧಿವಶರಾದುದು ಅತಿ ವಿಷಾದದ ಸಂಗತಿ. ಈ ಘಟನೆಯಿಂದ ನಮ್ಮೆಲ್ಲರಿಗೂ ಅವರ ಅಪಾರ ಬಂಧು ಮಿತ್ರವರ್ಗಕ್ಕೂ ಬರಸಿಡಿಲು ಬಡಿದಂತಾಯಿತು. ರಾಜಶೇಖರ್ ಒಬ್ಬ ಮೇಧಾವಿ, ಪ್ರಾಮಾಣಿಕ, ಸರಳ-ಸಜ್ಜನ ಹಾಗೂ ಸುಸಂಸ್ಕೃತ. ಆತ ಸಮಾಜದ ಮೇಲ್ವರ್ಗಕ್ಕೆ ಸೇರಿದ್ದರೂ ಕಪಟತನವಿಲ್ಲದ ನಿಷ್ಕಳಂಕ ನ್ಯಾಯಾಧೀಶ. ಅವರನ್ನು ಕಳೆದುಕೊಂಡ ಜಿಲ್ಲಾ ನ್ಯಾಯಾಂಗ ತುಂಬಲಾರದ ಹಾನಿಗೊಳಗಾಯಿತು. ಕೆಲವರ್ಷಗಳಲ್ಲಿ ಉಚ್ಚನ್ಯಾಯಾಲಯದ ಸ್ಥಾನವನ್ನು ಅಲಂಕರಿಸಿ ಅದರ ಘನತೆ ಕಾಪಾಡುವ ಭರವಸೆ ಮೂಡಿಸಿದ್ದ ಅಪರೂಪದ ಘನವ್ಯಕ್ತಿಯೊಬ್ಬರನ್ನು ಕಳೆದುಕೊಂಡಂತಾಯಿತು.

೧೯೭೦ರಲ್ಲಿ ಕಾನೂನು ಇಲಾಖೆಯ ಸೇವೆಯಲ್ಲಿದ್ದಾಗ, ಕೆ.ಎಸ್.ಆರ್.ಪಿ.ಯಲ್ಲಿ ಕಮಾಂಡೆಂಟ್ ಆಗಿದ್ದು, ಹಟಯೋಗಿಯೆಂದು ಹೆಸರಾಗಿದ್ದ ದೂರದ ಬಂಧು ಹೆಚ್.ಎಫ್. ನಾಯಕರ ಸಂಪರ್ಕಲಾಭ ಒದಗಿತು. ಬೆಂಗಳೂರು ಅರಮನೆಯ ಆವರಣದಲ್ಲಿ ಆಲಯ ವಿಜ್ಞಾನ ಯೋಗಕೇಂದ್ರ ಎಂಬ ಹೆಸರಿನಲ್ಲಿ ಅವರು ನಡೆಸುತ್ತಿದ್ದ ಯೋಗಾಭ್ಯಾಸ ತರಗತಿಗೆ ಸೇರಿಕೊಂಡಿದ್ದಾಯಿತು. ಕಛೇರಿಯ ಕೆಲಸ ಮುಗಿಸಿಕೊಂಡು ವಿಧಾನಸೌಧದಿಂದ ನೇರವಾಗಿ ನಡೆದೇ ಆ ಕೇಂದ್ರಕ್ಕೆ ಹೋಗಿ ನಾಯಕರ ಮಾರ್ಗದರ್ಶನದಲ್ಲಿ ಸುಮಾರು ತಾಸುಗಳ ಕಾಲ ಯೋಗಾಭ್ಯಾಸ ಮಾಡುವ ಅವಕಾಶ ಲಭ್ಯವಾಯಿತು. ಆ ಕೇಂದ್ರದಲ್ಲಿ

ಗುರು-ಶಿಷ್ಯರ ಓಂಕಾರದ ಝೇಂಕಾರ ನಿನಾದ ಮೊಳಗಿ ಕಾಲದ ಪರಿವೆಯೇ ಇಲ್ಲದಂತಾಗುತ್ತಿತ್ತು. ಅಲ್ಲಿಂದ ಹೊರಬರುವಷ್ಟರಲ್ಲಿ ಮೊದಲಿದ್ದ ಆಯಾಸವೆಲ್ಲಾ ಮರೆಯಾಗಿ ಹೊಸ ಚೇತನ ತುಂಬಿಕೊಂಡ ಅನುಭವವಾಗುತ್ತಿತ್ತು. ಅಂತಹ ಅಪರೂಪದ ಯೋಗ್ಯ ಯೋಗಪಟುಗಳ ಮಾರ್ಗದರ್ಶನ ದೊರೆತಿದ್ದು ನಮ್ಮ ಪುಣ್ಯವಿಶೇಷವೇ ಸರಿ. ಎಪ್ಪತ್ತರ ದಶಕದಲ್ಲಿಯೇ ಚಿತ್ರರಂಗಕ್ಕೆ ಶರಣುಹೊಡೆಯಬೇಕೆಂದಿದ್ದ ಕನ್ನಡದ ವರನಟ ಡಾ.ರಾಜ್‌ಕುಮಾರ್, ಈ ಗುರುಗಳ ಮಾರ್ಗದರ್ಶನದಲ್ಲಿ ಯೋಗಾಭ್ಯಾಸವನ್ನು ಮಾಡಿ ಮುಂದೆಯೂ ಎರಡು ಮೂರು ದಶಕಗಳ ಕಾಲ ಚಿತ್ರರಂಗದ ಸೇವೆಯಲ್ಲಿ ತೊಡಗಿಸಿ ಕೊಳ್ಳುವಂತಾದುದು ಒಂದು ವಿಶೇಷವೇ ಸರಿ.

### ಮೈಸೂರಿನಲ್ಲಿ

ನಾನು ಮೈಸೂರಿನಲ್ಲಿ ಸಿವಿಲ್ ಜಡ್ಜ್ ಆಗಿದ್ದಾಗ, ಮಗ ರಾಮನಾಥ ದಾವಣಗೆರೆಯಲ್ಲಿ ವೈದ್ಯಕೀಯ ವಿದ್ಯಾರ್ಥಿನಿಲಯದಲ್ಲಿದ್ದುಕೊಂಡು ಎಂ.ಬಿ.ಬಿ.ಎಸ್.ವ್ಯಾಸಂಗ ಮಾಡುತ್ತಿದ್ದ. ಮಗಳು ವೇದ ನಮ್ಮೊಡನಿದ್ದುಕೊಂಡು ಮೈಸೂರಿನ ಜೆ.ಎಸ್.ಎಸ್.ಸಂಸ್ಥೆಯ ಜೆ.ಸಿ. ಇಂಜಿನಿಯರಿಂಗ್ ಕಾಲೇಜಿನಲ್ಲಿ ಬಿ.ಇ. ವ್ಯಾಸಂಗ ಮಾಡುತ್ತಿದ್ದಳು. ೧೯೮೨ರ ನ್ಯಾಯಾಂಗ ಅಧಿಕಾರಿಗಳ ಸಾರ್ವತ್ರಿಕ ವರ್ಗಾವಣೆಯ ಸಮಯದಲ್ಲಿ, ನಾಲ್ಕುವರ್ಷ ಒಂದು ಸ್ಥಳದಲ್ಲಿ ಸತತವಾಗಿ ಕೆಲಸಮಾಡಿದ ನ್ಯಾಯಾಧೀಶರನ್ನು ಅಥವಾ ಅವರ ಮೇಲೆ ಆಪಾದನೆಗಳಿದ್ದಲ್ಲಿ ಅಥವಾ ಅವರಾಗಿಯೇ ತಮ್ಮ ವೈಯಕ್ತಿಕ ಕಾರಣಗಳಿಂದ ಬೇರೆ ಸ್ಥಳಕ್ಕೆ ವರ್ಗಾವಣೆ ಕೋರಿದ್ದರೆ ಅಂತಹವರನ್ನು ವರ್ಗಮಾಡುವ ಅಧಿಕಾರ ಉಚ್ಚನ್ಯಾಯಾಲಯಕ್ಕಿತ್ತು.

ಮೈಸೂರಿನಲ್ಲಿ ನಾನು ಮೂರುವರ್ಷಗಳ ಕಾಲ ಸೇವೆ ಸಲ್ಲಿಸದೇ ಇದ್ದರೂ ನನ್ನ ಮೇಲೆ ಯಾವ ಆಪಾದನೆಗಳು ಇಲ್ಲದಿದ್ದರೂ ನಾನು ಅಲ್ಲಿಂದ ಬೇರೆಡೆಗೆ ವರ್ಗಾವಣೆ ಕೇಳದಿದ್ದರೂ ನನ್ನನ್ನು ಬೆಂಗಳೂರಿಗೆ ಸಿ.ಎಂ.ಎಂ. ಆಗಿ ವರ್ಗಾವಣೆ ಮಾಡುವ proposal ಇದ್ದ ವಿಷಯ ನನ್ನ ಗಮನಕ್ಕೆ ಬಂದಿತು. ಈ ವಿಷಯ ನನ್ನ ದೂರದ ಬಂಧು ನ್ಯಾಯಮೂರ್ತಿಯೊಬ್ಬರಿಗೆ ಮೀಟಿಂಗಿನ ಹಿಂದಿನ ದಿನ ಗೊತ್ತಾಗಿತ್ತು. ಮೈಸೂರಿನಿಂದ ನಾನು ವರ್ಗಾವಣೆ ಕೇಳಿಲ್ಲ ಎಂಬುದನ್ನು ಅವರು ದೂರವಾಣಿಯ ಮೂಲಕ ಖಚಿತಪಡಿಸಿಕೊಂಡು, ನನ್ನ ಅನುಚಿತ ವರ್ಗಾವಣೆ ಪ್ರಸ್ತಾವನೆಯನ್ನು ಸತ್ಯದ ಸಂಗತಿ ಗಳೊಂದಿಗೆ ಮೀಟಿಂಗ್‌ನಲ್ಲಿ ವಿರೋಧಿಸಿದರು. ಅವರಿಗೂ ಇನ್ನೊಬ್ಬ ಹಿರಿಯ ನ್ಯಾಯ ಮೂರ್ತಿಗಳಿಗೂ ಅನಪೇಕ್ಷಿತ ಮಾತಿನ ಚಕಮಕಿ ನಡೆಯಿತು. ಬೇರೆ ರಾಜ್ಯದವರಾಗಿದ್ದ ಮುಖ್ಯ ನ್ಯಾಯಮೂರ್ತಿಗಳು ಮತ್ತು ಇತರ ಕೆಲವು ನ್ಯಾಯಮೂರ್ತಿಗಳ ಮಧ್ಯಪ್ರವೇಶದಿಂದ ಪರಿಸ್ಥಿತಿ ವಿಕೋಪಕ್ಕೆ ಹೋಗದೆ ಅಲ್ಲಿಗೇ ಸ್ಥಗಿತಗೊಂಡಿತು. ಮುಖ್ಯ ನ್ಯಾಯಮೂರ್ತಿಗಳು, "ಸದ್ಯಕ್ಕೆ ವರ್ಗಾವಣೆ ಪ್ರಸ್ತಾವನೆಗಳನ್ನು ಅನುಮೋದಿಸೋಣ. ಮುಂದೆ ಅಧಿಕಾರಿಗೆ ವರ್ಗಾವಣೆ ವಿಷಯದಲ್ಲಿ ಅನುಕೂಲ ಮಾಡೋಣ" ಎಂದು ಸಮಾಧಾನಪಡಿಸಿದ್ದರಿಂದ ಆ ಪ್ರಸಂಗ ಮುಕ್ತಾಯಗೊಂಡಿತು. ಮಗಳು ಮೈಸೂರಿನ ಒಳ್ಳೆಯ ಕಾಲೇಜಿನಲ್ಲಿ ಬಿ.ಇ.

ಮಾಡುತ್ತಿದ್ದಾಗ, ನಾನೊಬ್ಬನೇ ಬೆಂಗಳೂರಿಗೆ ಬಂದು ಗೆಳೆಯ ನ್ಯಾಯಾಧೀಶ ವಿ.ಜಿ. ಚರಾಟಿಯವರೊಂದಿಗೆ ಜನರಲ್‌ಹಾಸ್ಟೆಲಿನಲ್ಲಿ ವಾಸ್ತವ್ಯಮಾಡಿ ಸೇವೆಸಲ್ಲಿಸುವುದು ಅನಿವಾರ್ಯವಾಯಿತು. ಈ ರೀತಿಯ ಅನಿರೀಕ್ಷಿತ, ಅನುಚಿತ ವರ್ಗಾವಣೆಯಿಂದ ನನಗೆ ತೊಂದರೆಯಾದರೆ, ಹಿರಿಯ ನ್ಯಾಯಮೂರ್ತಿಗಳಿಗೆ ಹತ್ತಿರದ ಸಿವಿಲ್ ಜಡ್ಜ್ ಒಬ್ಬರು ಮೈಸೂರಿನಲ್ಲಿ ನಾನು ಸೇವೆಸಲ್ಲಿಸುತ್ತಿದ್ದ ಸ್ಥಾನವನ್ನು ಆಕ್ರಮಿಸುವ ಅನುಕೂಲತೆ ಹೊಂದಿದರು.

ಈ ವರ್ಗಾವಣೆಯಿಂದ ನನಗೆ ಆದ ವೈಯಕ್ತಿಕ ತೊಂದರೆಗಳನ್ನು ಅರಿತ ಇನ್ನೊಬ್ಬ ಹಿರಿಯ ನ್ಯಾಯಮೂರ್ತಿಗಳು, ಸುಮಾರು ಮೂರುತಿಂಗಳ ನಂತರ ಪುನಃ ನನ್ನನ್ನು ಜಿಲ್ಲಾ ನ್ಯಾಯಾಧೀಶರಾಗಿ ಬಡ್ತಿ ಹೊಂದಿ ವರ್ಗಾವಣೆಯಾದ ಇನ್ನೊಬ್ಬ ಸಿವಿಲ್ ಜಡ್ಜ್ ಅವರ ಸ್ಥಾನಕ್ಕೆ ವರ್ಗಾವಣೆ ಮಾಡಿಸಲು ಮುಖ್ಯ ಕಾರಣರಾಗಿ ಉಪಕರಿಸಿದ್ದು ಆ ಕಾಲಕ್ಕೆ ಅಪರೂಪದ ಪ್ರಸಂಗವೆನ್ನಬೇಕು.

ಪುನಃ ನನ್ನನ್ನು ಮೈಸೂರಿಗೆ ವರ್ಗಾವಣೆ ಮಾಡಿದ ಸಮಯದಲ್ಲಿ, ಸಿವಿಲ್ ಜಡ್ಜ್ ಹುದ್ದೆಯಿಂದ ಜಿಲ್ಲಾ ನ್ಯಾಯಾಧೀಶ ಹುದ್ದೆಗೆ ಬಡ್ತಿಮಾಡುವ process ನಡೆಯುತ್ತಿತ್ತು. ಆ ನಂತರ ನನ್ನ batchನ ಪಟ್ಟಿಯಲ್ಲಿದ್ದ ಎಲ್ಲಾ ಸಹೋದ್ಯೋಗಿಗಳಿಗೆ ಬಡ್ತಿಯಾಗಿ, ನನ್ನನ್ನು ಮತ್ತು ಪಟ್ಟಿಯಲ್ಲಿ ನನಗಿಂತ ಕೆಳಗಿದ್ದ ಅಲ್ಪಸಂಖ್ಯಾತವರ್ಗಕ್ಕೆ ಸೇರಿದ ಇಬ್ಬರು ಸಿವಿಲ್ ಜಡ್ಜ್‌ಗಳನ್ನು ಜಿಲ್ಲಾ ನ್ಯಾಯಾಧೀಶರಾಗಿ ಬಡ್ತಿಹೊಂದಲು ನಡೆಯುತ್ತಿದ್ದ processಗೆ ತಡೆಯಾಯಿತು. ಯಾವುದೇ ಕಾರಣವಿರದಿದ್ದರೂ ಹಲವು ಹಿರಿಯ ನ್ಯಾಯಮೂರ್ತಿಗಳು, ನಾವು ಮೂವರ ಹೆಸರುಗಳನ್ನು ಬಡ್ತಿಗೆ ಪರಿಶೀಲಿಸುವುದು ನ್ಯಾಯ ಎಂದು ಸಂಬಂಧಿಸಿದವರ ಕಣ್ಣುಗಳನ್ನು ತೆರೆಸಲಾಗಲಿಲ್ಲ. ಇದರ ಪರಿಣಾಮವಾಗಿ, ೧೯೭೨ರಲ್ಲಿ ಮುನ್ಸಿಫ್ ಹುದ್ದೆಗಳಿಗೆ ಆಯ್ಕೆಯಾಗಿ, ಸರ್ಕಾರದ ಆರ್ಥಿಕನೀತಿಯಿಂದ ೧೯೭೪ರಲ್ಲಿ ಆ ಹುದ್ದೆಗಳಿಗೆ ನೇಮಕವಾಗಿದ್ದ ನಾವು ಮೂವರಿಗೆ, ೧೯೬೫ರಲ್ಲಿ, ೧೯೭೮ರಲ್ಲಿ ಮುನ್ಸಿಫ್ ಆಗಿ ನೇಮಕಗೊಂಡಿದ್ದ ಐವರ ಜೊತೆಯಲ್ಲಿ ಜಿಲ್ಲಾ ನ್ಯಾಯಾಧೀಶರಾಗಿ ಬಡ್ತಿಹೊಂದಬೇಕಾಗಿ ಬಂದುದು ಒಂದು ವಿಪರ್ಯಾಸವೇ ಸರಿ. ೧೯೯೨ರಲ್ಲಿ ನನ್ನನ್ನು ಬೆಂಗಳೂರಿಗೆ ವರ್ಗಾವಣೆ ಮಾಡುವ ಪ್ರಸ್ತಾವನೆ ಬಗೆಗೆ ನಡೆದ ಸಭೆಯಲ್ಲಿ ಆದ ಮಾತಿನ ಚಕಮಕಿ ಪ್ರಸಂಗವನ್ನೆ ಮನಸ್ಸಿನಲ್ಲಿಟ್ಟುಕೊಂಡು, ನನ್ನ ದೂರದ ಸಂಬಂಧಿ ನ್ಯಾಯಮೂರ್ತಿಯವರ ಮೇಲಿದ್ದ ವೈಯಕ್ತಿಕ ದ್ವೇಷದಿಂದ, ಆ ಹಿರಿಯ ನ್ಯಾಯಮೂರ್ತಿಗಳೇ ನನ್ನ ಮತ್ತು ನನ್ನ ಕೆಳಗಿನ ಇಬ್ಬರು ಸಿವಿಲ್ ಜಡ್ಜ್‌ರ ಬಡ್ತಿ ವಿಧಾನದ process ಮಾಡಲು ಅವಕಾಶ ನೀಡಲಿಲ್ಲವೆಂದು ಭಾವಿಸಲು ಸಬಲ ಕಾರಣಗಳೂ ಇದ್ದವು. ಒಟ್ಟಿನಲ್ಲಿ, ಈ ಬಡ್ತಿ ಪ್ರಸಂಗವೊಂದು unusual ಆದುದೆನ್ನಬೇಕು. ನನ್ನ ಅಕಾಲಿಕ, ಅನುಚಿತ ವರ್ಗಾವಣೆಯಿಂದಾದ ಸಹಜ ದಿಟ್ಟ ಪ್ರತಿಕ್ರಿಯೆಯಿಂದಾದ ಪರಿಣಾಮವೇ ನನ್ನ ಕೆಳಗಿದ್ದ ಇಬ್ಬರು ಸಿವಿಲ್ ಜಡ್ಜ್‌ರ ಬಡ್ತಿಯ ವಿಷಯದಲ್ಲಿಯೂ ಉಂಟಾಗಿ, ಅವರನ್ನೂ ಪರಿಸ್ಥಿತಿಯ ತಾತ್ಕಾಲಿಕ ಬಲಿಪಶುಗಳನ್ನಾಗಿಸಿತೇನೊ ಎಂದೆನಿಸುತ್ತದೆ.

## ಕುಟುಂಬ ಪರಿಸರ

ಮನೆಗೆ ಬಂದವರನ್ನು ಆದರಾತಿಥ್ಯದಿಂದ ಸತ್ಕರಿಸುವುದು ನಮ್ಮ ದೇಶದ ಸಂಸ್ಕಾರ ಹಾಗೂ ಸಂಸ್ಕೃತಿ. ಅದಕ್ಕೆ ಚ್ಯುತಿ ಇಲ್ಲದೆ ಕಾಪಾಡಿಕೊಂಡು ಬರುವುದು ಭಾರತೀಯ ಧರ್ಮ ಕೂಡ. ಮಡದಿ ಬಂದಮೇಲೆ, ಆಕೆ ಅದನ್ನು ಕಾಪಾಡಿಕೊಂಡು ಬರುವಲ್ಲಿ ನಮ್ಮೆಲ್ಲರೊಂದಿಗೆ ಸಂತಸದಿಂದ ಸಹಕರಿಸಿದಳು. ಮನೆಗೆ ಬರುವ ಅತಿಥಿಗಳು ಮೊದಲೇ ತಿಳಿಸಿ ಬಂದರೆ ಮನೆಯಲ್ಲಿ ಹಬ್ಬದ ವಾತಾವರಣವೇ ನೆಲೆಗೊಳ್ಳುತ್ತಿತ್ತು. ವಿವಿಧ ಭಕ್ಷ್ಯ-ಭೋಜ್ಯಗಳು ಅತಿ ಕಡಿಮೆ ವೇಳೆಯಲ್ಲಿ ತಯಾರಾಗಿಬಿಡುತ್ತಿದ್ದವು. ಅವುಗಳನ್ನು ನನ್ನ ಶ್ರೀಮತಿ ಅತಿಥಿಗಳಿಗೆ ಸಂತೃಪ್ತಿಯಾಗುವವರೆಗೂ ಬಡಿಸಿ ತೃಪ್ತಿಪಡುತ್ತಿದ್ದಳು. ಅನಿರೀಕ್ಷಿತ ಅತಿಥಿಗಳು ಬಂದರೂ ಯಾವ ಬದಲಾವಣೆಯೂ ಆಗುತ್ತಿರಲಿಲ್ಲ. ಕೂಡಲೇ ಅದೇ ವಾತಾವರಣ ಸೃಷ್ಟಿಯಾಗಿ ಬಂದವರನ್ನು ಚಕಿತಗೊಳಿಸುತ್ತಿತ್ತೆನ್ನಬಹುದು.

ಮನೆಯ ಮಕ್ಕಳು ಒಳ್ಳೆಯ ವಿದ್ಯಾವಂತ ಹಾಗೂ ಸುಸಂಸ್ಕೃತ ಪ್ರಜೆಗಳಾಗಲೆಂದು, ಅವರನ್ನು ಸರಿದಾರಿಯಲ್ಲಿ ನಡೆಸಿಕೊಂಡು ಹೋಗಲು ಮತ್ತು ಅವರ ಬೇಕು-ಬೇಡಗಳನ್ನು ಅರ್ಥಮಾಡಿಕೊಂಡು ಆದ್ಯತೆಯ ಮೇರೆಗೆ ಅವುಗಳನ್ನು ಈಡೇರಿಸಲು ನಾವು ಪಟ್ಟ ಕಷ್ಟ ಹೇಳದೇ ಇರುವಂತಹದಲ್ಲ. ಕೆಲವು ವೇಳೆ ಈ ಪ್ರಯತ್ನದ ಹಿಂದೆ ನನ್ನ ಶ್ರೀಮತಿಯ ಸ್ವಂತ 'ಬೇಕು'ಗಳ ತ್ಯಾಗ ಅಡಗಿರುತ್ತಿತ್ತು. ಈ ಸ್ಥಿತಿ ದೇಶದ ಬಹುಪಾಲು ಮಹಿಳೆಯರದು ಕೂಡ. ಇಲ್ಲದೇ ಹೋದಲ್ಲಿ, ದೇಶದ ಬಹುಪಾಲು ಮಕ್ಕಳು ದೇಶದ ಹಿತಕ್ಕೆ ಮಾರಕವಾಗಿರುತ್ತಿದ್ದರೇನೊ.

ನಾನು ಮೈಸೂರಿನಲ್ಲಿದ್ದಾಗ ಬಾಡಿಗೆ ಮನೆಯಲ್ಲಿದ್ದೆವು. ಕಾಂಪೌಂಡ್ ಗೇಟಿನಿಂದ ಮನೆಯ ಹೊರಗಿನ ಆವರಣಕ್ಕೆ ಬರಲು ದಾರಿ ಇಳಿಜಾರಾಗಿತ್ತು. ಒಮ್ಮೆ ನ್ಯಾಯಮೂರ್ತಿ ಆರ್.ರಾಮಕೃಷ್ಣ ಅವರು ತಮ್ಮ ಮನೆಯವರೊಂದಿಗೆ ನಮ್ಮಲ್ಲಿಗೆ ಬಂದಿದ್ದರು. ಅವರು ಈ ಇಳಿಜಾರಿನ ವ್ಯವಸ್ಥೆಯನ್ನು ಸೂಕ್ಷ್ಮವಾಗಿ ಗಮನಿಸಿ, ಮನೆಯಿಂದ ಹೊರಡುವಾಗ, "ಈ ಇಳಿಜಾರು ಇವರ ಮನೆಗೆ ಬರುವವರು ಅವಸರದಲ್ಲಿ ಬರಲಿ ಎಂದು, ಹೊರಡುವಾಗ ನಿಧಾನವಾಗಿ ಹೋಗಲಿ ಎಂದು ಮಾಡಿಸಿದಂತಿದೆ" ಎಂದು ಹೇಳಿ ಎಲ್ಲರನ್ನೂ ನಗೆಗಡಲಿನಲ್ಲಿ ಮುಳುಗಿಸಿದರು. ನಮಗೂ ಸಂತೋಷವಾಯಿತು. ಇದು ಪರೋಕ್ಷವಾಗಿ ನಮ್ಮ ಕುಟುಂಬ ಪರಿಸರದ ಬಗೆಗಿನ ವ್ಯಾಖ್ಯಾನವಾಗಿದ್ದಿತೆಂದು ನನ್ನ ಭಾವನೆ. ಮೈಸೂರು ವಾಸ್ತವ್ಯದ ಮಧುರಕ್ಷಣಗಳ ಬುತ್ತಿಯನ್ನು ಬಿಚ್ಚಲು ಇಂತಹ ಸಂದರ್ಭಗಳು ಸಹಕಾರಿಯಾಗುತ್ತಿರುತ್ತವೆ.

## ಮಂಡ್ಯದಲ್ಲಿ

ಅಚ್ಚಕನ್ನಡ ಪ್ರದೇಶವಾದ ಮಂಡ್ಯದಲ್ಲಿ ೧೯೭೭ರಲ್ಲಿ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶನಾಗಿ ಕೆಲಸ ಮಾಡುತ್ತಿದ್ದಾಗ ಹಲವು ಅನುಭವಗಳಾದವು. ಅನೇಕ ಪ್ರಕರಣಗಳಲ್ಲಿ ಸಾಕ್ಷಿಹೇಳಲು ಬರುತ್ತಿದ್ದ ಜನರಲ್ಲಿ ಬಹುಪಾಲು ಯುವಕರೇ ಇದ್ದು,

ಅದರಲ್ಲಿ ಬಹುಪಾಲು ಮಂದಿ ಅವಿದ್ಯಾವಂತರಾಗಿದ್ದರು. ಅವರು ಸಾಕ್ಷಿಹೇಳುವ ಮೊದಲು ಕನ್ನಡದಲ್ಲಿ ಬರೆದಿದ್ದ ಎರಡುಸಾಲಿನ ವಾಕ್ಯಗಳನ್ನು ಓದಿ ಪ್ರಮಾಣಮಾಡಲು ಕಷ್ಟಪಡುತ್ತಿದ್ದುದನ್ನು ನೋಡಿ, ಮನಸ್ಸಿಗೆ ನೋವಾಗಿ ಅವರ ಬಗೆಗೆ ಕನಿಕರವೂ ಆಗುತ್ತಿತ್ತು. ಮಾದರಿ ಹಳೇ ಮೈಸೂರುರಾಜ್ಯದ ಭಾಗವಾದ ಮಂಡ್ಯಜಿಲ್ಲೆಯು ವಿಶ್ವವಿಖ್ಯಾತ ವಿದ್ಯಾಕೇಂದ್ರ ಮೈಸೂರಿಗೆ ಹತ್ತಿರವಾಗಿದ್ದರೂ ದೇಶಕ್ಕೆ ಸ್ವಾತಂತ್ರ್ಯ ಬಂದು ಅರ್ಧಶತಮಾನ ಕಳೆದಿದ್ದರೂ ವಿದ್ಯಾಕ್ಷೇತ್ರದಲ್ಲಿ ಈ ದುಸ್ಥಿತಿ.

ಆದರೂ ಅನೇಕ ಕೊಲೆ, ಸುಲಿಗೆ, ದರೋಡೆ, ಕಳ್ಳತನ, ಅತ್ಯಾಚಾರ, ವರದಕ್ಷಿಣೆಯ ಸಾವು ಇತ್ಯಾದಿ ಗಂಭೀರ ಪ್ರಕರಣಗಳಲ್ಲಿ ನಂಬಲರ್ಹವಾದ ಸಾಕ್ಷ್ಯಧಾರ ಸ್ವಲ್ಪವೇ ಇದ್ದರೂ ಸಾಕು, ಅಂತಹ ಪ್ರಕರಣಗಳ ಬಗೆಗೆ ದೀರ್ಘವಾಗಿ ಆಲೋಚನೆ ಮಾಡಿ, ಆ ಕಡತಗಳಲ್ಲಿನ ಪ್ರಾಸಿಕ್ಯೂಷನ್‌ಪರವಾದ ಗುಣಾಂಶಗಳನ್ನು ಗಣನೆಗೆ ತೆಗೆದುಕೊಂಡು ಸಂಬಂಧಿಸಿದ ಆರೋಪಿಗಳಿಗೆ ಸೂಕ್ತ ಶಿಕ್ಷೆ ನೀಡಿದ ಕ್ಷಣಗಳು ನನ್ನ ಸೇವಾಕಾರ್ಯದ ಬಗೆಗೆ ನನಗೇ ಸಮಾಧಾನವನ್ನು ತರುತ್ತಿದ್ದವು. ಇಂತಹ ತೀರ್ಪುಗಳು, ಕೆಡುತ್ತಿರುವ ಸಮಾಜದ ಸ್ವಾಸ್ಥ್ಯಕ್ಕೂ ಬಹುಮುಖ್ಯ ಎನ್ನುವುದು ನನ್ನ ಸ್ಪಷ್ಟ ಅಭಿಮತವೂ ಹೌದು.

ಕಾನೂನುಗಳನ್ನು ರಚನೆ ಮಾಡಿದ ಉದ್ದೇಶವಾದರೂ ಸಾರ್ವಜನಿಕರ ಹಕ್ಕುಗಳನ್ನು ರಕ್ಷಣೆಮಾಡಲು, ದೌರ್ಜನ್ಯಕ್ಕೆ ಒಳಗಾದವರಿಗೆ ಪರಿಹಾರನೀಡಲು, ದೇಶದ ಕಾನೂನುಗಳನ್ನು ಗಾಳಿಗೆ ತೂರಿ, ಕಾನೂನನ್ನು ತಮ್ಮ ಕೈಗೆತ್ತಿಕೊಂಡು ಇತರೆಯವರ ಆಸ್ತಿಪಾಸ್ತಿಗಳನ್ನು ಪಡೆದಿದ್ದವರಿಂದ ಸಂಬಂಧಿಸಿದವರಿಗೆ ವಾಪಸ್ಸು ಕೊಡಿಸಲು, ಬೇರೆಯವರ ಪ್ರಾಣ-ಮಾನ ತೆಗೆದವರಿಗೆ, ಕಳ್ಳತನ, ಸುಲಿಗೆ, ದರೋಡೆ, ಅತ್ಯಾಚಾರ ಮಾಡಿದವರಿಗೆ, ವರದಕ್ಷಿಣೆಸಾವಿಗೆ ಕಾರಣರಾದವರಿಗೆ, ಅಮಾಯಕ ಜನರಿಗೆ ನೋವನ್ನು ತಂದವರಿಗೆ- ಹೀಗೆ ಕಾನೂನುಗಳನ್ನು ಉಲ್ಲಂಘಿಸಿ, ದೇಶದ ಹಾಗೂ ಸಮಾಜದ ಸ್ವಾಸ್ಥ್ಯವನ್ನು ಕೆಡಿಸಿದವರಿಗೆ ಸೂಕ್ತ ಶಿಕ್ಷೆನೀಡಲು. ಈ ದೃಷ್ಟಿಯಿಂದ ಆಡಳಿತಾಂಗ ಮತ್ತು ನ್ಯಾಯಾಂಗದಲ್ಲಿರುವವರು ತಮ್ಮ ತಮ್ಮ ಕರ್ತವ್ಯಗಳನ್ನು ಪ್ರಾಮಾಣಿಕವಾಗಿ ನಿಷ್ಠೆಯಿಂದ ನಿರ್ವಹಿಸದಿದ್ದಲ್ಲಿ ಕಾನೂನುಗಳು ಕೇವಲ ಪುಸ್ತಕದ ಕಾನೂನುಗಳಾಗುತ್ತವೆ. ಹೀಗಾದಲ್ಲಿ ದೇಶದಲ್ಲಿ ಅರಾಜಕತೆ ಬೆಳೆಯಲು ದಾರಿಯಾಗುತ್ತದೆ. ನಾಗರಿಕರ ಬದುಕು ಹಿಂಸೆ, ಅಶಾಂತಿಯಿಂದ ಕೂಡಿದ, ನೆಮ್ಮದಿ ಇಲ್ಲದ ಅಸಹನೀಯ ಬದುಕಾಗುತ್ತದೆ; ಸಮಾಜದ ಸ್ವಾಸ್ಥ್ಯವೂ ಕೆಡುತ್ತದೆ.

ಮಂಡ್ಯದಲ್ಲಿ ನಾನು ಕೆಲಸ ನಿರ್ವಹಿಸುತ್ತಿದ್ದಾಗ, ನ್ಯಾಯಾಲಯದ ಸಿಬ್ಬಂದಿ, ವಕೀಲರು ಮತ್ತು ಎಲ್ಲಾ ಸಹನ್ಯಾಯಾಧೀಶರುಗಳ ಸಹಕಾರವಿದ್ದಿತು. ಅದರಲ್ಲೂ ಅಂದಿನ ಪ್ರಧಾನ ಜಿಲ್ಲಾ ನ್ಯಾಯಾಧೀಶ ಶ್ರೀ ಶಶಿಧರ ಬಿ.ಮಜಿಗೆ, ಬಾಬಾಸಾಹೇಬ ಜಾಧವ ಮತ್ತು ಇತರ ನ್ಯಾಯಾಧೀಶರುಗಳ ಮತ್ತು ಅವರ ಮನೆಯವರ ಪ್ರೀತಿ-ವಿಶ್ವಾಸಗಳು ಅಲ್ಲಿನ ಮಧುರ ಜೀವನಕ್ಕೆ ಕಾರಣವಾಗಿದ್ದವು.

ಅಲ್ಲಿಂದ ಶಿವಮೊಗ್ಗಕ್ಕೆ ಪ್ರಧಾನ ಜಿಲ್ಲಾ ನ್ಯಾಯಾಧೀಶನಾಗಿ ವರ್ಗವಾದದ್ದು, ಅಗಲಿಕೆಯ ನೋವಿನ ಜೊತೆ ಸ್ವಲ್ಪ ಸಂತೋಷವನ್ನು ತಂದಿತು.

### ಶಿವಮೊಗ್ಗದಲ್ಲಿ

ಶಿವಮೊಗ್ಗದ ಆಗಿನ ಕೆಲವೇ ಪ್ರಸಿದ್ಧ ವಕೀಲರಲ್ಲಿ ಒಬ್ಬರಾಗಿದ್ದವರು ವೃತ್ತಿಯಲ್ಲಿ ಪ್ರವೀಣರೂ ಸಾಮಾಜಿಕ ಕಾರ್ಯಕರ್ತರೂ ಧರ್ಮದ ಬಗೆಗೆ ಶ್ರದ್ಧೆ-ನಂಬಿಕೆಗಳನ್ನಿಟ್ಟು ಕೊಂಡಿದ್ದವರೂ ತಮ್ಮ ಧರ್ಮ-ನಂಬಿಕೆಗಳನ್ನು ಇತರರ ಮೇಲೆ ಹೇರದವರೂ ಆಗಿದ್ದ ಶ್ರೀ ಟಿ.ವೆಂಕಟರಾಮಾಶಾಸ್ತ್ರಿಗಳು. ಶ್ರೀಯುತರ ಕಛೇರಿಯಲ್ಲಿ ಆ ಮೊದಲು ಆರು ತಿಂಗಳುಕಾಲ ಶಿಷ್ಯವೃತ್ತಿ ಮಾಡಿದ್ದ ನನಗೆ, ನನ್ನ ನ್ಯಾಯಾಂಗ ಸೇವಾವಧಿಯ ಅಂತ್ಯದಲ್ಲಿ ಶಿವಮೊಗ್ಗಕ್ಕೆ ವರ್ಗವಾಗಿದ್ದು ಸಂತೋಷ ತಂದಿತಲ್ಲದೆ, ಸ್ವಲ್ಪ ಅಭಿಮಾನ ಪಡು ವಂತಾಯಿತು.

ನನ್ನ ಶಿವಮೊಗ್ಗ ಸೇವಾ ಅವಧಿ ಸಿಹಿ-ಕಹಿಗಳ ಮಿಲನವೆಂದೇ ಹೇಳಬೇಕು. ಅಲ್ಲಿಗೆ ಹೋದ ಮೂರುತಿಂಗಳಲ್ಲಿ ಬೃಹತ್ ಲೋಕ್ ಅದಾಲತ್ ಮಾಡಬೇಕಾಯಿತು. ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಅಧ್ಯಕ್ಷರಾಗಿದ್ದ ಹಿಂದಿನ ಜಿಲ್ಲಾ ನ್ಯಾಯಾಧೀಶರಾದ ಸಿ.ವೈ.ಭರಮಗೌಡರು, ಹಿಂದಿನ ವರ್ಷ ಮೊದಲನೇ ಬೃಹತ್ ಲೋಕ್ ಅದಾಲತ್ ನಡೆಸಿ ಜಿಲ್ಲೆಯಲ್ಲಿ ಅತೀ ಹೆಚ್ಚಿನ ಸಂಖ್ಯೆಯಲ್ಲಿ ಪ್ರಕರಣಗಳನ್ನು ರಾಜಿ-ಸಂಧಾನದ ಮೂಲಕ ಅಂತ್ಯಗೊಳಿಸಲು ಕಾರಣರಾಗಿದ್ದರು. ರಾಜ್ಯದಲ್ಲಿಯೇ ಶಿವಮೊಗ್ಗ ಜಿಲ್ಲೆ ಪ್ರಥಮಸ್ಥಾನದ ದಾಖಲೆ ನಿರ್ಮಿಸಿದ್ದಿತು. ಆಡಳಿತಾತ್ಮಕ ನ್ಯಾಯಮೂರ್ತಿಗಳು ಮತ್ತು ರಾಜ್ಯ ಕಾನೂನು ಸೇವಾ ಪ್ರಾಧಿಕಾರದ ಅಧ್ಯಕ್ಷರಾಗಿದ್ದ ನ್ಯಾಯಮೂರ್ತಿಗಳು, ಹಿಂದಿನ ದಾಖಲೆಯನ್ನು ಮುರಿಯಬೇಕೆಂಬ ಮೌಖಿಕ ಆದೇಶ-ಪ್ರೇರಣೆ ನೀಡಿದರು. ಅದನ್ನು ಸವಾಲೆಂದೇ ಸ್ವೀಕರಿಸಿ, ಜಿಲ್ಲೆಯಾದ್ಯಂತ ಪ್ರವಾಸ ಮಾಡಿ, ಜಿಲ್ಲೆಯ ನ್ಯಾಯಾಧೀಶರು, ವಕೀಲರು ಮತ್ತು ಸಿಬ್ಬಂದಿಯವರನ್ನು ಉದ್ದೇಶಿತ ಗುರಿಮುಟ್ಟುವಂತೆ ಮಾಡಲು ಹುರಿದುಂಬಿಸಿ, ಅವರೆಲ್ಲರೂ ತಮ್ಮನ್ನು ಈ ಕಾರ್ಯಕ್ಕಾಗಿ ಅರ್ಪಿಸಿಕೊಂಡು ಕಾರ್ಯಪ್ರವೃತ್ತರಾಗುವಂತೆ ಮಾಡಲಾಯಿತು. ಎರಡನೇ ಬೃಹತ್ ಲೋಕ್ ಅದಾಲತ್‌ನಲ್ಲೂ ನ್ಯಾಯಾಲಯಗಳ ಮುಂದೆ ತೀರ್ಮಾನಕ್ಕೆ ಕಾಯುತ್ತಿದ್ದ ಪ್ರಕರಣಗಳನ್ನು ಅತಿ ಹೆಚ್ಚಿನ ಸಂಖ್ಯೆಯಲ್ಲಿ ರಾಜಿ-ಸಂಧಾನದ ಮೂಲಕ ಇತ್ಯರ್ಥಗೊಳಿಸಲಾಯಿತು. ಹಿಂದಿನ ದಾಖಲೆಯನ್ನು ಮುರಿದಿದ್ದರಿಂದ, ಆ ಜಿಲ್ಲೆಯು ಎರಡನೇ ಬಾರಿಯೂ ರಾಜ್ಯದಲ್ಲಿ ಪ್ರಥಮಸ್ಥಾನ ಪಡೆಯುವಂತಾಯಿತು.

ಹಿಂದಿನ ಕಾರ್ಯವಿಧಾನವನ್ನೇ ಅನುಸರಿಸಿದ್ದರಿಂದ, ಎರಡು ತಾಲೂಕುಗಳು ದಾವಣಗೆರೆ ಜಿಲ್ಲೆಯ ವ್ಯಾಪ್ತಿಗೆ ಹೋದರೂ, ಪುನಃ ಮೂರನೇ ಲೋಕ ಅದಾಲತ್‌ನ ವ್ಯವಸ್ಥೆಯಾಯಿತು. ರಾಜ್ಯದಲ್ಲಿಯೇ ಅತ್ಯಂತ ಹೆಚ್ಚಿನ ಸಂಖ್ಯೆಯ ಪ್ರಕರಣಗಳು ಈ ವ್ಯವಸ್ಥೆ ಮೂಲಕ ಅಂತಿಮವಾಗಿ ತೀರ್ಮಾನಗೊಂಡವು. ಹಿಂದಿನ ದಾಖಲೆ ಮುರಿದು ಮೂರನೇಬಾರಿಗೆ ಶಿವಮೊಗ್ಗ ಜಿಲ್ಲೆಯು ರಾಜ್ಯಕ್ಕೆ ಪ್ರಥಮಸ್ಥಾನ ಪಡೆದು ಹ್ಯಾಟ್ರಿಕ್ ಸಾಧಿಸಿದ್ದು ಈಗ

ದಾಖಲೆ. ಇದರಿಂದ ಸಂಬಂಧಿಸಿದ ವ್ಯಕ್ತಿಗಳಿಗೆ ಶೀಘ್ರ ನ್ಯಾಯ ದೊರೆತು ಅವರು ನೆಮ್ಮದಿಯ ನಿಟ್ಟುಸಿರು ಬಿಡುವಂತೆ ಮಾಡಿದ್ದಲ್ಲದೆ, ವ್ಯಕ್ತಿ ವ್ಯಕ್ತಿಗಳ ಮಧ್ಯೆ ಇದ್ದ ವಿರಸಕ್ಕೆ ಅಂತ್ಯ ಹಾಡಿ, ಸೌಹಾರ್ದತೆ ಮೂಡಲು ಕಾರಣವಾಯಿತು. ನ್ಯಾಯಾಲಯಗಳ ಮೇಲಿದ್ದ ಹೊರೆ ಸ್ವಲ್ಪಮಟ್ಟಿಗೆ ಕಡಿಮೆಯಾಗಿ ಪ್ರಾಧಿಕಾರದ ಉದ್ದೇಶವೂ ಈಡೇರಲು ಕಾರಣವಾಯಿತೆನ್ನಬಹುದು.

**ತೀರ್ಪಿನ ವ್ಯಾಖ್ಯೆ**

ಗಂಭೀರ ಕ್ರಿಮಿನಲ್ ಪ್ರಕರಣಗಳಲ್ಲಿ, ಆಪಾದಿತ ಮಾಡಿರುವ ಅಪರಾಧದ ಬಗೆಗೆ ಸಾಕಷ್ಟು ಪುರಾವೆ ದೊರಕುವುದು ಈಗ ತೀರ ಕಡಿಮೆ ಎಂದು ಹೇಳಬಹುದು. ಅನೇಕ ಪ್ರಕರಣಗಳಲ್ಲಿ ತನಿಖಾಧಿಕಾರಿಗಳ ಕರ್ತವ್ಯಲೋಪದಿಂದಲೋ ನಿರ್ಲಕ್ಷ್ಯತನದಿಂದಲೋ ತನಿಖೆಯಲ್ಲಿ ಲೋಪದೋಷಗಳು ಸುಳಿದು, ಅರೋಪ ಹೊತ್ತ ಆಪಾದಿತ ಅಥವಾ ಆತನ ಕಡೆಯವರ ಭಯ, ಆಮಿಷಗಳಿಂದ ಸಾಕ್ಷಿಗಳು ಸರಿಯಾಗಿ ಸಾಕ್ಷಿಹೇಳದೆ ಇರುವುದುಂಟು. ಈಗ ಇದು ಸಾಮಾನ್ಯ ವಿಷಯವೇ ಆಗಿದ್ದು, ಅಂತಹ ಪ್ರಕರಣಗಳಲ್ಲಿ ವಿಧಿ ಇಲ್ಲದೆ ಆರೋಪ ಹೊತ್ತವರನ್ನು ಬಿಡುಗಡೆ ಮಾಡುವ ನಿಸ್ಸಹಾಯಕ ಸ್ಥಿತಿ ನ್ಯಾಯಾಲಯಗಳದ್ದಾಗಿರುವುದು ಸರ್ವವಿದಿತ. ಇದರಿಂದ ಆರೋಗ್ಯವಂತ ಸಮಾಜ ನಿರ್ಮಾಣಮಾಡುವ ಮಹದಾಸೆ ಇಟ್ಟುಕೊಂಡವರಿಗೆ ಭ್ರಮನಿರಸನವಾಗುತ್ತಿರುವುದು ಒಂದು ಕಟುಸತ್ಯ. ಹೀಗಾಗಿ ಅನೇಕ ಗಂಭೀರ ಪ್ರಕರಣಗಳಲ್ಲಿನ ಆರೋಪಿಗಳು ಕಾನೂನಿನ ಬಲೆಯಿಂದ ಸುಲಭವಾಗಿ ತಪ್ಪಿಸಿಕೊಂಡು ಸಮಾಜದಲ್ಲಿ ಮೆರೆಯುತ್ತಿರುವುದಲ್ಲದೆ, ಪುನಃ ಅಂತಹದೇ ಅಪರಾಧ ಮಾಡುವುದರಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿರುವುದು ಸಮಾಜವನ್ನು ತಲ್ಲಣಗೊಳಿಸುವ ವಿಚಾರವೇ ಸರಿ.

ಇಂತಹ ದುಸ್ಥಿತಿ ಇರುವುದನ್ನು ಮನಗಂಡ ನಾನು, ಗಂಭೀರ ಅಪರಾಧ ಮಾಡಿರುವರೆಂದು ಆಪಾದನೆ ಹೊತ್ತವರ ಬಗೆಗೆ ಅವರು ಆ ಆಪರಾಧ ಮಾಡಿರುವರೆಂದು ನಂಬುವಂತಹ ಪುರಾವೆ ಸ್ವಲ್ಪವೇ ಸಿಕ್ಕರೂ ಸಾಕು, ಆರೋಪಿಗಳಿಗೆ ಸೂಕ್ತ ಶಿಕ್ಷೆ ವಿಧಿಸುವುದು, ಆರೋಪಿಗಳ ದೌರ್ಜನ್ಯಕ್ಕೆ ಒಳಗಾದ ಮುಗ್ಧಜನ ಅಥವಾ ಅವರ ಹತ್ತಿರದ ಸಂಬಂಧಿಕರಿಗೆ ಕಾನೂನಿನಲ್ಲಿರುವ ಅವಕಾಶವನ್ನು ಬಳಸಿಕೊಂಡು ಅಪರಾಧಿಗಳಿಂದ ಪರಿಹಾರ ಕೊಡಿಸುವಂತೆ ಆಜ್ಞೆಮಾಡುವುದನ್ನು ರೂಢಿಸಿಕೊಂಡಿದ್ದೆ. ಇಂತಹ ಕ್ರಮ ತೆಗೆದುಕೊಳ್ಳುವಾಗ, ನಾನು ಕೊಟ್ಟ ತೀರ್ಪಿನ ವಿರುದ್ಧ ಅಪರಾಧಿಗಳು ಮಾಡುವ ಅಪೀಲ್‌ಗಳಲ್ಲಿ, ಮೇಲಿನ ನ್ಯಾಯಾಲಯದವರು ನನ್ನ ಅಥವಾ ನನ್ನ ತೀರ್ಪಿನ ಮೇಲೆ ಪ್ರತಿಕ್ರಿಯಿಸಬಹುದಾದ ವಿಧಾನ ಅಥವಾ ಆರೋಪಿಗಳನ್ನು ದೋಷಮುಕ್ತರಾಗಿ ಮಾಡಬಹುದಾದ ಸಾಧ್ಯತೆಗಳ ಬಗೆಗೆ ಎಂದೂ ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಹೀಗಾಗಿ ಅನೇಕ ಪ್ರಕರಣಗಳಲ್ಲಿ ಶಿಕ್ಷೆಗೆ ಒಳಗಾದ ಗುರುತರ ಅಪರಾಧಿಗಳು ಸೂಕ್ತ ಶಿಕ್ಷೆಯನ್ನು (ಕಾರಾಗೃಹದ ವಾಸ) ಕೆಲಕಾಲದ ವರೆಗಾದರೂ ಅನುಭವಿಸಬೇಕಾಗಿ ಬರುತ್ತಿದ್ದಿತು. ಈ ದಿಸೆಯಲ್ಲಿ ಮಾಡಿದ ನನ್ನ

ಪರಿಶ್ರಮ ಸ್ವಲ್ಪಮಟ್ಟಿಗಾದರೂ ಸಾರ್ಥಕತೆ ಪಡೆಯಿತಲ್ಲಾ ಎಂಬ ಆತ್ಮತೃಪ್ತಿ ನನ್ನಲ್ಲಿ ಇರುತ್ತಿತ್ತು.

ಕೊಲೆ, ಕಳ್ಳತನ, ಸುಲಿಗೆ, ದರೋಡೆ, ಅತ್ಯಾಚಾರ, ವರದಕ್ಷಿಣೆ ಸಾವು ಇತ್ಯಾದಿ ಗಂಭೀರ ಪ್ರಕರಣಗಳಲ್ಲಿ ಆರೋಪಿಗಳು ಅಪರಾಧ ಮಾಡಿದ ಬಗೆಗೆ ನಂಬಲರ್ಹವಾದ ಪುರಾವೆ ಸ್ವಲ್ಪವೇ ಸಿಕ್ಕರೂ ಸಾಕು, ಅಪರಾಧಿಗಳಿಗೆ ಸೂಕ್ತ ಶಿಕ್ಷೆಯನ್ನು ನಾನು ವಿಧಿಸುವುದು ಶತಸ್ಸಿದ್ಧವೆಂಬ ಅನಿಸಿಕೆ ವಕೀಲವೃಂದದಲ್ಲಿ ಮತ್ತು ಸಾರ್ವಜನಿಕರಲ್ಲಿ ಇತ್ತೆಂದು ಇತ್ತೀಚೆಗೆ ತಿಳಿಯಿತು. ನಾನು ಬೆಂಗಳೂರು, ಮಂಡ್ಯ ಮತ್ತು ಶಿವಮೊಗ್ಗಗಳಲ್ಲಿ ಸೆಷನ್ಸ್ ನ್ಯಾಯಾಧೀಶನಾಗಿದ್ದಾಗ, ಇಂತಹ ಅನೇಕ ಗಂಭೀರ ಪ್ರಕರಣಗಳಲ್ಲಿ ಅಪರಾಧಿಗಳಿಗೆ ಸೂಕ್ತ ಶಿಕ್ಷೆಗೆ ಆಜ್ಞೆಮಾಡಿರುವುದು ನನ್ನ ನ್ಯಾಯಾಂಗ ಸೇವಾ ಅವಧಿಯಲ್ಲಿನ ಕರ್ತವ್ಯ ನಿರ್ವಹಣೆಯಲ್ಲಿ ತೃಪ್ತಿತಂದಿರುವ ವಿಷಯವೆನ್ನಬಹುದು.

**ಆಘಾತ ತಂದ ಘಟನೆ**

ಶಿವಮೊಗ್ಗದಲ್ಲಿ ನನ್ನ ನ್ಯಾಯಾಂಗ ಆಡಳಿತ ಸೇವೆಯನ್ನು ನಿಷ್ಕಳಂಕವಾಗಿ ಸಲ್ಲಿಸುವ ಅವಧಿಯಲ್ಲಿ ಒಂದು ಘಟನೆ ನಡೆಯಿತು. ಒಂದು ಭಾನುವಾರ ಬೆಳಿಗ್ಗೆ ೯ ಗಂಟೆಯ ಸುಮಾರಿಗೆ, ಬೆಂಗಳೂರಿನಿಂದ ಜಿಲ್ಲಾ ಆಡಳಿತಾತ್ಮಕ ನ್ಯಾಯಮೂರ್ತಿಯವರಿಂದ ನನ್ನ ಮೇಲೆ ಏಕಾಏಕಿ ಅನುಚಿತ ಆಪಾದನೆಗಳ ವಾಗ್ದಾಳಿಯ ಸುರಿಮಳೆಯಾಯಿತು. ಸಾಮಾನ್ಯವಾಗಿ ಸ್ಥೈರ್ಯ ಕೆಡಿಸಿಕೊಳ್ಳದ ನನಗೆ ಮಾನಸಿಕ ಶಾಕ್ ಆಗುವಂತೆ ಮಾಡಿತು ಈ ಘಟನೆ. ಅನೇಕ ದಿನಗಳವರೆಗೆ ಆ ಹಸಿಸುಳ್ಳು, ಆಪಾದನೆಗಳಿಂದ ಆದ ಆಘಾತದಿಂದ ತತ್‌ಕ್ಷಣವೇ ಚೇತರಿಸಿಕೊಳ್ಳಲು ಆಗಲಿಲ್ಲ. ಇದು ನನ್ನನ್ನು ಅನೇಕ ದಿನಗಳವರೆಗೆ ಬಾಧಿಸಿತು. ಕೊನೆಗೆ ದೀರ್ಘಕಾಲ ರಜೆಹಾಕಿ ಮದ್ರಾಸಿಗೆ ಹೊರಟುಹೋದೆ. ನನ್ನ ನಿಷ್ಕಳಂಕ ಸೇವಾ ಅವಧಿಯಲ್ಲಿ ಇದೊಂದು ಕೆಟ್ಟ ಕ್ಷಣವೆನ್ನಬಹುದು.

ನಡೆದಿದ್ದು ಇಷ್ಟು. ಆಡಳಿತಾತ್ಮಕ ಅನುಕೂಲ ಮತ್ತು ಕೆಲವು ನೌಕರರ ವೈಯಕ್ತಿಕ ತೊಂದರೆಗಳನ್ನು ಗಮನದಲ್ಲಿಟ್ಟುಕೊಂಡು, ನೌಕರರ ವರ್ಗಾವಣೆಯ ಆಜ್ಞೆಯ ನಕಲುಗಳನ್ನು ಶುಕ್ರವಾರವೇ ಮಾಡಿ, ಜಿಲ್ಲೆಯ ಆಯಾಯಾ ನ್ಯಾಯಾಲಯಗಳಿಗೆ ಸೂಕ್ತ ಕ್ರಮಕ್ಕಾಗಿ ರವಾನಿಸಲಾಗಿತ್ತು. ಮಾರನೇದಿನ ತಿಂಗಳ ಎರಡನೇ ಶನಿವಾರವಿದ್ದುದರಿಂದ, ನ್ಯಾಯಾಲಯಗಳಿಗೆ ರಜೆ ಇತ್ತು. ಮೂರನೇದಿನ ಭಾನುವಾರ ಆಗಿದ್ದರಿಂದ, usual courseನಲ್ಲಿ ಆಜ್ಞೆಗಳ ನಕಲು ಸಂಬಂಧಿಸಿದ ನ್ಯಾಯಾಲಯಗಳನ್ನು ಸೋಮವಾರ ತಲುಪಬೇಕಾಗಿತ್ತು.

ಆದರೆ ಹಿಂದಿನ ದಿನ ಭಾನುವಾರ ಬೆಳಿಗ್ಗೆಯೇ ಆಡಳಿತಾತ್ಮಕ ನ್ಯಾಯಮೂರ್ತಿಗಳು, "ನಾನು ಹೇಳಿದ ನೌಕರಳನ್ನು ಶಿಕಾರಿಪುರ ನ್ಯಾಯಾಲಯದಿಂದ ಶಿವಮೊಗ್ಗ ನ್ಯಾಯಾಲಯಕ್ಕೆ ವರ್ಗಮಾಡಿಲ್ಲ; ಆದರೆ ಒಬ್ಬ ಸಿವಿಲ್ ಜಡ್ಜ್ ಶಿಫಾರಸ್ಸು ಮಾಡಿದ ನೌಕರಳನ್ನು ಶಿಕಾರಿಪುರ ನ್ಯಾಯಾಲಯದಿಂದ ಶಿವಮೊಗ್ಗ ನ್ಯಾಯಾಲಯಕ್ಕೆ ವರ್ಗಮಾಡಿ, ಅಪಚಾರ ಮಾಡಿದ್ದೀಯೆ" ಎಂದು ಸಲ್ಲದ ಆಪಾದನೆ ಮಾಡಿದ್ದರು. ಅಲ್ಲದೆ, "ಆ ನೌಕರಳ

ತೊಂದರೆಗಳು ನಿಜವಾದ ತೊಂದರೆಗಳು ಹೌದೊ ಅಲ್ಲವೋ ಅನ್ನುವುದನ್ನು ತಿಳಿದುಕೊಂಡು ಸೂಕ್ತ ಕ್ರಮ ತೆಗೆದುಕೊಳ್ಳಿ" ಎಂದು ನ್ಯಾಯಮೂರ್ತಿಗಳೇ ಶಿವಮೊಗ್ಗಕ್ಕೆ ಬಂದಿದ್ದಾಗ ಹೇಳಿ ಹೋಗಿದ್ದರು. ಆ ನೌಕರಳಿಗೆ ಹೇಳಿಕೊಳ್ಳುವಂತಹ ತೊಂದರೆಗಳೇನೂ ಇಲ್ಲ ಎಂಬುದನ್ನು ನಾನು ಅನಧಿಕೃತವಾಗಿ ತಿಳಿದುಕೊಂಡಿದ್ದೆ. ಆಕೆಯ ವರ್ಗಾವಣೆ ಬೇಡಿ ಸಲ್ಲಿಸಿದ ಅರ್ಜಿಯಲ್ಲಿರುವ ತೊಂದರೆಗಳ ಬಗೆಗೆ ಸರಿಯಾಗಿ ತಿಳಿದುಕೊಂಡು ನಂತರ ಸೂಕ್ತ ಕ್ರಮ ತೆಗೆದುಕೊಂಡರಾಯಿತೆಂದು ನಿರ್ಧರಿಸಿ ಆಕೆಯನ್ನು ಅಲ್ಲಿಂದ ಶಿವಮೊಗ್ಗಕ್ಕೆ ವರ್ಗ ಮಾಡಿರಲಿಲ್ಲ. ಹಾಗೆಯೇ ಸಿವಿಲ್ ಜಡ್ಜ್ ಅವರು ಶಿಫಾರಸ್ಸು ಮಾಡಿದ ನೌಕರಳನ್ನೂ ಆಕೆಯ ಅರ್ಜಿಯಲ್ಲಿ ಕಾಣಿಸಿರುವ ತೊಂದರೆಗಳನ್ನೂ ಪರಿಶೀಲಿಸಿ, ಸಾಮಾನ್ಯ ವರ್ಗಾವಣೆ ವೇಳೆಯಲ್ಲಿ ವರ್ಗ ಮಾಡಿದರಾಯಿತೆಂದು ಆಕೆಯನ್ನು ಶಿಕಾರಿಪುರ ದಿಂದ ಶಿವಮೊಗ್ಗಕ್ಕೆ ವರ್ಗ ಮಾಡಿರಲಿಲ್ಲ. ಆದರೆ ನ್ಯಾಯಮೂರ್ತಿಗಳಿಗೆ ಯಾರೋ ತಪ್ಪು ಮಾಹಿತಿ ನೀಡಿ, ಅದನ್ನು ಅವರು ನಂಬುವಂತೆ ಮಾಡಿದ್ದರು. ಈ ಹಿನ್ನೆಲೆಯಲ್ಲಿ ಅವರು ನನ್ನ ಮೇಲೆ ಇಲ್ಲ-ಸಲ್ಲದ ರೀತಿಯಲ್ಲಿ ದೂರವಾಣಿ ಮೂಲಕ ಅನುಚಿತ ವಾಗ್ದಾಳಿಯನ್ನು ಮಾಡಿದ್ದರು. ಈ ಕಹಿ ಪ್ರಸಂಗ ಆ ನ್ಯಾಯಮೂರ್ತಿಗಳು ಹಿತ್ತಾಳೆಕಿವಿಯ ವ್ಯಕ್ತಿ ಎನ್ನುವಂತೆ ಮಾಡಿದರೂ, ನನ್ನ ಸ್ಥೈರ್ಯವನ್ನು ಕೆಡಿಸಿ, ರಜೆ ಹಾಕುವಂತೆ ಮಾಡಿದ್ದುದು ನೆನಪಿನಲ್ಲುಳಿಯುವಂತಾಯಿತು.

ಯಾರಿಂದಲೂ ಇಲ್ಲ-ಸಲ್ಲದ ಆಪಾದನೆಗಳನ್ನು ನಿರೀಕ್ಷಿಸದ ಹಾಗೂ ಪ್ರತಿಭಟಿಸುವ ನನ್ನ ಪ್ರವೃತ್ತಿಯನ್ನು ಕಂಡಿದ್ದ ನನ್ನ ಪತ್ನಿ ಮತ್ತು ಮಕ್ಕಳು, "ಆ ನ್ಯಾಯಮೂರ್ತಿಗಳ ಸಲ್ಲದ ವಾಗ್ದಾಳಿಯನ್ನು ಹೇಗೆ ಸಹಿಸಿಕೊಂಡಿರಿ? ಅವರಷ್ಟೇ ಖಾರವಾಗಿ ನೀವು ಪ್ರತಿಭಟಿಸಲಿಲ್ಲವೇಕೆ?" ಎಂದು ಕೇಳಿದರು. ಆ ನ್ಯಾಯಮೂರ್ತಿಗಳ ಸಲ್ಲದ ಆಪಾದನೆ ಅಸತ್ಯದಿಂದ ಕೂಡಿದೆಯೆಂದು ನಾನು ಎಷ್ಟು ಪರಿಯಲ್ಲಿ ಹೇಳಿದರೂ ಆ ದಿನ ಅವರು ನನ್ನ ಮಾತುಗಳನ್ನು ನಂಬಲು ಸಿದ್ಧರಿರಲಿಲ್ಲ! ಆದರೂ ನಾನು ಎಂದಿನಂತೆ ನನ್ನ ಮೇಲಿನ ಸಲ್ಲದ ಆಪಾದನೆಯನ್ನು ಬಲವಾದ ಮಾತುಗಳಲ್ಲಿ ಪ್ರತಿಭಟಿಸಲಿಲ್ಲವೆಂದೇ ಹೇಳಬೇಕು. ಏಕೆಂದರೆ ಆಪಾದನಾ ವಾಗ್ದಾಳಿ ಪ್ರಾರಂಭಿಸಿದ ಆ ನ್ಯಾಯಮೂರ್ತಿಗಳು one side ಅನ್ನುವ ರೀತಿಯಲ್ಲಿಯೇ ದೊಡ್ಡಧ್ವನಿಯಲ್ಲಿ ಮಾತನಾಡುತ್ತಿದ್ದರಲ್ಲದೆ, ನಾನು ಹೇಳುತ್ತಿದ್ದುದನ್ನು ಕೇಳುವ ಸ್ಥಿತಿಯಲ್ಲಿ ಅವರು ಇರಲೇ ಇಲ್ಲ.

ಮುಂದೆ ಕೆಲವು ದಿನಗಳ ನಂತರ ನಿಜಸ್ಥಿತಿ ಏನೆಂಬುದು ಅವರಿಗೆ ಗೊತ್ತಾಯಿತು. ಎಂದಿನಂತೆ ತುಂಬಾ ವಿಶ್ವಾಸದಿಂದ ನನ್ನೊಂದಿಗೆ ವ್ಯವಹರಿಸಲು ಪ್ರಾರಂಭಿಸಿ, ನಾನು ಭೇಟಿಯಾದಾಗ ಆತ್ಮೀಯತೆಯಿಂದ ನಡೆದುಕೊಳ್ಳತೊಡಗಿದರು. ಮೊದಲಿನಂತೆಯೇ ಪ್ರೀತಿ- ವಿಶ್ವಾಸ-ಗೌರವಗಳನ್ನು ನಾನು ಹಂಚಿಕೊಳ್ಳಲು ಅವಕಾಶವಾದುದು ಸಮಾಧಾನಕರ ಬೆಳವಣಿಗೆಯೆನಿಸಿತು. ನಾನು ಸಹಾ ಧೃತಿಗೆಡದೆ ಎಂದಿನಂತೆ ನನ್ನ ಸೇವೆಯನ್ನು ಮುಂದುವರೆಸಿಕೊಂಡು ಹೋದೆ. ಮುಂದೆ ಕೆಲವು ತಿಂಗಳಲ್ಲಿ, ಆ ನ್ಯಾಯಮೂರ್ತಿಗಳ

ಬದಲು ನನಗೆ ಮೊದಲೇ ಪರಿಚಯವಿದ್ದ ನಮ್ಮ ಜಿಲ್ಲೆಯವರೇ ಆದ ನ್ಯಾಯಾಮೂರ್ತಿಗಳು ಶಿವಮೊಗ್ಗ ಜಿಲ್ಲೆಯ ಆಡಳಿತಾತ್ಮಕ ನ್ಯಾಯಮೂರ್ತಿಗಳಾಗಿ ಬಂದರು. ಇದು ನನಗೆ ಸಂತೋಷದ ಸಂಗತಿಯಾಯಿತು.

**ಇನ್ನೊಂದು ಘಟನೆ**

ಈ ಮೇಲಿನಂತೆಯೇ ನಡೆದ ಘಟನೆಯನ್ನು ಹೋಲುವ ಇನ್ನೊಂದು ಸಣ್ಣ ಘಟನೆಯ ಬಗೆಗೆ ಇಲ್ಲಿ ಹೇಳಬೇಕು. ಉಚ್ಚನ್ಯಾಯಾಲಯ ನೀಡಿದ ಅನುಮತಿಯಂತೆ, ಖಾಲಿ ಇದ್ದ ನಾಲ್ಕನೇದರ್ಜೆಯ ಹುದ್ದೆಗಳಿಗೆ ಅರ್ಜಿ ಕರೆದು ಅಧಿಸೂಚನೆ ಹೊರಡಿಸಲಾಗಿತ್ತು. ಕೆಲವು ದಿನಗಳ ನಂತರ, ಈ ಹೊಸ ಆಡಳಿತಾತ್ಮಕ ನ್ಯಾಯಮೂರ್ತಿಯವರಿಂದ ದೂರವಾಣಿ ಕರೆ ಬಂದಿತು. ಈ ಅಧಿಸೂಚನೆಯ ಬಗೆಗೆ ನಾನು ಅವರಿಗೆ ತಿಳಿಸಿಲ್ಲವೆಂದು ಅನುಚಿತ ಆಪಾದನೆಯ ವಾಗ್ದಾಳಿ ಪ್ರಾರಂಭಿಸಿದರು. ಆದರೆ ನಾನು ಅವರ ಮಾತುಗಳಿಗೆ ತಕ್ಕ ರೀತಿಯಲ್ಲಿ ಅವರಷ್ಟೇ ಎತ್ತರಧ್ವನಿಯಲ್ಲಿ ಅನಿರೀಕ್ಷಿತ ರೀತಿಯಲ್ಲಿ ಸಮಂಜಸ ಉತ್ತರ ಕೊಟ್ಟೆ. ಅದು ಅವರ ಸಹನೆಗೆ ಭಂಗ ತಂದಿರಬೇಕು! ಅವರು ತಾನು ಏನು ಮಾತನಾಡುತ್ತಿದ್ದೇನೆ ಎಂಬುದರ ಪರಿವೆಯೇ ಇಲ್ಲವೆಂಬಂತೆ, ನನ್ನ ಪ್ರಾಮಾಣಿಕತೆಯನ್ನು ಪ್ರಶ್ನಿಸುವ ರೀತಿಯಲ್ಲಿ ಮಾತನಾಡಿದರು. ಕೂಡಲೇ ಅವರಿಗೆ "I am second to none in honesty and integrity" ಎಂದು ಎತ್ತರದ ಖಾರವಾದ ಧ್ವನಿಯಲ್ಲಿ ಉತ್ತರಿಸಿದೆ. ಅದು ಖಂಡಿತ ಅವರ ಧೃತಿಗೆಡಿಸಿರಬೇಕು. ಆಮೇಲೆ ಏನೇನೊ ಮಾತನಾಡಿ ಸುಮ್ಮನಾದರು. ನಾನು ಕಾನೂನು ಮತ್ತು ಉಚ್ಚನ್ಯಾಯಾಲಯದ ಆದೇಶಗಳ ಪ್ರಕಾರ, ಎಂದಿನಂತೆ ಪ್ರಾಮಾಣಿಕವಾಗಿ ಕಾರ್ಯನಿರ್ವಹಿಸಿದ್ದೆ. ಆ ಸಂವಾದ ನನ್ನ ಮೇಲೆ ಯಾವುದೇ ಪ್ರತಿಕೂಲ ಪರಿಣಾಮವನ್ನುಂಟು ಮಾಡಲಿಲ್ಲ. ಪರಿಶುದ್ಧನಾಗಿರಲು ಬಯಸುವ ಯಾವುದೇ ವ್ಯಕ್ತಿಗೆ ಏನನ್ನಾದರೂ ಯಾರನ್ನಾದರೂ ಧೈರ್ಯದಿಂದ ಎದುರಿಸುವ ಹಾಗೂ ನೈತಿಕವಾಗಿ ಪ್ರತಿಭಟಿಸುವ ಶಕ್ತಿಯನ್ನು ದೇವರು ಕೊಟ್ಟಿರುತ್ತಾನೆಂಬುದು ನನ್ನ ಬಲವಾದ ನಂಬಿಕೆ.

**ಸೇವೆಗೆ ಸಂದ ಪುರಸ್ಕಾರ**

ನನ್ನ ನ್ಯಾಯಾಂಗ ಸೇವೆಯ ಕೊನೆಯ ಅವಧಿಯಲ್ಲಿ, ಗೌರವಾನ್ವಿತ ಮುಖ್ಯ ನ್ಯಾಯಮೂರ್ತಿ ಶ್ರೀ ಪಿ.ವಿ.ರೆಡ್ಡಿಯವರು, ದಾವಣಗೆರೆಯಲ್ಲಿ ನಡೆದ ಬೃಹತ್ ಲೋಕ ಅದಾಲತ್ ಕಾರ್ಯವನ್ನು ಮುಗಿಸಿಕೊಂಡು ಮುಂದಿನ ಪ್ರವಾಸಕ್ಕಾಗಿ ಶಿವಮೊಗ್ಗಕ್ಕೆ ಬಂದರು. ಆಗ ಆಡಳಿತಾತ್ಮಕ ನ್ಯಾಯಮೂರ್ತಿಗಳೂ ಬಂದಿದ್ದರು. ಆಗ ಸರ್ಕ್ಯೂಟ್ ಹೌಸ್‌ನಲ್ಲಿ ಮುಖ್ಯ ನ್ಯಾಯಮೂರ್ತಿಗಳನ್ನು ಭೇಟಿಯಾಗಲು ಶಿವಮೊಗ್ಗ ಮತ್ತು ಜಿಲ್ಲೆಯ ಅನೇಕ ಸ್ಥಳಗಳಿಂದ ಬಂದಿದ್ದ ವಕೀಲರು ಅಪಾರ ಸಂಖ್ಯೆಯಲ್ಲಿ ಸೇರಿದ್ದರು. ನಾನು ಮುಖ್ಯ ನ್ಯಾಯಮೂರ್ತಿಗಳಿಗೆ ನಮಸ್ಕರಿಸಿ ನನ್ನ ಪರಿಚಯ ಮಾಡಿಕೊಂಡ ಕೂಡಲೆ, "What about Lok Adalath work in your district?" ಎಂದು ಪ್ರಶ್ನಿಸಿದರು. ತಕ್ಷಣವೇ ನಾನು, "Our district stood first in the entire state

in Lok Adalath work, that too within about three months after my arrival to this district'' ಎಂದೆ. ಅವರಿಗೆ ಸ್ವಲ್ಪ ಆಶ್ಚರ್ಯವೇ ಆಯಿತು. ತಮ್ಮ ಪಕ್ಕದಲ್ಲಿ ಕುಳಿತಿದ್ದ ಆಡಳಿತಾತ್ಮಕ ನ್ಯಾಯಮೂರ್ತಿಗಳತ್ತ ಒಮ್ಮೆ ಪ್ರಶ್ನಾರ್ತಕ ನೋಟ ಬೀರಿದರು. ಆ ನ್ಯಾಯಮೂರ್ತಿಗಳು 'ಸರಿ' ಎಂದು ತಲೆಯಾಡಿಸಿದಾಗ, ಮುಖ್ಯ ನ್ಯಾಯಮೂರ್ತಿಗಳ ಗಂಟುಮುಖ ಸಡಿಲಿತು! ಆಗ ಅವರು ಹಸನ್ಮುಖರಾಗಿ ಮಾತನಾಡುತ್ತಾ ಲೋಕ್ ಅದಾಲತ್ ಕಾರ್ಯದಲ್ಲಿ ಶಿವಮೊಗ್ಗ ಜಿಲ್ಲೆಯು ರಾಜ್ಯದ ಎಲ್ಲ ಜಿಲ್ಲೆಗಳಿಗಿಂತ ಮುಂಚೂಣಿಯಲ್ಲಿರುವುದರ ಬಗೆಗೆ ಸಂತೋಷ ವ್ಯಕ್ತಮಾಡಿದರು. ಈ ಕೆಲಸ ಹೀಗೇ ಮುಂದುವರೆಯಲೆಂದು ಹಾರೈಸಿದರು.

ಅಷ್ಟುಹೊತ್ತಿಗೆ, ನನ್ನ ನಿವೃತ್ತಿ ಅವಧಿಗಿಂತ ಆರುತಿಂಗಳು ಮುಂಚೆ, ನನ್ನನ್ನು ಚಿಕ್ಕಮಗಳೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ ಅಧ್ಯಕ್ಷರನ್ನಾಗಿ ಮಾಡಿ ನೇಮಕಾತಿ ಅಧಿಸೂಚನೆ ಹೊರಟಿದ್ದಿತು. ನನ್ನನ್ನು ಯಾವ ಕ್ಷಣದಲ್ಲಾದರೂ ಉಚ್ಚ ನ್ಯಾಯಾಲಯವು ಸೇವೆಯಿಂದ ಬಿಡುಗಡೆ ಮಾಡಬಹುದಾಗಿದ್ದಿತು. ಮುಖ್ಯ ನ್ಯಾಯಮೂರ್ತಿಯವರು ಶಿವಮೊಗ್ಗವನ್ನು ಬಿಡುವಾಗ ನನ್ನನ್ನು ಹತ್ತಿರ ಕರೆದು, "ಒಳ್ಳೆಯ ಕೆಲಸ ಮಾಡುತ್ತಿದ್ದೀರಿ. ಇದನ್ನು ಹೀಗೇ ಮುಂದುವರೆಸಿ. ನಾನು ಈಗಲೇ ನಿಮ್ಮನ್ನು ನ್ಯಾಯಾಂಗಸೇವೆಯಿಂದ ಬಿಡುಗಡೆ ಮಾಡುವುದಿಲ್ಲ'' ಎಂದರು. ಅವರ ಈ ಮಾತಿನಿಂದ ನನ್ನ ನ್ಯಾಯಾಂಗ ಸೇವೆಯ ಬಗೆಗೆ ನಾನು ತೃಪ್ತಿ ಪಡುವಂತಾಯಿತಲ್ಲದೆ, ನಾನು ಕೆಲವು ತಿಂಗಳುಗಳ ನಂತರ, ಅಂದರೆ ಡಿಸೆಂಬರ್ ೨೦೦೧ರಲ್ಲಿ ನಿವೃತ್ತಿ ಹೊಂದಬಹುದೆಂದು ಉಚ್ಚನ್ಯಾಯಾಲಯವು ಅನುಮತಿ ಆದೇಶ ಹೊರಡಿಸಲು ಕಾರಣವಾಯಿತು. ಆಗ ಆತ್ಮೀಯ ಗೆಳೆಯ ಶ್ರೀ ಎ.ಸಿ.ಕಬ್ಬಿನ್ ಅವರೇ ರಿಜಿಸ್ಟ್ರಾರ್ ಜನರಲ್ ಆಗಿದ್ದು, ಇದಕ್ಕೆ ಪೂರಕವಾಗಿರಲೂ ಸಾಕು.

## ಮದುವೆಯ ಪ್ರಸಂಗ

ಒಂದೊಂದು ಸಾರಿ ಜೀವನವೇ ವಿಚಿತ್ರ ಹಾಗೂ ಅನಿರೀಕ್ಷಿತ ಘಟನೆಗಳ ಸರಮಾಲೆ ಎನ್ನಿಸುತ್ತದೆ. ಶಿವಮೊಗ್ಗೆಯಲ್ಲಿದ್ದಾಗ, ಉಚ್ಚನ್ಯಾಯಾಲಯದಲ್ಲಿ ಉನ್ನತ ಅಧಿಕಾರಿಯಾಗಿ ನಿಷ್ಕಳಂಕ ಸೇವೆಸಲ್ಲಿಸುತ್ತಿದ್ದ ನನ್ನ ಆತ್ಮೀಯ ಗೆಳೆಯರ ಮೂರನೇ ಮಗಳ ಮದುವೆ ಮೀರಜ್‌ನಲ್ಲಿ ನಡೆಯುವುದು ನಿಶ್ಚಯವಾಗಿತ್ತು. ದಿನಾಂಕವನ್ನು ಹಲವು ತಿಂಗಳ ಮೊದಲೇ ನಿರ್ಧರಿಸಿದ್ದು, ಆ ಮದುವೆಗೆ ನಾವೆಲ್ಲರೂ ಹೋಗಬೇಕೆಂದು ತೀರ್ಮಾನಿಸಿದ್ದೆವು. ಅದನ್ನು ಆ ಗೆಳೆಯರಿಗೂ ತಿಳಿಸಲಾಗಿತ್ತು. ಉಚ್ಚನ್ಯಾಯಾಲಯದ ಉನ್ನತ ಅಧಿಕಾರಿಗಳೊಬ್ಬರ ಮನೆಯಲ್ಲಿ ಮದುವೆ ನಡೆಯುತ್ತದೆಂದರೆ, ಆ ಸಂತಸದ ವಿಷಯವು ಅಲ್ಲಿನ ನ್ಯಾಯಮೂರ್ತಿಗಳು, ಸಿಬ್ಬಂದಿಯವರು, ಹತ್ತಿರದ ಬಂಧು-ಮಿತ್ರರು ಮೊದಲಾದವರಿಗೆ ಸಾಕಷ್ಟು ಮುಂಚೆಯೇ ತಿಳಿದಿರುವುದು ಸ್ವಾಭಾವಿಕ. ನನ್ನ ಮತ್ತು ಆ ಗೆಳೆಯರ ಸ್ನೇಹ ಎಷ್ಟು ಗಾಢವಾಗಿದ್ದಿತೆಂಬುದನ್ನು ಚೆನ್ನಾಗಿ ತಿಳಿದಂತಹವರು ನಮ್ಮ ಜಿಲ್ಲೆಗೆ ಸಂಬಂಧಿಸಿದ

ಆಡಳಿತಾತ್ಮಕ ನ್ಯಾಯಮೂರ್ತಿಗಳು. ನಾವೆಲ್ಲರೂ ಇನ್ನೇನು ಮೀರಜ್‌ಗೆ ಹೋಗಲು ರೈಲಿನಲ್ಲಿ ಸೀಟುಗಳನ್ನು ಕಾದಿರಿಸಬೇಕೆಂದಿರುವಾಗಲೇ ಆಡಳಿತಾತ್ಮಕ ನ್ಯಾಯಮೂರ್ತಿಗಳು ಶಿವಮೊಗ್ಗಕ್ಕೆ ಇನ್‌ಸ್ಪೆಕ್ಷನ್‌ಗೆ ಬರುತ್ತಾರೆಂಬ ಸುದ್ದಿ ಹೊತ್ತ ಉಚ್ಚನ್ಯಾಯಾಲಯದ ಅನಿರೀಕ್ಷಿತ ಪತ್ರವು ಬಂದು ನಮ್ಮೆಲ್ಲರ ಮನಸ್ಸಿಗೆ ತುಂಬಾ ಬೇಸರ ತಂದಿತು.

ಈ ಪತ್ರದ ವಿಷಯ ಅರಿತ ನಮ್ಮ ಗೆಳೆಯರು, ನಾವು ಅವರ ಮಗಳ ಮದುವೆಗೆ ಬರಲಾಗದ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡರಲ್ಲದೆ, ಅವರೇ ನನಗೆ ಸಮಾಧಾನ ಪಡಿಸುವಂತಾದರು. ನಾವೊಂದು ಬಗೆದರೆ ದೈವವೊಂದು ಬಗೆಯಿತಲ್ಲ ಎಂದುಕೊಂಡು ಸುಮ್ಮನಿರಬೇಕಾಯಿತು. ಈ ಮದುವೆಯ ವೇಳೆಗೇ ಆ ನ್ಯಾಯಮೂರ್ತಿಗಳು ಶಿವಮೊಗ್ಗಕ್ಕೆ ಇನ್‌ಸ್ಪೆಕ್ಷನ್‌ಗಾಗಿ ಭೇಟಿ ನೀಡಿದರು. ಎರಡುದಿನಗಳ ನಂತರ, ವಾಪಾಸಾಗುವ ಸಮಯದಲ್ಲಿ, "ಈ ನಮ್ಮ ಭೇಟಿಯಿಂದ ನಿಮ್ಮ close friendನ ಮಗಳ ಮದುವೆಗೆ ಹೋಗಲಿಕ್ಕೆ ಆಗಲಿಲ್ಲವಲ್ಲ" ಎಂದು ಉದ್ಗರಿಸಿದಾಗ, ಅವರ ಹೃದಯವೈಶಾಲ್ಯತೆಯ ಅರಿವಾಯಿತು!

**ತೀರ್ಥಹಳ್ಳಿಯಲ್ಲಿ**

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯು ಮಲೆನಾಡಿನ ಅಂಚಿನಲ್ಲಿರುವ ತಾಲ್ಲೂಕು. ಅದು ಪಶ್ಚಿಮಘಟ್ಟಗಳಿಗೆ ದಾರಿಯಂತಿದ್ದು, ಪೌರಾಣಿಕ, ಐತಿಹಾಸಿಕ ಹಿನ್ನೆಲೆಯುಳ್ಳ ಪ್ರದೇಶ. ಆಧುನಿಕ ವಿಚಾರ, ಕಲೆ, ವಿದ್ಯೆ, ಸಾಹಿತ್ಯ, ರಾಜಕೀಯ ಮತ್ತು ಇತರೆ ಕ್ಷೇತ್ರಗಳಲ್ಲಿ ನಾವು ಹೆಮ್ಮೆಪಡುವಷ್ಟು ಸಾಧನೆಮಾಡಿದ ಕೀರ್ತಿ ಅದರದು. ರಾಷ್ಟ್ರಕವಿ, ಜ್ಞಾನಪೀಠ ಪುರಸ್ಕೃತ ಕುವೆಂಪು, ಜ್ಞಾನಪೀಠಪುರಸ್ಕೃತ ಡಾ.ಯು.ಆರ್.ಅನಂತಮೂರ್ತಿ, ನ್ಯಾಯಮೂರ್ತಿ ಎಂ. ರಾಮಜೋಯಿಸ, ನ್ಯಾಯಮೂರ್ತಿ ಎನ್.ಡಿ.ವೆಂಕಟೇಶ್, ರಾಜ್ಯದ ಮುಖ್ಯಮಂತ್ರಿಯಾಗಿದ್ದ ಅಪರೂಪದ ಸರಳ ಸಜ್ಜನ ರಾಜಕಾರಣಿ ಕಡಿದಾಳ್ ಮಂಜಪ್ಪ-ಹೀಗೆ ಹಲವಾರು ಮಹನೀಯರ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಇಷ್ಟು ಸಾಕು, ಆ ಪ್ರದೇಶದ ಹಿರಿಮೆಯನ್ನು ಸಾರಲು.

ಇಂತಹ ಪ್ರದೇಶದ ಕೇಂದ್ರಬಿಂದುವಾದ ತೀರ್ಥಹಳ್ಳಿಯಲ್ಲಿ ವರ್ಷಗಳ ಹಿಂದೆಯೇ ನ್ಯಾಯಾಲಯದ ಕಟ್ಟಡ ಪೂರ್ಣಗೊಂಡಿದ್ದರೂ ಕಳಪೆ ಕೆಲಸದ ಪರಿಣಾಮವಾಗಿ ಅದು ಉಪಯೋಗಕ್ಕೆ ಬಂದಿರಲಿಲ್ಲ. ಮಳೆ ಬಂದಾಗ ಸೋರುತ್ತಿತ್ತು. ಆದರೆ ಬಳಕೆಗೆ ಕೆಲವೊಂದು ಅವಶ್ಯಕ ಅನುಕೂಲಗಳು ಇಲ್ಲದೆ, ಅದರ ಸ್ವಾಧೀನದ ಮಾತು ದೂರವೇ ಉಳಿದಿತ್ತು. ನ್ಯಾಯಾಲಯವು ಅಲ್ಲಿನ ಹಳೆ ಪುರಸಭೆಯ ಅತಿ ಚಿಕ್ಕ ಕಛೇರಿಯ ಕಟ್ಟಡದಲ್ಲಿ ಉಸಿರು ಕಟ್ಟುವಂತಹ ವಾತಾವರಣದಲ್ಲಿ ಕೆಲಸ ನಿರ್ವಹಿಸುತ್ತಿದ್ದಿತು. ಇದನ್ನು ಗಮನಿಸಿ, ಅಲ್ಲಿನ ಸಹೃದಯ ವಕೀಲರ ಜೊತೆ ಮಾತನಾಡಿ, ನಿರುಪಯೋಗಿಯಾಗಿ ಹಾಳುಬೀಳುತ್ತಿದ್ದ ಹೊಸ ಕಟ್ಟಡವನ್ನು ಸರಿಪಡಿಸಿ ಸ್ವಾಧೀನಕ್ಕೆ ತೆಗೆದುಕೊಳ್ಳಲು ಮತ್ತು ಅದರಲ್ಲಿ ನ್ಯಾಯಾಲಯ ಕಾರ್ಯನಿರ್ವಹಿಸುವಂತೆ ಮಾಡಲು ಚಿಂತನೆ ಪ್ರಾರಂಭವಾಯಿತು.

ನಮ್ಮ ಯೋಜನೆಯನ್ನು ಕಾರ್ಯಗತ ಮಾಡಲು ಕೈಜೋಡಿಸಿ ಸಹಕರಿಸಿದವರು ಜಿಲ್ಲೆಯ ಲೋಕೋಪಯೋಗಿ ಇಲಾಖೆಯ ಅಧೀಕ್ಷಕ ಇಂಜಿನಿಯರ್ ಶ್ರೀ ಕೃಷ್ಣಪ್ಪನವರು. ನಾವು ಸೂಚಿಸಿದ ಕಟ್ಟಡದ ಸೂಕ್ತ ಬದಲಾವಣೆಗಳು ಹಾಗೂ ರಿಪೇರಿಗಳ ಬಗೆಗೆ ಅವರು ಮಾಡಿದ ಅಂದಾಜು ಪಟ್ಟಿಯನ್ನು ಘನ ಉಚ್ಚನ್ಯಾಯಾಲಯ ಒಪ್ಪಿಕೊಂಡಿತು. ಲೋಕೋಪಯೋಗಿ ಇಲಾಖೆಯ ಸ್ಥಳೀಯ ಸಹಾಯಕ ಇಂಜಿನಿಯರ್ ಶ್ರೀ ಚಿದಾನಂದ ಅವರ ಪೂರ್ಣ ಸಹಕಾರದಿಂದ ಉದ್ದೇಶಿತ ಕೆಲಸ ಪೂರ್ಣಗೊಂಡು ಕಟ್ಟಡವನ್ನು ಸ್ವಾಧೀನಕ್ಕೂ ತೆಗೆದುಕೊಂಡದ್ದಾಯಿತು. ಇನ್ನು ಮುಂದಿನದು ನ್ಯಾಯಾಲಯ ಕಟ್ಟಡದ ಉದ್ಘಾಟನೆಯ ಕಾರ್ಯ.

ಘನ ಉಚ್ಚನ್ಯಾಯಾಲಯದ ಶಿಷ್ಟಾಚಾರದ ಪ್ರಕಾರ ಕೆಲವಾರು ವ್ಯಕ್ತಿಗಳಿಗೆ ಮಾತ್ರ ಸಮಾರಂಭದ ವೇದಿಕೆಯ ಮೇಲೆ ಸ್ಥಳಾವಕಾಶ ಕಲ್ಪಿಸಬಹುದಿತ್ತು. ಅದರಂತೆ, ಸಮಾರಂಭದ ದಿನಾಂಕ ನಿರ್ಧಾರವಾಗಿ, ಆಮಂತ್ರಣಪತ್ರಿಕೆಯೂ ಅಚ್ಚಾಗಿ ಸಂಬಂಧಿಸಿದವರಿಗೆ ವಿತರಣೆಯೂ ಆಯಿತು. ಆಗ ಸ್ಥಳೀಯ ಶಾಸಕರು ತಮಗೆ ವೇದಿಕೆಯ ಮೇಲೆ ಸ್ಥಳಾವಕಾಶ ಇಲ್ಲದೇ ಹೋದ ಬಗೆಗೆ ಆಕ್ರೋಶಗೊಂಡದ್ದರಿಂದ ಅದು ವಿಧಾನ ಸಭೆಯಲ್ಲಿಯೂ ಮಾರ್ದನಿಸಿತು. ಸುದ್ದಿಮಾಧ್ಯಮಗಳಲ್ಲಿ ಪ್ರಚಾರಪಡೆದು ಅದು ಸ್ವಲ್ಪ ಆತಂಕಕ್ಕೆ ಕಾರಣವಾಯಿತು. ಯಾವುದೇ ಸಂದರ್ಭದಲ್ಲೂ ತನ್ನ ಶಿಷ್ಟಾಚಾರವನ್ನು ಕೈಬಿಡುವುದು ಬೇಡ ಎಂಬ ನಿಲುವು ನ್ಯಾಯಾಂಗದ್ದು. ಉಚ್ಚನ್ಯಾಯಾಲಯದ ಅಧಿಕೃತ ವಕ್ತಾರ ರಿಜಿಸ್ಟ್ರಾರ್ ಜನರಲ್ ಶ್ರೀ ಅಜಿತ್ ಸಿ.ಕಬ್ಬಿನ್ ಅವರಿಂದ ನಿಗದಿತ ಸಮಾರಂಭದ ಯಶಸ್ಸಿಗೆ ಬೇಕಾದ ಬೆಂಬಲ ಹಾಗೂ ಸಹಕಾರದ ಭರವಸೆ ದೊರೆಯಿತು. ಸ್ಥಳೀಯ ವಕೀಲರೆಲ್ಲರಿಂದಲೂ ಅಗತ್ಯ ಸಹಕಾರ-ಸಹಾಯ ಒದಗಿತು. ಇದಲ್ಲದೆ, ಜಿಲ್ಲಾಧಿಕಾರಿ ಶ್ರೀ ಪಿ.ಗಣೇಶನ್, ಜಿಲ್ಲಾ ಪೊಲೀಸ್ ಸೂಪರಿಂಟೆಂಡೆಂಟ್ ಶ್ರೀ ಎನ್.ಶಿವಕುಮಾರ್, ಸ್ಥಳೀಯ ನ್ಯಾಯಾಧೀಶ ಶ್ರೀ ಚೆನ್ನಕೇಶವ, ನ್ಯಾಯಾಲಯ ಸಿಬ್ಬಂದಿ ಹಾಗೂ ಸಾರ್ವಜನಿಕರ ಬೆಂಬಲವೂ ವ್ಯಕ್ತವಾಯಿತು. ಈ ಉದ್ಘಾಟನಾ ಸಮಾರಂಭವನ್ನು ಯಾವುದೇ ಪ್ರತಿಭಟನೆ-ಸವಾಲನ್ನು ಎದುರಿಸಿ, ಹೊಸ ಕಟ್ಟಡದಲ್ಲಿ ನ್ಯಾಯಾಲಯವು ಕಾರ್ಯಾರಂಭ ಮಾಡಬೇಕೆಂಬ ದೃಢನಿಶ್ಚಯದಿಂದ ಆ ದೆಸೆಯಲ್ಲಿ ಮುಂದುವರಿಯಲಾಯಿತು. ಸಂಬಂಧಿಸಿದವರೆಲ್ಲರಿಂದ ನಿರೀಕ್ಷಿತ ಬೆಂಬಲ, ಸಹಕಾರ ಹಾಗೂ ಸಹಾಯ ದೊರೆತರೂ ನಗರದ ಒಂದು ಗುಂಪಿನವರಿಂದ ಪ್ರತಿಭಟನಾ ಮೆರವಣಿಗೆ ಹಾಗೂ ಸಭೆಗಳು ಏರ್ಪಟ್ಟವು. ಇವುಗಳ ನಡುವೆಯೂ ನ್ಯಾಯಾಲಯದ ಹೊಸ ಕಟ್ಟಡದ ಉದ್ಘಾಟನಾ ಸಮಾರಂಭವು ನ್ಯಾಯಮೂರ್ತಿ ಬಿ.ಪದ್ಮರಾಜ್ ಮತ್ತು ನ್ಯಾಯಮೂರ್ತಿ ಮಹಮದ್ ಅನ್ವರ್ ಅವರ ಸಮ್ಮುಖದಲ್ಲಿ ಯಶಸ್ವಿಯಾಗಿ ಈಡೇರಿತು. ಅಂದಿನಿಂದ ಆ ಹೊಸ ಕಟ್ಟಡದಲ್ಲಿ ನ್ಯಾಯಾಲಯದ ಕಾರ್ಯಕಲಾಪಗಳು ಅವ್ಯಾಹತವಾಗಿ ನಡೆದುಬರುತ್ತಿರುವುದು ಕಂಡಂತೆಯೇ ಇದೆ. ಆ ನ್ಯಾಯಾಲಯದ ಘಟನೆ ಈಗ ಇತಿಹಾಸದ ಪುಟವನ್ನು ಸೇರಿದೆ. ಅದು ನ್ಯಾಯಾಂಗದ ಘನತೆ, ಗೌರವಗಳನ್ನು ಎತ್ತಿಹಿಡಿದುದು ಈಗ ಇತಿಹಾಸ.

ಅಲ್ಲಿನ ಅನೇಕ ವಕೀಲರು ಅನೇಕ ರಾಜಕೀಯ ಪಕ್ಷಗಳ ಸಿದ್ಧಾಂತಗಳಲ್ಲಿ ನಂಬಿಕೆಯಿಟ್ಟವರಾದರೂ ನ್ಯಾಯಾಲಯದ ವಿಷಯ ಬಂದಾಗ ಅವರವರ ರಾಜಕೀಯ ವಿಷಯ ಹಾಗೂ ವೈಯಕ್ತಿಕ ಭಿನ್ನಾಭಿಪ್ರಾಯಗಳನ್ನು ಬದಿಗೊತ್ತಿ ಎಲ್ಲರೂ ಏಕ ಮನಸ್ಸಿನಿಂದ ಕಾಯ ವಾಚಾ ಮನಸಾ ದುಡಿಯುತ್ತಾರೆಂಬುದು ಸರ್ವವಿದಿತ. ಅಲ್ಲಿನ ವಕೀಲರ ಸಂಘದ ಅಧ್ಯಕ್ಷರಾಗಿದ್ದ ಶ್ರೀ ಜಿ.ಕೆ.ಗೋಪಾಲರಾವ್ ಅವರ ನೇತೃತ್ವದಲ್ಲಿ ಎಲ್ಲಾ ವಕೀಲರು ಅದರ ಯಶಸ್ಸಿಗೆ ದುಡಿದು, ಉದ್ದೇಶಿತ ಕಾರ್ಯದ ಸಫಲತೆ-ಸಾರ್ಥಕತೆಗಳಿಗೆ ಸಾಕ್ಷಿಯಾದರು. ಒಗ್ಗಟ್ಟಿನಲ್ಲಿ ಬಲವಿದೆ ಎಂಬುದನ್ನು ಸಾಕಾರಗೊಳಿಸಿದುದು ಅವರೆಲ್ಲರ ಒಮ್ಮನಸ್ಸಿನ ದ್ಯೋತಕವಾಗಿದೆ.

* * *

ಒಟ್ಟಿನಲ್ಲಿ, ಮೂರು ದಶಕಗಳಿಗೂ ಹೆಚ್ಚುಕಾಲ ಆತ್ಮಸಾಕ್ಷಿಯಾಗಿ ನ್ಯಾಯ-ಧರ್ಮಗಳ ನೆಲೆಯಲ್ಲಿ, ಸತ್ಯಶೋಧನೆಯಲ್ಲಿ ಕರ್ತವ್ಯಪ್ರಜ್ಞೆಯಿಂದ, ಸಮಾಜಮುಖಿಯಾಗಿ ನಿಜನ್ಯಾಯ ವಿತರಣೆಗಾಗಿ ಅವಿರತವಾಗಿ ಶ್ರಮಿಸುವಂತಾದುದು; ಅದರಲ್ಲಿ ಸಂತೃಪ್ತಿಯನ್ನೂ ಯಶಸ್ಸನ್ನೂ ಪಡೆದು ಸಮಾಜಕ್ಕೆ ಸಾರ್ಥಕ ಸೇವೆ ಸಲ್ಲಿಸುವಂತಾದುದು; ನಮ್ಮ ಮಿತಿಯಲ್ಲೆ ವ್ಯವಸ್ಥಿತವಾಗಿ ಬದುಕಲು ಕುಟುಂಬವರ್ಗದವರು ಆತ್ಮೀಯವಾಗಿ ಸ್ಪಂದಿಸುವಂತಾದುದು; ನಿಷ್ಕಲ್ಮಶ ಪ್ರೀತಿ-ಗೌರವ, ಉತ್ತಮ ಆಹಾರ, ಸದಭಿರುಚಿಯ ಹವ್ಯಾಸಗಳೊಡನೆ ನಾವೆಲ್ಲರೂ ನೆಮ್ಮದಿಯಿಂದ ಬದುಕಲು ಅವಕಾಶವಾದುದು ನನ್ನ ಸೌಭಾಗ್ಯವೇ ಸರಿ. ಸಮಾಜದ ಎಲ್ಲ ಸಹೃದಯರ ಸದಾಶಯ, ನೆರವು, ಸಹಕಾರಗಳೇ ಇದಕ್ಕೆ ಕಾರಣವೆನ್ನಬೇಕು. ಸೇವೆ-ಸತ್ಕಾರ್ಯಗಳ ಮೂಲಕ ಈ ಸಮಾಜದ ಋಣವನ್ನು ಸ್ವಲ್ಪ ಮಟ್ಟಿಗಾದರೂ ತೀರಿಸಿರುವೆನೆಂಬ ಧನ್ಯತಾಭಾವ ನನ್ನಲ್ಲಿದೆ. ನನ್ನ ಜೀವನದುದ್ದಕ್ಕೂ ಸಾರ್ಥಕ ಕ್ಷಣಗಳೇ ತುಂಬಿರುವುದರಿಂದ, ಅವುಗಳನ್ನು ಮೆಲುಕು ಹಾಕುತ್ತಾ, ಉತ್ತಮ ಸಂಗೀತವನ್ನು ಆಸ್ವಾದಿಸುತ್ತಾ, ಕಿಂಚಿತ್ತಾದರೂ ಸಮಾಜಸೇವೆ ಕೈಗೊಳ್ಳುತ್ತಾ, ಸಹೃದಯರೊಡನೆ ಒಡನಾಡುತ್ತಾ, ಭವಿಷ್ಯದ ಬದುಕನ್ನು ನಗುನಗುತ್ತಲೇ ಸಾಗಿಸಲು ಅನುವು ಮಾಡಿಕೊಡುವಂತಾಗಲು ಆ ದಯಾಮಯನ ಕೃಪೆ ಇರಲಿ. ಬಾಲ್ಯದಿಂದಲೂ ನನ್ನ ಜೀವನಯಾತ್ರೆಯಲ್ಲಿ ಆನಂದದ ಹಾಗೂ ಸಾರ್ಥಕ ಕ್ಷಣಗಳೇ ಹೆಚ್ಚಾಗಿ ತುಂಬಿವೆ. ಈ ಸುಯೋಗ ಬದುಕಿನ ಕೊನೆಯವರೆಗೂ ಸಾಗಿ ಜೀವನ ಅರ್ಥಪೂರ್ಣವಾಗಿರಲೆಂಬ ಹೆಬ್ಬಯಕೆ ನನ್ನದು.

# ಜಿ.ಹೆಚ್.ಪ್ರಸಾದ್ : ವೈಯಕ್ತಿಕ ವಿವರ

ಜನನ : ೨೧-೧೨-೧೯೪೧

ಸ್ಥಳ : ದಾವಣಗೆರೆ

**ತಂದೆ-ತಾಯಿಗಳು :** ಶ್ರೀ ಗಿಡ್ಡಪ್ಪನವರ ಹಾಲಪ್ಪ ಮತ್ತು ಶ್ರೀಮತಿ ಹನುಮಮ್ಮ

**ಆಶ್ರಯ :** ದಾವಣಗೆರೆಯ ನಾಯಕರ ವಿದ್ಯಾರ್ಥಿನಿಲಯದ ಸ್ಥಾಪಕ ಕಾರ್ಯದರ್ಶಿ, ನಂತರ ವಿದ್ಯಾರ್ಥಿನಿಲಯದ ಅಧ್ಯಕ್ಷರು, ಸಮಾಜಚಿಂತಕರು, ಕಾರ್ಯಕರ್ತರು ಹಾಗೂ ಆಧ್ಯಾತ್ಮಿಯೂ ಆಗಿದ್ದ ಇವರ ದೊಡ್ಡಪ್ಪನವರಾದ ಶ್ರೀ ಗಿಡ್ಡಪ್ಪನವರ ದುರ್ಗಪ್ಪನವರ ಆಶ್ರಯ.

**ವಿದ್ಯಾಭ್ಯಾಸ**

ಬಿ.ಎ. - ದಾವಣಗೆರೆ ಮತ್ತು ಮೈಸೂರು (೧೯೬೪)

ಎಲ್‌ಎಲ್.ಬಿ.- ಆರ್.ಎಲ್.ಲಾ ಕಾಲೇಜ್, ಬೆಳಗಾವಿ (೧೯೬೬)

ರಾಜ್ಯಮಟ್ಟದ ಬಾರ್ ಕೌನ್ಸಿಲ್ ಪರೀಕ್ಷೆಯಲ್ಲಿ ತೃತೀಯ ರ್‍ಯಾಂಕ್ ಗಳಿಸಿ ತೇರ್ಗಡೆ.

೧೯೬೭ರಲ್ಲಿ ಶಿವಮೊಗ್ಗದಲ್ಲಿ ಅಪ್ರೆಂಟಿಸ್‌ಶಿಪ್.

೧೯೬೭ರಲ್ಲಿ ಶಿವಮೊಗ್ಗದ ಪ್ರಸಿದ್ಧ ವಕೀಲರಾದ ಶ್ರೀ ಟಿ.ವೆಂಕಟರಾಮಾಶಾಸ್ತ್ರಿಯವರ ಕಛೇರಿಯಲ್ಲಿ ಅಪ್ರೆಂಟಿಸ್‌ಶಿಪ್

**೧೯೬೭ ರಿಂದ ೧೯೭೪ : ದಾವಣಗೆರೆಯಲ್ಲಿ ವಕೀಲಿವೃತ್ತಿ**

ದಾವಣಗೆರೆ ನಗರಸಭೆಯ ಕಾನೂನು ಸಲಹೆಗಾರರಾಗಿ ಸೇವೆ.

ಚಿತ್ರದುರ್ಗ ಜಿಲ್ಲಾ ಸಹಕಾರಸಂಘಗಳ ಆರ್ಬಿಟ್ರೇಟರ್ ಆಗಿ ಸುಮಾರು ನಾಲ್ಕು ವರ್ಷಗಳ ಸೇವೆ.

೧೯೬೯ರಲ್ಲಿ ಸ್ವಾತಂತ್ರ್ಯ ಹೋರಾಟಗಾರ ಶ್ರೀ ಸಿ.ಮಲೆಸಿದ್ದಪ್ಪ ಅವರ ಮಗಳು ಶ್ರೀಮತಿ ಪುಷ್ಪಾ ಇವರೊಂದಿಗೆ ವಿವಾಹ.

ಡಾ.ಜಿ.ಪಿ.ರಾಮನಾಥ, ಶ್ರೀಮತಿ ವೇದ ಮತ್ತು ಶ್ರೀಮತಿ ಪಲ್ಲವಿ ಮಕ್ಕಳು; ಎಲ್ಲರೂ ಪದವೀಧರರು; ಎಲ್ಲರದೂ ವಿವಾಹವಾಗಿರುತ್ತದೆ.

೧೯೭೨ರಲ್ಲಿ ಮುನ್ಸಿಫ್‌ಹುದ್ದೆಗೆ ಆಯ್ಕೆ. (೧೯೭೨ರಲ್ಲಿ ಹಳೆಯ ಮೈಸೂರು ವಿಭಾಗದ ನಾಯಕಜನಾಂಗದಿಂದ ನ್ಯಾಯಾಂಗಸೇವೆಗೆ ಆಯ್ಕೆಯಾದ ಪ್ರಥಮ ವ್ಯಕ್ತಿ).

೧೯೭೩ರಲ್ಲಿ ದಾವಣಗೆರೆಯಲ್ಲಿ ನಡೆದ ಎರಡನೇ ಅಖಿಲ ಕರ್ನಾಟಕ ನಾಯಕಜನಾಂಗದ ಮಹಾಸಮ್ಮೇಳನದಲ್ಲಿ ಗಣನೀಯ ಪಾತ್ರ. ಆ ಸಮ್ಮೇಳನದ ಸ್ಮರಣಸಂಚಿಕೆಯ ಸಂಪಾದಕೀಯ ಮಂಡಳಿಯ ಅಧ್ಯಕ್ಷರು.

**೧೯೭೪-೧೯೮೦ರ ವರೆಗೆ-**

ದೇವದುರ್ಗ, ಪಾವಗಡ, ಹೊಸಪೇಟೆ, ಬಾದಾಮಿ ಹಾಗೂ ತುಮಕೂರುಗಳಲ್ಲಿ ಮುನ್ಸಿಫ್ ಮ್ಯಾಜಿಸ್ಟ್ರೇಟ್.

ಎಂಭತ್ತರ ದಶಕದಲ್ಲಿ ಯೋಗಗುರು ಶ್ರೀ ಹೆಚ್.ಎಫ್.ನಾಯಕ್ ಅವರಿಂದ ಯೋಗಾಭ್ಯಾಸದ ತರಬೇತಿ.

೧೯೮೦ ರಿಂದ ೧೯೮೪ - ರಾಜ್ಯ ಕಾನೂನು ಇಲಾಖೆಯಲ್ಲಿ ಅಧೀನಕಾರ್ಯದರ್ಶಿ.

೧೯೮೪ ರಿಂದ ೧೯೮೬ರ ವರೆಗೆ ಹಾವೇರಿಯಲ್ಲಿ ಮುನ್ಸಿಫ್ ಮ್ಯಾಜಿಸ್ಟ್ರೇಟ್.

**೧೯೮೬ರಲ್ಲಿ ಸಿವಿಲ್ ಜಡ್ಜ್ ಆಗಿ ಬಡ್ತಿ. (೧೯೮೬-೧೯೯೩ರ ವರೆಗೆ).**

ಬಿಜಾಪುರ, ಮೈಸೂರು ಹಾಗೂ ಬೆಂಗಳೂರುಗಳಲ್ಲಿ ಸಿವಿಲ್ ಜಡ್ಜ್ ಮತ್ತು ಸಿ.ಜೆ.ಎಮ್.

೧೯೯೩ ರಿಂದ ೧೯೯೫ - ರಾಜ್ಯ ಕಾನೂನು ಇಲಾಖೆಯಲ್ಲಿ ಉಪಕಾರ್ಯದರ್ಶಿ.

**೧೯೯೫ರಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಾಗಿ ಬಡ್ತಿ.**

ಬೆಂಗಳೂರು, ಮಂಡ್ಯ ಮತ್ತು ಶಿವಮೊಗ್ಗಗಳಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶ. ಶಿವಮೊಗ್ಗ ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಅಧ್ಯಕ್ಷರಾಗಿದ್ದ ಅವಧಿಯಲ್ಲಿ (೧೯೯೯-೨೦೦೧) ಅತಿ ಹೆಚ್ಚಿನ ವ್ಯಾಜ್ಯಗಳನ್ನು ಲೋಕ ಅದಾಲತ್ ಅಡಿಯಲ್ಲಿ ಇತ್ಯರ್ಥವಾಗುವಂತೆ ಮಾಡಿ ರಾಜ್ಯದಲ್ಲಿಯೇ ಶಿವಮೊಗ್ಗ ಜಿಲ್ಲೆಗೆ ಎರಡುಸಾರಿ ಪ್ರಥಮಸ್ಥಾನ ದೊರಕಿಸಿಕೊಟ್ಟಿದ್ದು ಒಂದು ಸಾಧನೆ. ಇದು ಇಂದಿನವರೆವಿಗೂ ಒಂದು ದಾಖಲೆಯಾಗಿ ಉಳಿದಿದೆ.

೧೯೯೬-೯೭ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ನ್ಯಾಯಾಂಗ ಅಧಿಕಾರಿಗಳ ಸಂಘದ ಉಪಾಧ್ಯಕ್ಷ.

೨೦೦೧ನೇ ಡಿಸೆಂಬರ್ ತಿಂಗಳಿನಲ್ಲಿ ಶಿವಮೊಗ್ಗದ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಹುದ್ದೆಯಿಂದ ನಿವೃತ್ತರಾಗಿ ಚಿಕ್ಕಮಗಳೂರಿನ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಅಧ್ಯಕ್ಷರಾಗಿ ಮುಂದುವರಿಕೆ. ೨೦೦೬ ಡಿಸೆಂಬರ್ ಸೇವಾವಧಿ ಪೂರೈಕೆ.

**ಹವ್ಯಾಸ :** ಸಂಗೀತ ಕೇಳುವುದು, ಪುಸ್ತಕ ಓದುವುದು, ಪ್ರವಚನ ಕೇಳುವುದು, ಪ್ರವಾಸ ಕೈಗೊಳ್ಳುವುದು, ಸಾಮಾಜಿಕ-ಸಾಂಸ್ಕೃತಿಕ ಸೇವಾಸಂಸ್ಥೆಗಳೊಡನೆ ಒಡನಾಟ ಇತ್ಯಾದಿ.



# ಸಂಪಾದಕರ ಪರಿಚಯ

**ಪ್ರೊ. ಲಕ್ಷ್ಮಣ್ ತೆಲಗಾವಿ :** ೧೯೪೭ರಲ್ಲಿ ಚಿತ್ರದುರ್ಗದಲ್ಲಿ ಜನನ. ತಂದೆ-ಡಿ.ಪರಸಪ್ಪ ತೆಲಗಾವಿ, ತಾಯಿ-ಚಂದ್ರಮ್ಮ. ಚಿತ್ರದುರ್ಗದಲ್ಲೆ ಪ್ರಾಥಮಿಕ ಶಿಕ್ಷಣ. ೧೯೭೦ರಲ್ಲಿ ಚಿತ್ರದುರ್ಗ ಸರ್ಕಾರಿ ಕಾಲೇಜಿನಿಂದ ಬಿ.ಎ. ಪದವಿ. ೧೯೭೨ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಚರಿತ್ರೆಶಾಸ್ತ್ರದಲ್ಲಿ ಎಂ.ಎ. ಪದವಿ. ೧೯೭೨ ರಿಂದ ೧೯೭೫ : ಮಾನಸಗಂಗೋತ್ರಿಯಲ್ಲಿ ಸಂಶೋಧಕ; ಪ್ರೊ.ಬಿ.ಷೇಕ್‌ಅಲಿ ಅವರ ಮಾರ್ಗದರ್ಶನದಲ್ಲಿ 'ಚಿತ್ರದುರ್ಗ ನಾಯಕ ಅರಸರು' ವಿಷಯ ಕುರಿತು ಸಂಶೋಧನೆ. ೧೯೭೫ ರಿಂದ ೧೯೭೯ : ಮೈಸೂರು ಮಹಾರಾಜ ಕಾಲೇಜಿನಲ್ಲಿ ಚರಿತ್ರೆ ಅಧ್ಯಾಪಕ; ಮಾನಸಗಂಗೋತ್ರಿಯಲ್ಲಿ ಎಂ.ಎ. ವಿದ್ಯಾರ್ಥಿಗಳಿಗೂ ಬೋಧಕ. ೧೯೭೯ ರಿಂದ ೧೯೮೬ : ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿ; ೧೯೯೦ ರಿಂದ ೧೯೯೩ : ಕನ್ನಡ ಶಾಸನ ತರಗತಿಗಳ ಉಪನ್ಯಾಸಕ. ೧೯೮೬ ರಿಂದ ೧೯೯೩ : ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯಲ್ಲಿ ಸಂಪಾದಕ. ೧೯೯೩ : ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಚರಿತ್ರೆ ವಿಭಾಗದ ರೀಡರ್ ಮತ್ತು ಮುಖ್ಯಸ್ಥ; ಆ ನಂತರ ಪ್ರಾಧ್ಯಾಪಕ ಹಾಗೂ ಸಮಾಜವಿಜ್ಞಾನಗಳ ನಿಕಾಯದ ಡೀನ್. ೨೦೦೬ ಡಿಸೆಂಬರ್‌ನಲ್ಲಿ ಪ್ರಾಧ್ಯಾಪಕ ಹುದ್ದೆಯಿಂದ ನಿವೃತ್ತಿ. ೨೦೦೬-೨೦೦೭ : ಸಂದರ್ಶಕ ಪ್ರಾಧ್ಯಾಪಕ.

ಕಳೆದ ೩೫ ವರ್ಷಗಳಿಂದ ಸ್ಥಳೀಯ ಚರಿತ್ರೆಕ್ಷೇತ್ರದಲ್ಲಿ ದುಡಿಮೆ. ಚಿತ್ರದುರ್ಗ ಸಂಶೋಧನ ತಂಡದ ಸಂಘಟನೆ. ಚಿತ್ರದುರ್ಗ ಜಿಲ್ಲೆಯೇ ಅಧ್ಯಯನಕ್ಷೇತ್ರ. ಮುಖ್ಯವಾಗಿ ಚಿತ್ರದುರ್ಗ ನಾಯಕ ಅರಸರನ್ನು ಕುರಿತು ಸಂಶೋಧನೆ. ಕರ್ನಾಟಕದ ಸ್ಥಳೀಯ ಸಂಸ್ಥಾನಿಕರ ಬಗೆಗೂ ವ್ಯಾಪಕ ಅಧ್ಯಯನ. ಚಿತ್ರದುರ್ಗ ಜಿಲ್ಲೆಯ ಬಯಲುಬಂಡೆ ರೇಖಾಕೃತಿಗಳು ಹಾಗೂ ಗವಿವರ್ಣಚಿತ್ರಗಳು ಕುರಿತು ವಿಶೇಷ ಅಧ್ಯಯನ. ಸಾಕಷ್ಟು ಸಂಖ್ಯೆಯಲ್ಲಿ ಶಾಸನ, ದಾಖಲೆ, ನಾಣ್ಯ, ಪ್ರಾಕ್ಚಾರಿತ್ರಿಕ ನಿವೇಶನ ಇತ್ಯಾದಿಗಳ ಶೋಧ ಹಾಗೂ ಪ್ರಕಟಣೆ. ದಾಖಲೆಯ ರೂಪದಲ್ಲಿ ೧೫,೦೦೦ಕ್ಕೂ ಹೆಚ್ಚು ಛಾಯಾಚಿತ್ರಗಳ ಸಂಗ್ರಹ. ಚಿತ್ರಕಲ್ಲು ಪ್ರಕಾಶನದ ಸಂಸ್ಥಾಪಕ ಅಧ್ಯಕ್ಷ.

ಸಂಪಾದನ ಕೃತಿಗಳೂ ಸೇರಿದಂತೆ ಈವರೆಗೆ ೧೭ ಗ್ರಂಥಗಳ ಪ್ರಕಟಣೆ; ೨೦೦ಕ್ಕೂ ಹೆಚ್ಚು ಉತ್ಕೃಷ್ಟ ಲೇಖನ/ಸಂಪ್ರಬಂಧಗಳ ರಚನೆ. ೧೯೮೧ ರಿಂದ ೧೯೮೫ : 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'; ೧೯೮೬ ರಿಂದ ೧೯೯೦ : 'ಇತಿಹಾಸ ದರ್ಶನ' ; ೨೦೦೫ ರಿಂದ ೨೦೦೬ : 'ಚರಿತ್ರೆ ಅಧ್ಯಯನ'ಗಳಂಥಾ ಪ್ರತಿಷ್ಠಿತ ನಿಯತಕಾಲಿಕೆಗಳು ಹಾಗೂ ಐದು-ಆರು ಸಂದರ್ಭಸಂಚಿಕೆಗಳ ಸಂಪಾದನೆ. ಚಂದ್ರವಳ್ಳಿ (೧೯೭೬), ಹುಲ್ಲೂರು ಶ್ರೀನಿವಾಸ

ಜೋಯಿಸರ ಐತಿಹಾಸಿಕ ಲೇಖನಗಳು (೧೯೭೬), ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು (೧೯೯೨), ಐತಿಹಾಸಿಕ ಚಿತ್ರದುರ್ಗ (೧೯೮೦), ಹರತಿಸಿರಿ (೧೯೮೭), ಸಂಶೋಧನ (೧೯೯೧), ಸ್ಥಳೀಯ ಚರಿತ್ರೆ : ಅಧ್ಯಯನದ ಸ್ವರೂಪ ಮತ್ತು ತಾತ್ವಿಕತೆ (೨೦೦೪), ಡಾ.ಎಚ್.ಆರ್.ರಘುನಾಥಭಟ್ಟ : ಸ್ಮರಣೆ (೨೦೦೪), ಜೀರ್ಣ ವಿಜಯನಗರಾದರ್ಶಂ (೨೦೦೬) ಮೊದಲಾದವು ಸಂಪಾದಿತ ಕೃತಿಗಳು. ಚಿತ್ರದುರ್ಗ ದರ್ಶಿನಿ (೧೯೮೦), ಜನಪದ ವೀರಸಾಹಿತ್ಯ : ಚಾರಿತ್ರಿಕ ವಿವೇಚನೆ (೧೯೮೭), ಇದು ಚಿತ್ರದುರ್ಗ! (೧೯೯೭, ೧೯೯೯), ಚಿತ್ರದುರ್ಗ : ಲ್ಯಾನ್ ಇನ್‌ಸೈಟ್ (೧೯೯೭), ಬುರುಗು (೧೯೯೯), ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನದ ವ್ಯಾಪಕತೆ ಮತ್ತು ಸಾಧ್ಯತೆ : ಒಂದು ಶತಮಾನ (೨೦೦೪), ಇತಿಹಾಸಕಾರ ಹೆಚ್.ವಿ.ವೀರನಾಯಕ 'ಹರತಿ' (೨೦೦೪, ೨೦೦೮) ಮೊದಲಾದವು ಸ್ವತಂತ್ರ ಕೃತಿಗಳು. 'ಕರ್ನಾಟಕದ ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು' (೧೯೯೯) ಎಂಬುದು ೧೯೧೮ ರಿಂದ ೧೯೯೯ರ ವರೆಗೆ ಕರ್ನಾಟಕದಲ್ಲಿ ನಡೆದ ಹಿಂದುಳಿದ ವರ್ಗಗಳ ಮತ್ತು ದಲಿತ ಹೋರಾಟಗಳನ್ನು ಕುರಿತ ಗಮನಾರ್ಹ ಅಧ್ಯಯನ ಕೃತಿ. 'ಮೌರ್ಯ ಮತ್ತು ಶಾತವಾಹನ ಯುಗ (ಕ್ರಿ.ಪೂ.೩-ಕ್ರಿ.ಶ.೩)' (೨೦೦೪) ಇವರ ಇನ್ನೊಂದು ಮಹತ್ವದ ಕೃತಿ. ಇದು ಕರ್ನಾಟಕದ ಪ್ರಾಚೀನ ಚರಿತ್ರೆ ಮತ್ತು ಸಂಸ್ಕೃತಿಯನ್ನು ಹೊಸ ಆಯಾಮದಲ್ಲಿ ನಿರೂಪಿಸುವಂಥಾದ್ದು.

ರಾಜ್ಯ ಮತ್ತು ರಾಷ್ಟ್ರಮಟ್ಟದ ಹಲವಾರು ವಿಚಾರಸಂಕಿರಣ ಮತ್ತು ಕಮ್ಮಟಗಳಲ್ಲಿ ಪ್ರಬಂಧಗಳ ಮಂಡನೆ ಮತ್ತು ಉಪನ್ಯಾಸ. ಈವರೆಗೆ ಹಲವಾರು ಉನ್ನತ ಸ್ಥಾನ-ಮಾನ-ಗೌರವ-ಪುರಸ್ಕಾರಗಳ ಮನ್ನಣೆ. ೧೯೯೫ : ೪ನೇ ಚಿತ್ರದುರ್ಗ ಜಿಲ್ಲಾ ರಾಜ್ಯೋತ್ಸವ ಸನ್ಮಾನ. ೧೯೯೫ : ಚಿತ್ರದುರ್ಗ ಪುರಸಭೆಯಿಂದ ಪೌರಸನ್ಮಾನ. ೧೯೯೯ : ದೆಹಲಿಯ ಭಾರತೀಯ ದಲಿತ ಸಾಹಿತ್ಯ ಅಕಾಡೆಮಿಯಿಂದ ಡಾ.ಬಿ.ಆರ್.ಅಂಬೇಡ್ಕರ್ ರಾಷ್ಟ್ರೀಯ ಫೆಲೋಷಿಪ್. ೨೦೦೩ : ಶ್ರೀ ಗುರು ರವಿದಾಸ ರತ್ನ ರಾಷ್ಟ್ರೀಯ ಪುರಸ್ಕಾರ. ೨೦೦೫ : ಮಹಾತ್ಮಾ ಜ್ಯೋತಿಬಾ ಫುಲೆ ರಾಷ್ಟ್ರೀಯ ಪುರಸ್ಕಾರ. ೨೦೦೫ : ಪಾಣಿಪತ್-ಹರ್ಯಾಣದ ಜೈಮಿನಿ ಅಕಾಡೆಮಿಯಿಂದ ಸುಭದ್ರಕುಮಾರಿ ಚೌಹಾನ್ ಜನ್ಮಶತಾಬ್ದಿ ರಾಷ್ಟ್ರೀಯ ಪುರಸ್ಕಾರ. ೨೦೦೬ : ಜಿಲ್ಲಾ ಆಡಳಿತದಿಂದ ಚಿತ್ರದುರ್ಗ ಉತ್ಸವ ಸನ್ಮಾನ. ೨೦೦೬ : ಭಾರತೀಯ ದಲಿತ ಸಾಹಿತ್ಯ ಅಕಾಡೆಮಿಯಿಂದ ಪ್ರತಿಷ್ಠಿತ ಡಾ.ಅಂಬೇಡ್ಕರ್ ರಾಷ್ಟ್ರೀಯ ಪ್ರಶಸ್ತಿ. ೧೯೯೯ : ಚಿತ್ರದುರ್ಗದ ಶ್ರೀ ಮುರುಘರಾಜೇಂದ್ರಮಠದಿಂದ 'ಸಂಶೋಧನ ನಿಧಿ' ಹಾಗೂ ೨೦೦೭ : ಹಿರಿಯೂರಿನ ಶ್ರೀ ಏಕನಾಥೇಶ್ವರಿ ಸಂಗೀತ ವಿದ್ಯಾಲಯದಿಂದ 'ಇತಿಹಾಸ ಭೂಷಣ' ಪ್ರಶಸ್ತಿಗಳು.

**ಸರ್ವಾಧ್ಯಕ್ಷತೆ** - ೨೦೦೩ : ವಿಜಯನಗರ ವಿಚಾರಸಂಕಿರಣ, ಹಂಪಿ ಉತ್ಸವ; ೨೦೦೭: ಕರ್ನಾಟಕ ಬೇಡ ಸಮುದಾಯದ ಇತಿಹಾಸ ಮತ್ತು ಸಂಸ್ಕೃತಿ-ಚಿತ್ರದುರ್ಗ ಜಿಲ್ಲೆ ವಿಚಾರ ಸಂಕಿರಣ, ಚಿತ್ರದುರ್ಗ; ೨೦೦೭ : ಕರ್ನಾಟಕ ಇತಿಹಾಸ ಅಕಾದೆಮಿಯ ೨೧ನೇ ಅಧಿವೇಶನ, ಹಗರಿಬೊಮ್ಮನಹಳ್ಳಿ; ೨೦೦೮ : ಕರ್ನಾಟಕ ಇತಿಹಾಸ ಕಾಂಗ್ರೆಸ್‌ನ ೧೯ನೇ ಸಮ್ಮೇಳನ, ತುಮಕೂರು.



# ಲೇಖಕರ ವಿಳಾಸಗಳು

**ಪ್ರೊ.ಬಿ.ಎಸ್.ಸಂಪತ್**
ಸಂಖ್ಯೆ ೧೫೭, ೩ನೇ ಅಡ್ಡರಸ್ತೆ
೧೦ನೇ ಮುಖ್ಯರಸ್ತೆ
ಕಾಮಾಕ್ಷಿ ಆಸ್ಪತ್ರೆ ರಸ್ತೆ
ಸರಸ್ವತಿಪುರಂ
ಮೈಸೂರು ೫೭೦ ೦೦೯

**ಡಾ.ರಾಜಾರಾಮ ಹೆಗಡೆ**
ಪ್ರಾಧ್ಯಾಪಕರು, ಇತಿಹಾಸ ಮತ್ತು
ಪ್ರಾಕ್ತನಶಾಸ್ತ್ರ ವಿಭಾಗ, ಕುವೆಂಪು
ವಿಶ್ವವಿದ್ಯಾನಿಲಯ, ಜ್ಞಾನಸಹ್ಯಾದ್ರಿ
ಶಂಕರಘಟ್ಟ ೫೭೭ ೪೫೧

**ಡಾ.ಎ.ವೆಂಕಟೇಶ**
ಸಹಾಯಕ ಕುಲಸಚಿವರು
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಡಾ.ಕೆ.ಆರ್.ದುರ್ಗಾದಾಸ್**
ಪ್ರಾಧ್ಯಾಪಕರು, ಡಾ.ಆರ್.ಸಿ.ಹಿರೇಮಠ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ ೫೮೦ ೦೦೩

**ಡಾ.ಜಿ.ಆರ್.ತಿಪ್ಪೇಸ್ವಾಮಿ**
ಪ್ರಾಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಮಾನಸಗಂಗೋತ್ರಿ
ಮೈಸೂರು ೫೭೦ ೦೦೬

**ಶ್ರೀ ಎಸ್.ಆರ್.ಗುರುನಾಥ್**
೧೧ನೇ ಕ್ರಾಸ್
ಐ.ಯು.ಡಿ.ಪಿ. ಬಡಾವಣೆ
ಚಿತ್ರದುರ್ಗ ೫೭೭ ೫೦೧

**ಡಾ.ಕೆ.ಎಂ.ಮೇತ್ರಿ**
ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಡಾ.ವಿರೂಪಾಕ್ಷಿ ಪೂಜಾರಹಳ್ಳಿ**
ಪ್ರವಾಚಕರು ಹಾಗೂ ಮುಖ್ಯಸ್ಥರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಪ್ರೊ.ಲಕ್ಷ್ಮಣ್ ತೆಲಗಾವಿ**
ವಿಶ್ರಾಂತ ಪ್ರಾಧ್ಯಾಪಕರು, ಕನ್ನಡ ವಿ.ವಿ.
ಜಂಬಯ್ಯ ಬಿಲ್ಡಿಂಗ್, ಹಿರೇಕೇರಿ
ಗಾರೆಬಾವಿ ಆಂಜನೇಯ ದೇವಸ್ಥಾನದ
ಹತ್ತಿರ, ಕಮಲಾಪುರ ೫೮೩ ೨೨೧

**ಶ್ರೀ ಕೆಳದಿ ಗುಂಡಾಜೋಯಿಸ್**
ಕೆಳದಿ ೫೭೭ ೪೦೧, ಸಾಗರ ತಾಲ್ಲೂಕು
ಶಿವಮೊಗ್ಗ ಜಿಲ್ಲೆ

**ಡಾ.ಡಿ.ಎನ್.ಯೋಗೀಶ್ವರಪ್ಪ**
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಇತಿಹಾಸ ವಿಭಾಗ
ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು
ತುಮಕೂರು ೫೭೨ ೧೦೧

ಡಾ.ಚೆನ್ನಕ್ಕ ಪಾವಟೆ
ಪ್ರಾಧ್ಯಾಪಕರು, ಡಾ.ಆರ್.ಸಿ.ಹಿರೇಮಠ
ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ ೫೮೦ ೦೦೩

ಶ್ರೀ ಕುಂ.ಬಾ.ಸದಾಶಿವಪ್ಪ
ಗೋಸಾಯಿಗುಡ್ಡ
ಲೋಕೋಪಯೋಗಿ ಇಲಾಖೆ ಕಚೇರಿ
ಹಿಂಭಾಗ, ಹೊಸಪೇಟೆ ರಸ್ತೆ
ಹರಪನಹಳ್ಳಿ ೫೮೩ ೧೩೧

ಡಾ.ಮೀರಾಸಾಬಿಹಳ್ಳಿ ಶಿವಣ್ಣ
ಪ್ರಾಧ್ಯಾಪಕರು, ಕನ್ನಡ ವಿಭಾಗ
ಸರ್ಕಾರಿ ಪ್ರಥಮದರ್ಜೆ ಕಾಲೇಜು
ದೊಡ್ಡಬಳ್ಳಾಪುರ ೫೬೧ ೨೦೩
ಬೆಂಗಳೂರು ಗ್ರಾಮಾಂತರ ಜಿಲ್ಲೆ

ಶ್ರೀ ಸಂತೇಬೆನ್ನೂರು ಸುಮತೀಂದ್ರನಾಡಿಗ್
ಸಂಶೋಧಕರು ಹಾಗೂ
ವರದಿಗಾರರು-ಪ್ರಜಾವಾಣಿ
ಸಂತೇಬೆನ್ನೂರು ೫೭೭ ೫೫೨

ಶ್ರೀ ಬಾಗೂರು ಆರ್.ನಾಗರಾಜಪ್ಪ
ಭೂದಾಖಲೆ ಸಹಾಯಕ ನಿರ್ದೇಶಕರು
(ಆಡಳಿತ), ಜಿಲ್ಲಾಧಿಕಾರಿಗಳ ಕಚೇರಿ
ದಾವಣಗೆರೆ ೫೭೭ ೦೦೨

ಡಾ.ಅಮರೇಶ ಯತಗಲ್
ಅಧ್ಯಾಪಕರು, ಸರ್ಕಾರಿ ಪದವಿಪೂರ್ವ
ಕಾಲೇಜು, ಲಿಂಗಸುಗೂರು ೫೮೪ ೧೨೨
ರಾಯಚೂರು ಜಿಲ್ಲೆ

ಡಾ.ಎಂ.ಕೆ.ದುರುಗಪ್ಪ
ಇತಿಹಾಸ ಉಪನ್ಯಾಸಕರು
ಸರ್ಕಾರಿ ಪದವಿಪೂರ್ವ ಕಾಲೇಜು
ಕನಕಗಿರಿ ೫೮೪ ೧೧೯
ಗಂಗಾವತಿ ತಾಲ್ಲೂಕು
ಕೊಪ್ಪಳ ಜಿಲ್ಲೆ

ಡಾ.ಪಿ.ವಿ.ಕೃಷ್ಣಮೂರ್ತಿ
ಸಂಖ್ಯೆ ೩೭, ೩ನೇ ಕ್ರಾಸ್, ಸುಬ್ಬಣ್ಣ
ಬಡಾವಣೆ, ಹರಿನಗರ ಕ್ರಾಸ್
ಬೆಂಗಳೂರು ೫೬೦ ೦೬೨

ಡಾ.ಎಂ.ಜಿ.ನಾಗರಾಜ್
ಸಂಖ್ಯೆ ೨೨೧, ಶ್ರೀ ಅನರ್ಘ್ಯ ಚಟನಿ
ಕೃಪ, ೭೮ನೇ ಅಡ್ಡರಸ್ತೆ, ೫ನೇ ಬ್ಲಾಕ್
ರಾಜಾಜಿನಗರ
ಬೆಂಗಳೂರು ೫೬೦ ೦೧೦

ಶ್ರೀ ಜೆ.ಆಗಸ್ಟಿನ್
ವಕೀಲರು
ಸುರಪುರ ೫೮೫ ೨೨೪
ಗುಲಬರ್ಗಾ ಜಿಲ್ಲೆ

ಡಾ.ರಂಗರಾಜ ವನದುರ್ಗ
ಪ್ರಾಧ್ಯಾಪಕರು, ಕನ್ನಡಭಾರತಿ
ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನಸಹ್ಯಾದ್ರಿ
ಶಂಕರಘಟ್ಟ ೫೭೭ ೪೫೧

ಶ್ರೀ ಕೆ.ಎಲ್.ರಾಜಶೇಖರ್
ದೂರಶಿಕ್ಷಣ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಡಾ.ಸಂಗಪ್ಪ ಚ.ಕಲ್ಯಾಣಿ
ಮುಖ್ಯೋಪಾಧ್ಯಾಯರು
ಜಯವಿಜಯ ಶಿಕ್ಷಣ ಸಂಸ್ಥೆ
ಮುಧೋಳ ೫೮೭ ೩೧೩
ಬಾಗಲಕೋಟೆ ಜಿಲ್ಲೆ

ಡಾ.ಬಿ.ರಾಜಶೇಖರಪ್ಪ
ಕನ್ನಡ ಪ್ರಾಧ್ಯಾಪಕರು ಹಾಗೂ
ಪ್ರಾಚಾರ್ಯರು (ವಿಶ್ರಾಂತ)
೨ನೇ ಅಡ್ಡರಸ್ತೆ (ಪಶ್ಚಿಮ)
ಜೆ.ಸಿ.ಆರ್. ಬಡಾವಣೆ
ಚಿತ್ರದುರ್ಗ ೫೭೭ ೫೦೧

ಶ್ರೀ ಎಸ್.ಆರ್.ವೈದ್ಯ
ಹಿರಿಯಶ್ರೇಣಿ ಹಿಂದಿ ಉಪನ್ಯಾಸಕರು
ಐ.ಡಿ.ಎಸ್.ಜಿ. ಸರ್ಕಾರಿ ಕಾಲೇಜು
ಚಿಕ್ಕಮಗಳೂರು ೫೭೭ ೧೦೧

ನ್ಯಾ|| ಸಿ.ಎನ್.ಅಶ್ವತ್ಥನಾರಾಯಣರಾವ್
ನಂ.೪೦, ಅಶ್ವಿನಿ, ೪ನೇ ಅಡ್ಡರಸ್ತೆ
ನ್ಯಾಯಾಂಗ ಅಧಿಕಾರಿಗಳ ಬಡಾವಣೆ
ಆರ್.ಎಮ್.ವಿ. ಬಡಾವಣೆ, ೨ನೇ ಹಂತ
ಸಂಜಯನಗರ, ಬೆಂಗಳೂರು ೫೬೦ ೦೯೪

ಶ್ರೀ ಎಸ್.ವೈ.ಈರಣ್ಣನವರ್
ಜಿಲ್ಲಾ ನ್ಯಾಯಾಧೀಶರು, ತ್ವರಿತ ವಿಲೇವಾರಿ
ನ್ಯಾಯಾಲಯ ಸಂಖ್ಯೆ ೩
ಮೆಯೋಹಾಲ್ ಕೋರ್ಟ್ ಯೂನಿಟ್
ಬೆಂಗಳೂರು ೫೬೦ ೦೦೧

ಶ್ರೀ ಎಂ.ಶಂಭುಲಿಂಗಪ್ಪ
ನಿವೃತ್ತ ಜಿಲ್ಲಾ ನ್ಯಾಯಾಧೀಶರು
ಬೆಂಗಳೂರು ೫೬೦ ೦೦೧

ಶ್ರೀ ಎನ್.ಶ್ರೀವತ್ಸ ಕೆದಿಲಾಯ
ನಿವೃತ್ತ ಜಿಲ್ಲಾ ನ್ಯಾಯಾಧೀಶರು
ಅಧ್ಯಕ್ಷರು, ೩ನೇ ಅಪರ ಜಿಲ್ಲಾ
ಗ್ರಾಹಕರ ವೇದಿಕೆ, ೬ನೇ ಮಹಡಿ
ಕನ್ನಿಂಗ್‌ಹ್ಯಾಂ ರಸ್ತೆ
ಬೆಂಗಳೂರು ೫೬೦ ೦೦೧

ಶ್ರೀ ಕೆ.ವಿ.ಶೇಷಾದ್ರಿ
ವಕೀಲರು
ಮಂಡ್ಯ ೫೭೧ ೪೦೧

ಶ್ರೀ ಐ.ಎಸ್.ಆಂಟಿನ್
ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು
ಜಿಲ್ಲಾ ನ್ಯಾಯಾಲಯಗಳ ಸಂಕೀರ್ಣ
ಬಾಲರಾಜಅರಸ್ ರಸ್ತೆ
ಶಿವಮೊಗ್ಗ ೫೭೭ ೨೦೧

ಡಾ.ತೇಜಸ್ವಿ ಕಟ್ಟೀಮನಿ
ಡೀನ್, ಸ್ಕೂಲ್ ಆಫ್ ಲ್ಯಾಂಗ್ವೆಜಸ್,
ಲಿಂಗ್ವಿಸ್ಟಿಕ್ಸ್ ಮತ್ತು ಇಂಡಾಲಜಿ
ಮುಖ್ಯಸ್ಥರು, ಹಿಂದಿ ವಿಭಾಗ
ಮೌಲಾನಾ ಆಜಾದ್ ರಾಷ್ಟ್ರೀಯ ಉರ್ದು
ವಿಶ್ವವಿದ್ಯಾಲಯ, ಗಾಚಿಬಾಲಿ
ಹೈದರಾಬಾದ್ ೫೦೦ ೦೩೨

ಶ್ರೀ ಸಿ.ಎಂ.ಸತೀಶ್
ಪರಿಸರ ಅಧಿಕಾರಿಗಳು, ಕರ್ನಾಟಕ ರಾಜ್ಯ
ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿ
ಭೂ ಅಭಿವೃದ್ಧಿ ಬ್ಯಾಂಕ್ ಎದುರು
ಕೊಪ್ಪಳ ೫೮೩ ೨೩೧

ಡಾ.ಸಿ.ಎಂ.ರವಿ
ಚರ್ಮರೋಗ ತಜ್ಞರು, ಕೇಂದ್ರ ಸ್ಥಾನೀಯ
ರೈಲ್ವೆ ಆಸ್ಪತ್ರೆ, ಪೆರಂಬೂರು
ಚೆನ್ನೈ ೬೦೦ ೦೨೩

ಶ್ರೀಮತಿ ಪಲ್ಲವಿ ಲೋಲಾಕ್ಷ
ಪತಿ / ಶ್ರೀ ಎಂ.ಎಸ್.ಲೋಲಾಕ್ಷ
ಜಂಟಿ ನಿರ್ದೇಶಕರು, ಸೈನಿಕ ಕಲ್ಯಾಣ
ಮತ್ತು ಪುನರ್ವಸತಿ ಇಲಾಖೆ
ಬಿಜಾಪುರ ೫೮೬ ೧೦೨

ಶ್ರೀ ಜಿ.ಹೆಚ್.ಪ್ರಸಾದ್
ನಿವೃತ್ತ ಜಿಲ್ಲಾ ನ್ಯಾಯಾಧೀಶರು
ಅಂಚೆಕಚೇರಿ ರಸ್ತೆ, ಹೇಮಾವತಿನಗರ
ಹಾಸನ ೫೭೩ ೨೦೧

ಶ್ರೀ ಹರ್ತಿಕೋಟೆ ವೀರೇಂದ್ರಸಿಂಹ
ಪ್ರಾಚಾರ್ಯರು, ಕಾರಾಗೃಹಗಳ ಸಿಬ್ಬಂದಿ
ತರಬೇತಿ ಸಂಸ್ಥೆ, ಕೇಂದ್ರ ಕಾರಾಗೃಹ
ಆವರಣ, ಅಶೋಕ ರಸ್ತೆ
ಮೈಸೂರು ೫೭೦ ೦೦೭

## ಸಂಪದದ ಪ್ರಕಟಣೆಗಳು

| | | | |
|---|---|---|---|
| ೧. | ಶ್ರೀ ವಾಲ್ಮೀಕಿ ದರ್ಶನ ಮತ್ತು ಅವರ ಧರ್ಮಸಂದೇಶ<br>-ಶ್ರೀ ಸದ್ಗುರು ನಿತ್ಯಾನಂದ ಪ್ರಸಾದಿತ ರಂಗದಾಸ್ | ೧೯೭೩ | ರೂ.೧.೫೦ |
| ೨. | ದುರ್ಗದ ಧವಳಕೀರ್ತಿ (ಐತಿಹಾಸಿಕ ಕಾದಂಬರಿ)<br>-ಹೆಚ್.ವಿ.ವೀರನಾಯಕ 'ಹರತಿ' | ೧೯೮೧ | ರೂ.೧೫.೦೦ |
| ೩. | ದುರ್ಗದಸಿಂಹಿಣಿ ಓಬವ್ವ (ಐತಿಹಾಸಿಕ ನಾಟಕ)<br>-ಹೆಚ್.ವಿ.ವೀರನಾಯಕ 'ಹರತಿ' | ೧೯೮೨ | ರೂ.೪೫.೦೦ |
| ೪. | ಕ್ಷಾತ್ರಾಂಶ ಪ್ರಬೋಧ (೨ನೇ ಮುದ್ರಣ)<br>-ಹೆಚ್.ವಿ.ವೀರನಾಯಕ 'ಹರತಿ' | ೧೯೮೭ | ರೂ.೫.೦೦ |
| ೫. | ರಾಷ್ಟ್ರಸೇವೆಯಲ್ಲಿ ನಾಯಕ ಜನಾಂಗ (೨ನೇ ಮುದ್ರಣ)<br>-ಹೆಚ್.ವಿ.ವೀರನಾಯಕ 'ಹರತಿ' | ೧೯೮೭ | ರೂ.೫.೦೦ |
| ೬. | ಹರತಿಸಿರಿ (ಹೆಚ್.ವಿ.ವೀರನಾಯಕ 'ಹರತಿ' ನೆನಪಿನ ಸಂಪುಟ)<br>-ಸಂ: ಲಕ್ಷ್ಮಣ್ ತೆಲಗಾವಿ | ೧೯೮೭ | ರೂ.೧೫೦.೦೦ |
| ೭. | ಮಂಡಲ ವರದಿ-ಒಂದು ಅಧ್ಯಯನ<br>-ತೇಜಸ್ವಿ ಕಟ್ಟೀಮನಿ | ೧೯೯೦ | ರೂ.೧೦.೦೦ |
| ೮. | ಬುರುಗು (ಚಿಂತನಲೇಖನ ಸಂಕಲನ)<br>-ಲಕ್ಷ್ಮಣ್ ತೆಲಗಾವಿ | ೧೯೯೯ | ರೂ.೪೫.೦೦ |
| ೯. | ಘಟ್ಟಿಹೊಸಹಳ್ಳಿ ಗಟ್ಟಿಗ (ಸಿ.ಮಲೆಸಿದ್ದಪ್ಪ ಸ್ಮರಣ ಸಂಪುಟ)<br>-ಸಂ: ಹರ್ತಿಕೋಟೆ ವೀರೇಂದ್ರಸಿಂಹ, ತೇಜಸ್ವಿ ಕಟ್ಟೀಮನಿ | ೨೦೦೨ | ರೂ.೨೫೦.೦೦ |
| ೧೦. | ಕೆರೆಗೆ ಹಾರವಾದ ಬಂದಮ್ಮನ ಇತಿಹಾಸ<br>-ಎಸ್.ಆರ್.ಗುರುನಾಥ್ | ೨೦೦೩ | ರೂ.೩೦.೦೦ |
| ೧೧. | ಪಾನನಿರೋಧ ಲಾವಣಿ ಮತ್ತು ಕೋಲಾಟ ಪದಗಳು<br>(೨ನೇ ಮುದ್ರಣ)<br>-ಹೆಚ್.ವಿ.ವೀರನಾಯಕ 'ಹರತಿ' | ೨೦೦೪ | ರೂ.೨.೦೦ |
| ೧೨. | ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನದ ವ್ಯಾಪಕತೆ<br>ಮತ್ತು ಸಾಧ್ಯತೆ : ಒಂದು ಶತಮಾನ<br>-ಲಕ್ಷ್ಮಣ್ ತೆಲಗಾವಿ | ೨೦೦೪ | ರೂ.೫೦.೦೦ |

